





# ಶ್ರೀಮದ್ ಭಾಗವತಮ್

ಏಕಾದಶ - ದ್ವಾದಶ
ಸ್ಕಂಧಗಳು



# ಶ್ರೀಮದ್ಭಾಗವತಮ್

## ಏಕಾದಶ - ದ್ವಾದಶ ಸ್ಕಂಧಗಳು

(ಕನ್ನಡ ಅನುವಾದ ಸಹಿತ)

ಅನುವಾದಕರು :

ವಿದ್ವಾನ್

ಎನ್. ರಂಗನಾಥಶರ್ಮಾ

ಪ್ರಕಾಶಕರು :-

ರಾಮಾಯಣ ಪ್ರಕಾಶನ ಸಮಿತಿ

ನರಸಿಂಹರಾಜ ಕಾಲೊನಿ, ಬೆಂಗಳೂರು - ೧೯.

# ಬಿನ್ನಹ

ಶ್ರೀಮದ್‌ರಾಮಾಯಣ ಪ್ರಕಾಶನಕಾರ್ಯವು ಮುಗಿದಮೇಲೆ ಶ್ರೀಮದ್ಭಾಗವತದ ದಶಮಸ್ಕಂಧವನ್ನು ಪ್ರಕಟನೆಗೆ ತೆಗೆದುಕೊಳ್ಳಲಾಯಿತು. ಭಾಗವತದ ಇತರ ಸ್ಕಂಧಗಳನ್ನೂ ಪ್ರಕಟಿಸಬೇಕೆಂಬ ಉದ್ದೇಶವಿದೆಯೆಂದು ಆಗ ನಾವು ತಿಳಿಸಿದ್ದೆವು. ಆದರೆ ಪ್ರತಿವರ್ಷವೂ ವಾಲ್ಮೀಕಿರಾಮಾಯಣದ ಬೇರೆ ಬೇರೆ ಕಾಂಡಗಳನ್ನು ಮುದ್ರಿಸಬೇಕಾಗಿ ಬಂದಿರುವುದರಿಂದ ಸದ್ಯಕ್ಕೆ ಇಡೀ ಭಾಗವತವನ್ನು ಪ್ರಕಟಿಸಲು ನಮಗೆ ಸಾಧ್ಯವಿಲ್ಲವೆಂದು ವಿಷಾದದಿಂದ ತಿಳಿಸಬೇಕಾಗಿದೆ. ಆದರೂ ಭಾಗವತದ ಕೊನೆಯ ಭಾಗವಾದ ಏಕಾದಶ-ದ್ವಾದಶಸ್ಕಂಧಗಳನ್ನಾದರೂ ಪ್ರಕಟಿಸೋಣವೆಂದು ನಿರ್ಧರಿಸಿದೆವು. ನಮ್ಮ ಪ್ರಾರ್ಥನೆಯನ್ನು ಮನ್ನಿಸಿ, ವಿದ್ವಾನ್ ಶ್ರೀ ಎನ್. ರಂಗನಾಥ ಶರ್ಮಾ ಅವರು ಭಾಗವತದ ಈ ಸ್ಕಂಧಗಳನ್ನು ಸರಳವಾದ ಶೈಲಿಯಲ್ಲಿ ಅನುವಾದ ಮಾಡಿಕೊಟ್ಟಿದ್ದಾರೆ. ಅಲ್ಲದೆ, ಅವರು ಈ ಗ್ರಂಥಕ್ಕೆ ಅಮೂಲ್ಯವಾದ ಪ್ರಸ್ತಾವನೆಯನ್ನು ಬರೆದುಕೊಟ್ಟಿರುತ್ತಾರೆ. ಅವರಿಗೆ ಸಮಿತಿಯು ತನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತದೆ. ಭಗವಾನ್ ಶ್ರೀ ಕೃಷ್ಣಪರಮಾತ್ಮನು ಭಕ್ತನಾದ ಉದ್ಧವನಿಗೆ ಮಾಡಿರುವ ವೇದಾಂತೋಪದೇಶಗಳನ್ನೂ ಭಾಗವತಧರ್ಮಗಳನ್ನೂ ಒಳಗೊಂಡ ಈ ಭಾಗವು 'ಉದ್ಧವಗೀತೆ' ಎಂದೇ ಪ್ರಸಿದ್ಧವಾಗಿದೆ. ಭಗವದ್ಭಕ್ತರಾದ ಮಹನೀಯರಿಗೆ ಈ ಗ್ರಂಥ-ಭಾಗದ ಪಠನ, ವ್ಯಾಸಂಗ ಮತ್ತು ಅನುಷ್ಠಾನದಿಂದ ಅಧ್ಯಾತ್ಮ ಮಾರ್ಗದಲ್ಲಿ ಪ್ರಗತಿಯು ಸಾಧ್ಯವಾಗುತ್ತದೆ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ.

ಪ್ರಭಾ ಮುದ್ರಣಾಲಯದ ಮಾಲಿಕರಾದ ಶ್ರೀ ಡಿ. ಎಸ್. ಕೃಷ್ಣಾಚಾರ್ಯರು ಆಸಕ್ತಿವಹಿಸಿ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿದ್ದಾರೆ. ಅವರಿಗೆ ಸಮಿತಿಯು ವಂದನೆಗಳನ್ನರ್ಪಿಸುತ್ತದೆ.

ಈ ಗ್ರಂಥದಲ್ಲಿ ಶ್ರೀಪದ್ಮಪುರಾಣದ ಉತ್ತರಖಂಡದಲ್ಲಿರುವ 'ಶ್ರೀಮದ್ಭಾಗವತ ಮಾಹಾತ್ಮ್ಯಮ್' ಎಂಬ ಪ್ರಶಸ್ತವಾದ ಭಾಗವನ್ನು ಸೇರಿಸಲಾಗಿದೆ.

ಬೆಂಗಳೂರು
16–8–1990

ಡಿ. ಸಿ. ಅನಂತರಾಮಯ್ಯ
ಕಾರ್ಯದರ್ಶಿ



*

# ಪ್ರಸ್ತಾವನೆ

ಶ್ರೀಮದ್ಭಾಗವತದ ದಶಮಸ್ಕಂಧವು ನನ್ನ ಕನ್ನಡ ಅನುವಾದದೊಂದಿಗೆ ಎರಡು ಸಂಪುಟಗಳಲ್ಲಿ ಪ್ರಕಾಶಿತವಾಗಿದೆ. ಇತರ ಸ್ಕಂಧಗಳನ್ನು ಇದೇ ರೀತಿಯಲ್ಲಿ ಅನುವಾದಿಸಿ ಪ್ರಕಟಿಸಬೇಕೆಂಬ ಉದ್ದೇಶವಿದ್ದಿತಾದರೂ ಕಾರಣಾಂತರಗಳಿಂದ ಸಾಧ್ಯವಾಗಿರಲಿಲ್ಲ. ಏಕಾದಶ-ದ್ವಾದಶ ಸ್ಕಂಧಗಳು ಭಾಗವತದಲ್ಲಿ ಬಹಳ ಮುಖ್ಯವಾದವುಗಳೆಂದು ನನ್ನ ಎಣಿಕೆ. ಈ ಮಹಾಪುರಾಣದ ಇತರ ಸ್ಕಂಧಗಳಲ್ಲಿ ಹರಡಿದ ಪರಮಾರ್ಥತತ್ತ್ವವು ಈ ಎರಡು ಸ್ಕಂಧಗಳಲ್ಲಿ ಸಾರವತ್ತಾಗಿ ಬಂದಿದೆ. ಶ್ರೀಕೃಷ್ಣನು ಉದ್ಧವನಿಗೆ ಸಮಸ್ತ ವೇದಾಂತಸಾರವನ್ನು ಇಲ್ಲಿ ಬೋಧಿಸಿದ್ದಾನೆ. ಶ್ರೀಕೃಷ್ಣಾವತಾರದ ಮುಕ್ತಾಯದ ಘಟ್ಟದಲ್ಲಿ ಭಕ್ತಶಿರೋಮಣಿಯೂ ಅತ್ಯಂತ ಪ್ರಿಯನೂ ಆಗಿದ್ದ ಉದ್ಧವನಿಗೆ ಶ್ರೀಕೃಷ್ಣನು ಮಾಡಿದ ಅಂತಿಮೋಪದೇಶವು ಇದೇ. ಉದ್ಧವನನ್ನು ವ್ಯಾಜವಾಗಿ ಇಟ್ಟುಕೊಂಡು ಅಖಿಲ ಮಾನವಕುಲದ ಕಲ್ಯಾಣಕ್ಕಾಗಿ ಭಗವಂತನು ಅನುಗ್ರಹಿಸಿದ ದಿವ್ಯ ಸಂದೇಶವಿದು. ಜೊತೆಗೆ ಶ್ರೀ ಶುಕಮಹರ್ಷಿಗಳು ಮತ್ತು ಸೂತಪೌರಾಣಿಕರು ಭಗವದುಪದೇಶಕ್ಕೆ ಅನುಗುಣವಾಗಿ ಬೋಧಿಸಿದ ಸಂದೇಶವೂ ಇದೇ. ಈ ಭಾಗವನ್ನು ದೃಢವಾಗಿ ಅಧ್ಯಯನಮಾಡಬೇಕೆಂಬ ಅಪೇಕ್ಷೆ ನನ್ನಲ್ಲಿ ಮೂಡಿತು. ಇದರ ಅನುವಾದ ಕಾರ್ಯಕ್ಕೆ ಕೈಹಾಕಿದರೆ ಅಧ್ಯಯನವೂ ಮನನವೂ ಸಹಜವಾಗಿ ಆಗುತ್ತದೆ ಎಂಬ ನಂಬಿಕೆಯಿಂದ ಅನುವಾದ ಕಾರ್ಯವನ್ನು ಆರಂಭಿಸಿದೆ. ಈ ಅನುವಾದವು 'ಸ್ವಬುದ್ಧಿ ಪರಿಶುದ್ಧಿ'ಗಾಗಿ ನಡೆದದ್ದು.

ಅನುವಾದ ಕಾರ್ಯವು ಪೂರ್ಣವಾದ ಸಂಗತಿ ನನ್ನ ಮಾನ್ಯ ಮಿತ್ರರಾದ ಶ್ರೀ ಡಿ. ಸಿ. ಅನಂತರಾಮಯ್ಯನವರಿಗೆ ತಿಳಿಯಿತು. ಅವರು ತುಂಬ ಉತ್ಸಾಹಶಾಲಿಗಳು. ರಾಮಾಯಣ ಪ್ರಕಾಶನ ಸಮಿತಿಯು ಇದುವರೆಗೆ ಪ್ರಕಾಶಿಸಿದ ಎಲ್ಲ ಗ್ರಂಥಗಳಿಗೂ ಪ್ರವರ್ತಕವಾದ ಮೂಲ ಸ್ರೋತಸ್ಸು ಅವರೇ ಆಗಿದ್ದಾರೆ. ಭಾಗವತದ ಏಕಾದಶ-ದ್ವಾದಶ ಸ್ಕಂಧಗಳನ್ನು ಈ ಅನುವಾದ ಸಹಿತವಾಗಿ ಪ್ರಕಾಶಿಸಬೇಕೆಂದು ನಿರ್ಧರಿಸಿ, ರಾಮಾಯಣ ಪ್ರಕಾಶನ ಸಮಿತಿಯ ಒಪ್ಪಿಗೆಯನ್ನು ಪಡೆದು ಕಾರ್ಯಪ್ರವೃತ್ತರಾದರು. ಎಲ್ಲ ಶ್ಲೋಕಗಳನ್ನೂ ಕನ್ನಡ ಲಿಪಿಯಲ್ಲಿ ಸ್ವತಃ ಬರೆದುಕೊಟ್ಟರು. ಮಹತ್ತರವಾದ ಈ ನೆರವು ದೊರಕಿದ್ದರಿಂದ ನನ್ನ ಅನುವಾದಕ್ಕೆ ಪ್ರಕಾಶನ ಸೌಭಾಗ್ಯ ದೊರಕಿದೆ. ಇದಕ್ಕಾಗಿ ಶ್ರೀ ಡಿ. ಸಿ.

ಅನಂತರಾಮಯ್ಯನವರಿಗೂ ರಾಮಾಯಣ ಪ್ರಕಾಶನ ಸಮಿತಿಯ ಸದಸ್ಯರಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳು ಸಲ್ಲುತ್ತವೆ.

ಶ್ರೀಮದ್ಭಾಗವತವನ್ನು ಕಥೆಗಾಗಿ ಓದತಕ್ಕವರಿಗೆ ಸಂಸ್ಕೃತ ಮೂಲವಿಲ್ಲ ದಿದ್ದರೂ ಅನುವಾದವು ಸಾಕಾಗುತ್ತದೆ. ಇದರಲ್ಲಿ ಪ್ರತಿಪಾದಿತವಾದ ಅಧ್ಯಾತ್ಮ ತತ್ತ್ವವನ್ನು ಯಾರು ವ್ಯಾಸಂಗಮಾಡಬೇಕೆಂದು ಇದ್ದಾರೋ ಅವರಿಗೆ ಸಂಸ್ಕೃತ ಮೂಲವಿರುವುದು ಆವಶ್ಯಕ. ಕನ್ನಡದ ಅನುವಾದವು ಮೂಲಕ್ಕೆ ಅನುಗುಣ ವಾಗಿದೆಯೆ ಇಲ್ಲವೆ—ಎಂಬುದನ್ನು ಪರಿಶೀಲಿಸಲು ಅವಕಾಶಬೇಕು. ಭಾಗವತ ಪುರಾಣವಾದರೂ ಕರ್ಮ–ಭಕ್ತಿ–ಆತ್ಮಜ್ಞಾನ ಮುಂತಾದ ಪ್ರಮೇಯಗಳನ್ನು ವಿವೇಚಿಸುವ ದಿವ್ಯಗ್ರಂಥ. ಆದ್ದರಿಂದ ಮೂಲ ಸಹಿತವಾಗಿ ಈ ಅನುವಾದವನ್ನು ಪ್ರಕಟಿಸಲಾಗಿದೆ.

ದಶಮಸ್ಕಂಧದ ನನ್ನ ಅನುವಾದವಿರುವ ಎರಡು ಸಂಪುಟದ ನಿವೇದನೆಯಲ್ಲಿ ಭಾಗವತದ ಸ್ಥೂಲ ಸ್ವರೂಪವೇನೆಂಬುದನ್ನು ಅರಿಕೆ ಮಾಡಿಕೊಂಡಿದ್ದೇನೆ. ಇದರ ಭಾಷಾಶೈಲಿ ಕಠಿಣವಾದದ್ದು. ವ್ಯಾಖ್ಯಾನದ ನೆರವಿಲ್ಲದೆ ಅರ್ಥ ಹೇಳುವುದು ಸಾಮಾನ್ಯರಿಗೆ ಅಶಕ್ಯವಾದದ್ದು. 'ವಿದ್ಯಾವತಾಂ ಭಾಗವತೇ ಪರೀಕ್ಷಾ' ಎಂಬ ನುಡಿಯು ಪ್ರಸಿದ್ಧವಾಗಿದೆ. ನನ್ನ ಅನುವಾದವು ಶ್ರೀಧರಸ್ವಾಮಿಗಳ 'ಭಾವಾರ್ಥ ದೀಪಿಕೆ' ಎಂಬ ವ್ಯಾಖ್ಯಾನವನ್ನು ಅನುಸರಿಸಿದೆ. ಈಗ ದೊರೆಯುವ ವ್ಯಾಖ್ಯಾನ ಗಳಲ್ಲಿ ಇದೇ ಪ್ರಾಚೀನವೂ ಮೂಲಾನುಸಾರಿಯೂ ಆಗಿದೆ ಎಂದೂ ಶಬ್ದಾರ್ಥ ಗಳನ್ನು ಜಗ್ಗಾಡದೆ ಯಥಾರ್ಥವನ್ನು ನಿರೂಪಿಸುತ್ತದೆ ಎಂದೂ ನನ್ನ ಅಭಿಪ್ರಾಯ ವಿದೆ. ಶ್ಲೋಕದಲ್ಲಿರುವ ಯಾವ ವಿಷಯವನ್ನೂ ಕೈಬಿಡಬಾರದು, ಹೊಸದಾಗಿ ಕೈಯಿಂದ ಸೇರಿಸಬಾರದು, ಏನಾದರೂ ಹೇಳುವದಿದ್ದರೆ ಟಿಪ್ಪಣಿಯಲ್ಲಿಯೋ ಅನುಬಂಧದಲ್ಲಿಯೋ ಬರಬೇಕು, ಕನ್ನಡದ ಜಾಯಮಾನವನ್ನನುಸರಿಸಿ ವಾಕ್ಯ ರಚನೆ ಭಿನ್ನವಾದರೂ ಶ್ಲೋಕದ ತಾತ್ಪರ್ಯಕ್ಕೆ ಕುಂದಾಗಬಾರದು—ಇವು ನಾನು ಅನುಸರಿಸಿದ ಅನುವಾದ ಸೂತ್ರಗಳು. ಈಗ ಬಳಕೆಯಲ್ಲಿರುವ ಕನ್ನಡ ಶೈಲಿಗೆ ಹೊಂದಿಕೊಂಡಿರಬೇಕೆಂದೂ ವಿಷಯ ನಿರೂಪಣೆ ಸರಳವಾಗಿರಬೇಕೆಂದೂ ಪ್ರಯತ್ನಿಸಿ ದ್ದೇನೆ. ಪ್ರತಿಪಾದ್ಯ ವಿಷಯವು ಗಹನವಾದ ಸ್ಥಳದಲ್ಲಿ ಭಾಷೆ ಸ್ವಲ್ಪ ಪೆಡಸಾದಂತೆ ತೋರಬಹುದು. ಅದು ನನಗೆ ಅನಿವಾರ್ಯವಾಗಿ ಕಂಡಿದೆ.

## ಶ್ರೀವಿಷ್ಣುಪುರಾಣ—ಶ್ರೀಮದ್ಭಾಗವತ

ವಿಷ್ಣುವಿನ ಪ್ರಸಿದ್ಧವಾದ ದಶಾವತಾರಗಳಲ್ಲಿ ಕೂರ್ಮ, ವರಾಹ, ನೃಸಿಂಹ, ಶ್ರೀರಾಮ ಮತ್ತು ಶ್ರೀಕೃಷ್ಣ ಈ ಐದು ಅವತಾರಗಳ ವಿಚಾರ ವಿಷ್ಣುಪುರಾಣದಲ್ಲಿ ಬಂದಿದೆ. ಇವುಗಳಲ್ಲಿ ಶ್ರೀಕೃಷ್ಣನ ಚರಿತೆ ವಿಸ್ತಾರವಾಗಿ ಬಂದಿದೆ. ನೃಸಿಂಹನು ಹಿರಣ್ಯಕಶಿಪುವನ್ನು ಸಂಹರಿಸಿದ ವೃತ್ತಾಂತವು ಆನುಷಂಗಿಕವಾಗಿ ಒಂದೇ ಮಾತಿನಲ್ಲಿ ಸೂಚಿತವಾಗಿದೆ. ಭಕ್ತಿಯು ಪ್ರಧಾನವೆಂದು ನಿರೂಪಿತವಾಗಿದ್ದರೂ ವಿಸ್ತೃತವಾಗಿಲ್ಲ. ಭಾಗವತದಲ್ಲಾದರೋ ಇವೆಲ್ಲವುಗಳ ವರ್ಣನೆ ವಿಸ್ತೃತವಾಗಿ ಬಂದಿದೆ. ಭಗವದ್ಭಕ್ತಿಯ ಶ್ರೇಷ್ಠತೆಯನ್ನು ಪ್ರತಿಪಾದಿಸುವುದಕ್ಕಾಗಿಯೇ ಭಾಗವತವು ವಿರಚಿತವಾಗಿದೆ ಎಂಬುದನ್ನು ಸ್ಮರಿಸಿಕೊಳ್ಳಬಹುದು. ವಾಸುದೇವಾದಿ ಚತುರ್ವ್ಯೂಹದ ಸ್ತುತಿಯು ಉಭಯಪುರಾಣಗಳಲ್ಲಿಯೂ ಬಂದಿದೆ. ವರ್ಣಿತವಾದ ಕಥಾಭಾಗದಲ್ಲಿಯೂ ಪ್ರಮೇಯ ನಿರೂಪಣೆಯಲ್ಲಿಯೂ ಪರಮಾರ್ಥ ವಿಚಾರದಲ್ಲಿಯೂ ಈ ಉಭಯ ಪುರಾಣಗಳಿಗಿರುವ ಸಾಮ್ಯವು ಎದ್ದುಕಾಣುವಂತಹದು. ವಿಷ್ಣುಪುರಾಣದ ವಿಸ್ತಾರವಾದ ಉಪಬೃಂಹಣವೇ ಭಾಗವತವೆನ್ನಲಡ್ಡಿಯಿಲ್ಲ.

## ಭಾಗವತದ ಮಹತ್ತ್ವ

ಶ್ರೀಮದ್ಭಾಗವತವು ಪುರಾಣಗಳಲ್ಲಿ ಶ್ರೇಷ್ಠವಾದ ಸ್ಥಾನವನ್ನು ಪಡೆದು ಅತ್ಯಂತ ಜನಪ್ರಿಯವಾಗಿದೆ. ಇದು ಸರ್ವವೇದಾಂತಸಾರವೆಂದೂ ಭಾಗವತದಲ್ಲಿ ಉಕ್ತವಾಗಿದೆ. ನಿಗಮಕಲ್ಪತರುವಿನಿಂದ ಉದುರಿದ ಅಮೃತರಸಮಯವಾದ ಫಲವಿದೆಂದು ಪದ್ಮಪುರಾಣವು ಹೇಳುತ್ತದೆ. ಈ ಗ್ರಂಥಕ್ಕೆ ಇರುವ ವಿಪುಲ ವ್ಯಾಖ್ಯಾನಗಳೇ ಭಾಗವತದ ಪ್ರಾಶಸ್ತ್ಯವನ್ನು ಎತ್ತಿ ತೋರಿಸುತ್ತವೆ. ಸುಮಾರು ಮೂವತ್ತೈದು ವ್ಯಾಖ್ಯಾನಗಳು ಉಪಲಬ್ಧವಾಗಿವೆ. ಇವುಗಳಲ್ಲಿ ಶ್ರೀಧರಸ್ವಾಮಿಗಳ ಭಾವಾರ್ಥ ದೀಪಿಕೆ, ವೀರರಾಘವಾಚಾರ್ಯರ ಭಾಗವತ ಚಂದ್ರ ಚಂದ್ರಿಕೆ, ವಿಜಯಧ್ವಜರ ಪದರತ್ನಾವಲೀ—ಇವು ಮೂರು ಕ್ರಮವಾಗಿ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಮತಾನುಸಾರಿಗಳಾದ ಪ್ರಸಿದ್ಧ ವ್ಯಾಖ್ಯಾನಗಳು. ವಲ್ಲಭಾಚಾರ್ಯರ ಶುದ್ಧಾದ್ವೈತಮತಾನುಸಾರಿಯಾದ ಸುಬೋಧಿನೀ ವ್ಯಾಖ್ಯೆಯೂ ಉಲ್ಲೇಖಾರ್ಹವಾದುದು. ಕ್ರಿ. ಶ. ಹದಿಮೂರನೆಯ ಶತಮಾನದಲ್ಲಿದ್ದ ಬೋಪದೇವನೆಂಬ ವಿಖ್ಯಾತ ವಿದ್ವಾಂಸನು ಭಾಗವತದಲ್ಲಿ ಗಾಢವಾದ ಪರಿಶ್ರಮವನ್ನು ಹೊಂದಿದ್ದನು. ಅವನು

'ಹರಿಲೀಲಾಮೃತ' ಎಂಬ ಒಂದು ಗ್ರಂಥವನ್ನು ಬರೆದಿದ್ದಾನೆ. ಅದು ದ್ವಾದಶ ಸ್ಕಂಧಗಳ ವಿಷಯಾನುಕ್ರಮಣಿಕೆಯಂತಿದ್ದರೂ ಪ್ರಮೇಯವಾದ ಸೂಕ್ಷ್ಮ ವಿಚಾರಗಳನ್ನು ಆತನು ಸಂಗ್ರಹಿಸಿ ತಿಳಿಸಿದ್ದಾನೆ. ಇದಕ್ಕೆ ಮಧುಸೂದನ ಸರಸ್ವತಿಗಳ ವ್ಯಾಖ್ಯಾನವಿದೆ.

ಪರಮಾತ್ಮನನ್ನು ಹೊಂದುವ ಸರಳವಾದ ಸಾಧನ ಮಾರ್ಗವನ್ನು ತೋರಿಸಿ ಕೊಟ್ಟಿರುವುದೇ ಭಾಗವತದ ಹೆಚ್ಚುಗಾರಿಕೆ. ಭಕ್ತಿಮಾರ್ಗವೇ ಸರ್ವಜನ ಸಾಧ್ಯವಾದ ಉಪಾಯವೆಂದು ಭಾಗವತವು ನಿರೂಪಿಸುತ್ತದೆ. ಮಹಾಭಾರತವನ್ನು ರಚಿಸಿದ ಮೇಲೆಯೂ ವೇದವ್ಯಾಸರ ಹೃದಯಕ್ಕೆ ತೃಪ್ತಿಯಾಗಲಿಲ್ಲವೆಂದೂ ಭಾಗವತವನ್ನು ರಚಿಸಿದ ಮೇಲೆ ಅವರ ಹೃದಯವು ಸಂತೃಪ್ತವಾಯಿತೆಂದೂ ವರ್ಣನೆಯಿದೆ. ಭಕ್ತಿಗೆ ಪ್ರಾಧಾನ್ಯವಿಲ್ಲದಿದ್ದಾಗ ಜ್ಞಾನ ವೈರಾಗ್ಯಗಳೂ ಸಹ ಶಕ್ತಿಹೀನವಾಗಿ ಕ್ಷಯಿಸಿಹೋದವೆಂದೂ ಭಾಗವತ ಶ್ರವಣದಿಂದ ಭಕ್ತಿಯು ಉಜ್ಜೀವಿತವಾಗಿ ಜ್ಞಾನ ವೈರಾಗ್ಯಗಳು ಶಕ್ತಿಯುತವಾದವೆಂದೂ ಪದ್ಮಪುರಾಣದಲ್ಲಿರುವ ಭಾಗವತ ಮಾಹಾತ್ಮ್ಯವು ತಿಳಿಸುತ್ತದೆ. ಮೋಕ್ಷಸಾಧನಗಳಾದ ಜ್ಞಾನ ವೈರಾಗ್ಯಗಳು ಭಗವದ್ಭಕ್ತಿಯಿಂದಲೇ ಕಾರ್ಯಕಾರಿಗಳಾಗುತ್ತವೆಯೆಂದು ಇದರ ತಾತ್ಪರ್ಯ. ಪ್ರಹ್ಲಾದನ ಚರಿತ್ರೆಯು ಭಕ್ತಿಯ ಆವಶ್ಯಕತೆಯನ್ನು ಎತ್ತಿ ತೋರಿಸುತ್ತದೆ. ಶೀಲ, ದಾನ, ತಪಸ್ಸುಗಳಿಗಿಂತ ಭಕ್ತಿಯಿಂದ ಭಗವಂತನು ಬಹು ಬೇಗನೆ ಪ್ರಸನ್ನನಾಗುತ್ತಾನೆ. "ಪ್ರೀಯತೇಽನನ್ಯಯಾ ಭಕ್ತ್ಯಾ ಹರಿರನ್ಯದ್ವಿಡಂಬನಮ್". ಹಾಗೆಯೇ ವರ್ಣಾಶ್ರಮವಿಹಿತವಾದ ಕರ್ಮವನ್ನು ಆಚರಿಸುತ್ತ ಕರ್ಮಫಲವನ್ನು ಭಗವಂತನಿಗೆ ಅರ್ಪಿಸಬೇಕೆಂಬ ನಿಷ್ಕಾಮಕರ್ಮಯೋಗವನ್ನು ಈ ಗ್ರಂಥವು ಬೋಧಿಸುತ್ತದೆ. ಕರ್ಮವು ಜ್ಞಾನಕ್ಕೆ ಆವಶ್ಯಕವಾದ ಚಿತ್ತಶುದ್ಧಿಯನ್ನುಂಟುಮಾಡುತ್ತದೆ. ಕರ್ಮಮಾರ್ಗವೂ ಸಹ ಭಕ್ತಿಯಿಂದ ಸಹಕೃತವಾಗಿರಬೇಕು. ಭಕ್ತಿಯಿಲ್ಲದೆ ಜ್ಞಾನವನ್ನು ಪಡೆಯಲು ಮನುಷ್ಯನು ಮಾಡುವ ಪ್ರಯತ್ನವು ನಿಷ್ಫಲ ಮತ್ತು ಕ್ಲೇಶದಾಯಕ. ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ—ಎಂದು ಭಕ್ತಿಯು ನವವಿಧವಾಗಿರುತ್ತದೆ. ಭಕ್ತಿಯಷ್ಟು ಆನಂದರೂಪವಾದದ್ದು ಮೋಕ್ಷವೂ ಅಲ್ಲ, ಭಗವದ್ಭಕ್ತನು ಮೋಕ್ಷವನ್ನೂ ಒಲ್ಲದೆ ಆತನ ನಿತ್ಯ ಭಕ್ತನಾಗಿಯೇ ಇರಲು ಬಯಸುತ್ತಾನೆಂದು ಭಕ್ತಿಯ ಸರ್ವಾತಿಶಾಯಿಯಾದ ಆನಂದವನ್ನು ಭಾಗವತವು ಪ್ರತಿಪಾದಿಸುತ್ತದೆ.

ಆತ್ಮಾರಾಮಾಶ್ಚ ಮುನಯೋ ನಿರ್ಗ್ರಂಥಾ ಅಪ್ಯುರುಕ್ರಮೇ ।
ಕುರ್ವಂತ್ಯಹೈತುಕೀಂ ಭಕ್ತಿಮಿತ್ಥಂಭೂತಗುಣೋ ಹರಿಃ ॥

(೧–೭–೧೦)

ಪ್ರೇಮಮಯವಾದ ಮಧುರ ಭಕ್ತಿಯನ್ನು ತೋರಿಸಿಕೊಟ್ಟಿರುವುದು ಭಾಗವತದ ಒಂದು ವೈಶಿಷ್ಟ್ಯವೆನ್ನಬಹುದು. ಗೋಪಿಕಾಸ್ತ್ರೀಯರು ಕಾಮ ಪ್ರಚೋದಿತವಾದ ಪ್ರೇಮಭಕ್ತಿಯನ್ನು ಶ್ರೀಕೃಷ್ಣನಲ್ಲಿ ತಳೆದು ಶ್ರೇಯಸ್ಸನ್ನು ಪಡೆದ ರೆಂದು ಭಾಗವತವು ನಿರೂಪಿಸುತ್ತದೆ. ಅವರ ಪ್ರೇಮವು ಕಾಮದೂಷಿತವಾಗಿದ್ದರೂ ಪರಮಾತ್ಮನಲ್ಲಿಯೇ ನೆಲೆಸಿದ್ದರಿಂದ ಅವರಿಗೆ ಸದ್ಗತಿಯಾಯಿತೆಂದು ಭಾಗವತವು ಸ್ಪಷ್ಟವಾಗಿ ಹೇಳುತ್ತದೆ. ಮಳೆಯ ನೀರು ಮುತ್ತಿನ ಚಿಪ್ಪಿನಲ್ಲಿ ಬಿದ್ದಾಗ ಮುತ್ತೇ ಆಗಿಬಿಡುತ್ತದೆಯಂತೆ. ಅಂತೆಯೇ ಗೋಪಿಯರ ಪ್ರೇಮಭಕ್ತಿಯು ಸತ್ಪಾತ್ರದಲ್ಲಿ ನೆಟ್ಟದ್ದರಿಂದ ಅದರ ಪರಿಣಾಮವು ಶ್ರೇಷ್ಠವಾಯಿತೆಂದು ಭಾಗವತಕಾರರ ಆಶಯ ವಾಗಿರುತ್ತದೆ.

ಕರ್ಮವು ಕರ್ಮಬಂಧವನ್ನು ಸಂಪೂರ್ಣವಾಗಿ ತೊಡೆದುಹಾಕಲಾರದು. ಯಾವಾತನಿಗೆ ಆತ್ಮಜ್ಞಾನವಾಗಿಲ್ಲವೋ ಆತನೇ ಕರ್ಮಕ್ಕೆ ಅಧಿಕಾರಿ. ಕರ್ಮ ಬಂಧವನ್ನು ತೊಡೆದುಹಾಕತಕ್ಕದ್ದು ಜ್ಞಾನವೇ ಸರಿ. (೬–೧–೧೧) "ತ್ರಯ್ಯಾಂ ಜಡೀಕೃತಮತಿಃ ಮಧುಪುಷ್ಪಿತಾಯಾಂ ವೈತಾನಿಕೇ ಮಹತಿ ಕರ್ಮಣಿ ಯುಜ್ಯ-ಮಾನಃ" (೬–೩–೨೫) ಎಂಬ ನುಡಿಯು ಭಗವದ್ಗೀತೆಯ "ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ" ಎಂಬ ನುಡಿಯನ್ನು ನೆನಪಿಗೆ ತರುತ್ತದೆ. ಈ ಕರ್ಮಕಾಂಡವು ಆತ್ಮಜ್ಞಾನಿಗಳಲ್ಲದವರಿಗೆ ಹೊರತು ಜ್ಞಾನಿಗಳಿಗಲ್ಲ. ಪರಮಾರ್ಥ ವಾಗಿ ವೇದವು ಕರ್ಮಚೋದಕವಲ್ಲವೆನ್ನುತ್ತದೆ ಭಾಗವತ. "ಆಹುರ್ಧೂಮ್ರ-ಧಿಯೋ ವೇದಂ ಸಕರ್ಮಕಮತದ್ವಿದಃ" (೪–೨೯–೪೮).

ಮೂರ್ತಿ ಪೂಜೆಯನ್ನು ಭಾಗವತವು ಸಾಧಕನಿಗೋಸ್ಕರ ಹೇಳಿದೆ. ಆದರೆ ಸಾಧಕನು ಸರ್ವಭಾವಗಳಲ್ಲಿಯೂ ಪರಮಾತ್ಮನು ಇದ್ದಾನೆಂಬ ದೃಢವಾದ ನಿಲು ವನ್ನು ತಳೆದು ಚಿತ್ತಸ್ಥೈರ್ಯ ಸಂಪಾದನೆಗಾಗಿ ಮೂರ್ತಿಯನ್ನು ಪೂಜಿಸತಕ್ಕದ್ದು. ಹಾಗಿಲ್ಲದೆ ಮೂರ್ತಿಯೊಂದೇ ದೇವರೆಂಬ ಭಾವನೆಯನ್ನು ತಳೆದರೆ ಆ ಪೂಜೆಯು ವಿಡಂಬನೆಯೇ ಸರಿ—

ಯೋ ಮಾಂ ಸರ್ವೇಷು ಭೂತೇಷು ಸಂತಮಾತ್ಮಾನಮೀಶ್ವರಮ್ ।
ಹಿತ್ವಾರ್ಚಾಂ ಭಜತೇ ಮೌಢ್ಯಾತ್ ಭಸ್ಮನ್ಯೇವ ಜುಹೋತಿ ಸಃ ॥
(೩-೨೯-೨೨)

## ಭಕ್ತಿಯು ಜ್ಞಾನಾರ್ಥ

ಭಕ್ತಿಯು ಮೋಕ್ಷಕ್ಕೆ ಪರಮಸಾಧನವೆಂದು ಹೊಗಳಿದ್ದರೂ ಅದು ಜ್ಞಾನ ದ್ವಾರಾ ಮೋಕ್ಷಕ್ಕೆ ನಿಮಿತ್ತವೇ ಹೊರತು ಸಾಕ್ಷಾತ್ ಅಲ್ಲ. ಭಕ್ತಿಯಿಂದ ಜ್ಞಾನ ವೈರಾಗ್ಯಗಳು ಉಜ್ಜೀವಿತವಾದವು—ಎಂಬ ಪದ್ಮಪುರಾಣದ ಕಥೆಯನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.

"ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।
ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ॥

ಎಂಬ ಭಗವದ್ಗೀತಾ ವಚನವನ್ನೂ (೧೮-೫೫) ಇಲ್ಲಿ ಉದಾಹರಿಸಬಹುದು. ಭಾಗವತದಲ್ಲಿಯೂ ಸಹ ಭಕ್ತಿಯು ಜ್ಞಾನಾರ್ಥವೆಂದು ಸ್ಪಷ್ಟವಾಗಿ ಹೇಳಿದೆ—

(೧) ತಾವತ್ ಪರಿಚರೇದ್ಭಕ್ತಃ. (೧೧-೧೮-೪೯)

(೨) ವೇನ ಪುತ್ರನಾದ ಪೃಥುರಾಜನು ಭಗವಂತನ ಸ್ಮರಣೆಯಿಂದ ವಿರಕ್ತಿ ಪೂರ್ವಕವಾದ ಜ್ಞಾನವನ್ನು ಪಡೆದನೆಂದೂ ಅದರಿಂದ ನಿಜ ಜೀವಕೋಶವನ್ನು ತ್ಯಜಿಸಿದನೆಂದೂ ವರ್ಣನೆ ಇದೆ. (೪-೨೩-೧೧)

(೩) ತೀವ್ರವಾದ ಭಕ್ತಿಯೋಗದಿಂದ ತತ್ತ್ವಜ್ಞಾನವಾಗಿ ಮನುಷ್ಯನು ಪರಮಾತ್ಮನನ್ನು ಸೇರಿಕೊಳ್ಳುತ್ತಾನೆಂದು ಭಗವಂತನು ದೇವಹೂತಿಗೆ ಉಪದೇಶಿಸಿದ್ದಾನೆ. (೩-೨೭-೫ ರಿಂದ ೧೬)

(೪) ನನ್ನ ಭಕ್ತನು ನನ್ನ ಅನುಗ್ರಹದಿಂದ ತತ್ತ್ವಾರ್ಥವನ್ನು ತಿಳಿದು ಛಿನ್ನ ಸಂಶಯನಾಗಿ ಕೈವಲ್ಯವನ್ನು ಪಡೆಯುತ್ತಾನೆ. (೩-೨೭-೨೮, ೨೯)

ಒಟ್ಟಿನಲ್ಲಿ ಭಾಗವತದ ತಾತ್ಪರ್ಯವು ಇಷ್ಟೆಂದು ತೋರುತ್ತದೆ: ಯಾರಿಗೆ ವೈರಾಗ್ಯವಿನ್ನೂ ಹುಟ್ಟಿರುವುದಿಲ್ಲವೋ ಅವರಿಗೆ ಕರ್ಮಯೋಗವು ಯುಕ್ತವಾದದ್ದು. ಯಾರಿಗೆ ವಿಶೇಷವಾದ ವೈರಾಗ್ಯವಾಗಲಿ ಸಂಸಾರದಲ್ಲಿ ತೀವ್ರವಾದ ಆಸಕ್ತಿಯಾಗಲಿ

ಇಲ್ಲವೋ ಅವರಿಗೆ ಭಕ್ತಿಯೋಗವು ಉತ್ತಮ. ಯಾರು ಸಂಸಾರದಲ್ಲಿ ತೀವ್ರವಾದ ವೈರಾಗ್ಯವನ್ನು ಪಡೆದಿರುತ್ತಾರೋ ಅವರಿಗೆ ಜ್ಞಾನಯೋಗವು ವಿಹಿತವಾದದ್ದು.

**ಭಾಗವತರೆಂದರೆ ಯಾರು ?**

'ಭಗವಾನ್ ಭಕ್ತಿಃ ಅಸ್ಯೇತಿ ಭಾಗವತಃ' ಎಂದು ಭಾಗವತ ಶಬ್ದದ ವ್ಯುತ್ಪತ್ತಿ 'ಭಕ್ತಿಃ' ಎಂಬ ಪಾಣಿನಿ ಸೂತ್ರದಿಂದ (ಅಷ್ಟಾ. ೪-೩-೯೫) ಈ ಶಬ್ದವು ಸಿದ್ಧವಾಗುತ್ತದೆ. 'ಭಜ್ಯತೇ ಸೇವ್ಯತೇ ಇತಿ ಭಕ್ತಿಃ'. ಭಕ್ತಿಯೆಂದರೆ ಸೇವ್ಯಮಾನ ಎಂದರ್ಥ. ಸೂತ್ರದಲ್ಲಿ ಭಕ್ತಿಶಬ್ದವು ಭಾವನಾಮವಲ್ಲ, ಅದು ಕರ್ಮಸಾಧನ. ಭಾಗವತನೆಂದರೆ ಭಗವದ್ಭಕ್ತನೆಂದರ್ಥ. ಈ ಪುರಾಣವನ್ನು ಭಾಗವತವೆನ್ನುವಾಗ ಶಬ್ದದ ವ್ಯುತ್ಪತ್ತಿ ಬೇರೆಯಾಗುತ್ತದೆ. ಭಗವಂತಮಧಿಕೃತ್ಯ ಕೃತೋ ಗ್ರಂಥಃ ಭಾಗವತಮ್=ಭಗವಂತನನ್ನು ಉದ್ದೇಶಿಸಿ ಬರೆದ ಗ್ರಂಥ ಭಾಗವತ. "ಅಧಿಕೃತ್ಯ ಕೃತೇ ಗ್ರಂಥೇ" ಎಂಬ ಪಾಣಿನಿ ಸೂತ್ರದಿಂದ (೪-೩-೮೭) ಅಣ್‌ಪ್ರತ್ಯಯ.

ಭಕ್ತರಲ್ಲಿ ಭಾಗವತೋತ್ತಮನು ಯಾರೆಂದರೆ—

(೧) ಸಮಸ್ತಭೂತಗಳಲ್ಲಿಯೂ ಆತ್ಮನಾದ ಶ್ರೀಹರಿಯ ನಿರತಿಶಯವಾದ ಐಶ್ವರ್ಯವನ್ನು ಯಾವನು ಕಾಣುತ್ತಾನೋ ಮತ್ತು ಭಗವಂತನಾದ ಶ್ರೀಹರಿಯಲ್ಲಿ ಸಮಸ್ತಭೂತಗಳೂ ನೆಲೆಸಿವೆಯೆಂದು ಯಾವನು ಅರಿಯುತ್ತಾನೋ ಅವನು ಭಾಗವತೋತ್ತಮ. (೧೧-೨-೪೫)

(೨) ಯಾವಾತನು ಇಂದ್ರಿಯಗಳಿಂದ ವಿಷಯಗಳನ್ನು ಗ್ರಹಿಸಿದರೂ ಸಹ ದ್ವೇಷಿಸುವುದೂ ಇಲ್ಲವೋ ಹರ್ಷಿಸುವುದೂ ಇಲ್ಲವೋ ಮತ್ತು ಈ ವಿಶ್ವವೆಲ್ಲವೂ ವಿಷ್ಣುವಿನ ಮಾಯಾವಿಜೃಂಭಿತವೆಂದು ತಿಳಿದಿರುವನೋ ಅವನು ಭಾಗವತೋತ್ತಮ. (೧೧-೨-೪೮)

(೩) ಯಾವಾತನಿಗೆ ಹಣದ ವಿಷಯದಲ್ಲಿ ನನ್ನದು-ಅನ್ಯರದು ಎಂಬುದಾಗಿಯೂ ಜನರ ವಿಷಯದಲ್ಲಿ ನನ್ನವರು-ಅನ್ಯರು ಎಂಬುದಾಗಿಯೂ ಭೇದಬುದ್ಧಿ ಇರುವುದಿಲ್ಲವೋ ಸರ್ವಭೂತಗಳಲ್ಲಿಯೂ ಸಮತ್ವಬುದ್ಧಿ ಇರುವುದೋ ಅಂತಹ ಶಾಂತಸ್ವಭಾವದವನು ಭಾಗವತೋತ್ತಮ. (೧-೨-೫೨)

ಈ ಲಕ್ಷಣಗಳು ಆತ್ಮಜ್ಞಾನಿಗೆ ಮಾತ್ರ ಅನ್ವಯಿಸತಕ್ಕವು. ಆರ್ತನೇ ಮೊದಲಾದ ಚತುರ್ವಿಧಭಕ್ತರಲ್ಲಿ 'ಜ್ಞಾನೀ ತ್ವಾತ್ಮೈವ ಮೇ ಮತಮ್' ಎಂಬ ಭಗವದ್ಗೀತಾವಚನದೊಡನೆ (೭–೧೮) ಇದನ್ನು ಹೋಲಿಸಿನೋಡಬಹುದು. ಜ್ಞಾನಿಯೇ ಭಾಗವತೋತ್ತಮ.

## ಧ್ಯಾನಯೋಗ

ನವವಿಧ ಭಕ್ತಿಪ್ರಕಾರಗಳಲ್ಲಿ ಅರ್ಚನೆಯೂ ಒಂದು ಪ್ರಕಾರವಷ್ಟೆ. ಮೂರ್ತಿಪೂಜೆ ಈ ಅರ್ಚನೆಯ ಪಂಕ್ತಿಗೆ ಸೇರುತ್ತದೆ. ಇದು ಕ್ರಿಯಾಯೋಗ (ಕರ್ಮಕಾಂಡ) ವೆಂದೂ ಅನಂತಪಾರವೆಂದೂ ಭಗವಂತನು ಹೇಳಿದ್ದಾನೆ. ಅಷ್ಟವಿಧ ಮೂರ್ತಿಗಳಲ್ಲಿ ಮಾನಸಪೂಜೋಪಯುಕ್ತವಾದ ಮನೋಮಯ ಮೂರ್ತಿಯೂ ಒಂದೆಂಬುದು ಗಮನಾರ್ಹವಾದದ್ದು. ಅಗ್ನಿಯಲ್ಲಿ ಮಾಡುವ ಹೋಮವು ಅರ್ಚನಾಪ್ರಕಾರಗಳಲ್ಲೊಂದು. ಎಲ್ಲೆಡೆಯಲ್ಲಿಯೂ ಚತುರ್ಭುಜನಾದ ವಿಷ್ಣು ವನ್ನು ಧ್ಯಾನಿಸಿಕೊಳ್ಳಬೇಕೆಂದು ಹೇಳಲಾಗಿದೆ. ಶ್ರವಣಾದಿ ನವಪ್ರಕಾರಗಳಲ್ಲಿ ಸ್ಮರಣವು ಧ್ಯಾನಯೋಗವೆನಿಸುತ್ತದೆ. ಇದೇ ಉಪಾಸನೆ. ಉಪಾಸನೆಯಲ್ಲಿ ಸರ್ವಾಂಗಸುಂದರನಾದ ವಿಷ್ಣುಮೂರ್ತಿಯನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡು ಸಾಧಕನು ಸಾಧನೆಯ ಪ್ರಥಮ ಹಂತದಲ್ಲಿ ಧ್ಯಾನಿಸುತ್ತಿರಬೇಕು. ಈ ಮನೋ-ಮಯ ಮೂರ್ತಿಯ ಸರ್ವಾಂಗಗಳಲ್ಲಿಯೂ ಸಾಧಕನ ಮನಸ್ಸು ನೆಟ್ಟಿರುತ್ತದೆ. ಅನಂತರ ಮುಖವೊಂದನ್ನೇ ಧ್ಯಾನಿಸುತ್ತಿರಬೇಕು. ಇತರ ಅಂಗಗಳನ್ನು ಚಿಂತಿಸ ಬಾರದು. ಹೀಗೆ ಮುಖಧ್ಯಾನದಲ್ಲಿಯೇ ನಿಲ್ಲುವ ಶಕ್ತಿಯನ್ನು ಮನಸ್ಸು ಗಳಿಸಿದಮೇಲೆ, ಅದನ್ನು ಪರಮಕಾರಣವಾದ ಅವ್ಯಕ್ತಸ್ವರೂಪದಲ್ಲಿ ನಿಲ್ಲಿಸಬೇಕು. ಅಲ್ಲಿ ಮನಸ್ಸು ಸ್ಥೈರ್ಯವನ್ನು ಪಡೆದಮೇಲೆ ಮನಸ್ಸನ್ನು ಶುದ್ಧಬ್ರಹ್ಮದಲ್ಲಿ ನಿಲ್ಲಿಸಿ ದಾಗ ಧ್ಯಾತೃಧ್ಯೇಯವಿಭಾಗವು ಕಳಚಿಕೊಳ್ಳುತ್ತದೆ. ಆಗ ಧ್ಯಾನಕ್ಕೆ ಬ್ರಹ್ಮವು ವಿಷಯವಾಗದೆ ಇರುವುದರಿಂದ ನಿರ್ವಿಕಲ್ಪಕ ಸಮಾಧಿಸ್ಥಿತಿಗೆ ಭಕ್ತನು ಏರುತ್ತಾನೆ. ಆಗ ಜ್ಯೋತಿಯು ಜ್ಯೋತಿಯಲ್ಲಿ ಕೂಡಿಹೋದಂತೆ ಧ್ಯಾನಯೋಗಿಯು ತನ್ನನ್ನು ಪರಮಾತ್ಮನಲ್ಲಿ ಏಕೀಭವಿಸಿದಂತೆ ಕಂಡುಕೊಳ್ಳುವನು. ಆ ಸ್ಥಿತಿಯಲ್ಲಿ ಯೋಗಿಗೆ 'ಇದು ದ್ರವ್ಯ, ಇದು ಜ್ಞಾನ, ಇದು ಕ್ರಿಯೆ' ಎಂಬ ಭ್ರಮೆ ಶಾಂತವಾಗುತ್ತದೆ (೧೧–೧೪). ವಿಷ್ಣುಪುರಾಣದ ಷಷ್ಠಾಂಶದ ಏಳನೆಯ ಅಧ್ಯಾಯದಲ್ಲಿಯೂ ಈ ಧ್ಯಾನಯೋಗವು ಸುಂದರವಾಗಿ ನಿರೂಪಿತವಾಗಿದೆ.

## ಚತುರ್ವ್ಯೂಹಗಳು

ಪಾಂಚರಾತ್ರಾಗಮದಲ್ಲಿ ವಿಷ್ಣುವಿನ ಚತುರ್ವ್ಯೂಹದ ವಿಚಾರ ಬರುತ್ತದೆ. ವ್ಯೂಹ, ವಿಭವ, ಅರ್ಚಾವತಾರ, ಅಂತರ್ಯಾಮಿ—ಎಂದು ಪರಮಾತ್ಮನಿಗೆ ನಾಲ್ಕು ಅವತಾರಗಳಿವೆ. ಇವುಗಳಲ್ಲಿ ವ್ಯೂಹಾವತಾರವು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ—ಎಂದು ನಾಲ್ಕು ಬಗೆಯಾದ್ದರಿಂದ ಚತುರ್ವ್ಯೂಹವೆಂದು ಹೆಸರು ಬಂದಿದೆ. ವ್ಯೂಹವೆಂದರೆ ಮೂರ್ತಿ. ಈ ಮತದಲ್ಲಿ ಸಾತ್ತ್ವಿಕ, ರಾಜಸ, ತಾಮಸ ಗುಣಗಳನ್ನು ಕ್ರಮವಾಗಿ ವೈಕಾರಿಕ, ತೈಜಸ, ಭೂತಾದಿ ಎಂದು ವ್ಯವಹರಿಸುತ್ತಾರೆ. ಇದೇ ಅರ್ಥದಲ್ಲಿ ವೈಕಾರಿಕಾದಿ ಶಬ್ದಗಳು ಭಾಗವತದಲ್ಲಿ ಪ್ರಯುಕ್ತವಾಗಿವೆ—

ವೈಕಾರಿಕಸ್ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿವೃತ್ ॥

(೧೧—೨೪—೭)

ಹಾಗೆಯೇ ಚತುರ್ವ್ಯೂಹಗಳ ಪ್ರಸ್ತಾವನೆಯೂ ಉಂಟು—

ನಮಸ್ತೇ ವಾಸುದೇವಾಯ ನಮಃ ಸಂಕರ್ಷಣಾಯ ಚ ।
ಪ್ರದ್ಯುಮ್ನಾಯಾನಿರುದ್ಧಾಯ ತುಭ್ಯಂ ಭಗವತೇ ನಮಃ ॥

(೧೧—೫—೨೯)

ಪಾಂಚರಾತ್ರಾಗಮದಲ್ಲಿ ಬರುವ ಸಾತ್ತ್ವತ, ಭಾಗವತ ಎಂಬ ಶಬ್ದಗಳನ್ನು ಭಾಗವತವು ವಿಶೇಷವಾಗಿ ಬಳಸಿದೆ. ವಿಷ್ಣುಪುರಾಣದಲ್ಲಿಯೂ ಚತುರ್ವ್ಯೂಹವನ್ನು ಮನ್ನಿಸಿ—

ಓಂ ನಮೋ ವಾಸುದೇವಾಯ ನಮಃ ಸಂಕರ್ಷಣಾಯ ಚ ।
ಪ್ರದ್ಯುಮ್ನಾಯ ನಮಸ್ತುಭ್ಯಮನಿರುದ್ಧಾಯ ತೇ ನಮಃ

(೫—೧೮—೫೮)

ಎಂದು ಸ್ತುತಿಸಲಾಗಿದೆ. ಆದರೆ ಈ ಎಲ್ಲಾ ಸ್ಥಳಗಳಲ್ಲಿಯೂ ಚತುರ್ವ್ಯೂಹಗಳು ಪರಮಾತ್ಮನ ವಿವಿಧ ರೂಪಗಳನ್ನು ಸೂಚಿಸುತ್ತವೆ. ಈ ಮೂರ್ತಿಗಳಿಗೆ ಅಭೇದವೇ ಹೊರತು ಭೇದವಲ್ಲ.

ಪಾಂಚರಾತ್ರಾಗಮದಲ್ಲಿ ಇನ್ನೂರೈವತ್ತು ಸಂಹಿತೆಗಳಿದ್ದು, ಈಗ ಹದಿಮೂರು ಸಂಹಿತೆಗಳು ಮಾತ್ರ ಉಪಲಬ್ಧವಾಗಿವೆ. ಉಪಲಬ್ಧವಾದ ಲಕ್ಷ್ಮೀ ತಂತ್ರದಲ್ಲಿ

ವಾಸುದೇವನಿಂದ ಸಂಕರ್ಷಣನ (ಜೀವ) ಉತ್ಪತ್ತಿಯಾಗುತ್ತದೆ. ಈ ಸಂಕರ್ಷಣ ನಿಂದ (ಜೀವ) ಪ್ರದ್ಯುಮ್ನನ (ಮನಸ್ಸು) ಉತ್ಪತ್ತಿಯೂ ಪ್ರದ್ಯುಮ್ನನಿಂದ ಅನಿರುದ್ಧನ (ಅಹಂಕಾರ) ಉತ್ಪತ್ತಿಯೂ ಆಗುತ್ತದೆಯೆಂದು ವರ್ಣಿಸಿದೆ. ಅಹಿರ್ಬುಧ್ನ್ಯ ಸಂಹಿತೆಯಲ್ಲಾದರೋ ಈ ಚತುರ್ವ್ಯೂಹಗಳಿಗೆ ಅಭೇದದ ವರ್ಣನೆ ಇದೆ. ಭಾಗವತ ವಿಷ್ಣುಪುರಾಣಗಳು ಮನ್ನಿಸಿರುವುದು ಈ ಅಭೇದವನ್ನು.

ಶ್ರೀ ಶಂಕರಾಚಾರ್ಯರು ಶಾರೀರಿಕ ಮೀಮಾಂಸೆಯಲ್ಲಿ ಚತುರ್ವ್ಯೂಹಗಳ ಕಲ್ಪನೆಯನ್ನು ಖಂಡಿಸಿದ್ದಾರೆ (ಬ್ರ. ಸೂ. ೨–೨–೪೨ ರಿಂದ ೪೫). ಈ ಖಂಡನೆ ಭೇದಮೂಲಕವಾದ ಚತುರ್ವ್ಯೂಹಕ್ಕೆ ಸಂಬಂಧಿಸುತ್ತದೆಯೇ ಹೊರತು, ಭಾಗವತ–ವಿಷ್ಣುಪುರಾಣಗಳಲ್ಲಿ ಹೇಳಿರುವ ಚತುರ್ವ್ಯೂಹಗಳಿಗಲ್ಲವೆಂಬುದನ್ನು ಸ್ಪಷ್ಟ ವಾಗಿ ತಿಳಿದಿರಬೇಕು. ಪಾಂಚರಾತ್ರಾಗಮವು ವಿವಿಧ ಪ್ರಕಾರದಲ್ಲಿ ಹರಡಿಹೋಗಿದ್ದು ಅದರ ಪ್ರಮೇಯವು ಏಕರೂಪವಾಗಿಲ್ಲ. ಪರಮಾತ್ಮನಿಂದ ಜೀವನು ಹುಟ್ಟುತ್ತಾನೆ; ಜೀವನಿಂದ ಮನಸ್ಸು ಹುಟ್ಟುತ್ತದೆ; ಮನಸ್ಸಿನಿಂದ ಅಹಂಕಾರ ಹುಟ್ಟುತ್ತದೆ— ಎಂಬ ಈ ಕಲ್ಪನೆಗಳು ನಿರಾಧಾರವಾದ್ದರಿಂದಲೂ ನಾನಾ ದೋಷಗ್ರಸ್ತವಾದ್ದ ರಿಂದಲೂ ಅವೈದಿಕಗಳೆಂದು ಆಚಾರ್ಯರು ಹೇಳಿದ್ದಾರೆ. ಏವಂ ಚ ಲಕ್ಷ್ಮೀತಂತ್ರವೇ ಮೊದಲಾದ ಕೆಲವು ಸಂಹಿತೆಗಳಲ್ಲಿ ಭೇದಮೂಲಕವಾದ ಚತುರ್ವ್ಯೂಹ ಮತವು ನಿರೂಪಿತವಾಗಿತ್ತೆಂದು ತಿಳಿಯಬೇಕು. ಅಲ್ಲದೆ ಪಾಂಚರಾತ್ರಾಗಮದ ಕೆಲವು ಶಬ್ದಗಳು ಭಾಗವತದಲ್ಲಿ ಬಂದಿವೆಯೇ ಹೊರತು, ಅದರ ತತ್ತ್ವನಿರ್ಣಯವಾಗಲಿ ಸಾಧನಮಾರ್ಗವಾಗಲಿ ಭಾಗವತದಲ್ಲಿ ನಿರೂಪಿತವಾಗಿಲ್ಲ. ಭಗವದ್ಗೀತಾ ಪ್ರಸ್ಥಾನವೇ ಭಾಗವತಕ್ಕೆ ಸಂಮತವಾದದ್ದು. ವಸ್ತುತಃ ಚತುರ್ವ್ಯೂಹದ ರಹಸ್ಯಾರ್ಥವು ಭಾಗವತದಲ್ಲಿಯೇ ಸೂಚಿತವಾಗಿದೆ. ಜಾಗ್ರತ್ತಿನಲ್ಲಿ ವಿಶ್ವನೆನಿಸಿದವನೇ ಸಂಕರ್ಷಣ. ಸ್ವಪ್ನದಲ್ಲಿ ತೈಜಸನಾದವನು ಪ್ರದ್ಯುಮ್ನ. ಸುಷುಪ್ತಿಯಲ್ಲಿರುವ ಪ್ರಾಜ್ಞನು ಅನಿರುದ್ಧ. ಈ ಅವಸ್ಥಾತ್ರಯಕ್ಕೆ ಸಾಕ್ಷಿಯಾದವನು ವಾಸುದೇವ (ನೋಡಿ: ೧೨–೧೧–೨೧, ೨೨).

## ವಿಷ್ಣು ಸರ್ವೋತ್ತಮ

ಮಾನವನು ತನ್ನ ಶ್ರೇಯಸ್ಸಿಗಾಗಿ ವಿಷ್ಣುವನ್ನು ಸರ್ವ ಭಾವಗಳಿಂದಲೂ ಭಜಿಸಬೇಕು—ಎನ್ನುತ್ತದೆ ಭಾಗವತ. ವಿಷ್ಣುವಿನ ಸರ್ವೋತ್ತಮತ್ವವನ್ನು ಈ ಗ್ರಂಥವು ಪ್ರತಿಪಾದಿಸುತ್ತದೆ ಎಂಬುದು ನಿರ್ವಿವಾದ. ಆದ್ದರಿಂದಲೇ ವೈಷ್ಣವ

ಮಾರ್ಗೀಯರೆಲ್ಲರೂ—ತಮ್ಮ ದಾರ್ಶನಿಕ ಭಿನ್ನಾಭಿಪ್ರಾಯಗಳೇನೇ ಇರಲಿ—ಭಾಗವತವನ್ನು ಅತ್ಯಂತ ಗೌರವದಿಂದ ಪ್ರಮಾಣಗ್ರಂಥವೆಂದು ಸ್ವೀಕರಿಸುತ್ತಾರೆ. ಆದರೆ ಉಪಾಸನಾರ್ಥವಾಗಿ ಸತ್ತ್ವಮೂರ್ತಿಯಾದ ವಿಷ್ಣುವನ್ನು ಭಜಿಸುವುದು ಶ್ರೇಯಸ್ಕರವೆಂದು ಇದು ಪ್ರತಿಪಾದಿಸುತ್ತದೆಯೇ ಹೊರತು, ತ್ರಿಮೂರ್ತಿಗಳಲ್ಲಿ ಭೇದಭಾವದಿಂದ ವಿಷ್ಣು ಶ್ರೇಷ್ಠನೆನ್ನುವುದಿಲ್ಲ.

ಸತ್ತ್ವಂ ರಜಸ್ತಮ ಇತಿ ಪ್ರಕೃತೇರ್ಗುಣಾಸ್ತೈ-
ರ್ಯುಕ್ತಃ ಪರಃ ಪುರುಷ ಏಕ ಇಹಾಸ್ಯ ಧತ್ತೇ ।
ಸ್ಥಿತ್ಯಾದಯೇ ಹರಿವಿರಂಚಿಹರೇತಿ ಸಂಜ್ಞಾಃ
ಶ್ರೇಯಾಂಸಿ ತತ್ರ ಖಲು ಸತ್ತ್ವತನೋರ್ನೃಣಾಂ ಸ್ಯುಃ ॥

(೧–೨–೨೩)

"ಸತ್ತ್ವ, ರಜಸ್ಸು, ತಮಸ್ಸುಗಳೆಂದು ಪ್ರಕೃತಿಯ ಮೂರು ಗುಣಗಳಿವೆ. ಒಬ್ಬನೇ ಆದ ಪರಮಾತ್ಮನು ಸ್ಥಿತಿ–ಸೃಷ್ಟಿ–ಲಯಗಳನ್ನು ನಡೆಸುವುದಕ್ಕಾಗಿ ಅನುಕ್ರಮವಾಗಿ ಹರಿ–ಬ್ರಹ್ಮ–ಹರ ಎಂಬ ಹೆಸರುಗಳನ್ನು ಧರಿಸುತ್ತಾನೆ. ಇವರಲ್ಲಿ ಸತ್ತ್ವಮೂರ್ತಿಯಾದ ಶ್ರೀಹರಿಯಿಂದ ಜನರಿಗೆ ಶ್ರೇಯಸ್ಸುಗಳು ನಿಶ್ಚಯವಾಗಿ ದೊರಕುತ್ತವೆ."

ಒಬ್ಬನೇ ಪರಮಾತ್ಮನು ಸೃಷ್ಟ್ಯಾದಿ ಕರ್ಮಗಳನ್ನು ನಡೆಸುವುದಕ್ಕಾಗಿ ವಿಭಿನ್ನ ನಾಮರೂಪಗಳನ್ನು ಪಡೆಯುತ್ತಾನೆ. ಈ ಶ್ಲೋಕಗಳನ್ನು ನೋಡಬಹುದು—

(೧) ಆದಾವಭೂತ್ (೧೧–೪–೫)

(೨) ನ ತೇ ಮಯ್ಯಚ್ಯುತೇಽಜೇ ಚ (೧೨–೧೦–೨೨)

(೩) ನಾನು (ವಿಷ್ಣು), ಬ್ರಹ್ಮ, ಶಿವ—ಇವರು ಜಗತ್ತಿಗೆ ಪರಮ ಕಾರಣರಾಗಿದ್ದೇವೆ. ಗುಣಮಯಿಯಾದ ಮಾಯೆಯನ್ನು ಧರಿಸಿ ಸೃಜಿಸುತ್ತ, ರಕ್ಷಿಸುತ್ತ, ಲಯಗೊಳಿಸುತ್ತ ಕ್ರಿಯಾನುಸಾರವಾಗಿ ಬೇರೆ ಬೇರೆ ಹೆಸರನ್ನು ಧರಿಸಿದ್ದೇನೆ. ಅದ್ವಿತೀಯ ಬ್ರಹ್ಮವೂ ಕೇವಲನೂ ಆದ ಪರಮಾತ್ಮನಲ್ಲಿ ಬ್ರಹ್ಮ ರುದ್ರರನ್ನೂ ಪಂಚಭೂತಗಳನ್ನೂ ಅಜ್ಞನಾದವನು ಭಿನ್ನರೆಂದು ಭೇದಬುದ್ಧಿಯಿಂದ ಕಾಣುತ್ತಾನೆ. (೪–೭–೫೦ ರಿಂದ ೫೩)

(೪) ನಮೋ ಜಗತ್ ಸ್ಥಾನಲಯೋದಯೇಷು
ಗೃಹೀತ ಮಾಯಾಗುಣ ವಿಗ್ರಹಾಯ । (೪-೩೦-೨೩)

(೫) ಧತ್ತೇ ಯದಾ ಸ್ವದೃಗ್‌ಭೂಮನ್
ಬ್ರಹ್ಮ ವಿಷ್ಣು ಶಿವಾಭಿಧಾಮ್ । (೮-೭-೨೩)

ವಿಷ್ಣುವಿನ ಪರಮಭಕ್ತನಾಗಿದ್ದ ಮಾರ್ಕಂಡೇಯ ಮುನಿಯು ಸಮಾಹಿತ ಚಿತ್ತನಾಗಿದ್ದಾಗ, ಶಿವನು ಯೋಗಮಾಯೆಯಿಂದ ಮುನಿಯ ಹೃದಯದೊಳಗೆ ಕಾಣಿಸಿಕೊಂಡನು. ಆಗ ಮುನಿಯು ಸಮಾಧಿಯಿಂದ ಎಚ್ಚೆತ್ತು ನೋಡಿದಾಗ, ಬಾಹ್ಯದಲ್ಲಿಯೂ ಶಿವನು ಪ್ರತ್ಯಕ್ಷನಾದನು. ಮಾರ್ಕಂಡೇಯನು ಆಗ ಶಿವನನ್ನು ಹೀಗೆ ಸ್ತುತಿಸುತ್ತಾನೆ—

ನಮಃ ಶಿವಾಯ ಶಾಂತಾಯ ಸತ್ತ್ವಾಯ ಪ್ರಮೃಡಾಯ ಚ ।
ರಜೋಜುಷೇಽಪ್ಯಘೋರಾಯ ನಮಸ್ತುಭ್ಯಂ ತಮೋಜುಷೇ ॥

ಈ ಸ್ತೋತ್ರದಲ್ಲಿ ಶಿವನನ್ನು ಸತ್ತ್ವರಜಸ್ತಮಸ್ಸುಗಳೆಂಬ ಗುಣತ್ರಯ ವಿಶಿಷ್ಟನೆಂದು ಹೇಳಿರುವುದು ಗಮನಾರ್ಹ. ಶಿವನು ಆ ಋಷಿಯನ್ನು ಕುರಿತು ಮಾತನಾಡಿದಾಗ 'ಬ್ರಹ್ಮ-ವಿಷ್ಣು-ಮಹೇಶ್ವರರೆಂಬ ನಾವು ಮೂವರು ಮೋಕ್ಷವನ್ನು ಕೊಡತಕ್ಕವರು' ಎನ್ನುತ್ತಾನೆ. "ನನ್ನಲ್ಲಿ-ಅಚ್ಯುತನಲ್ಲಿ-ಬ್ರಹ್ಮನಲ್ಲಿ ಜ್ಞಾನಿಗಳು ಅಣು ಮಾತ್ರ ಭೇದವನ್ನೂ ಕಾಣುವುದಿಲ್ಲ" ಎಂದು ನುಡಿಯುತ್ತಾನೆ. ಆಮೇಲೆ ಮಾರ್ಕಂಡೇಯನು—'ಸ್ವಾಮಿ, ಮನಸ್ಸಿನಿಂದಲೇ ಈ ವಿಶ್ವವನ್ನು ಸೃಷ್ಟಿ ಮಾಡಿ, ಅದರೊಳಗೆ ಅನುಪ್ರವೇಶಿಸಿದವನು ನೀನು. ತ್ರಿಗುಣನೂ ಗುಣ ನಿಯಂತೃವೂ ಕೇವಲನೂ ಅದ್ವಿತೀಯನೂ ಗುರುವೂ ಪರಬ್ರಹ್ಮಮೂರ್ತಿಯೂ ಆದ ನಿನಗೆ ನಮಸ್ಕಾರ' ಎಂದು ಸ್ತುತಿಸುತ್ತಾನೆ. (ಭಾಗ ೧೨-೧೦)

ದಕ್ಷಯಜ್ಞದಲ್ಲಿ ಶಿವನಿಗೆ ಆಹ್ವಾನವಿರಲಿಲ್ಲ. ಆದ್ದರಿಂದ ಯಜ್ಞಕ್ಕೆ ಬ್ರಹ್ಮನೂ ವಿಷ್ಣುವೂ ಹೋಗಿರಲಿಲ್ಲ. ಶಿವನಿಂದಕನಾದ ದಕ್ಷನಿಗೂ ಕೇವಲ ವಿಷ್ಣುಭಕ್ತನಾಗಿ ಶಿವನಿಂದಕನಾಗಿದ್ದ ಭೃಗುಮುನಿಗೂ ಪ್ರಮಥಗಣಗಳಿಂದ ದಂಡನೆಯಾಗುತ್ತದೆ. (ಭಾಗ ೪-೨ ರಿಂದ ೭ ಅಧ್ಯಾಯ)

ಹರಿಹರರಲ್ಲಿ ಭೇದವನ್ನು ಕಲ್ಪಿಸಿ, ಒಬ್ಬರನ್ನೊಬ್ಬರು ನಿಂದಿಸತಕ್ಕವರು ಇದರಿಂದ ಏನಾದರೂ ಪಾಠವನ್ನು ಕಲಿತುಕೊಂಡಾರು.

ತ್ರಿಮೂರ್ತಿಗಳು ಸಗುಣರು. ಪರಬ್ರಹ್ಮವು ಇವರಿಗೆ ಮೂಲವಾದ ನಿರ್ಗುಣಸ್ವರೂಪ.

ಭಾಗವತದಲ್ಲಿ ವಿಷ್ಣುವನ್ನು ಸಗುಣನೆಂದೂ ಶಂಖಚಕ್ರಾದಿಗಳನ್ನು ಧರಿಸಿದ ವಿಶಿಷ್ಟಮೂರ್ತಿ ಎಂದೂ ಸ್ತುತಿಸಿದ್ದರೂ ಆತನ ನಿರ್ಗುಣ ಸ್ವರೂಪವನ್ನು ಹಲವಾರು ಕಡೆಗಳಲ್ಲಿ ವರ್ಣಿಸಿದೆ. ಸಗುಣ–ನಿರ್ಗುಣ ಈ ವಿಶೇಷಣಗಳು ಸಂಮಿಶ್ರವಾಗಿ ಬಂದಿದ್ದರೂ ಅವನ್ನು ವಿವಿಕ್ತವಾಗಿ ಬಿಡಿಸಿ ಅನ್ವಯಿಸಿಕೊಳ್ಳಬೇಕಾಗುತ್ತದೆ. ಏಕೆಂದರೆ, ಈ ತ್ರಿಮೂರ್ತಿಗಳ ತಾತ್ತ್ವಿಕ ಸ್ವರೂಪವು ಬೇರೆಯೇ ಆಗಿದೆಯೆಂದು ಭಾಗವತವು ಸ್ಪಷ್ಟವಾಗಿ ನಿರೂಪಿಸಿದೆ.

ಗುಣಮಯ್ಯಾ ಸ್ವಶಕ್ತ್ಯಾಸ್ಯ ಸರ್ಗಸ್ಥಿತ್ಯಪ್ಯಯಾನ್ ವಿಭೋ ।
ಧತ್ಸೇ ಯದಾ ಸ್ವದೃಗ್ ಭೂಮನ್ ಬ್ರಹ್ಮವಿಷ್ಣು ಶಿವಾಭಿಧಾವ್ ॥ ೧॥

ಹೇ ವಿಭುವೆ, ಭೂಮನೆ, ಸ್ವತಃಸಿದ್ಧಜ್ಞಾನನಾದ ನೀನು ಈ ಜಗತ್ತಿನ ಸರ್ಗ ಸ್ಥಿತಿ ಪ್ರಳಯಗಳನ್ನು ನಡೆಸುವಾಗ ಗುಣಮಯವಾದ ಸ್ವಶಕ್ತಿಯಿಂದ ಬ್ರಹ್ಮ ವಿಷ್ಣು ಶಿವ ಎಂಬ ಹೆಸರನ್ನು ಧರಿಸುತ್ತೀಯೆ.

ಜ್ಯೋತಿಃ ಪರಂ ಯತ್ರ ರಜಸ್ತಮಶ್ಚ
ಸತ್ತ್ವಂ ನ, ಯದ್ ಬ್ರಹ್ಮ ನಿರಸ್ತಭೇದವತ್ ॥ ೨॥

ಹೇ ಸ್ವಾಮಿ, ನಿನ್ನ ಪರಂಜ್ಯೋತಿಃ ಸ್ವರೂಪವು ಬ್ರಹ್ಮ, ವಿಷ್ಣು, ದೇವೇಂದ್ರ ರಿಗೂ ಗಮ್ಯವಲ್ಲ. ಅದು ನಿರಸ್ತ ಭೇದವಾಗಿದೆ. ಅದರಲ್ಲಿ ರಜಸ್ತಮೋಗುಣ ಗಳಾಗಲಿ, ಸತ್ತ್ವಗುಣವಾಗಲಿ ಇಲ್ಲ. (ಇದು ಶಿವಸ್ತುತಿ. ಸ್ಕಂಧ ೮. ಅಧ್ಯಾಯ ೭. ಶ್ಲೋಕ ೨೩ ರಿಂದ ೧೫ ಶ್ಲೋಕಗಳು ಪರಬ್ರಹ್ಮಸ್ವರೂಪವನ್ನು ವರ್ಣಿಸುತ್ತವೆ.)

## ಅನುಪ್ರವೇಶ

'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್, ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ' ಎಂಬುದಾಗಿ ಉಪನಿಷತ್ತುಗಳಲ್ಲಿ ಪರಮಾತ್ಮನ ದೇಹಾನುಪ್ರವೇಶವನ್ನು ಹೇಳಿದೆ. ದೇಹವನ್ನು ಸೃಷ್ಟಿಮಾಡಿ ಪರಮಾತ್ಮನು ಜೀವ ರೂಪದಿಂದ ಅನುಪ್ರವೇಶ ಮಾಡಿದನೆಂದು ಅಭೇದವಾದಿಗಳು ಅರ್ಥ ಹೇಳುತ್ತಾರೆ. ಶ್ರುತಿಯಲ್ಲಿ 'ಅನೇನ ಜೀವೇನಾತ್ಮನಾ' ಎಂದು ಅಭೇದವಚನವಿದೆ. ಭೇದವಾದಿ ಗಳಾದರೋ 'ಸಹ' ಎಂಬ ಪದವನ್ನು ಅಧ್ಯಾಹಾರಮಾಡಿಕೊಂಡು ಜೀವೇನ

ಸಹ—ಜೀವನೊಡನೆ ಎಂದು ಅರ್ಥ ಹೇಳುತ್ತಾರೆ. ಈ ಅನುಪ್ರವೇಶದ ವಿಷಯವು ಭಾಗವತದಲ್ಲಿ ಬಂದಿದೆ—

ಸ್ವಮಾಯಯಾ ಸೃಷ್ಟಮಿದಂ ಸದಸಲ್ಲಕ್ಷಣಂ ವಿಭುಃ ।
ಪ್ರವಿಷ್ಟ ಈಯತೇ ತತ್ತತ್ಸ್ವರೂಪೋಽಗ್ನಿರಿವೈಧಸಿ ॥ ೧ ॥

(೧೧-೭-೪೭)

ಪರಮಾತ್ಮನು ತನ್ನ ಮಾಯೆಯಿಂದ ಸೃಷ್ಟಿಸಿರುವ ಸದಸದ್ರೂಪವಾದ—ಎಂದರೆ—ದೇವತಿರ್ಯಾಗಾದಿ ಶರೀರವನ್ನು ಪ್ರವೇಶಿಸಿ, ಸೌದೆಯಲ್ಲಿ ಸೇರಿದ ಅಗ್ನಿಯಂತೆ, ಶರೀರದ ಆಯಾ ರೂಪವನ್ನು ಧರಿಸಿದ ಹಾಗೆ ಕಂಡುಬರುತ್ತಾನೆ.

ಸೃಷ್ಟ್ವೇದಂ ಮನಸಾ ವಿಶ್ವಮಾತ್ಮನಾನುಪ್ರವಿಶ್ಯ ಯಃ ।
ಗುಣೈಃ ಕುರ್ವದ್ಭಿರಾಭಾತಿ ಕರ್ತೇವ ಸ್ವಪ್ನದೃಗ್ಯಥಾ ॥ ೨ ॥

(೧೨-೧೦-೩೧)

ಮನಸ್ಸಿನಿಂದ ಈ ವಿಶ್ವವನ್ನು ಸೃಷ್ಟಿಮಾಡಿ, ತಾನು ಅದರೊಳಗೆ ಅನುಪ್ರವೇಶಿಸಿ, ಕರ್ತವ್ಯಗಳಾದ ಸತ್ತ್ವಾದಿಗುಣಗಳ ಮೂಲಕ, ಕನಸು ಕಾಣುವವನ ಹಾಗೆ, ತಾನೇ ಕರ್ತೃವೋ ಎಂಬಂತೆ ತೋರಿಸಿಕೊಳ್ಳತಕ್ಕವನು ನೀನು.

ಇಲ್ಲಿ ವಿಶ್ವದ ಸೃಷ್ಟಿ 'ಮನಸ್ಸಿನಿಂದ' ಎಂದಿದೆ. ಮಾನಸಸೃಷ್ಟಿ ಐಂದ್ರಜಾಲಿಕವೋ ಸತ್ಯವೋ ಎಂಬುದು ವಿಚಾರಾರ್ಹವಾದದ್ದು. ಸೃಷ್ಟಿ ಸ್ಥಿತಿ ಸಂಹಾರಗಳನ್ನು ಪರಮಾತ್ಮನು ಮಾಯೆಯಿಂದ ನಡೆಸುತ್ತಾನೆಂದು ಭಾಗವತದ ಹಲವಾರು ಸ್ಥಳಗಳಲ್ಲಿ ವರ್ಣನೆ ಇದೆ. ಇಂತಹ ಸಂದರ್ಭದಲ್ಲಿ ಮಾಯೆಯೆಂಬ ಶಬ್ದ ಈ ಗ್ರಂಥದಲ್ಲಿ ನೂರಾರು ಸಲ ಬಂದಿದೆ. ಮಾಯೆಯಿಂದಾದ ಮಾನಸಸೃಷ್ಟಿಯ ಸ್ವರೂಪವೇನು ? ಪ್ರತಿಯೊಂದು ಕಾರ್ಯವೂ ಬುದ್ಧಿಪೂರ್ವಕವಾಗಿ ನಡೆಯುವುದರಿಂದ ಮನಸ್ಸಿನ ಸಹಕಾರವು ಸರ್ವತ್ರ ಇದ್ದೇ ಇರುತ್ತದೆ. ಆದ್ದರಿಂದ 'ಮನಸಾ' ಎಂದು ಮತ್ತೆ ಹೇಳಬೇಕಾದ್ದಿಲ್ಲ. ಗುಣಗಳು ಕರ್ತೃಗಳೆಂದೂ ಅನುಪ್ರವೇಶಿಸಿದವನು ಕರ್ತೃವಿನಂತೆ ತೋರುತ್ತಾನೆಂದೂ ಹೇಳಿದೆ. ಮತ್ತು ಆತನು ಕನಸುಕಾಣುವವನಂತೆ ಇದ್ದಾನೆಂದೂ ವರ್ಣನೆ ಇದೆ. ಮನಸ್ಸಿನಿಂದ ಸೃಷ್ಟಿಸಿ, ಅನುಪ್ರವೇಶಿಸಿ, ಕರ್ತೃವೋ ಎಂಬಂತೆ ಕನಸು ಕಾಣತಕ್ಕವನು ಯಾರು ?

ವೇದಾಂತ ದರ್ಶನದಲ್ಲಿ ದ್ವೈತ, ವಿಶಿಷ್ಟಾದ್ವೈತ, ಅದ್ವೈತ—ಎಂಬ ಮೂರು ಸಂಪ್ರದಾಯಗಳು ಪ್ರಸಿದ್ಧವಾದವು. ನಾವು ಇವುಗಳಲ್ಲೊಂದು ಸಂಪ್ರದಾಯದ

ಚೌಕಟ್ಟಿನೊಳಗೆ ನಮ್ಮನ್ನು ಗಟ್ಟಿಯಾಗಿ ಕಟ್ಟಿಹಾಕಿಕೊಂಡಿರುತ್ತೇವೆ. ಉಪನಿಷತ್ತು, ಭಗವದ್ಗೀತೆ, ಬ್ರಹ್ಮಸೂತ್ರ, ಶ್ರೀಮದ್ಭಾಗವತ—ಇವುಗಳಲ್ಲಿ ನಮ್ಮ ಸಂಪ್ರದಾಯಕ್ಕೆ ಅನುಗುಣವಾದ ಅಂಶಗಳನ್ನೇ ಹುಡುಕುತ್ತೇವೆ. ಅಲ್ಲಿರುವ ಶಬ್ದಗಳನ್ನು ಯಥೇಚ್ಛವಾಗಿ ಎಳೆದು, ನಮ್ಮ ಸಿದ್ಧಾಂತವೇ ಅಲ್ಲಿದೆಯೆಂಬ ಆಗ್ರಹಕ್ಕೆ ಒಳಗಾಗುತ್ತೇವೆ. ಇದೇ ಆಗ್ರಹವನ್ನು ಸಾಂಖ್ಯ, ವೈಶೇಷಿಕಾದಿ ದರ್ಶನಗಳಲ್ಲಿ ನಾವು ತೋರಿಸುವುದಿಲ್ಲ ನಮಗೆ ಅಭಿನಿವೇಶವಿಲ್ಲದ ತಟಸ್ಥ ದರ್ಶನಗಳು ಅವು! ತಟಸ್ಥ ದೃಷ್ಟಿಯಿಂದಲೇ ಆ ಗ್ರಂಥಗಳ ಪ್ರಮೇಯವನ್ನು ಗುರುತಿಸುತ್ತೇವೆ. ವೇದಾಂತದರ್ಶನಕ್ಕೆ ಬಂದೊಡನೆ ನಮ್ಮ ತಟಸ್ಥ ದೃಷ್ಟಿ ಹಾರಿಹೋಗುತ್ತದೆ! ಸ್ವತ್ವವೆಂಬ ಅಭಿಮಾನ ಎದ್ದುನಿಂತಾಗ, ಲೌಕಿಕ ವ್ಯವಹಾರದಲ್ಲಿ ಹೇಗೋ ಹಾಗೆ, ಸತ್ಯದೃಷ್ಟಿಗೆ ವ್ಯಾಮೋಹ ಮುಸುಕಿಕೊಳ್ಳುತ್ತದೆ.

ಶ್ರೀಮದ್ಭಾಗವತವು ಸಕಲ ವೇದಾಂತಸಾರವೆಂದು ಅದೇ ಗ್ರಂಥವು ಹೇಳುತ್ತದೆ. ಉಪನಿಷತ್ತುಗಳ ಸಾರವೇ ಭಾಗವತವಲ್ಲಿವೆಯೆಂಬುದು ಸರ್ವಸಂಮತ. ಪುರಾಣಗಳು ವೇದಾರ್ಥದ ಉಪಬೃಂಹಣಕ್ಕಾಗಿ ಹೊರಟಿವೆ. ಉಪಬೃಂಹಣವೆಂದರೆ ಅರ್ಥವಿವರಣೆಯೇ ಸರಿಯಷ್ಟೆ. ವೇದವಾಕ್ಯಗಳನ್ನು ಶಬ್ದಶಃ ಅಲ್ಲಲ್ಲಿ ನಿರೂಪಿಸಿರುವುದನ್ನು ನಾವು ಭಾಗವತ ಪುರಾಣದಲ್ಲಿ ಕಾಣಬಹುದು. ಒಂದು ಸಲವಲ್ಲ, ಎರಡುಸಲವಲ್ಲ, ಇಪ್ಪತ್ತುಸಲ ಒಂದೇ ವಿಷಯವನ್ನು ಭಾಗವತವು ಮತ್ತೆ ಮತ್ತೆ ನಿರೂಪಿಸಿದೆ. ವಿಷಯವು ಕಠಿಣವಾದ್ದರಿಂದ ಪುನಃ ಪುನಃ ಅದನ್ನೇ ಪ್ರಕರಣ ವಿಶೇಷದಲ್ಲಿ ಹೇಳಿ ಮನನಮಾಡಿಸುವುದೇ ಗ್ರಂಥದ ಉದ್ದೇಶವಾಗಿರುತ್ತದೆ. ವ್ಯಾಖ್ಯಾನಕಾರರು ತಮ್ಮ ತಮ್ಮ ಪ್ರಕ್ರಿಯೆಗಳಿಗೆ ಅನುಗುಣವಾಗಿ ತಾತ್ತ್ವಿಕ ವಿಷಯವನ್ನು ವಿವರಿಸುತ್ತಾರೆ. ಅವರಿಗೂ ಸಂಪ್ರದಾಯದ ಬಿಗಿಕಟ್ಟಿನಿಂದ ಬಿಡಿಸಿಕೊಳ್ಳಲು ಸಾಧ್ಯವಾಗಿಲ್ಲ. ತಟಸ್ಥ ದೃಷ್ಟಿಯನ್ನು ನಾವು ಬೆಳೆಸಿಕೊಂಡಿಲ್ಲ. ಯಾವ ಪೂರ್ವಗ್ರಹವನ್ನೂ ಇಟ್ಟುಕೊಳ್ಳದೆ, ಗ್ರಂಥವು ಏನು ಹೇಳುತ್ತದೆಯೆಂಬುದನ್ನು ನಾವು ನೋಡುವುದಿಲ್ಲ. ನಮ್ಮ ಅಭಿಪ್ರಾಯವನ್ನೇ ಗ್ರಂಥದೊಳಗೆ ತುರುಕಲು ಪ್ರಯತ್ನಿಸುತ್ತೇವೆ. ಗ್ರಂಥವಲ್ಲಿರುವ ವಾಕ್ಯಗಳನ್ನು ಎಳೆದಾಡಿ ನಮ್ಮ ಅಭಿಪ್ರಾಯಕ್ಕೆ ತಿರುಗಿಸಲು ಹೆಣಗುತ್ತೇವೆ.

ಒಂದು ಗ್ರಂಥದ ತಾತ್ಪರ್ಯನಿರ್ಣಯಕ್ಕೆ ಉಪಕ್ರಮವೇ ಮೊದಲಾದ ಲಿಂಗಗಳನ್ನು ಶಾಸ್ತ್ರಕಾರರು ಹೇಳಿದ್ದಾರೆ. ಅವೆಲ್ಲವನ್ನೂ ಇಲ್ಲಿ ನಿರೂಪಿಸುವುದು ಗ್ರಂಥದ

ವಿಸ್ತರಕ್ಕೆ ದಾರಿಯಾದೀತೆಂದು 'ಅಭ್ಯಾಸ'ವನ್ನು ಮಾತ್ರ ಇಲ್ಲಿ ತೋರಿಸಲಾಗುತ್ತದೆ. ಅಭ್ಯಾಸವೆಂದರೆ ಹೇಳಿದ ವಿಷಯವನ್ನೇ ಸಂದರ್ಭಾನುಸಾರವಾಗಿ ಮತ್ತೆ ಮತ್ತೆ ಹೇಳುವುದು. ಮುಂದೆ ಉದಾಹರಿಸುವ ವಾಕ್ಯಗಳಿಂದ ಯಾವ ಸಿದ್ಧಾಂತದ ಕಡೆಗೆ ಭಾಗವತವು ಕೈತೋರಿಸುತ್ತದೆಯೆಂಬುದನ್ನು ತತ್ತ್ವಜಿಜ್ಞಾಸುಗಳು ವಿಚಾರ ಮಾಡಲಿ—

(ಈ ಪುಸ್ತಕದಲ್ಲಿಯೇ ಇರುವ ಶ್ಲೋಕಗಳಿಗೆ ಸಂಖ್ಯೆಯನ್ನು ಮಾತ್ರ ಬರೆದಿದೆ)

**ಪರಬ್ರಹ್ಮವು ಅದ್ವಿತೀಯವಾದದ್ದು. ಅದನ್ನು ಬಿಟ್ಟು ಇನ್ನೊಂದು ವಸ್ತುವಿಲ್ಲ.**

(೧) ಮನಸ್ಸಿನಿಂದಾಗಲಿ ವಾಕ್ಕಿನಿಂದಾಗಲಿ ದೃಷ್ಟಿಯಿಂದಾಗಲಿ ಅಥವಾ ಇತರ ಇಂದ್ರಿಯಗಳಿಂದಾಗಲಿ ಯಾವ ಯಾವುದು ಗ್ರಹಿಸಲ್ಪಡುತ್ತದೆಯೋ ಅದೆಲ್ಲವೂ ' ನಾನೇ, ನನಗಿಂತ ಇನ್ನೊಂದಿಲ್ಲ' ಎಂಬುದಾಗಿ ತತ್ತ್ವವಿಚಾರದಿಂದ ತಿಳಿದುಕೊಳ್ಳಿರಿ. (೧೧–೧೩–೨೪)

(೨) ಕಾರ್ಯವೆನಿಸತಕ್ಕ ಈ ಜಗತ್ತಿಗೆ ಪ್ರಕೃತಿಯು ಉಪಾದಾನಕಾರಣ. ಪುರುಷನು ಪ್ರಕೃತಿಗೆ ಅಧಿಷ್ಠಾತೃವಾದ ಆಧಾರ. ಪ್ರಕೃತಿಯನ್ನು ಕ್ಷೋಭಿಸತಕ್ಕದ್ದು ಕಾಲ. ಪ್ರಕೃತಿ, ಪುರುಷ, ಕಾಲ—ಈ ಮೂರು ಸಹ ಪರಬ್ರಹ್ಮವಾದ ನಾನೇ ಆಗಿದ್ದೇನೆ. (೧೧–೨೪–೧೯)

(೩) ಸತ್ಯವಸ್ತುವಿಗೆ ನಾನಾತ್ವವಿಲ್ಲ. ನಾನಾತ್ವವಿದೆಯೆಂದು ಯಾವನಾದರೂ ಭಾವಿಸಿದರೆ ಅವನು ಅಜ್ಞಾನಿ. ತೋರತಕ್ಕ ನಾನಾತ್ವವಾದರೋ ಘಟಾಕಾಶಕ್ಕೂ ಮಹಾಕಾಶಕ್ಕೂ ಇರುವಂತೆ, ಜಲಸ್ಥಸೂರ್ಯನಿಗೂ ಆಕಾಶಸ್ಥ ಸೂರ್ಯನಿಗೂ ಇರುವಂತೆ, ಶರೀರಸ್ಥವಾಯುವಿಗೂ ಬಾಹ್ಯವಾಯುವಿಗೂ ಇರುವಂತೆ ಉಪಾಧಿಕೃತವಾದದ್ದು. (೧೨–೪–೩೦)

(೪) ಕಾಲ, ದೇಶ, ಕ್ರಿಯಾ, ಕರ್ತೃ, ಕರಣ, ಕಾರ್ಯ, ಆಗಮ, ದ್ರವ್ಯ, ಫಲ—ಎಂಬುದಾಗಿ ಶ್ರೀಹರಿಯು ಮಾಯೆಯಿಂದ ಒಂಬತ್ತು ಪ್ರಕಾರವಾಗಿದ್ದಾನೆ. (೧೨–೧೧–೩೧)

*

(೫) ನಾನ್ಯದ್ ಭಗವತಃ ಕಿಂಚಿದ್ ಭಾವ್ಯಂ ಸದಸದಾತ್ಮಕಮ್ (೨-೬-೩೨). ಭಗವಂತನಿಗಿಂತ ಅತಿರಿಕ್ತವಾಗಿ ಸದಸದ್ರೂಪವಾದ ಯಾವ ವಸ್ತುವೂ ಇಲ್ಲ.

ಇನ್ನೂ ನೋಡಿ: ೨-೬-೧೫, ೨-೬-೪೧, ೨-೭-೩೯, ೨-೫-೧೪, ೬-೪-೪೭, ೬-೧೬-೫೧, ೮ ೩-೩, ೧೧-೧೩-೩೧, ೧೧-೨೮-೬, ೧೧-೨೮-೧೯, ೧೨-೧೧-೩೧ ಇತ್ಯಾದಿ.

**ಪರಮಾತ್ಮನು ನಿರ್ಗುಣ, ನಿರ್ವಿಶೇಷ, ಜ್ಞಾನಘನ. ಮಾಯೆಯಿಂದ ಸಗುಣನಾಗಿಯೂ ತೋರುತ್ತಾನೆ.**

(೧) ಸತ್ತ್ವ, ರಜಸ್ಸು, ತಮಸ್ಸು—ಇವು ಪ್ರಕೃತಿಯಾದ ಬುದ್ಧಿಯ ಗುಣಗಳೇ ಹೊರತು ಆತ್ಮನ ಗುಣಗಳಲ್ಲ (೧೧-೧೩-೧)

(೨) ನ ವಿದ್ಯತೇ ಯಸ್ಯ ಚ ಜನ್ಮ ಕರ್ಮ ವಾ
ನ ನಾಮರೂಪೇ ಗುಣದೋಷ ಏವ ವಾ (೮-೩-೮)

ಯಾವ ಪರಮಾತ್ಮನಿಗೆ ಜನ್ಮಕರ್ಮಗಳಾಗಲಿ ನಾಮರೂಪಗಳಾಗಲಿ ಇಲ್ಲವೋ ಯಾರಲ್ಲಿ ಗುಣವಾಗಲಿ ದೋಷವಾಗಲಿ ಇಲ್ಲವೋ ಆತನು ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಲ್ಲಿ ತನ್ನ ಮಾಯೆಯಿಂದ ನಾಮರೂಪಾದಿಗಳನ್ನು ಧರಿಸುತ್ತಾನೆ

(೩) ನಿಷೇಧಶೇಷೋಜಯತಾದಶೇಷಃ (೮-೩-೨೪)

ವಸ್ತು ಗುಣಾದಿಗಳೆಲ್ಲವನ್ನೂ ಇದಲ್ಲ ಇದಲ್ಲ—ಎಂದು ನಿಷೇಧಮಾಡುತ್ತ ಹೋದಾಗ ಉಳಿಯುವ ಸರ್ವಸ್ವರೂಪವಾದ ಬ್ರಹ್ಮವು ಜಯಿಸಲಿ!

(೪) ನಿರ್ವಿಶೇಷಾಯ ಸಾಮ್ಯಾಯ ನಮೋ ಜ್ಞಾನಘನಾಯ ಚ (೮-೩-೧೨)

ನಿರ್ವಿಶೇಷವೂ ಸಾಮ್ಯವೂ ಜ್ಞಾನಘನವೂ ಆದ (ಶಾಂತ-ಘೋರ-ಮೂಢನಾದ) ಪುರುಷನಿಗೆ ನಮಸ್ಕಾರ.

(೫) ನಿರ್ಗುಣನೂ ನಿರಪೇಕ್ಷನೂ ಆದ ನನ್ನನ್ನು ಎಲ್ಲ ಗುಣಗಳೂ ಆಶ್ರಯಿಸುವುದುಂಟು! (೧೧-೧೩-೪೦)

ಇನ್ನೂ ನೋಡಿ: ೧೧–೨೯–೨೦, ೧–೨–೩೧, ೪–೨೦–೭, ೪–೨೧–೩೪, ೮–೬–೧೧ ಇತ್ಯಾದಿ.

**ಸೃಷ್ಟಿಯು ಮಾಯಾಕಲ್ಪಿತವಾದ ಮನೋವಿಲಾಸ; ಜಗತ್ತು ಸತ್ಯವಲ್ಲ, ಮಿಥ್ಯೆ.**

(೧) ಆತ್ಮನಲ್ಲಿ ಕಾಣಿಸಿಕೊಳ್ಳತಕ್ಕ ಈ ಜಗತ್ತೆಲ್ಲವೂ ಮಾಯೆಯೆಂದು ಯುಕ್ತಿಯಿಂದ ನಿಶ್ಚಯಿಸಿ ಇದನ್ನು ತ್ಯಜಿಸಿ ಸ್ವಸ್ಥನಾಗಿರಬೇಕು. ಇದನ್ನು ಸ್ಮರಿಸಿಕೊಳ್ಳಲೂ ಕೂಡದು. (೧೧–೧೯–೨೭)

(೨) ಪಂಚಭೂತವಿಕಾರಗಳಿಂದ ನಿರ್ಮಿತವಾದ ಈ ರಾಜಸ ಸೃಷ್ಟಿಯು ವಸ್ತುತಃ ಇಲ್ಲದಿದ್ದರೂ ಕಾಣಿಸಿಕೊಳ್ಳುತ್ತದೆ. (೧೧–೨೮–೨೨)

(೩) ಸಾಮಾನ್ಯ ವಿಶೇಷಭಾವಗಳಿಂದ ತೋರಿಕೊಳ್ಳತಕ್ಕದ್ದು ಭ್ರಮೆಯೇ ಸರಿ. (೧೨–೪–೨೮)

(೪) ಎಲ್ಲ ಬಗೆಯ ನನ್ನ ವಿಭೂತಿ ಪ್ರಕಾರಗಳನ್ನೂ ನಿನಗೆ ಸಂಕ್ಷೇಪವಾಗಿ ತಿಳಿಸಿದ್ದೇನೆ. ಇವೆಲ್ಲವೂ ಕಲ್ಪಿತವಾದ ಭಾವನಾವಿಶೇಷಗಳು, ಪರಮಾರ್ಥವಲ್ಲ (ಗಗನ ಪುಷ್ಪದಂತೆ) ವಾಙ್ಮಾತ್ರದಿಂದ ಹೇಳಬಹುದಾದವುಗಳು. (೧೧–೧೬–೪೧)

(೫) ಅವಿದ್ಯಯಾ ಮನಸಾ ಕಲ್ಪಿತಾಸ್ತೇ
ಯೇಷಾಂ ಸಮೂಹೇನ ಕೃತೋ ವಿಶೇಷಃ (೫–೧೨ ೯)

ಯಾವ ಪರಮಾಣುಗಳ ಸಮೂಹದಿಂದ ಭೂಮಿ ಮುಂತಾದ ವಿಶೇಷಗಳಾಗುತ್ತವೆಯೋ ಆ ಪರಮಾಣುಗಳು ಅವಿದ್ಯೆಯಿಂದ ಮನಃಕಲ್ಪಿತವಾದವು.

ಆತ್ಮನಲ್ಲಿ ಮಾಯಾರಚಿತವಾದ ವಿಶ್ವವು 'ಅವಿದ್ಯಾರಚಿತಸ್ವಪ್ನಗಂಧರ್ವನಗರೋಪಮ' (೪–೧೨–೧೫) ಎಂದು ಸ್ಫುಟವಾದ ಹೇಳಿಕೆ ಇದೆ.

ಇನ್ನೂ ನೋಡಿ: ೧೧–೧೩–೩೪, ೭–೧೫–೫೮, ೪–೨೯–೩೫, ೧೧–೧೯–೧, ೧೧–೨೨–೫೪ ಇತ್ಯಾದಿ.

**ಜೀವೋ ಬ್ರಹ್ಮೈವ ನಾಪರಃ**

(೧) ಈಶ್ವರನೂ ಜೀವನೂ ಗುಣವೂ ಗುಣಿಯೂ (ಕ್ಷೇತ್ರಜ್ಞನಾದ) ಸರ್ವಾತ್ಮನೂ (ಕ್ಷೇತ್ರವಾದ) ಸರ್ವವೂ ನಾನೇ ಆಗಿದ್ದೇನೆ. ನನ್ನನ್ನು ಬಿಟ್ಟು ಇನ್ನೊಂದು ಪದಾರ್ಥವು ಎಲ್ಲಿಯೂ ಇಲ್ಲ. (೧೧–೧೬–೩೮)

(೨) ಮುನಿಯಾದವನು ತನ್ನನ್ನು ನನ್ನೊಡನೇ ಅಭೇದ ದೃಷ್ಟಿಯಿಂದ ಒಬ್ಬನೇ ಎಂದು ಧ್ಯಾನಿಸುತ್ತಿರಬೇಕು. (೧೧–೧೮–೨೧)

(೩) ಪರೀಕ್ಷಿತರಾಜ, 'ನಾನು ಪರಂಧಾಮವಾದ ಬ್ರಹ್ಮವೇ ಆಗಿದ್ದೇನೆ. ಪರಮಪದವಾದ ಬ್ರಹ್ಮವು ನಾನೇ ಆಗಿದ್ದೇನೆ' ಎಂದು ಸಮೀಕ್ಷಿಸುತ್ತ ನಿರುಪಾಧಿಕ ವಾದ ನಿಷ್ಕಲಬ್ರಹ್ಮದಲ್ಲಿ ಚಿತ್ತವನ್ನು ನಿಲ್ಲಿಸು. (೧೨–೫–೧೧)

(೪) ಆತ್ಮನಶ್ಚ ಪರಸ್ಯಾಪಿ ಯಃ ಕರೋತ್ಯಂತರೋದರಮ್ ।
ತಸ್ಯ ಭಿನ್ನದೃಶೋ ಮೃತ್ಯುರ್ವಿದಧೇ ಭಯಮುಲ್ಬಣಮ್ ॥
(೩–೨೯–೨೬)

ತನಗೂ ಪರಮಾತ್ಮನಿಗೂ ನಡುವೆ ಅತ್ಯಲ್ಪಭೇದವಿದೆಯೆಂದು ಸಹ ಯಾವನು ಎಣಿಸುತ್ತಾನೋ ಅಂತಹ ಭೇದದೃಷ್ಟಿಯುಳ್ಳವನಿಗೆ ಮೃತ್ಯುವು ಉಗ್ರವಾದ ಭಯವನ್ನುಂಟುಮಾಡುತ್ತದೆ.

(೫) ಅಹಂ ಭವಾನ್ ನ ಚಾನ್ಯಸ್ತ್ವಂ ತ್ವಮೇವಾಹಂ ವಿಚಕ್ಷ್ವಭೋಃ ।
ನ ನಃ ಪಶ್ಯಂತಿ ಕವಯಶ್ಛಿದ್ರಂ ಜಾತು ಮನಾಗಪಿ ॥
(೪–೨೮–೬೨)

ನಾನೇ ನೀನು, ನೀನು ಬೇರೆಯಲ್ಲ, ನೀನೇ ನಾನಾಗಿದ್ದೇನೆಂಬುದನ್ನು ನೋಡು ! ಜ್ಞಾನಿಗಳು ನಮ್ಮಿಬ್ಬರಲ್ಲಿ ಅತ್ಯಲ್ಪಭೇದವನ್ನೂ ಎಂದೂ ಕಾಣುತ್ತಿಲ್ಲ.

ಇನ್ನೂ ನೋಡಿ : ೧–೫–೨೭, ೧೧–೩–೪, ೫, ೬, ೧೧–೩–೩೭, ೧೧–೧೨–೧೭, ೩–೨೯–೩೪, ೩–೩೩–೨೬, ೪–೨೮–೪೨, ೪–೩೧–೧೮, ೮–೩–೧೩ ಇತ್ಯಾದಿ.

## ಅವಸ್ಥಾತ್ರಯ

(೧) ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥೆಗಳು ಸತ್ತ್ವಾದಿ ಗುಣನಿಮಿತ್ತದಿಂದ ಆಗತಕ್ಕ ಬುದ್ಧಿಯ ವೃತ್ತಿಗಳು. ಜೀವಾತ್ಮನಾದರೋ ಈ ಅವಸ್ಥೆಗಳಿಗೆ ವಿಲಕ್ಷಣನಾಗಿ ಇವನ್ನು ನೋಡತಕ್ಕ ಸಾಕ್ಷಿಯೆಂದು ನಿಶ್ಚಿತ ವಾಗಿದೆ. (೧೧–೧೩–೨೭)

(೨) ವೈರಾಗ್ಯದಿಂದ ಹರಿತವಾದ ನಿಪುಣೇಕ್ಷಣದಿಂದ ತನ್ನ ಎಲ್ಲ ಸಂಶಯುಗಳನ್ನೂ ಕತ್ತರಿಸಿಹಾಕಿದ ಜ್ಞಾನಿಯು, ಕನಸಿನಿಂದ ಎಚ್ಚೆತ್ತವನಂತೆ, ನಾನಾತ್ವ-ಮಯವಾದ ದ್ವೈತಪ್ರಪಂಚದಿಂದ ನಿವೃತ್ತನಾಗುತ್ತಾನೆ. (೧೧–೧೧–೧೩)

(೩) ನಾನಾವಸ್ತುಗಳಿವೆಯೆಂಬ ದ್ವೈತಬುದ್ಧಿಯು ಶ್ರವಣಾದ್ಯುಪಾಯಗಳಿಂದ ಎಲ್ಲಿಯವರೆಗೆ ನಿವೃತ್ತವಾಗುವುದಿಲ್ಲವೋ ಅಲ್ಲಿಯವರೆಗೆ ಆ ಅಜ್ಞಾನಿಯು ಜಾಗ್ರತ್ತಿನಲ್ಲಿದ್ದರೂ ಸ್ವಪ್ನವನ್ನು ಕಾಣುತ್ತಿರುವಂತೆಯೇ ಸರಿ. ಸ್ವಪ್ನವನ್ನು ಕಾಣುತ್ತಿರುವವನಿಗೆ ತಾನು ಜಾಗ್ರತ್ತಿನಲ್ಲಿರುವಂತೆ ತೋರುತ್ತದೆಯಲ್ಲವೆ, ಹಾಗೆ. (೧೧–೧೩–೩೦)

(೪) ಪರಮಾರ್ಥ ವಸ್ತುವನ್ನರಿತ ಜ್ಞಾನಿಯು ದೇಹವನ್ನೂ ಪ್ರಪಂಚವನ್ನೂ ಸ್ವಪ್ನತುಲ್ಯವೆಂದೆಣಿಸಿ ಅದನ್ನು ಗಣಿಸುವುದೇ ಇಲ್ಲ. (೧೧–೧೩–೩೭)

(೫) ಆ ಭಗವಂತನೇ ದೇಹದಲ್ಲಿ ವಿಶ್ವ, ತೈಜಸ, ಪ್ರಾಜ್ಞ, ತುರೀಯ—ಎಂದು ವೃತ್ತಿಭೇದಗಳಿಂದ ಕರೆಯಲ್ಪಡುತ್ತಾನೆ. (೧೨–೧೧–೨೨)

ಇನ್ನೂ ನೋಡಿ: ೧೧–೩–೩೯, ೧೧–೧೧–೮, ೧೧–೧೧–೧೩, ೧೧–೨೨–೩೯, ೧೨–೧೧–೨೨ ಇತ್ಯಾದಿ.

## ಮೋಕ್ಷಸ್ವರೂಪ

(೧) ಗಡಿಗೆಯನ್ನೊಡೆದಾಗ ಗಡಿಗೆಯೊಳಗಿನ ಆಕಾಶವು ಮೊದಲಿನಂತೆ ಹೇಗೆ ಮಹಾಕಾಶವೇ ಆಗಿಬಿಡುತ್ತದೆಯೋ ಹಾಗೆ (ಆತ್ಮಜ್ಞಾನದಿಂದ) ದೇಹವು ನಷ್ಟವಾದಾಗ ಜೀವವು ಮತ್ತೆ ಬ್ರಹ್ಮವೇ ಆಗಿಬಿಡುತ್ತದೆ. (೧೨–೫–೫)

(೨) ಅನಂತರ ಪರೀಕ್ಷಿತರಾಜನು ಮಹಾಯೋಗಿಯೂ ನಿಃಸಂಗನೂ ಛಿನ್ನಸಂಶಯನೂ ಆಗಿ ಸ್ವಯಂ ಬ್ರಹ್ಮಭೂತನಾದನು. (೧೨–೬–೧೦)

(೩) ಪೇಶಸ್ಕಾರಿಯೆಂಬ ಭ್ರಮರವು ಕೀಟವನ್ನು ಗೋಡೆಯ ಗೂಡಿನಲ್ಲಿ ತಂದಿಡುತ್ತದೆ. ಆ ಕೀಟವು ಭ್ರಮರವನ್ನೇ ನೆನೆಸುತ್ತ, ಪೂರ್ವರೂಪವನ್ನು ಬಿಡದೆಯೇ, ಭ್ರಮರಸ್ವರೂಪವನ್ನು ಪಡೆದುಬಿಡುತ್ತದೆ. (ಹಾಗೆ ನನ್ನನ್ನು ಧ್ಯಾನಿಸುವ ಭಕ್ತನು ನನ್ನ ಸ್ವರೂಪವನ್ನೈದುತ್ತಾನೆ) (೧೧–೯–೨೩)

(೪) ಅವಿದ್ಯೆಯಿಂದ ಬಂಧ. ವಿದ್ಯೆಯಿಂದ ಮೋಕ್ಷ. ಸಂಸಾರವು ವಸ್ತುತಃ ಇಲ್ಲ. ಬದ್ಧ, ಮುಕ್ತ—ಎಂಬ ವ್ಯವಹಾರವು ನನ್ನ ಮಾಯೆಯಿಂದ ತೋರುತ್ತದೆ. ಸಂಸಾರವು ಸ್ವಪ್ನವಿದ್ದಂತೆ. (೧೧-೧೧-೧ ರಿಂದ ೪)

**ಸತ್ಯಂ ಜ್ಞಾನಮನಂತಂ ಬ್ರಹ್ಮ ; ಆನಂದೋಬ್ರಹ್ಮ**

(೧) ಕೇವಲಾನುಭವಾನಂದಸಂದೋಹೋ ನಿರುಪಾಧಿಕಃ (೧೧-೯-೧೮)

(೨) ವಿಜ್ಞಾನಮೇತತ್‌ತ್ರಿಯವಸ್ಥಮಂಗ. (೧೧-೨೮-೨೦)

(೩) ವಿಶುದ್ಧಂ ಕೇವಲಂ ಜ್ಞಾನಂ ಪ್ರತ್ಯಕ್ ಸಮ್ಯಗವಸ್ಥಿತಮ್ ।
ಸತ್ಯಂ ಪೂರ್ಣಮನಾದ್ಯಂತಂ ನಿರ್ಗುಣಂ ನಿತ್ಯಮದ್ವಯಮ್ ॥
(೨.೬-೩೯)

(೪) ಜ್ಞಾನಮಾತ್ರಂ ಪರಂಬ್ರಹ್ಮ ಪರಮಾತ್ಮೇಶ್ವರಃ ಪುಮಾನ್
(೩-೩೨-೨೬)

(೫) ಯತ್ತದ್ ವಿಶುದ್ಧಾನುಭವಮಾತ್ರಮೇಕಮ್ (೫-೧೯-೪)

**ದ್ವೈತನಿಂದೆ**

(೧) ದ್ವೈತೇ ಧ್ರುವಾರ್ಥವಿಶ್ರಂಭಂ ತ್ಯಜೋಪಶಮಮಾವಿಶ ।
(೬-೧೫-೨೬)

(೨) ಕಿಂ ಭದ್ರಂ ಕಿಮಭದ್ರಂ ವಾ ದ್ವೈತಸ್ಯಾವಸ್ತುನಃ ಕಿಯತ್ ।
(೧೧-೨೮-೪)

**ಅದ್ವೈತಪ್ರಶಂಸೆ**

(೧) ಭಾವಾದ್ವೈತಂ ಕ್ರಿಯಾದ್ವೈತಂ ದ್ರವ್ಯಾದ್ವೈತಂ ತಥಾತ್ಮನಃ ।
ವರ್ತಯನ್ ಸ್ವಾನು ಭೂತ್ಯೇಹ ತ್ರೀನ್‌ಸ್ವಪ್ನಾನ್‌ಧುನುತೇ ಮುನಿಃ॥
(೭-೧೫-೬೨)

ಒಬ್ಬನೇ ಆತ್ಮನು ಸತ್ಯವೆಂದು ತಿಳಿಯುವುದು ಸಮ್ಯಗ್‌ಜ್ಞಾನ. 'ಜ್ಞಾನಂ ಚೈಕಾತ್ಮ್ಯ ದರ್ಶನಂ' (೧೧-೧೯-೨೭). ಅಧ್ಯಾಸೋಽವಿದ್ಯಯಾಕೃತಃ (೧೧-೨೬-೨೮), ಅವಿದ್ಯಯಾತ್ಮನ್ಯುಪಧೀಯಮಾನೇ (೫-೫-೬), ಅವಿದ್ಯಾ-ಧ್ಯಾರೋಪಿತಾಂ (೫-೧೪-೨೫) ಮುಂತಾದ ವಚನಗಳನ್ನೂ ಗಮನಿಸಬೇಕು. ನಾಲ್ಕನೆಯ ಸ್ಕಂಧದಲ್ಲಿ ಬರುವ ಪುರಂಜಯೋಪಾಖ್ಯಾನ, ಹನ್ನೆರಡನೆಯ ಸ್ಕಂಧ ದಲ್ಲಿ ಬರುವ ಮಾರ್ಕಂಡೇಯೋಪಾಖ್ಯಾನದಲ್ಲಿರುವ ಭಗವನ್ಮಾಯಾದರ್ಶನ—

ಇವುಗಳ ರಹಸ್ಯಾರ್ಥವೇನು ? ಉದಾಹೃತ ಭಾಗವತ ವಚನಗಳು ಪೌನಃಪುನ್ಯ ದಿಂದ ಯಾವ ಸಿದ್ಧಾಂತವನ್ನು ಉಪಬೃಂಹಣಮಾಡುತ್ತವೆ ? ಯಾವ ಸಿದ್ಧಾಂತದ ಕಡೆಗೆ ಒಲವಿನಿಂದ ಕೈದೋರಿಸುತ್ತವೆ ?

ನಾನು ಸಂಪ್ರದಾಯದ ಚೌಕಟ್ಟಿನೊಳಗೆ ಸಿಕ್ಕಿಕೊಂಡೇ ಈ ರೀತಿ ಬರೆಯು ತ್ತಿದ್ದೇನೆಯೆ—ಎಂಬುದೂ ನನಗೆ ತಿಳಿಯದಾಗಿದೆ. ತಟಸ್ಥದೃಷ್ಟಿಯನ್ನು ತಳೆದ ವಿದ್ವಾಂಸರು ವಿಚಾರಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಈ ಪ್ರಸ್ತಾವನೆಯು ತನ್ನ ಪರಿಧಿಯನ್ನು ಮೀರಿ ಬೆಳೆಯಿತು. ಪ್ರಸ್ತುತ ವಿಷಯವು ಜಿಜ್ಞಾಸುಗಳ ಮನಸ್ಸಿಗೆ ದೃಢವಾಗಿ ನಾಟಲೆಂದು ಹೀಗೆ ವಿಸ್ತರಿಸಿದ್ದಾಯಿತು.

ವಾಚಕರ ಸೌಕರ್ಯಕ್ಕಾಗಿ ಅಡಿ ಟಿಪ್ಪಣಿಗಳನ್ನೂ ಅನುಬಂಧಗಳನ್ನೂ ಬರೆದು ಸೇರಿಸಿದ್ದೇನೆ. ಭಾಗವತಮಾಹಾತ್ಮ್ಯವು ಸ್ಕಾಂಧಪುರಾಣದ ವೈಷ್ಣವ ಖಂಡ ದಲ್ಲಿಯೂ ಪದ್ಮಪುರಾಣದ ಉತ್ತರಖಂಡದಲ್ಲಿಯೂ ಬಂದಿದೆ. ಅವುಗಳಲ್ಲಿ ಪದ್ಮ ಪುರಾಣೋಕ್ತವಾದ ಮಾಹಾತ್ಮ್ಯವನ್ನು ಭಕ್ತಜನರಿಗೆ ಉಪಯುಕ್ತವಾಗಲೆಂದು ಅನುವಾದಸಹಿತವಾಗಿ ಈ ಪುಸ್ತಕದ ಕಡೆಯಲ್ಲಿ ಸೇರಿಸಿದೆ.

ಈ ಗ್ರಂಥವನ್ನು ಪ್ರಕಾಶಿಸಲು ಸಂತೋಷದಿಂದ ಮುಂದೆ ಬಂದ ರಾಮಾಯಣ ಪ್ರಕಾಶನ ಸಮಿತಿಯ ಎಲ್ಲ ಸದಸ್ಯರಿಗೂ ಮತ್ತೊಮ್ಮೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನರ್ಪಿಸುತ್ತೇನೆ. ಹಸ್ತಪ್ರತಿಯನ್ನು ಸಿದ್ಧಪಡಿಸುವಾಗ ನನಗೆ ತುಂಬ ನೆರವು ನೀಡಿದ ವಿದ್ವಾನ್ ಎಸ್. ಎ. ರಾಮಚಂದ್ರಭಟ್ಟರ ಉಪಕಾರವನ್ನು ಮರೆಯಲಾರೆ. ಮುದ್ರಣ ಕಾಲದಲ್ಲಿ ನನ್ನಿಂದಾದ ತೊಂದರೆಗಳನ್ನು ಗಣಿಸದೆ, ಅಚ್ಚುಕಟ್ಟಾಗಿ ಇದನ್ನು ಮುದ್ರಿಸಿಕೊಟ್ಟಿರುವ ಪ್ರಭಾ ಮುದ್ರಣಾಲಯದ ಮಾಲಿಕರಾದ ಶ್ರೀ ಡಿ. ಎಸ್. ಕೃಷ್ಣಾಚಾರ್ಯರಿಗೆ ನನ್ನ ಅನಂತ ವಂದನೆಗಳು.

ಮಾಯಾಸೃಷ್ಟಾಂ ನಿಖಿಲಜಗತೀಮಾತ್ಮನಾನುಪ್ರವಿಶ್ಯ
ಕ್ಷೇಮಾಯಾಸ್ಯಾ ಹರಿಹರವಿರಿಂಚಾಭಿಧಾನಂ ದಧಾನಃ ।
ಶ್ರೇಯಃಪ್ರಾಪ್ತ್ಯೈ ಸುಗಮುಪದವೀಮುದ್ಧವವ್ಯಾಜತೋಽಸ್ಮಾನ್
ಯೋಽವಾಶಾಸೀತ್ ಸ ಪರಮಗುರುಃ ಸ್ತೂಯತಾಂ ವಾಸುದೇವಃ ॥

ಇತಿ

ಶ್ರೀಕೃಷ್ಣಜನ್ಮಾಷ್ಟಮೀ
೧೪—೮—೧೯೬೦

ವಿದ್ವಜ್ಜನ ವಿಧೇಯ
ಎನ್. ರಂಗನಾಥ ಶರ್ಮಾ

# ಶ್ರೀಮದ್ಭಾಗವತದ ಪಾರಾಯಣವಿಧಿ

ಸ್ನಾನಮಾಡಿ ಶುಚಿಯಾಗಿ ವ್ಯಾಸರು, ಶುಕಮುನಿಗಳು, ಭಗವಾನ್ ವಾಸುದೇವ ಮತ್ತು ಭಾಗವತ ಗ್ರಂಥಗಳನ್ನು ಭಕ್ತಿಯಿಂದ ಧ್ಯಾನಿಸಿ ಪೂಜಿಸಬೇಕು. ಅನಂತರ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರ ಮಂತ್ರವನ್ನು ನೂರೆಂಟುಸಲ ಜಪಿಸಬೇಕು. ಆ ಮೇಲೆ ಈ ರೀತಿ ಕರನ್ಯಾಸ-ಅಂಗನ್ಯಾಸಗಳನ್ನು ಮಾಡಿಕೊಳ್ಳಬೇಕು.

| | |
|---|---|
| ಓಂ ಕ್ಲಾಂ ಅಂಗುಷ್ಠಾಭ್ಯಾಂ ನಮಃ | ಓಂ ಕ್ಲಾಂ ಹೃದಯಾಯ ನಮಃ |
| ಓಂ ಕ್ಲೀಂ ತರ್ಜನೀಭ್ಯಾಂ ನಮಃ | ಓಂ ಕ್ಲೀಂ ಶಿರಸೇ ಸ್ವಾಹಾ |
| ಓಂ ಕ್ಲೂಂ ಮಧ್ಯಮಾಭ್ಯಾಂ ನಮಃ | ಓಂ ಕ್ಲೂಂ ಶಿಖಾಯೈವಷಟ್ |
| ಓಂ ಕ್ಲೈಂ ಅನಾಮಿಕಾಭ್ಯಾಂ ನಮಃ | ಓಂ ಕ್ಲೈಂ ಕವಚಾಯಹುಮ್ |
| ಓಂ ಕ್ಲೌಂ ಕನಿಷ್ಠಿಕಾಭ್ಯಾಂ ನಮಃ | ಓಂ ಕ್ಲೌಂ ನೇತ್ರತ್ರಯಾಯ ವಷಟ್ |
| ಓಂ ಕ್ಲಃ ಕರತಲಕರಪೃಷ್ಠಾಭ್ಯಾಂ ನಮಃ | ಓಂ ಕ್ಲಃ ಅಸ್ತ್ರಾಯಫಟ್ |

## ಅಥ ಧ್ಯಾನಮ್

ಕಸ್ತೂರೀತಿಲಕಂ ಲಲಾಟಫಲಕೇ ವಕ್ಷಃಸ್ಥಲೇ ಕೌಸ್ತುಭಂ
ನಾಸಾಗ್ರೇ ವರಮೌಕ್ತಿಕಂ ಕರತಲೇ ವೇಣುಃ ಕರೇ ಕಂಕಣಮ್ ।
ಸರ್ವಾಂಗೇ ಹರಿಚಂದನಂ ಸುಲಲಿತಂ ಕಂಠೇ ಚ ಮುಕ್ತಾವಲೀ
ಗೋಪಸ್ತ್ರೀಪರಿವೇಷ್ಟಿತೋ ವಿಜಯತೇ ಗೋಪಾಲಚೂಡಾಮಣಿಃ ॥

ಎಂದು ಧ್ಯಾನಿಸಿ ಪಾರಾಯಣವನ್ನಾರಂಭಿಸಬೇಕು. ಯಾವುದೇ ಅಧ್ಯಾಯದ ನಡುವೆ ಪಾರಾಯಣವನ್ನು ನಿಲ್ಲಿಸಬಾರದು. ಪ್ರತಿದಿನ ಪಾರಾಯಣ ಸಮಾಪ್ತಿಯಲ್ಲಿ ಮತ್ತೆ ಗ್ರಂಥವನ್ನರ್ಚಿಸಿ ಈ ಶ್ಲೋಕವನ್ನು ಹೇಳಬೇಕು.

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

---

# ಅನುಕ್ರಮಣಿಕೆ

## ಏಕಾದಶಸ್ಕಂಧ

## ದ್ವಾದಶಸ್ಕಂಧ

# ಶ್ರೀಮದ್ಭಾಗವತದ ಮಾಹಾತ್ಮ್ಯ

## (ಶ್ರೀಪದ್ಮಪುರಾಣದ ಉತ್ತರಖಂಡ)



---

## ರಾಮಾಯಣ ಪ್ರಕಾಶನ ಸಮಿತಿ ಸದಸ್ಯರು

ಶ್ರೀಯುತರಾದ—

೧ ಟಿ. ಆರ್. ಶಾಮಣ್ಣ

೨ ಎಸ್. ಎನ್. ಮೂರ್ತಿ

೩ ಹೆಚ್. ಸಿ. ನಂಜುಂಡಭಟ್ಟ

೪ ಬಿ. ಕೆ. ಅನಂತರಾಮಯ್ಯ

೫ ಹೆಚ್. ವಿ. ಅಪ್ರಮೇಯ

೬ ಎನ್. ರಂಗನಾಥಶರ್ಮಾ

೭ ಡಿ. ಸಿ. ಅನಂತರಾಮಯ್ಯ
(ಕಾರ್ಯದರ್ಶಿ)

|| ಓಂ ನಮೋ ಭಗವತೇ ವಾಸುದೇವಾಯ ||

# ಶ್ರೀ ಮ ದ್ಭಾ ಗ ವ ತ ಮ್

## ಏಕಾದಶಸ್ಕಂಧಃ

ಕೃಷ್ಣಂ ನಾರಾಯಣಂ ವಂದೇ ಕೃಷ್ಣಂ ವಂದೇ ವ್ರಜಪ್ರಿಯಮ್ ।
ಕೃಷ್ಣಂ ದ್ವೈಪಾಯನಂ ವಂದೇ ಕೃಷ್ಣಂ ವಂದೇ ಪೃಥಾಸುತಮ್ ॥

## ಪ್ರಥಮೋಧ್ಯಾಯಃ

**ಶ್ರೀಶುಕ ಉವಾಚ—**

**ಕೃತ್ವಾ ದೈತ್ಯವಧಂ ಕೃಷ್ಣಃ ಸರಾಮೋ ಯದುಭಿರ್ವೃತಃ ।**
**ಭುವೋಽವತಾರಯದ್ ಭಾರಂ ಜವಿಷ್ಠಂ ಜನಯನ್ ಕಲಿಮ್ ॥** ೧

**ಯೇ ಕೋಪಿತಾಃ ಸುಬಹು ಪಾಂಡುಸುತಾಃ ಸಪತ್ನೈ-**
**ರ್ದುರ್ದ್ಯೂತ ಹೇಲನ ಕಚಗ್ರಹಣಾದಿಭಿಸ್ತಾನ್ ।**
**ಕೃತ್ವಾ ನಿಮಿತ್ತಮಿತರೇತರತಃ ಸಮೇತಾನ್**
**ಹತ್ವಾ ನೃಪಾನ್ ನಿರಹರತ್ ಕ್ಷಿತಿಭಾರಮೀಶಃ ॥** ೨

### ಅಧ್ಯಾಯ ೧

**ಯಾದವರಿಗೆ ಮುನಿಗಳ ಶಾಪ. ಕಬ್ಬಿಣದ ಒನಕೆಯ ಪುಡಿಯಿಂದ ಏರಕಗಳೆಂಬ ಹುಲ್ಲು ಹುಟ್ಟುವುದು. ಒನಕೆಯ ಒಂದು ತುಂಡನ್ನು ಬೇಡನು ಬಾಣಕ್ಕೆ ಅಳವಡಿಸಿಕೊಳ್ಳುವುದು.**

ಶ್ರೀ ಶುಕಮಹರ್ಷಿಗಳು ಹೇಳಿದರು: "ಪರೀಕ್ಷಿತರಾಜ, ಈ ಪ್ರಕಾರವಾಗಿ ಶ್ರೀ ಕೃಷ್ಣನು ಬಲರಾಮ ಸಹಿತನಾಗಿ ದೈತ್ಯರನ್ನು ವಧಿಸಿ, ಯಾದವರೊಡನೆ ಸೇರಿಕೊಂಡು, ಹಿಂಸಾರೂಪ ಫಲವನ್ನೀಯುವಂತೆ ಜಗಳವನ್ನು ತ್ವರೆಗೊಳಿಸಿ ಭೂಭಾರವನ್ನಿಳುಹಿದನು (೧). ಕಪಟದ್ಯೂತ, ಅವಮಾನ, ದ್ರೌಪದಿಯ ಮುಡಿಯನ್ನೆಳೆದದ್ದು—ಮೊದಲಾದ ಕಾರಣಗಳಿಂದ ವೈರಿಗಳಾದ ಕೌರವರು ಪಾಂಡವರನ್ನು ಹಲವಾರುಸಲ ಕೆಣಕಿ ಕೋಪಗೊಳಿಸಿದ್ದರು. ಅವರನ್ನು ನಿಮಿತ್ತವಾಗಿಟ್ಟುಕೊಂಡು, ಉಭಯಪಕ್ಷಗಳನ್ನು ವಹಿಸಿ ನೆರೆದಿದ್ದ ರಾಜರನ್ನು, ಪ್ರಭುವಾದ ಶ್ರೀಕೃಷ್ಣನು (ಭಾರತ ಯುದ್ಧದಲ್ಲಿ) ಸಂಹರಿಸಿ ಭೂಭಾರವನ್ನು ಹೋಗಲಾಡಿಸಿದನು (೨.)

ಭೂಭಾರರಾಜಪೃತನಾ ಯದುಭಿರ್ನಿರಸ್ಯ
ಗುಪ್ತೈಃ ಸ್ವಬಾಹುಭಿರಚಿಂತಯದಪ್ರಮೇಯಃ ।
ಮನ್ಯೇಽವನೇರ್ನನು ಗತೋಽಪ್ಯಗತಂ ಹಿ ಭಾರಂ
ಯದ್ ಯಾದವಂ ಕುಲಮಹೋ ಅವಿಷಹ್ಯಮಾಸ್ತೇ ॥ ೩

ನೈವಾನ್ಯತಃ ಪರಿಭವೋಽಸ್ಯ ಭವೇತ್ ಕಥಂಚಿ-
ನ್ಮತ್ಸಂಶ್ರಯಸ್ಯ ವಿಭವೋನ್ನಹನಸ್ಯ ನಿತ್ಯಮ್ ।
ಅಂತಃಕಲಿಂ ಯದುಕುಲಸ್ಯ ವಿಧಾಯ ವೇಣು-
ಸ್ತಂಬಸ್ಯ ವಹ್ನಿಮಿವ ಶಾಂತಿಮುಪೈಮಿ ಧಾಮ ॥ ೪

ಏವಂ ವ್ಯವಸಿತೋ ರಾಜನ್ ಸತ್ಯಸಂಕಲ್ಪ ಈಶ್ವರಃ ।
ಶಾಪವ್ಯಾಜೇನ ವಿಪ್ರಾಣಾಂ ಸಂಜಹ್ರೇ ಸ್ವಕುಲಂ ವಿಭುಃ ॥ ೫

ಸ್ವಮೂರ್ತ್ಯಾ ಲೋಕಲಾವಣ್ಯನಿರ್ಮುಕ್ತ್ಯಾ ಲೋಚನಂ ನೃಣಾಮ್ ।
ಗೀರ್ಭಿಸ್ತಾಃ ಸ್ಮರತಾಂ ಚಿತ್ತಂ ಪದೈಸ್ತಾನೀಕ್ಷತಾಂ ಕ್ರಿಯಾಃ ॥ ೬

---

ಅಲ್ಲದೆ ತನ್ನ ಬಾಹುಬಲದಿಂದ ರಕ್ಷಿತರಾಗಿದ್ದ ಯಾದವರ ಮೂಲಕ ಭೂಮಿಗೆ ಭಾರವಾಗಿದ್ದ ರಾಜರನ್ನೂ ಅವರ ಸೇನೆಗಳನ್ನೂ (ವಿವಾಹಾದಿನೆವಗಳಿಂದ) ನಿರ್ಮೂಲಗೊಳಿಸಿ, ಅಪ್ರಮೇಯನಾದ ಶ್ರೀಕೃಷ್ಣನು ಹೀಗೆ ಚಿಂತಿಸಿದನು: "ಈಗ ಭೂಮಿಯ ಭಾರವು (ಲೋಕದೃಷ್ಟಿಯಿಂದ) ತೊಲಗಿದ್ದರೂ ಪೂರ್ತಿಯಾಗಿ ತೊಲಗಿಲ್ಲವೆಂದೇ ನಾನು ತಿಳಿಯುತ್ತೇನೆ. ಏಕೆಂದರೆ, ಸಹಿಸಲಶಕ್ಯವಾದ ಈ ಯಾದವ ಕುಲವು ಇನ್ನೂ ಉಳಿದುಕೊಂಡುಬಿಟ್ಟಿದೆ! (೩). ಸದಾ ವೈಭವೋಪೇತವಾದ ಈ ಯದುವಂಶವು ನನ್ನನ್ನು ಆಶ್ರಯಿಸಿಕೊಂಡಿರುವುದರಿಂದ ಬೇರೊಬ್ಬರು ಎಂದಿಗೂ ಇದನ್ನು ಘಾತಿಸಲಾರರು. ಆದ್ದರಿಂದ ಈ ಯಾದವರಲ್ಲಿಯೇ ಅಂತಃಕಲಹವನ್ನುಂಟುಮಾಡಿ, ಬಿದಿರುಮೆಳೆಯಲ್ಲಿ ಬೆಂಕಿ ಹುಟ್ಟುವಂತೆ ಜಗಳವನ್ನು ಹುಟ್ಟಿಸಿ ಇವರನ್ನು ನಾಶಮಾಡಿ, ಶಾಂತಿಯನ್ನೈದುವೆನು; ವೈಕುಂಠಧಾಮವನ್ನು ಸೇರುವೆನು" (೪). ಪರೀಕ್ಷಿತರಾಜ, ಈ ಪ್ರಕಾರವಾಗಿ ಸತ್ಯಸಂಕಲ್ಪನಾದ ಆ ಪ್ರಭುವು ನಿಶ್ಚಯಿಸಿ, ಬ್ರಾಹ್ಮಣರ ಶಾಪವ್ಯಾಜದಿಂದ ತನ್ನ ಯಾದವಕುಲವನ್ನೇ ನಾಶಪಡಿಸಿದನು (೫). ಪರೀಕ್ಷಿತ, ಜಗತ್ತಿಗೆ ಲಾವಣ್ಯವನ್ನು ಹಂಚುತ್ತಿದ್ದ ತನ್ನ ಆಕೃತಿಯಿಂದ ಜನರ ಕಣ್ಣನ್ನು ಸೆಳೆದು, ತನ್ನ ನುಡಿಗಳನ್ನು ಸ್ಮರಿಸಿಕೊಳ್ಳತಕ್ಕವರ ಚಿತ್ತ

ಆಚ್ಛಿದ್ಯ ಕೀರ್ತಿಂ ಸುಶ್ಲೋಕಾಂ ವಿತತ್ಯ ಹ್ಯಂಜಸಾ ನು ಕೌ ।
ತಮೋಽನಯಾ ತರಿಷ್ಯಂತೀತ್ಯಗಾತ್ ಸ್ವಂ ಪದಮೀಶ್ವರಃ ॥ ೭

ರಾಜೋವಾಚ—

ಬ್ರಹ್ಮಣ್ಯಾನಾಂ ವದಾನ್ಯಾನಾಂ ನಿತ್ಯಂ ವೃದ್ಧೋಪಸೇವಿನಾಮ್ ।
ವಿಪ್ರಶಾಪಃ ಕಥಮಭೂದ್ ವೃಷ್ಣೀನಾಂ ಕೃಷ್ಣಚೇತಸಾಮ್ ॥ ೮

ಯನ್ನಿಮಿತ್ತಃ ಸ ವೈ ಶಾಪೋ ಯಾದೃಶೋ ದ್ವಿಜಸತ್ತಮ ।
ಕಥಮೇಕಾತ್ಮನಾಂ ಭೇದ ಏತತ್ ಸರ್ವಂ ವದಸ್ವ ಮೇ ॥ ೯

ಶ್ರೀಶುಕ ಉವಾಚ—

ಬಿಭ್ರದ್ ವಪುಃ ಸಕಲಸುಂದರಸನ್ನಿವೇಶಂ
ಕರ್ಮಾಚರನ್ ಭುವಿ ಸುಮಂಗಲಮಾಪ್ತಕಾಮಃ ।
ಆಸ್ಥಾಯ ಧಾಮ ರಮಮಾಣ ಉದಾರಕೀರ್ತಿಃ
ಸಂಹರ್ತುಮೈಚ್ಛತ ಕುಲಂ ಸ್ಥಿತಕೃತ್ಯಶೇಷಃ ॥ ೧೦

---

ವನ್ನು ಆ ನುಡಿಗಳಿಂದಲೇ ಆಕರ್ಷಿಸಿ, ನೆಲದಲ್ಲಿ ಮೂಡಿದ ತನ್ನ ಹೆಜ್ಜೆಗಳನ್ನು ನೋಡುತ್ತಿದ್ದವರ ಇತರ ಕಾರ್ಯಗಳನ್ನು ಹೆಜ್ಜೆಗಳ ಸೌಂದರ್ಯದಿಂದಲೇ ತಡೆದು ನಿಲ್ಲಿಸಿ, ಕವಿಗಳ ವಾಣಿಯಲ್ಲಿ ತನ್ನ ಕೀರ್ತಿಯನ್ನು ಬಿತ್ತರಿಸಿ, ಭೂಲೋಕದಲ್ಲಿರುವ ಜನರು ಕವಿವಾಣಿಯಲ್ಲಿ ನೆಲೆಸಿದ ತನ್ನ ಈ ಕೀರ್ತಿಯಿಂದಲೇ ಸುಖವಾಗಿ ತಮ್ಮ ಪಾಪವನ್ನು ಕಳೆದುಕೊಳ್ಳುವರೆಂದು ನಿರ್ಣಯಿಸಿ, ಭಗವಂತನು ಸ್ವಧಾಮಕ್ಕೆ ತೆರಳಿದನು" ಎಂದರು (೬–೭). ಆಗ ಪರೀಕ್ಷಿತರಾಜನು ಶುಕಮುನಿಗಳನ್ನು ಕುರಿತು "ಮಹರ್ಷಿಗಳೆ, ಯಾದವರು ಬ್ರಾಹ್ಮಣ ಪೂಜಕರೂ ದಾನಿಗಳೂ ಗುರುಹಿರಿಯರನ್ನು ಸೇವಿಸತಕ್ಕವರೂ ಶ್ರೀಕೃಷ್ಣಭಕ್ತರೂ ಆಗಿದ್ದರಲ್ಲವೆ? ಅವರಿಗೆ ಬ್ರಾಹ್ಮಣರ ಶಾಪವು ಬಂದುದೇಕೆ? ಅದು ಏಕೆ ಬಂದಿತು? ಯಾವ ಬಗೆಯ ಶಾಪ ಅದು? ಐಕಮತ್ಯದಿಂದ ಇದ್ದವರಲ್ಲಿ ಒಡಕು ಹೇಗೆ ಹುಟ್ಟಿತು? ಇದೆಲ್ಲವನ್ನೂ ಹೇಳೋಣವಾಗಬೇಕು" ಎಂದನು (೮–೯). ಶ್ರೀಶುಕಮುನಿಗಳು ಹೇಳಿದರು: ರಾಜ, ಭಗವಂತನು ಭೂಲೋಕದಲ್ಲಿ ಸಕಲ ಸುಂದರವಸ್ತುಗಳಿಗೆ ನೆಲೆಯಾದ ದಿವ್ಯದೇಹವನ್ನು ಧರಿಸಿ, ತಾನು ಆಪ್ತಕಾಮನಾದರೂ ಉದಾರಕೀರ್ತಿಯನ್ನು ವಿಸ್ತರಿಸುವುದಕ್ಕಾಗಿ ಕಲ್ಯಾಣಕರ್ಮಗಳನ್ನು ಎಸಗುತ್ತ ದ್ವಾರಕಾಗೃಹದಲ್ಲಿ ನೆಲೆಸಿ ವಿಹರಿಸುತ್ತ

*

ಕರ್ಮಾಣಿ ಪುಣ್ಯನಿವಹಾನಿ ಸುಮಂಗಲಾನಿ
ಗಾಯಜ್ಜಗತ್ಕಲಿಮಲಾಪಹರಾಣಿ ಕೃತ್ವಾ ।
ಕಾಲಾತ್ಮನಾ ನಿವಸತಾ ಯದುದೇವಗೇಹೇ
ಪಿಂಡಾರಕಂ ಸಮಗಮನ್ ಮುನಯೋ ನಿಸೃಷ್ಟಾಃ ॥ ೧೧

ವಿಶ್ವಾಮಿತ್ರೋಽಸಿತಃ ಕಣ್ವೋ ದುರ್ವಾಸಾ ಭೃಗುರಂಗಿರಾಃ ।
ಕಶ್ಯಪೋ ವಾಮದೇವೋಽತ್ರಿರ್ವಸಿಷ್ಠೋ ನಾರದಾದಯಃ ॥ ೧೨

ಕ್ರೀಡಂತಸ್ತಾನುಪವ್ರಜ್ಯ ಕುಮಾರಾ ಯದುನಂದನಾಃ ।
ಉಪಸಂಗೃಹ್ಯ ಪಪ್ರಚ್ಛುರವಿನೀತಾ ವಿನೀತವತ್ ॥ ೧೩

ತೇ ವೇಷಯಿತ್ವಾ ಸ್ತ್ರೀವೇಷೈಃ ಸಾಂಬಂ ಜಾಂಬವತೀಸುತಮ್ ।
ಏಷಾ ಪೃಚ್ಛತಿ ವೋ ವಿಪ್ರಾ ಅಂತರ್ವತ್ನ್ಯಸಿತೇಕ್ಷಣಾ ॥ ೧೪

ಪ್ರಷ್ಟುಂ ವಿಲಜ್ಜತೀ ಸಾಕ್ಷಾತ್ ಪ್ರಬ್ರೂತಾಮೋಘದರ್ಶನಾಃ ।
ಪ್ರಸೋಷ್ಯಂತೀ ಪುತ್ರಕಾಮಾ ಕಿಂಸ್ವಿತ್ ಸಂಜನಯಿಷ್ಯತಿ ॥ ೧೫

---

ಇದ್ದನು. ಅನಂತರ ಇನ್ನೂ ಭೂಭಾರಹರಣದ ಕೃತ್ಯಶೇಷವು ಇದೆಯೆಂದು ಭಾವಿಸಿ ಯದುಕುಲವನ್ನು ಮುಗಿಸಬೇಕೆಂದು ಸಂಕಲ್ಪಿಸಿದನು (೧೦). (ಕರ್ಮನಿರ್ವಹಣೆಗಾಗಿ ಆಹೂತರಾದ ವಿಶ್ವಾಮಿತ್ರಾದಿ) ಮುನಿಗಳು ಬಂದು ಪುಣ್ಯಜನಕವೂ ಮಂಗಳಕರವೂ ಕೀರ್ತಿಸತಕ್ಕ ಜನರ ಕಲಿಕಲ್ಮಷಹರವೂ ಆದ ಒಂದು ಸತ್ಕರ್ಮವಿಶೇಷವನ್ನು ನಡೆಸಿಕೊಟ್ಟರು. ಅಮೇಲೆ ವಸುದೇವಗೃಹದಲ್ಲಿ ನೆಲೆಸಿದ್ದ ಕಾಲಾತ್ಮಕನಾದ ಶ್ರೀಕೃಷ್ಣನು ಬೀಳ್ಕೊಡಲಾಗಿ ಆ ಮುನಿಗಳು ಪಿಂಡಾರಕವೆಂಬ ಕ್ಷೇತ್ರಕ್ಕೆ ಬಂದರು (೧೧). ಆ ಮುನಿಗಳು ಯಾರೆಂದರೆ : ವಿಶ್ವಾಮಿತ್ರ, ಅಸಿತ, ಕಣ್ವ, ದುರ್ವಾಸ, ಭೃಗು, ಅಂಗಿರಸ್ಸು, ಕಶ್ಯಪ, ವಾಮದೇವ, ಅತ್ರಿ, ವಸಿಷ್ಠ, ನಾರದ–ಮೊದಲಾದವರು. ಆಗ ಕೆಲವು ಯದುಕುಮಾರರು ಆಟವಾಡುತ್ತ ಅವರನ್ನು ಹಿಂಬಾಲಿಸಿ ಬಂದು ಮುನಿಗಳ ಪಾದಗಳನ್ನು ಮುಟ್ಟಿ ನಮಸ್ಕರಿಸಿದರು (೧೨–೧೩). ಆ ದುರ್ವಿನೀತರು ಜಾಂಬವತೀಪುತ್ರನಾದ ಸಾಂಬನಿಗೆ ಸ್ತ್ರೀ ವೇಷವನ್ನು ಹಾಕಿಸಿ ಕರೆತಂದು ವಿನಯವನ್ನು ನಟಿಸುತ್ತ "ಪೂಜ್ಯರಾದ ವಿಪ್ರರೆ, ಈ ಸುಂದರಿಯು ಗರ್ಭಿಣಿಯಾಗಿದ್ದಾಳೆ! ಹಡೆಯುವ ದಿನ ಸಮೀಪಿಸಿದೆ! ಗಂಡು ಮಗುವನ್ನು

ಏವಂ ಪ್ರಲಬ್ಧಾ ಮುನಯಸ್ತಾನೂಚುಃ ಕುಪಿತಾ ನೃಪ |
ಜನಯಿಷ್ಯತಿ ವೋ ಮಂದಾ ಮುಸಲಂ ಕುಲನಾಶನಮ್ || ೧೬

ತಚ್ಛ್ರುತ್ವಾ ತೇಽತಿಸಂತ್ರಸ್ತಾ ವಿಮುಚ್ಯ ಸಹಸೋದರಮ್ |
ಸಾಂಬಸ್ಯ ದದೃಶುಸ್ತಸ್ಮಿನ್ ಮುಸಲಂ ಖಲ್ವಯಸ್ಮಯಮ್ || ೧೭

ಕಿಂ ಕೃತಂ ಮಂದಭಾಗ್ಯೈರ್ನಃ ಕಿಂ ವದಿಷ್ಯಂತಿ ನೋ ಜನಾಃ |
ಇತಿ ವಿಹ್ವಲಿತಾ ಗೇಹಾನಾದಾಯ ಮುಸಲಂ ಯಯುಃ || ೧೮

ತಚ್ಚೋಪನೀಯ ಸದಸಿ ಪರಿಮ್ಲಾನಮುಖಶ್ರಿಯಃ |
ರಾಜ್ಞ ಆವೇದಯಾಂಚಕ್ರುಃ ಸರ್ವಯಾದವಸನ್ನಿಧೌ || ೧೯

ಶ್ರುತ್ವಾಽಮೋಘಂ ವಿಪ್ರಶಾಪಂ ದೃಷ್ಟ್ವಾ ಚ ಮುಸಲಂ ನೃಪ |
ವಿಸ್ಮಿತಾ ಭಯಸಂತ್ರಸ್ತಾ ಬಭೂವುರ್ದ್ವಾರಕೌಕಸಃ || ೨೦

---

ಪಡೆಯಬೇಕೆಂದು ಇವಳ ಬಯಕೆ ಇದೆ. ಈ ವಿಷಯವಾಗಿ ನಿಮ್ಮನ್ನು ಕೇಳಲು ನಾಚಿಕೆಪಡುತ್ತಿದ್ದಾಳೆ. ಮುನಿಗಳೆ, ನಿಮ್ಮ ದರ್ಶನವು ಅಮೋಘವಾದುದು. ಇವಳು ಗಂಡನ್ನು ಹೆರುವಳೊ ಅಥವಾ ಹೆಣ್ಣನ್ನೊ? ಹೇಳಿರಿ !" ಎಂದು ಕೇಳಿದರು (೧೪–೧೫). ಪರೀಕ್ಷಿತರಾಜ, ಹೀಗೆ ಯಾದವರ ತುಂಟತನದಿಂದ ವಿವಂಚನೆಗೊಳಗಾದ ಆ ಮುನಿಗಳು ಕ್ರುದ್ಧರಾಗಿ "ಎಲೈ ಬುದ್ಧಿಗೇಡಿಗಳೆ, ಕುಲವಿಧ್ವಂಸಕವಾದ ಒನಕೆಯನ್ನು ಇವಳು ಹೆರುವಳು !" ಎಂದು ಉದ್ಗರಿಸಿದರು (೧೬). ಅದನ್ನು ಕೇಳಿದೊಡನೆ ಯದುಕುಮಾರರಿಗೆ ಭಯದಿಂದ ನಡುಕ ಹುಟ್ಟಿತು. ಸಾಂಬನ ಹೊಟ್ಟೆಗೆ ಸುತ್ತಿದ್ದ ಬಟ್ಟೆಯನ್ನು ಬಿಚ್ಚಿದಾಗ ಅದರಲ್ಲಿ ಕಬ್ಬಿಣದ ಒನಕೆ ಕಾಣಿಸಿತು ! "ಅಯ್ಯೊ ! ಮಂದಭಾಗ್ಯರಾದ ನಾವು ಏನು ಮಾಡಿಬಿಟ್ಟೆವು ! ಜನರು ನಮಗೆ ಏನು ಹೇಳುವರೊ !" ಎಂದು ಕಳವಳಿಸುತ್ತ ಆ ಯಾದವರು ಮುಸಲವನ್ನು ಮನೆಗೆ ತೆಗೆದುಕೊಂಡು ಹೋದರು (೧೭–೧೮). ಅದನ್ನು ರಾಜಸಭೆಗೆ ಒಯ್ದು, ಎಲ್ಲ ಯಾದವರ ಎದುರಿಗೆ ಬಾಡಿದ ಮುಖವುಳ್ಳವರಾಗಿ, ರಾಜನಾದ ಉಗ್ರಸೇನನಿಗೆ ನಡೆದ ಸಂಗತಿಯನ್ನು ಅರಿಕೆ ಮಾಡಿದರು. ಪರೀಕ್ಷಿತರಾಜ, ಕಬ್ಬಿಣದ ಒನಕೆಯನ್ನು ನೋಡಿದ ದ್ವಾರಕಾವಾಸಿಗಳು ವಿಸ್ಮಿತರಾದರಲ್ಲದೆ, ಅಮೋಘವಾದ ವಿಪ್ರಶಾಪವನ್ನು ಕೇಳಿ ಭಯಗ್ರಸ್ತರಾದರು (೧೯–೨೦). ಯದುರಾಜನಾದ

ತಚ್ಚೂರ್ಣಯಿತ್ವಾ ಮುಸಲಂ ಯದುರಾಜಃ ಸ ಆಹುಕಃ ।
ಸಮುದ್ರಸಲಿಲೇ ಪ್ರಾಸ್ಯಲ್ಲೋಹಂ ಚಾಸ್ಯಾವಶೇಷಿತಮ್ ॥ ೨೧

ಕಶ್ಚಿನ್ಮತ್ಸ್ಯೋಽಗ್ರಸೀಲ್ಲೋಹಂ ಚೂರ್ಣಾನಿ ತರಲೈಸ್ತತಃ ।
ಉಹ್ಯಮಾನಾನಿ ವೇಲಾಯಾಂ ಲಗ್ನಾನ್ಯಾಸನ್ ಕಿಲೈರಕಾಃ ॥ ೨೨

ಮತ್ಸ್ಯೋ ಗೃಹೀತೋ ಮತ್ಸ್ಯಘ್ನೈರ್ಜಾಲೇನಾನ್ಯೈಃ ಸಹಾರ್ಣವೇ ।
ತಸ್ಯೋದರಗತಂ ಲೋಹಂ ಸ ಶಲ್ಯೇ ಲುಬ್ಧಕೋಽಕರೋತ್ ॥ ೨೩

ಭಗವಾನ್ ಜ್ಞಾತಸರ್ವಾರ್ಥ ಈಶ್ವರೋಽಪಿ ತದನ್ಯಥಾ ।
ಕರ್ತುಂ ನೈಚ್ಛದ್ ವಿಪ್ರಶಾಪಂ ಕಾಲರೂಪ್ಯನ್ವಮೋದತ ॥ ೨೪

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ
ಸಂಹಿತಾಯಾಂ ಏಕಾದಶಸ್ಕಂಧೇ
ಪ್ರಥಮಾಧ್ಯಾಯಃ

---

ಉಗ್ರಸೇನನು ಆ ಕಬ್ಬಿಣದ ಒನಕೆಯನ್ನು ಕುಟ್ಟಿ ಪುಡಿಮಾಡಿಸಿ ಸಮುದ್ರಜಲದಲ್ಲಿ ಚೆಲ್ಲಿಸಿದನು. ಉಳಿದಿದ್ದ ಕಬ್ಬಿಣದ ತುಂಡನ್ನೂ ಅದರೊಂದಿಗೆ ಎಸೆದನು. ಆ ತುಂಡನ್ನು ಒಂದು ಮೀನು ನುಂಗಿತು. ಕಬ್ಬಿಣದ ಪುಡಿಗಳು ಅಲೆಗಳಿಗೆ ಸಿಕ್ಕಿ ಸಮುದ್ರ ತೀರದಲ್ಲಿ ಬಂದು ಬಿದ್ದು ಏರಕಗಳೆಂಬ ಹುಲ್ಲುಗಳಾಗಿ ಬೆಳೆದವು (೨೧–೨೨). ಮೀನು ಹಿಡಿಯುವ ಬೆಸ್ತರು ಸಮುದ್ರದಲ್ಲಿ ಬಲೆಯನ್ನು ಬೀಸಿದಾಗ, ಕಬ್ಬಿಣದ ತುಂಡನ್ನು ನುಂಗಿದ್ದ ಮೀನು ಇತರ ಮೀನುಗಳೊಂದಿಗೆ ಬಲೆಯಲ್ಲಿ ಸಿಕ್ಕಿಕೊಂಡಿತು. ಅದರ ಹೊಟ್ಟೆಯಲ್ಲಿದ್ದ ಕಬ್ಬಿಣದ ತುಂಡನ್ನು ಒಬ್ಬ ಬೇಡನು ಚೂಪಾಗಿಸಿ ತನ್ನ ಬಾಣದ ತುದಿಗೆ ಅಳವಡಿಸಿಕೊಂಡನು. ಭಗವಾನ್ ಶ್ರೀಕೃಷ್ಣನಿಗೆ ಈ ವಿಷಯವೆಲ್ಲವೂ ತಿಳಿದಿತ್ತು. ಅವನು ಸಮರ್ಥನಾದರೂ ಆ ಪರಿಸ್ಥಿತಿಯನ್ನು ಬದಲಾಯಿಸಲು ಬಯಸಲಿಲ್ಲ. ಸ್ವತಃ ಕಾಲರೂಪಿಯಾದ ಆತನು ವಿಪ್ರಶಾಪಕ್ಕೆ ತನ್ನ ಒಪ್ಪಿಗೆಯನ್ನಿತ್ತನು (೨೩–೨೪).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಹನ್ನೊಂದನೆಯ
ಸ್ಕಂಧದಲ್ಲಿ ಪ್ರಥಮಾಧ್ಯಾಯ

---

# ದ್ವಿತೀಯೋಧ್ಯಾಯಃ

ಶ್ರೀಶುಕ ಉವಾಚ—

ಗೋವಿಂದಭುಜಗುಪ್ತಾಯಾಂ ದ್ವಾರವತ್ಯಾಂ ಕುರೂದ್ವಹ ।
ಅವಾತ್ಸೀನ್ನಾರದೋಽಭೀಕ್ಷ್ಣಂ ಕೃಷ್ಣೋಪಾಸನಲಾಲಸಃ ॥ ೧

ಕೋ ನು ರಾಜನ್ನಿಂದ್ರಿಯವಾನ್ ಮುಕುಂದಚರಣಾಂಬುಜಮ್ ।
ನ ಭಜೇತ್ ಸರ್ವತೋಮೃತ್ಯುರುಪಾಸ್ಯಮಮರೋತ್ತಮೈಃ ॥ ೨

ತಮೇಕದಾ ತು ದೇವರ್ಷಿಂ ವಸುದೇವೋ ಗೃಹಾಗತಮ್ ।
ಅರ್ಚಿತಂ ಸುಖಮಾಸೀನಮಭಿವಾದ್ಯೇದಮಬ್ರವೀತ್ ॥ ೩

ವಸುದೇವ ಉವಾಚ—

ಭಗವನ್ ಭವತೋ ಯಾತ್ರಾ ಸ್ವಸ್ತಯೇ ಸರ್ವದೇಹಿನಾಮ್ ।
ಕೃಪಣಾನಾಂ ಯಥಾ ಪಿತ್ರೋರುತ್ತಮಶ್ಲೋಕವರ್ತ್ಮನಾಮ್ ॥ ೪

## ಅಧ್ಯಾಯ ೨

ವಸುದೇವನ ಮನೆಗೆ ನಾರದರ ಆಗಮನ. ಮುಕ್ತಿಮಾರ್ಗವನ್ನು ಕುರಿತು ವಸುದೇವನ ಪ್ರಶ್ನೆ. ನಾರದರಿಂದ ಭಾಗವತಧರ್ಮದ ಪ್ರಸ್ತಾವ. ವಿದೇಹರಾಜ ಮತ್ತು ಕವಿ, ಹರಿ—ಎಂಬ ಪರಮಹಂಸರ ಸಂವಾದ.

ಶುಕಮಹರ್ಷಿಗಳು ಹೇಳಿದರು : ಕುರುಕುಲೋತ್ತಮ – ಪರೀಕ್ಷಿತರಾಜ, ಗೋವಿಂದನ ಭುಜಬಲದಿಂದ ಸುರಕ್ಷಿತವಾದ ದ್ವಾರವತೀನಗರದಲ್ಲಿ ನಾರದಮುನಿಗಳು ವಿಶೇಷವಾಗಿ ವಾಸಮಾಡುತ್ತಿದ್ದರು. ಅವರು ಶ್ರೀಕೃಷ್ಣನ ಸೇವೆಯಲ್ಲಿ ಆಸಕ್ತರು (೧). (ಮುಕ್ತರಾದ ನಾರದರಿಗೇ ಅಷ್ಟು ಆಸಕ್ತಿಯಿರುವಾಗ) ರಾಜ, ಸರ್ವದಾ ಸಾವಿನೊಡನೆ ಸೆಣಸಾಡತಕ್ಕ, ಕಣ್ಣಿರುವ ಯಾವ ಮನುಷ್ಯನು ತಾನೇ ಅಮರೋತ್ತಮ ಸೇವ್ಯವಾದ ಮುಕುಂದ ಚರಣ ಕಮಲವನ್ನು ಸೇವಿಸದೆ ಇದ್ದಾನು? (೨). ಒಂದು ಸಲ ದೇವರ್ಷಿಗಳಾದ ಆ ನಾರದರು ವಸುದೇವನ ಮನೆಗೆ ಬಂದರು. ವಸುದೇವನು ಅವರನ್ನು ಅರ್ಚಿಸಿದ ಮೇಲೆ ನಾರದರು ಸುಖಾಸೀನರಾದರು. ಆಗ ವಸುದೇವನು ಅವರಿಗೆ ನಮಸ್ಕರಿಸಿ ಈ ರೀತಿಯಲ್ಲಿ ಕೇಳಿದನು (೩): "ಭಗವನ್—ನಾರದಮುನಿಗಳೆ, ತಂದೆತಾಯಿಗಳ ಆಗಮನವು ಮಕ್ಕಳಿಗೆ ಹೇಗೆ ಮಂಗಳಕರವಾಗುವುದೋ, ವಿಷ್ಣುಭಕ್ತರ ಬರುವಿಕೆಯೂ ದುರ್ದೈವಿಗಳಿಗೆ ಯಾವ ರೀತಿ ಸುಖ

ಭೂತಾನಾಂ ದೇವಚರಿತಂ ದುಃಖಾಯ ಚ ಸುಖಾಯ ಚ ।
ಸುಖಾಯೈವ ಹಿ ಸಾಧೂನಾಂ ತ್ವಾದೃಶಾಮಚ್ಯುತಾತ್ಮನಾಮ್ ॥ ೫

ಭಜಂತಿ ಯೇ ಯಥಾ ದೇವಾನ್ ದೇವಾ ಅಪಿ ತಥೈವ ತಾನ್ ।
ಛಾಯೇವ ಕರ್ಮಸಚಿವಾಃ ಸಾಧವೋ ದೀನವತ್ಸಲಾಃ ॥ ೬

ಬ್ರಹ್ಮಂಸ್ತಥಾಪಿ ಪೃಚ್ಛಾಮೋ ಧರ್ಮಾನ್ ಭಾಗವತಾಂಸ್ತವ ।
ಯಾನ್ ಶ್ರುತ್ವಾ ಶ್ರದ್ಧಯಾ ಮರ್ತ್ಯೋ ಮುಚ್ಯತೇ
ಸರ್ವತೋಭಯಾತ್ ॥ ೭

ಅಹಂ ಕಿಲ ಪುರಾನಂತಂ ಪ್ರಜಾರ್ಥೋ ಭುವಿ ಮುಕ್ತಿದಮ್ ।
ಅಪೂಜಯಂ ನ ಮೋಕ್ಷಾಯ ಮೋಹಿತೋ ದೇವಮಾಯಯಾ ॥ ೮

ಪ್ರದವಾಗುವುದೋ, ಹಾಗೆ ನಿಮ್ಮ ಆಗಮನವು ಸಮಸ್ತಪ್ರಾಣಿಗಳಿಗೂ ಕಲ್ಯಾಣವನ್ನುಂಟುಮಾಡುತ್ತದೆ (೪). ದೇವತೆಗಳ ವರ್ತನೆಯಿಂದ ಜೀವಿಗಳಿಗೆ ಸುಖವಾಗುವುದುಂಟು, ಕೆಲವು ವೇಳೆ ದುಃಖವಾಗುವುದೂ ಉಂಟು[1] ! ಆದರೆ ವಿಷ್ಣುಭಕ್ತರಾದ ನಿಮ್ಮಂತಹ ಸಾಧುಗಳ ಚರಿತೆಯಿಂದ ಸುಖವೇ ಪ್ರಾಪ್ತವಾಗುತ್ತದೆ (೫). ಅಲ್ಲದೆ ದೇವತೆಗಳನ್ನು ಯಾರು ಯಾವ ರೀತಿಯಲ್ಲಿ ಎಷ್ಟು ಭಜಿಸುತ್ತಾರೋ ಅವರಿಗೆ ಆ ರೀತಿಯಲ್ಲಿ ಅಷ್ಟು ಮಾತ್ರವೇ ದೇವತೆಗಳು ಸಹಾಯ ಮಾಡುತ್ತಾರೆ. ನಾವು ಅಲ್ಲಾಡಿದಷ್ಟು ಅಲ್ಲಾಡುವ ನಮ್ಮ ನೆರಳು ಇದ್ದಂತೆ ದೇವತೆಗಳು. ಸಾಧುಗಳಾದರೋ ಸದಾ ದೀನವತ್ಸಲರು (೬). ಬ್ರಾಹ್ಮಣೋತ್ತಮರೆ, (ತಮ್ಮ ಆಗಮನಮಾತ್ರದಿಂದಲೇ ನಾವು ಕೃತಾರ್ಥರಾದರೂ) ಭಾಗವತಧರ್ಮಗಳ ವಿಚಾರವಾಗಿ ತಮ್ಮನ್ನು ಕೇಳಬೇಕೆಂದಿದ್ದೇನೆ. ಅವನ್ನು ಶ್ರದ್ಧೆಯಿಂದ ಆಲಿಸಿದರೆ ಮಾನವನು ಸರ್ವಭಯಗಳಿಂದಲೂ ಬಿಡುಗಡೆ ಹೊಂದುತ್ತಾನಲ್ಲವೆ ? (೭). ನಾನಾದರೋ ಮುಕ್ತಿದಾಯಕನಾದ ಅನಂತನನ್ನು ಹಿಂದೆ ಪುತ್ರಾರ್ಥಿಯಾಗಿ ಪೂಜಿಸಿದೆನು, ಮುಕ್ತಿಗಾಗಿ ಪೂಜಿಸಲಿಲ್ಲ ! ದೇವಮಾಯೆಯಿಂದ ಮೋಹಿತನಾಗಿಬಿಟ್ಟೆನು. ನಾನಾ ವಿಧದ ವ್ಯಸನಗಳಿಂದ ತುಂಬಿ, ಸಮಸ್ತಭಯಗಳಿಗೂ ಆಗರವಾಗಿರುವ ಈ ಸಂಸಾರದಿಂದ ನಮಗೆ ಹೇಗೆ ಬಿಡುಗಡೆಯಾದೀತು ? ನಿಮ್ಮಿಂದ ನಾವು ಮುಕ್ತಿಯನ್ನು ಪಡೆಯ

1. ಅತಿವೃಷ್ಟಿ, ಕ್ಷಾಮ—ಮುಂತಾದವೂ ದೇವಕೃತ್ಯಗಳು, ಅವುಗಳಿಂದ ದುಃಖವಾಗುತ್ತದೆ.

ಯಥಾ ವಿಚಿತ್ರವ್ಯಸನಾದ್ ಭವದ್ಭಿರ್ವಿಶ್ವತೋಭಯಾತ್ ।
ಮುಚ್ಯೇಮ ಹ್ಯಂಜಸೈವಾದ್ಧಾ ತಥಾ ನಃ ಶಾಧಿ ಸುವ್ರತ ॥ ೯

ಶ್ರೀಶುಕ ಉವಾಚ—

ರಾಜನ್ನೇವಂ ಕೃತಪ್ರಶ್ನೋ ವಸುದೇವೇನ ಧೀಮತಾ ।
ಪ್ರೀತಸ್ತಮಾಹ ದೇವರ್ಷಿರ್ಹರೇಃ ಸಂಸ್ಮಾರಿತೋ ಗುಣೈಃ ॥ ೧೦

ನಾರದ ಉವಾಚ—

ಸಮ್ಯಗೇತದ್ ವ್ಯವಸಿತಂ ಭವತಾ ಸಾತ್ವತರ್ಷಭ ।
ಯತ್ ಪೃಚ್ಛಸೇ ಭಾಗವತಾನ್ ಧರ್ಮಾಂಸ್ತ್ವಂ ವಿಶ್ವಭಾವನಾನ್ ॥ ೧೧

ಶ್ರುತೋಽನುಪಠಿತೋ ಧ್ಯಾತ ಆದೃತೋ ವಾನುಮೋದಿತಃ ।
ಸದ್ಯಃ ಪುನಾತಿ ಸದ್ಧರ್ಮೋ ದೇವವಿಶ್ವದ್ರುಹೋಽಪಿ ಹಿ ॥ ೧೨

ತ್ವಯಾ ಪರಮಕಲ್ಯಾಣಃ ಪುಣ್ಯಶ್ರವಣಕೀರ್ತನಃ ।
ಸ್ಮಾರಿತೋ ಭಗವಾನದ್ಯ ದೇವೋ ನಾರಾಯಣೋ ಮಮ ॥ ೧೩

---

ಬೇಕಾಗಿದೆ. ಅನಾಯಾಸದಿಂದ ನೇರವಾಗಿ ನಾವು ಮುಕ್ತರಾಗುವ ಮಾರ್ಗವನ್ನು, ಹೇ ಸಾಧುಗಳೆ, ನಮಗೆ ಉಪದೇಶಿಸಿರಿ" ಎಂದನು (೮–೯). ಪರೀಕ್ಷಿತರಾಜ, ಪ್ರಾಜ್ಞನಾದ ವಸುದೇವನು ಈ ರೀತಿಯಲ್ಲಿ ಪ್ರಶ್ನಿಸಲಾಗಿ ದೇವರ್ಷಿಗಳಾದ ನಾರದರಿಗೆ ಶ್ರೀಹರಿಯ ದಿವ್ಯಗುಣಗಳು ಸ್ಮರಣೆಗೆ ಬಂದವು. ಅವರು ಸಂಪ್ರೀತರಾಗಿ ಇಂತೆಂದರು : "ಸಾತ್ತ್ವತಕುಲೋತ್ತಮ-ವಸುದೇವ, ನಿನ್ನ ಉದ್ದೇಶವು ಸ್ತುತ್ಯವಾಗಿದೆ. ಸರ್ವಶೋಧಕಗಳಾದ ಭಾಗವತಧರ್ಮಗಳನ್ನು ಉದ್ದೇಶಿಸಿ ಪ್ರಶ್ನೆ ಮಾಡುತ್ತಿದ್ದೀಯೆ (೧೦–೧೧). ಆ ಭಾಗವತಧರ್ಮವನ್ನು ಕೇಳಿದರೆ, ಓದಿದರೆ, ನೆನಪಿಗೆ ತಂದುಕೊಂಡರೆ, ಆದರದಿಂದ ಗ್ರಹಿಸಿದರೆ ಅಥವಾ ಇನ್ನೊಬ್ಬರು ಆಚರಿಸುವುದನ್ನು ನೋಡಿ ಮೆಚ್ಚಿದರೆ ಸಾಕು, ದೇವದ್ರೋಹಿಗಳನ್ನೂ ವಿಶ್ವದ್ರೋಹಿಗಳನ್ನೂ ಸಹ ಆ ಧರ್ಮವು ಪವಿತ್ರಗೊಳಿಸುತ್ತದೆ (೧೨). ಪರಮ ಕಲ್ಯಾಣ ಸ್ವರೂಪನೂ ಪುಣ್ಯ ಶ್ರುತಿಯೂ ಪುಣ್ಯಕೀರ್ತಿಯೂ ಆದ ಭಗವಾನ್ ನಾರಾಯಣ ದೇವನನ್ನು ಈಗ ನನ್ನ ಸ್ಮರಣೆಗೆ ತಂದಿದ್ದೀಯೆ. ಭಗವದ್ಧರ್ಮದ ವಿಷಯವಾಗಿ ಪುರಾತನವಾದ ಇತಿಹಾಸವೊಂದನ್ನು ಹೇಳುವುದುಂಟು. ಋಷಭಪುತ್ರರಿಗೂ ಮಹಾತ್ಮನಾದ

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ |
ಆರ್ಷಭಾಣಾಂ ಚ ಸಂವಾದಂ ವಿದೇಹಸ್ಯ ಮಹಾತ್ಮನಃ || ೧೪

ಪ್ರಿಯವ್ರತೋ ನಾಮ ಸುತೋ ಮನೋಃ ಸ್ವಾಯಂಭುವಸ್ಯ ಯಃ |
ತಸ್ಯಾಗ್ನೀಧ್ರಸ್ತತೋ ನಾಭಿರ್ಋಷಭಸ್ತತ್ಸುತಃ ಸ್ಮೃತಃ || ೧೫

ತಮಾಹುರ್ವಾಸುದೇವಾಂಶಂ ಮೋಕ್ಷಧರ್ಮವಿವಕ್ಷಯಾ |
ಅವತೀರ್ಣಂ ಸುತಶತಂ ತಸ್ಯಾಸೀದ್ ಬ್ರಹ್ಮಪಾರಗಮ್ || ೧೬

ತೇಷಾಂ ವೈ ಭರತೋ ಜ್ಯೇಷ್ಠೋ ನಾರಾಯಣಪರಾಯಣಃ |
ವಿಖ್ಯಾತಂ ವರ್ಷಮೇತದ್ ಯನ್ನಾಮ್ನಾ ಭಾರತಮದ್ಭುತಮ್ || ೧೭

ಸ ಭುಕ್ತಭೋಗಾಂ ತ್ಯಕ್ತ್ವೇಮಾಂ ನಿರ್ಗತಸ್ತಪಸಾ ಹರಿಮ್ |
ಉಪಾಸೀನಸ್ತತ್ಪದವೀಂ ಲೇಭೇ ವೈ ಜನ್ಮಭಿಸ್ತ್ರಿಭಿಃ || ೧೮

ತೇಷಾಂ ನವ ನವದ್ವೀಪಪತಯೋಽಸ್ಯ ಸಮಂತತಃ |
ಕರ್ಮತಂತ್ರಪ್ರಣೇತಾರ ಏಕಾಶೀತಿರ್ದ್ವಿಜಾತಯಃ || ೧೯

---

ವಿದೇಹಜನಕನಿಗೂ ನಡೆದ ಸಂವಾದವಿದು (೧೩–೧೪). ಸ್ವಾಯಂಭುವ ಮನುವಿಗೆ ಪ್ರಿಯವ್ರತನೆಂಬ ಮಗನಿದ್ದನು. ಅವನ ಮಗ ಅಗ್ನೀಧ್ರ. ಆತನಿಂದ ನಾಭಿಯೂ ನಾಭಿಯಿಂದ ಋಷಭನೂ ಜನಿಸಿದರು. ಮೋಕ್ಷಧರ್ಮಗಳನ್ನು ಲೋಕದಲ್ಲಿ ಪ್ರವರ್ತಿಸಬೇಕೆಂದು ಅವತರಿಸಿದ ವಾಸುದೇವನ ಅಂಶವೇ ಋಷಭ ನೆಂದು ಬಲ್ಲವರು ಹೇಳಿದ್ದಾರೆ. ಋಷಭನಿಗೆ ವೇದಪಾರಂಗತರಾದ ನೂರು ಮಂದಿ ಪುತ್ರರಿದ್ದರು (೧೫–೧೬). ಅವರಲ್ಲಿ ಭರತನೆಂಬುವನು ಜ್ಯೇಷ್ಠಪುತ್ರನಾಗಿ ಶ್ರೀಮನ್ನಾರಾಯಣ ಭಕ್ತನಾಗಿದ್ದನು. ಈ (ಅಜನಾಭ) ವರ್ಷವು ಅವನ ಹೆಸರಿ ನಿಂದಲೇ ಭಾರತವರ್ಷವೆಂದು ವಿಖ್ಯಾತವಾಯಿತು. ಭರತ ಚಕ್ರವರ್ತಿಯು ಈ ಪೃಥ್ವಿಯನ್ನನುಭವಿಸಿದ ಮೇಲೆ ಅದನ್ನು ತೊರೆದು, ತಪಸ್ಸಿನಿಂದ ಶ್ರೀಹರಿಯನ್ನು ಸೇವಿಸಬೇಕೆಂದು ಗೃಹದಿಂದ ನಿರ್ಗಮಿಸಿದನು. ಅನಂತರ ಮೂರು ಜನ್ಮಗಳಲ್ಲಿ ತಪಸ್ಸುಮಾಡಿ ಶ್ರೀಹರಿಯ ಪದವಿಯನ್ನು ಪಡೆದನು (೧೭–೧೮). (ಭರತನಾದ ಮೇಲೆ) ಉಳಿದವರಲ್ಲಿ ಒಂಬತ್ತು ಜನರು ಈ ಭಾರತ ವರ್ಷದ ಸುತ್ತಲೂ ಇರುವ ಬ್ರಹ್ಮಾವರ್ತವೇ ಮೊದಲಾದ ನವಖಂಡಗಳಿಗೆ ಒಡೆಯರಾದರು. ಇನ್ನು

ನವಾಭವನ್ ಮಹಾಭಾಗಾ ಮುನಯೋ ಹ್ಯರ್ಥಶಂಸಿನಃ ।
ಶ್ರಮಣಾ ವಾತರಶನಾ ಆತ್ಮವಿದ್ಯಾವಿಶಾರದಾಃ ॥ ೨೦

ಕವಿರ್ಹರಿರಂತರಿಕ್ಷಃ ಪ್ರಬುದ್ಧಃ ಪಿಪ್ಪಲಾಯನಃ ।
ಆವಿರ್ಹೋತ್ರೋಽಥ ದ್ರುಮಿಲಶ್ಚಮಸಃ ಕರಭಾಜನಃ ॥ ೨೧

ತ ಏತೇ ಭಗವದ್ರೂಪಂ ವಿಶ್ವಂ ಸದಸದಾತ್ಮಕಮ್ ।
ಆತ್ಮನೋಽವ್ಯತಿರೇಕೇಣ ಪಶ್ಯಂತೋ ವ್ಯಚರನ್ ಮಹೀಮ್ ॥ ೨೨

ಅವ್ಯಾಹತೇಷ್ಟಗತಯಃ ಸುರಸಿದ್ಧಸಾಧ್ಯ-
ಗಂಧರ್ವ ಯಕ್ಷ ನರ ಕಿನ್ನರ ನಾಗ ಲೋಕಾನ್ ।
ಮುಕ್ತಾಶ್ಚರಂತಿ ಮುನಿಚಾರಣ ಭೂತನಾಥ-
ವಿದ್ಯಾಧರ ದ್ವಿಜ ಗವಾಂ ಭುವನಾನಿ ಕಾಮಮ್ ॥ ೨೩

ತ ಏಕದಾ ನಿಮೇಃ ಸತ್ರಮುಪಜಗ್ಮುರ್ಯದೃಚ್ಛಯಾ ।
ವಿತಾಯಮಾನಮೃಷಿಭಿರಜನಾಭೇ ಮಹಾತ್ಮನಃ ॥ ೨೪

---

ಎಂಬತ್ತೊಂದು ಮಂದಿ ಋಷಭಪುತ್ರರು ಕರ್ಮಮಾರ್ಗಪ್ರವರ್ತಕರಾದ ಬ್ರಾಹ್ಮಣರಾದರು. ಇನ್ನುಳಿದ ಒಂಬತ್ತು ಜನರು ಪರಮಾರ್ಥವನ್ನರಿತ ಮಹಾತ್ಮರಾದ ಮುನಿಗಳಾದರು. ಅವರು ಧ್ಯಾನಾಭ್ಯಾಸದಲ್ಲಿ ಕೃತಶ್ರಮರೂ ದಿಗಂಬರರೂ ಆತ್ಮವಿದ್ಯಾವಿಶಾರದರೂ ಆಗಿದ್ದರು (೧೯–೨೦). ಅವರು ಯಾರೆಂದರೆ—ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ ಮತ್ತು ಕರಭಾಜನ. ಈ ಪರಮಹಂಸರು ಸ್ಥೂಲಸೂಕ್ಷ್ಮಾತ್ಮಕವಾದ ವಿಶ್ವವನ್ನು ಭಗವದ್ರೂಪವನ್ನಾಗಿಯೇ ಕಾಣುತ್ತ, ಅದನ್ನು ತಮಗೆ ಅಭಿನ್ನವೆಂದು ತಿಳಿಯುತ್ತ ಭೂಮಿಯಲ್ಲಿ ಸಂಚರಿಸುತ್ತಿದ್ದರು (೨೧–೨೨). ಇಷ್ಟ ಬಂದ ಕಡೆಗೆ ಅಡೆತಡೆಯಿಲ್ಲದೆ ಅವರು ಹೋಗಬಲ್ಲವರಾಗಿದ್ದರು. ಜೀವನ್ಮುಕ್ತರೂ ಅನಾಸಕ್ತರೂ ಆದ ಆ ಯೋಗಿಗಳು ಯಥೇಚ್ಛವಾಗಿ ದೇವಲೋಕ, ಸಿದ್ಧಲೋಕ, ಸಾಧ್ಯಲೋಕಗಳಲ್ಲಿಯೂ ಗಂಧರ್ವ–ಯಕ್ಷ–ನರ–ಕಿಂನರ–ನಾಗಲೋಕಗಳಲ್ಲಿಯೂ ಮುನಿ ಚಾರಣ ರುದ್ರ ಲೋಕಗಳಲ್ಲಿಯೂ ವಿದ್ಯಾಧರ ಗರುಡ ಗೋಲೋಕಗಳಲ್ಲಿಯೂ ಸಂಚರಿಸುತ್ತಿದ್ದರು (೨೩). ಒಂದು ಸಲ ಭಾರತವರ್ಷದಲ್ಲಿ ಮಹಾತ್ಮನಾದ ನಿಮಿಯು ದೊಡ್ಡ ಯಾಗವೊಂದನ್ನು ಋಷಿಗಳೊಡನೆ ಸೇರಿ ನಡೆಸುತ್ತಿರಲಾಗಿ, ಈ ಯೋಗಿಗಳು

ತಾನ್ ದೃಷ್ಟ್ವಾ ಸೂರ್ಯಸಂಕಾಶಾನ್ ಮಹಾಭಾಗವತಾನ್ ನೃಪಃ ।
ಯಜಮಾನೋಽಗ್ನಯೋ ವಿಪ್ರಾಃ ಸರ್ವ ಏವೋಪತಸ್ಥಿರೇ ॥ ೨೫

ವಿದೇಹಸ್ತಾನಭಿಪ್ರೇತ್ಯ ನಾರಾಯಣಪರಾಯಣಾನ್ ।
ಪ್ರೀತಃ ಸಂಪೂಜಯಾಂಚಕ್ರೇ ಆಸನಸ್ಥಾನ್ ಯಥಾರ್ಹತಃ ॥ ೨೬

ತಾನ್ ರೋಚಮಾನಾನ್ ಸ್ವರುಚಾ ಬ್ರಹ್ಮಪುತ್ರೋಪಮಾನ್ ನವ ।
ಪಪ್ರಚ್ಛ ಪರಮಪ್ರೀತಃ ಪ್ರಶ್ರಯಾವನತೋ ನೃಪಃ ॥ ೨೭

ವಿದೇಹ ಉವಾಚ—

ಮನ್ಯೇ ಭಗವತಸ್ಸಾಕ್ಷಾದ್ ಪಾರ್ಷದಾನ್ ವೋ ಮಧುದ್ವಿಷಃ ।
ವಿಷ್ಣೋರ್ಭೂತಾನಿ ಲೋಕಾನಾಂ ಪಾವನಾಯ ಚರಂತಿ ಹಿ ॥ ೨೮

ದುರ್ಲಭೋ ಮಾನುಷೋ ದೇಹೋ ದೇಹಿನಾಂ ಕ್ಷಣಭಂಗುರಃ ।
ತತ್ರಾಪಿ ದುರ್ಲಭಂ ಮನ್ಯೇ ವೈಕುಂಠಪ್ರಿಯದರ್ಶನಮ್ ॥ ೨೯

ಅತ ಆತ್ಯಂತಿಕಂ ಕ್ಷೇಮಂ ಪೃಚ್ಛಾಮೋ ಭವತೋಽನಘಾಃ ।
ಸಂಸಾರೇಽಸ್ಮಿನ್ ಕ್ಷಣಾರ್ಧೋಽಪಿ ಸತ್ಸಂಗಃ ಶೇವಧಿರ್ನೃಣಾಮ್ ॥ ೩೦

---

ಆಗಮಿಸಿದರು. ಪರೀಕ್ಷಿತರಾಜ, ಸೂರ್ಯನಂತೆ ಬೆಳಗುತ್ತಿದ್ದ ಆ ಭಾಗವತೋತ್ತಮರನ್ನು ಕಂಡೊಡನೆ ಯಜಮಾನನಾದ ವಿದೇಹಜನಕನೂ ಆಹವನೀಯಾದಿ ಯಾಗಾಗ್ನಿಗಳೂ ಋತ್ವಿಗಾದಿ ವಿಪ್ರರೂ—ಎಲ್ಲರೂ ಎದ್ದು ನಿಂತರು (೨೪–೨೫). ವಿದೇಹರಾಜನು ನಾರಾಯಣ ಭಕ್ತರಾದ ಅವರನ್ನೆದುರುಗೊಂಡು ಸ್ವಾಗತಿಸಿ ಸಂಪ್ರೀತನಾಗಿ, ಪೀಠಗಳಲ್ಲಿ ಕುಳ್ಳಿರಿಸಿ, ಯಥಾರ್ಹವಾಗಿ ಪೂಜಿಸಿದನು. ಬ್ರಹ್ಮಪುತ್ರರಾದ ಸನತ್ಕುಮಾರಾದಿಗಳಂತೆ ತಮ್ಮ ತೇಜೋ ವಿಶೇಷದಿಂದಲೇ ಬೆಳಗುತ್ತಿದ್ದ ಆ ಋಷಿಗಳನ್ನು ನೋಡಿ ಪರಮಾನಂದಪೂರ್ಣನಾದ ವಿದೇಹರಾಜನು ವಿನಯದಿಂದ ತಲೆಬಾಗಿ ಇಂತೆಂದನು (೨೬–೨೭): “ ಭಗವಂತರಾದ ತಾವು ಸಾಕ್ಷಾತ್ ಮಹಾವಿಷ್ಣುವಿನ ಪಾರ್ಷದರೆಂದು ತಿಳಿದಿದ್ದೇನೆ. ವಿಷ್ಣುಭಕ್ತರು ಲೋಕಪಾವನಕ್ಕಾಗಿ ಎಲ್ಲೆಡೆಯೂ ಸಂಚರಿಸುತ್ತಾರಲ್ಲವೆ? ಕ್ಷಣಕಾಲದಲ್ಲಿ ನಾಶವಾಗತಕ್ಕದ್ದಾದರೂ ಮನುಷ್ಯದೇಹವು ಜೀವಿಗಳಿಗೆ ದುರ್ಲಭವಾದದ್ದು. ಅದರಲ್ಲಿಯೂ ವಿಷ್ಣುವಿನ ಪ್ರಿಯಭಕ್ತರಾದವರ ದರ್ಶನವು ಅತ್ಯಂತ ದುರ್ಲಭವೆಂದು ತಿಳಿದಿದ್ದೇನೆ (೨೮–೨೯). ಆದ್ದರಿಂದ, ಹೇ ಪುಣ್ಯಾತ್ಮರೆ, ಮಾನವರಿಗೆ ಅತ್ಯಂತ ಕ್ಷೇಮಕರವಾದದ್ದು

ಧರ್ಮಾನ್ ಭಾಗವತಾನ್ ಬ್ರೂತ ಯದಿ ನಃ ಶ್ರುತಯೇ ಕ್ಷಮಮ್ ।
ಯೈಃ ಪ್ರಸನ್ನಃ ಪ್ರಪನ್ನಾಯ ದಾಸ್ಯತ್ಯಾತ್ಮಾನಮಪ್ಯಜಃ ॥ ೩೧

ಶ್ರೀ ನಾರದ ಉವಾಚ—

ಏವಂ ತೇ ನಿಮಿನಾ ಪೃಷ್ಟಾ ವಸುದೇವ ಮಹತ್ತಮಾಃ ।
ಪ್ರತಿಪೂಜ್ಯಾಬ್ರುವನ್ ಪ್ರೀತ್ಯಾ ಸಸದಸ್ಯರ್ತ್ವಿಜಂ ನೃಪಮ್ ॥ ೩೨

ಕವಿರುವಾಚ—

ಮನ್ಯೇಽಕುತಶ್ಚಿದ್ಭಯಮಚ್ಯುತಸ್ಯ
ಪಾದಾಂಬುಜೋಪಾಸನಮತ್ರ ನಿತ್ಯಮ್ ।
ಉದ್ವಿಗ್ನಬುದ್ಧೇರಸದಾತ್ಮಭಾವಾದ್
ವಿಶ್ವಾತ್ಮನಾ ಯತ್ರ ನಿವರ್ತತೇ ಭೀಃ ॥ ೩೩

ಯೇ ವೈ ಭಗವತಾ ಪ್ರೋಕ್ತಾ ಉಪಾಯಾ ಹ್ಯಾತ್ಮಲಬ್ಧಯೇ ।
ಅಂಜಃ ಪುಂಸಾಮವಿದುಷಾಂ ವಿದ್ಧಿ ಭಾಗವತಾನ್ ಹಿ ತಾನ್ ॥ ೩೪

---

ಯಾವುದೆಂದು ನಿಮ್ಮನ್ನು ಕೇಳುತ್ತಿದ್ದೇನೆ. ಈ ಸಂಸಾರದಲ್ಲಿ ಸತ್ಸಂಗವು ಒಂದು ಕ್ಷಣಕಾಲದವರೆಗೆ ಘಟಿಸಿದರೂ ಸಹ ಮನುಷ್ಯರಿಗೆ ಒಂದು ನಿಧಿಯಾಗಿ ಪರಿಣಮಿಸುತ್ತದೆ (೩೦). ಆದ್ದರಿಂದ, ಪೂಜ್ಯರೆ, ನಾವು ಅವನ್ನು ಕೇಳಬಹುದೆಂದು ತಮಗೆ ತೋರಿದರೆ, ಆ ಭಾಗವತಧರ್ಮಗಳನ್ನು ಕುರಿತು ಉಪದೇಶಿಸಿರಿ. ಯಾವ ಧರ್ಮಗಳನ್ನಾಚರಿಸುತ್ತ ಶರಣಾಗತನಾಗಿರುವ ಭಕ್ತನಿಗೆ, ಪರಮಾತ್ಮನು ಪ್ರಸನ್ನನಾಗಿ ತನ್ನನ್ನೂ ಸಹ ಅರ್ಪಿಸಿಕೊಳ್ಳುವನೋ, ಅವನ್ನು ಹೇಳಿರಿ" ಎಂದನು (೩೧). ವಸುದೇವ, ಈ ರೀತಿಯಲ್ಲಿ ನಿಮಿಯು ನಿವೇದಿಸಿಕೊಳ್ಳಲಾಗಿ ಮಹಾತ್ಮರಾದ ಆ ಯೋಗೀಶ್ವರರು ಆತನನ್ನು ಪ್ರೀತಿಯಿಂದ ಅಭಿನಂದಿಸಿ, ಸದಸ್ಯರಿಂದಲೂ ಋತ್ವಿಜರಿಂದಲೂ ಸಹಿತನಾದ ಆ ವಿದೇಹರಾಜನಿಗೆ ಕ್ರಮವಾಗಿ ಹೀಗೆ ಬೋಧಿಸಿದರು (೩೨). ಮೊದಲು ಕವಿಯೆಂಬ ಯೋಗಿಯು ಹೇಳಿದ್ದೇನೆಂದರೆ: "ರಾಜ, ಈ ಅಚ್ಯುತನ ಪಾದಪದ್ಮಗಳ ಉಪಾಸನೆಯು ಸಮಸ್ತಭಯಗಳನ್ನೂ ತೊಲಗಿಸುತ್ತದೆಯೆಂದು ನಾನು ತಿಳಿದಿದ್ದೇನೆ. ಈ ಸಂಸಾರದಲ್ಲಿ ಅಸತ್ತಾದ ದೇಹಾದಿಗಳ ವಿಷಯದಲ್ಲಿ ಆತ್ಮಭಾವನೆಯನ್ನಿಟ್ಟುಕೊಂಡಿರುವುದರಿಂದ ಸದಾ ಉದ್ವಿಗ್ನಚಿತ್ತರಾದವರಿಗೆ ಭಗವದುಪಾಸನೆಯಿಂದ ಭಯವು ನಿವೃತ್ತವಾಗುತ್ತದೆ (೩೩). ಆತ್ಮಪ್ರಾಪ್ತಿಗಾಗಿ

ಯಾನಾಸ್ಥಾಯ ನರೋ ರಾಜನ್ ನ ಪ್ರಮಾದ್ಯೇತ ಕರ್ಹಿಚಿತ್ ।
ಧಾವನ್ ನಿಮೀಲ್ಯ ವಾ ನೇತ್ರೇ ನ ಸ್ಖಲೇನ್ನ ಪತೇದಿಹ ॥ ೩೫

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾಽಽತ್ಮನಾ ವಾನುಸೃತಸ್ವಭಾವಾತ್ ।
ಕರೋತಿ ಯದ್ ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯೇತ್ತತ್ ॥ ೩೬

ಭಯಂ ದ್ವಿತೀಯಾಭಿನಿವೇಶತಃ ಸ್ಯಾ-
ದೀಶಾದಪೇತಸ್ಯ ವಿಪರ್ಯಯೋಽಸ್ಮೃತಿಃ ।
ತನ್ಮಾಯಯಾತೋ ಬುಧ ಆಭಜೇತ್ತಂ
ಭಕ್ತ್ಯೈಕಯೇಶಂ ಗುರುದೇವತಾತ್ಮಾ ॥ ೩೭

---

ಸುಲಭವಾದ ಕೆಲವು ಉಪಾಯಗಳನ್ನು ಸಾಮಾನ್ಯ ಜನರಿಗೋಸ್ಕರ ಸ್ವತಃ ಭಗವಂತನೇ ಉಪದೇಶಿಸಿದ್ದಾನೆ. ಭಗವಂತನು ಹೇಳಿದ ಆ ಉಪಾಯಗಳೇ ಭಾಗವತಧರ್ಮಗಳೆಂದು ತಿಳಿ (೩೪). ವಿದೇಹರಾಜ, ಈ ಭಾಗವತಧರ್ಮಗಳನ್ನು ಪಾಲಿಸತಕ್ಕವನಿಗೆ ಯಾವ ವಿಘ್ನವೂ ಬಂದು ಎಂದಿಗೂ ಪ್ರಮಾದವಾಗುವುದಿಲ್ಲ. ಆತನು ಎರಡು ಕಣ್ಣುಗಳನ್ನು ಮುಚ್ಚಿಕೊಂಡು ಓಡುತ್ತಿದ್ದರೂ ಮುಗ್ಗರಿಸುವುದಿಲ್ಲ, ಬೀಳುವುದಿಲ್ಲ[1] ! (೩೫). ದೇಹ – ಮಾತು – ಮನಸ್ಸುಗಳಿಂದಾಗಲಿ ಇಂದ್ರಿಯ ಗಳಿಂದಾಗಲಿ, ಬುದ್ಧಿಯಿಂದಾಗಲಿ, ಚಿತ್ತದಿಂದಾಗಲಿ ಅಥವಾ ಲೋಕಸ್ವಭಾವ ದಿಂದಲೋ ಅಧ್ಯಾಸದಿಂದುಂಟಾದ ಬ್ರಾಹ್ಮಣತ್ವಾದಿ ಸ್ವಭಾವದಿಂದಲೋ ಯಾವ ಯಾವ ಕಾರ್ಯವನ್ನು ಮಾಡುತ್ತಾನೋ ಅದೆಲ್ಲವೂ ಪರಮಾತ್ಮನಾದ ಶ್ರೀಮನ್ನಾರಾ ಯಣನ ಪ್ರೀತ್ಯರ್ಥವೆಂದು ಸಮರ್ಪಿಸಬೇಕು[2]. (ಆಗ ಸಕಲಕರ್ಮವೂ ಭಾಗವತ ಧರ್ಮವೆನಿಸುತ್ತದೆ)(೩೬) ಈಶ್ವರನಿಗಿಂತ ತಾನು ಭಿನ್ನನೆಂದು ತಿಳಿಯುವುದರಿಂದ

---

1. ಈ ಧರ್ಮಗಳ ಅನುಷ್ಠಾನದಲ್ಲಿ ನ್ಯೂನತೆಯಾದರೂ ದೋಷವಿಲ್ಲ, ಫಲರಾಹಿತ್ಯವೂ ಇಲ್ಲ—ಎಂದು ಅಭಿಪ್ರಾಯ.

2. ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥

—ಗೀತಾ ೯–೨೭

ಅವಿದ್ಯಮಾನೋऽಪ್ಯವಭಾತಿ ಹಿ ದ್ವಯೋ-
ರ್ಧ್ಯಾತುರ್ಧಿಯಾ ಸ್ವಪ್ನಮನೋರಥೌ ಯಥಾ ।
ತತ್ ಕರ್ಮಸಂಕಲ್ಪವಿಕಲ್ಪಕಂ ಮನೋ
ಬುಧೋ ನಿರುಂಧ್ಯಾದಭಯಂ ತತಃ ಸ್ಯಾತ್ ॥ ೩೮

ಶೃಣ್ವನ್ ಸುಭದ್ರಾಣಿ ರಥಾಂಗಪಾಣೇ-
ರ್ಜನ್ಮಾನಿ ಕರ್ಮಾಣಿ ಚ ಯಾನಿ ಲೋಕೇ ।
ಗೀತಾನಿ ನಾಮಾನಿ ತದರ್ಥಕಾನಿ
ಗಾಯನ್ ವಿಲಜ್ಜೋ ವಿಚರೇದಸಂಗಃ ॥ ೩೯

ಏವಂ ವ್ರತಃ ಸ್ವಪ್ರಿಯನಾಮಕೀರ್ತ್ಯಾ
ಜಾತಾನುರಾಗೋ ದ್ರುತಚಿತ್ತ ಉಚ್ಚೈಃ ।
ಹಸತ್ಯಥೋ ರೋದಿತಿ ರೌತಿ ಗಾಯ-
ತ್ಯುನ್ಮಾದವನ್ನೃತ್ಯತಿ ಲೋಕಬಾಹ್ಯಃ ॥ ೪೦

---

ದ್ವಿತೀಯವಸ್ತುವಿದೆಯೆಬ ಅಭಿನಿವೇಶವುಂಟಾಗಿ ಭಯ ಹುಟ್ಟುತ್ತದೆ. ದ್ವಿತೀಯ ವಸ್ತುವಿದೆಯೆಂದು ತಿಳಿಯುವುದೇ ವಿಪರ್ಯಯಜ್ಞಾನ. ಸ್ವಸ್ವರೂಪದ ವಿಸ್ಮರಣೆಯೇ ಇದು. ಇದೆಲ್ಲವೂ ಭಗವಂತನ ಮಾಯೆಯಿಂದ ಸಂಭವಿಸುತ್ತದೆ. ಆದ್ದರಿಂದ ಬುದ್ಧಿಶಾಲಿಯು ಗುರುವೇ ಈಶ್ವರನೆಂದೂ ಆತ್ಮನಾದ ತಾನೆಂದೂ[1] ತಿಳಿದುಕೊಂಡು ಏಕಭಕ್ತಿಯಿಂದ ಭಗವಂತನನ್ನು ಭಜಿಸಬೇಕು (೩೭). ಮನಸ್ಸಿನಿಂದ ವಸ್ತುವನ್ನು ಧ್ಯಾನಿಸತಕ್ಕವನಿಗೆ, ಇಲ್ಲದೇ ಇರತಕ್ಕ ದ್ವೈತಪ್ರಪಂಚವೂ ಸಹ ಸ್ವಪ್ನದಂತೆಯೂ ಮನೋರಥದಂತೆಯೂ ಕಾಣಿಸಿಬಿಡುತ್ತದೆ. ಆದ್ದರಿಂದ ಬುದ್ಧಿವಂತನಾದವನು ಕರ್ಮವನ್ನು ಸಂಕಲ್ಪಿಸುವ ಮತ್ತು ವಿಕಲ್ಪಿಸುವ ಮನಸ್ಸನ್ನು ನಿಗ್ರಹಿಸಬೇಕು. ಹೀಗೆ ಮಾಡುವುದರಿಂದ ಅಭಯವುಂಟಾಗುತ್ತದೆ (೩೮). (ಮನೋನಿಗ್ರಹವು ಕಠಿಣವಾದ ಕಾರಣ) ಚಕ್ರಧರನಾದ ಶ್ರೀಹರಿಯು ಲೋಕದಲ್ಲಿ ಅವತರಿಸಿದ ಜನ್ಮ ವೃತ್ತಾಂತಗಳನ್ನೂ ಆತನು ನಡೆಸಿದ ಕಾರ್ಯವಿಶೇಷಗಳನ್ನೂ ಭಕ್ತರಿಂದ ಗೀತವಾದ ಆತನ ಅನ್ವರ್ಥ ನಾಮಗಳನ್ನೂ ಕೇಳುತ್ತ ಹಾಡುತ್ತ ನಾಚಿಕೆಯನ್ನು ತ್ಯಜಿಸಿ ನಿಃಸಂಗನಾಗಿ ಸಂಚರಿಸಬೇಕು (೩೯). ಈ ರೀತಿಯಲ್ಲಿ ವರ್ತಿಸತಕ್ಕವನಿಗೆ

---

1. ಈಶ್ವರೋ ಗುರುರಾತ್ಮೇತಿ ಮೂರ್ತಿಭೇದಾದ್ವಿಭಾಗಿನೇ ।
ವ್ಯೋಮವದ್ವ್ಯಾಪ್ತದೇಹಾಯ ದಕ್ಷಿಣಾಮೂರ್ತಯೇ ನಮಃ ॥

ಖಂ ವಾಯುಮಗ್ನಿಂ ಸಲಿಲಂ ಮಹೀಂ ಚ
ಜ್ಯೋತೀಂಷಿ ಸತ್ತ್ವಾನಿ ದಿಶೋ ದ್ರುಮಾದೀನ್ ।
ಸರಿತ್ಸಮುದ್ರಾಂಶ್ಚ ಹರೇಃ ಶರೀರಂ
ಯತ್ ಕಿಂಚ ಭೂತಂ ಪ್ರಣಮೇದನನ್ಯಃ ॥ ೪೧

ಭಕ್ತಿಃ ಪರೇಶಾನುಭವೋ ವಿರಕ್ತಿ-
ರನ್ಯತ್ರ ಚೈಷ ತ್ರಿಕ ಏಕಕಾಲಃ ।
ಪ್ರಪದ್ಯಮಾನಸ್ಯ ಯಥಾಶ್ನತಃ ಸ್ಯು-
ಸ್ತುಷ್ಟಿಃ ಪುಷ್ಟಿಃ ಕ್ಷುದಪಾಯೋಽನುಘಾಸಮ್ ॥ ೪೨

ಇತ್ಯಚ್ಯುತಾಂಘ್ರಿಂ ಭಜತೋಽನುವೃತ್ತ್ಯಾ
ಭಕ್ತಿರ್ವಿರಕ್ತಿರ್ಭಗವತ್ಪ್ರಬೋಧಃ ।
ಭವಂತಿ ವೈ ಭಾಗವತಸ್ಯ ರಾಜಂ-
ಸ್ತತಃ ಪರಾಂ ಶಾಂತಿಮುಪೈತಿ ಸಾಕ್ಷಾತ್ ॥ ೪೩

---

ಪ್ರಿಯನಾದ ಭಗವಂತನ ನಾಮಕೀರ್ತನೆಯಿಂದ ಅವನಲ್ಲಿ ಪ್ರೇಮವುಂಟಾಗಿ ಹೃದಯವು ಕರಗಿ ನೀರಾಗುತ್ತದೆ. (ಈ ಪ್ರಕಾರದ ಪ್ರೇಮಲಕ್ಷಣಭಕ್ತಿಯೋಗ ವನ್ನೇರಿದವನು) ವಿವಶನಾಗಿ ಲೋಕಬಾಹ್ಯನೋ ಎಂಬಂತೆ ನಗುವನು, ಅಳುವನು, ಕೂಗುವನು, ಹಾಡುವನು, ಹುಚ್ಚನಂತೆ ಕುಣಿಯುವನು (೪೦). ಅಲ್ಲದೆ ಆ ಪ್ರೇಮಭಕ್ತನು ಆಕಾಶ, ವಾಯು, ಅಗ್ನಿ, ಜಲ, ಭೂಮಿ, ಸೂರ್ಯಾದಿ ಜ್ಯೋತಿಗಳು, ಪ್ರಾಣಿಗಳು, ದಿಕ್ಕು, ಮರ, ಹೊಳೆ, ಕಡಲು—ಮೊದಲಾದವು ಗಳಲ್ಲಿ ಯಾವುದೇ ಒಂದನ್ನು ನೋಡಿ 'ಇದು ಶ್ರೀಹರಿಯ ಶರೀರ' ಎಂಬ ಭಾವನೆ ಯನ್ನು ತಳೆದು ಅನನ್ಯಭಾವದಿಂದ ನಮಸ್ಕರಿಸಬಹುದು (೪೧). ಭಗವಂತನನ್ನು ಭಜಿಸತಕ್ಕವನಿಗೆ (ಪ್ರೇಮಲಕ್ಷಣ) ಭಕ್ತಿ, ಭಗವದ್ರೂಪದ ಸ್ಫುರಣೆ, ಗೃಹಾದಿಗಳಲ್ಲಿ ವಿರಕ್ತಿ—ಈ ಮೂರು ಏಕಕಾಲದಲ್ಲಿ ಉದಿಸಬಹುದು. ಊಟಮಾಡತಕ್ಕವನಿಗೆ ಒಂದೊಂದು ತುತ್ತನ್ನು ತಿಂದಾಗಲೂ ಸಂತುಷ್ಟಿ, ದೇಹಶಕ್ತಿ, ಹಸಿವಿನ ನಿವೃತ್ತಿ— ಈ ಮೂರು ಏಕಕಾಲದಲ್ಲಿ ಹೇಗೆ ಲಭಿಸುತ್ತವೆಯೋ ಹಾಗೆ (೪೨). ವಿದೇಹರಾಜ, ಈ ರೀತಿಯಲ್ಲಿ ಅಚ್ಯುತನ ಪಾದವನ್ನು ಅನುವೃತ್ತಿಯಿಂದ ಭಜಿಸತಕ್ಕ ಭಗವದ್ಭಕ್ತ ನಿಗೆ ಭಕ್ತಿ, ವಿರಕ್ತಿ, ಭಗವದ್ರೂಪದ ಸ್ಫುರಣೆಗಳು ಅಧಿಕವಾಗುತ್ತ ಹೋಗುತ್ತವೆ.

ರಾಜೋವಾಚ—

ಅಥ ಭಾಗವತಂ ಬ್ರೂತ ಯದ್ಧರ್ಮೋ ಯಾದೃಶೋ ನೃಣಾಮ್ ।
ಯಥಾ ಚರತಿ ಯದ್ ಬ್ರೂತೇ ಯೈರ್ಲಿಂಗೈರ್ಭಗವತ್ಪ್ರಿಯಃ ॥ ೪೪

ಹರಿರುವಾಚ—

ಸರ್ವಭೂತೇಷು ಯಃ ಪಶ್ಯೇದ್ ಭಗವದ್ಭಾವಮಾತ್ಮನಃ ।
ಭೂತಾನಿ ಭಗವತ್ಯಾತ್ಮನ್ಯೇಷ ಭಾಗವತೋತ್ತಮಃ ॥ ೪೫

ಈಶ್ವರೇ ತದಧೀನೇಷು ಬಾಲಿಶೇಷು ದ್ವಿಷತ್ಸು ಚ ।
ಪ್ರೇಮಮೈತ್ರೀ ಕೃಪೋಪೇಕ್ಷಾ ಯಃ ಕರೋತಿ ಸ ಮಧ್ಯಮಃ ॥ ೪೬

ಅರ್ಚಾಯಾಮೇವ ಹರಯೇ ಪೂಜಾಂ ಯಃ ಶ್ರದ್ಧಯೇಹತೇ ।
ನ ತದ್ಭಕ್ತೇಷು ಚಾನ್ಯೇಷು ಸ ಭಕ್ತಃ ಪ್ರಾಕೃತಃ ಸ್ಮೃತಃ ॥ ೪೭

---

ಅನಂತರ ಆ ಭಾಗವತನು ಪರಮಶಾಂತಿರೂಪವಾದ ಸಾಕ್ಷಾತ್ ಮೋಕ್ಷವನ್ನು ಐದುತ್ತಾನೆ" ಎಂದನು (೪೩) ಆಗ ವಿದೇಹರಾಜನು "ಭಗವದ್ಭಕ್ತನಾದ ಭಾಗವತನ ಲಕ್ಷಣವೇನು? ಆತನು ಯಾವ ಬಗೆಯ ಧರ್ಮದಲ್ಲಿ ಪರಿನಿಷ್ಠಿತನಾಗಿ ಯಾವ ಸ್ವಭಾವವನ್ನು ಪಡೆದಿರುತ್ತಾನೆ? ಜನರ ನಡುವೆ ಅವನು ಹೇಗೆ ವರ್ತಿಸುತ್ತಾನೆ? ಏನನ್ನು ಹೇಳುತ್ತಾನೆ? ಯಾವ ಚಿಹ್ನೆಗಳಿಂದ ಆತನು ಭಗವತ್ಪ್ರಿಯನೆಂದು ತಿಳಿಯಬಹುದು?" ಎಂದು ಕೇಳಿದನು (೪೪). ಆದಕ್ಕೆ ಹರಿಯೆಂಬ ಯೋಗಿಯು ಹೀಗೆ ಉತ್ತರಿಸಿದನು : "ಸಮಸ್ತ ಭೂತಗಳಲ್ಲಿಯೂ (ತಾನೇ ಬ್ರಹ್ಮಸ್ವರೂಪನಾಗಿ ಇದ್ದೇನೆಂದು) ತನ್ನ ಬ್ರಹ್ಮಸ್ವರೂಪವನ್ನು ಯಾವನು ಕಾಣುತ್ತಾನೋ ಮತ್ತು ಬ್ರಹ್ಮಸ್ವರೂಪನಾದ ತನ್ನಲ್ಲಿ ಸಮಸ್ತಭೂತಗಳೂ ನೆಲೆಸಿವೆಯೆಂದು ಯಾವನು ಅರಿಯುತ್ತಾನೋ ಅವನು ಭಾಗವತೋತ್ತಮ. 'ಅಥವಾ ಸಮಸ್ತ ಭೂತಗಳಲ್ಲಿಯೂ ಆತ್ಮನಾದ ಶ್ರೀಹರಿಯ ನಿರತಿಶಯವಾದ ಐಶ್ವರ್ಯವನ್ನು ಯಾವನು ಕಾಣುತ್ತಾನೋ ಮತ್ತು ಭಗವಂತನಾದ ಶ್ರೀಹರಿಯಲ್ಲಿ ಸಮಸ್ತಭೂತಗಳೂ ನೆಲೆಸಿವೆಯೆಂದು ಯಾವನು ತಿಳಿಯುತ್ತಾನೋ ಆತನು ಭಾಗವತೋತ್ತಮ (೪೫). ಈಶ್ವರನಲ್ಲಿ ಪ್ರೇಮವನ್ನೂ ಈಶ್ವರಭಕ್ತರಲ್ಲಿ ಸ್ನೇಹವನ್ನೂ ಅಜ್ಞರಲ್ಲಿ ಕೃಪೆಯನ್ನೂ ಶತ್ರುಗಳಲ್ಲಿ ಉಪೇಕ್ಷೆಯನ್ನೂ ಯಾವಾತನು ಹೊಂದಿರುವನೋ ಆತನು ಭಾಗವತ ಮಧ್ಯಮನೆಂದು ತಿಳಿಯತಕ್ಕದ್ದು (೪೬). ಇನ್ನು ಯಾವಾತನು ಪ್ರತಿಮೆಯಲ್ಲಿ

ಗೃಹೀತ್ವಾಪೀಂದ್ರಿಯೈರರ್ಥಾನ್ ಯೋ ನ ದ್ವೇಷ್ಟಿ ನ ಹೃಷ್ಯತಿ ।
ವಿಷ್ಣೋರ್ಮಾಯಾಮಿದಂ ಪಶ್ಯನ್ ಸ ವೈ ಭಾಗವತೋತ್ತಮಃ ॥ ೪೮

ದೇಹೇಂದ್ರಿಯ ಪ್ರಾಣಮನೋಧಿಯಾಂ ಯೋ
ಜನ್ಮಾಪ್ಯಯ ಕ್ಷುದ್ಭಯತರ್ಷಕೃಚ್ಛ್ರೈಃ ।
ಸಂಸಾರಧರ್ಮೈರವಿಮುಹ್ಯಮಾನಃ
ಸ್ಮೃತ್ಯಾ ಹರೇರ್ಭಾಗವತಪ್ರಧಾನಃ ॥ ೪೯

ನ ಕಾಮಕರ್ಮಬೀಜಾನಾಂ ಯಸ್ಯ ಚೇತಸಿ ಸಂಭವಃ ।
ವಾಸುದೇವೈಕನಿಲಯಃ ಸ ವೈ ಭಾಗವತೋತ್ತಮಃ ॥ ೫೦

---

ಮಾತ್ರವೇ ಶ್ರೀಹರಿಯ ಪೂಜೆಯನ್ನು ಶ್ರದ್ಧೆಯಿಂದ ಮಾಡುವನೋ ಆದರೆ ಹರಿಭಕ್ತರಲ್ಲಾಗಲಿ ಅನ್ಯರಲ್ಲಾಗಲಿ ದೇವತಾಭಾವನೆಯನ್ನಿಡುವುದಿಲ್ಲವೋ ಅವನು ಪ್ರಾಕೃತನಾದ [1]ಭಕ್ತನೆನಿಸುತ್ತಾನೆ (೪೭). ಯಾವಾತನು ಇಂದ್ರಿಯಗಳಿಂದ ವಿಷಯಗಳನ್ನು ಗ್ರಹಿಸಿದರೂ ಸಹ ದ್ವೇಷಿಸುವುದೂ ಇಲ್ಲವೋ ಹರ್ಷಿಸುವುದೂ ಇಲ್ಲವೋ ಈ ವಿಶ್ವವೆಲ್ಲವೂ ವಿಷ್ಣುವಿನ ಮಾಯಾವಿಜೃಂಭಿತವೆಂದು ತಿಳಿದಿರುವನೋ ಅವನು ಭಾಗವತೋತ್ತಮನು (೪೮). ಯಾವಾತನು ಶ್ರೀಹರಿಯ ಧ್ಯಾನದಲ್ಲಿ ತಲ್ಲೀನನಾಗಿ ದೇಹ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿಗಳಿಗೆ ಒದಗುವ ಜನ್ಮ, ನಾಶ, ಹಸಿವು, ಹೆದರಿಕೆ, ಆಸೆ, ಆಯಾಸಗಳೆಂಬ [2]ಸಂಸಾರಧರ್ಮಗಳಿಂದ ಮೋಹಗೊಳ್ಳುವುದಿಲ್ಲವೋ ಆತನು ಭಾಗವತೋತ್ತಮನು (೪೯). ಕಾಮ, ಕರ್ಮ ಮತ್ತು ಲೋಕವಾಸನಾದಿಗಳು ಯಾವಾತನ ಚಿತ್ತದಲ್ಲಿ ಸಂಭವಿಸುವುದೇ ಇಲ್ಲವೋ, ಸರ್ವವಿಧದಲ್ಲಿಯೂ ವಾಸುದೇವನೊಬ್ಬನನ್ನೇ ಆಶ್ರಯಿಸಿದ ಆ

---

1. ಪ್ರಾರಂಭದ ಸ್ಥಿತಿಯಲ್ಲಿರತಕ್ಕವನು ಪ್ರಾಕೃತ. ಉತ್ತಮ, ಮಧ್ಯಮ, ಪ್ರಾಕೃತ—ಎಂದು ಭಕ್ತರು ಮೂರು ವಿಧ. ಅಭೇದದರ್ಶಿಯಾದವನು ಉತ್ತಮ, ಭೇದದರ್ಶಿಯು ಮಧ್ಯಮ, ಭೇದದರ್ಶನದಲ್ಲಿಯೇ ಈಶ್ವರನು ಸರ್ವವ್ಯಾಪಿಯೆಂದು ತಿಳಿಯದವನು ಪ್ರಾಕೃತ.

2. ಈ ಸಂಸಾರಧರ್ಮಗಳ ಅನ್ವಯ ಹೀಗೆ: ದೇಹಕ್ಕೆ ಜನ್ಮ, ನಾಶ; ಇಂದ್ರಿಯಕ್ಕೆ ಆಯಾಸ; ಪ್ರಾಣಕ್ಕೆ ಹಸಿವು, (ಬಾಯಾರಿಕೆ); ಮನಸ್ಸಿಗೆ ಹೆದರಿಕೆ; ಬುದ್ಧಿಗೆ ಆಸೆ.

ನ ಯಸ್ಯ ಜನ್ಮಕರ್ಮಭ್ಯಾಂ ನ ವರ್ಣಾಶ್ರಮಜಾತಿಭಿಃ ।
ಸಜ್ಜತೇಽಸ್ಮಿನ್ನಹಂಭಾವೋ ದೇಹೇ ವೈ ಸ ಹರೇಃ ಪ್ರಿಯಃ ॥ ೫೧

ನ ಯಸ್ಯ ಸ್ವಃ ಪರ ಇತಿ ವಿತ್ತೇಷ್ವಾತ್ಮನಿ ವಾ ಭಿದಾ ।
ಸರ್ವಭೂತಸಮಃ ಶಾಂತಃ ಸ ವೈ ಭಾಗವತೋತ್ತಮಃ ॥ ೫೨

ತ್ರಿಭುವನವಿಭವಹೇತವೇಽಪ್ಯಕುಂಠ-
ಸ್ಮೃತಿರಜಿತಾತ್ಮಸುರಾದಿಭಿರ್ವಿಮೃಗ್ಯಾತ್ ।
ನ ಚಲತಿ ಭಗವತ್ಪದಾರವಿಂದಾ-
ಲ್ಲವನಿಮಿಷಾರ್ಧಮಪಿ ಯಃ ಸ ವೈಷ್ಣವಾಗ್ರ್ಯಃ ॥ ೫೩

ಭಗವತ ಉರುವಿಕ್ರಮಾಂಘ್ರಿಶಾಖಾ-
ನಖಮಣಿಚಂದ್ರಿಕಯಾ ನಿರಸ್ತತಾಪೇ ।
ಹೃದಿ ಕಥಮುಪಸೀದತಾಂ ಪುನಃ ಸ
ಪ್ರಭವತಿ ಚಂದ್ರ ಇವೋದಿತೇಽರ್ಕತಾಪಃ ॥ ೫೪

---

ಮನುಷ್ಯನು ಭಾಗವತೋತ್ತಮನು (೫೦). ಯಾವಾತನಿಗೆ ತನ್ನದು ಸತ್ಕುಲವೆಂಬ ಜನ್ಮನಿಮಿತ್ತದಿಂದಾಗಲಿ, ತಪಸ್ಸೇ ಮೊದಲಾದ ಕರ್ಮನಿಮಿತ್ತದಿಂದಾಗಲಿ, ವರ್ಣಾಶ್ರಮಜಾತಿಗಳ ನಿಮಿತ್ತದಿಂದಾಗಲಿ ಈ ದೇಹದಲ್ಲಿ ಅಹಂಕಾರವು ಉದಯಿಸುವುದಿಲ್ಲವೋ ಅವನು ಶ್ರೀಹರಿಗೆ ಪ್ರಿಯನಾದ ಭಾಗವತೋತ್ತಮನು (೫೧). ಯಾವಾತನಿಗೆ ಹಣದ ವಿಷಯದಲ್ಲಿ 'ನನ್ನದು-ಅನ್ಯರದು' ಎಂಬುದಾಗಿಯೂ ಜನರ ವಿಷಯದಲ್ಲಿ 'ನನ್ನವರು-ಅನ್ಯರು' ಎಂಬುದಾಗಿಯೂ ಭೇದಬುದ್ಧಿ ಇರುವುದಿಲ್ಲವೋ, ಸರ್ವಭೂತಗಳಲ್ಲಿಯೂ ಸಮತ್ವಬುದ್ಧಿ ಇರುವುದೋ ಅಂತಹ ಶಾಂತಸ್ವಭಾವದವನು ಭಾಗವತೋತ್ತಮನು (೫೨). ಶ್ರೀಹರಿಯ ಪಾದಾರವಿಂದವು ಅಜಿತನಾದ ಶ್ರೀಹರಿಯಲ್ಲಿ ಚಿತ್ತವನ್ನು ನಿಲ್ಲಿಸಿರುವ ದೇವಾದಿಗಳಿಗೂ ಮೃಗ್ಯವಾದದ್ದು, ಅದಕ್ಕಿಂತ ಸಾರಭೂತವಾದದ್ದು ಇನ್ನೊಂದಿಲ್ಲ—ಎಂದು ಅಕುಂಠಿತವಾದ ಬುದ್ಧಿಯುಳ್ಳ ಯಾವಾತನು, ಮೂರು ಲೋಕದ ಒಡೆತನಕ್ಕಾಗಿ ಕೂಡ, ಶ್ರೀಹರಿಯ ಪಾದಸ್ಮರಣೆಯನ್ನು ಬಿಟ್ಟು ಒಂದು ಕ್ಷಣಾರ್ಧವೂ ನಿಮಿಷಾರ್ಧವೂ ಸಹ ಮನಸ್ಸನ್ನು ಕದಲಿಸುವುದಿಲ್ಲವೋ ಆತನು ಭಾಗವತೋತ್ತಮನು (೫೩). ಭಗವಂತನ ವಿಕ್ರಮಶಾಲಿಗಳಾದ ಯಾವ ಪಾದಗಳಿವೆಯೋ ಅವುಗಳ ಬೆರಳುಗಳಲ್ಲಿರುವ ಉಗುರು

ವಿಸೃಜತಿ ಹೃದಯಂ ನ ಯಸ್ಯ ಸಾಕ್ಷಾ-
ದ್ಧರಿರವಶಾಭಿಹಿತೋಽಪ್ಯಘೌಘನಾಶಃ ।
ಪ್ರಣಯರಶನಯಾ ಧೃತಾಂಘ್ರಿಪದ್ಮಃ
ಸ ಭವತಿ ಭಾಗವತಪ್ರಧಾನ ಉಕ್ತಃ ॥ ೫೫

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ದ್ವಿತೀಯಾಧ್ಯಾಯಃ



ಗಳೆಂಬ ಮಣಿಗಳ ಬೆಳ್ದಿಂಗಳಿಂದ ಶಾಂತವಾದ ತಾಪವುಳ್ಳ ಭಕ್ತರ ಹೃದಯದಲ್ಲಿ ಯಾವ ತಾಪವು ಹೇಗೆ ತಾನೆ ಉಳಿದುಕೊಂಡೀತು? ಚಂದ್ರನು ಹುಟ್ಟಿದಮೇಲೆ ಬಿಸಿಲಿನ ಬೇಗೆ ಇದ್ದೀತೆ? (೫೪). ತನ್ನ ನಾಮವನ್ನು ಯಾರಾದರೂ ಅವಶರಾಗಿ ಉಚ್ಚರಿಸಿದರೂ ಸಹ ಅವರ ಪಾಪರಾಶಿಯನ್ನು ಶ್ರೀಹರಿಯು ತೊಡೆದುಹಾಕುತ್ತಾನೆ. ಆತನ ಪಾದಪದ್ಮವನ್ನು ಭಕ್ತನು ತನ್ನ ಹೃದಯದಲ್ಲಿ ಪ್ರೇಮಪಾಶದಿಂದ ಕಟ್ಟಿಹಾಕಿರುತ್ತಾನೆ. ಆದ್ದರಿಂದ ಯಾವ ಭಕ್ತನ ಹೃದಯವನ್ನು ಬಿಟ್ಟು ಶ್ರೀಹರಿಯು ಕದಲುವುದಿಲ್ಲವೋ ಅವನು ಭಾಗವತೋತ್ತಮನು" ಎಂದನು (೫೫).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಎರಡನೆಯ ಅಧ್ಯಾಯ



# ತೃತೀಯೋಧ್ಯಾಯಃ

ರಾಜೋವಾಚ—

ಪರಸ್ಯ ವಿಷ್ಣೋರೀಶಸ್ಯ ಮಾಯಿನಾಮಪಿ ಮೋಹಿನೀಮ್ ।
ಮಾಯಾಂ ವೇದಿತುಮಿಚ್ಛಾಮೋ ಭಗವಂತೋ ಬ್ರುವಂತು ನಃ ॥ ೧

ನಾನುತೃಪ್ಯೇ ಜುಷನ್ ಯುಷ್ಮದ್ವಚೋ ಹರಿಕಥಾಮೃತಮ್ ।
ಸಂಸಾರತಾಪನಿಸ್ತಪ್ತೋ ಮರ್ತ್ಯಸ್ತತ್ತಾಪಭೇಷಜಮ್ ॥ ೨

ಅಂತರಿಕ್ಷ ಉವಾಚ—

ಏಭಿರ್ಭೂತಾನಿ ಭೂತಾತ್ಮಾ ಮಹಾಭೂತೈರ್ಮಹಾಭುಜ ।
ಸಸರ್ಜೋಚ್ಚಾವಚಾನ್ಯಾದ್ಯಃ ಸ್ವಮಾತ್ರಾತ್ಮಪ್ರಸಿದ್ಧಯೇ ॥ ೩

## ಅಧ್ಯಾಯ ೩

ಮಾಯಾಸ್ವರೂಪ, ಅದನ್ನು ದಾಟುವ ಬಗೆ, ಬ್ರಹ್ಮಲಕ್ಷಣ, ಕರ್ಮಯೋಗ-
ಈ ನಾಲ್ಕು ವಿಷಯಗಳನ್ನು ಕುರಿತು ವಿದೇಹರಾಜನ ಪ್ರಶ್ನೆ.
ಪರಮಹಂಸರಿಂದ ಉತ್ತರ.

ಅನಂತರ ನಿಮಿರಾಜನು " ಪೂಜ್ಯರೆ, ಮಾಯಾವಿಗಳನ್ನೂ ಮೋಹಗೊಳಿಸ ತಕ್ಕ ಪರಮೇಶ್ವರನಾದ ವಿಷ್ಣುವಿನ ಮಾಯೆಯ ಸ್ವರೂಪವನ್ನು ತಿಳಿಯಲು ಬಯಸುತ್ತೇವೆ. ಅದೇನೆಂಬುದನ್ನು ಹೇಳೋಣವಾಗಲಿ. ಸಂಸಾರತಾಪಗಳಿಂದ ಸಂತಪ್ತನಾಗಿರುವ ಮರ್ತ್ಯನಾದ ನಾನು ತಾಪಕ್ಕೆ ಔಷಧರೂಪವಾದ ಹರಿಕಥಾ-ಮೃತವೆಂಬ ನಿಮ್ಮ ವಾಣಿಯನ್ನು ಎಷ್ಟು ಕುಡಿದರೂ ತೃಪ್ತನಾಗುತ್ತಿಲ್ಲ " ಎಂದನು. (೧–೨). ಆಗ ಅಂತರಿಕ್ಷನೆಂಬ ಯೋಗಿಯು ಇಂತೆಂದನು : " ಸಮಸ್ತ ಭೂತ ಗಳಿಗೂ ಕಾರಣಭೂತನಾದ ಆದಿಪುರುಷನು ತನ್ನ ಅಂಶಭೂತರಾದ ಜೀವರಿಗೆ ವಿಷಯಭೋಗವನ್ನೂ ಮೋಕ್ಷವನ್ನೂ [1]ದೊರಕಿಸಿಕೊಡುವುದಕ್ಕಾಗಿ (ತಾನು ಸೃಷ್ಟಿಸಿದ) ಪಂಚಮಹಾಭೂತಗಳಿಂದ ನಾನಾಬಗೆಯ ಪ್ರಾಣಿಗಳನ್ನು ನಿರ್ಮಿಸಿ

1. ಸ್ವಮಾತ್ರಾತ್ಮಪ್ರಸಿದ್ಧಯೇ = ಸ್ವ–ತನ್ನ ಅಂಶವಾದ ಜೀವರು. ಮಾತ್ರಾ-ಪ್ರಸಿದ್ಧಿ–ವಿಷಯಭೋಗ. ಆತ್ಮಪ್ರಸಿದ್ಧಿ–ಮೋಕ್ಷ.

ಏವಂ ಸೃಷ್ಟಾನಿ ಭೂತಾನಿ ಪ್ರವಿಷ್ಟಃ ಪಂಚಧಾತುಭಿಃ ।
ಏಕಧಾ ದಶಧಾಽಽತ್ಮಾನಂ ವಿಭಜನ್ ಜುಷತೇ ಗುಣಾನ್ ॥ ೪

ಗುಣೈರ್ಗುಣಾನ್ ಸ ಭುಂಜಾನ ಆತ್ಮಪ್ರದ್ಯೋತಿತೈಃ ಪ್ರಭುಃ ।
ಮನ್ಯಮಾನ ಇದಂ ಸೃಷ್ಟಮಾತ್ಮಾನಮಿಹ ಸಜ್ಜತೇ ॥ ೫

ಕರ್ಮಾಣಿ ಕರ್ಮಭಿಃ ಕುರ್ವನ್ ಸನಿಮಿತ್ತಾನಿ ದೇಹಭೃತ್ ।
ತತ್ತತ್ ಕರ್ಮಫಲಂ ಗೃಹ್ಣನ್ ಭ್ರಮತೀಹ ಸುಖೇತರಮ್ ॥ ೬

ಇತ್ಥಂ ಕರ್ಮಗತೀರ್ಗಚ್ಛನ್ ಬಹ್ವಭದ್ರವಹಾಃ ಪುಮಾನ್ ।
ಆಭೂತಸಂಪ್ಲವಾತ್ ಸರ್ಗಪ್ರಲಯಾವಶ್ನುತೇಽವಶಃ ॥ ೭

ಧಾತೂಪಪ್ಲವ ಆಸನ್ನೇ ವ್ಯಕ್ತಂ ದ್ರವ್ಯಗುಣಾತ್ಮಕಮ್ ।
ಅನಾದಿನಿಧನಃ ಕಾಲೋ ಹ್ಯವ್ಯಕ್ತಾಯಾಪಕರ್ಷತಿ ॥ ೮

---

ದನು (೩). ಹೀಗೆ ಪಂಚಮಹಾಭೂತಗಳಿಂದ ಸೃಷ್ಟವಾದ ಪ್ರಾಣಿದೇಹಗಳನ್ನು ಪ್ರವೇಶಿಸಿ, ಆದಿಪುರುಷನು ಒಂದು ಮನಸ್ಸಾಗಿಯೂ ಹತ್ತು ಇಂದ್ರಿಯಗಳಾಗಿಯೂ ತನ್ನನ್ನು ವಿಂಗಡಿಸಿಕೊಂಡು, ಶಬ್ದಾದಿಗುಣಗಳನ್ನು (ಜೀವನಾಗಿ) ಅನುಭವಿಸುತ್ತ ಆನಂದಿಸುತ್ತಾನೆ (೪). ಜೀವನೆನಿಸಿದ ಆ ಪ್ರಭುವು ಆತ್ಮನಾದ ಅಂತರ್ಯಾಮಿಯಿಂದ ಪ್ರಕಾಶಿತವಾದ ಇಂದ್ರಿಯಗಳಿಂದ ವಿಷಯಗಳನ್ನು ಭೋಗಿಸುತ್ತ, ಪಂಚಭೂತಗಳಿಂದ ಸೃಷ್ಟವಾದ ಈ ಶರೀರವೇ ತಾನೆಂದು [1]ಆಸಕ್ತನಾಗುತ್ತಾನೆ (೫). ಈ ದೇಹಿಯು ಪೂರ್ವವಾಸನಾ ನಿಮಿತ್ತದಿಂದ ಪ್ರಾಪ್ತವಾದ ಕರ್ಮಗಳನ್ನು ಕರ್ಮೇಂದ್ರಿಯಗಳಿಂದ ಆಚರಿಸುತ್ತ, ಕರ್ಮಫಲಗಳಾದ ಸುಖದುಃಖಗಳನ್ನು ಅನುಭವಿಸುತ್ತ, ಸಂಸಾರದಲ್ಲಿ ಅಲೆಯುತ್ತಾನೆ (೬). ಈ ಪ್ರಕಾರವಾಗಿ ಜೀವನು ಅಶುಭಕರಗಳಾದ ಅಸಂಖ್ಯಕರ್ಮಗತಿಗಳನ್ನು ಪಡೆಯುತ್ತ ಅಸ್ವತಂತ್ರನಾಗಿ ಪ್ರಳಯಕಾಲದವರೆಗೂ ಹುಟ್ಟುಸಾವುಗಳನ್ನು [2]ಅನುಭವಿಸುತ್ತಾನೆ (೭). ಪಂಚಮಹಾಭೂತಗಳ ವಿನಾಶಸಮಯವು (ಪ್ರಳಯವು) ಒದಗಿಬರಲಾಗಿ, ಆದ್ಯಂತರಹಿತಕಾಲ

---

1. ಆದ್ದರಿಂದಲೇ ಸಂಸಾರವು ಪ್ರಾಪ್ತವಾಗುತ್ತದೆ. 'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' (ತೈ. ಬ್ರ. ೨-೬) ಇತ್ಯಾದಿ ಶ್ರುತಿವಾಕ್ಯಗಳನ್ನಿಲ್ಲಿ ಸ್ಮರಿಸಿಕೊಳ್ಳಬೇಕು.

2. ಈ ಪ್ರಕಾರ ಯಾವ ಶಕ್ತಿಯಿಂದ ಜಗತ್ತೂ ಸಂಸಾರವೂ ಉಂಟಾಗಿದೆಯೋ ಅದು ಮಾಯೆಯೆಂದು ಅಭಿಪ್ರಾಯ.

ಶತವರ್ಷಾ ಹ್ಯನಾವೃಷ್ಟಿರ್ಭವಿಷ್ಯತ್ಯುಲ್ಬಣಾ ಭುವಿ ।
ತತ್ಕಾಲೋಪಚಿತೋಷ್ಣಾರ್ಕೋ ಲೋಕಾಂಸ್ತ್ರೀನ್ ಪ್ರತಪಿಷ್ಯತಿ ॥ ೯

ಪಾತಾಲತಲಮಾರಭ್ಯ ಸಂಕರ್ಷಣಮುಖಾನಲಃ ।
ದಹನ್ನೂರ್ಧ್ವಶಿಖೋ ವಿಷ್ವಗ್ ವರ್ಧತೇ ವಾಯುನೇರಿತಃ ॥ ೧೦

ಸಾಂವರ್ತಕೋ ಮೇಘಗಣೋ ವರ್ಷತಿ ಸ್ಮ ಶತಂ ಸಮಾಃ ।
ಧಾರಾಭಿರ್ಹಸ್ತಿಹಸ್ತಾಭಿರ್ಲೀಯತೇ ಸಲಿಲೇ ವಿರಾಟ್ ॥ ೧೧

ತತೋ ವಿರಾಜಮುತ್ಸೃಜ್ಯ ವೈರಾಜಃ ಪುರುಷೋ ನೃಪ ।
ಅವ್ಯಕ್ತಂ ವಿಶತೇ ಸೂಕ್ಷ್ಮಂ ನಿರಿಂಧನ ಇವಾನಲಃ ॥ ೧೨

ವಾಯುನಾ ಹೃತಗಂಧಾ ಭೂಃ ಸಲಿಲತ್ವಾಯ ಕಲ್ಪತೇ ।
ಸಲಿಲಂ ತದ್ಧೃತರಸಂ ಜ್ಯೋತಿಷ್ಟ್ವಾಯೋಪಕಲ್ಪತೇ ॥ ೧೩

---

ಸ್ವರೂಪನಾದ ಈಶ್ವರನು ದ್ರವ್ಯಗುಣಾತ್ಮಕವಾದ ವ್ಯಕ್ತಪ್ರಪಂಚವನ್ನು ಅವ್ಯಕ್ತವಾಗುವಂತೆ ಸೆಳೆಯುವನು (೮). ಆಗ ಲೋಕದಲ್ಲಿ ನೂರುವರ್ಷಗಳವರೆಗೆ ಉಲ್ಬಣವಾದ ಅನಾವೃಷ್ಟಿಯು ಸಂಭವಿಸುವುದು. ಪ್ರಳಯಕಾಲನಿಮಿತ್ತವಾಗಿ ಸೂರ್ಯನು ಅತ್ಯುಗ್ರತೆಯನ್ನು ತಳೆದು ಮೂರುಲೋಕಗಳನ್ನೂ ಸುಡುವನು (೯). ಸಂಕರ್ಷಣಮುಖದಿಂದ ಜನಿಸಿ ವಾಯುವಿನಿಂದ ಪ್ರೇರಿತವಾದ ಅಗ್ನಿಯು ಪಾತಾಳತಳದಿಂದ ಊರ್ಧ್ವಮುಖವಾಗಿ ಉರಿಯುತ್ತ ಎಲ್ಲವನ್ನೂ ದಹಿಸುತ್ತ ಸರ್ವತ್ರ ಪ್ರಸರಿಸುವುದು (೧೦). ಪ್ರಳಯಕಾರಿಯಾದ ಸಂವರ್ತಕಮೇಘವು ಆನೆಯ ಸೊಂಡಿಲುಗಾತ್ರದ ಜಲಧಾರೆಗಳಿಂದ ನೂರುವರ್ಷಗಳವರೆಗೆ ಸತತವಾಗಿ ಮಳೆಯನ್ನು ಸುರಿಸುವುದು. ವಿರಾಟ್ ಪ್ರಪಂಚವು ನೀರಿನಲ್ಲಿ ಕರಗಿ ಅಡಗಿಹೋಗುವುದು (೧೧). (ಉಪಾಧಿಯಾದ ವಿರಾಟ್‌ಪ್ರಪಂಚವು ಲಯಿಸಿದ ಪ್ರಯುಕ್ತ) ವಿರಾಡನ್ನು ತ್ಯಜಿಸಿದ (ವಿರಾಡಭಿಮಾನಿಯಾದ) ವೈರಾಜಬ್ರಹ್ಮನು, ಇಂಧನವಿಲ್ಲದ ಅಗ್ನಿಯಂತೆ, ಪರಮಸೂಕ್ಷ್ಮವೂ [1]ಅವ್ಯಕ್ತವೂ ಆದ ಬ್ರಹ್ಮದಲ್ಲಿ ಸೇರಿ ಮುಕ್ತನಾಗುವನು (೧೨). (ಸಾಂವರ್ತಕ) ವಾಯುವು ಗಂಧವನ್ನು ಸೆಳೆದುಕೊಳ್ಳಲಾಗಿ ಪೃಥ್ವಿಯು ನೀರಲ್ಲಿ ಲಯಿಸುತ್ತದೆ. ಅದೇ ವಾಯುವು ರಸವನ್ನು

---

1. ಅವ್ಯಕ್ತವಾದ ಪ್ರಕೃತಿಯಲ್ಲಿ ಬ್ರಹ್ಮನು ಲೀನನಾಗುತ್ತಾನೆಂದು ಕೆಲವರು ಹೇಳುತ್ತಾರೆ.

ಹೃತರೂಪಂ ತು ತಮಸಾ ವಾಯೌ ಜ್ಯೋತಿಃ ಪ್ರಲೀಯತೇ ।
ಹೃತಸ್ಪರ್ಶೋಽವಕಾಶೇನ ವಾಯುರ್ನಭಸಿ ಲೀಯತೇ ॥ ೧೪

ಕಾಲಾತ್ಮನಾ ಹೃತಗುಣಂ ನಭ ಆತ್ಮನಿ ಲೀಯತೇ ।
ಇಂದ್ರಿಯಾಣಿ ಮನೋ ಬುದ್ಧಿಃ ಸಹ ವೈಕಾರಿಕೈರ್ನೃಪ ।
ಪ್ರವಿಶಂತಿ ಹ್ಯಹಂಕಾರಂ ಸ್ವಗುಣೈರಹಮಾತ್ಮನಿ ॥ ೧೫

ಏಷಾ ಮಾಯಾ ಭಗವತಃ ಸರ್ಗಸ್ಥಿತ್ಯಂತಕಾರಿಣೀ ।
ತ್ರಿವರ್ಣಾ ವರ್ಣಿತಾಸ್ಮಾಭಿಃ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೧೬

ರಾಜೋವಾಚ—

ಯಥೈತಾಮೈಶ್ವರೀಂ ಮಾಯಾಂ ದುಸ್ತರಾಮಕೃತಾತ್ಮಭಿಃ ।
ತರಂತ್ಯಂಜಃ ಸ್ಥೂಲಧಿಯೋ ಮಹರ್ಷ ಇದಮುಚ್ಯತಾಮ್ ॥ ೧೭

---

ಹೀರಿಕೊಳ್ಳಲಾಗಿ ನೀರು ಅಗ್ನಿಯಲ್ಲಿ ಅಡಗುತ್ತದೆ. ಸಾಂವರ್ತಕತಮಸ್ಸಿನಿಂದ ರೂಪತನ್ಮಾತ್ರೆಯು ಅಪಹೃತವಾಗಲು, ಅಗ್ನಿಯು ವಾಯುವಿನಲ್ಲಿ ಲಯವಾಗುತ್ತದೆ. (ವಾಯುವಿಗೆ ಕಾರಣವಾದ) ಆಕಾಶವು ಸ್ಪರ್ಶಗುಣವನ್ನು ಕಿತ್ತುಕೊಳ್ಳಲು, ವಾಯುವು ಆಕಾಶದಲ್ಲಿ ಲಯಿಸುತ್ತದೆ. ಕಾಲಸ್ವರೂಪನಾದ ಈಶ್ವರನಿಂದ ಶಬ್ದಗುಣವು ಅಪಹೃತವಾಗಲು, ಆಕಾಶವು ತಾಮಸಾಹಂಕಾರದಲ್ಲಿ ಲಯಿಸುತ್ತದೆ (೧೩–೧೪). ಅನಂತರ ಇಂದ್ರಿಯಗಳೂ ಬುದ್ಧಿಯೂ ರಾಜಸಾಹಂಕಾರವನ್ನೂ ಮನಸ್ಸು ಮತ್ತು ಅಭಿಮಾನಿಗಳಾದ ದೇವತೆಗಳೂ ಸಾತ್ತ್ವಿಕಾಹಂಕಾರವನ್ನೂ ಪ್ರವೇಶಿಸುತ್ತವೆ. ಹೀಗೆ ತನ್ನ ಗುಣರೂಪಕಾರ್ಯಗಳಿಂದ ಸಹಿತವಾದ ಅಹಂಕಾರವು ಮಹತ್ತತ್ತ್ವದಲ್ಲಿ ಲಯಿಸುತ್ತದೆ (ಮಹತ್ತತ್ತ್ವವು ಪ್ರಕೃತಿಯಲ್ಲಿ ಲಯಿಸುತ್ತದೆ) (೧೫). ವಿದೇಹರಾಜ, ಈ ಪ್ರಕಾರವಾಗಿ ಸೃಷ್ಟಿಸ್ಥಿತಿ ಲಯಗಳಿಗೆ ಕಾರಣವಾದ ಭಗವಂತನ ಶಕ್ತಿಯೇ ಮಾಯೆ. ತ್ರಿಗುಣಾತ್ಮಕವಾದ ಈ ಮಾಯೆಯನ್ನು ನಾವು ವಿವರಿಸಿದ್ದೇವೆ. ಇನ್ನು ಏನನ್ನು ಕೇಳಲು ಬಯಸುತ್ತೀಯೆ ?" ಎಂದನು (೧೬). ಆಗ ವಿದೇಹರಾಜನು "ಮಹರ್ಷಿಗಳೆ, ಅಜಿತೇಂದ್ರಿಯರಿಗೆ ಈಶ್ವರನ ಈ ಮಾಯೆಯನ್ನು ಗೆಲ್ಲುವುದು ಅಶಕ್ಯವೇ ಸರಿ. ಸ್ಥೂಲಬುದ್ಧಿಯುವರಾದ ಸಾಮಾನ್ಯಜನರು ಈ ಮಾಯೆಯನ್ನು ದಾಟಲು ಸುಲಭವಾದ ಉಪಾಯ ಉಂಟೆ ? ಹೇಳೋಣ

ಪ್ರಬುದ್ಧ ಉವಾಚ—

ಕರ್ಮಾಣ್ಯಾರಭಮಾಣಾನಾಂ ದುಃಖಹತ್ಯೈ ಸುಖಾಯ ಚ ।
ಪಶ್ಯೇತ್ ಪಾಕವಿಪರ್ಯಾಸಂ ಮಿಥುನೀಚಾರಿಣಾಂ ನೃಣಾಮ್ ॥ ೧೮

ನಿತ್ಯಾರ್ತಿದೇನ ವಿತ್ತೇನ ದುರ್ಲಭೇನಾತ್ಮಮೃತ್ಯುನಾ ।
ಗೃಹಾಪತ್ಯಾಪ್ತಪಶುಭಿಃ ಕಾ ಪ್ರೀತಿಃ ಸಾಧಿತೈಶ್ಚಲೈಃ ॥ ೧೯

ಏವಂ ಲೋಕಂ ಪರಂ ವಿದ್ಯಾನ್ನಶ್ವರಂ ಕರ್ಮನಿರ್ಮಿತಮ್ ।
ಸ ತುಲ್ಯಾತಿಶಯಧ್ವಂಸಂ ಯಥಾ ಮಂಡಲವರ್ತಿನಾಮ್ ॥ ೨೦

---

ವಾಗಲಿ" ಎಂದನು (೧೭). ಆಗ ಪ್ರಬುದ್ಧನೆಂಬ ಯೋಗಿಯು ಇಂತೆಂದನು: "ರಾಜ, ಮಾನವರು ಮದುವೆಮಾಡಿಕೊಂಡು ದಂಪತಿಗಳಾಗಿ ದುಃಖವನ್ನು ಹೋಗಲಾಡಿಸಿಕೊಳ್ಳಬೇಕೆಂದೂ ಸುಖವನ್ನು ಪಡೆಯಬೇಕೆಂದೂ ವಿವಿಧ ಕರ್ಮಗಳಲ್ಲಿ ತೊಡಗುವರಷ್ಟೆ. ಆದರೆ (ಉದ್ದೇಶವು ವಿಪರ್ಯಸ್ತವಾಗಿ) ಫಲವು ಬೇರೆಯಾಗಿಬಿಡುತ್ತದೆಯೆಂಬುದನ್ನು ಚಿಂತಿಸಬೇಕು (೧೮). ಕಷ್ಟದಿಂದ ಸಂಪಾದಿಸಬೇಕಾದ ಧನವು ಸದಾ ವ್ಯಥೆಗೆ ಕಾರಣವೆಂಬುದನ್ನೂ ಕೆಲವುವೇಳೆ ತನ್ನ ಮೃತ್ಯುವಿಗೇ ನಿಮಿತ್ತವಾಗುತ್ತದೆಯೆಂಬುದನ್ನೂ ಅನುಶೀಲಿಸಬೇಕು. ಮನೆ, ಮಕ್ಕಳು, ನೆಂಟರು, ದನಕರುಗಳು ಎಲ್ಲವೂ ಅಸ್ಥಿರವಾದವು. ಇವನ್ನು ಕಷ್ಟಪಟ್ಟು ಸಂಪಾದಿಸಿದರೆ ಎಷ್ಟು ಸುಖವಾದೀತೆಂಬುದನ್ನೂ ಪರಿಶೀಲಿಸಬೇಕು (೧೯). ಹೀಗೆಯೇ ಕರ್ಮಸಾಧ್ಯವಾದ ಪರಲೋಕವೂ ಶಾಶ್ವತವಾದ್ದಲ್ಲ ಎಂದು ತಿಳಿಯತಕ್ಕದ್ದು. ಅಲ್ಲದೆ ಪರಲೋಕದಲ್ಲಿ ಪಡೆಯುವ ಸ್ಥಾನವು ಸಾಮ್ಯ-ಅತಿಶಯ-ಧ್ವಂಸಗಳಿಂದ ಕೂಡಿರುವುದೆಂಬುದನ್ನು [1]ಗಮನಿಸಬೇಕು. ಮಂಡಲೇಶ್ವರರ ಸ್ಥಾನವಿದ್ದಂತೆ ಅದು (೨೦).

---

1. ಸ್ವರ್ಗದಲ್ಲಿ ಪಡೆಯುವ ಸ್ಥಾನವು ಇನ್ನೊಬ್ಬರ ಸ್ಥಾನಕ್ಕೆ ಸಮವಾಗಿದ್ದರೆ ಉಭಯರಲ್ಲಿ ಸ್ಪರ್ಧೆ ಹುಟ್ಟುತ್ತದೆ. ಇನ್ನೊಂದು ಅತಿಶಯವಾಗಿದ್ದರೆ ಅದು ತನಗಿಲ್ಲವೆಂದು ಅಸೂಯೆ ಹುಟ್ಟುತ್ತದೆ. ಸ್ವರ್ಗಫಲವು ನಾಶವಾಗತಕ್ಕದ್ದಾದ್ದರಿಂದ ಭಯಚಿಂತೆಗಳು ಇದ್ದೇ ಇರುತ್ತವೆ. ಆದ್ದರಿಂದ ಸ್ವರ್ಗದಲ್ಲಿಯೂ ದುಃಖವಿದೆಯೆಂದು ಅಭಿಪ್ರಾಯ. ಸ್ವರ್ಗವು ಮಂಡಲೇಶ್ವರನಾದ ರಾಜನ ಪದವಿ ಇದ್ದ ಹಾಗೆ. 'ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತೇ ಏವಮೇವಾಮುತ್ರ ಪುಣ್ಯಚಿತೋ ಲೋಕಃ ಕ್ಷೀಯತೇ'

(ಛಾಂ ೮-೧)

ತಸ್ಮಾದ್ಗುರುಂ ಪ್ರಪದ್ಯೇತ ಜಿಜ್ಞಾಸುಃ ಶ್ರೇಯ ಉತ್ತಮಮ್ ।
ಶಾಬ್ದೇ ಪರೇ ಚ ನಿಷ್ಣಾತಂ ಬ್ರಹ್ಮಣ್ಯುಪಶಮಾಶ್ರಯಮ್ ॥ ೨೧

ತತ್ರ ಭಾಗವತಾನ್ ಧರ್ಮಾನ್ ಶಿಕ್ಷೇದ್ಗುರ್ವಾತ್ಮದೈವತಃ ।
ಅಮಾಯಯಾನುವೃತ್ತ್ಯಾ ಯೈಸ್ತುಷ್ಯೇದಾತ್ಮಾಽಽತ್ಮದೋ ಹರಿಃ ॥ ೨೨

ಸರ್ವತೋ ಮನಸೋಽಸಂಗಮಾದೌ ಸಂಗಂ ಚ ಸಾಧುಷು ।
ದಯಾಂ ಮೈತ್ರೀಂ ಪ್ರಶ್ರಯಂ ಚ ಭೂತೇಷ್ವದ್ಧಾ ಯಥೋಚಿತಮ್ ॥ ೨೩

ಶೌಚಂ ತಪಸ್ತಿತಿಕ್ಷಾಂ ಚ ಮೌನಂ ಸ್ವಾಧ್ಯಾಯಮಾರ್ಜವಮ್ ।
ಬ್ರಹ್ಮಚರ್ಯಮಹಿಂಸಾಂ ಚ ಸಮತ್ವಂ ದ್ವಂದ್ವಸಂಜ್ಞಯೋಃ ॥ ೨೪

---

ಆದ್ದರಿಂದ ಉತ್ತಮವಾದ ಶ್ರೇಯಸ್ಸು ಯಾವುದೆಂಬುದನ್ನು ತಿಳಿಯಲಪೇಕ್ಷಿಸುವ ಮನುಷ್ಯನು ವೇದವೆಂಬ ಶಬ್ದಬ್ರಹ್ಮವನ್ನು ಚೆನ್ನಾಗಿ ಬಲ್ಲವನೂ ಪರಬ್ರಹ್ಮದಲ್ಲಿ (ಅಪರೋಕ್ಷಾನುಭವದಿಂದ) ನಿಷ್ಣಾತನೂ ಉಪಶಾಂತನೂ ಆದ ಗುರುವನ್ನು ಆಶ್ರಯಿಸಬೇಕು (೨೧). ಗುರುವನ್ನು ಆತ್ಮನೆಂದೂ ದೇವತೆಯೆಂದೂ ನಂಬಿ ಅಮಾಯಿಕವಾದ ಸೇವೆಯನ್ನು ಮಾಡಿ ಭಾಗವತಧರ್ಮಗಳನ್ನು ಕಲಿತುಕೊಳ್ಳಬೇಕು. ಆ ಧರ್ಮಗಳ ಆಚರಣೆಯಿಂದ ಆತ್ಮನೇ ಆದ ಶ್ರೀಹರಿಯು (ಬಲಿಚಕ್ರವರ್ತಿಯೇ ಮೊದಲಾದವರಿಗೆ ಆದಂತೆ) ಆತ್ಮಪ್ರದನೂ ಆಗಿ ಸಂತುಷ್ಟನಾಗುವನು (೨೨). ಸರ್ವಭೋಗ ವಸ್ತುಗಳಲ್ಲಿ ಮನಸ್ಸಿಗೆ ಅನಾಸಕ್ತಿಯನ್ನೂ ಸಾಧುಗಳಲ್ಲಿ ಆಸಕ್ತಿಯನ್ನೂ ಪ್ರಾಣಿಗಳಲ್ಲಿ ಯಥೋಚಿತವಾಗಿ ಎಂದರೆ ದೀನರಲ್ಲಿ ದಯೆಯನ್ನೂ ಸಮರಲ್ಲಿ ಸ್ನೇಹವನ್ನೂ ಉತ್ತಮರ ವಿಷಯದಲ್ಲಿ ವಿನಯವನ್ನೂ ತಪ್ಪದೆ ಅಭ್ಯಾಸ ಮಾಡಬೇಕು (೨೩) [1]ಶೌಚ, ತಪಸ್ಸು, ಕ್ಷಮೆ, ಮೌನ, ವೇದಪಾಠಾದಿ ಸ್ವಾಧ್ಯಾಯ, ಋಜುತ್ವ, ಬ್ರಹ್ಮಚರ್ಯೆ, ಅಹಿಂಸೆ ಮತ್ತು ಶೀತೋಷ್ಣಾದಿ ದ್ವಂದ್ವಗಳಲ್ಲಿ ಸಮತ್ವಬುದ್ಧಿ ಮತ್ತು ಸರ್ವವಸ್ತುಗಳಲ್ಲಿಯೂ (ಸಚ್ಚಿದ್ರೂಪದಿಂದ) ಆತ್ಮನೂ (ನಿಯಂತೃರೂಪದಿಂದ) ಈಶ್ವರನೂ ಇದ್ದಾನೆಂದು ಮನಗಾಣುವುದು, ಏಕಾಂತಶೀಲತೆ, ಗೃಹಾದಿಗಳಲ್ಲಿ ಅಭಿಮಾನರಾಹಿತ್ಯ, ಶುದ್ಧವಾದ ಚೀರವಸ್ತ್ರವನ್ನು

---

1. ಶೌಚ — ಮೃಜ್ಜಲಾದಿಗಳಿಂದ ಬಾಹ್ಯಶೌಚ, ಗರ್ವರಾಹಿತ್ಯಾದಿಗಳಿಂದ ಅಭ್ಯಂತರ ಶೌಚ. ತಪಸ್ಸು = ಸ್ವಧರ್ಮಾಚರಣೆ, ಮೌನ — ವ್ಯರ್ಥವಾಗಿ ಮಾತನಾಡದಿರುವುದು.

ಸರ್ವತ್ರಾತ್ಮೇಶ್ವರಾನ್ವೀಕ್ಷಾಂ ಕೈವಲ್ಯಮನಿಕೇತತಾಮ್ ।
ವಿವಿಕ್ತಚೀರವಸನಂ ಸಂತೋಷಂ ಯೇನ ಕೇನಚಿತ್ ॥ ೨೫

ಶ್ರದ್ಧಾಂ ಭಾಗವತೇ ಶಾಸ್ತ್ರೇಽನಿಂದಾಮನ್ಯತ್ರ ಚಾಪಿ ಹಿ ।
ಮನೋವಾಕ್ಕರ್ಮದಂಡಂ ಚ ಸತ್ಯಂ ಶಮದಮಾವಪಿ ॥ ೨೬

ಶ್ರವಣಂ ಕೀರ್ತನಂ ಧ್ಯಾನಂ ಹರೇರದ್ಭುತಕರ್ಮಣಃ ।
ಜನ್ಮಕರ್ಮಗುಣಾನಾಂ ಚ ತದರ್ಥೇಽಖಿಲಚೇಷ್ಟಿತಮ್ ॥ ೨೭

ಇಷ್ಟಂ ದತ್ತಂ ತಪೋ ಜಪ್ತಂ ವೃತ್ತಂ ಯಚ್ಚಾತ್ಮನಃ ಪ್ರಿಯಮ್ ।
ದಾರಾನ್ ಸುತಾನ್ ಗೃಹಾನ್ ಪ್ರಾಣಾನ್ ಯತ್ ಪರಸ್ಮೈ
ನಿವೇದನಮ್ ॥ ೨೮

ಏವಂ ಕೃಷ್ಣಾತ್ಮನಾಥೇಷು ಮನುಷ್ಯೇಷು ಚ ಸೌಹೃದಮ್ ।
ಪರಿಚರ್ಯಾಂ ಚೋಭಯತ್ರ ಮಹತ್ಸು ನೃಷು ಸಾಧುಷು ॥ ೨೯

ಪರಸ್ಪರಾನುಕಥನಂ ಪಾವನಂ ಭಗವದ್ಯಶಃ ।
ಮಿಥೋ ರತಿರ್ಮಿಥಸ್ತುಷ್ಟಿರ್ನಿವೃತ್ತಿರ್ಮಿಥ ಆತ್ಮನಃ ॥ ೩೦

---

ಧರಿಸುವುದು – ಇವುಗಳನ್ನು ಅಭ್ಯಾಸಮಾಡಬೇಕು (೨೪–೨೫). ಭಗವತ್ ಪ್ರತಿಪಾದಕಶಾಸ್ತ್ರದಲ್ಲಿ ಶ್ರದ್ಧೆಯನ್ನೂ ಅನ್ಯಶಾಸ್ತ್ರಗಳಲ್ಲಿ ಅನಿಂದೆಯನ್ನೂ ಮನೋ-ವಾಕ್ಕರ್ಮಗಳ ನಿಯಮನವನ್ನೂ ಸತ್ಯ, ಶಮ, ದಮಗಳನ್ನೂ ಪಾಲಿಸಬೇಕು. ಅದ್ಭುತಕರ್ಮನಾದ ಶ್ರೀಹರಿಯ ಅವತಾರ-ಕ್ರಿಯೆ-ಗುಣಗಳ ಶ್ರವಣ ಕೀರ್ತನ ಧ್ಯಾನಗಳನ್ನು ಮಾಡಬೇಕು. ಆತನಿಗಾಗಿ ಸಕಲಕರ್ಮಗಳನ್ನೂ ಅರ್ಪಿಸಬೇಕು (೨೬–೨೭). ಯಜ್ಞ, ದಾನ, ತಪಸ್ಸು, ಜಪ, ಸದಾಚಾರ, ಭಗವಂತನಿಗೆ ಪ್ರಿಯವಾದ ಗಂಧಪುಷ್ಪಾದಿ, ಹೆಂಡತಿ, ಮಕ್ಕಳು, ಮನೆ, ತನ್ನ ಪ್ರಾಣ—ಎಲ್ಲವೂ ಪರಮೇಶ್ವರನಿಗೆ ಅರ್ಪಿತವೆಂಬ ಭಾವನೆಯನ್ನು ಅಭ್ಯಾಸಮಾಡಬೇಕು (೨೮). ಹೀಗೆ ಶ್ರೀಕೃಷ್ಣನೇ ತಮ್ಮ ಪ್ರಭುವೆಂದು ನಂಬಿರುವ ಮನುಷ್ಯರಲ್ಲಿ ಸ್ನೇಹವನ್ನಿಡಬೇಕು. ಸ್ಥಾವರಜಂಗಮಗಳೆಂಬ ಉಭಯಗಳನ್ನೂ ಸೇವಿಸಬೇಕು. ವಿಶೇಷವಾಗಿ ಮಾನವರನ್ನೂ ಸಾಧುಗಳನ್ನೂ ಭಾಗವತರಾದ ಮಹಾತ್ಮರನ್ನೂ ಸೇವಿಸುವುದು ಆವಶ್ಯಕ (೨೯). ಭಗವಂತನ ಪಾವನವಾದ ಕೀರ್ತಿಯನ್ನು ಕುರಿತು ಪರಸ್ಪರ ಸಂಭಾಷಣೆ, ಸ್ಪರ್ಧಾಮನೋಭಾವವಿಲ್ಲದೆ ಭಗವದ್ಭಕ್ತರೊಡನೆ ಸೇರಿ ವಿನೋದಿಸು

ಸ್ಮರಂತಃ ಸ್ಮಾರಯಂತಶ್ಚ ಮಿಥೋಽಘೌಘಹರಂ ಹರಿಮ್ ।
ಭಕ್ತ್ಯಾ ಸಂಜಾತಯಾ ಭಕ್ತ್ಯಾ ಬಿಭ್ರತ್ಯುತ್ಪುಲಕಾಂ ತನುಮ್ ॥ ೩೧

ಕ್ವಚಿದ್ ರುದಂತ್ಯಚ್ಯುತಚಿಂತಯಾ ಕ್ವಚಿ-
ದ್ಧಸಂತಿ ನಂದಂತಿ ವದಂತ್ಯಲೌಕಿಕಾಃ ।
ನೃತ್ಯಂತಿ ಗಾಯಂತ್ಯನುಶೀಲಯಂತ್ಯಜಂ
ಭವಂತಿ ತೂಷ್ಣೀಂ ಪರಮೇತ್ಯ ನಿರ್ವೃತಾಃ ॥ ೩೨

ಇತಿ ಭಾಗವತಾನ್ ಧರ್ಮಾನ್ ಶಿಕ್ಷನ್ ಭಕ್ತ್ಯಾ ತದುತ್ಥಯಾ ।
ನಾರಾಯಣಪರೋ ಮಾಯಾಮಂಜಸ್ತರತಿ ದುಸ್ತರಾಮ್ ॥ ೩೩

ರಾಜೋವಾಚ—

ನಾರಾಯಣಾಭಿಧಾನಸ್ಯ ಬ್ರಹ್ಮಣಃ ಪರಮಾತ್ಮನಃ ।
ನಿಷ್ಠಾಮರ್ಹಥ ನೋ ವಕ್ತುಂ ಯೂಯಂ ಹಿ ಬ್ರಹ್ಮವಿತ್ತಮಾಃ ॥ ೩೪

---

ವುದು, ಸಂತೋಷಪಡುವುದು, ದುಃಖವನ್ನು ಮರೆಯುವುದೆಂಬ ನಿವೃತ್ತಿ— ಇವುಗಳನ್ನು ಅಭ್ಯಸಿಸಬೇಕು (೩೦). ಭಾಗವತರಾದವರು ಅನ್ಯೋನ್ಯವಾಗಿ ಸೇರಿ ಪಾಪನಾಶಿಯಾದ ಭಗವಂತನನ್ನು ಸ್ಮರಿಸುತ್ತ, ಸ್ಮರಿಸುವಂತೆ ಮಾಡುತ್ತ, ಸಾಧನ ಭಕ್ತಿಯಿಂದುಂಟಾದ ಪ್ರೇಮಲಕ್ಷಣ ಭಕ್ತಿಯಿಂದ ದೇಹದಲ್ಲಿ ರೋಮಾಂಚವನ್ನು ಪಡೆಯುತ್ತಾರೆ (೩೧). ಅಂತಹ ಭಕ್ತರು ಅಚ್ಯುತನನ್ನು ಸ್ಮರಿಸಿಕೊಂಡು ಅಲೌಕಿಕವಾಗಿ ನಡೆದುಕೊಳ್ಳುತ್ತಾರೆ. ಕೆಲವುವೇಳೆ ಅಳುತ್ತಾರೆ, ನಗುತ್ತಾರೆ, ಸಂತೋಷದಿಂದ ಹಿಗ್ಗುತ್ತಾರೆ, ಏನನ್ನೋ ಹೇಳಿಕೊಳ್ಳುತ್ತಾರೆ, ಕುಣಿಯುತ್ತಾರೆ, ಹಾಡುತ್ತಾರೆ; ಪರಮಾನಂದಭರಿತರಾಗಿ ಶ್ರೀಹರಿಯನ್ನು ಧ್ಯಾನಿಸುತ್ತ ಸುಮ್ಮನೆ ಕುಳಿತುಕೊಳ್ಳುತ್ತಾರೆ (೩೨). ಈ ಪ್ರಕಾರವಾಗಿ ಭಾಗವತ ಧರ್ಮಗಳನ್ನಾ ಚರಿಸುತ್ತ ಆದರಿಂದ ಹುಟ್ಟಿದ ಭಕ್ತ್ಯಾತಿಶಯದಿಂದ ನಾರಾಯಣಪರಾಯಣ ನಾಗಿ ದುಸ್ತರವಾದ ಮಾಯೆಯನ್ನು ಮನುಷ್ಯನು ಸುಲಭವಾಗಿ ದಾಟುವನು" ಎಂದನು (೩೩). ಆಗ ನಿಮಿರಾಜನು "ನಾರಾಯಣನೆಂದೂ ಪರಮಾತ್ಮನೆಂದೂ ಹೇಳಲ್ಪಡುವ ಬ್ರಹ್ಮವಸ್ತುವಿನ [1]ಸ್ವರೂಪವೇನೆಂಬುದನ್ನು ಹೇಳೋಣವಾಗಲಿ.

---

1. ಬ್ರಹ್ಮವನ್ನು ನಾರಾಯಣ, ಪರಮಾತ್ಮ, ಭಗವಾನ್–ಇತ್ಯಾದಿ ಶಬ್ದಗಳಿಂದ ವ್ಯವಹರಿಸಲಾಗುತ್ತಿದೆ. ಕೆಲವು ಕಡೆ ಸಗುಣವಾಗಿಯೂ, ಕೆಲವು ಕಡೆ ನಿರ್ಗುಣವಾಗಿಯೂ ಅದರ ವರ್ಣನೆ ಇದೆ. ಆದ್ದರಿಂದ ಬ್ರಹ್ಮದ ನಿಜವಾದ ಸ್ವರೂಪವೇನೆಂದು ಪ್ರಶ್ನೆ.

ಪಿಪ್ಪಲಾಯನ ಉವಾಚ—

ಸ್ಥಿತ್ಯುದ್ಭವಪ್ರಲಯಹೇತುರಹೇತುರಸ್ಯ
ಯತ್ ಸ್ವಪ್ನಜಾಗರಸುಷುಪ್ತಿಷು ಸದ್ಬಹಿಶ್ಚ ।
ದೇಹೇಂದ್ರಿಯಾಸುಹೃದಯಾನಿ ಚರಂತಿ ಯೇನ
ಸಂಜೀವಿತಾನಿ ತದವೇಹಿ ಪರಂ ನರೇಂದ್ರ ॥ ೩೫

ನೈತನ್ಮನೋ ವಿಶತಿ ವಾಗುತ ಚಕ್ಷುರಾತ್ಮಾ
ಪ್ರಾಣೇಂದ್ರಿಯಾಣಿ ಚ ಯಥಾನಲಮರ್ಚಿಷಃ ಸ್ವಾಃ ।
ಶಬ್ದೋಽಪಿ ಬೋಧಕನಿಷೇಧತಯಾಽಽತ್ಮಮೂಲ-
ಮರ್ಥೋಕ್ತಮಾಹ ಯದೃತೇ ನ ನಿಷೇಧಸಿದ್ಧಿಃ ॥ ೩೬

---

ನೀವು ಶ್ರೇಷ್ಠರಾದ ಬ್ರಹ್ಮಜ್ಞಾನಿಗಳಾಗಿದ್ದೀರಿ" ಎಂದು ಕೇಳಿದನು (೩೪). ಆಗ ಪಿಪ್ಪಲಾಯನನು ಇಂತೆಂದನು : "ನರೇಂದ್ರ, ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವೂ ಸ್ವಯಂ ಕಾರಣರಹಿತವೂ ಆದ ಪರತತ್ತ್ವವನ್ನು ನಾರಾಯಣನೆಂದು ತಿಳಿ ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿ ಅನುವರ್ತಮಾನವೂ ಅವುಗಳ ಹೊರಗೆ ಸಮಾಧಿ—ಮುಂತಾದ ಕಡೆಯೂ ಗೋಚರಿಸುವ ಆ ಪರತತ್ತ್ವವನ್ನೇ ಬ್ರಹ್ಮವೆಂದು ತಿಳಿ. ದೇಹೇಂದ್ರಿಯ ಪ್ರಾಣ ಹೃದಯಗಳು ಯಾವುದರಿಂದ ಸಂಜೀವಿತಗಳಾಗಿ ಕೆಲಸಮಾಡುತ್ತವೆಯೋ ಆ ಪರತತ್ತ್ವವನ್ನೇ ಪರಮಾತ್ಮನೆಂದು ತಿಳಿ (೩೫). (ತಿಳಿ—ಎಂದು ಹೇಳಿದ್ದರಿಂದ ಬ್ರಹ್ಮವು ಜ್ಞಾನಕ್ಕೆ ವಿಷಯವಾಗುತ್ತದೆಯೆಂದು ಭಾವಿಸಬಾರದು) ಆ ಬ್ರಹ್ಮವನ್ನು ಮನಸ್ಸು ಗ್ರಹಿಸಲಾರದು. ವಾಕ್ಕು, ಚಕ್ಷುಸ್ಸು, ಬುದ್ಧಿಗಳು ಅದನ್ನು ಮುಟ್ಟಲಾರವು. ಪ್ರಾಣದ ಕ್ರಿಯಾ-ಶಕ್ತಿಗೆ ಅದು ನಿಲುಕತಕ್ಕದ್ದಲ್ಲ. ಯಾವ ಇಂದ್ರಿಯಗಳೂ ಅದನ್ನು ತಿಳಿಯಲಾರವು. ಅಗ್ನಿಯ ಕಿಡಿಗಳು ಅಗ್ನಿಯನ್ನು ಹೇಗೆ ಪ್ರಕಾಶಿಸಲಾರವೋ-ಸುಡಲಾರವೋ ಹಾಗೆಯೇ ಬ್ರಹ್ಮದಿಂದ ಉದ್ಭವಿಸಿದ ಮನಸ್ಸು ಮೊದಲಾದವು ಬ್ರಹ್ಮವನ್ನು ಪ್ರಕಾಶಿಸಲಾರವು. ವೇದವು ಬ್ರಹ್ಮದ ವಿಷಯದಲ್ಲಿ ಪ್ರಮಾಣವಾದರೂ ಪರ್ಯಾಯವಾಗಿ ಬಳಸುದಾರಿಯಿಂದ ಬ್ರಹ್ಮವನ್ನು ಬೋಧಿಸಬಲ್ಲುದೇ ಹೊರತು ನೇರವಾಗಿ ಅಲ್ಲ. ಅಸ್ಥೂಲಂ, ಅನಣು, ಅಗ್ರಾಹ್ಯಂ—ಈ ರೀತಿ ನಿಷೇಧಮುಖವಾಗಿ ವೇದವು ಬ್ರಹ್ಮವನ್ನು ಬೋಧಿಸುತ್ತದೆ. 'ಯತೋ ವಾಚೋ ನಿವರ್ತಂತೇ' ಎನ್ನುತ್ತದೆ

ಸತ್ತ್ವಂ ರಜಸ್ತಮ ಇತಿ ತ್ರಿವೃದೇಕಮಾದೌ
ಸೂತ್ರಂ ಮಹಾನಹಮಿತಿ ಪ್ರವದಂತಿ ಜೀವಮ್ ।
ಜ್ಞಾನಕ್ರಿಯಾರ್ಥಫಲರೂಪತಯೋರುಶಕ್ತಿ
ಬ್ರಹ್ಮೈವ ಭಾತಿ ಸದಸಚ್ಚ ತಯೋಃ ಪರಂ ಯತ್ ॥ ೩೭

ನಾತ್ಮಾ ಜಜಾನ ನ ಮರಿಷ್ಯತಿ ನೈಧತೇಽಸೌ
ನ ಕ್ಷೀಯತೇ ಸವನವಿದ್ವ್ಯಭಿಚಾರಿಣಾಂ ಹಿ ।
ಸರ್ವತ್ರ ಶಶ್ವದನಪಾಯ್ಯುಪಲಬ್ಧಿಮಾತ್ರಂ
ಪ್ರಾಣೋ ಯಥೇಂದ್ರಿಯಬಲೇನ ವಿಕಲ್ಪಿತಂ ಸತ್ ॥ ೩೮

---

ಪ್ರತಿಯೋಗಿಯಾದ ಬ್ರಹ್ಮವಸ್ತುವಿಲ್ಲದೆ ಈ ನಿಷೇಧವು ಸಿದ್ಧಿಸುವುದಿಲ್ಲ (ಆದ್ದರಿಂದ ಪರ್ಯಾಯವಾಗಿ ವೇದವು ಬ್ರಹ್ಮವನ್ನು ಬೋಧಿಸುತ್ತದೆ) (೩೬). ಆದಿಯಲ್ಲಿ ಏಕವಾಗಿರುವ ಬ್ರಹ್ಮವನ್ನೇ ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳಿಂದ ಕೂಡಿದ ಪ್ರಧಾನವೆನ್ನುತ್ತಾರೆ. ಅನಂತರ (ಕ್ರಿಯಾಶಕ್ತಿಯ ಆವಿರ್ಭಾವದಿಂದ) ಅದನ್ನೇ ಸೂತ್ರ (ಹಿರಣ್ಯಗರ್ಭ) ವೆಂದೂ (ಜ್ಞಾನಶಕ್ತಿಯ ಆವಿರ್ಭಾವದಿಂದ) ಮಹತ್ತತ್ತ್ವವೆಂದೂ ಕರೆಯುತ್ತಾರೆ. ಆಮೇಲೆ ಜೀವವೆಂದೂ ಜೀವೋಪಾಧಿಯಾದ ಅಹಂಕಾರವೆಂದೂ ಅದನ್ನೇ ಹೇಳುತ್ತಾರೆ. ಅನಂತರ ಜ್ಞಾನಪ್ರಧಾನರಾದ ದೇವತೆಗಳಾಗಿಯೂ ಕ್ರಿಯಾಪ್ರಧಾನಗಳಾದ ಇಂದ್ರಿಯಗಳಾಗಿಯೂ ಅರ್ಥರೂಪಗಳಾದ ವಿಷಯಗಳಾಗಿಯೂ ಫಲರೂಪವಾದ ಸುಖಾದಿಗಳಾಗಿಯೂ ಬ್ರಹ್ಮವೇ ತೋರಿಕೊಳ್ಳುತ್ತದೆ. ಹೇಗೆಂದರೆ, ಅದು ಅದ್ಭುತವಾದ ಮಾಯಾಶಕ್ತಿಯುಳ್ಳದ್ದು. ಕಾರ್ಯರೂಪವಾದ ಸತ್, ಕಾರಣರೂಪವಾದ ಅಸತ್, ಈ ಸದಸತ್ತುಗಳಿಗೆ ಕಾರಣವಾದ ವಸ್ತು—ಎಲ್ಲವೂ [1]ಬ್ರಹ್ಮವೇ (ಕಾರಣಕ್ಕಿಂತ ಅತಿರಿಕ್ತವಾದ ಕಾರ್ಯವಿಲ್ಲ. ವಾಚಾರಂಭಣಂ ವಿಕಾರೋನಾಮಧೇಯಂ ಮೃತ್ತಿಕೇತ್ಯೇವಸತ್ಯಂ—ಎಂಬ ಶ್ರುತಿಯು ಇದಕ್ಕೆ ಪ್ರಮಾಣ) (೩೭). (ವಿಶ್ವವು ಜನ್ಮಾದಿ ವಿಕಾರಗಳಿಂದ ಕೂಡಿದ್ದು. ಬ್ರಹ್ಮವು ವಿಶ್ವಾತ್ಮಕವಾದರೆ ಅದೂ ಜನ್ಮಾದಿ ವಿಕಾರಗಳಿಂದ ಯುಕ್ತವಾಗಬೇಕಾದೀತು—ಎಂಬ ಶಂಕೆಗೆ ಉತ್ತರ) ಆತ್ಮವಸ್ತುವಿಗೆ ಜನ್ಮವಿಲ್ಲ, ಮರಣವಿಲ್ಲ. ಅದು ವರ್ಧಿಸುವುದೂ ಇಲ್ಲ, ಕ್ಷಯಿಸುವುದೂ ಇಲ್ಲ.

1. ಅಧಿಷ್ಠಾನವಿಲ್ಲದೆ ಆರೋಪಿತವಸ್ತು ಇರಲಾರದು. ಆರೋಪಿತವಾದ ಜಗತ್ತೇ ಅಧಿಷ್ಠಾನವಾದ ಬ್ರಹ್ಮವಿದೆಯೆಂಬುದಕ್ಕೆ ಪ್ರಮಾಣ—ಎಂದು ತಾತ್ಪರ್ಯ.

ಅಂಡೇಷು ಪೇಶಿಷು ತರುಷ್ವವಿನಿಶ್ಚಿತೇಷು
ಪ್ರಾಣೋ ಹಿ ಜೀವಮುಪಧಾವತಿ ತತ್ರ ತತ್ರ ।
ಸನ್ನೇ ಯದಿಂದ್ರಿಯಗಣೇಽಹಮಿ ಚ ಪ್ರಸುಪ್ತೇ
ಕೂಟಸ್ಥ ಆಶಯಮೃತೇ ತದನುಸ್ಮೃತಿರ್ನಃ ॥ ೩೯

ಯರ್ಹ್ಯಬ್ಜನಾಭ ಚರಣೈಷಣಯೋರು ಭಕ್ತ್ಯಾ
ಚೇತೋಮಲಾನಿ ವಿಧಮೇದ್ಗುಣಕರ್ಮಜಾನಿ ।
ತಸ್ಮಿನ್ ವಿಶುದ್ಧ ಉಪಲಭ್ಯತ ಆತ್ಮತತ್ತ್ವಂ
ಸಾಕ್ಷಾದ್ಯಥಾಮಲದೃಶೋಃ ಸವಿತೃಪ್ರಕಾಶಃ ॥ ೪೦

---

ಏಕೆಂದರೆ, ವ್ಯಭಿಚಾರಿಗಳಾದ—ಆಗಮಾಪಾಯಿಗಳಾದ ಬಾಲ್ಯಯೌವನಾದಿ ಶರೀರಗಳಿಗೆ ಅದು ಸಾಕ್ಷಿಯಾಗಿ ನೋಡುತ್ತ ಇರುವುದು. ಸರ್ವದೇಶದಲ್ಲಿ ಸರ್ವದಾ ಅನುವೃತ್ತವಾಗಿರುತ್ತ ಜ್ಞಾನಸ್ವರೂಪವಾದದ್ದು ಆತ್ಮವಸ್ತು. ಸದಾ ಇರತಕ್ಕ ಜ್ಞಾನವು ಇಂದ್ರಿಯಬಲದಿಂದ ನೀಲ–ರಕ್ತ ಇತ್ಯಾದಿ ವೃತ್ತಿಜ್ಞಾನವಾಗಿ ಕಲ್ಪಿತವಾಗುತ್ತದೆ (ವೃತ್ತಿಜ್ಞಾನವು ಕ್ಷಣಿಕವಾಗಬಹುದು). ವ್ಯಭಿಚಾರಿಗಳಾದ ವಸ್ತುಗಳಲ್ಲಿ ಆತ್ಮವು ಪ್ರಾಣದಂತೆ ಅನುಸ್ಯೂತವಾಗಿರುವುದು (೩೮). ಹೇಗೆಂದರೆ, ಅಂಡಜಗಳಾದ ಪಕ್ಷಿಗಳು, ಜರಾಯುಜಗಳಾದ ಮನುಷ್ಯಾದಿಗಳು, ಉದ್ಭಿಜ್ಜಗಳಾದ ತರುಲತಾದಿಗಳು, ಹೀಗೆ ನಿಶ್ಚಿತಗಳಲ್ಲದ ಸ್ವೇದಜಗಳಾದ ಕ್ರಿಮಿಗಳು—ಇವುಗಳಲ್ಲಿ ಪ್ರಾಣವು ಯಾವ ವಿಕಾರವೂ ಇಲ್ಲದೆ ಜೀವವನ್ನು ಹಿಂಬಾಲಿಸಿಕೊಂಡು ಹೋಗುವುದಲ್ಲವೆ? ಹಾಗೆಯೇ ಸುಷುಪ್ತಿಯಲ್ಲಿ ಇಂದ್ರಿಯಗಣವು ನಿಷ್ಕ್ರಿಯವಾಗಿರಲು, ಅಹಂಕಾರವು ಲೀನವಾಗಿರಲು, ಆತ್ಮನು ಕೂಟಸ್ಥನಾಗಿಯೇ ಇರುವನು. (ವೃತ್ತಿಜ್ಞಾನಕ್ಕೆ ಹೇತುವಾದ) ಲಿಂಗಶರೀರವೆಂಬ ಉಪಾಧಿಯು ಸುಷುಪ್ತಿಯಲ್ಲಿ ಇರುವುದಿಲ್ಲ. ಇದು ನಮ್ಮೆಲ್ಲರ ಸ್ಮರಣೆಗೆ ಬಂದ [1]ವಿಷಯವಾಗಿದೆ (೩೯). ಪದ್ಮನಾಭನಾದ

---

1. ಜಾಗ್ರತ್, ಸ್ವಪ್ನಗಳಲ್ಲಿ ಉಪಾಧಿವಶದಿಂದ ವೃತ್ತಿಜ್ಞಾನವಾಗುತ್ತದೆ. ಸುಷುಪ್ತಿಯಲ್ಲಿ ಕೇವಲ ಆನಂದಸ್ವರೂಪನಾಗಿ ಆತ್ಮನಿರುತ್ತಾನೆ. 'ಸುಖವಾಗಿ ನಿದ್ರೆಮಾಡಿದೆನು' ಎಂಬ ಅನುಭವ ಎಲ್ಲರಿಗೂ ಇದೆ. ಹೀಗೆ ಮೂರು ಅವಸ್ಥೆಗಳಲ್ಲಿಯೂ ಇರತಕ್ಕ ಆತ್ಮನು ಒಬ್ಬನೇ. ಅವನಲ್ಲಿ ಯಾವ ಭೇದವೂ ಇಲ್ಲ, ಮೂರು ಅವಸ್ಥೆಗಳಿಗೆ ಸಾಕ್ಷಿಯಾದ ಆತ್ಮನು ಕೂಟಸ್ಥನಾಗಿ ತನ್ನ ಪಾಡಿಗೆ ಇರುತ್ತಾನೆ—ಎಂದು ಅಭಿಪ್ರಾಯ.

ರಾಜೋವಾಚ—

ಕರ್ಮಯೋಗಂ ವದತ ನಃ ಪುರುಷೋ ಯೇನ ಸಂಸ್ಕೃತಃ ।
ವಿಧೂಯೇಹಾಶು ಕರ್ಮಾಣಿ ನೈಷ್ಕರ್ಮ್ಯಂ
ವಿಂದತೇ ಪರಮ್ ॥ ೪೧

ಏವಂ ಪ್ರಶ್ನಮೃಷೀನ್ ಪೂರ್ವಮಪೃಚ್ಛಂ ಪಿತುರಂತಿಕೇ ।
ನಾಬ್ರುವನ್ ಬ್ರಹ್ಮಣಃ ಪುತ್ರಾಸ್ತತ್ರ ಕಾರಣಮುಚ್ಯತಾಮ್ ॥ ೪೨

ಆವಿರ್ಹೋತ್ರ ಉವಾಚ—

ಕರ್ಮಾಕರ್ಮ ವಿಕರ್ಮೇತಿ ವೇದವಾದೋ ನ ಲೌಕಿಕಃ ।
ವೇದಸ್ಯ ಚೇಶ್ವರಾತ್ಮತ್ವಾತ್ ತತ್ರ ಮುಹ್ಯಂತಿ ಸೂರಯಃ ॥ ೪೩

---

ಭಗವಂತನ ಪಾದಾಪೇಕ್ಷೆಯಿಂದಾದ ತೀವ್ರಭಕ್ತಿಯಿಂದ, ಮನಸ್ಸು ಗುಣಕರ್ಮಗಳಿಂದ ಸಂಭವಿಸಿದ ತನ್ನ ಕೊಳೆಗಳನ್ನು ಯಾವಾಗ ಕಳೆದುಕೊಳ್ಳುವುದೋ, ಆಗ ವಿಶುದ್ಧವಾದ ಮನಸ್ಸಿನಲ್ಲಿ ಆತ್ಮತತ್ತ್ವವು ಸ್ಫುರಿಸುತ್ತದೆ ಕಣ್ಣಿನ ದೋಷಗಳು ಹೋದಾಗ (ಮೊದಲೇ ಇದ್ದ) ಸೂರ್ಯ ಪ್ರಕಾಶವು ಗೋಚರಿಸುವಂತೆ ಗೋಚರಿಸುತ್ತದೆ" ಎಂದನು (೪೦). ಆಗ ನಿಮಿರಾಜನು "ಪೂಜ್ಯರೆ, ಕರ್ಮಯೋಗದ ಸ್ವರೂಪವನ್ನು ನಮಗೆ ಹೇಳಿರಿ. ಅದರಿಂದ ಸಂಸ್ಕೃತನಾದ ಮನುಷ್ಯನು ಕರ್ಮಬಂಧಗಳಿಂದ ಬಿಡುಗಡೆ ಹೊಂದಿ ಶ್ರೇಷ್ಠವಾದ [1]ನೈಷ್ಕರ್ಮ್ಯವನ್ನು ಪಡೆಯುತ್ತಾನಲ್ಲವೆ? ಹಿಂದೆ ನನ್ನ ಪಿತೃವಾದ ಇಕ್ಷ್ವಾಕುವಿನ ಸಮಕ್ಷದಲ್ಲಿ ಬ್ರಹ್ಮಪುತ್ರರಾದ ಸನಕಾದಿ ಋಷಿಗಳನ್ನು ಕುರಿತು ಈ ಪ್ರಶ್ನೆಯನ್ನೇ ಕೇಳಿದ್ದೆನು. ಅವರು ಉತ್ತರವನ್ನೇ ಹೇಳಲಿಲ್ಲ! ಅದಕ್ಕೆ ಕಾರಣವೇನಿರಬಹುದು? ಅದನ್ನೂ ಹೇಳಿರಿ" ಎಂದನು (೪೧–೪೨). ಆಗ ಆವಿರ್ಹೋತ್ರನೆಂಬ ಯೋಗಿಯು ಇಂತೆಂದನು: "ಕರ್ಮ, ಅಕರ್ಮ (ನಿಷಿದ್ಧಕರ್ಮ), ವಿಕರ್ಮ (ವಿಹಿತಕರ್ಮದ ಅನನುಷ್ಠಾನ) ಈ ಮೂರು ವೇದೈಕಗಮ್ಯವಾದದ್ದು, ಲೋಕವಿದಿತವಲ್ಲ. ವೇದವು ಈಶ್ವರ ಪ್ರಕಾಶಿತವಾದದ್ದು. ಅದರಿಂದ ಬೋಧ್ಯವಾದ ಕರ್ಮದ ವಿಷಯದಲ್ಲಿ ವಿದ್ವಾಂಸರೂ

---

1. ನೈಷ್ಕರ್ಮ್ಯ=ಕರ್ಮನಿವೃತ್ತಿಸಾಧ್ಯವಾದ ಜ್ಞಾನ.

ಪರೋಕ್ಷವಾದೋ ವೇದೋಽಯಂ ಬಾಲಾನಾಮನುಶಾಸನಮ್ ।
ಕರ್ಮಮೋಕ್ಷಾಯ ಕರ್ಮಾಣಿ ವಿಧತ್ತೇ ಹ್ಯಗದಂ ಯಥಾ ॥ ೪೪

ನಾಚರೇದ್ಯಸ್ತು ವೇದೋಕ್ತಂ ಸ್ವಯಮಜ್ಞೋಽಜಿತೇಂದ್ರಿಯಃ ।
ವಿಕರ್ಮಣಾ ಹ್ಯಧರ್ಮೇಣ ಮೃತ್ಯೋರ್ಮೃತ್ಯುಮುಪೈತಿ ಸಃ ॥ ೪೫

ವೇದೋಕ್ತಮೇವ ಕುರ್ವಾಣೋ ನಿಸ್ಸಂಗೋಽರ್ಪಿತಮೀಶ್ವರೇ ।
ನೈಷ್ಕರ್ಮ್ಯಾಂ ಲಭತೇ ಸಿದ್ಧಿಂ ರೋಚನಾರ್ಥಾ ಫಲಶ್ರುತಿಃ ॥ ೪೬

ಯ ಆಶು ಹೃದಯಗ್ರಂಥಿಂ ನಿರ್ಜಿಹೀರ್ಷುಃ ಪರಾತ್ಮನಃ ।
ವಿಧಿನೋಪಚರೇದ್ದೇವಂ ತಂತ್ರೋಕ್ತೇನ ಚ ಕೇಶವಮ್ ॥ ೪೭

ಸಹ ಮೂಢರಾಗುವುದುಂಟು (೪೩) ವೇದವಾದರೋ ಪರೋಕ್ಷವಾದನ್ನವಲಂಬಿಸುತ್ತದೆ. ಕರ್ಮಗಳಿಂದ ಬಿಡುಗಡೆಹೊಂದಲೆಂದು ಕರ್ಮವನ್ನು ವಿಧಿಸುತ್ತದೆ! ಬಾಲಕರಿಗೆ [2]ಔಷಧವನ್ನು ಕುಡಿಸಿದಂತೆ ಕರ್ಮಗಳ ವಿಧಾನವಿದು! (೪೪). (ಹಾಗಿದ್ದರೆ ಮೊದಲೇ ಕರ್ಮತ್ಯಾಗವನ್ನು ಮಾಡಬಹುದಲ್ಲ ಎಂದರೆ) ಅಜಿತೇಂದ್ರಿಯನಾದ ಮೂಢನು ವೇದೋಕ್ತಕರ್ಮವನ್ನು ತಾನಾಗಿಯೇ ತ್ಯಜಿಸಿದರೆ, ವಿಕರ್ಮದಿಂದ ಅಧರ್ಮ ಉಂಟಾಗಿ ಸಾವಿನಮೇಲೆ ಸಾವನ್ನು ಮತ್ತೆ ಮತ್ತೆ ಪಡೆಯುವನು (೪೫). ಫಲಾಸಕ್ತಿಯಿಲ್ಲದೆ ಈಶ್ವರಾರ್ಪಣಬುದ್ಧಿಯಿಂದ ವೇದೋಕ್ತಕರ್ಮವನ್ನಾಚರಿಸತಕ್ಕವನು ನೈಷ್ಕರ್ಮ್ಯಸಿದ್ಧಿಯನ್ನು ಪಡೆಯುವನು. ಕರ್ಮದಿಂದ ಫಲವಾಗುತ್ತದೆಯೆಂದು ವೇದದಲ್ಲಿ ಹೇಳಿರುವುದು [3]ಪ್ರರೋಚನೆಗಾಗಿ (೪೬). ಯಾವಾತನು ಸ್ವತಃ ಪರಮಾತ್ಮನೇ ಆಗಿದ್ದು ಜೀವಾತ್ಮನೆನಿಸಿರುವ ತನ್ನ ಹೃದಯ

1. ಆಗ ನೀನು ಬಾಲಕನಾದ್ದರಿಂದ ನಿನಗೆ ತಿಳಿಯುವುದಿಲ್ಲವೆಂದು ಸನಕಾದಿಋಷಿಗಳು ಉತ್ತರ ಹೇಳಲಿಲ್ಲ—ಎಂದು ಅಭಿಪ್ರಾಯ.

2. ಮುಖ್ಯಾರ್ಥವನ್ನು ಮುಚ್ಚಿಡುವುದಕ್ಕಾಗಿ ಅನ್ಯಥಾ ಹೇಳುವುದು ಪರೋಕ್ಷವಾದ. "ಪರೋಕ್ಷಪ್ರಿಯಾ ಇವ ಹಿ ದೇವಾಃ" ಕಲ್ಲುಸಕ್ಕರೆಯನ್ನು ಕೊಡುತ್ತೇನೆ, ಔಷಧವನ್ನು ಕುಡಿ— ಎಂದು ಬಾಲಕರಿಗೆ ಹೇಳುವಂತೆ. ಔಷಧಕ್ಕೆ ರೋಗನಿವಾರಣೆ ಫಲವೇ ಹೊರತು ಕಲ್ಲುಸಕ್ಕರೆಯಲ್ಲ.

3. ಫಲಾಪೇಕ್ಷೆಯಿಂದ ವೇದಾರ್ಥವನ್ನು ಚೆನ್ನಾಗಿ ವಿಚಾರ ಮಾಡುತ್ತಾನೆ. ಬ್ರಹ್ಮಜ್ಞಾನವೇ ಮಾನವನ ಮುಖ್ಯ ಗುರಿಯೆಂದೂ ಕರ್ಮಗಳು ಜ್ಞಾನಶೇಷಗಳೆಂದೂ ಸ್ವರ್ಗಾದಿ ಫಲಗಳು ಅನಿತ್ಯಗಳೆಂದೂ ತಿಳಿದು ನೈಷ್ಕರ್ಮ್ಯಸಿದ್ಧಿಯನ್ನು ಪಡೆಯುತ್ತಾನೆ.

ಲಬ್ಧಾನುಗ್ರಹ ಆಚಾರ್ಯಾತ್ ತೇನ ಸಂದರ್ಶಿತಾಗಮಃ ।
ಮಹಾಪುರುಷಮಭ್ಯರ್ಚೇನ್ಮೂರ್ತ್ಯಾಭಿಮತಯಾಽಽತ್ಮನಃ ॥ ೪೮

ಶುಚಿಃ ಸಮ್ಮುಖಮಾಸೀನಃ ಪ್ರಾಣಸಂಯಮನಾದಿಭಿಃ ।
ಪಿಂಡಂ ವಿಶೋಧ್ಯ ಸಂನ್ಯಾಸಕೃತರಕ್ಷೋಽರ್ಚಯೇದ್ಧರಿಮ್ ॥ ೪೯

ಅರ್ಚಾದೌ ಹೃದಯೇ ಚಾಪಿ ಯಥಾಲಬ್ಧೋಪಚಾರಕೈಃ ।
ದ್ರವ್ಯಕ್ಷಿತ್ಯಾತ್ಮಲಿಂಗಾನಿ ನಿಷ್ಪಾದ್ಯ ಪ್ರೋಕ್ಷ್ಯ ಚಾಸನಮ್ ॥ ೫೦

ಪಾದ್ಯಾದೀನುಪಕಲ್ಪ್ಯಾಥ ಸಂನಿಧಾಪ್ಯ ಸಮಾಹಿತಃ ।
ಹೃದಾದಿಭಿಃ ಕೃತನ್ಯಾಸೋ ಮೂಲಮಂತ್ರೇಣ ಚಾರ್ಚಯೇತ್ ॥ ೫೧

ಸಾಂಗೋಪಾಂಗಾಂ ಸಪಾರ್ಷದಾಂ ತಾಂ ತಾಂ ಮೂರ್ತಿಂ ಸ್ವಮಂತ್ರತಃ ।
ಪಾದ್ಯಾರ್ಘ್ಯಾಚಮನೀಯಾದ್ಯೈಃ ಸ್ನಾನವಾಸೋವಿಭೂಷಣೈಃ ॥ ೫೨

---

ಗ್ರಂಥಿಯೆಂಬ ಅಹಂಕಾರಬಂಧವನ್ನು ಶೀಘ್ರವಾಗಿ ಬಿಡಿಸಿಕೊಳ್ಳಬೇಕೆಂದು ಬಯಸುವನೋ ಅವನು ತಂತ್ರೋಕ್ತವಾದ ಮಾರ್ಗದಿಂದಲೂ ಸಹ ಕೇಶವನನ್ನು ಸೇವಿಸಬಹುದು (೪೭). ಆಚಾರ್ಯನ ಅನುಗ್ರಹವನ್ನು ಪಡೆದು ಆತನಿಂದ ತಂತ್ರ ಮಾರ್ಗವನ್ನರಿತು ತನಗೆ ಇಷ್ಟವಾದ ಮೂರ್ತಿಯನ್ನಿಟ್ಟುಕೊಂಡು ಮಹಾಪುರುಷನಾದ ಮಹಾವಿಷ್ಣುವನ್ನು ಅರ್ಚಿಸಬೇಕು. ಶುಚಿಯಾಗಿ ಮೂರ್ತಿಯ ಎದುರಿಗೆ ಕುಳಿತು ಪ್ರಾಣಾಯಾಮಾದಿಗಳಿಂದ ದೇಹವನ್ನು ಶೋಧಿಸಿಕೊಂಡು, ಕರನ್ಯಾಸಾದಿಗಳಿಂದ ದೇಹರಕ್ಷಣೆಯನ್ನು ಪಡೆದು, ಶ್ರೀಹರಿಯನ್ನು ಅರ್ಚಿಸಬೇಕು (೪೮–೪೯). ಯಥಾಲಬ್ಧವಾದ ಷೋಡಶೋಪಚಾರಾದಿಗಳಿಂದ ಪ್ರತಿಮೆಯಲ್ಲಿಯೂ ಹೃದಯದಲ್ಲಿಯೂ ಶ್ರೀಹರಿಯನ್ನು ಪೂಜಿಸಬೇಕು. ಅದಕ್ಕೆ ಮೊದಲು ಪುಷ್ಪಾದಿದ್ರವ್ಯಗಳನ್ನೂ ಭೂಮಿಯನ್ನೂ ತನ್ನನ್ನೂ ಮೂರ್ತಿಯನ್ನೂ ಶೋಧನಾದಿಗಳಿಂದ ಪೂಜಾಯೋಗ್ಯಗಳನ್ನಾಗಿ ಮಾಡಿಕೊಳ್ಳಬೇಕು. ಆಸನವನ್ನು ಪ್ರೋಕ್ಷಿಸತಕ್ಕದ್ದು (೫೦). ಪಾದ್ಯಾದಿಗಳಿಗೆ ತಕ್ಕ ಪಾತ್ರೆಗಳನ್ನಿಟ್ಟುಕೊಂಡು, ಹೃದಯದಲ್ಲಿ ಪೂಜಿತನಾದ ದೇವನನ್ನು ಪ್ರತಿಮೆಯಲ್ಲಿ ಧ್ಯಾನಿಸಿ, ಹೃದಯಶಿರಃಶಿಖಾದಿಮಂತ್ರಗಳಿಂದ ಕೃತನ್ಯಾಸನಾಗಿ ಮೂಲಮಂತ್ರದಿಂದ ಅರ್ಚಿಸಬೇಕು (೫೧). ಹೃದಯಾದ್ಯಂಗಗಳಿಂದಲೂ ಆಯುಧಭೂಷಣಾದ್ಯುಪಾಂಗಗಳಿಂದಲೂ ಸಹಿತವಾದ ಪರಿವಾರಸಮೇತ ಮೂರ್ತಿಯನ್ನು ಪಾದ್ಯ, ಅರ್ಘ್ಯ, ಆಚಮನೀಯಾದಿಗಳಿಂದಲೂ ಸ್ನಾನ

ಗಂಧಮಾಲ್ಯಾಕ್ಷತಸ್ರಗ್ಭಿರ್ಧೂಪದೀಪೋಪಹಾರಕೈಃ ।
ಸಾಂಗಂ ಸಂಪೂಜ್ಯ ವಿಧಿವತ್ ಸ್ತವೈಃ ಸ್ತುತ್ವಾ ನಮೇದ್ಧರಿಮ್ ॥ ೫೩

ಆತ್ಮಾನಂ ತನ್ಮಯಂ ಧ್ಯಾಯನ್ ಮೂರ್ತಿಂ ಸಂಪೂಜಯೇದ್ಧರೇಃ ।
ಶೇಷಾಮಾಧಾಯ ಶಿರಸಿ ಸ್ವಧಾಮ್ನ್ಯುದ್ವಾಸ್ಯ ಸತ್ಕೃತಮ್ ॥ ೫೪

ಏವಮಗ್ನ್ಯರ್ಕತೋಯಾದಾವತಿಥೌ ಹೃದಯೇ ಚ ಯಃ ।
ಯಜತೀಶ್ವರಮಾತ್ಮಾನಮಚಿರಾನ್ಮುಚ್ಯತೇ ಹಿ ಸಃ ॥ ೫೫

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ತೃತೀಯಾಧ್ಯಾಯಃ



---

ವಸ್ತ್ರವಿಭೂಷಣಗಳಿಂದಲೂ ಗಂಧ ಮಾಲ್ಯ ಅಕ್ಷತ ಪುಷ್ಪಮಾಲೆಗಳಿಂದಲೂ ಧೂಪ ದೀಪ ನೈವೇದ್ಯಗಳಿಂದಲೂ ತತ್ತನ್ಮಂತ್ರಗಳಿಂದಲೂ ವಿಧಿವತ್ತಾಗಿ ಸಂಪೂಜಿಸಿ ಸ್ತೋತ್ರಗಳಿಂದ ಸ್ತುತಿಸಿ ಶ್ರೀಹರಿಗೆ ನಮಸ್ಕರಿಸಬೇಕು (೫೨–೫೩). ತನ್ನನ್ನು ದೇವತಾಸ್ವರೂಪನೆಂದು ಧ್ಯಾನಿಸುತ್ತ ಶ್ರೀಹರಿಯ ಮೂರ್ತಿಯನ್ನು ಪೂಜಿಸಬೇಕು. ಅನಂತರ ನಿರ್ಮಾಲ್ಯವನ್ನು ಶಿರಸ್ಸಿನಲ್ಲಿ ಧರಿಸಿ, ಸಂಪೂಜಿತನಾದ ಭಗವಂತನನ್ನು ಸ್ವಸ್ಥಾನದಲ್ಲಿ ಉದ್ವಾಸನೆ ಮಾಡಬೇಕು (೫೪). ಈ ಪ್ರಕಾರವಾಗಿ ಅಗ್ನಿ, ಸೂರ್ಯ, ಜಲಾದಿಗಳಲ್ಲಿಯೂ ಅತಿಥಿಯಲ್ಲಿಯೂ ಹೃದಯದಲ್ಲಿಯೂ ಯಾವಾತನು ಆತ್ಮನಾದ ಈಶ್ವರನನ್ನು ಅರ್ಚಿಸುತ್ತಾನೋ ಆತನು ಶೀಘ್ರದಲ್ಲಿ ಮುಕ್ತನಾಗುವನು" (೫೫).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಮೂರನೆಯ ಅಧ್ಯಾಯ



*

# ಚತುರ್ಥಾಧ್ಯಾಯಃ

ರಾಜೋವಾಚ—

ಯಾನಿ ಯಾನೀಹ ಕರ್ಮಾಣಿ ಯೈರ್ಯೈಃ ಸ್ವಚ್ಛಂದಜನ್ಮಭಿಃ ।
ಚಕ್ರೇ ಕರೋತಿ ಕರ್ತಾ ವಾ ಹರಿಸ್ತಾನಿ ಬ್ರುವಂತು ನಃ ॥ ೧

ದ್ರುಮಿಲ ಉವಾಚ—

ಯೋ ವಾ ಅನಂತಸ್ಯ ಗುಣಾನನಂತಾ-
ನನುಕ್ರಮಿಷ್ಯನ್ ಸ ತು ಬಾಲಬುದ್ಧಿಃ ।
ರಜಾಂಸಿ ಭೂಮೇರ್ಗಣಯೇತ್ ಕಥಂಚಿತ್
ಕಾಲೇನ ನೈವಾಖಿಲಶಕ್ತಿಧಾಮ್ನಃ ॥ ೨

## ಅಧ್ಯಾಯ ೪

ನಾರಾಯಣಋಷಿಯ ಅವತಾರ. ಅವನ ತಪಸ್ಸಿನ ಭಂಗಕ್ಕೆ ಮನ್ಮಥನ ಪ್ರಯತ್ನ. ಊರ್ವಶಿಯ ಉತ್ಪತ್ತಿ. ಹಂಸ, ದತ್ತಾತ್ರೇಯ, ಸನತ್ಕುಮಾರ, ಋಷಭ, ಮತ್ಸ್ಯಾದ್ಯವತಾರಗಳ ಸಂಕ್ಷಿಪ್ತ ನಿರೂಪಣೆ.

ನಿಮಿರಾಜನು ಆ ಯೋಗಿಗಳನ್ನು ಕುರಿತು “ಪೂಜ್ಯರೆ, ಶ್ರೀಹರಿಯು ಸ್ವೇಚ್ಛೆಯಿಂದ ನಡೆಸುವ ಯಾವ ಯಾವ ಅವತಾರಗಳಿಂದ ಯಾವ ಯಾವ ಕಾರ್ಯಗಳನ್ನು ಹಿಂದೆ ಆಚರಿಸಿದನು, ಈಗ ಆಚರಿಸುತ್ತಿದ್ದಾನೆ, ಮುಂದೆ ಆಚರಿಸುವನು? ಈ ವಿಷಯವನ್ನು ಕುರಿತು ನಮಗೆ ಹೇಳೋಣವಾಗಲಿ” ಎಂದನು (೧). ಆಗ ದ್ರುಮಿಲನೆಂಬ ಯೋಗಿಯು ಇಂತೆಂದನು : “ಯಾವನು ಅನಂತನಾದ ಭಗವಂತನ ಅನಂತಗುಣಮಹಿಮೆಗಳನ್ನು ಎಣಿಸಲು ಬಯಸುತ್ತಾನೋ ಅವನು ಮಂದಬುದ್ಧಿಯೇ ಸರಿ. ಭೂಮಿಯಲ್ಲಿರುವ ಧೂಳಿನ ಕಣಗಳು ಎಷ್ಟೆಂಬುದನ್ನಾದರೂ ಒಂದುವೇಳೆ ಎಣಿಸಲು ಸಾಧ್ಯವಾದೀತು, ಆದರೆ ಅಖಿಲಶಕ್ತಿಗಳ ಕೇಂದ್ರನಾದ ವಿಷ್ಣುವಿನ [1]ಗುಣ

---

1. “ವಿಷ್ಣೋರ್ನುಕಂ ವೀರ್ಯಾಣಿ ಪ್ರಾವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ” —ಋಗ್ವೇದ

ಭೂತೈರ್ಯದಾ ಪಂಚಭಿರಾತ್ಮಸೃಷ್ಟೈಃ
ಪುರಂ ವಿರಾಜಂ ವಿರಚಯ್ಯ ತಸ್ಮಿನ್ ।
ಸ್ವಾಂಶೇನ ವಿಷ್ಟಃ ಪುರುಷಾಭಿಧಾನ-
ಮವಾಪ ನಾರಾಯಣ ಆದಿದೇವಃ ॥ ೩

ಯತ್ಕಾಯ ಏಷ ಭುವನತ್ರಯಸಂನಿವೇಶೋ
ಯಸ್ಯೇಂದ್ರಿಯೈಸ್ತನುಭೃತಾಮುಭಯೇಂದ್ರಿಯಾಣಿ ।
ಜ್ಞಾನಂ ಸ್ವತಃ ಶ್ವಸನತೋ ಬಲಮೋಜ ಈಹಾ
ಸತ್ತ್ವಾದಿಭಿಃ ಸ್ಥಿತಿಲಯೋದ್ಭವ ಆದಿಕರ್ತಾ ॥ ೪

ಆದಾವಭೂಚ್ಛತಧೃತೀ ರಜಸಾಸ್ಯ ಸರ್ಗೇ
ವಿಷ್ಣುಃ ಸ್ಥಿತೌ ಕ್ರತುಪತಿರ್ದ್ವಿಜಧರ್ಮಸೇತುಃ ।
ರುದ್ರೋಽಪ್ಯಯಾಯ ತಮಸಾ ಪುರುಷಃ ಸ ಆದ್ಯ
ಇತ್ಯುದ್ಭವಸ್ಥಿತಿಲಯಾಃ ಸತತಂ ಪ್ರಜಾಸು ॥ ೫

---

ಗಳನ್ನು ಎಣಿಸಲಾಗುವುದಿಲ್ಲ (೨). ತಾನು ಸೃಷ್ಟಿಸಿದ ಪಂಚಭೂತಗಳಿಂದ ವಿರಾಟ್ ಎಂಬ ಬ್ರಹ್ಮಾಂಡಪುರವನ್ನು ನಿರ್ಮಿಸಿ, ಆದಿದೇವನಾದ ನಾರಾಯಣನು ಆ ಪುರವನ್ನು ತನ್ನ ಒಂದಂಶದಿಂದ ಪ್ರವೇಶಿಸಿ ವಿರಾಟ್ ಪುರುಷನೆನಿಸಿದನು (೩). ಭುವನ-ತ್ರಯಗಳೇ ಈ ವಿರಾಟ್‌ಪುರುಷನ ಶರೀರ. ಆತನ ಇಂದ್ರಿಯಗಳಿಂದ ಪ್ರಾಣಿಗಳ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಪ್ರವರ್ತಿಸುತ್ತವೆ. ಆತನ ಸ್ವರೂಪಸ್ಥಿತಿಯಿಂದಲೇ ಪ್ರಾಣಿಗಳಲ್ಲಿ ಜ್ಞಾನವು ಉತ್ಪನ್ನವಾಗುತ್ತದೆ. ಪ್ರಾಣವಾಯುವಿನಿಂದ ದೇಹಶಕ್ತಿಯೂ ಇಂದ್ರಿಯಶಕ್ತಿಯೂ ಕ್ರಿಯಾಶಕ್ತಿಯೂ ಹುಟ್ಟುತ್ತವೆ. ಈ ಆದಿಕರ್ತನೇ ಸತ್ತ್ವರಜಸ್ತಮೋಗುಣಗಳಿಂದ ವಿಶ್ವದ ಸ್ಥಿತಿ-ಉತ್ಪತ್ತಿ-ಲಯಗಳನ್ನು ಮಾಡುತ್ತಾನೆ (೪). ಈ ಆದಿಕರ್ತನ ರಜೋಗುಣದಿಂದ ವಿಶ್ವದ ಸೃಷ್ಟಿಕಾರ್ಯವನ್ನು ನಡೆಸುವುದಕ್ಕಾಗಿ ಬ್ರಹ್ಮನು ಅವತರಿಸಿದನು. ಸತ್ತ್ವಗುಣದಿಂದ ವಿಶ್ವದ ಸ್ಥಿತಿಗಾಗಿ ಯಜ್ಞಪತಿಯೂ ದ್ವಿಜಧರ್ಮಗಳ ರಕ್ಷಕನೂ ಆದ ವಿಷ್ಣುವು ಅವತರಿಸಿದನು. ವಿಶ್ವದ ಪ್ರಳಯಕ್ಕಾಗಿ ತಮೋಗುಣದಿಂದ ರುದ್ರನು ಅವತರಿಸಿದನು. ಹೀಗೆ

ಧರ್ಮಸ್ಯ ದಕ್ಷದುಹಿತರ್ಯಜನಿಷ್ಟ ಮೂರ್ತ್ಯಾಂ
ನಾರಾಯಣೋ ನರ ಋಷಿಪ್ರವರಃ ಪ್ರಶಾಂತಃ ।
ನೈಷ್ಕರ್ಮ್ಯಲಕ್ಷಣಮುವಾಚ ಚಚಾರ ಕರ್ಮ
ಯೋಽದ್ಯಾಪಿ ಚಾಸ್ತ ಋಷಿವರ್ಯನಿಷೇವಿತಾಂಘ್ರಿಃ ॥ ೬

ಇಂದ್ರೋ ವಿಶಂಕ್ಯ ಮಮ ಧಾಮ ಜಿಘೃಕ್ಷತೀತಿ
ಕಾಮಂ ನ್ಯಯುಂಕ್ತ ಸಗಣಂ ಸ ಬದರ್ಯುಪಾಖ್ಯಮ್ ।
ಗತ್ವಾಪ್ಸರೋಗಣವಸಂತಸುಮಂದವಾತೈಃ
ಸ್ತ್ರೀ ಪ್ರೇಕ್ಷಣೇಷುಭಿರವಿಧ್ಯದತನ್ಮಹಿಜ್ಞಃ ॥ ೭

ವಿಜ್ಞಾಯ ಶಕ್ರಕೃತಮಕ್ರಮಮಾದಿದೇವಃ
ಪ್ರಾಹ ಪ್ರಹಸ್ಯ ಗತವಿಸ್ಮಯ ಏಜಮಾನಾನ್ ।

---

ಈ ಬ್ರಹ್ಮ, ವಿಷ್ಣು, [1]ರುದ್ರರಿಂದ ಸೃಷ್ಟಿಸ್ಥಿತಿಲಯಗಳು ಯಾರ ಪ್ರೇರಣೆಯಿಂದ ನಡೆಯುತ್ತವೆಯೋ ಆತನೇ ಆದಿಕರ್ತನಾದ ಪರಮೇಶ್ವರ (೫). ಅಲ್ಲದೆ ಭಗವಂತನು ದಕ್ಷಪುತ್ರಿಯೂ ಧರ್ಮನ ಪತ್ನಿಯೂ ಆದ ಮೂರ್ತಿ ಎಂಬವಳಲ್ಲಿ ನಾರಾಯಣ, ನರ—ಎಂದು ಎರಡು ರೂಪಗಳಿಂದ ಅವತರಿಸಿದನು. ಈ ಅವತಾರ ದಲ್ಲಿ ಋಷಿಪ್ರವರನೂ ಪ್ರಶಾಂತನೂ ಆಗಿ ನೈಷ್ಕರ್ಮ್ಯವೆಂಬ ಆತ್ಮಸ್ವರೂಪದ ಜ್ಞಾನಕ್ಕೆ ಕಾರಣವಾದ ಕರ್ಮ ಯಾವುದೆಂಬುದನ್ನು ನಾರದಾದಿಗಳಿಗೆ ಬೋಧಿಸಿ ದನು. ಮತ್ತು ಋಷಿವರ್ಯರಿಂದ ಪೂಜಿತಪಾದನಾಗಿ ಆ ಕರ್ಮವನ್ನಾಚರಿಸುತ್ತ ಈಗಲೂ (ಬದರಿಕಾಶ್ರಮದಲ್ಲಿ) ಇದ್ದಾನೆ (೬). "ಈ ನಾರಾಯಣ ಋಷಿಯು (ತಪಸ್ಸುಮಾಡಿ) ನನ್ನ ಸ್ಥಾನವನ್ನು ಕಿತ್ತುಕೊಳ್ಳಲು ಬಯಸಿದ್ದಾನೆ"ಂದು ಊಹಿಸಿ ದೇವೇಂದ್ರನು ಒಮ್ಮೆ ತಪೋವಿಘ್ನಕ್ಕಾಗಿ ಮನ್ಮಥನನ್ನು ನೇಮಿಸಿದನು. ಆ ಮನ್ಮಥನು ಅಪ್ಸರೆಯರು ಮತ್ತು ವಸಂತ ಮಂದಾನಿಲರೊಡನೆ ಬದರಿಗೆ ಹೋಗಿ ಸ್ತ್ರೀಯರ ಕಟಾಕ್ಷಗಳೆಂಬ ಬಾಣಗಳಿಂದ ನಾರಾಯಣ ಋಷಿಯನ್ನು ಹೊಡೆದನು! ಮನ್ಮಥನಿಗೆ ಆತನ ಮಹಿಮೆ ಗೊತ್ತಿರಲಿಲ್ಲ! (೭). ಆದಿದೇವನು "ಇದೆಲ್ಲವೂ

---

1. ತ್ರಿಮೂರ್ತಿಗಳೂ ಆದಿಕರ್ತನ ಅವತಾರಗಳೆಂದು ಹೇಳಿರುವುದು ಗಮನಾರ್ಹ. ವಿಷ್ಣುವಿಗೂ ಮೂಲಭೂತನಾದ ಈಶ್ವರನನ್ನು ವಿಷ್ಣು, ಅನಂತ, ಅಚ್ಯುತ, ನಾರಾಯಣ, ಭಗವಾನ್ ಮುಂತಾದ ಶಬ್ದಗಳಿಂದ ವ್ಯವಹರಿಸಲಾಗಿದೆ.

ಮಾ ಭೈಷ್ಟ ಭೋ ಮದನ ಮಾರುತ ದೇವವಧ್ವೋ
ಗೃಹ್ಣೀತ ನೋ ಬಲಿಮಶೂನ್ಯಮಿಮಂ ಕುರುಧ್ವಮ್ ॥ ೮
ಇತ್ಥಂ ಬ್ರುವತ್ಯಭಯದೇ ನರದೇವ ದೇವಾಃ
ಸವ್ರೀಡನಮ್ರಶಿರಸಃ ಸಘೃಣಂ ತಮೂಚುಃ ।
ನೈತದ್ವಿಭೋ ತ್ವಯಿ ಪರೇಽವಿಕೃತೇ ವಿಚಿತ್ರಂ
ಸ್ವಾರಾಮಧೀರನಿಕರಾನತಪಾದಪದ್ಮೇ ॥ ೯
ತ್ವಾಂ ಸೇವತಾಂ ಸುರಕೃತಾ ಬಹವೋಽಂತರಾಯಾಃ
ಸ್ವೌಕೋ ವಿಲಂಘ್ಯ ಪರಮಂ ವ್ರಜತಾಂ ಪದಂ ತೇ ।
ನಾನ್ಯಸ್ಯ ಬರ್ಹಿಷಿ ಬಲೀನ್ ದದತಃ ಸ್ವಭಾಗಾನ್
ಧತ್ತೇ ಪದಂ ತ್ವಮವಿತಾ ಯದಿ ವಿಘ್ನಮೂರ್ಧ್ನಿ ॥ ೧೦

---

ದೇವೇಂದ್ರನ ಚೇಷ್ಟೆ" ಎಂದರಿತು ನಕ್ಕುಬಿಟ್ಟನು. ಅನಂತರ ಹೆದರಿ ನಡುಗುತ್ತಿದ್ದ ಮನ್ಮಥಪರಿವಾರವನ್ನು ನೋಡಿ, ಸ್ವಲ್ಪವೂ ಗರ್ವವನ್ನು ತಳೆಯದೆ, "ಹೇ ಸಮರ್ಥ-ಮನ್ಮಥ! ಮಾರುತನೆ, ದೇವಸ್ತ್ರೀಯರೆ, ಹೆದರಬೇಡಿರಿ. ನಮ್ಮ ಆತಿಥ್ಯವನ್ನು ಸ್ವೀಕರಿಸಿರಿ. ಈ ಆಶ್ರಮವು (ಅತಿಥಿ ಸತ್ಕಾರದಿಂದ) ಸಾರ್ಥಕವಾಗಲಿ" ಎಂದು ಹೇಳಿದನು (೮). ವಿದೇಹರಾಜ, ಶ್ರೀ ನಾರಾಯಣನು ಅಭಯಪ್ರದನಾಗಿ ಈ ರೀತಿ ಹೇಳಲಾಗಿ ಮನ್ಮಥಾದಿದೇವತೆಗಳು ನಾಚಿಕೆಯಿಂದ ತಲೆಬಾಗಿಸಿ, ಆತನ ಕಾರುಣ್ಯವನ್ನು ಬಯಸುತ್ತ, ಹೀಗೆ ನುಡಿದರು: "ಹೇ ವಿಭೋ, ಆತ್ಮಾರಾಮರಾದ ಧೀರರ ನಿಕರವೇ ನಿನ್ನ ಅಡಿದಾವರೆಗಳಿಗೆ ತಲೆಬಾಗುತ್ತದೆ. ಮಾಯೆಗೆ ಪರನಾಗಿರುವ ನೀನು ವಿಕಾರಗೊಳ್ಳದಿದ್ದರೆ ಅಚ್ಚರಿ ಏನಿದೆ? (೯). ನಿನ್ನನ್ನು ಸೇವಿಸತಕ್ಕ ಭಕ್ತರಿಗೆ ದೇವತೆಗಳಿಂದ ಬಹಳ ವಿಘ್ನಗಳುಂಟಾಗುತ್ತವೆ. ಏಕೆಂದರೆ, ತಮ್ಮ ಸ್ಥಾನವಾದ ಸ್ವರ್ಗವನ್ನೂ ಮೀರಿ ನಿನ್ನ ಪರಮಪದವನ್ನು ಸೇರಿಕೊಳ್ಳುತ್ತಾರೆಂದು ದೇವತೆಗಳು (ಅಸೂಯೆಯಿಂದ) ಹಾಗೆ ಮಾಡುತ್ತಾರೆ. ಹಾಗಲ್ಲದೆ, ನಿನ್ನನ್ನು ಸೇವಿಸದೆ, ಯಜ್ಞದಲ್ಲಿ ಪುರೋಡಾಶಾದಿಸ್ವಭಾಗಗಳನ್ನು ತಮಗೆ ಸಲ್ಲಿಸತಕ್ಕವರಿಗೆ ಇಂದ್ರಾದಿಗಳು ವಿಘ್ನವನ್ನೊಡ್ಡುವುದಿಲ್ಲ. ರಕ್ಷಕನಾಗಿ ನೀನಿರುವಾಗ ನಿನ್ನ ಭಕ್ತನು ವಿಘ್ನಗಳ ತಲೆಯಮೇಲೆ ಹೆಜ್ಜೆಯೂರಿ ಸಾಗುತ್ತಾನೆ! (೧೦).

ಕ್ಷುತ್ತೃಟ್‌ತ್ರಿಕಾಲಗುಣಮಾರುತಜೈಹ್ವ್ಯಶೈಶ್ನ್ಯಾ-
ನಸ್ಮಾನಪಾರಜಲಧೀನತಿತೀರ್ಯ ಕೇಚಿತ್ ।
ಕ್ರೋಧಸ್ಯ ಯಾಂತಿ ವಿಫಲಸ್ಯ ವಶಂ ಪದೇ ಗೋ-
ರ್ಮಜ್ಜಂತಿ ದುಶ್ಚರತಪಶ್ಚ ವೃಥೋತ್ಸೃಜಂತಿ ॥ ೧೧

ಇತಿ ಪ್ರಗೃಣತಾಂ ತೇಷಾಂ ಸ್ತ್ರಿಯೋಽತ್ಯದ್ಭುತದರ್ಶನಾಃ ।
ದರ್ಶಯಾಮಾಸ ಶುಶ್ರೂಷಾಂ ಸ್ವರ್ಚಿತಾಃ ಕುರ್ವತೀರ್ವಿಭುಃ ॥ ೧೨

ತೇ ದೇವಾನುಚರಾ ದೃಷ್ಟ್ವಾ ಸ್ತ್ರಿಯಃ ಶ್ರೀರಿವ ರೂಪಿಣೀಃ ।
ಗಂಧೇನ ಮುಮುಹುಸ್ತಾಸಾಂ ರೂಪೌದಾರ್ಯಹತಶ್ರಿಯಃ ॥ ೧೩

ತಾನಾಹ ದೇವದೇವೇಶಃ ಪ್ರಣತಾನ್ ಪ್ರಹಸನ್ನಿವ ।
ಆಸಾಮೇಕತಮಾಂ ವೃಙ್ಧ್ವಂ ಸವರ್ಣಾಂ ಸ್ವರ್ಗಭೂಷಣಾಮ್ ॥ ೧೪

---

(ನಿನ್ನ ಭಕ್ತರಲ್ಲದ ತಪಸ್ವಿಗಳಲ್ಲಿ ಕೆಲವರು ಕಾಮವಶರಾಗುತ್ತಾರೆ. ಅವರಿಗೆ ಇಂದ್ರಿಯಸುಖವಾದರೂ ಲಭಿಸುತ್ತದೆ. ಕೆಲವರು ಕ್ರೋಧವಶರಾಗುತ್ತಾರೆ. ಅವರಿಗೆ ಯಾವ ಪ್ರಯೋಜನವೂ ಇಲ್ಲ. ಹೇಗೆಂದರೆ), ಹಸಿವು, ಬಾಯಾರಿಕೆ, ಋತುತ್ರಯದಲ್ಲಿ ಸಂಭವಿಸುವ ಚಳಿ–ಸೆಕೆ–ಮಳೆ, ಗಾಳಿ, ಜಿಹ್ವಾಚಾಪಲ್ಯ, ಗುಹ್ಯೇಂದ್ರಿಯಚಾಪಲ್ಯ—ಇತ್ಯಾದಿಗಳಿಂದ ಮಹಾಸಾಗರಗಳಂತಿರುವ ನಮ್ಮನ್ನು ದಾಟಿಯೂ ಸಹ ಕೆಲವರು ವ್ಯರ್ಥವಾಗಿ ಕ್ರೋಧಕ್ಕೆ ವಶರಾಗುತ್ತಾರೆ. ಸಮುದ್ರವನ್ನು ದಾಟಿದವರು ಗೋವಿನ ಹೆಜ್ಜೆಯಷ್ಟು ನೀರಿನಲ್ಲಿ ಮುಳುಗಿಬಿಡುತ್ತಾರೆ! ದುಶ್ಚರವಾದ ತಮ್ಮ ತಪಸ್ಸಿನ ಶಕ್ತಿಯನ್ನು ಸುಮ್ಮನೆ ಹಾಳು ಮಾಡಿಕೊಳ್ಳುತ್ತಾರೆ!" ಎಂದು ಸ್ತುತಿಸಿದರು (೧೧). ಆಗ ವಿಭುವಾದ ನಾರಾಯಣ ಋಷಿಯು ಮನ್ಮಥಾದಿಗಳಿಗೆ ಸೇವೆಯನ್ನು ಮಾಡುವುದಕ್ಕಾಗಿ ಅದ್ಭುತ ಸೌಂದರ್ಯಶಾಲಿನಿಯರೂ ಅಲಂಕಾರಭೂಷಿತರೂ ಆದ ಸ್ತ್ರೀಯರನ್ನು (ಯೋಗಶಕ್ತಿಯಿಂದ) ನಿರ್ಮಿಸಿದನು (೧೨). ಆ ಸ್ತ್ರೀಯರಲ್ಲಿ ಒಬ್ಬೊಬ್ಬರೂ ಸಾಕ್ಷಾತ್ ಲಕ್ಷ್ಮೀದೇವಿಯಂತೆ ರೂಪವತಿಯರಾಗಿದ್ದರು. ದೇವಾನುಚರರಾದ ಮನ್ಮಥಾದಿಗಳು ಆ ಸ್ತ್ರೀಯರ ರೂಪಾತಿಶಯವನ್ನು ಕಂಡು ಕಾಂತಿಹೀನರಾದರು. ಸುತ್ತಲೂ ಹರಡಿದ ಸೌಗಂಧ್ಯದಿಂದ ಮುಗ್ಧರಾದರು (೧೩). ಸುರಸೇವಕರಾದ ಮನ್ಮಥಾದಿಗಳು ನಾರಾಯಣ ಋಷಿಗೆ ನಮಸ್ಕರಿಸಿದರು. ಆಗ ದೇವದೇವೇಶ್ವರನು ಮುಗುಳ್ನಗೆ ಬೀರುತ್ತ

ಓಮಿತ್ಯಾದೇಶಮಾದಾಯ ನತ್ವಾ ತಂ ಸುರವಂದಿನಃ ।
ಉರ್ವಶೀಮಪ್ಸರಃಶ್ರೇಷ್ಠಾಂ ಪುರಸ್ಕೃತ್ಯ ದಿವಂ ಯಯುಃ ॥ ೧೫

ಇಂದ್ರಾಯಾನಮ್ಯ ಸದಸಿ ಶೃಣ್ವತಾಂ ತ್ರಿದಿವೌಕಸಾಮ್ ।
ಊಚುರ್ನಾರಾಯಣಬಲಂ ಶಕ್ರಸ್ತತ್ರಾಸ ವಿಸ್ಮಿತಃ ॥ ೧೬

ಹಂಸಸ್ವರೂಪ್ಯವದದಚ್ಯುತ ಆತ್ಮಯೋಗಂ
ದತ್ತಃ ಕುಮಾರ ಋಷಭೋ ಭಗವಾನ್ ಪಿತಾ ನಃ ।
ವಿಷ್ಣುಃ ಶಿವಾಯ ಜಗತಾಂ ಕಲಯಾವತೀರ್ಣ-
ಸ್ತೇನಾಹೃತಾ ಮಧುಭಿದಾ ಶ್ರುತಯೋ ಹಯಾಸ್ಯೇ ॥ ೧೭

ಗುಪ್ತೋಽಪ್ಯಯೇ ಮನುರಿಲೌಷಧಯಶ್ಚ ಮಾತ್ಸ್ಯೇ
ಕ್ರೌಡೇ ಹತೋ ದಿತಿಜ ಉದ್ಧರತಾಂಭಸಃ ಕ್ಷ್ಮಾಮ್ ।
ಕೌರ್ಮೇ ಧೃತೋಽದ್ರಿರಮೃತೋನ್ಮಥನೇ ಸ್ವಪೃಷ್ಠೇ
ಗ್ರಾಹಾತ್ ಪ್ರಪನ್ನಮಿಭರಾಜಮಮುಂಚದಾರ್ತಮ್ ॥ ೧೮

---

ಅವರೆಲ್ಲರನ್ನೂ ಕುರಿತು "ಈ ಸ್ತ್ರೀಯರಲ್ಲಿ ಅನುರೂಪಳೂ ಸ್ವರ್ಗಕ್ಕೆ ಭೂಷಣ ಪ್ರಾಯಳೂ ಆದ ಒಬ್ಬಳನ್ನು ಆರಿಸಿಕೊಂಡು ನಿಮ್ಮೊಡನೆ ಕರೆದೊಯ್ಯಿರಿ" ಎಂದು ಹೇಳಿದನು (೧೪). ಅವರು ಆಗಲೆಂದು ನಾರಾಯಣ ಮುನಿಯ ಆಜ್ಞೆಯನ್ನು ಮನ್ನಿಸಿ, ಅಪ್ಸರಃಶ್ರೇಷ್ಠಳಾದ ಉರ್ವಶಿಯನ್ನು ಕರೆದುಕೊಂಡು ಸ್ವರ್ಗಕ್ಕೆ ಪ್ರಯಾಣ ಮಾಡಿದರು (೧೫). ಇಂದ್ರನ ಸಭೆಗೆ ಹೋಗಿ ದೇವತೆಗಳೆದುರಿಗೆ ನಾರಾಯಣಮುನಿಯ ತಪೋಬಲವನ್ನು ವರ್ಣಿಸಿದರು. ಅದನ್ನು ಕೇಳಿ ಇಂದ್ರನು ಆಶ್ಚರ್ಯಪಡುತ್ತ ಹೆದರಿಹೋದನು (೧೬). ಚ್ಯುತಿರಹಿತನಾದ ವಿಷ್ಣುವು ಜಗತ್ತಿನ ಕ್ಷೇಮಕ್ಕಾಗಿ ನಾನಾ ಅಂಶಾವತಾರಗಳನ್ನು ಮಾಡಿದ್ದಾನೆ. ಅವನು ಹಂಸನಾಗಿ, ದತ್ತಾತ್ರೇಯನಾಗಿ, ಸನತ್ಕುಮಾರನಾಗಿ, ನಮ್ಮ ತಂದೆಯಾದ ಭಗವಾನ್ ಋಷಭನಾಗಿ ಆತ್ಮಯೋಗವನ್ನು ಉಪದೇಶಿಸಿದ್ದಾನೆ. ಹಯಗ್ರೀವಾವತಾರದಲ್ಲಿ ಮಧುದೈತ್ಯನನ್ನು ಸಂಹರಿಸಿ ಶ್ರುತಿಗಳನ್ನು ಬಿಡಿಸಿಕೊಂಡು ಬಂದಿದ್ದಾನೆ (೧೭). ಪ್ರಳಯಕಾಲದಲ್ಲಿ ಮತ್ಸ್ಯಾವತಾರಮಾಡಿ ಮನುವನ್ನೂ ಭೂಮಿಯನ್ನೂ ಓಷಧಿ ಗಳನ್ನೂ ರಕ್ಷಿಸಿದ್ದಾನೆ. ವರಾಹಾವತಾರದಲ್ಲಿ ಸಮುದ್ರಜಲದಿಂದ ಭೂಮಿಯನ್ನು ಎತ್ತಿತರುವಾಗ (ಹಿರಣ್ಯಾಕ್ಷನೆಂಬ) ದೈತ್ಯನನ್ನು ವಧಿಸಿದ್ದಾನೆ. ಅಮೃತಮಂಥನ

ಸಂಸ್ತುನ್ವತೋಽಬ್ಧಿಪತಿತಾನ್ ಶ್ರಮಣಾನೃಷೀಂಶ್ಚ
ಶಕ್ರಂ ಚ ವೃತ್ರವಧತಸ್ತಮಸಿ ಪ್ರವಿಷ್ಟಮ್ ।
ದೇವಸ್ತ್ರಿಯೋಽಸುರಗೃಹೇ ಪಿಹಿತಾ ಅನಾಥಾ
ಜಘ್ನೇಽಸುರೇಂದ್ರಮಭಯಾಯ ಸತಾಂ ನೃಸಿಂಹೇ ॥ ೧೯

ದೇವಾಸುರೇ ಯುಧಿ ಚ ದೈತ್ಯಪತೀನ್ ಸುರಾರ್ಥೇ
ಹತ್ವಾಂತರೇಷು ಭುವನಾನ್ಯದಧಾತ್ ಕಲಾಭಿಃ ।
ಭೂತ್ವಾಥ ವಾಮನ ಇಮಾಮಹರದ್ಬಲೇಃ ಕ್ಷ್ಮಾಂ
ಯಾಚ್ಞಾಚ್ಛಲೇನ ಸಮದಾದದಿತೇಃ ಸುತೇಭ್ಯಃ ॥ ೨೦

ನಿಃಕ್ಷತ್ರಿಯಾಮಕೃತ ಗಾಂ ಚ ತ್ರಿಃ ಸಪ್ತಕೃತ್ವೋ
ರಾಮಸ್ತು ಹೈಹಯಕುಲಾಪ್ಯಯಭಾರ್ಗವಾಗ್ನಿಃ ।
ಸೋಽಬ್ಧಿಂ ಬಬಂಧ ದಶವಕ್ತ್ರಮಹನ್ ಸಲಂಕಂ
ಸೀತಾಪತಿರ್ಜಯತಿ ಲೋಕಮಲಘ್ನಕೀರ್ತಿಃ ॥ ೨೧

---

ವಾಗುವಾಗ ಕೂರ್ಮಾವತಾರಮಾಡಿ ಮಂದರಾದ್ರಿಯನ್ನು ತನ್ನ ಬೆನ್ನಮೇಲೆ ಧರಿಸಿದ್ದಾನೆ ತನ್ನ ಅಂಶಾವತಾರಮಾಡಿ ಆರ್ತನಾದ ಗಜೇಂದ್ರನನ್ನು ಮೊಸಳೆಯಿಂದ ಬಿಡಿಸಿದ್ದಾನೆ (೧೮). ಅಲ್ಲದೆ ಸಮುದ್ರದಲ್ಲಿ ಬಿದ್ದು ಸ್ತುತಿಸುತ್ತಿದ್ದ [1]ವಾಲಖಿಲ್ಯಋಷಿಗಳನ್ನು ಆಪತ್ತಿನಿಂದ ಪಾರುಮಾಡಿದನು. ವೃತ್ರವಧೆಯನ್ನು ಮಾಡಿದ್ದರಿಂದ ಬ್ರಹ್ಮಹತ್ಯಾದೋಷದಲ್ಲಿ ಸಿಕ್ಕಿಕೊಂಡಿದ್ದ ಇಂದ್ರನನ್ನು ರಕ್ಷಿಸಿದನು. ಅಲ್ಲದೆ ಅಸುರರ ಗೃಹಗಳಲ್ಲಿ ಬಂದಿಗಳಾಗಿದ್ದ ದೇವಸ್ತ್ರೀಯರನ್ನು ನಾನಾ ಅಂಶಾವತಾರಗಳಿಂದ ಬಿಡಿಸಿದನು. ನೃಸಿಂಹಾವತಾರದಲ್ಲಿ ಅಸುರೇಂದ್ರನಾದ ಹಿರಣ್ಯಕಶಿಪುವನ್ನು ಸಂಹರಿಸಿದನು (೧೯). ದೇವಾಸುರಸಂಗ್ರಾಮಗಳಲ್ಲಿ ದೇವತೆಗಳಿಗೋಸ್ಕರ ಮಹಾದೈತ್ಯರನ್ನು ಕೊಂದಿದ್ದಾನಲ್ಲದೆ, ಸಕಲ ಮನ್ವಂತರಗಳಲ್ಲಿಯೂ ತನ್ನ ವಿವಿಧ ಕಲಾವತಾರಗಳಿಂದ ಲೋಕಗಳನ್ನು ಪಾಲಿಸಿದ್ದಾನೆ. ವಾಮನನಾಗಿ ಬಂದು ಬೇಡುವ ನೆವದಿಂದ, ಭೂಮಿಯನ್ನು ಬಲಿಚಕ್ರವರ್ತಿಯಿಂದ ಕಿತ್ತುಕೊಂಡು ಅದಿತಿಪುತ್ರರಾದ ದೇವತೆಗಳಿಗೆ ಅರ್ಪಿಸಿದ್ದಾನೆ (೨೦). ಹೈಹಯಕುಲದ ವಿಧ್ವಂಸಕ್ಕಾಗಿ ಬಂದ ಭಾರ್ಗವರೂಪ ಅಗ್ನಿಯೆನಿಸಿದ ಪರಶುರಾಮನಾಗಿ ಇಪ್ಪತ್ತೊಂದು ಸಲ

---

1. ಅನುಬಂಧವನ್ನು ನೋಡಿ–೧

ಭೂಮೇರ್ಭರಾವತರಣಾಯ ಯದುಷ್ವಜನ್ಮಾ
ಜಾತಃ ಕರಿಷ್ಯತಿ ಸುರೈರಪಿ ದುಷ್ಕರಾಣಿ ।
ವಾದೈರ್ವಿಮೋಹಯತಿ ಯಜ್ಞಕೃತೋಽತದರ್ಹಾನ್
ಶೂದ್ರಾನ್ ಕಲೌ ಕ್ಷಿತಿಭುಜೋ ನ್ಯಹನಿಷ್ಯದಂತೇ ॥ ೨೨

ಏವಂವಿಧಾನಿ ಕರ್ಮಾಣಿ ಜನ್ಮಾನಿ ಚ ಜಗತ್ಪತೇಃ ।
ಭೂರೀಣಿ ಭೂರಿಯಶಸೋ ವರ್ಣಿತಾನಿ ಮಹಾಭುಜ ॥ ೨೩

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಚತುರ್ಥಾಧ್ಯಾಯಃ

---

ಕ್ಷತ್ರಿಯರನ್ನು ನಾಶಮಾಡಿ ಪೃಥ್ವಿಯಲ್ಲಿ ಕ್ಷತ್ರಿಯರಿಲ್ಲದಂತೆ ಮಾಡಿದನು. ಆತನೇ ದಶರಥಪುತ್ರನಾದ ಶ್ರೀರಾಮನಾಗಿ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಲಂಕೆಯಲ್ಲಿದ್ದ ರಾವಣನನ್ನು ವಧಿಸಿದನು. ಜನರ ಪಾಪಗಳನ್ನು ತೊಡೆದು ಹಾಕುವ ಕೀರ್ತಿಯುಳ್ಳ ಸೀತಾಪತಿಯಾದ ಶ್ರೀರಾಮನು (ಈಗ) [1]ಜಯಶಾಲಿಯಾಗಿದ್ದಾನೆ (೨೧). ಜನ್ಮರಹಿತನಾದ ಆ ಭಗವಂತನು ಭೂಭಾರಹರಣಕ್ಕಾಗಿ ಯದುವಂಶದಲ್ಲಿ ಅವತರಿಸಿ ದೇವತೆಗಳಿಗೂ ದುಷ್ಕರವಾದ ಕಾರ್ಯಗಳನ್ನು ಮುಂದೆ ಎಸಗುವನು. ಯಜ್ಞ ಮಾಡಲು ಅನರ್ಹರಾದ ವ್ರಾತ್ಯಜನರನ್ನು (ಯಜ್ಞಮಾಡುವುದು ತಪ್ಪೆಂದು) ವಾದಗಳಿಂದ ಬುದ್ಧಾವತಾರದಲ್ಲಿ ಮೋಹಗೊಳಿಸುವನು. ಕಲಿಯುಗದ ಕಡೆಯಲ್ಲಿ (ಕಲ್ಕ್ಯವತಾರವನ್ನು ಮಾಡಿ) ಶೂದ್ರರಾದ ಭೂಪಾಲರನ್ನು ಸಂಹರಿಸುವನು (೨೨). ಹೇ ಮಹಾಭುಜ-ವಿದೇಹರಾಜ, ಜಗತ್ಪತಿಯೂ ಭೂರಿಕೀರ್ತಿಯೂ ಆದ ಭಗವಂತನು ಈ ಬಗೆಯಲ್ಲಿ ಎಸಗಿದ ಅಪಾರವಾದ ಕೃತ್ಯಗಳನ್ನೂ ಅವತಾರಗಳನ್ನೂ ವರ್ಣಿಸಿ ಹೇಳಿದ್ದೇನೆ" ಎಂದನು (೨೩).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ನಾಲ್ಕನೆಯ ಅಧ್ಯಾಯ

---

1. ವಿದೇಹರಾಜನಿಗೆ ಯೋಗಿಗಳು ಉಪದೇಶಿಸಿದ ಘಟನೆ ಶ್ರೀರಾಮಾವತಾರದಲ್ಲಿ ನಡೆದದ್ದು.

## ಪಂಚಮೋಽಧ್ಯಾಯಃ

ರಾಜೋವಾಚ—

ಭಗವಂತಂ ಹರಿಂ ಪ್ರಾಯೋ ನ ಭಜಂತ್ಯಾತ್ಮವಿತ್ತಮಾಃ ।
ತೇಷಾಮಶಾಂತಕಾಮಾನಾಂ ಕಾ ನಿಷ್ಠಾ ವಿಜಿತಾತ್ಮನಾಮ್ ॥ ೧

ಚಮಸ ಉವಾಚ—

ಮುಖಬಾಹೂರುಪಾದೇಭ್ಯಃ ಪುರುಷಸ್ಯಾಶ್ರಮೈಃ ಸಹ ।
ಚತ್ವಾರೋ ಜಜ್ಞಿರೇ ವರ್ಣಾ ಗುಣೈರ್ವಿಪ್ರಾದಯಃ ಪೃಥಕ್ ॥ ೨

ಯ ಏಷಾಂ ಪುರುಷಂ ಸಾಕ್ಷಾದಾತ್ಮಪ್ರಭವಮೀಶ್ವರಮ್ ।
ನ ಭಜಂತ್ಯವಜಾನಂತಿ ಸ್ಥಾನಾದ್ಭ್ರಷ್ಟಾಃ ಪತಂತ್ಯಧಃ ॥ ೩

### ಅಧ್ಯಾಯ ೫

ಕಾಮ್ಯಕರ್ಮದ ನಿಂದೆ. ದೈವಭಕ್ತಿಹೀನರಿಗಾಗುವ ದುರ್ಗತಿ. ಭಗವಂತನ ಪೂಜಾವಿಧಿ. ನಾರದರು ವಸುದೇವನಿಗೆ ಹಿತವನ್ನು ಬೋಧಿಸಿ ನಿರ್ಗಮಿಸುವುದು.

ತರುವಾಯ ವಿದೇಹರಾಜನು "ಆತ್ಮವಿದರಲ್ಲಿ ಶ್ರೇಷ್ಠರಾದ ಮಹಾತ್ಮರೆ, ಸಾಮಾನ್ಯವಾಗಿ ಜನರು ಭಗವಂತನಾದ ಶ್ರೀಹರಿಯನ್ನು ಭಜಿಸುವುದಿಲ್ಲ. ಕಾಮನೆಯು ಶಾಂತವಾಗದಿರುವ ಅಂತಹ ಅಜಿತಾತ್ಮರಿಗೆ ಯಾವ ಗತಿಯಾಗುವುದು ?" ಎಂದು ಕೇಳಿದನು (೧). ಆಗ ಚಮಸನೆಂಬ ಆತ್ಮವಿದನು ಇಂತೆಂದನು : "ಪುರುಷೋತ್ತಮನ ಮುಖ, ಬಾಹು, ಊರು, ಪಾದಗಳಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳು [1]ಸತ್ತ್ವಾದಿಗುಣಗಳಿಂದ ಬೇರೆಬೇರೆಯಾಗಿ, ಗೃಹಸ್ಥಾದ್ಯಾಶ್ರಮಗಳೊಡನೆ ಹುಟ್ಟಿದವು (೨). ತಮ್ಮ ಜನ್ಮಕ್ಕೆ ಸಾಕ್ಷಾತ್ ಕಾರಣನೂ ಈಶ್ವರನೂ ಆದ ಪುರುಷೋತ್ತಮನನ್ನು ಯಾರು ಭಜಿಸದೆ ಉಪೇಕ್ಷೆಮಾಡುವರೋ ಅವರು ವರ್ಣಾಶ್ರಮಗಳಿಂದ ಭ್ರಷ್ಟರಾಗಿ

1. ಸತ್ತ್ವಗುಣದಿಂದ ಬ್ರಾಹ್ಮಣನೂ ಸತ್ತ್ವರಜೋಗುಣಗಳಿಂದ ಕ್ಷತ್ರಿಯನೂ ರಜಸ್ತಮೋಗುಣಗಳಿಂದ ವೈಶ್ಯನೂ ತಮೋಗುಣದಿಂದ ಶೂದ್ರನೂ ಜನಿಸಿದರು.

ದೂರೇ ಹರಿಕಥಾಃ ಕೇಚಿದ್ ದೂರೇ ಚಾಚ್ಯುತಕೀರ್ತನಾಃ ।
ಸ್ತ್ರಿಯಃ ಶೂದ್ರಾದಯಶ್ಚೈವ ತೇಽನುಕಂಪ್ಯಾ ಭವಾದೃಶಾಮ್ ॥ ೪
ವಿಪ್ರೋ ರಾಜನ್ಯವೈಶ್ಯೌ ಚ ಹರೇಃ ಪ್ರಾಪ್ತಾಃ ಪದಾಂತಿಕಮ್ ।
ಶ್ರೌತೇನ ಜನ್ಮನಾಥಾಪಿ ಮುಹ್ಯಂತ್ಯಾಮ್ನಾಯವಾದಿನಃ ॥ ೫

ಕರ್ಮಣ್ಯಕೋವಿದಾಃ ಸ್ತಬ್ಧಾ ಮೂರ್ಖಾಃ ಪಂಡಿತಮಾನಿನಃ ।
ವದಂತಿ ಚಾಟುಕಾನ್ ಮೂಢಾ ಯಯಾ ಮಾಧ್ವ್ಯಾ ಗಿರೋತ್ಸುಕಾಃ ॥ ೬

ರಜಸಾ ಘೋರಸಂಕಲ್ಪಾಃ ಕಾಮುಕಾ ಅಹಿಮನ್ಯವಃ ।
ದಾಂಭಿಕಾ ಮಾನಿನಃ ಪಾಪಾ ವಿಹಸಂತ್ಯಚ್ಯುತಪ್ರಿಯಾನ್ ॥ ೭

---

ಅಧಃಪಾತವನ್ನೈದುತ್ತಾರೆ (೩). ಯಾರಿಗೆ ಹರಿಕಥಾಶ್ರವಣಗಳು ದೂರವಾಗಿವೆಯೋ ಯಾರಿಗೆ ಹರಿಕೀರ್ತನೆಗಳು ನಿಲುಕದಾಗಿವೆಯೋ ಅಂತಹ ಸ್ತ್ರೀ ಶೂದ್ರಾದಿಗಳನ್ನು, ರಾಜ, ನಿಮ್ಮಂತಹವರು ಅನುಕಂಪೆಯಿಂದ ಅನುಗ್ರಹಿಸಬೇಕು (೪). ಬ್ರಾಹ್ಮಣನೂ, ಕ್ಷತ್ರಿಯ, ವೈಶ್ಯರೂ, ವೇದೋಕ್ತಜನ್ಮವೆನಿಸಿದ ಉಪನಯನದಿಂದಲೂ (ಅಧ್ಯಯನಾದಿಗಳಿಂದಲೂ) ಶ್ರೀಹರಿಯ ಪಾದದ ಬಳಿಗೆ ಬಂದಿದ್ದರೂ ವೇದಗಳಲ್ಲಿರುವ ಅರ್ಥವಾದಗಳಲ್ಲಿ [1]ಆಸಕ್ತರಾಗಿ ಮೋಹಗೊಳ್ಳುತ್ತಾರೆ (ಕರ್ಮಫಲಗಳಲ್ಲಿ ಆಸಕ್ತರಾಗುತ್ತಾರೆ (೫). (ಬಂಧಕವಾಗದಂತೆ) ಕರ್ಮವನ್ನಾಚರಿಸುವುದರಲ್ಲಿ ಅವರು ಅಜ್ಞರಾಗಿರುತ್ತಾರೆ. ಬಲ್ಲವರನ್ನು ಕೇಳದೆ ಉದ್ಧತರಾಗಿರುತ್ತಾರೆ. ಸ್ವತಃ ಮೂರ್ಖರಾದರೂ ತಾವು ಪಂಡಿತರೆಂದು ತಿಳಿದುಕೊಂಡಿರುತ್ತಾರೆ. ಆ ಮೂಢರು "ಅಪಾಮ ಸೋಮಮಮೃತಾ ಅಭೂಮ" "ಅಕ್ಷಯ್ಯಂ ಹ ವೈ ಚಾತುರ್ಮಾಸ್ಯಯಾಜಿನಃ ಸುಕೃತಂ ಭವತಿ"—ಇತ್ಯಾದಿ ಜೇನುತುಪ್ಪದಂತಹ ಮಾತುಗಳಿಂದ ಉತ್ಸಾಹಿತರಾಗಿ "ನಾವು ಅಪ್ಸರೆಯರೊಡನೆ ವಿಹರಿಸುವೆವು" ಎಂಬುದಾಗಿ ಚಾಟುವಾಕ್ಯಗಳನ್ನಾಡುತ್ತಾರೆ! (೬). ರಜೋಗುಣಾತಿಶಯದಿಂದ ಕೂಡಿದ ಜನರು ಕೆಟ್ಟ ಸಂಕಲ್ಪವುಳ್ಳವರೂ ಕಾಮುಕರೂ ಹಾವಿನಂತೆ ಸಿಡುಕರೂ ದಾಂಭಿಕರೂ ದುರಹಂಕಾರಿಗಳೂ ಪಾಪಿಗಳೂ ಆಗಿ ಶ್ರೀಹರಿಭಕ್ತರನ್ನು ಅಪಹಾಸ್ಯ

---

1. ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।
ವೇದವಾದರತಾಃ ಪಾರ್ಥ ನಾನ್ಯದಸ್ತೀತಿವಾದಿನಃ ॥ —ಗೀತಾ ೨–೪೨

ವದಂತಿ ತೇಽನ್ಯೋನ್ಯಮುಪಾಸಿತಸ್ತ್ರಿಯೋ
ಗೃಹೇಷು ಮೈಥುನ್ಯಪರೇಷು ಚಾಶಿಷಃ ।
ಯಜಂತ್ಯಸೃಷ್ಟಾನ್ನವಿಧಾನದಕ್ಷಿಣಂ
ವೃತ್ತ್ಯೈ ಪರಂ ಘ್ನಂತಿ ಪಶೂನತದ್ವಿದಃ ॥ ೮

ಶ್ರಿಯಾ ವಿಭೂತ್ಯಾಭಿಜನೇನ ವಿದ್ಯಯಾ
ತ್ಯಾಗೇನ ರೂಪೇಣ ಬಲೇನ ಕರ್ಮಣಾ ।
ಜಾತಸ್ಮಯೇನಾಂಧಧಿಯಃ ಸಹೇಶ್ವರಾನ್
ಸತೋಽವಮನ್ಯಂತಿ ಹರಿಪ್ರಿಯಾನ್ ಖಲಾಃ ॥ ೯

ಸರ್ವೇಷು ಶಶ್ವತ್ತನುಭೃತ್ಸ್ವವಸ್ಥಿತಂ
ಯಥಾ ಖಮಾತ್ಮಾನಮಭಿಷ್ಟಮೀಶ್ವರಮ್ ।
ವೇದೋಪಗೀತಂ ಚ ನ ಶೃಣ್ವತೇಽಬುಧಾ
ಮನೋರಥಾನಾಂ ಪ್ರವದಂತಿ ವಾರ್ತಯಾ ॥ ೧೦

ಲೋಕೇ ವ್ಯವಾಯಾಮಿಷಮದ್ಯಸೇವಾ
ನಿತ್ಯಾಸ್ತು ಜಂತೋರ್ನ ಹಿ ತತ್ರ ಚೋದನಾ ।

---

ಮಾಡುತ್ತಾರೆ (೭) ಸ್ತ್ರೀಯರನ್ನು ಮಾತ್ರ ಉಪಾಸನೆ ಮಾಡತಕ್ಕ ಈ ಜನರು ಮೈಥುನಪ್ರಧಾನವಾದ ಗೃಹಗಳಲ್ಲಿ ಸೇರಿಕೊಂಡು ಅನ್ಯೋನ್ಯವಾಗಿ ತಮ್ಮ ಆಶಾವಾದಗಳನ್ನು ಹೇಳಿಕೊಳ್ಳುತ್ತಾರೆ. ಅನ್ನದಾನವಿಲ್ಲ, ವಿಧಿಯಿಲ್ಲ, ದಕ್ಷಿಣೆಯಿಲ್ಲ ಇಂತಹ ಯಾಗಗಳನ್ನು, ಹೊಟ್ಟೆಪಾಡಿಗಾಗಿ ಮಾಡುತ್ತ, ಹಿಂಸಾದೋಷವು ಬರುವುದೆಂಬುದನ್ನರಿಯದೆ ಪಶುಗಳನ್ನು (ಯಾಗಗಳಲ್ಲಿ) ಹಿಂಸಿಸುತ್ತಾರೆ (೮). ಧನ, ಪ್ರಭುತ್ವ, ಕುಲ, ವಿದ್ಯೆ, ತ್ಯಾಗ, ರೂಪ, ಬಲ, ಕೃತ್ಯ—ಇವುಗಳಿಂದ ಗರ್ವಿತರಾಗಿ ಕುರುಡುಬುದ್ಧಿಯುವರಾದ ಈ ಖಳಜನರು ದೇವರನ್ನೂ ದೇವಭಕ್ತರಾದ ಸಜ್ಜನರನ್ನೂ ಹಂಗಿಸುತ್ತಾರೆ (೯). ಈ ಅಜ್ಞಾನಿಗಳು ಸಮಸ್ತ ಪ್ರಾಣಿಗಳಲ್ಲಿಯೂ ಆಕಾಶದಂತೆ ಅಸಂಗನಾಗಿ ನೆಲೆಸಿರುವ, ತಮ್ಮ ಆತ್ಮನೂ ಅಭೀಷ್ಟನೂ ವೇದೋಪಗೀತನೂ ಆದ ಈಶ್ವರನ ವಿಷಯವಾಗಿ ಏನನ್ನೂ ಕೇಳಲು ಇಷ್ಟಪಡುವುದಿಲ್ಲ. ತಮ್ಮ ಮನೋರಥಗಳಾದ ಮದ್ಯಮೈಥುನಗಳ ಸುದ್ದಿಯಿಂದಲೇ ವೇದಾರ್ಥವನ್ನು ರೂಪಿಸಿ ಹೇಳುತ್ತಾರೆ (೧೦). ಲೋಕದಲ್ಲಿ ಮನುಷ್ಯನಿಗೆ ಮೈಥುನ,

ವ್ಯವಸ್ಥಿತಿಸ್ತೇಷು ವಿವಾಹಯಜ್ಞ-
ಸುರಾಗ್ರಹೈರಾಸು ನಿವೃತ್ತಿರಿಷ್ಟಾ ॥ ೧೧

ಧನಂ ಚ ಧರ್ಮೈಕಫಲಂ ಯತೋ ವೈ
ಜ್ಞಾನಂ ಸವಿಜ್ಞಾನಮನುಪ್ರಶಾಂತಿ ।
ಗೃಹೇಷು ಯುಂಜಂತಿ ಕಲೇವರಸ್ಯ
ಮೃತ್ಯುಂ ನ ಪಶ್ಯಂತಿ ದುರಂತವೀರ್ಯಮ್ ॥ ೧೨

ಯದ್ಘ್ರಾಣಭಕ್ಷೋ ವಿಹಿತಃ ಸುರಾಯಾ-
ಸ್ತಥಾ ಪಶೋರಾಲಭನಂ ನ ಹಿಂಸಾ ।
ಏವಂ ವ್ಯವಾಯಃ ಪ್ರಜಯಾ ನ ರತ್ಯಾ
ಇಮಂ ವಿಶುದ್ಧಂ ನ ವಿದುಃ ಸ್ವಧರ್ಮಮ್ ॥ ೧೩

---

ಮಾಂಸಾಹಾರ, ಸುರಾಪಾನ—ಇವು ನಿಸರ್ಗದಿಂದಲೇ ನಿತ್ಯಪ್ರಾಪ್ತವಾಗಿರುತ್ತವೆ. ಅವುಗಳ ವಿಷಯವಾಗಿ ಶಾಸ್ತ್ರವಿಧಿಯು ಬೇಕಾಗಿಲ್ಲ. ಆದರೂ ಶಾಸ್ತ್ರವಿಧಿಯು ಏಕಿದೆ ಎಂದರೆ, ವಿವಾಹ ಸಂಬಂಧದಿಂದಲೇ ಮೈಥುನವೆಂದೂ ಯಜ್ಞದಲ್ಲಿ ಮಾತ್ರವೇ ಮಾಂಸಾಹಾರವೆಂದೂ ಸೌತ್ರಾಮಣೀಯಾಗದಲ್ಲಿ ಮಾತ್ರವೇ ಸುರಾಪಾನವೆಂದೂ ನಿಯಮವನ್ನು ಮಾಡುವುದಕ್ಕಾಗಿ. ಪರಮಾರ್ಥದಲ್ಲಾದರೋ ಮೈಥುನಾದಿಗಳಿಗೆ ಅನ್ಯತ್ರ ನಿವೃತ್ತಿಯನ್ನು ಹೇಳುವುದೇ [1]ಉದ್ದಿಷ್ಟವಾಗಿದೆ (೧೧). ಧನಕ್ಕಾದರೋ ಧರ್ಮ ಒಂದೇ ಮುಖ್ಯವಾದ ಫಲ ಈ ಧರ್ಮದಿಂದ ಪರೋಕ್ಷಜ್ಞಾನವೂ ಅದರಿಂದ ಅಪರೋಕ್ಷಜ್ಞಾನವೂ ಉಂಟಾಗಿ, ಅನಂತರ ಪರಮಶಾಂತಿ ರೂಪವಾದ ನಿರ್ವಾಣಫಲವು ದೊರೆಯುತ್ತದೆ. ಇಂತಹ ಶ್ರೇಷ್ಠವಾದ ಧನವನ್ನು ಮನೆಗಳಲ್ಲಿ ದೇಹಪೋಷಣೆಗಾಗಿ ವಿನಿಯೋಗಿಸುತ್ತಾರೆ. ಈ ದೇಹವಾದರೋ ತಪ್ಪಿಸಲು ಅಶಕ್ಯವಾದ ಘೋರಮೃತ್ಯುವಿಗೆ ಸಿಕ್ಕಿ ಹಾಳಾಗಿಹೋಗುವುದೆಂಬುದನ್ನು ಈ ಜನರು ಗಣಿಸುವುದಿಲ್ಲ (೧೨). (ಅಲ್ಲದೆ ಹಿಂದೆ ಹೇಳಿದಂತೆ ನಿಯಮಿಸಲ್ಪಟ್ಟ ಮೈಥುನಾದಿಗಳೂ ಸಹ ಯಾವ ಪ್ರಕಾರದವು ?) ಯಾಗದಲ್ಲಿಯೂ ಸಹ ಸುರೆಯನ್ನು ಮೂಗಿನಿಂದ ಆಘ್ರಾಣಿಸಬೇಕಲ್ಲದೆ ಪಾನಮಾಡತಕ್ಕದ್ದಲ್ಲ. ಪಶುವಿನ

1. ಅನುಬಂಧವನ್ನು ನೋಡಿ—೨.

ಯೇ ತ್ವನೇವಂವಿದೋಽಸಂತಃ ಸ್ತಬ್ಧಾಃ ಸದಭಿಮಾನಿನಃ ।
ಪಶೂನ್ ದ್ರುಹ್ಯಂತಿ ವಿಸ್ರಬ್ಧಾಃ ಪ್ರೇತ್ಯ ಖಾದಂತಿ ತೇ ಚ ತಾನ್ ॥ ೧೪

ದ್ವಿಷಂತಃ ಪರಕಾಯೇಷು ಸ್ವಾತ್ಮಾನಂ ಹರಿಮೀಶ್ವರಮ್ ।
ಮೃತಕೇ ಸಾನುಬಂಧೇಽಸ್ಮಿನ್ ಬದ್ಧಸ್ನೇಹಾಃ ಪತಂತ್ಯಧಃ ॥ ೧೫

ಯೇ ಕೈವಲ್ಯಮಸಂಪ್ರಾಪ್ತಾ ಯೇ ಚಾತೀತಾಶ್ಚ ಮೂಢತಾಮ್ ।
ತ್ರೈವರ್ಗಿಕಾ ಹ್ಯಕ್ಷಣಿಕಾ ಆತ್ಮಾನಂ ಘಾತಯಂತಿ ತೇ ॥ ೧೬

[1]ಆಲಭನೆಯನ್ನು ಹೇಳಿದೆಯೇ ಹೊರತು ಹಿಂಸೆಯನ್ನಲ್ಲ. ಹೀಗೆಯೇ ಸಂತತಿಗಾಗಿ ಮೈಥುನವೇ ಹೊರತು ಆನಂದಕ್ಕಾಗಿ ಅಲ್ಲ. ಇದು ಪರಿಶುದ್ಧವಾದ ಸ್ವಧರ್ಮವೆಂದು ಈ ಜನರು ಅರಿತಿಲ್ಲ (೧೩). ಈ ಸ್ವಧರ್ಮವನ್ನರಿಯದೆ ಇರತಕ್ಕವರೂ ಅಸಂತರಾಗಿ ತಾವು ಸಂತರೆಂದು ತಿಳಿದುಕೊಂಡಿರತಕ್ಕವರೂ ಗರ್ವಿಷ್ಠರೂ ಆದ ಜನರು ನಿಃಶಂಕೆಯಿಂದ ಪಶುಗಳನ್ನು ಹಿಂಸಿಸಿ ದ್ರೋಹ ಮಾಡುತ್ತಾರೆ. ಅವರನ್ನು ಪರಲೋಕದಲ್ಲಿ [2]ಪಶುಗಳೇ ತಿಂದುಬಿಡುತ್ತವೆ! (೧೪). ಪರರ ದೇಹಗಳಲ್ಲಿಯೂ ತಮ್ಮ ಆತ್ಮನೇ ಆಗಿಯೂ ಈಶ್ವರನಾಗಿಯೂ ಶ್ರೀಹರಿಯಿದ್ದಾನೆಂಬುದನ್ನರಿಯದೆ ಪರರನ್ನು ದ್ವೇಷಿಸುತ್ತ, ಪುತ್ರಾದಿಗಳಲ್ಲಿಯೂ ಸತ್ತ ಹೆಣಕ್ಕೆ ಸಮಾನವಾದ ತಮ್ಮ ದೇಹದಲ್ಲಿಯೂ ಯಾರು ಪ್ರೀತಿಯನ್ನಿಡುತ್ತಾರೋ ಅವರು ಅಧಃಪಾತವನ್ನೈದುತ್ತಾರೆ (೧೫). ಯಾರು ತತ್ತ್ವಜ್ಞಾನವನ್ನು ಪಡೆದಿಲ್ಲವೋ ಅತ್ಯಂತ ಮೂಢರೂ ಅಲ್ಲವೋ ಅಂತಹ ತ್ರಿವರ್ಗಪ್ರಧಾನರೂ ದೇಹಾದಿಗಳಲ್ಲಿ ಸ್ಥಿರತ್ವಬುದ್ಧಿಯುಳ್ಳವರೂ ಆದ [3]ಮಧ್ಯವರ್ತಿಗಳು ಆತ್ಮಘಾತುಕರಾಗಿ ಕಷ್ಟಕ್ಕೆ ಗುರಿಯಾಗುತ್ತಾರೆ (೧೬).

1. ಆಲಭನೆ — ದೇವತೋದ್ದೇಶದಿಂದ ಪಶುಹನನ. ಇದು ಹಿಂಸೆಯಲ್ಲವೆಂದು ಧರ್ಮಶಾಸ್ತ್ರವು ಹೇಳಿದೆ.

2. ಮಾಂ ಸ ಭಕ್ಷಯಿತಾಮುತ್ರ ಯಸ್ಯ ಮಾಂಸಮಿಹಾದ್ಮ್ಯಹಮ್।
ಏತನ್ಮಾಂಸಸ್ಯ ಮಾಂಸತ್ವಂ ಪ್ರವದಂತಿ ಮನೀಷಿಣಃ ॥
—ಮನುಸ್ಮೃತಿ ೫–೫೫

3. ತತ್ತ್ವಜ್ಞರು ತಾವೇ ಪಾರಾಗುತ್ತಾರೆ. ಅತ್ಯಂತ ಮೂಢರು ತತ್ತ್ವಜ್ಞರ ಮಾರ್ಗದರ್ಶನದಿಂದ ಪಾರಾಗುತ್ತಾರೆ. ಅರೆಬರೆ ಜ್ಞಾನವುಳ್ಳ ಮಧ್ಯವರ್ತಿಗಳು ಅಹಂಕಾರದಿಂದ ಹಾಳಾಗುತ್ತಾರೆ. ಆತ್ಮಜ್ಞಾನವಿಲ್ಲದೆ ಜೀವವನ್ನು ಜನನ ಮರಣಗಳಿಗೆ ಸಿಕ್ಕಿಸತಕ್ಕವರು ಆತ್ಮಘಾತುಕರು.

ಏತ ಆತ್ಮಹನೋಽಶಾಂತಾ ಅಜ್ಞಾನೇ ಜ್ಞಾನಮಾನಿನಃ ।
ಸೀದಂತ್ಯಕೃತಕೃತ್ಯಾ ವೈ ಕಾಲಧ್ವಸ್ತಮನೋರಥಾಃ ॥ ೧೭

ಹಿತ್ವಾತ್ಯಾಯಾಸರಚಿತಾ ಗೃಹಾಪತ್ಯಸುಹೃಚ್ಛ್ರಿಯಃ ।
ತಮೋ ವಿಶಂತ್ಯನಿಚ್ಛಂತೋ ವಾಸುದೇವಪರಾಙ್ಮುಖಾಃ ॥ ೧೮

ರಾಜೋವಾಚ—

ಕಸ್ಮಿನ್ ಕಾಲೇ ಸ ಭಗವಾನ್ ಕಿಂವರ್ಣಃ ಕೀದೃಶೋ ನೃಭಿಃ ।
ನಾಮ್ನಾ ವಾ ಕೇನ ವಿಧಿನಾ ಪೂಜ್ಯತೇ ತದಿಹೋಚ್ಯತಾಮ್ ॥ ೧೯

ಕರಭಾಜನ ಉವಾಚ—

ಕೃತಂ ತ್ರೇತಾ ದ್ವಾಪರಂ ಚ ಕಲಿರಿತ್ಯೇಷು ಕೇಶವಃ ।
ನಾನಾವರ್ಣಾಭಿಧಾಕಾರೋ ನಾನೈವ ವಿಧಿನೇಜ್ಯತೇ ॥ ೨೦

ಕೃತೇ ಶುಕ್ಲಶ್ಚತುರ್ಬಾಹುರ್ಜಟಿಲೋ ವಲ್ಕಲಾಂಬರಃ ।
ಕೃಷ್ಣಾಜಿನೋಪವೀತಾಕ್ಷಾನ್ ಬಿಭ್ರದ್ದಂಡಕಮಂಡಲೂ ॥ ೨೧

---

ಅಜ್ಞಾನವನ್ನೇ ಜ್ಞಾನವೆಂದುಕೊಂಡಿರುವ ಅಶಾಂತರಾದ ಈ ಆತ್ಮಘಾತುಕರು, ಕಾಲವು ಕಳೆದಂತೆ ಮನೋರಥಗಳು ಸಿದ್ಧಿಸದೇ ಹೋದಪ್ರಯುಕ್ತ ಕೃತಕೃತ್ಯರಾಗದೆ, ವಿಪತ್ತಿಗೆ ಒಳಗಾಗುತ್ತಾರೆ (೧೭). ವಾಸುದೇವನಲ್ಲಿ ಭಕ್ತಿಯನ್ನಿಡದೆ ಪರಾಙ್ಮುಖರಾದವರು, ತಾವು ಕಷ್ಟಪಟ್ಟು ಸಂಪಾದಿಸಿದ ಮನೆ, ಮಕ್ಕಳು, ಸ್ನೇಹಿತರು, ಸಂಪತ್ತು—ಇವೆಲ್ಲವನ್ನೂ ಒಂದುದಿನ ಇಷ್ಟವಿಲ್ಲದಿದ್ದರೂ ಕೈಬಿಟ್ಟು ನರಕವನ್ನೈದುವರು" ಎಂದನು (೧೮). ಆಗ ವಿದೇಹರಾಜನು "ಪೂಜ್ಯರೆ, ಯಾವ ಯಾವ ಕಾಲದಲ್ಲಿ ಆ ಭಗವಂತನನ್ನು ಯಾವ ಬಣ್ಣದವನೆಂದೂ ಯಾವ ಆಕೃತಿಯುಳ್ಳವನೆಂದೂ ತಿಳಿದು, ಯಾವ ನಾಮದಿಂದ ಯಾವ ವಿಧಿಯಿಂದ ಜನರು ಪೂಜಿಸುತ್ತಾರೆ? ಅದನ್ನು ಹೇಳೋಣವಾಗಲಿ" ಎಂದನು (೧೯). ಆಗ ಕರಭಾಜನನೆಂಬ ಯೋಗಿಯು ಇಂತೆಂದನು: "ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ—ಎಂದು ನಾಲ್ಕು ಯುಗಗಳಿವೆಯಷ್ಟೆ. ಇವುಗಳಲ್ಲಿ ಕೇಶವನನ್ನು ವಿಭಿನ್ನವಾದ ವರ್ಣ, ನಾಮ, ಆಕೃತಿಗಳುಳ್ಳವನೆಂದು ತಿಳಿದು ವಿಭಿನ್ನವಿಧಿಯಿಂದಲೇ ಪೂಜಿಸುತ್ತಾರೆ (೨೦). ಕೃತಯುಗದಲ್ಲಿ ಕೇಶವನು ಶುಕ್ಲವರ್ಣ; ಚತುರ್ಭುಜ;

ಮನುಷ್ಯಾಸ್ತು ತದಾ ಶಾಂತಾ ನಿರ್ವೈರಾಃ ಸುಹೃದಃ ಸಮಾಃ ।
ಯಜಂತಿ ತಪಸಾ ದೇವಂ ಶಮೇನ ಚ ದಮೇನ ಚ ॥ ೨೨

ಹಂಸಃ ಸುಪರ್ಣೋ ವೈಕುಂಠೋ ಧರ್ಮೋ ಯೋಗೇಶ್ವರೋಽಮಲಃ ।
ಈಶ್ವರಃ ಪುರುಷೋಽವ್ಯಕ್ತಃ ಪರಮಾತ್ಮೇತಿ ಗೀಯತೇ ॥ ೨೩

ತ್ರೇತಾಯಾಂ ರಕ್ತವರ್ಣೋಽಸೌ ಚತುರ್ಬಾಹುಸ್ತ್ರಿಮೇಖಲಃ ।
ಹಿರಣ್ಯಕೇಶಸ್ತ್ರಯ್ಯಾತ್ಮಾ ಸ್ರುಕ್ಸ್ರುವಾದ್ಯುಪಲಕ್ಷಣಃ ॥ ೨೪

ತಂ ತದಾ ಮನುಜಾ ದೇವಂ ಸರ್ವದೇವಮಯಂ ಹರಿಮ್ ।
ಯಜಂತಿ ವಿದ್ಯಯಾ ತ್ರಯ್ಯಾ ಧರ್ಮಿಷ್ಠಾ ಬ್ರಹ್ಮವಾದಿನಃ ॥ ೨೫

ವಿಷ್ಣುರ್ಯಜ್ಞಃ ಪೃಶ್ನಿಗರ್ಭಃ ಸರ್ವದೇವ ಉರುಕ್ರಮಃ ।
ವೃಷಾಕಪಿರ್ಜಯಂತಶ್ಚ ಉರುಗಾಯ ಇತೀರ್ಯತೇ ॥ ೨೬

---

ಜಟಾಧಾರಿ ; ನಾರುಬಟ್ಟೆಯುಟ್ಟವನು. ಆತನು ಕೃಷ್ಣಾಜಿನ, ಯಜ್ಞೋಪವೀತ, ಅಕ್ಷಮಾಲೆ, ದಂಡ, ಕಮಂಡಲುಗಳನ್ನು ಧರಿಸಿರುತ್ತಾನೆ. ಆಗ ಮನುಷ್ಯರು ಶಾಂತರೂ ವೈರರಹಿತರೂ ಸೌಹಾರ್ದಯುಕ್ತರೂ, ಸಮಬುದ್ಧಿಯವರೂ ಆಗಿದ್ದು ಧ್ಯಾನದಿಂದಲೂ ಶಮದಮಗಳಿಂದಲೂ ಕೇಶವನನ್ನು ಅರ್ಚಿಸುತ್ತಾರೆ. ಆಗ ಕೇಶವನು ಹಂಸ, ಸುಪರ್ಣ, ವೈಕುಂಠ, ಧರ್ಮ, ಯೋಗೇಶ್ವರ, ಅಮಲ, ಈಶ್ವರ, ಪುರುಷ, ಅವ್ಯಕ್ತ, ಪರಮಾತ್ಮ—ಎಂಬ ನಾಮಗಳಿಂದ ಸ್ತುತಿಸಲ್ಪಡುತ್ತಾನೆ (೨೧–೨೩). ತ್ರೇತಾಯುಗದಲ್ಲಿ ಭಗವಂತನು ರಕ್ತವರ್ಣದವನೆಂದು ಪೂಜಿಸಲ್ಪಡುತ್ತಾನೆ. ಅವನು ಚತುರ್ಬಾಹು ; ಮೇಖಲಾತ್ರಯವನ್ನು ಸೊಂಟಕ್ಕೆ ಕಟ್ಟಿಕೊಂಡು ಯಜ್ಞಮೂರ್ತಿಯಾಗಿರುವನು. ಕೇಶಗಳು ಪಿಶಂಗವರ್ಣದವು. ವೇದತ್ರಯಸ್ವರೂಪನೂ ಸ್ರುಕ್, ಸ್ರುವಾದಿಯಜ್ಞಪಾತ್ರಗಳಿಂದ ಯುಕ್ತನೂ ಆಗಿರುವನು (೨೪). ಆಗ ಧರ್ಮಿಷ್ಠರೂ ಬ್ರಹ್ಮವಾದಿಗಳೂ ಆದ ಮಾನವರು ವೇದತ್ರಯೋಕ್ತಕರ್ಮಗಳಿಂದ ಸರ್ವದೇವಾತ್ಮಕನಾದ ಶ್ರೀಹರಿಯನ್ನು ಅರ್ಚಿಸುತ್ತಾರೆ. ಆತನು ವಿಷ್ಣು, ಯಜ್ಞ, ಪೃಶ್ನಿಗರ್ಭ, ಸರ್ವದೇವ, ಉರುಕ್ರಮ, ವೃಷಾಕಪಿ, ಜಯಂತ, ಉರುಗಾಯ—ಎಂಬ ನಾಮಗಳಿಂದ ಕೀರ್ತಿತನಾಗುತ್ತಾನೆ (೨೫–೨೬).

ದ್ವಾಪರೇ ಭಗವಾನ್ ಶ್ಯಾಮಃ ಪೀತವಾಸಾ ನಿಜಾಯುಧಃ ।
ಶ್ರೀವತ್ಸಾದಿಭಿರಂಕೈಶ್ಚ ಲಕ್ಷಣೈರುಪಲಕ್ಷಿತಃ ॥ ೨೭

ತಂ ತದಾ ಪುರುಷಂ ಮರ್ತ್ಯಾ ಮಹಾರಾಜೋಪಲಕ್ಷಣಮ್ ।
ಯಜಂತಿ ವೇದತಂತ್ರಾಭ್ಯಾಂ ಪರಂ ಜಿಜ್ಞಾಸವೋ ನೃಪ ॥ ೨೮

ನಮಸ್ತೇ ವಾಸುದೇವಾಯ ನಮಃ ಸಂಕರ್ಷಣಾಯ ಚ ।
ಪ್ರದ್ಯುಮ್ನಾಯಾನಿರುದ್ಧಾಯ ತುಭ್ಯಂ ಭಗವತೇ ನಮಃ ॥ ೨೯

ನಾರಾಯಣಾಯ ಋಷಯೇ ಪುರುಷಾಯ ಮಹಾತ್ಮನೇ ।
ವಿಶ್ವೇಶ್ವರಾಯ ವಿಶ್ವಾಯ ಸರ್ವಭೂತಾತ್ಮನೇ ನಮಃ ॥ ೩೦

ಇತಿ ದ್ವಾಪರ ಉರ್ವೀಶ ಸ್ತುವಂತಿ ಜಗದೀಶ್ವರಮ್ ।
ನಾನಾತಂತ್ರವಿಧಾನೇನ ಕಲಾವಪಿ ಯಥಾ ಶೃಣು ॥ ೩೧

ಕೃಷ್ಣವರ್ಣಂ ತ್ವಿಷಾ ಕೃಷ್ಣಂ ಸಾಂಗೋಪಾಂಗಾಸ್ತ್ರಪಾರ್ಷದಮ್ ।
ಯಜ್ಞೈಃ ಸಂಕೀರ್ತನಪ್ರಾಯೈರ್ಯಜಂತಿ ಹಿ ಸುಮೇಧಸಃ ॥ ೩೨

---

ದ್ವಾಪರಯುಗದಲ್ಲಿ ಭಗವಂತನು ಶ್ಯಾಮಲವರ್ಣದವನೆಂದು ಪೂಜಿಸುತ್ತಾರೆ. ಅವನು ಪೀತಾಂಬರಧಾರಿಯಾಗಿ ಶಂಖಚಕ್ರಾದಿ ನಿಜಾಯುಧಗಳನ್ನು ಹಿಡಿದಿರುತ್ತಾನೆ. ಶ್ರೀವತ್ಸಾದಿಚಿಹ್ನೆಗಳಿಂದಲೂ ಕೌಸ್ತುಭಾದಿಲಕ್ಷಣಗಳಿಂದಲೂ ಅವನು ಉಪಲಕ್ಷಿತನಾಗಿರುತ್ತಾನೆ (೨೭). ಈಶ್ವರಜಿಜ್ಞಾಸುಗಳಾದ ಮಾನವರು ಆಗ, ಮಹಾರಾಜನಿಗೆ ಸಲ್ಲುವ ಛತ್ರಚಾಮರಾದಿಗಳಿಂದ ಯುಕ್ತನಾದ ಆ ಮಹಾಪುರುಷನನ್ನು ವೈದಿಕಮಾರ್ಗದಿಂದಲೂ, ಆಗಮಿಕ ಮಾರ್ಗದಿಂದಲೂ ಅರ್ಚಿಸುತ್ತಾರೆ (೨೮). "ನಮಸ್ತೇ ವಾಸುದೇವಾಯ ನಮಃ ಸಂಕರ್ಷಣಾಯ ಚ । ಪ್ರದ್ಯುಮ್ನಾಯಾನಿರುದ್ಧಾಯ ತುಭ್ಯಂ ಭಗವತೇ ನಮಃ ॥ ನಾರಾಯಣಾಯ ಋಷಯೇ ಪುರುಷಾಯ ಮಹಾತ್ಮನೇ । ವಿಶ್ವೇಶ್ವರಾಯ ವಿಶ್ವಾಯ ಸರ್ವ-ಭೂತಾತ್ಮನೇ ನಮಃ ॥" (೨೯–೩೦)—ಎಂಬುದಾಗಿ ವಾಸುದೇವಾದಿ ನಾಮಗಳಿಂದ ದ್ವಾಪರಯುಗದಲ್ಲಿ, ಭೂಪಾಲ, ಜಗದೀಶ್ವರನನ್ನು ಸ್ತುತಿಸುತ್ತಾರೆ. ನಾನಾ ತಂತ್ರವಿಧಾನದಿಂದ ಕಲಿಯುಗದಲ್ಲಿಯೂ ಹೇಗೆ ಅರ್ಚಿಸುತ್ತಾರೆಂಬುದನ್ನು ಹೇಳುತ್ತೇನೆ, ಕೇಳು (೩೧). ಅಂಗಗಳಾದ ಹೃದಯಾದಿಗಳಿಂದಲೂ ಉಪಾಂಗ

ಧ್ಯೇಯಂ ಸದಾ ಪರಿಭವಘ್ನಮಭೀಷ್ಟದೋಹಂ
ತೀರ್ಥಾಸ್ಪದಂ ಶಿವವಿರಿಂಚಿನುತಂ ಶರಣ್ಯಮ್ ।
ಭೃತ್ಯಾರ್ತಿಹಂ ಪ್ರಣತಪಾಲ ಭವಾಬ್ಧಿಪೋತಂ
ವಂದೇ ಮಹಾಪುರುಷ ತೇ ಚರಣಾರವಿಂದಮ್ ॥ ೩೩

ತ್ಯಕ್ತ್ವಾ ಸುದುಸ್ತ್ಯಜ ಸುರೇಪ್ಸಿತರಾಜ್ಯಲಕ್ಷ್ಮೀಂ
ಧರ್ಮಿಷ್ಠ ಆರ್ಯವಚಸಾ ಯದಗಾದರಣ್ಯಮ್ ।
ಮಾಯಾಮೃಗಂ ದಯಿತಯೇಪ್ಸಿತಮನ್ವಧಾವದ್
ವಂದೇ ಮಹಾಪುರುಷ ತೇ ಚರಣಾರವಿಂದಮ್ ॥ ೩೪

ಏವಂ ಯುಗಾನುರೂಪಾಭ್ಯಾಂ ಭಗವಾನ್ ಯುಗವರ್ತಿಭಿಃ ।
ಮನುಜೈರಿಜ್ಯತೇ ರಾಜನ್ ಶ್ರೇಯಸಾಮೀಶ್ವರೋ ಹರಿಃ ೩೫

---

ಗಳಾದ ಕೌಸ್ತುಭಾದಿಗಳಿಂದಲೂ ಸುದರ್ಶನಾದ್ಯಾಯುಧಗಳಿಂದಲೂ ಸುನಂದಾದಿ ಪಾರ್ಷದರಿಂದಲೂ ಯುಕ್ತನಾದ, ಕಾಂತಿಯಿಂದ ಕೃಷ್ಣವರ್ಣನಾದ ಶ್ರೀಕೃಷ್ಣನನ್ನು ವಿವೇಕಿಗಳಾದವರು ಸ್ತೋತ್ರನಾಮೋಚ್ಚಾರಣೆಗಳೇ ಪ್ರಧಾನವಾಗಿರುವ ಅರ್ಚನೆಗಳಿಂದ ಪೂಜಿಸುತ್ತಾರೆ (೩೨). ಅವರ ಸ್ತುತಿಯು ಈ ಪ್ರಕಾರವಾಗಿರುತ್ತದೆ— "ಹೇ ಪ್ರಣತಪಾಲಕ, ಮಹಾಪುರುಷ, ನಿನ್ನ ಚರಣಾರವಿಂದಕ್ಕೆ ಮಣಿಯುತ್ತಿದ್ದೇನೆ. ನಿನ್ನ ಚರಣಾರವಿಂದವು ಸದಾ ಧ್ಯಾನಯೋಗ್ಯವಾದದ್ದು. ಏಕೆಂದರೆ, ಅದು (ಇಂದ್ರಿಯಗಳಿಂದಲೂ ಕುಟುಂಬದಿಂದಲೂ ಉಂಟಾಗುವ) ಸೋಲನ್ನು ಪರಿಹರಿಸುತ್ತದೆ. ಅಭೀಷ್ಟವನ್ನು ಕರುಣಿಸುತ್ತದೆ, ಗಂಗಾದಿತೀರ್ಥಗಳಿಗೆ ಆಸ್ಪದವಾದ್ದರಿಂದ ಪರಮಪಾವನವಾಗಿದೆ. ಭಕ್ತರಿಗೆ ಆಶ್ರಯಯೋಗ್ಯವಾಗಿ (ಸುಖಾಸ್ಪದವಾದ್ದರಿಂದ) ಶಿವನಿಂದಲೂ, ಬ್ರಹ್ಮನಿಂದಲೂ ಸ್ತುತವಾಗಿದೆ. ಅಲ್ಲದೆ ನಿನ್ನ ಚರಣಾರವಿಂದವು ಭೃತ್ಯರ ಕಷ್ಟವನ್ನು ಪರಿಹರಿಸಿ, ಭವಸಾಗರದಲ್ಲಿ ತಾರಕವಾದ ನೌಕೆಯಾಗಿದೆ (೩೩). ಹೇ ಮಹಾಪುರುಷ, ಧರ್ಮಿಷ್ಠನಾದ ನೀನು (ಶ್ರೀರಾಮಾವತಾರದಲ್ಲಿ) ಅನ್ಯರಿಗೆ ದುಸ್ತ್ಯಜವೂ ದೇವತೆಗಳಿಗೆ ಕಾಮ್ಯವೂ ಆಗಿದ್ದ ರಾಜ್ಯಲಕ್ಷ್ಮಿಯನ್ನು, ತಂದೆಯಾದ ದಶರಥನ ಮಾತಿನಂತೆ ಪರಿತ್ಯಜಿಸಿ, ಅಡವಿಗೆ ನಡೆದಿರುವೆ. ದಯಿತೆಯಾದ ಜಾನಕಿಯು ಬಯಸಿದ ಮಾಯಾಮೃಗವನ್ನು ಹಿಂಬಾಲಿಸಿ ಹೋಗಿರುವೆ. ಅಂತಹ ನಿನ್ನ ಚರಣಾರವಿಂದಕ್ಕೆ ವಂದನೆ" (೩೪). ಎಲೈ

ಕಲಿಂ ಸಭಾಜಯಂತ್ಯಾರ್ಯಾ ಗುಣಜ್ಞಾಃ ಸಾರಭಾಗಿನಃ ।
ಯತ್ರ ಸಂಕೀರ್ತನೇನೈವ ಸರ್ವಃ ಸ್ವಾರ್ಥೋಽಭಿಲಭ್ಯತೇ ॥ ೩೬
ನ ಹ್ಯತಃ ಪರಮೋ ಲಾಭೋ ದೇಹಿನಾಂ ಭ್ರಾಮ್ಯತಾಮಿಹ ।
ಯತೋ ವಿಂದೇತ ಪರಮಾಂ ಶಾಂತಿಂ ನಶ್ಯತಿ ಸಂಸೃತಿಃ ॥ ೩೭
ಕೃತಾದಿಷು ಪ್ರಜಾ ರಾಜನ್ ಕಲಾವಿಚ್ಛಂತಿ ಸಂಭವಮ್ ।
ಕಲೌ ಖಲು ಭವಿಷ್ಯಂತಿ ನಾರಾಯಣಪರಾಯಣಾಃ ॥ ೩೮
ಕ್ವಚಿತ್ ಕ್ವಚಿನ್ಮಹಾರಾಜ ದ್ರವಿಡೇಷು ಚ ಭೂರಿಶಃ ।
ತಾಮ್ರಪರ್ಣೀ ನದೀ ಯತ್ರ ಕೃತಮಾಲಾ ಪಯಸ್ವಿನೀ ॥ ೩೯
ಕಾವೇರೀ ಚ ಮಹಾಪುಣ್ಯಾ ಪ್ರತೀಚೀ ಚ ಮಹಾನದೀ ।
ಯೇ ಪಿಬಂತಿ ಜಲಂ ತಾಸಾಂ ಮನುಜಾ ಮನುಜೇಶ್ವರ ।
ಪ್ರಾಯೋ ಭಕ್ತಾ ಭಗವತಿ ವಾಸುದೇವೇಽಮಲಾಶಯಾಃ ॥ ೪೦

ವಿದೇಹರಾಜ, ಶ್ರೇಯಸ್ಸುಗಳಿಗೆ ಒಡೆಯನಾದ ಭಗವಾನ್ ಶ್ರೀಹರಿಯು ಆಯಾ ಯುಗಗಳಲ್ಲಿರುವ ಮನುಜರಿಂದ ಯುಗಾನುರೂಪಗಳಾದ ನಾಮರೂಪಗಳಿಂದ ಪೂಜಿತನಾಗುತ್ತಾನೆ. ಗುಣಜ್ಞರೂ ಸಾರಗ್ರಾಹಿಗಳೂ ಆದ ಹಿರಿಯರು ಈ ಯುಗಗಳಲ್ಲಿ ಕಲಿಯುಗವನ್ನು ಹೆಚ್ಚಾಗಿ ಮನ್ನಿಸುತ್ತಾರೆ. ಏಕೆಂದರೆ, ಕಲಿಯುಗದಲ್ಲಿ ಸರ್ವಜಾತಿಯವರೂ ಭಗವಂತನ [1]ನಾಮಸಂಕೀರ್ತನದಿಂದಲೇ ಅಭೀಷ್ಟವನ್ನು ಪಡೆಯಬಲ್ಲರು (೩೫–೩೬). ಭಗವನ್ನಾಮಸಂಕೀರ್ತನದಿಂದ ಮಾನವನು ಪರಮ ಶಾಂತಿಯನ್ನು ಹೊಂದುತ್ತಾನೆ. ಸಂಸಾರವು ನಶಿಸುತ್ತದೆ. ಆದ್ದರಿಂದ ಸಂಸಾರದಲ್ಲಿ ಅಲೆದಾಡುತ್ತಿರುವ ಜನರಿಗೆ ನಾಮಸಂಕೀರ್ತನಕ್ಕಿಂತ ಪರಮಲಾಭಕರವಾದದ್ದು ಇನ್ನೊಂದಿಲ್ಲ (೩೭). ವಿದೇಹರಾಜ, ಕೃತಾದಿಯುಗಗಳಲ್ಲಿದ್ದ ಪ್ರಜೆಗಳು ಕಲಿಯುಗದಲ್ಲಿ ಹುಟ್ಟೋಣವೆಂದು ಆಶಿಸುತ್ತಾರೆ! ಅವರು ಕಲಿಯುಗದಲ್ಲಿ ಶ್ರೀಮನ್ನಾರಾಯಣನ ಭಕ್ತರಾಗುವರು (ಆದರಿಂದ ಸುಲಭವಾಗಿ ಮುಕ್ತರಾಗುವರು) (೩೮). ಮಹಾರಾಜ, ದ್ರಾವಿಡದೇಶದಲ್ಲಿ ವಿಶೇಷವಾಗಿ ಅಂತಹ ವಿಷ್ಣುಭಕ್ತರು ಉದ್ಭವಿಸುವರು. ತಾಮ್ರಪರ್ಣೀ, ಕೃತಮಾಲಾ, ಮಹಾಪುಣ್ಯಾನದಿಯಾದ

1. ಧ್ಯಾಯನ್ ಕೃತೇ ಯಜನ್ ಯಜ್ಞೈಸ್ತ್ರೇತಾಯಾಂ ದ್ವಾಪರೇಽರ್ಚಯನ್ ।
ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್ ॥
—ವಿ. ಪು. ೬–೨–೧೭.

ದೇವರ್ಷಿಭೂತಾಪ್ತನೃಣಾಂ ಪಿತೄಣಾಂ
ನ ಕಿಂಕರೋ ನಾಯಮೃಣೀ ಚ ರಾಜನ್ ।
ಸರ್ವಾತ್ಮನಾ ಯಃ ಶರಣಂ ಶರಣ್ಯಂ
ಗತೋ ಮುಕುಂದಂ ಪರಿಹೃತ್ಯ ಕರ್ತಮ್ ॥ ೪೧

ಸ್ವಪಾದಮೂಲಂ ಭಜತಃ ಪ್ರಿಯಸ್ಯ
ತ್ಯಕ್ತಾನ್ಯಭಾವಸ್ಯ ಹರಿಃ ಪರೇಶಃ ।
ವಿಕರ್ಮ ಯಚ್ಚೋತ್ಪತಿತಂ ಕಥಂಚಿದ್
ಧುನೋತಿ ಸರ್ವಂ ಹೃದಿ ಸನ್ನಿವಿಷ್ಟಃ ॥ ೪೨

ನಾರದ ಉವಾಚ—
ಧರ್ಮಾನ್ ಭಾಗವತಾನಿತ್ಥಂ ಶ್ರುತ್ವಾಥ ಮಿಥಿಲೇಶ್ವರಃ ।
ಜಾಯಂತೇಯಾನ್ ಮುನೀನ್ ಪ್ರೀತಃ ಸೋಪಾಧ್ಯಾಯೋ
ಹ್ಯಪೂಜಯತ್ ॥ ೪೩

---

ಕಾವೇರಿ, ಪಶ್ಚಿಮವಾಹಿನಿಯಾದ ಮಹಾನದಿ—ಇವು ಹರಿಯುವೆಡೆಯಲ್ಲಿ, ಈ ನದಿಗಳ ನೀರನ್ನು ಕುಡಿಯತಕ್ಕವರು ಪ್ರಾಯಶಃ ಶುದ್ಧಚಿತ್ತರಾಗಿ ಭಗವಾನ್ ವಾಸುದೇವನ ಭಕ್ತರಾಗುವರು (೩೯–೪೦). ಮಹಾರಾಜ, ಯಾವಾತನು ಭೇದದೃಷ್ಟಿಯನ್ನು ತೊರೆದು, ಶರಣ್ಯನಾದ ಶ್ರೀಮುಕುಂದನಿಗೆ ಶರಣಾಗತನಾಗಿರುವನೋ ಆತನು ದೇವ, ಋಷಿ, ಭೂತ, ಮನುಷ್ಯ, ಪಿತೃಗಳೆಂಬ ಪಂಚಯಜ್ಞ ದೇವತೆಗಳಿಗಾಗಲಿ, ಆಪ್ತರಾದ ಪೋಷ್ಯವರ್ಗದವರಿಗಾಗಲಿ ಕಿಂಕರನೂ ಆಗಿರುವುದಿಲ್ಲ, ಋಣಿಯೂ [1]ಆಗಿರುವುದಿಲ್ಲ (೪೧). ದೇಹಾದಿಯಾಗಿ ಅನ್ಯವಸ್ತುಗಳಲ್ಲಿ ಪ್ರೀತಿಯನ್ನು ತೊರೆದು, ತನ್ನ ಪಾದಮೂಲವನ್ನೇ ಆಶ್ರಯಿಸಿರತಕ್ಕ ಪ್ರಿಯನಾದ ಭಕ್ತನ ಹೃದಯದಲ್ಲಿ ಪರಮೇಶ್ವರನಾದ ಶ್ರೀಹರಿಯು ನೆಲೆಸಿರುತ್ತಾನೆ. ಭಕ್ತನು ಪ್ರಮಾದದಿಂದ ಯಾವುದಾದರೂ ನಿಷಿದ್ಧ ಕರ್ಮವನ್ನು ಒಂದುವೇಳೆ ಮಾಡಿದರೆ ಆ ದೋಷವನ್ನು ಪರಿಹರಿಸುತ್ತಾನೆ" ಎಂದು ಕರಭಾಜನನು ಹೇಳಿದನು (೪೨). (ಈ ಪ್ರಕಾರವಾಗಿ ವಿದೇಹರಾಜನಿಗೂ ಯೋಗೀಶ್ವರರಿಗೂ ನಡೆದ ಸಂವಾದವನ್ನು

---

1. ಈ ಶ್ಲೋಕದಲ್ಲಿರುವ ಕರ್ತ ಎಂಬ ಶಬ್ದಕ್ಕೆ ಭೇದವೆಂದು ಅರ್ಥ. 'ಕೃತೀ ಭೇದನೇ' ಧಾತು. ಅಥವಾ ಕರ್ತ = ಕೃತ್ಯ. ಹರಿಭಕ್ತನಿಗೆ ವಿಧಿನಿಷೇಧಗಳಿಲ್ಲವಾದ್ದರಿಂದ ಪಂಚಮಹಾಯಜ್ಞಾದಿಗಳನ್ನು ಮಾಡದಿದ್ದರೂ ದೋಷವಿಲ್ಲ ಎಂದು ಅಭಿಪ್ರಾಯ.

ತತೋಽಂತರ್ದಧಿರೇ ಸಿದ್ಧಾಃ ಸರ್ವಲೋಕಸ್ಯ ಪಶ್ಯತಃ ।
ರಾಜಾ ಧರ್ಮಾನುಪಾತಿಷ್ಠನ್ನವಾಪ ಪರಮಾಂ ಗತಿಮ್ ॥ ೪೪
ತ್ವಮಪ್ಯೇತಾನ್ ಮಹಾಭಾಗ ಧರ್ಮಾನ್ ಭಾಗವತಾನ್ ಶ್ರುತಾನ್ ।
ಆಸ್ಥಿತಃ ಶ್ರದ್ಧಯಾ ಯುಕ್ತೋ ನಿಃಸಂಗೋ ಯಾಸ್ಯಸೇ ಪರಮ್ ॥ ೪೫
ಯುವಯೋಃ ಖಲು ದಂಪತ್ಯೋರ್ಯಶಸಾ ಪೂರಿತಂ ಜಗತ್ ।
ಪುತ್ರತಾಮಗಮದ್ಯದ್ವಾಂ ಭಗವಾನೀಶ್ವರೋ ಹರಿಃ ॥ ೪೬
ದರ್ಶನಾಲಿಂಗನಾಲಾಪೈಃ ಶಯನಾಸನಭೋಜನೈಃ ।
ಆತ್ಮಾ ವಾಂ ಪಾವಿತಃ ಕೃಷ್ಣೇ ಪುತ್ರಸ್ನೇಹಂ ಪ್ರಕುರ್ವತೋಃ ॥ ೪೭

ವೈರೇಣ ಯಂ ನೃಪತಯಃ ಶಿಶುಪಾಲಪೌಂಡ್ರ-
ಶಾಲ್ವಾದಯೋ ಗತಿವಿಲಾಸವಿಲೋಕನಾದ್ಯೈಃ ।
ಧ್ಯಾಯಂತ ಆಕೃತಧಿಯಃ ಶಯನಾಸನಾದೌ
ತತ್ಸಾಮ್ಯಮಾಪುರನುರಕ್ತಧಿಯಾಂ ಪುನಃ ಕಿಮ್ ॥ ೪೮

---

ತಿಳಿಸಿ) ನಾರದರು ಹೀಗೆಂದರು: "ವಸುದೇವ, ಮಿಥಿಲೇಶ್ವರನಾದ ವಿದೇಹ ಜನಕನು ಈ ರೀತಿಯಾಗಿ ಭಾಗವತ ಧರ್ಮಗಳನ್ನು ಕೇಳಿ ಸಂಪ್ರೀತನಾಗಿ ತನ್ನ ಪುರೋಹಿತರಿಂದೊಡಗೂಡಿ ಜಯಂತೀಪುತ್ರರಾದ ಆ ಮುನಿಗಳನ್ನು ಪೂಜಿಸಿದನು (೪೩). ಅನಂತರ ಎಲ್ಲರೂ ನೋಡುತ್ತಿರುವಾಗಲೇ ಆ ಸಿದ್ಧಪುರುಷರು ಅಂತರ್ಧಾನ ಹೊಂದಿದರು. ವಿದೇಹರಾಜನು ಭಾಗವತಧರ್ಮಗಳನ್ನಾಚರಿಸಿ ಪರಮಗತಿಯನ್ನೈದಿದನು. ಮಹಾಭಾಗ–ವಸುದೇವ, ನೀನೂ ಸಹ ಇದುವರೆಗೆ ಕೇಳಿದ ಭಾಗವತ ಧರ್ಮಗಳನ್ನು ಫಲಾಸಕ್ತಿಯಿಲ್ಲದೆ ಶ್ರದ್ಧೆಯಿಂದ ಆಚರಿಸಿದರೆ, ಪರಮ ಶ್ರೇಯಸ್ಸನ್ನು ಪಡೆಯುವೆ (೪೪–೪೫). ದಂಪತಿಗಳಾದ ನಿಮ್ಮಿಬ್ಬರ ಕೀರ್ತಿಯೂ ಲೋಕದಲ್ಲಿ ಹರಡಿಹೋಗಿದೆ. ಭಗವಾನ್ ಈಶ್ವರನಾದ ಶ್ರೀಹರಿಯು ನಿಮ್ಮ ಪುತ್ರನಾಗಿ ಅವತರಿಸಿದ್ದಾನೆ ದರ್ಶನ, ಆಲಿಂಗನ, ಆಲಾಪ, ಶಯನ, ಆಸನ, ಭೋಜನಾದಿಗಳಿಂದ ಶ್ರೀಕೃಷ್ಣನಲ್ಲಿ ಪುತ್ರನೆಂಬ ಪ್ರೀತಿಯನ್ನು ಪ್ರಕಟಿಸುತ್ತ ಬಂದಿರುವ ನಿಮ್ಮಿಬ್ಬರ ಆತ್ಮವು ಪಾವನವಾಗಿದೆ (೪೬–೪೭). ವಸುದೇವ, ಮಲಗಿದಾಗಲೂ ಕುಳಿತಾಗಲೂ ವೈರಬುದ್ಧಿಯಿಂದ ಶ್ರೀಕೃಷ್ಣನನ್ನು ಸ್ಮರಿಸಿಕೊಳ್ಳುತ್ತಿದ್ದ ಶಿಶುಪಾಲ, ಪೌಂಡ್ರ, ಸಾಲ್ವ—ಮೊದಲಾದ ನೃಪಾಲರೇ ಸದ್ಗತಿಯನ್ನು ಹೊಂದಿದ್ದಾರೆ. ಶ್ರೀಕೃಷ್ಣನ ಗತಿವಿಲಾಸವನ್ನು ಸ್ಮರಿಸಿಕೊಂಡಾಗ, ಅವನನ್ನು ನೋಡಿದಾಗ—ಹೀಗೆ ಹಲವಾರು

ಮ್ಯಾಪತ್ಯಬುದ್ಧಿಮಕೃಥಾಃ ಕೃಷ್ಣೇ ಸರ್ವಾತ್ಮನೀಶ್ವರೇ ।
ಮಾಯಾಮನುಷ್ಯಭಾವೇನ ಗೂಢೈಶ್ವರ್ಯೇ ಪರೇಽವ್ಯಯೇ ॥ ೪೯
ಭೂಭಾರಾಸುರರಾಜನ್ಯಹಂತವೇ ಗುಪ್ತಯೇ ಸತಾಮ್ ।
ಅವತೀರ್ಣಸ್ಯ ನಿರ್ವೃತ್ಯೈ ಯಶೋ ಲೋಕೇ ವಿತನ್ಯತೇ ॥ ೫೦

ಶ್ರೀಶುಕ ಉವಾಚ—

ಏತಚ್ಛ್ರುತ್ವಾ ಮಹಾಭಾಗೋ ವಸುದೇವೋಽತಿವಿಸ್ಮಿತಃ ।
ದೇವಕೀ ಚ ಮಹಾಭಾಗಾ ಜಹತುರ್ಮೋಹಮಾತ್ಮನಃ ॥ ೫೧
ಇತಿಹಾಸಮಿಮಂ ಪುಣ್ಯಂ ಧಾರಯೇದ್ಯಃ ಸಮಾಹಿತಃ ।
ಸ ವಿಧೂಯೇಹ ಶಮಲಂ ಬ್ರಹ್ಮಭೂಯಾಯ ಕಲ್ಪತೇ ॥ ೫೨

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಪಂಚಮೋಽಧ್ಯಾಯಃ

---

ಸಂದರ್ಭಗಳಲ್ಲಿ ಶ್ರೀಕೃಷ್ಣನ ಆಕೃತಿಯನ್ನೇ ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದರಾದ ಪ್ರಯುಕ್ತ ಶಿಶುಪಾಲಾದಿ ವೈರಿಗಳೂ ಸಹ ಶ್ರೀಕೃಷ್ಣನಲ್ಲಿ ಸಾರೂಪ್ಯಮುಕ್ತಿಯನ್ನು ಐದಿದರು. ಇನ್ನು ಆತನಲ್ಲಿ ಅನುರಕ್ತರಾದವರ ವಿಷಯವಾಗಿ ಹೇಳತಕ್ಕದ್ದೇನಿದೆ? (೪೮). ವಸುದೇವ, ಶ್ರೀಕೃಷ್ಣನು ಸರ್ವಾತ್ಮನೂ ಈಶ್ವರನೂ ಅವ್ಯಯನೂ ಪರತತ್ತ್ವವೂ ಆಗಿದ್ದಾನೆ. ಮಾಯೆಯಿಂದ ಮನುಷ್ಯನಾಗಿ ಅವತರಿಸಿ ತನ್ನ ಈಶ್ವರ ಶಕ್ತಿಯನ್ನು ಗೂಢವಾಗಿ ಇರಿಸಿಕೊಂಡಿದ್ದಾನೆ. ಅವನನ್ನು ನಿನ್ನ ಮಗನೆಂದು ತಿಳಿದುಕೊಳ್ಳಬೇಡ (೪೯). ಭೂಮಿಗೆ ಭಾರವಾಗಿದ್ದ ಅಸುರರನ್ನೂ ದುಷ್ಟ ಕ್ಷತ್ರಿಯರನ್ನೂ ಸಂಹರಿಸಿ ಸಜ್ಜನರನ್ನು ಪಾಲಿಸುವುದಕ್ಕಾಗಿಯೂ ಅರ್ಹರಾದ ವರಿಗೆ ಮೋಕ್ಷಮಾರ್ಗವನ್ನು ತೋರಿಸುವುದಕ್ಕಾಗಿಯೂ ಅವತರಿಸಿರುವ ಆತನ ಕೀರ್ತಿಯು ಲೋಕದಲ್ಲಿ ಹರಡಿರುತ್ತದೆ" ಎಂದರು (೫೦). ಪರೀಕ್ಷಿತರಾಜ, ನಾರದರ ಈ ನುಡಿಯನ್ನು ಕೇಳಿ ಮಹಾಭಾಗನಾದ ವಸುದೇವನೂ ದೇವಕಿಯೂ ವಿಸ್ಮಿತರಾಗಿ ಮನಸ್ಸಿನ ದುಗುಡವನ್ನು ಕಳೆದುಕೊಂಡರು—ಎಂದು ಶುಕಮಹರ್ಷಿ ಗಳು ಹೇಳಿದರು (೫೧). ಪುಣ್ಯಕರವಾದ ಈ ಚರಿತೆಯನ್ನು ಶಾಂತಚಿತ್ತನಾಗಿ ಗ್ರಹಿಸತಕ್ಕವನು ತನ್ನ ಪಾಪವನ್ನು ಕಳೆದುಕೊಂಡು ಮೋಕ್ಷವನ್ನೈದಲು ಸಮರ್ಥ ನಾಗುತ್ತಾನೆ (೫೨).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಐದನೆಯ ಅಧ್ಯಾಯ

# ಷಷ್ಠೋಽಧ್ಯಾಯಃ

ಶ್ರೀಶುಕ ಉವಾಚ—

ಅಥ ಬ್ರಹ್ಮಾಽಽತ್ಮಜೈರ್ದೇವೈಃ ಪ್ರಜೇಶೈರಾವೃತೋಽಭ್ಯಗಾತ್ ।
ಭವಶ್ಚ ಭೂತಭವ್ಯೇಶೋ ಯಯೌ ಭೂತಗಣೈರ್ವೃತಃ ॥ ೧

ಇಂದ್ರೋ ಮರುದ್ಭಿರ್ಭಗವಾನಾದಿತ್ಯಾ ವಸವೋಽಶ್ವಿನೌ ।
ಋಭವೋಽಂಗಿರಸೋ ರುದ್ರಾ ವಿಶ್ವೇ ಸಾಧ್ಯಾಶ್ಚ ದೇವತಾಃ ॥ ೨

ಗಂಧರ್ವಾಪ್ಸರಸೋ ನಾಗಾಃ ಸಿದ್ಧಚಾರಣಗುಹ್ಯಕಾಃ ।
ಋಷಯಃ ಪಿತರಶ್ಚೈವ ಸವಿದ್ಯಾಧರಕಿನ್ನರಾಃ ॥ ೩

ದ್ವಾರಕಾಮುಪಸಂಜಗ್ಮುಃ ಸರ್ವೇ ಕೃಷ್ಣದಿದೃಕ್ಷವಃ ।
ವಪುಷಾ ಯೇನ ಭಗವಾನ್ ನರಲೋಕಮನೋರಮಃ ।
ಯಶೋ ವಿತೇನೇ ಲೋಕೇಷು ಸರ್ವಲೋಕಮಲಾಪಹಮ್ ॥ ೪

## ಅಧ್ಯಾಯ ೬

ಬ್ರಹ್ಮಾದಿಗಳು ಆಗಮಿಸಿ ಶ್ರೀಕೃಷ್ಣನನ್ನು ಸ್ತುತಿಸಿ ವೈಕುಂಠಕ್ಕೆ ನಿರ್ಗಮಿಸಬೇಕೆಂದು ಪ್ರಾರ್ಥಿಸುವುದು. ಶ್ರೀಕೃಷ್ಣನ ಉತ್ತರ. ಪ್ರಭಾಸಕ್ಷೇತ್ರಕ್ಕೆ ಹೋಗಬೇಕೆಂದು ಯಾದವರಿಗೆ ಆದೇಶ. ಏಕಾಂತದಲ್ಲಿ ಉದ್ಧವನ ಪ್ರಾರ್ಥನೆ.

ಶುಕಮುನಿಗಳು ಹೇಳಿದರು : ಪರೀಕ್ಷಿತರಾಜ, ಅನಂತರ ಬ್ರಹ್ಮದೇವನು ತನ್ನ ಮಾನಸಪುತ್ರರಾದ ಸನಕಾದಿಗಳಿಂದಲೂ ದೇವತೆಗಳಿಂದಲೂ ಪ್ರಜಾಪತಿಗಳಿಂದಲೂ ಪರಿವೃತನಾಗಿ, ಹಾಗೆಯೇ ಭೂತಭವಿಷ್ಯತ್ತುಗಳಿಗೆ ಈಶ್ವರನಾದ ಶಿವನು ಭೂತಗಣಗಳಿಂದ ಪರಿವೃತನಾಗಿ ದ್ವಾರಕೆಗೆ ಬಂದರು (೧). ಭಗವಾನ್ ಇಂದ್ರನೂ ಮರುತ್ತುಗಳೂ ಆದಿತ್ಯರೂ ವಸುಗಳೂ ಅಶ್ವಿನೀ ದೇವತೆಗಳೂ ಋಭು ಅಂಗಿರಸ್ ರುದ್ರ ವಿಶ್ವೇದೇವ ಸಾಧ್ಯಾದಿದೇವತೆಗಳೂ ಗಂಧರ್ವ ಅಪ್ಸರಸ್ ನಾಗ ಸಿದ್ಧಚಾರಣ ಗುಹ್ಯಕರೂ ಋಷಿಗಳೂ ಪಿತೃಗಳೂ ವಿದ್ಯಾಧರಕಿನ್ನರರೂ ಶ್ರೀಕೃಷ್ಣನನ್ನು ನೋಡುವುದಕ್ಕಾಗಿ ಎಲ್ಲರೂ ದ್ವಾರಕೆಗೆ ಬಂದರು (೨). ಭಗವಂತನು ಯಾವ ಬಗೆಯ ರೂಪವನ್ನು ಧರಿಸಿ ಸರ್ವಲೋಕ ಮನೋರಮನಾಗಿ, ಸರ್ವಲೋಕ ಪಾಪಹಾರಿಯಾದ ಕೀರ್ತಿಯನ್ನು ಲೋಕಗಳಲ್ಲಿ ವಿಸ್ತರಿಸಿದನೋ ಆ ರೂಪವನ್ನು ನೋಡುವುದಕ್ಕಾಗಿ ಅವರು ಬಂದರು (೩). ಸಕಲ ಸಮೃದ್ಧಿಗಳಿಂದಲೂ ವಿರಾಜಿಸುತ್ತಿದ್ದ

ತಸ್ಯಾಂ ವಿಭ್ರಾಜಮಾನಾಯಾಂ ಸಮೃದ್ಧಾಯಾಂ ಮಹರ್ದ್ಧಿಭಿಃ ।
ವ್ಯಚಕ್ಷತಾವಿತೃಪ್ತಾಕ್ಷಾಃ ಕೃಷ್ಣಮದ್ಭುತದರ್ಶನಮ್ ॥ ೫

ಸ್ವರ್ಗೋದ್ಯಾನೋಪಗೈರ್ಮಾಲ್ಯೈಃ ಛಾದಯಂತೋ ಯದೂತ್ತಮಮ್ ।
ಗೀರ್ಭಿಶ್ಚಿತ್ರಪದಾರ್ಥಾಭಿಸ್ತುಷ್ಟುವುರ್ಜಗದೀಶ್ವರಮ್ ॥ ೬

ದೇವಾ ಊಚುಃ—

ನತಾಃ ಸ್ಮ ತೇ ನಾಥ ಪದಾರವಿಂದಂ
ಬುದ್ಧೀಂದ್ರಿಯ ಪ್ರಾಣಮನೋವಚೋಭಿಃ ।
ಯಚ್ಚಿಂತ್ಯತೇಽಂತರ್ಹೃದಿ ಭಾವಯುಕ್ತೈ-
ರ್ಮುಮುಕ್ಷುಭಿಃ ಕರ್ಮಮಯೋರುಪಾಶಾತ್ ॥ ೭

ತ್ವಂ ಮಾಯಯಾ ತ್ರಿಗುಣಯಾಽಽತ್ಮನಿ ದುರ್ವಿಭಾವ್ಯಂ
ವ್ಯಕ್ತಂ ಸೃಜಸ್ಯವಸಿ ಲುಂಪಸಿ ತದ್ಗುಣಸ್ಥಃ ।
ನೈತೈರ್ಭವಾನಜಿತ ಕರ್ಮಭಿರಜ್ಯತೇ ವೈ
ಯತ್ಸ್ವೇ ಸುಖೇಽವ್ಯವಹಿತೇಽಭಿರತೋಽನವದ್ಯಃ ॥ ೮

ದ್ವಾರಕೆಯಲ್ಲಿ ಅವರು ಅದ್ಭುತದರ್ಶನನಾದ ಶ್ರೀಕೃಷ್ಣನನ್ನು ಕಂಡರು. ಎಷ್ಟು ನೋಡಿದರೂ ಬ್ರಹ್ಮಾದಿಗಳ ಕಣ್ಣುಗಳಿಗೆ ತೃಪ್ತಿಯಾಗಲಿಲ್ಲ. ಸ್ವರ್ಗೋದ್ಯಾನದಿಂದ ತಂದ ಪುಷ್ಪಗಳನ್ನು ಆ ಯದೂತ್ತಮನ ಮೇಲೆ ಮಳೆಗರೆದು, ಚಿತ್ರಪದಬಂಧಗಳಿಂದಲೂ ಪರಿಪುಷ್ಟಾರ್ಥಗಳಿಂದಲೂ ಕೂಡಿದ ವಾಕ್ಯಗಳಿಂದ ಆ ಜಗದೀಶ್ವರನನ್ನು ಸ್ತುತಿಸಿದರು (೪-೬): "ಹೇ ಸ್ವಾಮಿ, ಕರ್ಮಮಯವಾದ ಮಹಾಪಾಶದಿಂದ ಬಿಡುಗಡೆಯನ್ನು ಬಯಸುವ ಮುಮುಕ್ಷುಗಳು ಭಾವಯುಕ್ತರಾಗಿ ತಮ್ಮ ಹೃದಯದಲ್ಲಿ ಯಾವುದನ್ನು ಧ್ಯಾನಿಸುತ್ತಿರುವರೋ ಆ ನಿನ್ನ ಪದಾರವಿಂದಕ್ಕೆ ನಾವು ಜ್ಞಾನೇಂದ್ರಿಯ, ಪ್ರಾಣ, ಮನೋ, ವಾಕ್ಕುಗಳಿಂದ [1]ನಮಸ್ಕರಿಸಿದ್ದೇವೆ (೭). ಹೇ ಅಜಿತ, ನೀನು ತ್ರಿಗುಣಾತ್ಮಕವಾದ ಮಾಯೆಯ ಗುಣಗಳಲ್ಲಿ ನಿಯಂತೃವಾಗಿ ನೆಲೆಸಿ, ಮನಸ್ಸಿಗೂ ಊಹಿಸಲಶಕ್ಯವಾದ ಈ ಪ್ರಪಂಚವನ್ನು ನಿನ್ನಲ್ಲಿಯೇ ಆ ಮಾಯೆಯಿಂದ ಸೃಜಿಸುತ್ತೀಯೆ, ಪಾಲಿಸುತ್ತೀಯೆ, ಲಯಗೊಳಿಸುತ್ತೀಯೆ. ಈ ಕ್ರಿಯೆಗಳಿಂದ ನಿನಗೆ ಯಾವ ಲೇಪವೂ ಇಲ್ಲ. ನಿರ್ದೋಷನಾದ ನೀನು

1. ಸಾಷ್ಟಾಂಗ ಪ್ರಣಾಮವನ್ನು ಮಾಡಿದ್ದೇವೆಯೆಂದು ತಾತ್ಪರ್ಯ.

ಶುದ್ಧಿರ್ನೃಣಾಂ ನ ತು ತಥೇಡ್ಯ ದುರಾಶಯಾನಾಂ
ವಿದ್ಯಾಶ್ರುತಾಧ್ಯಯನ ದಾನತಪಃಕ್ರಿಯಾಭಿಃ ।
ಸತ್ತ್ವಾತ್ಮನಾಮೃಷಭ ತೇ ಯಶಸಿ ಪ್ರವೃದ್ಧ-
ಸಚ್ಛ್ರದ್ಧಯಾ ಶ್ರವಣಸಂಭೃತಯಾ ಯಥಾ ಸ್ಯಾತ್ ॥ ೯

ಸ್ಯಾನ್ನಸ್ತವಾಂಘ್ರಿರಶುಭಾಶಯಧೂಮಕೇತುಃ
ಕ್ಷೇಮಾಯ ಯೋ ಮುನಿಭಿರಾರ್ದ್ರಹೃದೋಹ್ಯಮಾನಃ ।
ಯಃ ಸಾತ್ವತೈಃ ಸಮವಿಭೂತಯ ಆತ್ಮವದ್ಭಿ-
ರ್ವ್ಯೂಹೇಽರ್ಚಿತಃ ಸವನಶಃ ಸ್ವರತಿಕ್ರಮಾಯ ॥ ೧೦

ಯಶ್ಚಿಂತ್ಯತೇ ಪ್ರಯತಪಾಣಿಭಿರಧ್ವರಾಗ್ನೌ
ತ್ರಯ್ಯಾ ನಿರುಕ್ತವಿಧಿನೇಶ ಹವಿರ್ಗೃಹೀತ್ವಾ ।
ಅಧ್ಯಾತ್ಮಯೋಗ ಉತ ಯೋಗಿಭಿರಾತ್ಮಮಾಯಾಂ
ಜಿಜ್ಞಾಸುಭಿಃ ಪರಮಭಾಗವತೈಃ ಪರೀಷ್ಟಃ ॥ ೧೧

---

ನಿರಂತರವಾದ ಆತ್ಮಾನಂದದಲ್ಲಿ ಮುಳುಗಿರುತ್ತೀಯೆ (೮). ಸ್ತುತ್ಯನೂ ಶ್ರೇಷ್ಠನೂ ಆದ ಹೇ ಪ್ರಭುವೆ, ಶುದ್ಧಹೃದಯರಾದ ಸಜ್ಜನರಿಗೆ ನಿನ್ನ ಕೀರ್ತಿಯನ್ನು ಕೇಳುವುದರಲ್ಲಿ ಹೆಚ್ಚಿದ ಉತ್ತಮ ಶ್ರದ್ಧೆಯಿಂದ ಪಾಪಶೋಧನೆಯಾಗುತ್ತದೆ. ಆದರೆ ಅಶುದ್ಧಹೃದಯರಾದ ರಾಗಿಗಳಿಗೆ ವಿದ್ಯೆ, ವೇದಾರ್ಥಜ್ಞಾನ, ವೇದಾಧ್ಯಯನ, ದಾನ, ವ್ರತಾಚರಣೆ, ವಿಹಿತಕರ್ಮಾಚರಣೆಗಳಿಂದಲೂ ಸಹ ಅಷ್ಟು [1] ಪಾಪಶೋಧನೆಯಾಗುವುದಿಲ್ಲ (೯). ಅಶುಭಕರವಾದ ನಮ್ಮ ಹೃದಯವಾಸನೆಗಳಿಗೆ ನಿನ್ನ ಚರಣವು ಧೂಮಕೇತುವಿನಂತೆ ದಾಹಕವಾಗಲಿ. ಮುನಿಗಳು ತಮ್ಮ ಕ್ಷೇಮಕ್ಕಾಗಿ ಈ ಚರಣವನ್ನು ಆರ್ದ್ರಹೃದಯದಿಂದ ಧ್ಯಾನಿಸುತ್ತಾರೆ. ಸಾತ್ತ್ವತಭಕ್ತರು ಇದನ್ನು ಉತ್ತಮವಾದ ಐಶ್ವರ್ಯವನ್ನು ಪಡೆಯುವುದಕ್ಕಾಗಿ ವಾಸುದೇವವ್ಯೂಹದಲ್ಲಿ ಅರ್ಚಿಸಿದ್ದಾರೆ. ಅವರಲ್ಲಿಯೂ ಆತ್ಮವಿದರು ಸ್ವರ್ಗವನ್ನು ಮೀರಿದ ವೈಕುಂಠವನ್ನು ಸೇರುವುದಕ್ಕಾಗಿ ತ್ರಿಕಾಲದಲ್ಲಿಯೂ ನಿನ್ನ ಪಾದವನ್ನು ಅರ್ಚಿಸುತ್ತಾರೆ (೧೦). ಓ ಪ್ರಭುವೆ, ಯಜ್ಞದಲ್ಲಿ ಹವಿಸ್ಸನ್ನು ಹಿಡಿದುಕೊಂಡು ಕೈಜೋಡಿಸಿ ಯಾಜ್ಞಿಕರು,

---

1. ಹರಿಕಥಾಶ್ರವಣದಿಂದಾಗುವಷ್ಟು ಮನಃಶುದ್ಧಿಯು ಇನ್ನು ಯಾವುದರಿಂದಲೂ ಆಗುವುದಿಲ್ಲ. ಅಂತಹ ಕಥೆಯನ್ನು ವಿಸ್ತರಿಸಿ ಭಕ್ತರನ್ನು ಉದ್ಧರಿಸುವುದಕ್ಕಾಗಿ ನೀನು ಅವತರಿಸಿ ಕರ್ಮಗಳನ್ನು ಆಚರಿಸುತ್ತೀಯೆ ಎಂದು ಅಭಿಪ್ರಾಯ.

ಪರ್ಯುಷ್ಟಯಾ ತವ ವಿಭೋ ವನಮಾಲಯೇಯಂ
ಸಂಸ್ಪರ್ಧಿನೀ ಭಗವತೀ ಪ್ರತಿಪತ್ನಿವಚ್ಛ್ರೀಃ ।
ಯಃ ಸುಪ್ರಣೀತಮಮುಯಾರ್ಹಣಮಾದದನ್ನೋ
ಭೂಯಾತ್ ಸದಾಂಘ್ರಿರಶುಭಾಶಯಧೂಮಕೇತುಃ ॥ ೧೨

ಕೇತುಸ್ತ್ರಿವಿಕ್ರಮಯುತಸ್ತ್ರಿಪತತ್ಪತಾಕೋ
ಯಸ್ತೇ ಭಯಾಭಯಕರೋಽಸುರದೇವಚಮ್ವೋಃ ।
ಸ್ವರ್ಗಾಯ ಸಾಧುಷು ಖಲೇಷ್ವಿತರಾಯ ಭೂಮನ್
ಪಾದಃ ಪುನಾತು ಭಗವನ್ ಭಜತಾಮಘಂ ನಃ ॥ ೧೩

---

ವೇದೋಕ್ತ ವಿಧಿಯಿಂದ ಇಂದ್ರಾದಿರೂಪದಲ್ಲಿಯೋ, ಆಹವನೀಯಾದಿಯಜ್ಞಾಗ್ನಿಗಳಲ್ಲಿ ನಿನ್ನ ಪಾದವನ್ನು ಧ್ಯಾನಿಸುತ್ತಾರೆ. ನಿನ್ನ ಮಾಯೆಯಾದ ಅಣಿಮಾದಿ ಸಿದ್ಧಿಗಳನ್ನು ಬಯಸತಕ್ಕ ಯೋಗಿಗಳು ಆತ್ಮಸಂಬಂಧಿಯಾದ ಯೋಗವಿಧಾನದಲ್ಲಿ ನಿನ್ನ ಈ ಪಾದವನ್ನೇ ಸ್ಮರಿಸುತ್ತಾರೆ. ಪರಮಭಾಗವತರು ಸರ್ವವಿಧದಲ್ಲಿಯೂ ಪೂಜಿಸತಕ್ಕ ಪಾದವಿದು (೧೧). ಹೇ ಸ್ವಾಮಿ, ಈ ವನಮಾಲೆಯು [1]ಪರ್ಯುಷಿತವಾಗಿ ನಿರ್ಮಾಲ್ಯವಾಗಿದ್ದರೂ ತಾನಿರುವ ವಕ್ಷಃಸ್ಥಳದಲ್ಲಿ ಇದ್ದಾಳೆಂದು ಭಗವತಿಯಾದ ಲಕ್ಷ್ಮೀದೇವಿಯು ಸವತಿಯಂತೆ ವನಮಾಲೆಯೊಡನೆ ಸ್ಪರ್ಧಿಸುತ್ತಿದ್ದಾಳೆ! ಆದರೂ ಸಹ ಈ ವನಮಾಲೆಯು ಭಕ್ತರಿಂದ ಪ್ರೀತಿಪೂರ್ವಕವಾಗಿ ಅರ್ಪಿತವಾಗಿದೆಯೆಂದು ನೀನು ಸ್ವೀಕರಿಸಿದ್ದೀಯೆ. ನಿನ್ನ ಪಾದವು ನಮ್ಮ ಅಶುಭಕರವಾದ ವಾಸನೆಗಳಿಗೆ ಧೂಮಕೇತುವಿನಂತೆ ದಾಹಕವಾಗಲಿ (೧೨). ಹೇ ಭಗವನ್, ಈ ನಿನ್ನ ಪಾದವು ಬಲಿನಿಗ್ರಹಸಮಯದಲ್ಲಿ ಮೂರು ಹೆಜ್ಜೆಗಳನ್ನಿಟ್ಟು ತ್ರಿಪಥಗೆಯಾದ ಗಂಗೆಯನ್ನು ಪತಾಕೆಯಂತೆ ಧರಿಸಿದ ವಿಜಯಧ್ವಜಸ್ತಂಭವೆನಿಸಿದೆ. ಅಸುರಸೇನೆಗೆ ಭಯವನ್ನೂ ಸುರಸೇನೆಗೆ ಅಭಯವನ್ನೂ ನೀಡತಕ್ಕದ್ದಾಗಿದೆ. ಸಜ್ಜನರಿಗೆ ಸ್ವರ್ಗಕ್ಕೂ ದುರ್ಜನರಿಗೆ ಅಧೋಗಮನಕ್ಕೂ ಕಾರಣವಾಗಿದೆ. ಹೇ ಭೂಮನ್,

---

1. ಪರ್ಯುಷ್ಟ = ಪರ್ಯುಷಿತ. ಅಥವಾ ಪರ್ಯುಷ್ಟ = ಪರಿ-ಪರಿತಃ, ಉಷ್ಟ = ಕಾಂತವಾದ (ಶೋಭಿಸುವ). ವಶ-ಕಾಂತೌ. ವನಮಾಲೆಯು ದೇಹದ ತುಂಬ ಶೋಭಿಸುತ್ತದೆಯೆಂದು ವಕ್ಷಃಸ್ಥಳದಲ್ಲಿ ಮಾತ್ರ ನೆಲೆಸಿದ ಲಕ್ಷ್ಮಿಗೆ ಅಸಹನೆ.

ನಸ್ಯೋತಗಾವ ಇವ ಯಸ್ಯ ವಶೇ ಭವಂತಿ
ಬ್ರಹ್ಮಾದಯಸ್ತನುಭೃತೋ ಮಿಥುರರ್ದ್ಯಮಾನಾಃ ।
ಕಾಲಸ್ಯ ತೇ ಪ್ರಕೃತಿಪೂರುಷಯೋಃ ಪರಸ್ಯ
ಶಂ ನಸ್ತನೋತು ಚರಣಃ ಪುರುಷೋತ್ತಮಸ್ಯ ॥ ೧೪

ಅಸ್ಯಾಸಿ ಹೇತುರುದಯಸ್ಥಿತಿಸಂಯಮಾನಾ-
ಮವ್ಯಕ್ತಜೀವಮಹತಾಮಪಿ ಕಾಲಮಾಹುಃ ।
ಸೋಽಯಂ ತ್ರಿಣಾಭಿರಖಿಲಾಪಚಯೇ ಪ್ರವೃತ್ತಃ
ಕಾಲೋ ಗಭೀರರಯ ಉತ್ತಮಪೂರುಷಸ್ತ್ವಮ್ ॥ ೧೫

ತ್ವತ್ತಃ ಪುಮಾನ್ ಸಮಧಿಗಮ್ಯ ಯಯಾ ಸ್ವವೀರ್ಯಂ
ಧತ್ತೇ ಮಹಾಂತಮಿವ ಗರ್ಭಮಮೋಘವೀರ್ಯಃ ।
ಸೋಽಯಂ ತಯಾನುಗತ ಆತ್ಮನ ಅಂಡಕೋಶಂ
ಹೈಮಂ ಸಸರ್ಜ ಬಹಿರಾವರಣೈರುಪೇತಮ್ ॥ ೧೬

---

ಭಕ್ತರಾದ ನಮ್ಮ [1]ಪಾಪವನ್ನು ಈ ನಿನ್ನ ಪಾದವು ಶೋಧಿಸಲಿ (೧೩). ಪ್ರಕೃತಿ ಪುರುಷರಿಗೂ ಪರವಾಗಿ ಮೂಲಪ್ರವರ್ತಕನಾದ ಕಾಲಪುರುಷ ನೀನು. ಪರಸ್ಪರ ಪೀಡೆಗೆ ಒಳಗಾಗತಕ್ಕ ಬ್ರಹ್ಮನೇ ಮೊದಲಾದ ಶರೀರಿಗಳು ಮೂಗುದಾಣಹಾಕಿದ ಹೋರಿಗಳಂತೆ ನಿನ್ನ ವಶದಲ್ಲಿದ್ದಾರೆ! ಪುರುಷೋತ್ತಮನಾದ ನಿನ್ನ ಚರಣವು ನಮಗೆ ಕುಶಲವನ್ನುಂಟುಮಾಡಲಿ (೧೪). ಓ ಗಂಭೀರವಾದ ಗತಿಯುಳ್ಳವನೆ, ಈ ವಿಶ್ವದ ಉತ್ಪತ್ತಿಸ್ಥಿತಿಲಯಗಳಿಗೆ ಕಾರಣನಾಗಿದ್ದೀಯೆ. ಪ್ರಕೃತಿ, ಪುರುಷ, ಮಹತ್ತತ್ತ್ವಗಳಿಗೆ ನೀನು ಕಾಲಸ್ವರೂಪನಾಗಿ ನಿಯಂತಾರನಾಗಿದ್ದೀಯೆ—ಎಂದು ಹೇಳುತ್ತಾರೆ. ಅಖಿಲವಸ್ತುಗಳ ಅಪಚಯದಲ್ಲಿ ಪ್ರವೃತ್ತನಾದ ನೀನು [2]ತ್ರಿನಾಭಿಯಾದ ಕಾಲನೂ ಉತ್ತಮ [3]ಪುರುಷನೂ ಆಗಿದ್ದೀಯೆ (೧೫) ನಿನ್ನಿಂದಲೇ

---

1. ಚರಣಂ ಪವಿತ್ರಂ ವಿತತಂ ಪುರಾಣಂ ಯೇನ ಪೂತಸ್ತರತಿ ದುಷ್ಕೃತಾನಿ ।
ತೇನ ಪವಿತ್ರೇಣ ಶುದ್ಧೇನ ಪೂತಾ ಅತಿಪಾಪ್ಮಾನಮರಾತಿಂ ತರೇಮ ॥

2. ಮಳೆಗಾಲ, ಚಳಿಗಾಲ, ಬೇಸಿಗೆ ಕಾಲ—ಎಂಬ ತ್ರಿಕಾಲಗಳು ನಾಭಿಯಾಗಿ ಉಳ್ಳಕಾಲ-ಸಂವತ್ಸರ.

3. ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ॥ —ಗೀತಾ ೧೫-೧೭

ತತ್ತಸ್ಥುಷಶ್ಚ ಜಗತಶ್ಚ ಭವಾನಧೀಶೋ
ಯನ್ಮಾಯಯೋತ್ಥಗುಣವಿಕ್ರಿಯಯೋಪನೀತಾನ್ ।
ಅರ್ಥಾನ್ ಜುಷನ್ನಪಿ ಹೃಷೀಕಪತೇ ನ ಲಿಪ್ತೋ
ಯೇಽನ್ಯೇ ಸ್ವತಃ ಪರಿಹೃತಾದಪಿ ಬಿಭ್ಯತಿ ಸ್ಮ ॥ ೧೭

ಸ್ಮಾಯಾವಲೋಕಲವದರ್ಶಿತಭಾವಹಾರಿ-
ಭ್ರೂಮಂಡಲಪ್ರಹಿತಸೌರತ ಮಂತ್ರಶೌಂಡ್ಯೈಃ ।
ಪತ್ನ್ಯಸ್ತು ಷೋಡಶಸಹಸ್ರಮನಂಗಬಾಣೈ-
ರ್ಯಸ್ಯೇಂದ್ರಿಯಂ ವಿಮಥಿತುಂ ಕರಣೈರ್ನ ವಿಭ್ವ್ಯಃ ॥ ೧೮

ವಿಭ್ವ್ಯಸ್ತವಾಮೃತಕಥೋದವಹಾಸ್ತ್ರಿಲೋಕ್ಯಾಃ
ಪಾದಾವನೇಜಸರಿತಃ ಶಮಲಾನಿ ಹಂತುಮ್ ।
ಆನುಶ್ರವಂ ಶ್ರುತಿಭಿರಂಘ್ರಿಜಮಂಗಸಂಗೈ-
ಸ್ತೀರ್ಥದ್ವಯಂ ಶುಚಿಷದಸ್ತ ಉಪಸ್ಪೃಶಂತಿ ॥ ೧೯

ಅಮೋಘ ವೀರ್ಯನಾದ ವಿರಾಟ್ ಪುರುಷನು ಶಕ್ತಿಯನ್ನು ಪಡೆದು ಮಹತ್ತತ್ತ್ವವನ್ನು ಗರ್ಭದೋಪಾದಿಯಲ್ಲಿ ಧರಿಸುತ್ತಾನೆ. ಈ ಮಹತ್ತತ್ತ್ವವು ಮಾಯೆಯಿಂದ ಅನುಗತವಾಗಿ ಬಹಿರಾವರಣಗಳಿಂದೊಪ್ಪುವ ಸುವರ್ಣಮಯವಾದ ಅಂಡಕೋಶವನ್ನು ತನ್ನಿಂದ ಹೊರಗೆ ದೂಡಿತು (೧೬). ಆದ್ದರಿಂದ ಈ ಸ್ಥಾವರಜಂಗಮಗಳಿಗೆ ನೀನು ಅಧೀಶ್ವರನಾಗಿದ್ದೀಯೆ. ಏಕೆಂದರೆ, ಮಾಯೆಯಿಂದುಂಟಾದ ಇಂದ್ರಿಯ ವೃತ್ತಿಯಿಂದ ಉಪಸ್ಥಿತ ಶಬ್ದಾದಿ ವಿಷಯಗಳನ್ನು ಸೇವಿಸುತ್ತಿದ್ದರೂ, ಹೇ ಹೃಷೀಕೇಶ, ನೀನು ಅವುಗಳಿಂದ ಲಿಪ್ತನಲ್ಲ. ಇತರ ಯೋಗಿಗಳಾದರೋ ತಾವಾಗಿ ಪರಿತ್ಯಜಿಸಿದ ವಿಷಯ ಸೇವನೆಗೆ ಹೆದರುತ್ತಾರೆ. (ವಿಷಯ ಸೇವನೆಯಿಂದ ಬದ್ಧರಾಗಿಬಿಡುತ್ತಾರೆ) (೧೭). ಮಂದಸ್ಮಿತ ವಿಲಸಿತ ಕಟಾಕ್ಷದಿಂದ ಪ್ರಕಟವಾದ ಭಾವಗಳಿಂದ ಮನೋಹರವಾದ ಮಂಡಲಾಕಾರದ ಹುಬ್ಬಿನಿಂದ ಪ್ರೇರಿತವಾದ ಮದನಮಂತ್ರಗಳಲ್ಲಿ ದಕ್ಷವಾದ ಕಾಮನ ಸಂಮೋಹನಾಸ್ತ್ರಗಳೆನಿಸಿದ ಕಾಮಕಲೆಗಳಿಂದಲೂ ಹದಿನಾರುಸಾವಿರ ಸುಂದರ ಸ್ತ್ರೀಯರಿಗೂ ನಿನ್ನ ಮನಸ್ಸನ್ನು ಮೋಹಗೊಳಿಸಲು ಶಕ್ಯವಾಗಲಿಲ್ಲ (೧೮). ನಿನ್ನ ಅಮೃತಕಥಾನದಿಗಳೂ ಪಾದವನ್ನು ತೊಳೆಯುವ ಗಂಗಾದಿನದಿಗಳೂ ಪಾಪಗಳನ್ನು ನಾಶಮಾಡಲು ಶಕ್ತವಾಗಿವೆ.

ಶ್ರೀಶುಕ ಉವಾಚ—

ಇತ್ಯಭಿಷ್ಟೂಯ ವಿಬುಧೈಃ ಸೇಶಃ ಶತಧೃತಿರ್ಹರಿಮ್ ।
ಅಭ್ಯಭಾಷತ ಗೋವಿಂದಂ ಪ್ರಣಮ್ಯಾಂಬರಮಾಶ್ರಿತಃ ॥ ೨೦

ಬ್ರಹ್ಮೋವಾಚ—

ಭೂಮೇರ್ಭಾರಾವತಾರಾಯ ಪುರಾ ವಿಜ್ಞಾಪಿತಃ ಪ್ರಭೋ ।
ತ್ವಮಸ್ಮಾಭಿರಶೇಷಾತ್ಮಂಸ್ತತ್ತಥೈವೋಪಪಾದಿತಮ್ ॥ ೨೧

ಧರ್ಮಶ್ಚ ಸ್ಥಾಪಿತಃ ಸತ್ಸು ಸತ್ಯಸಂಧೇಷು ವೈ ತ್ವಯಾ ।
ಕೀರ್ತಿಶ್ಚ ದಿಕ್ಷು ವಿಕ್ಷಿಪ್ತಾ ಸರ್ವಲೋಕಮಲಾಪಹಾ ॥ ೨೨

ಅವತೀರ್ಯ ಯದೋರ್ವಂಶೇ ಬಿಭ್ರದ್ರೂಪಮನುತ್ತಮಮ್ ।
ಕರ್ಮಾಣ್ಯುದ್ದಾಮವೃತ್ತಾನಿ ಹಿತಾಯ ಜಗತೋಽಕೃಥಾಃ ॥ ೨೩

ಯಾನಿ ತೇ ಚರಿತಾನೀಶ ಮನುಷ್ಯಾಃ ಸಾಧವಃ ಕಲೌ ।
ಶೃಣ್ವಂತಃ ಕೀರ್ತಯಂತಶ್ಚ ತರಿಷ್ಯಂತ್ಯಂಜಸಾ ತಮಃ ॥ ೨೪

---

ಶುಚಿಯಾದ ಆಚಾರವುಳ್ಳ ಜನರು ವೇದೋಕ್ತವಾದ ನಿನ್ನ ಕೀರ್ತಿಯೆಂಬ ತೀರ್ಥವನ್ನು ಕೇಳುವುದರಿಂದಲೂ ಪಾದಜನ್ಯವಾದ ತೀರ್ಥವನ್ನು ಅಂಗಗಳಿಂದ ಸ್ಪರ್ಶಿಸುವುದರ ಮೂಲಕವೂ ಸೇವಿಸುತ್ತಾರೆ" (೧೯). ಈ ಪ್ರಕಾರವಾಗಿ ಬ್ರಹ್ಮದೇವನು ಈಶ್ವರನಿಂದಲೂ, ದೇವತೆಗಳಿಂದಲೂ ಪರಿವೃತನಾಗಿ ಗೋವಿಂದನನ್ನೇ ಸ್ತುತಿಸಿ ನಮಸ್ಕರಿಸಿ ಆಕಾಶದಲ್ಲಿ ನಿಂತು ಇಂತೆಂದನು (೨೦): "ಪ್ರಭುವೇ-ಸರ್ವಾತ್ಮನೆ, ಭೂಮಿಯ ಭಾರವನ್ನಿಳುಹಬೇಕೆಂದು ಪೂರ್ವದಲ್ಲಿ ನಾವು ನಿನಗೆ ವಿಜ್ಞಾಪಿಸಿದ್ದೆವು. ಅಂತೆಯೇ ನೀನು ಆ ಕಾರ್ಯವನ್ನು ನೆರವೇರಿಸಿದ್ದೀಯೆ. ಸತ್ಯಸಂಧರಾದ ಸಜ್ಜನರಲ್ಲಿ ಧರ್ಮವು ಉಳಿಯುವಂತೆ ಸ್ಥಾಪಿಸಿದ್ದೀಯೆ. ಸರ್ವಲೋಕದವರ ಪಾಪವನ್ನೂ ಪರಿಹರಿಸಬಲ್ಲ ಕೀರ್ತಿಕಥೆಯನ್ನು ವಿಸ್ತರಿಸಿದ್ದೀಯೆ (೨೧-೨೨). ಯದುವಂಶದಲ್ಲಿ ಅವತರಿಸಿ ಮನೋಹರವಾದ ಉತ್ತಮರೂಪವನ್ನು ಧರಿಸಿ, ಲೋಕಹಿತಕ್ಕಾಗಿ ಉದ್ದಾಮಪೌರುಷಕೃತ್ಯಗಳನ್ನು ನಡೆಸಿದ್ದೀಯೆ. ಹೇ ಸ್ವಾಮಿ, ಕಲಿಯುಗದಲ್ಲಿ ಸಾಧುಜನರು ನಿನ್ನ ಚರಿತೆಗಳನ್ನು ಕೇಳುತ್ತ, ಕೀರ್ತಿಸುತ್ತ, ಪಾಪವನ್ನು ಸುಲಭವಾಗಿ ಹೋಗಲಾಡಿಸಿಕೊಳ್ಳುತ್ತಾರೆ (೨೩-೨೪).

ಯದುವಂಶೇಽವತೀರ್ಣಸ್ಯ ಭವತಃ ಪುರುಷೋತ್ತಮ ।
ಶರಚ್ಛತಂ ವ್ಯತೀಯಾಯ ಪಂಚವಿಂಶಾಧಿಕಂ ಪ್ರಭೋ ॥ ೨೫

ನಾಧುನಾ ತೇಽಖಿಲಾಧಾರ ದೇವಕಾರ್ಯಾವಶೇಷಿತಮ್ ।
ಕುಲಂ ಚ ವಿಪ್ರಶಾಪೇನ ನಷ್ಟಪ್ರಾಯಮಭೂದಿದಮ್ ॥ ೨೬

ತತಃ ಸ್ವಧಾಮ ಪರಮಂ ವಿಶಸ್ವ ಯದಿ ಮನ್ಯಸೇ ।
ಸಲೋಕಾನ್ ಲೋಕಪಾಲಾನ್ ನಃ ಪಾಹಿ ವೈಕುಂಠ ಕಿಂಕರಾನ್ ॥ ೨೭

ಶ್ರೀ ಭಗವಾನುವಾಚ—

ಅವಧಾರಿತಮೇತನ್ಮೇ ಯದಾತ್ಥ ವಿಬುಧೇಶ್ವರ ।
ಕೃತಂ ವಃ ಕಾರ್ಯಮಖಿಲಂ ಭೂಮೇರ್ಭಾರೋಽವತಾರಿತಃ ॥ ೨೮

ತದಿದಂ ಯಾದವಕುಲಂ ವೀರ್ಯಶೌರ್ಯಶ್ರಿಯೋದ್ಧತಮ್ ।
ಲೋಕಂ ಜಿಘೃಕ್ಷದ್ ರುದ್ಧಂ ಮೇ ವೇಲಯೇವ ಮಹಾರ್ಣವಃ ॥ ೨೯

ಯದ್ಯಸಂಹೃತ್ಯ ದೃಪ್ತಾನಾಂ ಯದೂನಾಂ ವಿಪುಲಂ ಕುಲಮ್ ।
ಗಂತಾಸ್ಮ್ಯನೇನ ಲೋಕೋಽಯಮುದ್ವೇಲೇನ ವಿನಂಕ್ಷ್ಯತಿ ॥ ೩೦

---

ಪುರುಷೋತ್ತಮ, ಯದುವಂಶದಲ್ಲಿ ನೀನು ಅವತರಿಸಿದಮೇಲೆ ನೂರಿಪ್ಪತ್ತೈದು ವರ್ಷಗಳು ಗತಿಸಿಹೋದವು. ಅಖಿಲಾಧಾರನೆ, ಈಗ ನೀನು ಮಾಡಬೇಕಾದ ದೇವಕಾರ್ಯವು ಯಾವುದೂ ಉಳಿದಿಲ್ಲ. ಈ ಯದುಕುಲವು ವಿಪ್ರಶಾಪದಿಂದ ನಷ್ಟವಾದಂತೆಯೇ ಆಗಿದೆ (೨೫–೨೬). ಹೇ ವೈಕುಂಠ, ನಿನಗೆ ಸಂಮತವಾದರೆ ನಿನ್ನ ಪರಮಧಾಮವನ್ನೀಗ ಅಡರಬಹುದು. ನಿನ್ನ ಕಿಂಕರರಾಗಿ ಲೋಕಪಾಲರೆನಿಸಿಕೊಂಡಿರುವ ನಮ್ಮನ್ನೂ ಈ ಲೋಕಗಳನ್ನೂ ಪಾಲಿಸುತ್ತಿರು " ಎಂದು ನುಡಿದನು (೨೭). ಆಗ ಭಗವಂತನು " ವಿಬುಧೇಶ್ವರ-ಬ್ರಹ್ಮದೇವ, ನೀನು ಹೇಳಿದ ಈ ವಿಚಾರವು ನನಗೆ ಗೊತ್ತಿದೆ. ನಿಮ್ಮ ಕಾರ್ಯವನ್ನೆಲ್ಲ ಮಾಡಿದ್ದಾಗಿದೆ. ಭೂಭಾರವನ್ನು ಇಳಿಸಿದ್ದಾಯಿತು. ಆದರೆ ಈ ಯಾದವಕುಲವಾದರೋ ವೀರ್ಯ ಶೌರ್ಯ ಸಂಪತ್ತುಗಳಿಂದ ದೃಪ್ತವಾಗಿದೆ. ಜಗತ್ತನ್ನೇ ಕಬಳಿಸಬೇಕೆಂದು ಪ್ರಯತ್ನಿಸುತ್ತಿದೆ. ಸಾಗರವೇಲೆಯು ಸಾಗರಜಲವನ್ನು ತಡೆಯುವಂತೆ ಇವರನ್ನು ತಡೆದು ನಿಲ್ಲಿಸಿದ್ದೇನೆ (೨೮–೨೯). ವಿಪುಲವಾಗಿರುವ ಈ ಉದ್ಧತ ಯದುಕುಲವನ್ನು

ಇದಾನೀಂ ನಾಶ ಆರಬ್ಧಃ ಕುಲಸ್ಯ ದ್ವಿಜಶಾಪತಃ ।
ಯಾಸ್ಯಾಮಿ ಭವನಂ ಬ್ರಹ್ಮನ್ನೇತದಂತೇ ತವಾನಘ ॥ ೩೧

ಶ್ರೀಶುಕ ಉವಾಚ—

ಇತ್ಯುಕ್ತೋ ಲೋಕನಾಥೇನ ಸ್ವಯಂಭೂಃ ಪ್ರಣಿಪತ್ಯ ತಮ್ ।
ಸಹ ದೇವಗಣೈರ್ದೇವಃ ಸ್ವಧಾಮ ಸಮಪದ್ಯತ ॥ ೩೨

ಅಥ ತಸ್ಯಾಂ ಮಹೋತ್ಪಾತಾನ್ ದ್ವಾರವತ್ಯಾಂ ಸಮುತ್ಥಿತಾನ್ ।
ವಿಲೋಕ್ಯ ಭಗವಾನಾಹ ಯದುವೃದ್ಧಾನ್ ಸಮಾಗತಾನ್ ॥ ೩೩

ಶ್ರೀಭಗವಾನುವಾಚ—

ಏತೇ ವೈ ಸುಮಹೋತ್ಪಾತಾ ವ್ಯುತ್ತಿಷ್ಠಂತೀಹ ಸರ್ವತಃ ।
ಶಾಪಶ್ಚ ನಃ ಕುಲಸ್ಯಾಸೀದ್ ಬ್ರಾಹ್ಮಣೇಭ್ಯೋ ದುರತ್ಯಯಃ ॥ ೩೪

ನ ವಸ್ತವ್ಯಮಿಹಾಸ್ಮಾಭಿರ್ಜಿಜೀವಿಷುಭಿರಾರ್ಯಕಾಃ ।
ಪ್ರಭಾಸಂ ಸುಮಹತ್ಪುಣ್ಯಂ ಯಾಸ್ಯಾಮೋಽದ್ಯೈವ ಮಾ ಚಿರಮ್ ॥ ೩೫

---

ಸಂಹರಿಸದೆ ನಾನು ತೆರಳಿದರೆ, ಮಿತಿಮೀರಿ ನುಗ್ಗಿ ಹೋಗುವ ಈ ಯಾದವರಿಂದ ಲೋಕವು ನಾಶವಾದೀತು. ಬ್ರಹ್ಮದೇವ, ಈಗಾಗಲೇ ವಿಪ್ರಶಾಪದಿಂದ ಈ ಕುಲದ ನಾಶವು ಆರಂಭವಾಗಿದೆ. ಇದು ಪೂರ್ಣವಾದ ಮೇಲೆ ನಿನ್ನ ಲೋಕಕ್ಕೆ ಆಗಮಿಸುವೆನು" ಎಂದನು (೩೦–೩೧). ಲೋಕನಾಥನಾದ ಶ್ರೀಕೃಷ್ಣನು ಈ ರೀತಿ ನುಡಿಯಲಾಗಿ ಬ್ರಹ್ಮನು ಆತನಿಗೆ ನಮಸ್ಕರಿಸಿ ದೇವತೆಗಳೊಡನೆ ತನ್ನ ಲೋಕಕ್ಕೆ ತೆರಳಿದನು. ತರುವಾಯ ಇತ್ತಲಾಗಿ ದ್ವಾರಾವತಿಯಲ್ಲಿ ಮಹೋತ್ಪಾತಗಳು ಕಾಣಿಸಿಕೊಂಡವು. ಅವನ್ನು ನೋಡಿ ತನ್ನ ಬಳಿಗೆ ಬಂದ ಯದುವೃದ್ಧರನ್ನು ಕುರಿತು ಶ್ರೀಕೃಷ್ಣನು ಇಂತೆಂದನು (೩೨–೩೩): "ಈಗ ಎಲ್ಲೆಡೆಯೂ ಮಹೋತ್ಪಾತಗಳು ಕಾಣಿಸಿಕೊಳ್ಳುತ್ತಿವೆ. ನಮ್ಮ ಯದುಕುಲಕ್ಕೆ ಬ್ರಾಹ್ಮಣರಿಂದ ದುರತ್ಯಯವಾದ ಶಾಪವು ತಟ್ಟಿದೆ. ಆದ್ದರಿಂದ, ಹಿರಿಯರೆ, ನಾವು ಬದುಕಿರಲು ಬಯಸುವುದಾದರೆ ಈ ದ್ವಾರಕೆಯಲ್ಲಿ ಇರಬಾರದು! ಬಹಳ ಪುಣ್ಯಕರವಾದ ಪ್ರಭಾಸಕ್ಷೇತ್ರಕ್ಕೆ ಇಂದೇ ಹೊರಟು ಹೋಗೋಣ. ತಡಮಾಡುವುದು ಬೇಡ (೩೪–೩೫).

ಯತ್ರ ಸ್ನಾತ್ವಾ ದಕ್ಷಶಾಪಾದ್ಗೃಹೀತೋ ಯಕ್ಷ್ಮಣೋಡುರಾಟ್ ।
ವಿಮುಕ್ತಃ ಕಿಲ್ಬಿಷಾತ್ಸದ್ಯೋ ಭೇಜೇ ಭೂಯಃ ಕಲೋದಯಮ್ ॥ ೩೬

ವಯಂ ಚ ತಸ್ಮಿನ್ನಾಪ್ಲುತ್ಯ ತರ್ಪಯಿತ್ವಾ ಪಿತೄನ್ ಸುರಾನ್ ।
ಭೋಜಯಿತ್ವೋಶಿಜೋ ವಿಪ್ರಾನ್ ನಾನಾಗುಣವತಾಂಧಸಾ ॥ ೩೭

ತೇಷು ದಾನಾನಿ ಪಾತ್ರೇಷು ಶ್ರದ್ಧಯೋಪ್ತ್ವಾ ಮಹಾಂತಿ ವೈ ।
ವೃಜಿನಾನಿ ತರಿಷ್ಯಾಮೋ ದಾನೈರ್ನೌಭಿರಿವಾರ್ಣವಮ್ ॥ ೩೮

ಶ್ರೀಶುಕ ಉವಾಚ—

ಏವಂ ಭಗವತಾಽಽದಿಷ್ಟಾ ಯಾದವಾಃ ಕುಲನಂದನ ।
ಗಂತುಂ ಕೃತಧಿಯಸ್ತೀರ್ಥಂ ಸ್ಯಂದನಾನ್ ಸಮಯೂಯುಜನ್ ॥ ೩೯

ತನ್ನಿರೀಕ್ಷ್ಯೋದ್ಧವೋ ರಾಜನ್ ಶ್ರುತ್ವಾ ಭಗವತೋದಿತಮ್ ।
ದೃಷ್ಟ್ವಾಽರಿಷ್ಟಾನಿ ಘೋರಾಣಿ ನಿತ್ಯಂ ಕೃಷ್ಣಮನುವ್ರತಃ ॥ ೪೦

ವಿವಿಕ್ತ ಉಪಸಂಗಮ್ಯ ಜಗತಾಮೀಶ್ವರೇಶ್ವರಮ್ ।
ಪ್ರಣಮ್ಯ ಶಿರಸಾ ಪಾದೌ ಪ್ರಾಂಜಲಿಸ್ತಮಭಾಷತ ॥ ೪೧

---

ದಕ್ಷಶಾಪದಿಂದ ಕ್ಷಯರೋಗ ಪೀಡಿತನಾದ ಚಂದ್ರನು ಪ್ರಭಾಸಕ್ಷೇತ್ರದಲ್ಲಿ ಸ್ನಾನಮಾಡಿದ್ದರಿಂದ ರೋಗವಿಮುಕ್ತನಾಗಿ ಮತ್ತೆ ಕಲಾವೃದ್ಧಿಯನ್ನು ಪಡೆದಿದ್ದಾನೆ. ನಾವೂ ಸಹ ಅಲ್ಲಿ ಸ್ನಾನಮಾಡಿ ಪಿತೃಗಳಿಗೂ ದೇವತೆಗಳಿಗೂ ತರ್ಪಣಗಳನ್ನು ಕೊಟ್ಟು, ಉತ್ತಮರಾದ ವಿಪ್ರರಿಗೆ ನಾನಾ ಬಗೆಯ ಭೋಜ್ಯಗಳಿಂದ ಭೋಜನ ಮಾಡಿಸೋಣ (೩೬–೩೭). ಸತ್ಪಾತ್ರರಾದ ವಿಪ್ರರಿಗೆ ಶ್ರದ್ಧೆಯಿಂದ ಶ್ರೇಷ್ಠದಾನಗಳನ್ನಿತ್ತು, ಹಡಗುಗಳಿಂದ ಸಮುದ್ರವನ್ನು ದಾಟುವಂತೆ, ದಾನಗಳಿಂದ ನಮ್ಮ ಪಾಪಕರ್ಮಗಳನ್ನು ದಾಟಿಹೋಗೋಣ" ಎಂದನು (೩೮). ಕುರುಕುಲನಂದನ–ಪರೀಕ್ಷಿತ, ಭಗವಂತನು ಹೀಗೆ ಆದೇಶವನ್ನೀಯಲು ಯಾದವರು ಪ್ರಭಾಸಕ್ಷೇತ್ರಕ್ಕೆ ಹೋಗಬೇಕೆಂದು ನಿಶ್ಚಯಿಸಿ ವಾಹನಗಳನ್ನು ಸಜ್ಜುಗೊಳಿಸಿದರು. ರಾಜ, ನಿತ್ಯವೂ ಶ್ರೀಕೃಷ್ಣನನ್ನು ಅನುಸರಿಸಿಕೊಂಡಿದ್ದ ಭಕ್ತನಾದ ಉದ್ಧವನು ಇದೆಲ್ಲವನ್ನು ಗಮನಿಸುತ್ತಿದ್ದನು. ಭಗವಂತನಾಡಿದ ಮಾತನ್ನು ಕೇಳಿ, ಘೋರವಾದ ಅರಿಷ್ಟಗಳು ಉದ್ಭವಿಸುತ್ತಿದ್ದುದನ್ನು ಕಣ್ಣಾರೆ ನೋಡಿದ ಉದ್ಧವನು ಏಕಾಂತದಲ್ಲಿ ಆ ಜಗದೀಶ್ವರನ ಬಳಿಗೆ ಹೋಗಿ, ಆತನ ಅಡಿಗಳಿಗೆ ತಲೆಬಾಗಿಸಿ

ಉದ್ಧವ ಉವಾಚ—

ದೇವ ದೇವೇಶ ಯೋಗೇಶ ಪುಣ್ಯಶ್ರವಣಕೀರ್ತನ ।
ಸಂಹೃತ್ಯೈತತ್ಕುಲಂ ನೂನಂ ಲೋಕಂ ಸಂತ್ಯಕ್ಷ್ಯತೇ ಭವಾನ್ ।
ವಿಪ್ರಶಾಪಂ ಸಮರ್ಥೋಽಪಿ ಪ್ರತ್ಯಹನ್ನ ಯದೀಶ್ವರಃ ॥ ೪೨

ನಾಹಂ ತವಾಂಘ್ರಿಕಮಲಂ ಕ್ಷಣಾರ್ಧಮಪಿ ಕೇಶವ ।
ತ್ಯಕ್ತುಂ ಸಮುತ್ಸಹೇ ನಾಥ ಸ್ವಧಾಮ ನಯ ಮಾಮಪಿ ॥ ೪೩

ತವ ವಿಕ್ರೀಡಿತಂ ಕೃಷ್ಣ ನೃಣಾಂ ಪರಮಮಂಗಲಮ್ ।
ಕರ್ಣಪೀಯೂಷಮಾಸ್ವಾದ್ಯ ತ್ಯಜತ್ಯನ್ಯಸ್ಪೃಹಾಂ ಜನಃ ॥ ೪೪

ಶಯ್ಯಾಸನಾಟನಸ್ಥಾನ ಸ್ನಾನ ಕ್ರೀಡಾಶನಾದಿಷು ।
ಕಥಂ ತ್ವಾಂ ಪ್ರಿಯಮಾತ್ಮಾನಂ ವಯಂ ಭಕ್ತಾಸ್ತ್ಯಜೇಮಹಿ ॥ ೪೫

ತ್ವಯೋಪಭುಕ್ತ ಸ್ರಗ್ಗಂಧವಾಸೋಽಲಂಕಾರ ಚರ್ಚಿತಾಃ ।
ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ಜಯೇಮಹಿ ॥ ೪೬

---

ಮಣಿದು ಕೈಮುಗಿದುಕೊಂಡು ಇಂತೆಂದನು (೩೯–೪೧): "ದೇವದೇವೇಶ್ವರ, ಯೋಗೇಶ್ವರ, ಪುಣ್ಯಶ್ರವಣ, ಪುಣ್ಯಕೀರ್ತನ, ಈ ಯಾದವ ಕುಲವನ್ನು ನಾಶ ಮಾಡಿ ಈ ಮರ್ತ್ಯ ಲೋಕವನ್ನು ನೀನು ತ್ಯಜಿಸಿಹೋಗುವುದು ನಿಶ್ಚಯ! ಏಕೆಂದರೆ ಈಶ್ವರನಾಗಿ ಸಮರ್ಥನಾಗಿದ್ದರೂ ನೀನು ವಿಪ್ರಶಾಪಕ್ಕೆ ಪ್ರತೀಕಾರವನ್ನು ಮಾಡ ಲಿಲ್ಲ! ನಾಥ, ನಾನು ಈ ದೇಹವನ್ನು ತ್ಯಜಿಸಲು ಬಯಸಿದ್ದೇನೆ. ನನ್ನನ್ನೂ ನಿನ್ನ ಧಾಮಕ್ಕೆ ಕರೆದುಕೊಂಡು ಹೋಗು (೪೨–೪೩). ಶ್ರೀಕೃಷ್ಣ, ಜನರಿಗೆ ಪರಮ ಮಂಗಳವೂ ಶ್ರವಣಾಮೃತವೂ ಆಗಿರುವ ನಿನ್ನ ಕ್ರೀಡಾ ವಿಲಾಸವನ್ನು ಕಿವಿಯಿಂದ ಆಸ್ವಾದಿಸಿದವರು ಇನ್ನೆಲ್ಲ ವಸ್ತುಗಳ ಆಸೆಯನ್ನು ತೊರೆದುಬಿಡುತ್ತಾರೆ. ಮಲಗು ವಾಗ, ಕುಳಿತಾಗ, ಅಲೆಯುವಾಗ, ನಿಂತಾಗ, ಸ್ನಾನ ಮಾಡುವಾಗ, ಆಟ ವಾಡುವಾಗ, ಊಟ ಮಾಡುವಾಗ ನಿನ್ನನ್ನು ಸೇವಿಸಿಕೊಂಡಿದ್ದ ಭಕ್ತರಾದ ನಾವು ಅತ್ಯಂತಪ್ರಿಯನಾಗಿ ನಮ್ಮ ಆತ್ಮವೇ ಆಗಿರುವ ನಿನ್ನನ್ನು ಹೇಗೆ ಬಿಟ್ಟಿರಬಲ್ಲೆವು? (೪೪–೪೫). ನೀನು ಬಳಸಿದ ಹೂಮಾಲೆ, ಗಂಧ, ವಸ್ತ್ರ, ಅಲಂಕಾರಗಳಿಂದ ಭೂಷಿತರಾಗಿ ನಿನ್ನ ಉಚ್ಛಿಷ್ಟವನ್ನು ತಿನ್ನುವ ದಾಸರಾಗಿದ್ದು, ನಿನ್ನ ಮಾಯೆ ಯನ್ನು ಜಯಿಸೋಣವೆಂದು ಆಶಿಸುತ್ತೇವೆ! ಶಾಂತರೂ ಪರಿಶುದ್ಧರೂ ಆದ

ವಾತರಶನಾ ಯ ಋಷಯಃ ಶ್ರಮಣಾ ಊರ್ಧ್ವಮಂಥಿನಃ ।
ಬ್ರಹ್ಮಾಖ್ಯಂ ಧಾಮ ತೇ ಯಾಂತಿ ಶಾಂತಾಃ ಸಂನ್ಯಾಸಿನೋಽಮಲಾಃ ॥ ೪೭
ವಯಂ ತ್ವಿಹ ಮಹಾಯೋಗಿನ್ ಭ್ರಮಂತಃ ಕರ್ಮವರ್ತ್ಮಸು ।
ತ್ವದ್ವಾರ್ತಯಾ ತರಿಷ್ಯಾಮಸ್ತಾವಕೈರ್ದುಸ್ತರಂ ತಮಃ ॥ ೪೮
ಸ್ಮರಂತಃ ಕೀರ್ತಯಂತಸ್ತೇ ಕೃತಾನಿ ಗದಿತಾನಿ ಚ ।
ಗತ್ಯುತ್ಸ್ಮಿತೇಕ್ಷಣಕ್ಷ್ವೇಲಿ ಯನ್ನೃಲೋಕವಿಡಂಬನಮ್ ॥ ೪೯

ಶ್ರೀಶುಕ ಉವಾಚ—

ಏವಂ ವಿಜ್ಞಾಪಿತೋ ರಾಜನ್ ಭಗವಾನ್ ದೇವಕೀಸುತಃ ।
ಏಕಾಂತಿನಂ ಪ್ರಿಯಂ ಭೃತ್ಯಮುದ್ಧವಂ ಸಮಭಾಷತ ॥ ೫೦

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಷಷ್ಠೋಧ್ಯಾಯಃ



---

ಸಂನ್ಯಾಸಿಗಳು ದಿಗಂಬರರಾಗಿ, ಋಷಿಗಳಾಗಿ, ಶ್ರಮಣರಾಗಿ, ಊರ್ಧ್ವರೇತಸ್ಕರಾಗಿ ಬ್ರಹ್ಮವೆಂಬ ನಿನ್ನ ಸ್ಥಾನವನ್ನು ಸೇರಿಕೊಳ್ಳುತ್ತಾರೆ (೪೬–೪೭). ಓ ಮಹಾ ಯೋಗಿಯೆ, ಕರ್ಮಮಾರ್ಗವಾದ ಸಂಸಾರದಲ್ಲಿ ಅಲೆದಾಡುವ ನಾವಾದರೋ ನಿನ್ನ ಭಕ್ತರೊಡನೆ ನಿನ್ನ ಕಥೆಯ ಶ್ರವಣ ಕೀರ್ತನಾದಿಗಳನ್ನು ಮಾಡುತ್ತಲೇ ದುಸ್ತರ ವಾದ ಸಂಸಾರವನ್ನು ದಾಟಿಬಿಡುತ್ತೇವೆ! (೪೮). ಮರ್ತ್ಯಲೋಕದಲ್ಲಿ ನಿನ್ನ ನಟನೆಗಳಾದ ನಿನ್ನ ಕಾರ್ಯಗಳನ್ನೂ ನುಡಿಗಳನ್ನೂ ನಡಿಗೆ ನಗು ನೋಟ ವಿನೋದ ಗಳನ್ನೂ ನೆನೆಸಿಕೊಳ್ಳುತ್ತ, ಅವನ್ನು ಕುರಿತು ಮಾತಾಡುತ್ತ ಸಂಸಾರವನ್ನು ದಾಟಿ ಬಿಡುತ್ತೇವೆ" ಎಂದನು (೪೯). ಪರೀಕ್ಷಿತರಾಜ, ಈ ಪ್ರಕಾರವಾಗಿ ಉದ್ಧವನು ನಿವೇದಿಸಿಕೊಳ್ಳಲಾಗಿ ಭಗವಾನ್ ದೇವಕೀಪುತ್ರನು ಏಕಾಂತಭಕ್ತನೂ ಪ್ರಿಯ ಭೃತ್ಯನೂ ಆದ ಉದ್ಧವನನ್ನು ಕುರಿತು (ಮುಂದೆ ಹೇಳುವಂತೆ) ಈ ರೀತಿ ಸಂಭಾಷಿಸಿದನು (೫೦).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಆರನೆಯ ಅಧ್ಯಾಯ



# ಸಪ್ತಮೋಧ್ಯಾಯಃ

ಶ್ರೀ ಭಗವಾನುವಾಚ—

ಯದಾತ್ಥ ಮಾಂ ಮಹಾಭಾಗ ತಚ್ಚಿಕೀರ್ಷಿತಮೇವ ಮೇ ।
ಬ್ರಹ್ಮಾ ಭವೋ ಲೋಕಪಾಲಾಃ ಸ್ವರ್ವಾಸಂ ಮೇಽಭಿಕಾಂಕ್ಷಿಣಃ ॥ ೧

ಮಯಾ ನಿಷ್ಪಾದಿತಂ ಹ್ಯತ್ರ ದೇವಕಾರ್ಯಮಶೇಷತಃ ।
ಯದರ್ಥಮವತೀರ್ಣೋಽಹಮಂಶೇನ ಬ್ರಹ್ಮಣಾರ್ಥಿತಃ ॥ ೨

ಕುಲಂ ವೈ ಶಾಪನಿರ್ದಗ್ಧಂ ನಂಕ್ಷ್ಯತ್ಯನ್ಯೋನ್ಯವಿಗ್ರಹಾತ್ ।
ಸಮುದ್ರಃ ಸಪ್ತಮೇಽಹ್ನ್ಯೇತಾಂ ಪುರೀಂ ಚ ಪ್ಲಾವಯಿಷ್ಯತಿ ॥ ೩

ಯರ್ಹ್ಯೇವಾಯಂ ಮಯಾ ತ್ಯಕ್ತೋ ಲೋಕೋಽಯಂ ನಷ್ಟಮಂಗಲಃ ।
ಭವಿಷ್ಯತ್ಯಚಿರಾತ್ ಸಾಧೋ ಕಲಿನಾಪಿ ನಿರಾಕೃತಃ ॥ ೪

## ಅಧ್ಯಾಯ ೭

ಶ್ರೀಕೃಷ್ಣನಿಂದ ಉದ್ಧವನಿಗೆ ಆತ್ಮೋಪದೇಶ. ಯದುರಾಜ–ಅವಧೂತರ ಸಂವಾದ. ತನ್ನ ಇಪ್ಪತ್ತುನಾಲ್ಕು ಮಂದಿ ಗುರುಗಳಲ್ಲಿ ಎಂಟು ಮಂದಿಗಳಿಂದ ಕಲಿತ ಪಾಠವನ್ನು ಅವಧೂತನು ಹೇಳುವುದು.

ಭಗವಂತನು ಉದ್ಧವನನ್ನು ಕುರಿತು ಹೀಗೆಂದನು : "ಮಹಾಭಾಗ–ಉದ್ಧವ, ನೀನು ಹೇಳಿದಂತೆ ಯದುಕುಲವನ್ನು ನಾಶಮಾಡಿ ತೆರಳಬೇಕೆಂಬುದು ನನಗೆ ಉದ್ದಿಷ್ಟವಾದದ್ದೇ ಹೌದು. ಬ್ರಹ್ಮ, ಶಿವ, ಲೋಕಪಾಲರು—ಇವರೆಲ್ಲರೂ ನನ್ನ ವೈಕುಂಠವಾಸವನ್ನು ಬಯಸುತ್ತಿದ್ದಾರೆ (೧). ಈ ಮರ್ತ್ಯಲೋಕದಲ್ಲಿ ಆಗಬೇಕಾದ ದೇವಕಾರ್ಯವೆಲ್ಲವನ್ನೂ ಮಾಡಿ ಮುಗಿಸಿದ್ದೇನೆ. ಬ್ರಹ್ಮನ ಪ್ರಾರ್ಥನೆಯಂತೆ ಇದಕ್ಕಾಗಿಯೇ ನಾನು ನನ್ನ ಅಂಶದಿಂದ ಅವತರಿಸಿದ್ದೆನು. ವಿಪ್ರಶಾಪದಿಂದ ದಗ್ಧವಾಗಿರುವ ಯದುಕುಲವು ಇನ್ನು ಪರಸ್ಪರ ಕಲಹದಿಂದ ನಾಶಹೊಂದುವುದು. ಇಂದಿಗೆ ಏಳನೆಯ ದಿನ ಸಮುದ್ರವು ಈ ದ್ವಾರಕಾಪುರಿಯನ್ನು ಮುಳುಗಿಸಿಬಿಡುವುದು (೨–೩). ಯಾವಾಗ ನಾನು ಈ ಲೋಕವನ್ನು ತ್ಯಜಿಸುವೆನೋ ಆಗಲೇ ಈ ಲೋಕದ ಮಾಂಗಲ್ಯವು ನಷ್ಟವಾಗುವುದು. ಒಡನೆಯೆ, ಹೇ ಸಾಧು ಪುರುಷನೆ, ಈ ಲೋಕವನ್ನು ಕಲಿಯು ಪೂರ್ಣವಾಗಿ ಆಕ್ರಮಿಸಿಕೊಳ್ಳುವನು (೪).

ನ ವಸ್ತವ್ಯಂ ತ್ವಯೈವೇಹ ಮಯಾ ತ್ಯಕ್ತೇ ಮಹೀತಲೇ ।
ಜನೋಽಧರ್ಮರುಚಿರ್ಭದ್ರ ಭವಿಷ್ಯತಿ ಕಲೌ ಯುಗೇ ॥ ೫

ತ್ವಂ ತು ಸರ್ವಂ ಪರಿತ್ಯಜ್ಯ ಸ್ನೇಹಂ ಸ್ವಜನಬಂಧುಷು ।
ಮಯ್ಯಾವೇಶ್ಯ ಮನಃ ಸಮ್ಯಕ್ ಸಮದೃಗ್ ವಿಚರಸ್ವ ಗಾಮ್ ॥ ೬

ಯದಿದಂ ಮನಸಾ ವಾಚಾ ಚಕ್ಷುರ್ಭ್ಯಾಂ ಶ್ರವಣಾದಿಭಿಃ ।
ನಶ್ವರಂ ಗೃಹ್ಯಮಾಣಂ ಚ ವಿದ್ಧಿ ಮಾಯಾ ಮನೋಮಯಮ್ ॥ ೭

ಪುಂಸೋಽಯುಕ್ತಸ್ಯ ನಾನಾರ್ಥೋ ಭ್ರಮಃ ಸ ಗುಣದೋಷಭಾಕ್ ।
ಕರ್ಮಾಕರ್ಮವಿಕರ್ಮೇತಿ ಗುಣದೋಷಧಿಯೋ ಭಿದಾ ॥ ೮

ತಸ್ಮಾದ್ ಯುಕ್ತೇಂದ್ರಿಯಗ್ರಾಮೋ ಯುಕ್ತಚಿತ್ತ ಇದಂ ಜಗತ್ ।
ಆತ್ಮನೀಕ್ಷಸ್ವ ವಿತತಮಾತ್ಮಾನಂ ಮಯ್ಯಧೀಶ್ವರೇ ॥ ೯

---

ನಾನು ಈ ಮಹೀತಳವನ್ನು ತ್ಯಜಿಸಿದಮೇಲೆ ನೀನು ಇಲ್ಲಿ ವಾಸವಾಗಿರಬಾರದು. ಈ ಕಲಿಯುಗದಲ್ಲಿ, ಸೌಮ್ಯ, ಜನರು ಅಧರ್ಮಕಾರ್ಯದಲ್ಲಿ ಅಭಿರುಚಿಯುಳ್ಳವರಾಗುತ್ತಾರೆ. ಆದ್ದರಿಂದ ನೀನು ಬಂಧುಮಿತ್ರರಲ್ಲಿ ವ್ಯಾಮೋಹವನ್ನು ತ್ಯಜಿಸಿ, ನನ್ನಲ್ಲಿಯೇ ಮನಸ್ಸನ್ನು ನಿಲ್ಲಿಸಿ, ಸಮದೃಷ್ಟಿಯಾಗಿ ಭೂತಳದಲ್ಲಿ ಸಂಚರಿಸಿಕೊಂಡಿರು (೫–೬). ಮನೋವಾಕ್ಕುಗಳಿಂದಲೂ ಕಣ್ಣು ಕಿವಿ ಮುಂತಾದ ಇಂದ್ರಿಯಗಳಿಂದಲೂ ಗ್ರಹಿಸಲ್ಪಡತಕ್ಕ ಯಾವ ಯಾವ ವಸ್ತು ಉಂಟೋ ಅದೆಲ್ಲವೂ ಮನಃಕಲ್ಪಿತವೆಂದೂ ಮಾಯೆಯೆಂದೂ ನಶ್ವರವೆಂದೂ ತಿಳಿದುಕೊ (೭). ವಿಕ್ಷಿಪ್ತಚಿತ್ತನಾದ ಪುರುಷನಿಗೆ ನಾನಾರೂಪದಲ್ಲಿ ಪದಾರ್ಥಗಳು ಗೋಚರಿಸುತ್ತವೆ. ಅದು ಭ್ರಮೆ. ಗುಣದೋಷಗಳನ್ನು ಗ್ರಹಿಸತಕ್ಕದ್ದೂ ಭ್ರಮೆಯೇ. ಗುಣದೋಷಗಳನ್ನು ಗ್ರಹಿಸತಕ್ಕ ಭ್ರಮೆಯಿಂದ ಕೂಡಿದ ಪುರುಷನಿಗೆ [1]ವಿಹಿತ ಕರ್ಮ, ಕರ್ಮಾಭಾವ, ನಿಷಿದ್ಧಕರ್ಮ—ಎಂಬ ಭೇದ ಉಂಟು (೮). ಆದ್ದರಿಂದ, ಉದ್ಧವ, ನೀನು ಇಂದ್ರಿಯಗ್ರಾಮವನ್ನೂ ಚಿತ್ತವನ್ನೂ ನಿಯಂತ್ರಿಸಿಕೊಂಡು

---

1. ಭ್ರಮೆಯು ಕಳೆದಾಗ ಸಮದೃಷ್ಟಿ ಬರುತ್ತದೆ. ವೇದದ ವಿಧಿ ನಿಷೇಧಗಳು ಅವಿದ್ಯಾವದ್ವಿಷಯಗಳೆಂದು ಅಭಿಪ್ರಾಯ.

ಜ್ಞಾನವಿಜ್ಞಾನಸಂಯುಕ್ತ ಆತ್ಮಭೂತಃ ಶರೀರಿಣಾಮ್ ।
ಆತ್ಮಾನುಭವತುಷ್ಟಾತ್ಮಾ ನಾಂತರಾಯೈರ್ವಿಹನ್ಯಸೇ ॥ ೧೦
ದೋಷಬುದ್ಧ್ಯೋಭಯಾತೀತೋ ನಿಷೇಧಾನ್ನ ನಿವರ್ತತೇ ।
ಗುಣಬುದ್ಧ್ಯಾ ಚ ವಿಹಿತಂ ನ ಕರೋತಿ ಯಥಾರ್ಭಕಃ ॥ ೧೧
ಸರ್ವಭೂತಸುಹೃಚ್ಛಾಂತೋ ಜ್ಞಾನವಿಜ್ಞಾನನಿಶ್ಚಯಃ ।
ಪಶ್ಯನ್ ಮದಾತ್ಮಕಂ ವಿಶ್ವಂ ನ ವಿಪದ್ಯೇತ ವೈ ಪುನಃ ॥ ೧೨
ಶ್ರೀ ಶುಕ ಉವಾಚ—
ಇತ್ಯಾದಿಷ್ಟೋ ಭಗವತಾ ಮಹಾಭಾಗವತೋ ನೃಪ ।
ಉದ್ಧವಃ ಪ್ರಣಿಪತ್ಯಾಹ ತತ್ತ್ವಜಿಜ್ಞಾಸುರಚ್ಯುತಮ್ ॥ ೧೩

---

ಈ ಜಗತ್ತು ನನ್ನಲ್ಲಿ ಇದೆಯೆಂದೂ ನಿನ್ನ ಆತ್ಮವು ಅಧೀಶ್ವರನಾದ ನನ್ನಲ್ಲಿ [1]ಅಡಕವಾಗಿದೆಯೆಂದೂ ಕಾಣು (೯). ವೇದಾರ್ಥಜ್ಞಾನದಿಂದಲೂ ವೇದಾರ್ಥಾನುಭವವೆಂಬ ವಿಜ್ಞಾನದಿಂದಲೂ ಸಂಯುಕ್ತನಾಗಿ, ಆತ್ಮಾನುಭವದಿಂದ ಸಂತುಷ್ಟಚಿತ್ತನಾಗಿ, ಎಲ್ಲಜೀವಿಗಳ ಆತ್ಮನೇ ನೀನಾದಾಗ ಯಾವ ವಿಘ್ನಗಳೂ ನಿನಗೆ [2]ತೊಡಕಾಗುವುದಿಲ್ಲ (೧೦). ಗುಣದೋಷಗಳ ಉಭಯಬುದ್ಧಿಯಿಂದ ಅತೀತನಾದ ಜ್ಞಾನಿಯು ನಿಷಿದ್ಧಕರ್ಮದಿಂದ ನಿವೃತ್ತನಾಗುತ್ತಾನೆ, ಆದರೆ ದೋಷಬುದ್ಧಿಯಿಂದಲ್ಲ. ವಿಹಿತವಾದ್ದನ್ನು ಮಾಡುತ್ತಾನೆ, ಆದರೆ ಗುಣಬುದ್ಧಿಯಿಂದಲ್ಲ. ಬಾಲಕನಂತೆ (ಸಂಕಲ್ಪವಿಕಲ್ಪರಹಿತವಾದ) ವರ್ತನೆ ಜ್ಞಾನಿಯದು (ಸಮದೃಷ್ಟಿಯುಳ್ಳವನು ಪ್ರಾಕ್ತನ ಸಂಸಾರವಶದಿಂದ ವಿಹಿತವನ್ನು ಆಚರಿಸುತ್ತಾನೆ, ನಿಷಿದ್ಧವನ್ನು ತ್ಯಜಿಸುತ್ತಾನೆ. ನಿಷಿದ್ಧವನ್ನೆಂದಿಗೂ ಮಾಡುವುದಿಲ್ಲ) (೧೧). ಜ್ಞಾನವಿಜ್ಞಾನಗಳಿಂದ ನಿಶ್ಚಿತಬುದ್ಧಿಯಾದವನು ಶಾಂತನಾಗಿ, ಸರ್ವಪ್ರಾಣಿಗಳ ಮಿತ್ರನಾಗಿ, ವಿಶ್ವವೆಲ್ಲವೂ ನನ್ನ ಸ್ವರೂಪವೇ ಎಂದು ತಿಳಿದುಕೊಳ್ಳುತ್ತಾನೆ. ಅವನು ಮತ್ತೆ ಸಂಸಾರದ ವಿಪತ್ತಿನಲ್ಲಿ ಸಿಲುಕುವುದಿಲ್ಲ" ಎಂದನು (೧೨). ಪರೀಕ್ಷಿತರಾಜ, ಭಗವಂತನು ಹೀಗೆ ಉಪದೇಶಿಸಲಾಗಿ ಮಹಾಭಾಗವತನಾದ ಉದ್ಧವನು ತತ್ತ್ವ

---

1. ಜಗತ್ತು ನಿನ್ನ ಆತ್ಮಸ್ವರೂಪವೆಂದೂ ನಿನ್ನ ಆತ್ಮವು ಪರಮಾತ್ಮಸ್ವರೂಪವೆಂದೂ ತಿಳಿ.

2. 'ತಸ್ಯ ಹ ನ ದೇವಾಶ್ಚ ನಾಭೂತ್ಯಾ ಈಶತೇ । ಆತ್ಮಾಹ್ಯೇಷಾಂ ಸ ಭವತಿ'
—ಬೃಹ. ೧-೪-೧೦

ಉದ್ಧವ ಉವಾಚ—

ಯೋಗೇಶ ಯೋಗವಿನ್ಯಾಸ ಯೋಗಾತ್ಮನ್ ಯೋಗಸಂಭವ ।
ನಿಃಶ್ರೇಯಸಾಯ ಮೇ ಪ್ರೋಕ್ತಸ್ತ್ಯಾಗಃ ಸಂನ್ಯಾಸಲಕ್ಷಣಃ ॥ ೧೪

ತ್ಯಾಗೋಽಯಂ ದುಷ್ಕರೋ ಭೂಮನ್ ಕಾಮಾನಾಂ ವಿಷಯಾತ್ಮಭಿಃ ।
ಸುತರಾಂ ತ್ವಯಿ ಸರ್ವಾತ್ಮನ್ನಭಕ್ತೈರಿತಿ ಮೇ ಮತಿಃ ॥ ೧೫

ಸೋಽಹಂ ಮಮಾಹಮಿತಿ ಮೂಢಮತಿರ್ವಿಗಾಢ-
ಸ್ತ್ವನ್ಮಾಯಯಾ ವಿರಚಿತಾತ್ಮನಿ ಸಾನುಬಂಧೇ ।
ತತ್ತ್ವಂಜಸಾ ನಿಗದಿತಂ ಭವತಾ ಯಥಾಹಂ
ಸಂಸಾಧಯಾಮಿ ಭಗವನ್ನನುಶಾಧಿ ಭೃತ್ಯಮ್ ॥ ೧೬

ಸತ್ಯಸ್ಯ ತೇ ಸ್ವದೃಶ ಆತ್ಮನ ಆತ್ಮದೋಽನ್ಯಂ
ವಕ್ತಾರಮೀಶ ವಿಬುಧೇಷ್ವಪಿ ನಾನುಚಕ್ಷೇ ।
ಸರ್ವೇ ವಿಮೋಹಿತಧಿಯಸ್ತವ ಮಾಯಯೇಮೇ
ಬ್ರಹ್ಮಾದಯಸ್ತನುಭೃತೋ ಬಹಿರರ್ಥಭಾವಾಃ ॥ ೧೭

---

ಜಿಜ್ಞಾಸೆಯಿಂದ ಅಚ್ಯುತನಿಗೆ ನಮಸ್ಕರಿಸಿ ಮತ್ತೆ ಹೀಗೆಂದನು (೧೩): "ಹೇ ಯೋಗೇಶ್ವರ, ಯೋಗಗಮ್ಯ, ಯೋಗಸ್ವರೂಪ, ಯೋಗಜನಕ, ಮುಕ್ತಿಸಾಧಕವೆಂದು ಸಂನ್ಯಾಸರೂಪವಾದ ತ್ಯಾಗವನ್ನು ನನಗೆ ಬೋಧಿಸಿದ್ದೀಯೆ. ಓ ಮಹಾತ್ಮ, ಈ ಕಾಮನಾತ್ಯಾಗವು ವಿಷಯಾಸಕ್ತಚಿತ್ತರಿಗೆ ಅಸಾಧ್ಯವಾದದ್ದು. ಸರ್ವಾತ್ಮನೆ, ನಿನ್ನಲ್ಲಿ ಭಕ್ತಿಯಿಲ್ಲದವರಿಗಂತೂ ಸುತರಾಂ ಶಕ್ಯವಾದ್ದಲ್ಲವೆಂದು ನನ್ನ ಅಭಿಪ್ರಾಯ (೧೪-೧೫). ನಿನ್ನ ಮಾಯೆಯಿಂದ ವಿರಚಿತವಾದ ಈ ದೇಹವು ಪುತ್ರಾದಿ ಪರಿವಾರವುಳ್ಳದ್ದು. ಇದರಲ್ಲಿ ಮಗ್ನನಾದ ನಾನು 'ನಾನು-ನನ್ನದು' ಎಂದು ಭ್ರಾಂತಚಿತ್ತನಾಗಿದ್ದೇನೆ. ಹೀಗಿರುವಾಗ ನೀನು ಉಪದೇಶಿಸಿದ್ದನ್ನು ಹೇಗೆ ನಾನು ಸುಲಭವಾಗಿ ಸಾಧಿಸಬಲ್ಲೆನು? ಭಗವಂತ, ಭೃತ್ಯನಾದ ನನಗೆ ಬೋಧಿಸು (೧೬). ಪ್ರಭುವೆ, ಸ್ವತಃಸಿದ್ಧ ಜ್ಞಾನವುಳ್ಳವನೂ ಆತ್ಮನೂ ಆದ ನಿನ್ನನ್ನು ಬಿಟ್ಟು, ಆತ್ಮದ ಸ್ವಸ್ವರೂಪವನ್ನು ಉಪದೇಶಿಸಬಲ್ಲ ಇನ್ನೊಬ್ಬನನ್ನು ದೇವತೆಗಳ ನಡುವೆಯೂ ನಾನು ಕಾಣಲಾರೆನು. ಶರೀರಧಾರಿಗಳಾದ ಬ್ರಹ್ಮಾದಿಗಳೆಲ್ಲರೂ ಬಾಹ್ಯ ವಿಷಯಗಳಲ್ಲಿ ನಂಬಿಕೆಯನ್ನು ತಳೆದವರು. ಇವರೆಲ್ಲರೂ ನಿನ್ನ ಮಾಯೆಯಿಂದ ಮೂಢ

ತಸ್ಮಾದ್ ಭವಂತಮನವದ್ಯಮನಂತಪಾರಂ
ಸರ್ವಜ್ಞಮೀಶ್ವರಮಕುಂಠ ವಿಕುಂಠಧಿಷ್ಣ್ಯಮ್ ।
ನಿರ್ವಿಣ್ಣಧೀರಹಮು ಹ ವೃಜಿನಾಭಿತಪ್ತೋ
ನಾರಾಯಣಂ ನರಸಖಂ ಶರಣಂ ಪ್ರಪದ್ಯೇ ॥ ೧೮

ಶ್ರೀ ಭಗವಾನುವಾಚ—

ಪ್ರಾಯೇಣ ಮನುಜಾ ಲೋಕೇ ಲೋಕತತ್ತ್ವವಿಚಕ್ಷಣಾಃ ।
ಸಮುದ್ಧರಂತಿ ಹ್ಯಾತ್ಮಾನಮಾತ್ಮನೈವಾಶುಭಾಶಯಾತ್ ॥ ೧೯

ಆತ್ಮನೋ ಗುರುರಾತ್ಮೈವ ಪುರುಷಸ್ಯ ವಿಶೇಷತಃ ।
ಯತ್ ಪ್ರತ್ಯಕ್ಷಾನುಮಾನಾಭ್ಯಾಂ ಶ್ರೇಯೋಽಸಾವನುವಿಂದತೇ ॥ ೨೦

ಪುರುಷತ್ವೇ ಚ ಮಾಂ ಧೀರಾಃ ಸಾಂಖ್ಯಯೋಗವಿಶಾರದಾಃ ।
ಆವಿಸ್ತರಾಂ ಪ್ರಪಶ್ಯಂತಿ ಸರ್ವಶಕ್ತ್ಯುಪಬೃಂಹಿತಮ್ ॥ ೨೧

---

ರಾಗಿದ್ದಾರೆ (೧೭). ಆದ್ದರಿಂದ ದುಃಖಾಭಿತಪ್ತನಾಗಿ ನಿರ್ವಿಣ್ಣನಾದ ನಾನು ಅನವದ್ಯನೂ ದೇಶಕಾಲಗಳ ಅಂತಪಾರವಿಲ್ಲದವನೂ ಸರ್ವಜ್ಞನೂ ಈಶ್ವರನೂ ಅಕುಂಠವಾದ ವೈಕುಂಠಧಾಮದಲ್ಲಿ ನೆಲೆಸಿದವನೂ ನಾರಾಯಣನೂ ನರಸಖನೂ ಆದ ನಿನಗೆ ಶರಣಾಗಿದ್ದೇನೆ" ಎಂದನು (೧೮). ಆಗ ಭಗವಂತನು ನುಡಿದನು : ಉದ್ಧವ, ಜಗತ್ತಿನಲ್ಲಿ ಸಂಸಾರದ ಸಾರವೇನೆಂದು ಪರೀಕ್ಷಿಸಬಲ್ಲ ನಿಪುಣರಾದ ಮಾನವರು ಸಾಮಾನ್ಯವಾಗಿ ತಮ್ಮನ್ನು ತಮ್ಮಿಂದಲೇ ವಿಷಯವಾಸನೆಯಿಂದ ತಪ್ಪಿಸಿ ಮೇಲೆತ್ತಿಕೊಳ್ಳುತ್ತಾರೆ. (ಪಶ್ವಾದಿ ಶರೀರಗಳಲ್ಲಿರುವಾಗ ಸಹ) ಜೀವನು ತನ್ನ ಹಿತಾಹಿತಜ್ಞಾನದಲ್ಲಿ ತನಗೆ ತಾನೇ ಗುರುವಾಗಿರುತ್ತಾನೆ, ವಿಶೇಷವಾಗಿ ಮನುಷ್ಯ ಶರೀರದಲ್ಲಿ. ಏಕೆಂದರೆ, ಪ್ರತ್ಯಕ್ಷ ಅನುಮಾನಗಳೆಂಬ ಎರಡು ಪ್ರಮಾಣಗಳಿಂದ ಮನುಷ್ಯನು ಶ್ರೇಯಸ್ಸನ್ನು ಪಡೆಯಬಲ್ಲನು (೧೯–೨೦). ಮನುಷ್ಯರಲ್ಲಿ ಸಾಂಖ್ಯಯೋಗವಿಶಾರದರಾದ ಧೀರರು ಸರ್ವಶಕ್ತಿವಿಶಿಷ್ಟನಾದ ನನ್ನನ್ನು ಸ್ಪಷ್ಟವಾಗಿ ಕಾಣಬಲ್ಲರು. ಲೋಕದಲ್ಲಿ ಏಕಪಾದ, ದ್ವಿಪಾದ, ತ್ರಿಪಾದ, ಚತುಷ್ಪಾದಗಳಿಂದ ಕೂಡಿದ ಪ್ರಾಣಿಗಳೂ ಹಾಗೆಯೇ ಪಾದರಹಿತಪ್ರಾಣಿಗಳೂ ಅಸಂಖ್ಯಾತವಾಗಿ ಸೃಷ್ಟಿಸಲ್ಪಟ್ಟಿವೆಯಷ್ಟೆ. ಅವುಗಳಲ್ಲಿ ಮನುಷ್ಯಸೃಷ್ಟಿಯು ನನಗೆ ಬಹಳ

ಏಕದ್ವಿತ್ರಿಚತುಷ್ಪಾದೋ ಬಹುಪಾದಸ್ತಥಾಪದಃ ।
ಬಹ್ವ್ಯಃ ಸಂತಿ ಪುರಃ ಸೃಷ್ಟಾಸ್ತಾಸಾಂ ಮೇ ಪೌರುಷೀ ಪ್ರಿಯಾ ॥ ೨೨

ಅತ್ರ ಮಾಂ ಮಾರ್ಗಯಂತ್ಯದ್ಧಾ ಯುಕ್ತಾ ಹೇತುಭಿರೀಶ್ವರಮ್ ।
ಗೃಹ್ಯಮಾಣೈರ್ಗುಣೈರ್ಲಿಂಗೈರಗ್ರಾಹ್ಯಮನುಮಾನತಃ ॥ ೨೩

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ।
ಅವಧೂತಸ್ಯ ಸಂವಾದಂ ಯದೋರಮಿತತೇಜಸಃ ॥ ೨೪

ಅವಧೂತಂ ದ್ವಿಜಂ ಕಂಚಿಚ್ಚರಂತಮಕುತೋಭಯಮ್ ।
ಕವಿಂ ನಿರೀಕ್ಷ್ಯ ತರುಣಂ ಯದುಃ ಪಪ್ರಚ್ಛ ಧರ್ಮವಿತ್ ॥ ೨೫

---

ಪ್ರಿಯವಾದುದು! (೨೧–೨೨). ಏಕೆಂದರೆ, ಈ ಮನುಷ್ಯಜನ್ಮದಲ್ಲಿ ತಕ್ಕವರು ಚಿತ್ತಸಂಯಮವನ್ನು ಪಡೆದು ಈಶ್ವರನಾದ ನನ್ನನ್ನು ನಿಶ್ಚಯವಾಗಿ ಅನ್ವೇಷಿಸ ಬಲ್ಲರು. ಅನುಭವಕ್ಕೆ ಬರತಕ್ಕ ಘಟಜ್ಞಾನಾದಿಗುಣಗಳೆಂಬ ಲಕ್ಷಕ [1]ಹೇತುಗಳಿಂದಲೂ ಹಾಗೆಯೇ ಬುದ್ಧಿ-ಇಂದ್ರಿಯ ಮುಂತಾದ ಅನುಮಾನಪೋಷಕ [2]ಲಿಂಗಗಳಿಂದಲೂ ಈಶ್ವರನನ್ನು ಗುರುತಿಸುತ್ತಾರೆ. ಆದರೂ ನಾನು ಸಂಪೂರ್ಣವಾಗಿ [3]ಅನುಮಾನಗ್ರಾಹ್ಯನಲ್ಲ (೨೩). ಈ ವಿಷಯವಾಗಿ ಪುರಾತನವಾದ ಒಂದು ಇತಿಹಾಸವನ್ನು ಉದಾಹರಿಸುವುದುಂಟು. ಏನೆಂದರೆ—ದ್ವಿಜನೂ ವಿದ್ವಾಂಸನೂ ತರುಣನೂ ಆದ ಒಬ್ಬ ಅವಧೂತನು ಯಥೇಚ್ಛವಾಗಿ ನಿರ್ಭಯದಿಂದ ಸಂಚರಿಸುತ್ತಿರುವುದನ್ನು ನೋಡಿ, ಧರ್ಮಜ್ಞನಾದ ಯದುರಾಜನು ಹೀಗೆ ಪ್ರಶ್ನೆ ಮಾಡಿದನು (೨೪–೨೫):

---

1. ನಮಗೆ ಘಟಾದಿಜ್ಞಾನವಾಗುವುದು ಅನುಭವಕ್ಕೆ ಬಂದಿದೆ. ಘಟಾದಿಗಳು ಜಡ ವಸ್ತುಗಳು. ಜಡವಸ್ತುಗಳ ಪ್ರಕಾಶಕ್ಕೆ ಸ್ವಯಂಪ್ರಕಾಶವಾದ ವಸ್ತುವಿರಬೇಕು. ಆ ವಸ್ತುವೇ ಈಶ್ವರ (ಅನುಪಪತ್ತಿ)

2. ಬುದ್ಧಿ, ಇಂದ್ರಿಯ-ಮುಂತಾದವು ಮನುಷ್ಯನು ಮಾಡುವ ಕ್ರಿಯೆಗೆ ಕರಣಗಳು. ಕರಣಗಳಿಗೆ ಪ್ರೇರಕನಾದ ಕರ್ತನೊಬ್ಬನಿರಬೇಕು. ಅವನೇ ಈಶ್ವರ—ಇತ್ಯಾದಿ (ಅನುಮಾನ)

3. ಈ ಬಗೆಯ ಪ್ರಮಾಣಗಳಿಂದ ದೇಹಾತಿರಿಕ್ತನಾದ ಆತ್ಮನಿದ್ದಾನೆಂದು ನಿಶ್ಚಯಿಸಬಹುದು. ಆದರೆ ಆತ್ಮನ ಸ್ವರೂಪವೇನೆಂಬುದು ಇವುಗಳಿಂದ ನಿರ್ಣೀತವಾಗುವುದಿಲ್ಲ.

ಯದುರುವಾಚ—

ಕುತೋ ಬುದ್ಧಿರಿಯಂ ಬ್ರಹ್ಮನ್ನ ಕರ್ತುಃ ಸುವಿಶಾರದಾ ।
ಯಾಮಾಸಾದ್ಯ ಭವಾನ್ ಲೋಕಂ ವಿದ್ವಾಂಶ್ಚರತಿ ಬಾಲವತ್ ॥ ೨೬

ಪ್ರಾಯೋ ಧರ್ಮಾರ್ಥಕಾಮೇಷು ವಿವಿತ್ಸಾಯಾಂ ಚ ಮಾನವಾಃ ।
ಹೇತುನೈವ ಸಮೀಹಂತೇ ಆಯುಷೋ ಯಶಸಃ ಶ್ರಿಯಃ ॥ ೨೭

ತ್ವಂ ತು ಕಲ್ಪಃ ಕವಿರ್ದಕ್ಷಃ ಸುಭಗೋಽಮೃತಭಾಷಣಃ ।
ನ ಕರ್ತಾ ನೇಹಸೇ ಕಿಂಚಿಜ್ಜಡೋನ್ಮತ್ತಪಿಶಾಚವತ್ ॥ ೨೮

ಜನೇಷು ದಹ್ಯಮಾನೇಷು ಕಾಮಲೋಭದವಾಗ್ನಿನಾ ।
ನ ತಪ್ಯಸೇಽಗ್ನಿನಾ ಮುಕ್ತೋ ಗಂಗಾಂಭಸ್ಥ ಇವ ದ್ವಿಪಃ ॥ ೨೯

ತ್ವಂ ಹಿ ನಃ ಪೃಚ್ಛತಾಂ ಬ್ರಹ್ಮನ್ನಾತ್ಮನ್ಯಾನಂದಕಾರಣಮ್ ।
ಬ್ರೂಹಿ ಸ್ಪರ್ಶವಿಹೀನಸ್ಯ ಭವತಃ ಕೇವಲಾತ್ಮನಃ ॥ ೩೦

---

"ಹೇ ವಿಪ್ರೋತ್ತಮ, ವಿದ್ವಾಂಸನಾದ ನೀನು ಯಾವ ಕಾರ್ಯದಲ್ಲಿಯೂ ಆಸಕ್ತಿಯನ್ನಿಡದೆ ಬಾಲಕನಂತೆ ಸಂಚರಿಸುತ್ತಿದ್ದೀಯೆ. ಲೋಕವಿಲಕ್ಷಣವಾದ ಈ ಬಗೆಯ ಬುದ್ಧಿಯು ನಿನಗೆ ಹೇಗೆ ಉಂಟಾಯಿತು? (೨೬). ಸಾಮಾನ್ಯವಾಗಿ ಜನರೆಲ್ಲರೂ ಧರ್ಮಾರ್ಥಕಾಮಗಳಲ್ಲಿಯೋ ಆತ್ಮಜಿಜ್ಞಾಸೆಯಲ್ಲಿಯೋ ಪ್ರವೃತ್ತರಾಗಿರುತ್ತಾರೆ. ಆಯುಸ್ಸನ್ನೂ ಯಶಸ್ಸನ್ನೂ ಸಂಪತ್ತನ್ನೂ ಬಯಸುತ್ತ ಯಾವುದಾದರೊಂದು ನಿಮಿತ್ತದಿಂದಲೇ ಕಾರ್ಯದಲ್ಲಿ ತೊಡಗಿರುತ್ತಾರೆ. ನೀನಾದರೋ ಸಮರ್ಥನೂ ವಿದ್ಯಾವಂತನೂ ದಕ್ಷನೂ ಸುಂದರನೂ ಆಗಿದ್ದೀಯೆ. ಅಮೃತವು ಸುರಿದಂತೆ ಮಧುರವಾಗಿ ಮಾತಾಡುತ್ತೀಯೆ. ಆದರೆ ಯಾವ ಕಾರ್ಯವನ್ನೂ ಮಾಡುವುದಿಲ್ಲ! ಯಾವುದನ್ನೂ ಬಯಸುವುದಿಲ್ಲ! ಒಬ್ಬ ಜಡಪುರುಷನಂತೆ, ಹುಚ್ಚನಂತೆ, ಪಿಶಾಚದಂತೆ ಅಲೆಯುತ್ತಿದ್ದೀಯೆ! (೨೭–೨೮). ಕಾಮಲೋಭಗಳೆಂಬ ಕಾಳ್ಗಿಚ್ಚಿನಿಂದ ಜನರು ಬೆಂದು ಬೆಂಡಾಗುತ್ತಿದ್ದರೂ ನೀನು ಈ ಕಾಳ್ಗಿಚ್ಚಿನ ತಾಪದಿಂದ ತಪ್ಪಿಸಿಕೊಂಡು, ಗಂಗಾಜಲದಲ್ಲಿ ಶಾಂತವಾಗಿ ನಿಂತಿರುವ ಆನೆಯಂತೆ ಕಾಣುತ್ತೀಯೆ! ಓ ದ್ವಿಜೋತ್ತಮ, ಪುತ್ರಕಳತ್ರಾದಿಗಳೂ ಇಲ್ಲದೆ ಕೇವಲಾತ್ಮನಾಗಿ ವಿಷಯಭೋಗಗಳನ್ನು ಪರಿತ್ಯಜಿಸಿರುವ ನಿನಗೆ ಚಿತ್ತದಲ್ಲಿ ಇಷ್ಟೊಂದು ಆನಂದವು ತುಂಬಿರುವುದಲ್ಲ, ಇದಕ್ಕೆ ಕಾರಣ

ಶ್ರೀ ಭಗವಾನುವಾಚ—

ಯದುನೈವಂ ಮಹಾಭಾಗೋ ಬ್ರಹ್ಮಣ್ಯೇನ ಸುಮೇಧಸಾ ।
ಪೃಷ್ಟಃ ಸಭಾಜಿತಃ ಪ್ರಾಹ ಪ್ರಶ್ರಯಾವನತಂ ದ್ವಿಜಃ ॥ ೩೧

ಬ್ರಾಹ್ಮಣ ಉವಾಚ—

ಸಂತಿ ಮೇ ಗುರವೋ ರಾಜನ್ ಬಹವೋ ಬುದ್ಧ್ಯುಪಾಶ್ರಿತಾಃ ।
ಯತೋ ಬುದ್ಧಿಮುಪಾದಾಯ ಮುಕ್ತೋಽಟಾಮೀಹ ತಾನ್ ಶೃಣು ॥ ೩೨

ಪೃಥಿವೀ ವಾಯುರಾಕಾಶಮಾಪೋಽಗ್ನಿಶ್ಚಂದ್ರಮಾ ರವಿಃ ।
ಕಪೋತೋಽಜಗರಃ ಸಿಂಧುಃ ಪತಂಗೋ ಮಧುಕೃದ್ಗಜಃ ॥ ೩೩

ಮಧುಹಾ ಹರಿಣೋ ಮೀನಃ ಪಿಂಗಲಾ ಕುರರೋಽರ್ಭಕಃ ।
ಕುಮಾರೀ ಶರಕೃತ್ ಸರ್ಪ ಊರ್ಣನಾಭಿಃ ಸುಪೇಶಕೃತ್ ॥ ೩೪

ಏತೇ ಮೇ ಗುರವೋ ರಾಜಂಶ್ಚತುರ್ವಿಂಶತಿರಾಶ್ರಿತಾಃ ।
ಶಿಕ್ಷಾ ವೃತ್ತಿಭಿರೇತೇಷಾಮನ್ವಶಿಕ್ಷಮಿಹಾತ್ಮನಃ ॥ ೩೫

---

ವೇನು? ದಯವಿಟ್ಟು ಹೇಳು" ಎಂದು ಕೇಳಿದನು (೨೯–೩೦). ಉದ್ಧವ, ಬ್ರಾಹ್ಮಣಪ್ರಿಯನೂ ಬುದ್ಧಿಶಾಲಿಯೂ ಆದ ಯದುರಾಜನು ಮಹಾತ್ಮನಾದ ಆ ವಿಪ್ರನನ್ನು ಕುರಿತು ಈ ರೀತಿಯಾಗಿ ಕೇಳಿ, ಪೂಜಿಸಿ, ವಿನಯದಿಂದ ನಮಸ್ಕರಿಸಿದನು. ಆಗ ಆ ಬ್ರಹ್ಮಜ್ಞಾನಿಯು ಹೇಳಿದ್ದೇನೆಂದರೆ, (೩೧): "ರಾಜ, ನನಗೆ ಬುದ್ಧಿಯನ್ನು ಕಲಿಸಿದ ಬಹಳ ಮಂದಿ ಗುರುಗಳಿದ್ದಾರೆ. ಅವರೆಲ್ಲರೂ ನನ್ನ ಗುರುಗಳೆಂದು ಮನಸ್ಸಿನಲ್ಲಿಯೇ ಸ್ವೀಕರಿಸಿದ್ದೇನೆ. ಅವರಿಂದ ಬುದ್ಧಿಯನ್ನು ಕಲಿತು ದುಃಖದಿಂದ ಮುಕ್ತನಾಗಿ ಅಲೆಯುತ್ತಿದ್ದೇನೆ. ಆ ಗುರುಗಳು ಯಾರೆಂಬುದೆಂದು ಹೇಳುವೆನು, ತಿಳಿದುಕೊ (೩೨). ಭೂಮಿ, ವಾಯು, ಆಕಾಶ, ಜಲ, ಅಗ್ನಿ, ಚಂದ್ರ, ಸೂರ್ಯ, ಪಾರಿವಾಳ, ಹೆಬ್ಬಾವು, ಸಮುದ್ರ, ಪತಂಗ, ದುಂಬಿ, ಆನೆ, ಜೇನುಕುಡಿಯುವ [1]'ಮಧುಹಾ' ಎಂಬ ಹಕ್ಕಿ, ಜಿಂಕೆ, ಮೀನು, ಪಿಂಗಳಾ ಎಂಬ ವೇಶ್ಯೆ, ಕುರರಪಕ್ಷಿ, ಬಾಲಕ, ಹುಡುಗಿ, ವ್ಯಾಧ, ಸರ್ಪ, ಜೇಡರಹುಳು, ಭ್ರಮರ—ಈ ಇಪ್ಪತ್ತುನಾಲ್ಕು ಮಂದಿ ಗುರುಗಳನ್ನು ನಾನು ಆಶ್ರಯಿಸಿದ್ದೇನೆ! ಇವರ ವರ್ತನೆಗಳಿಂದ ನನ್ನ ಬುದ್ಧಿಗೆ ಶಿಕ್ಷಣವನ್ನು ಪಡೆದಿದ್ದೇನೆ! (೩೩–೩೫).

---

1. ಮಧುಹಾ = ಜೇನು ಕೀಳತಕ್ಕವನು ಎಂದೂ ಅರ್ಥ ಹೇಳಬಹುದು.

ಯತೋ ಯದನುಶಿಕ್ಷಾಮಿ ಯಥಾ ವಾ ನಾಹುಷಾತ್ಮಜ ।
ತತ್ತಥಾ ಪುರುಷವ್ಯಾಘ್ರ ನಿಬೋಧ ಕಥಯಾಮಿ ತೇ ॥ ೩೬

ಭೂತೈರಾಕ್ರಮ್ಯಮಾಣೋಽಪಿ ಧೀರೋ ದೈವವಶಾನುಗೈಃ ।
ತದ್ ವಿದ್ವಾನ್ನ ಚಲೇನ್ಮಾರ್ಗಾದನ್ವಶಿಕ್ಷಂ ಕ್ಷಿತೇರ್ವ್ರತಮ್ ॥ ೩೭

ಶಶ್ವತ್ಪರಾರ್ಥಸರ್ವೇಹಃ ಪರಾರ್ಥೈಕಾಂತಸಂಭವಃ ।
ಸಾಧುಃ ಶಿಕ್ಷೇತ ಭೂಭೃತ್ತೋ ನಗಶಿಷ್ಯಃ ಪರಾತ್ಮತಾಮ್ ॥ ೩೮

ಪ್ರಾಣವೃತ್ತ್ಯೈವ ಸಂತುಷ್ಯೇನ್ಮುನಿರ್ನೈವೇಂದ್ರಿಯಪ್ರಿಯೈಃ ।
ಜ್ಞಾನಂ ಯಥಾ ನ ನಶ್ಯೇತ ನಾವಕೀರ್ಯೇತ ವಾಙ್ಮನಃ ॥ ೩೯

---

ಯಯಾತಿಪುತ್ರ-ಯದುರಾಜ, ಯಾವ ಗುರುವಿನಿಂದ ಯಾವ ಶಿಕ್ಷಣವನ್ನು ಪಡೆದಿದ್ದೇನೆಂಬುದನ್ನು ಹೇಳುತ್ತೇನೆ, ಕೇಳು. ದೈವಪ್ರೇರಣೆಗೆ ಒಳಗಾಗಿ ಪ್ರಾಣಿಗಳು ನಮ್ಮನ್ನು ಪೀಡಿಸಬಹುದು. ಅದೆಲ್ಲವೂ ದೈವಪ್ರೇರಿತವೆಂದು ತಿಳಿದ ಧೀರನು ತನ್ನ ಸತ್ಯಮಾರ್ಗದಿಂದ ಚಲಿಸತಕ್ಕದ್ದಲ್ಲ. ತಾಳ್ಮೆಯೆಂಬ ಈ ನಿಯಮವನ್ನು ನಾನು ಭೂಮಿಯಿಂದ ಕಲಿತೆನು (೩೬-೩೭). ನಮ್ಮ ಸರ್ವಕಾರ್ಯಗಳೂ ಸರ್ವದಾ ಪರಾರ್ಥವಾಗಿರಬೇಕು, ಪರೋಪಕಾರವೆಂಬ ಫಲವನ್ನು ಕೊಡುತ್ತಿರಬೇಕು—ಎಂಬುದನ್ನು ಪರ್ವತದಿಂದಲೂ ವೃಕ್ಷಶಿಷ್ಯನಾಗಿ [1]ವೃಕ್ಷದಿಂದಲೂ ಸಾಧುಪುರುಷನು ಕಲಿತುಕೊಳ್ಳಬೇಕು (೩೮). (ಪ್ರಾಣವಾಯು, ಬಾಹ್ಯವಾಯು—ಎಂದು ವಾಯು ಎರಡು ವಿಧ) ಆದರಿಂದ ಕಲಿತದ್ದೇನೆಂದರೆ—ಜ್ಞಾನವು ನಾಶವಾಗದಿರಲೆಂದೂ ವಾಙ್ಮನಸ್ಸುಗಳು ಕೆಟ್ಟುಹೋಗದಿರಲೆಂದೂ ಮುನಿಯು [2]ಪ್ರಾಣವೃತ್ತಿಯಿಂದ—ಆಹಾರಮಾತ್ರ ಸೇವನೆಯಿಂದ ಸಂತೃಪ್ತನಾಗಬೇಕು. ಇಂದ್ರಿಯಪ್ರಿಯಗಳಾದ

---

1. ಪರ್ವತವು ಮರ, ಹುಲ್ಲು, ಹೊಳೆ—ಮುಂತಾದ್ದನ್ನು ಪರಾರ್ಥವಾಗಿ ಧರಿಸಿರುತ್ತದೆ. ವೃಕ್ಷವು ಮನುಷ್ಯರ ವಿವಿಧೋಪಯೋಗಗಳಿಗೆ ಬರುವುದಲ್ಲದೆ ಹಣ್ಣನ್ನು ಪರಾರ್ಥವಾಗಿ ಬಿಡುತ್ತದೆ. ಪರ್ವತ, ವೃಕ್ಷ—ಇವೆರಡನ್ನೂ ಭೂಮಿಯೆಂದು ಇಲ್ಲಿ ಗ್ರಹಿಸಲಾಗಿದೆ.

2. ಪ್ರಾಣವು ಆಹಾರ ಮಾತ್ರದಿಂದ ಪ್ರವೃತ್ತವಾಗುತ್ತದೆ. ರೂಪರಸಾದಿಗಳು ಅದಕ್ಕೆ ಬೇಕಿಲ್ಲ. ಅವುಗಳ ಸೇವನೆಯಿಂದ ಜ್ಞಾನವೂ ಮಾತು ಮನಸ್ಸುಗಳೂ ಕೆಡುತ್ತವೆ ಯೆಂದುಅಭಿಪ್ರಾಯ. ಪ್ರಾಣವು ವಾಯುರೂಪವಾದದ್ದು.

ವಿಷಯೇಷ್ವಾವಿಷನ್ ಯೋಗೀ ನಾನಾ ಧರ್ಮೇಷು ಸರ್ವತಃ ।
ಗುಣದೋಷವ್ಯಪೇತಾತ್ಮಾ ನ ವಿಷಜ್ಜೇತ ವಾಯುವತ್ ॥ ೪೦

ಪಾರ್ಥಿವೇಷ್ವಿಹ ದೇಹೇಷು ಪ್ರವಿಷ್ಟಸ್ತದ್ಗುಣಾಶ್ರಯಃ ।
ಗುಣೈರ್ನ ಯುಜ್ಯತೇ ಯೋಗೀ ಗಂಧೈರ್ವಾಯುರಿವಾತ್ಮದೃಕ್ ॥ ೪೧

ಅಂತರ್ಹಿತಶ್ಚ ಸ್ಥಿರಜಂಗಮೇಷು
ಬ್ರಹ್ಮಾತ್ಮಭಾವೇನ ಸಮನ್ವಯೇನ ।
ವ್ಯಾಪ್ತ್ಯಾ ವ್ಯವಚ್ಛೇದಮಸಂಗಮಾತ್ಮನೋ
ಮುನಿರ್ನಭಸ್ತ್ವಂ ವಿತತಸ್ಯ ಭಾವಯೇತ್ ॥ ೪೨

ತೇಜೋಽಬನ್ನಮಯೈರ್ಭಾವೈರ್ಮೇಘಾದ್ಯೈರ್ವಾಯುನೇರಿತೈಃ ।
ನ ಸ್ಪೃಶ್ಯತೇ ನಭಸ್ತದ್ವತ್ ಕಾಲಸೃಷ್ಟೈರ್ಗುಣೈಃ ಪುಮಾನ್ ॥ ೪೩

---

ಭೋಗವಸ್ತುಗಳಿಂದಲ್ಲ (೩೯). ಶೀತೋಷ್ಣಾದಿ ನಾನಾ ಧರ್ಮಗಳುಳ್ಳ ವಿಷಯಗಳನ್ನು ಒಂದುವೇಳೆ ಸೇವಿಸಿದರೂ ಯೋಗಿಯಾದವನು ಅವುಗಳ ಗುಣದೋಷಗಳನ್ನು ಮನಸ್ಸಿಗೆ ತಾರದೆ (ಬಾಹ್ಯವಾದ) ವಾಯುವಿನಂತೆ ಯಾವುದರಲ್ಲಿಯೂ ಆಸಕ್ತನಾಗಬಾರದು (೪೦). ವಾಯುವು ಗಂಧಾದಿಗುಣಯುಕ್ತ ಪದಾರ್ಥಗಳ ಮೇಲೆ ಬೀಸಿದರೂ ಅವುಗಳ ಗುಣದಿಂದ ಹೇಗೆ ಲಿಪ್ತವಾಗುವುದಿಲ್ಲವೋ ಹಾಗೆ ಆತ್ಮಜ್ಞಾನಿಯಾದವನು ಪಾರ್ಥಿವದೇಹಗಳಲ್ಲಿ ಪ್ರವಿಷ್ಟನಾಗಿ ಪಾರ್ಥಿವಗುಣಗಳಿಗೆ ಆಶ್ರಯನಾದರೂ ಆ ಗುಣಗಳಿಂದ [1]ಲಿಪ್ತನಾಗಬಾರದು (೪೧). ಮುನಿಯಾದವನು ದೇಹದೊಳಗೆ ನೆಲೆಸಿದ್ದರೂ ಆಕಾಶದಂತೆ ತನಗೆ ದಿಗ್ ದೇಶಕಾಲ ವ್ಯವಚ್ಛೇದವಿಲ್ಲವೆಂದೂ ತಾನು ನಿಃಸಂಗನೆಂದೂ ಭಾವಿಸಬೇಕು. ತಾನು ಬ್ರಹ್ಮವೆಂಬ ನಿಶ್ಚಯದಿಂದ ಸ್ಥಾವರಜಂಗಮಗಳಲ್ಲಿ ಸರ್ವವ್ಯಾಪ್ತಿಯಿಂದ ತನ್ನನ್ನು ಸಮನ್ವಯಿಸಿಕೊಳ್ಳಬೇಕು. ನಾನು ಆಕಾಶಕ್ಕೆ ಸಮಾನನೆಂದು ಭಾವಿಸುವುದರಿಂದ ಇದೆಲ್ಲವೂ ಘಟಿಸುತ್ತದೆ (೪೨). ವಾಯುವಿನಿಂದ ಪ್ರೇರಿತವಾದ ಮೇಘಾದಿಗಳಿಂದ ಉಂಟಾದ ಅಗ್ನಿ, ಜಲ, ಅನ್ನ (ಭೂಮಿ) ಗಳ ಸಂಬಂಧಿ ಪದಾರ್ಥಗಳಿಂದ ಆಕಾಶವು ಹೇಗೆ

---

1. ವಾಯುವಿನ ಗುಣವು ಸ್ಪರ್ಶಮಾತ್ರ. ವಾಯು ಹೊತ್ತುತರುವ ಗಂಧವು ಪಾರ್ಥಿವ ಕಣಕ್ಕೆ ಸಂಬಂಧಿಸಿದ್ದೇ ಹೊರತು ವಾಯುವಿನದಲ್ಲ. ಹಾಗೆ ಯೋಗಿಯು 'ಗುಣಾ ಗುಣೇಷು ವರ್ತಂತೇ' ಎಂಬ ಗೀತಾ ವಚನದಂತೆ ನಿರ್ಲಿಪ್ತನಾಗಿರಬೇಕು.

ಸ್ವಚ್ಛಃ ಪ್ರಕೃತಿತಃ ಸ್ನಿಗ್ಧೋ ಮಾಧುರ್ಯಸ್ತೀರ್ಥಭೂರ್ನೃಣಾಮ್ ।
ಮುನಿಃ ಪುನಾತ್ಯಪಾಂ ಮಿತ್ರಮೀಕ್ಷೋಪಸ್ಪರ್ಶಕೀರ್ತನೈಃ ॥ ೪೪
ತೇಜಸ್ವೀ ತಪಸಾ ದೀಪ್ತೋ ದುರ್ಧರ್ಷೋದರ ಭಾಜನಃ ।
ಸರ್ವಭಕ್ಷೋಽಪಿ ಯುಕ್ತಾತ್ಮಾ ನಾದತ್ತೇ ಮಲಮಗ್ನಿವತ್ ॥ ೪೫
ಕ್ವಚಿಚ್ಛನ್ನಃ ಕ್ವಚಿತ್ ಸ್ಪಷ್ಟ ಉಪಾಸ್ಯಃ ಶ್ರೇಯ ಇಚ್ಛತಾಮ್ ।
ಭುಂಕ್ತೇ ಸರ್ವತ್ರ ದಾತೃಣಾಂ ದಹನ್ ಪ್ರಾಗುತ್ತರಾಶುಭಮ್ ॥ ೪೬
ಸ್ವಮಾಯಯಾ ಸೃಷ್ಟಮಿದಂ ಸದಸಲ್ಲಕ್ಷಣಂ ವಿಭುಃ ।
ಪ್ರವಿಷ್ಟ ಈಯತೇ ತತ್ತತ್ಸ್ವರೂಪೋಽಗ್ನಿರಿವೈಧಸಿ ॥ ೪೭

---

ಲಿಪ್ತವಾಗುವುದಿಲ್ಲವೋ ಹಾಗೆಯೇ ಕಾಲದಿಂದ ಸೃಷ್ಟವಾದ ದೇಹಾದಿಗಳಿಂದ ಪುರುಷನಿಗೆ ಲೇಪವಿಲ್ಲ (೪೩). ಪುಣ್ಯತೀರ್ಥವು ಸಹಜವಾಗಿ ನಿರ್ಮಲವೂ ಸ್ನೇಹ ಗುಣ (ವಸ್ತುಗಳನ್ನು ಕೂಡಿಸಿ ಕಲೆಸುವ ಗುಣ) ಉಳ್ಳದ್ದೂ ಜನರಿಗೆ ಮಧುರವೂ ಆಗಿರುತ್ತದೆ. ತೀರ್ಥಕ್ಕೆ ಸಮಾನನಾದ ಮುನಿಯು ತೀರ್ಥೋದಕದಂತೆ ನಿರ್ಮಲನೂ ಜನರಲ್ಲಿ ಸ್ನೇಹಗುಣವುಳ್ಳವನೂ ಮಧುರಭಾಷಿಯೂ ಆಗಿರುತ್ತಾನೆ ಅವನು ತೀರ್ಥದಂತೆಯೇ ದರ್ಶನ, ಸ್ಪರ್ಶನ, ಕೀರ್ತನಗಳಿಂದ ಜನರನ್ನು ಪವಿತ್ರಗೊಳಿಸುತ್ತಾನೆ (೪೪). ಅಗ್ನಿಯು ತೇಜಸ್ವಿಯಾಗಿಯೂ ಉರಿಯುವುದರಿಂದ ದೀಪ್ತವಾಗಿಯೂ ಇರುತ್ತದೆ. ದುರ್ಧರ್ಷವಾದ ಉದರಕ್ಕೆ ಆಶ್ರಯವಾಗಿರುತ್ತದೆ (ಅದರ ಹೊಟ್ಟೆಗೆ ಎಷ್ಟು ಹಾಕಿದರೂ ಸಾಕಾಗುವುದಿಲ್ಲ!) ಸರ್ವವನ್ನು ಭಕ್ಷಿಸಿ ಸುಟ್ಟು ಹಾಕಿದರೂ ಅಗ್ನಿಗೆ ಕೊಳೆ ಅಂಟುವುದಿಲ್ಲ. ಯುಕ್ತಾತ್ಮನಾದ ಮುನಿಯು ಅಗ್ನಿಯಂತೆಯೇ ತೇಜಸ್ವಿ. ತಪಸ್ಸಿನಿಂದ ದೀಪ್ತನಾಗಿರುತ್ತಾನೆ. ಯಾರ ಧರ್ಷಣೆಗೂ ನಿಲುಕತಕ್ಕವನಲ್ಲ. ಉದರವೇ ಅವನ ಪಾತ್ರೆ (ವಿಧಿನಿಷೇಧಗಳಿಗೆ ಆತನು ಒಳಗಾಗದೆ ಇರುವುದರಿಂದ) ಒಂದುವೇಳೆ ಸರ್ವಭಕ್ಷನಾದರೂ ಯಾವ ದೋಷವನ್ನೂ ಪಡೆಯುವುದಿಲ್ಲ (೪೫). ಮುನಿಯು ಅಗ್ನಿಯಂತೆಯೇ ಕೆಲವುವೇಳೆ ಮುಚ್ಚಿದ ಕೆಂಡವಾಗಿರುವನು. ಕೆಲವುವೇಳೆ ಸ್ಪಷ್ಟವಾಗಿ ಸ್ವಭಾವತಃ ಗೋಚರಿಸುವನು. ಶ್ರೇಯಸ್ಸನ್ನು ಬಯಸತಕ್ಕವರಿಗೆ ಉಪಾಸ್ಯನಾಗಿರುವನು. ಹವಿರ್ದಾನ ಮಾಡತಕ್ಕವರು ಮಾಡಿರುವ ಪಾಪವನ್ನೂ ಮಾಡಲಿರುವ ಮುಂದಿನ ಪಾಪವನ್ನೂ ಅಗ್ನಿಯು ಸುಡುವಂತೆ, ಈ ಯೋಗಿಯು ಪೂರ್ವೋತ್ತರ ಪಾಪಗಳನ್ನು ನಾಶ ಮಾಡುವನು (೪೬). ಪರಮಾತ್ಮನು ತನ್ನ ಮಾಯೆಯಿಂದ ಸೃಷ್ಟಿಸಿರುವ

ವಿಸರ್ಗಾದ್ಯಾಃ ಶ್ಮಶಾನಾಂತಾ ಭಾವಾ ದೇಹಸ್ಯ ನಾತ್ಮನಃ ।
ಕಲಾನಾಮಿವ ಚಂದ್ರಸ್ಯ ಕಾಲೇನಾವ್ಯಕ್ತವರ್ತ್ಮನಾ ॥ ೪೮

ಕಾಲೇನ ಹ್ಯೋಘವೇಗೇನ ಭೂತಾನಾಂ ಪ್ರಭವಾಪ್ಯಯೌ ।
ನಿತ್ಯಾವಪಿ ನ ದೃಶ್ಯೇತೇ ಆತ್ಮನೋಽಗ್ನೇರ್ಯಥಾರ್ಚಿಷಾಮ್ ॥ ೪೯

ಗುಣೈರ್ಗುಣಾನುಪಾದತ್ತೇ ಯಥಾಕಾಲಂ ವಿಮುಂಚತಿ ।
ನ ತೇಷು ಯುಜ್ಯತೇ ಯೋಗೀ ಗೋಭಿರ್ಗಾ ಇವ ಗೋಪತಿಃ ॥ ೫೦

---

ಸದಸದ್ರೂಪವಾದ ಎಂದರೆ ದೇವತಿರ್ಯಗಾದಿರೂಪವಾದ ಶರೀರವನ್ನು ಪ್ರವೇಶಿಸಿ, ಸೌದೆಯಲ್ಲಿ ಪ್ರವೇಶಿಸಿದ ಅಗ್ನಿಯಂತೆ, ಶರೀರದ ಆಯಾರೂಪವನ್ನು ಧರಿಸಿದ ಹಾಗೆ (ದೇಹೋಪಾಧಿಯಿಂದ) ಕಂಡುಬರುತ್ತಾನೆ (೪೭). ಹುಟ್ಟಿನಿಂದ ಹಿಡಿದು ಮಸಣದವರೆಗೆ—ಎಂದರೆ ಸಾವಿನವರೆಗೆ ಸಂಭವಿಸುವ ಜನ್ಮಾದಿಷಡ್‌ಭಾವಗಳು ದೇಹಕ್ಕೇ ಹೊರತು ಆತ್ಮನಿಗಲ್ಲ. ಅವ್ಯಕ್ತವಾಗಿ ಕಾರ್ಯವನ್ನು ಮಾಡುವ ಕಾಲದಿಂದ, ಚಂದ್ರನಿಗೆ ಕಲೆಗಳ ಹ್ರಾಸ, ವೃದ್ಧಿಗಳು ಆಗುವಂತೆ [1]ಈ ಷಡ್ ಭಾವಗಳು ದೇಹಕ್ಕೆ ಆಗುತ್ತವೆ (೪೮) ಆತ್ಮನಿಗೆ ಉಪಾಧಿಗಳಾಗಿರುವ ಪ್ರಾಣಿ ದೇಹಗಳಿಗೆ ಉತ್ಪತ್ತಿವಿನಾಶಗಳು ಸತತವಾಗಿ ನಡೆಯುತ್ತಿದ್ದರೂ ಪ್ರವಾಹದಂತೆ ಓಡುವ ಕಾಲದ ಮಹಿಮೆಯಿಂದ ನಮ್ಮ ಲಕ್ಷ್ಯಕ್ಕೆ ಬರುವುದಿಲ್ಲ, ಅಗ್ನಿಯ [2]ಜ್ವಾಲೆಗಳಿಗಾಗುವ ಉತ್ಪತ್ತಿ ವಿನಾಶಗಳಂತೆ (೪೯). ಸೂರ್ಯನು ತನ್ನ ಕಿರಣ ಗಳಿಂದ ಜಲವನ್ನು ಹೀರಿ ಯಥಾಕಾಲದಲ್ಲಿ ಅದನ್ನು ಮಳೆಯಾಗಿ ಸುರಿಸಿಬಿಡು ತ್ತಾನೆ. ಅವನಿಗೆ ನೀರಿನಲ್ಲಿ ಯಾವ ಆಸಕ್ತಿಯೂ ಇಲ್ಲ. ಹಾಗೆಯೇ ಮುನಿಯು ತನ್ನ ಇಂದ್ರಿಯಗಳಿಂದ ಧನಾದಿ ವಿಷಯಗಳನ್ನು ಸ್ವೀಕರಿಸಿ, ಸಮಯಬಂದಾಗ

---

1. ಅಸ್ತಿ, ಜಾಯತೇ, ವರ್ಧತೇ, ಪರಿಣಮತೇ, ಕ್ಷೀಯತೇ, ನಶ್ಯತಿ—ಎಂಬಿವು ಷಡ್‌ಭಾವವಿಕಾರಗಳು. ಇವು ಆತ್ಮನಿಗಿಲ್ಲ. ಚಂದ್ರನಿಗೆ ಶುಕ್ಲಪಕ್ಷದಲ್ಲಿ ಕಲಾವೃದ್ಧಿಯೂ ಕೃಷ್ಣಪಕ್ಷದಲ್ಲಿ ಕಲಾಹ್ರಾಸವೂ ಆಗುತ್ತವೆ. ಚಂದ್ರಮಂಡಲವು ಮಾತ್ರ ಒಂದೇ ರೀತಿ ಇರುತ್ತದೆ.

2. ಅಗ್ನಿಯ ಜ್ವಾಲೆಗಳು ಒಂದರ ಮೇಲೆ ಒಂದು ಹುಟ್ಟಿ ನಾಶವಾಗುತ್ತಲೇ ಇರು ತ್ತವೆ. ವೇಗಾತಿಶಯದಿಂದ ನಮಗೆ ಗೊತ್ತಾಗುವುದಿಲ್ಲ. ದೇಹದಲ್ಲಿಯೂ ಹಾಗೆಯೇ ಮಾರ್ಪಾಡುಗಳು ಸತತವಾಗಿ ನಡೆಯುತ್ತಲೇ ಇರುತ್ತವೆ ಬಹುಸೂಕ್ಷ್ಮವಾದ್ದರಿಂದ ಗೊತ್ತಾ ಗುವುದಿಲ್ಲ.

ಬುಧ್ಯತೇ ಸ್ವೇನ ಭೇದೇನ ವ್ಯಕ್ತಿಸ್ಥ ಇವ ತದ್ಗತಃ ।
ಲಕ್ಷ್ಯತೇ ಸ್ಥೂಲಮತಿಭಿರಾತ್ಮಾ ಚಾವಸ್ಥಿತೋऽರ್ಕವತ್ ॥ ೫೧
ನಾತಿಸ್ನೇಹಃ ಪ್ರಸಂಗೋ ವಾ ಕರ್ತವ್ಯಃ ಕ್ವಾಪಿ ಕೇನಚಿತ್ ।
ಕುರ್ವನ್ ವಿಂದೇತ ಸಂತಾಪಂ ಕಪೋತ ಇವ ದೀನಧೀಃ ॥ ೫೨
ಕಪೋತಃ ಕಶ್ಚನಾರಣ್ಯೇ ಕೃತನೀಡೋ ವನಸ್ಪತೌ ।
ಕಪೋತ್ಯಾ ಭಾರ್ಯಯಾ ಸಾರ್ಧಮುವಾಸ ಕತಿಚಿತ್ ಸಮಾಃ ॥ ೫೩
ಕಪೋತೌ ಸ್ನೇಹಗುಣಿತ ಹೃದಯೌ ಗೃಹಧರ್ಮಿಣೌ ।
ದೃಷ್ಟಿಂ ದೃಷ್ಟ್ಯಾಂಗಮಂಗೇನ ಬುದ್ಧಿಂ ಬುದ್ಧ್ಯಾ ಬಬಂಧತುಃ ॥ ೫೪
ಶಯ್ಯಾಸನಾಟನ ಸ್ಥಾನ ವಾರ್ತಾ ಕ್ರೀಡಾಶನಾದಿಕಮ್ ।
ಮಿಥುನೀಭೂಯ ವಿಸ್ರಬ್ಧೌ ಚೇರತುರ್ವನರಾಜಿಷು ॥ ೫೫
ಯಂ ಯಂ ವಾಂಛತಿ ಸಾ ರಾಜಂಸ್ತರ್ಪಯಂತ್ಯನುಕಂಪಿತಾ ।
ತಂ ತಂ ಸಮನಯತ್ ಕಾಮಂ ಕೃಚ್ಛ್ರೇಣಾಪ್ಯಜಿತೇಂದ್ರಿಯಃ ॥ ೫೬

---

ಅರ್ಥಿಯಾದವನಿಗೆ ಕೊಟ್ಟುಬಿಡುತ್ತಾನೆ. ಅವನಿಗೆ ವಿಷಯಗಳಲ್ಲಿ ಅನುರಕ್ತಿ ಇರುವುದಿಲ್ಲ (೫೦). ಆತ್ಮನು ಸ್ವಸ್ವರೂಪದಿಂದ ಏಕನಾಗಿ ಅವಸ್ಥಿತನಾಗಿದ್ದರೂ ದೇಹವ್ಯಕ್ತಿಯೆಂಬ ಉಪಾಧಿಯಲ್ಲಿ ಪ್ರತಿಬಿಂಬಿತನಾಗಿ ವ್ಯಕ್ತಿನಿಷ್ಠನೋ ಎಂಬಂತೆ ಬೇರೆಬೇರೆಯಾಗಿ ಸ್ಥೂಲಬುದ್ಧಿಗಳಿಗೆ ಗೋಚರಿಸುತ್ತಾನೆ. ಒಬ್ಬನೇ ಸೂರ್ಯನು ಬೇರೆ ಬೇರೆ ನೀರಿನಲ್ಲಿ ಪ್ರತಿಬಿಂಬಿತನಾದಾಗ ಹಲವಾರು ಸೂರ್ಯರಿದ್ದಂತೆ ಕಾಣಿಸುತ್ತದೆ. ಹಾಗೆಯೆ ಇದು (೫೧). ಯಾವನೂ ಯಾರ ವಿಷಯದಲ್ಲಿಯೂ ಅತ್ಯಂತ ಪ್ರೀತಿಯನ್ನಾಗಲಿ ಆಸಕ್ತಿಯನ್ನಾಗಲಿ ಇರಿಸಬಾರದು. ಹಾಗೆ ಇರಿಸಿದರೆ ದೀನನಾದ ಪಾರಿವಾಳ ಪಕ್ಷಿಯಂತೆ ಕಷ್ಟಕ್ಕೆ ಗುರಿಯಾಗಬೇಕಾದೀತು. ಅಡವಿಯಲ್ಲೊಂದು ಪಾರಿವಾಳವು ಮರದ ಮೇಲೆ ಗೂಡುಕಟ್ಟಿಕೊಂಡು ಮಡದಿಯಾದ ಹೆಣ್ಣು ಪಾರಿವಾಳದೊಡನೆ ಕೆಲವು ವರ್ಷಗಳಿಂದ ವಾಸವಾಗಿತ್ತು (೫೨–೫೩). ಗೃಹಸ್ಥರಾದ ಆ ಪಾರಿವಾಳ ದಂಪತಿಗಳು ಪ್ರೇಮದಿಂದ ಬದ್ಧ ಹೃದಯರಾಗಿ ಕಣ್ಣಿಗೆ ಕಣ್ಣನ್ನೂ ದೇಹಕ್ಕೆ ದೇಹವನ್ನೂ ಬುದ್ಧಿಗೆ ಬುದ್ಧಿಯನ್ನೂ ಬಿಗಿದು ಕಟ್ಟಿಕೊಂಡಂತೆ ಇದ್ದವು. ಶಯನ, ಆಸನ, ಪರ್ಯಟನ, ನಿಲ್ಲುವುದು, ವ್ಯವಹಾರ, ಕ್ರೀಡೆ, ಆಹಾರ ಮೊದಲಾದ್ದನ್ನು ಒಟ್ಟಿಗೆ ಮಾಡುತ್ತ ನಿಶ್ಶಂಕೆಯಿಂದ ಅಡವಿಯಲ್ಲಿ ಸಂಚರಿಸುತ್ತಿದ್ದವು (೫೪–೫೫). ಯದುರಾಜ, ಗಂಡನ್ನು ಸಂತೋಷಪಡಿಸುತ್ತಿದ್ದ

ಕಪೋತೀ ಪ್ರಥಮಂ ಗರ್ಭಂ ಗೃಹ್ಣತೀ ಕಾಲ ಆಗತೇ ।
ಅಂಡಾನಿ ಸುಷುವೇ ನೀಡೇ ಸ್ವಪತ್ಯುಃ ಸಂನಿಧೌ ಸತೀ ॥ ೫೭

ತೇಷು ಕಾಲೇ ವ್ಯಜಾಯಂತ ರಚಿತಾವಯವಾ ಹರೇಃ ।
ಶಕ್ತಿಭಿರ್ದುರ್ವಿಭಾವ್ಯಾಭಿಃ ಕೋಮಲಾಂಗತನೂರುಹಾಃ ॥ ೫೮

ಪ್ರಜಾಃ ಪುಪುಷತುಃ ಪ್ರೀತೌ ದಂಪತೀ ಪುತ್ರವತ್ಸಲೌ ।
ಶೃಣ್ವಂತೌ ಕೂಜಿತಂ ತಾಸಾಂ ನಿರ್ವೃತೌ ಕಲಭಾಷಿತೈಃ ॥ ೫೯

ತಾಸಾಂ ಪತತ್ರೈಃ ಸುಸ್ಪರ್ಶೈಃ ಕೂಜಿತೈರ್ಮುಗ್ಧಚೇಷ್ಟಿತೈಃ ।
ಪ್ರತ್ಯುದ್ಗಮೈರದೀನಾನಾಂ ಪಿತರೌ ಮುದಮಾಪತುಃ ॥ ೬೦

ಸ್ನೇಹಾನುಬದ್ಧಹೃದಯಾವನ್ಯೋನ್ಯಂ ವಿಷ್ಣುಮಾಯಯಾ ।
ವಿಮೋಹಿತೌ ದೀನಧಿಯೌ ಶಿಶೂನ್ ಪುಪುಷತುಃ ಪ್ರಜಾಃ ॥ ೬೧

---

ಹೆಣ್ಣು ಪಾರಿವಾಳವು ಗಂಡಿನ ಅನುಕಂಪೆಗೆ ಪಾತ್ರವಾಗಿತ್ತು. ಅದು ಏನೇನನ್ನು ಬಯಸಿದರೂ ಅಜಿತೇಂದ್ರಿಯನಾದ ಗಂಡು ಪಾರಿವಾಳವು ಎಷ್ಟು ಕಷ್ಟವಾದರೂ ಆ ವಸ್ತುವನ್ನು ತಂದುಕೊಡುತ್ತಿತ್ತು (೫೬). ಹಾಗಿರುವಾಗ ಕಪೋತಿಯು (ಹೆಣ್ಣು ಪಾರಿವಾಳ) ಮೊದಲನೆಯ ಸಲ ಗರ್ಭವನ್ನು ಧರಿಸಿ, ಗೂಡಿನಲ್ಲಿ ತನ್ನ ಪತಿಯ ಬಳಿ ಇರುತ್ತ, ಸಕಾಲದಲ್ಲಿ ಮೊಟ್ಟೆಗಳನ್ನು ಹಾಕಿತು. ಸ್ವಲ್ಪ ಕಾಲವಾದ ಮೇಲೆ ಆ ಮೊಟ್ಟೆಗಳಿಂದ ಅವಯವ ಸಹಿತವಾಗಿ ಕೋಮಲಾಂಗಗಳೂ ಕೋಮಲ ರೋಮಗಳೂ ಇರುವ ಮರಿಗಳು ಹುಟ್ಟಿದವು ! ಶ್ರೀಹರಿಯ ಊಹಾತೀತವಾದ ಶಕ್ತಿಗಳಿಂದ ಹೀಗಾಯಿತು ! (೫೭–೫೮). ಪುತ್ರವತ್ಸಲರಾದ ಈ ಕಪೋತ ದಂಪತಿಗಳು ಮರಿಗಳ ಕೂಗನ್ನು ಕೇಳುತ್ತ, ಅವುಗಳ ಕಲಕಲ ಭಾಷಣವನ್ನು ಆಲಿಸುತ್ತ, ಪುತ್ರ ವಾತ್ಸಲ್ಯದಿಂದ ಅವನ್ನು ಸಾಕಿದವು. ಮರಿಗಳ ಮೃದುವಾದ ರೆಕ್ಕೆಗಳನ್ನು ಮುಟ್ಟುತ್ತ, ಕೂಗನ್ನು ಕೇಳುತ್ತ, ಮುಗ್ಧ ಚೇಷ್ಟೆಗಳನ್ನು ನೋಡುತ್ತ, ಸಂತುಷ್ಟವಾದ ಮರಿಗಳು ಎದುರು ಬರುವುದನ್ನು ನೋಡುತ್ತ, ತಂದೆ ತಾಯಿಗಳು ಹರ್ಷಿಸುತ್ತಿದ್ದವು (೫೯–೬೦). ರಾಜ, ಅನ್ಯೋನ್ಯವಾಗಿ ಪ್ರೇಮಬದ್ಧವಾದ ಆ ಪಾರಿವಾಳ ದಂಪತಿಗಳು ವಿಷ್ಣುಮಾಯೆಯಿಂದ ಮೋಹಿತರಾಗಿ ವಿಚಾರವಿಲ್ಲದೆ

ಏಕದಾ ಜಗ್ಮತುಸ್ತಾಸಾಮನ್ನಾರ್ಥಂ ತೌ ಕುಟುಂಬಿನೌ ।
ಪರಿತಃ ಕಾನನೇ ತಸ್ಮಿನ್ನರ್ಥಿನೌ ಚೇರತುಶ್ಚಿರಮ್ ॥ ೬೨

ದೃಷ್ಟ್ವಾ ತಾನ್ ಲುಬ್ಧಕಃ ಕಶ್ಚಿದ್ ಯದೃಚ್ಛಾತೋ ವನೇಚರಃ ।
ಜಗೃಹೇ ಜಾಲಮಾತತ್ಯ ಚರತಃ ಸ್ವಾಲಯಾಂತಿಕೇ ॥ ೬೩

ಕಪೋತಶ್ಚ ಕಪೋತೀ ಚ ಪ್ರಜಾಪೋಷೇ ಸದೋತ್ಸುಕೌ ।
ಗತೌ ಪೋಷಣಮಾದಾಯ ಸ್ವನೀಡಮುಪಜಗ್ಮತುಃ ॥ ೬೪

ಕಪೋತೀ ಸ್ವಾತ್ಮಜಾನ್ ವೀಕ್ಷ್ಯ ಬಾಲಕಾನ್ ಜಾಲಸಂವೃತಾನ್ ।
ತಾನಭ್ಯಧಾವತ್ ಕ್ರೋಶಂತೀ ಕ್ರೋಶತೋ ಭೃಶದುಃಖಿತಾ ॥ ೬೫

ಸಾಽಸಕೃತ್ಸ್ನೇಹಗುಣಿತಾ ದೀನಚಿತ್ತಾಜಮಾಯಯಾ ।
ಸ್ವಯಂ ಚಾಬಧ್ಯತ ಶಿಚಾ ಬದ್ಧಾನ್ ಪಶ್ಯಂತ್ಯಪಸ್ಮೃತಿಃ ॥ ೬೬

ಕಪೋತಶ್ಚಾತ್ಮಜಾನ್ ಬದ್ಧಾನಾತ್ಮನೋಽಪ್ಯಧಿಕಾನ್ ಪ್ರಿಯಾನ್ ।
ಭಾರ್ಯಾಂ ಚಾತ್ಮಸಮಾಂ ದೀನೋ ವಿಲಲಾಪಾತಿದುಃಖಿತಃ ॥ ೬೭

---

ಮರಿಗಳನ್ನು ಪೋಷಿಸುತ್ತಿದ್ದವು (೬೧). ಒಂದು ಸಲ ಆ ದಂಪತಿಗಳು ಮರಿಗಳಿಗೆ ಆಹಾರವನ್ನು ತರುವುದಕ್ಕಾಗಿ ಆಹಾರವನ್ನು ಹುಡುಕುತ್ತಾ ಕಾಡಿನಲ್ಲೆಲ್ಲ ಬಹಳ ಹೊತ್ತು ಅಲೆದವು. ಇತ್ತ ಮರಿಗಳು ಸ್ವಚ್ಛಂದವಾಗಿ ಹೊರಟು ಒಬ್ಬ ಬೇಡನ ಮನೆಯ ಬಳಿ ಹಾರಾಡತೊಡಗಿದವು. ಅದನ್ನು ಕಂಡು ವನೇಚರನಾದ ಬೇಡನು ಬಲೆಯನ್ನು ಬೀಸಿ ಆ ಹಕ್ಕಿಗಳನ್ನು ಹಿಡಿದನು (೬೨–೬೩) ಮರಿಗಳನ್ನು ಸಾಕುವುದರಲ್ಲಿ ಸದಾ ಉತ್ಸಾಹದಿಂದಿದ್ದ ಕಪೋತ ದಂಪತಿಗಳು ಆಹಾರಾರ್ಥವಾಗಿ ಹೋಗಿದ್ದವಷ್ಟೆ. ಅವು ಮರಿಗಳಿಗೆ ಆಹಾರವನ್ನು ತೆಗೆದುಕೊಂಡು ಗೂಡಿಗೆ ಹಿಂದಿರುಗಿ ಬಂದವು (೬೪). ಕಪೋತಿಯು ತನ್ನ ಮಕ್ಕಳಾದ ಮರಿಗಳು ಬಲೆಯಲ್ಲಿ ಸಿಕ್ಕಿಬಿದ್ದಿರುವುದನ್ನು ಕಂಡು ಅತ್ಯಂತ ದುಃಖದಿಂದ ಅವುಗಳಿದ್ದ ಕಡೆಗೆ ಕೂಗುತ್ತ ಹಾರಿಬಂದಿತು. ಮರಿಗಳೂ ಸಹ ಕೂಗಿಕೊಳ್ಳುತ್ತಿದ್ದವು. ಬಲೆಯಲ್ಲಿ ಸಿಕ್ಕಿದ್ದ ಮರಿಗಳನ್ನು ನೋಡುತ್ತ, ಭಗವನ್ಮಾಯೆಯಿಂದ ಬುದ್ಧಿಗೆಟ್ಟ ಕಪೋತಿಯು ಅತ್ಯಂತ ಪ್ರೀತಿಯಿಂದ ದೀನಭಾವವನ್ನವಲಂಬಿಸಿ ತಾನೂ ಹೋಗಿ ಬಲೆಯಲ್ಲಿ ಸಿಕ್ಕಿಕೊಂಡಿತು ! (೬೫–೬೬). ಇತ್ತ ಗಂಡು ಪಾರಿವಾಳವು ತನ್ನ ಆತ್ಮಕ್ಕಿಂತ

*

ಅಹೋ ಮೇ ಪಶ್ಯತಾಪಾಯ ಮಲ್ಪಪುಣ್ಯಸ್ಯ ದುರ್ಮತೇಃ ।
ಅತೃಪ್ತಸ್ಯಾಕೃತಾರ್ಥಸ್ಯ ಗೃಹ ಸ್ತ್ರೈವರ್ಗಿಕೋ ಹತಃ ॥ ೬೮

ಅನುರೂಪಾನುಕೂಲಾ ಚ ಯಸ್ಯ ಮೇ ಪತಿದೇವತಾ ।
ಶೂನ್ಯೇ ಗೃಹೇ ಮಾಂ ಸಂತ್ಯಜ್ಯ ಪುತ್ರೈಃ ಸ್ವರ್ಯಾತಿ ಸಾಧುಭಿಃ ॥ ೬೯

ಸೋಽಹಂ ಶೂನ್ಯೇ ಗೃಹೇ ದೀನೋ ಮೃತದಾರೋ ಮೃತಪ್ರಜಃ ।
ಜಿಜೀವಿಷೇ ಕಿಮರ್ಥಂ ವಾ ವಿಧುರೋ ದುಃಖಜೀವಿತಃ ॥ ೭೦

ತಾಂಸ್ತಥೈವಾವೃತಾನ್ ಶಿಗ್ಭಿರ್ಮೃತ್ಯುಗ್ರಸ್ತಾನ್ ವಿಚೇಷ್ಟತಃ ।
ಸ್ವಯಂ ಚ ಕೃಪಣಃ ಶಿಕ್ಷು ಪಶ್ಯನ್ನಪ್ಯಬುಧೋಽಪತತ್ ॥ ೭೧

ತಂ ಲಬ್ಧ್ವಾ ಲುಬ್ಧಕಃ ಕ್ರೂರಃ ಕಪೋತಂ ಗೃಹಮೇಧಿನಮ್ ।
ಕಪೋತಕಾನ್ ಕಪೋತೀಂ ಚ ಸಿದ್ಧಾರ್ಥಃ ಪ್ರಯಯೌ ಗೃಹಮ್ ॥ ೭೨

---

ಪ್ರಿಯರಾಗಿದ್ದ ಮಕ್ಕಳು ಜಾಲದಲ್ಲಿ ಸಿಕ್ಕಿರುವುದನ್ನೂ ಆತ್ಮಸಮಳಾದ ಮಡದಿಯೂ ಜಾಲದಲ್ಲಿ ಬದ್ಧವಾದ್ದನ್ನೂ ಕಂಡು ಕೂಗಿಕೊಳ್ಳುತ್ತಿತ್ತು (೬೭). ಆ ಕಪೋತವು ದೈನ್ಯದಿಂದ "ಅಯ್ಯೋ! ಪುಣ್ಯಹೀನನೂ ದುರ್ಬುದ್ಧಿಯೂ ಆದ ನನಗೆ ಬಂದ ವಿಪತ್ತನ್ನು ನೋಡಿರಿ! ಇದ್ದುದರಲ್ಲಿ ತೃಪ್ತನಾಗದೆ, ಇಲ್ಲದ್ದನ್ನು ಪಡೆಯಲಾರದೆ ಹೋದ ನನಗೆ ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳೂ ನಷ್ಟವಾದವು! (೬೮). ಅನುರೂಪಳೂ ಪತಿವ್ರತೆಯೂ ಆದ ನನ್ನ ಭಾರ್ಯೆಯು ಶೂನ್ಯವಾದ ಮನೆಯಲ್ಲಿ ನನ್ನನ್ನು ಪರಿತ್ಯಜಿಸಿ ಸಾಧುಗಳಾದ ಮಕ್ಕಳೊಡನೆ ಸ್ವರ್ಗಕ್ಕೆ ಹೋಗುತ್ತಿದ್ದಾಳೆ! ದೀನನಾದ ನಾನು ಹೆಂಡತಿಯನ್ನು ಕಳೆದುಕೊಂಡು, ಮಕ್ಕಳನ್ನು ಕಳೆದುಕೊಂಡು, ವಿಧುರನಾಗಿ ದುಃಖಿತನಾಗಿ, ಈ ಹಾಳು ಮನೆಯಲ್ಲಿ ಏಕೆ ತಾನೆ ಬದುಕಿರಬೇಕು?" ಎಂದು ಚಿಂತಿಸಿತು (೬೯–೭೦). ಅನಂತರ ಬಲೆಯಲ್ಲಿ ಸಿಕ್ಕಿಕೊಂಡು ಮೃತ್ಯುಗ್ರಸ್ತರಾಗಿ ಒದ್ದಾಡುತ್ತಿದ್ದ ಹೆಂಡತಿ ಮಕ್ಕಳನ್ನು ನೋಡುತ್ತಿದ್ದರೂ ಅವಿವೇಕಿಯಾದ ಆ ಕಪೋತವು ದೂರಾಲೋಚನೆಯಿಲ್ಲದೆ ತಾನೂ ಹೋಗಿ ಬಲೆಯಲ್ಲಿ ಸಿಕ್ಕಿಕೊಂಡಿತು (೭೧). ಕ್ರೂರನಾದ ಆ ಬೇಡನಾದರೋ ಕುಟುಂಬಿಯಾದ ಕಪೋತವೂ ಕಪೋತಿಯೂ ಕಪೋತ ಶಿಶುಗಳೂ ಒಟ್ಟಿಗೆ ಸಿಕ್ಕಿದ್ದರಿಂದ ಕೃತಾರ್ಥನಾಗಿ ಅವನ್ನು

ಏವಂ ಕುಟುಂಬ್ಯಶಾಂತಾತ್ಮಾ ದ್ವಂದ್ವಾರಾಮಃ ಪತತ್ರಿವತ್ ।
ಪುಷ್ಣನ್ ಕುಟುಂಬಂ ಕೃಪಣಃ ಸಾನುಬಂಧೋಽವಸೀದತಿ ॥ ೭೩

ಯಃ ಪ್ರಾಪ್ಯ ಮಾನುಷಂ ಲೋಕಂ ಮುಕ್ತಿದ್ವಾರಮಪಾವೃತಮ್ ।
ಗೃಹೇಷು ಖಗವತ್ ಸಕ್ತಸ್ತಮಾರೂಢಚ್ಯುತಂ ವಿದುಃ ॥ ೭೪

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಸಪ್ತಮಾಧ್ಯಾಯಃ



ಹಿಡಿದುಕೊಂಡು ಮನೆಗೆ ಹೋದನು (೭೨). ಈ ಪ್ರಕಾರವಾಗಿ ಗೃಹಸ್ಥನು ಪಕ್ಷಿಯಂತೆ ಸುಖದುಃಖಗಳ ದ್ವಂದ್ವದಲ್ಲಿ ಮುಳುಗಿ ಚಿತ್ತಶಾಂತಿಯಿಲ್ಲದೆ ಕುಟುಂಬ ವನ್ನು ಪೋಷಿಸುತ್ತ ದೂರದೃಷ್ಟಿಯಿಲ್ಲದೆ ಪರಿವಾರ ಸಹಿತ ವಿಪತ್ತಿಗೆ ಒಳಗಾಗುತ್ತಾನೆ (೭೩). ಯದುರಾಜ, ಮನುಷ್ಯಜನ್ಮವೆಂದರೆ ಬಾಗಿಲು ತೆರೆದ ಮುಕ್ತಿದ್ವಾರ. ಇಂತಹ ಮನುಷ್ಯ ಜನ್ಮವನ್ನು ಪಡೆದಿದ್ದರೂ ಯಾವಾತನು ಗೃಹಕೃತ್ಯದಲ್ಲಿ ಹಕ್ಕಿ ಯಂತೆ ಆಸಕ್ತಿಯಿಂದ ತೊಡಗಿರುವನೋ ಅವನನ್ನು ಆರೂಢಚ್ಯುತನೆಂದು ಬಲ್ಲವರು ತಿಳಿದಿದ್ದಾರೆ (೭೪).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಏಳನೆಯ ಅಧ್ಯಾಯ



## ಅಷ್ಟಮೋಧ್ಯಾಯಃ

ಬ್ರಾಹ್ಮಣ ಉವಾಚ—

**ಸುಖಮೈಂದ್ರಿಯಕಂ ರಾಜನ್ ಸ್ವರ್ಗೇ ನರಕ ಏವ ಚ ।**
**ದೇಹಿನಾಂ ಯದ್ ಯಥಾದುಃಖಂ ತಸ್ಮಾನ್ನೇಚ್ಛೇತ ತದ್ ಬುಧಃ ॥ ೧**

**ಗ್ರಾಸಂ ಸುಮೃಷ್ಟಂ ವಿರಸಂ ಮಹಾಂತಂ ಸ್ತೋಕಮೇವ ವಾ ।**
**ಯದೃಚ್ಛಯೈವಾಪತಿತಂ ಗ್ರಸೇದಾಜಗರೋಽಕ್ರಿಯಃ ॥ ೨**

**ಶಯೀತಾಹಾನಿ ಭೂರೀಣಿ ನಿರಾಹಾರೋಽನುಪಕ್ರಮಃ ।**
**ಯದಿ ನೋಪನಮೇದ್ಗ್ರಾಸೋ ಮಹಾಹಿರಿವ ದಿಷ್ಟಭುಕ್ ॥ ೩**

**ಓಜಃಸಹೋಬಲಯುತಂ ಬಿಭ್ರದ್ ದೇಹಮಕರ್ಮಕಮ್ ।**
**ಶಯಾನೋ ವೀತನಿದ್ರಶ್ಚ ನೇಹೇತೇಂದ್ರಿಯವಾನಪಿ ॥ ೪**

### ಅಧ್ಯಾಯ ೮

ಅಜಗರವೇ ಮೊದಲಾದ ಒಂಬತ್ತು ವಸ್ತುಗಳಿಂದ ಕಲಿತಪಾಠವನ್ನು ಅವಧೂತನು ಯದುರಾಜನಿಗೆ ಹೇಳಿದನೆಂದು ಶ್ರೀಕೃಷ್ಣನು ಉದ್ಧವನಿಗೆ ವರ್ಣಿಸುವುದು.

ಅವಧೂತನಾದ ಆ ಬ್ರಾಹ್ಮಣನು ಯದುರಾಜನಿಗೆ ಮತ್ತೆ ಹೇಳಿದನು : "ಇಂದ್ರಿಯ ಜನ್ಯವಾದ ವಿಷಯಸುಖವು ಸ್ವರ್ಗದಲ್ಲಿಯೂ ದೊರೆಯುತ್ತದೆ. ನರಕದಲ್ಲಿಯೂ ದೊರೆಯಬಹುದು. ಮಾನವರಿಗೆ ದುಃಖವು ಬಂದಂತೆ ಸುಖವೂ ತಾನಾಗಿ ಬರುತ್ತದೆ. ಆದಕ್ಕಾಗಿ ಪ್ರಾಜ್ಞನಾದವನು ಹಾತೊರೆಯಬಾರದು (೧). ಯದೃಚ್ಛೆಯಿಂದ ಒದಗಿದ ಆಹಾರವು ರಸವತ್ತಾಗಿರಲಿ ನೀರಸವಾಗಿರಲಿ, ಹೆಚ್ಚಾಗಿರಲಿ ಕಡಿಮೆಯಾಗಿರಲಿ, ಹೆಬ್ಬಾವಿನಂತೆ ಉದಾಸೀನತೆಯಿಂದ ತಿಂದುಬಿಡಬೇಕು. ಒಂದು ವೇಳೆ ಆಹಾರವು ಒದಗದಿದ್ದರೆ, ಅದಕ್ಕಾಗಿ ಯಾವ ಪ್ರಯತ್ನವನ್ನೂ ಮಾಡದೆ ದೈವವನ್ನು ನಂಬಿಕೊಂಡು, ನಿರಾಹಾರನಾಗಿ ಅಜಗರದಂತೆ ಸುಮ್ಮನಿದ್ದು ಬಿಡಬೇಕು (೨–೩). ಮುನಿಯಾದವನು ಇಂದ್ರಿಯಬಲ, ಮನೋಬಲ, ದೇಹಬಲಗಳಿಂದ ಕೂಡಿದ ದೇಹವಿದ್ದರೂ ಆಹಾರಕ್ಕಾಗಿ ಕೆಲಸವನ್ನು ಮಾಡದೆ, ಎಚ್ಚರದಿಂದಲೇ ಮಲಗಿರಬೇಕು. ಇಂದ್ರಿಯ ಬಲವಿದ್ದರೂ ಪ್ರಯತ್ನಿಸಬಾರದು (೪).

ಮುನಿಃ ಪ್ರಸನ್ನಗಂಭೀರೋ ದುರ್ವಿಗಾಹ್ಯೋ ದುರತ್ಯಯಃ ।
ಅನಂತಪಾರೋ ಹ್ಯಕ್ಷೋಭ್ಯಃ ಸ್ತಿಮಿತೋದ ಇವಾರ್ಣವಃ ॥ ೫

ಸಮೃದ್ಧಕಾಮೋ ಹೀನೋ ವಾ ನಾರಾಯಣಪರೋ ಮುನಿಃ ।
ನೋತ್ಸರ್ಪೇತ ನ ಶುಷ್ಯೇತ ಸರಿದ್ಭಿರಿವ ಸಾಗರಃ ॥ ೬

ದೃಷ್ಟ್ವಾ ಸ್ತ್ರಿಯಂ ದೇವಮಾಯಾಂ ತದ್ಭಾವೈರಜಿತೇಂದ್ರಿಯಃ ।
ಪ್ರಲೋಭಿತಃ ಪತತ್ಯಂಧೇ ತಮಸ್ಯಗ್ನೌ ಪತಂಗವತ್ ॥ ೭

ಯೋಷಿದ್ಧಿರಣ್ಯಾಭರಣಾಂಬರಾದಿ-
ದ್ರವ್ಯೇಷು ಮಾಯಾರಚಿತೇಷು ಮೂಢಃ ।
ಪ್ರಲೋಭಿತಾತ್ಮಾ ಹ್ಯುಪಭೋಗ ಬುದ್ಧ್ಯಾ
ಪತಂಗವನ್ನಶ್ಯತಿ ನಷ್ಟದೃಷ್ಟಿಃ ॥ ೮

ಸ್ತೋಕಂ ಸ್ತೋಕಂ ಗ್ರಸೇದ್ಗ್ರಾಸಂ ದೇಹೋ ವರ್ತೇತ ಯಾವತಾ ।
ಗೃಹಾನಹಿಂಸನ್ನಾತಿಷ್ಠೇದ್ ವೃತ್ತಿಂ ಮಾಧುಕರೀಂ ಮುನಿಃ ॥ ೯

---

ಮುನಿಯು ಪ್ರಸನ್ನ ಗಂಭೀರನಾಗಿ ದುರ್ಜ್ಞೇಯನೂ ಅನತಿಕ್ರಮಣೀಯನೂ ಅನಂತಪಾರನೂ ಅಕ್ಷೋಭ್ಯನೂ ಆಗಿ ಶಾಂತಜಲವುಳ್ಳ ಮಹಾಸಾಗರದಂತೆ ಇರುತ್ತಾನೆ. ನಾರಾಯಣಧ್ಯಾನನಿರತನಾದ ಮುನಿಯು ಸಮೃದ್ಧಿಗಳಿದ್ದರೆ ಹಿಗ್ಗಬಾರದು, ಇಲ್ಲದಿದ್ದರೆ ಕುಗ್ಗಬಾರದು. ನದಿಗಳು ಬಂದು ಧುಮುಕಿದರೆ ಸಮುದ್ರವು ಉಬ್ಬುವುದಿಲ್ಲ, ನದಿಗಳು ಒಣಗಿದರೆ ತಗ್ಗುವುದೂ ಇಲ್ಲ. ಮುನಿಯು ಸಮುದ್ರದಂತಿರಬೇಕು (೫–೬). ದೇವಮಾಯೆಯಾದ ಸ್ತ್ರೀಯನ್ನು ಕಂಡು ಅಜಿತೇಂದ್ರಿಯನಾದವನು ಅವಳ ಹಾವಭಾವಗಳಿಂದ ಮೋಹಿತನಾಗಿ, ಪತಂಗವು ಅಗ್ನಿಯಲ್ಲಿ ಬೀಳುವಂತೆ ಅಂಧಕೂಪದಲ್ಲಿ ಬೀಳುವನು. ಹೆಂಗಸು, ಚಿನ್ನ, ಒಡವೆ, ವಸ್ತ್ರ ಮೊದಲಾದ ವಸ್ತುಗಳು ಮಾಯಾರಚಿತವಾದವು. ಇವು ಭೋಗವಸ್ತುಗಳೆಂದು ಆಕರ್ಷಿತನಾದ ಮನುಷ್ಯನು ಕಣ್ಣಿಲ್ಲದ ಕುರುಡನಾಗಿ ಪತಂಗದಂತೆ ನಾಶವಾಗುತ್ತಾನೆ. (೭–೮). ಮುನಿಯು ಗೃಹಸ್ಥನಿಗೆ ಹಿಂಸೆಯಾಗದಂತೆ ಬೇರೆ ಬೇರೆ ಮನೆಗಳಿಂದ ಒಂದೊಂದು ಆಹಾರದ ತುತ್ತುಗಳನ್ನು ಸಂಗ್ರಹಿಸಿ ದುಂಬಿಯಂತೆ ಮಾಧುಕರೀವೃತ್ತಿಯಿಂದ ಜೀವಿಸಬೇಕು. ಎಷ್ಟರಿಂದ ದೇಹವು ಉಳಿದೀತೋ

ಅಣುಭ್ಯಶ್ಚ ಮಹದ್‌ಭ್ಯಶ್ಚ ಶಾಸ್ತ್ರೇಭ್ಯಃ ಕುಶಲೋ ನರಃ ।
ಸರ್ವತಃ ಸಾರಮಾದದ್ಯಾತ್ ಪುಷ್ಪೇಭ್ಯ ಇವ ಷಟ್ಪದಃ ॥ ೧೦

ಸಾಯಂತನಂ ಶ್ವಸ್ತನಂ ವಾ ನ ಸಂಗೃಹ್ಣೀತ ಭಿಕ್ಷಿತಮ್ ।
ಪಾಣಿಪಾತ್ರೋದರಾಮತ್ರೋ ಮಕ್ಷಿಕೇವ ನ ಸಂಗ್ರಹೀ ॥ ೧೧

ಸಾಯಂತನಂ ಶ್ವಸ್ತನಂ ವಾ ನ ಸಂಗೃಹ್ಣೀತ ಭಿಕ್ಷುಕಃ ।
ಮಕ್ಷಿಕಾ ಇವ ಸಂಗೃಹ್ಣನ್ ಸಹ ತೇನ ವಿನಶ್ಯತಿ ॥ ೧೨

ಪದಾಪಿ ಯುವತೀಂ ಭಿಕ್ಷುರ್ನ ಸ್ಪೃಶೇದ್ ದಾರವೀಮಪಿ ।
ಸ್ಪೃಶನ್ ಕರೀವ ಬಧ್ಯೇತ ಕರಿಣ್ಯಾ ಅಂಗಸಂಗತಃ ॥ ೧೩

---

ಅಷ್ಟನ್ನು ಸೇವಿಸಬೇಕು (೯). [1]ದುಂಬಿಯು ಹೂಗಳಿಂದ ಮಧುವನ್ನು ಹೀರಿಕೊಳ್ಳುವಂತೆ ಕುಶಲನಾದ ಮಾನವನು ಚಿಕ್ಕವುಗಳಿಂದಲೂ ದೊಡ್ಡವುಗಳಿಂದಲೂ ಶಾಸ್ತ್ರಗಳಿಂದಲೂ ಸಾರವಾದ್ದನ್ನು ಎಲ್ಲದರಿಂದಲೂ ಗ್ರಹಿಸಬೇಕು (೧೦). ಮುನಿಯು ಸಾಯಂಕಾಲಕ್ಕಾಗಿಯೆಂದೋ ನಾಳೆಗಾಗಿಯೆಂದೋ ಭಿಕ್ಷಾನ್ನವನ್ನು ಸಂಗ್ರಹಿಸಿ ಇಡಬಾರದು. ಆತನಿಗೆ ಪಾಣಿಯೊಂದೇ ಭಿಕ್ಷಾಪಾತ್ರೆಯಾಗಿರಬೇಕು. (ಒಂದೆಡೆಯಲ್ಲಿಯೇ ಭಿಕ್ಷೆಯಾದರೆ) ಉದರವು ಮಾತ್ರ ಭಿಕ್ಷೆಯನ್ನು ತುಂಬುವ ಪಾತ್ರೆಯಾಗಿರಬೇಕು. ಅವನು ಸಂಗ್ರಹಿಸಿ ಇಟ್ಟರೆ ಜೇನುಹುಳುವಿನಂತೆ ನಶಿಸುತ್ತಾನೆ (೧೧). ಭಿಕ್ಷುವು ಸಾಯಂಕಾಲಕ್ಕೆಂದಾಗಲಿ, ನಾಳೆಗೆಂದಾಗಲಿ ಭಿಕ್ಷೆಯನ್ನು ಸಂಗ್ರಹಿಸಿ ಇಡಬಾರದು. ಸಂಗ್ರಹಿಸಿ ಇಡತಕ್ಕವನು ಜೇನುಹುಳುವಿನಂತೆ ಸಂಗೃಹೀತ ವಸ್ತುವಿನೊಡನೆ ನಾಶವನ್ನೈದುತ್ತಾನೆ (ಪೂರ್ವಶ್ಲೋಕದ ವಿವರಣೆ ಇದು) (೧೨). ಮರದಿಂದ ಮಾಡಿದ ಹೆಣ್ಣಿನ ಬೊಂಬೆಯನ್ನೂ ಸಹ ಸಂನ್ಯಾಸಿಯು ಕಾಲಿನಿಂದಲೂ ಸಹ ಮುಟ್ಟಬಾರದು. ಮರದಿಂದ ಮಾಡಿದ ಹೆಣ್ಣಾನೆಯ ಅಂಗಸಂಗವನ್ನು ಬಯಸಿ ಆನೆಯು ಖೆಡ್ಡದಲ್ಲಿ ಬದ್ಧವಾಗುವಂತೆ, ಸಂನ್ಯಾಸಿಯು

---

1. ದುಂಬಿಯು ಎರಡು ವಿಧ. ಪುಷ್ಪರಸವನ್ನು ಕುಡಿದರೂ ಜೇನನ್ನು ಕಟ್ಟದೇ ಇರುವ ಜಾತಿ ಒಂದು, ಜೇನನ್ನು ಕಟ್ಟುವ ಜಾತಿ ಇನ್ನೊಂದು. ಮೊದಲನೆಯದು ಸಂಗ್ರಹಿಸಿ ಇಡುವುದಿಲ್ಲ, ಎರಡನೆಯ ಜೇನುಹುಳು ಸಂಗ್ರಹಿಸಿ ಇಟ್ಟು ಜೇನುಕೀಳುವವರಿಂದ ನಾಶವಾಗುತ್ತದೆ. ೧೦ನೆಯ ಶ್ಲೋಕದಲ್ಲಿ ಮೊದಲನೆಯದಕ್ಕೆ, ೧೧ನೆಯ ಶ್ಲೋಕದಲ್ಲಿ ಎರಡನೆಯದಕ್ಕೆ ಉದಾಹರಣೆ. ಜೇನುಹುಳುವಿಗೆ ಮಧುಮಕ್ಷಿಕಾ ಎಂದು ಹೆಸರು. ೧೧ನೆಯ ಶ್ಲೋಕದಲ್ಲಿ 'ಮಕ್ಷಿಕೇವ ನ ಸಂಗ್ರಹೀ' ಎಂದಿದೆ. 'ನ—ನ ಜೀವತಿ' ಎಂದರ್ಥ.

ನಾಧಿಗಚ್ಛೇತ್ ಸ್ತ್ರಿಯಂ ಪ್ರಾಜ್ಞಃ ಕರ್ಹಿಚಿನ್ಮೃತ್ಯುಮಾತ್ಮನಃ ।
ಬಲಾಧಿಕೈಃ ಸ ಹನ್ಯೇತ ಗಜೈರನ್ಯೈರ್ಗಜೋ ಯಥಾ ॥ ೧೪

ನ ದೇಯಂ ನೋಪಭೋಗ್ಯಂ ಚ ಲುಬ್ಧೈರ್ಯದ್ ದುಃಖಸಂಚಿತಮ್ ।
ಭುಂಕ್ತೇ ತದಪಿ ತಚ್ಚಾನ್ಯೋ ಮಧುಹೇವಾರ್ಥವಿನ್ಮಧು ॥ ೧೫

ಸುದುಃಖೋಪಾರ್ಜಿತೈರ್ವಿತ್ತೈರಾಶಾಸಾನಾಂ ಗೃಹಾಶಿಷಃ ।
ಮಧುಹೇವಾಗ್ರತೋ ಭುಂಕ್ತೇ ಯತಿರ್ವೈ ಗೃಹಮೇಧಿನಾಮ್ ॥ ೧೬

ಗ್ರಾಮ್ಯಗೀತಂ ನ ಶೃಣುಯಾದ್ ಯತಿರ್ವನಚರಃ ಕ್ವಚಿತ್ ।
ಶಿಕ್ಷೇತ ಹರಿಣಾದ್ ಬದ್ಧಾನ್ಮೃಗಯೋರ್ಗೀತಮೋಹಿತಾತ್ ॥ ೧೭

ನೃತ್ಯವಾದಿತ್ರಗೀತಾನಿ ಜುಷನ್ ಗ್ರಾಮ್ಯಾಣಿ ಯೋಷಿತಾಮ್ ।
ಆಸಾಂ ಕ್ರೀಡನಕೋ ವಶ್ಯ ಋಷ್ಯಶೃಂಗೋ ಮೃಗೀಸುತಃ ॥ ೧೮

---

ಬಂಧನಕ್ಕೆ ಸಿಕ್ಕಿಕೊಂಡಾನು (೧೩). ಪ್ರಾಜ್ಞನಾದವನು ಸ್ತ್ರೀಸಂಸರ್ಗವನ್ನೇ ಮಾಡಬಾರದು. ಸ್ತ್ರೀಯು ತನಗೆ ಮೃತ್ಯುವಾಗಿ ಪರಿಣಮಿಸಬಹುದು. ಹೆಣ್ಣಿನ ನಿಮಿತ್ತವಾಗಿ ಆನೆಗಳಿಂದ ಆನೆಯು ಹತವಾಗುವಂತೆ, ಅಧಿಕಬಲರಿಂದ ಈತನು ಹತನಾಗಬಹುದು (೧೪). ಜಿಪುಣನು ಕಷ್ಟಪಟ್ಟು ಹಣವನ್ನು ಸಂಗ್ರಹಿಸುತ್ತಾನೆಯೇ ಹೊರತು ಅದನ್ನು ಯಾರಿಗೂ ಕೊಡುವುದಿಲ್ಲ. ತಾನೂ ಭೋಗಿಸುವುದಿಲ್ಲ. ಹಾಗೆ ಸಂಗ್ರಹಿಸುವುದನ್ನು ಬಲ್ಲ ಇನ್ನೊಬ್ಬ ಬಲಶಾಲಿಯು ಅದನ್ನು ಅಪಹರಿಸಿ ತಿಂದುಬಿಡುತ್ತಾನೆ, ಅದನ್ನು ಮತ್ತೊಬ್ಬನು ಕಿತ್ತುಕೊಳ್ಳುತ್ತಾನೆ. ಜೇನುಹುಳು ಸಂಗ್ರಹಿಸಿದ ಜೇನುತುಪ್ಪವನ್ನು 'ಮಧುಹಾ' ಎಂಬ ಪಕ್ಷಿಯು ಹೀಗೆಯೇ ತಿಂದು ಹಾಕುತ್ತದೆ ! (೧೫). ಗೃಹಸ್ಥರು ಬಹಳ ಕಷ್ಟಪಟ್ಟು ಹಣವನ್ನು ಸಂಪಾದಿಸಿ ತಮ್ಮ ಕುಟುಂಬಕ್ಕೆ ಶುಭವಾಗಲೆಂದು ಯತಿಗಳಿಗೆ ಭಿಕ್ಷೆ ನೀಡುತ್ತಾರೆ. ಯತಿಯಾದರೋ ಮನೆಯವರೆಲ್ಲರಿಗಿಂತ ಮೊದಲೇ ಭೋಜನವನ್ನು ಮಾಡುತ್ತಾನೆ ! (ಶ್ರಮವನ್ನು ಪಡದಿದ್ದರೂ ಮಧುಹಾ ಎಂಬ ಪಕ್ಷಿಗೆ ದೊರಕಿದಂತೆ ಲಭ್ಯವಾದದ್ದು ತಾನಾಗಿ ದೊರಕುತ್ತದೆಯೆಂಬುದಕ್ಕೆ ಇದು ಉದಾಹರಣೆ) (೧೬). ವನಚರನಾದ ಯತಿಯು ಗ್ರಾಮ್ಯಗೀತವನ್ನು ಎಂದಿಗೂ ಕೇಳಬಾರದು. ಹಾಡಿಗೆ ಮೋಹಗೊಂಡು ವ್ಯಾಧನ ಕೈಗೆ ಸಿಕ್ಕಿಕೊಳ್ಳುವ ಜಿಂಕೆಯಿಂದ ಈ ಪಾಠವನ್ನು ಕಲಿಯಬೇಕು (೧೭). ಹರಿಣೀಸುತನಾದ ಋಷ್ಯಶೃಂಗನು ಯುವತಿಯರ

ಜಿಹ್ವಯಾತಿಪ್ರಮಾಥಿನ್ಯಾ ಜನೋ ರಸವಿಮೋಹಿತಃ ।
ಮೃತ್ಯುಮೃಚ್ಛತ್ಯಸದ್ಬುದ್ಧಿರ್ಮೀನಸ್ತು ಬಡಿಶೈರ್ಯಥಾ ॥ ೧೯

ಇಂದ್ರಿಯಾಣಿ ಜಯಂತ್ಯಾಶು ನಿರಾಹಾರಾ ಮನೀಷಿಣಃ ।
ವರ್ಜಯಿತ್ವಾ ತು ರಸನಂ ತನ್ನಿರನ್ನಸ್ಯ ವರ್ಧತೇ ॥ ೨೦

ತಾವಜ್ಜಿತೇಂದ್ರಿಯೋ ನ ಸ್ಯಾದ್ ವಿಜಿತಾನ್ಯೇಂದ್ರಿಯಃ ಪುಮಾನ್ ।
ನ ಜಯೇದ್ರಸನಂ ಯಾವಜ್ಜಿತಂ ಸರ್ವಂ ಜಿತೇ ರಸೇ ॥ ೨೧

ಪಿಂಗಲಾ ನಾಮ ವೇಶ್ಯಾಽಽಸೀದ್ ವಿದೇಹನಗರೇ ಪುರಾ ।
ತಸ್ಯಾ ಮೇ ಶಿಕ್ಷಿತಂ ಕಿಂಚಿನ್ನಿಬೋಧ ನೃಪನಂದನ ॥ ೨೨

---

ಗ್ರಾಮ್ಯಗಳಾದ ನೃತ್ಯಗೀತವಾದ್ಯಗಳನ್ನು ಕೇಳಿದ್ದರಿಂದ ಆ ಸ್ತ್ರೀಯರಿಗೆ ವಶ್ಯನಾಗಿ ಆಟದ ಬೊಂಬೆಯಾಗಿ ಹೋದನು! (೧೮). ಅತ್ಯಂತ ದುರ್ಜಯವಾದ ನಾಲಿಗೆಯ ವಶಕ್ಕೆ ಸಿಕ್ಕಿ ಜನರು ರುಚಿಗಾಗಿ ಮೋಹಗೊಳ್ಳುತ್ತಾರೆ. ಗಾಳಕ್ಕೆ ಸಿಕ್ಕಿದ ಮೀನಿನಂತೆ ಆ ಬುದ್ಧಿಹೀನರು ಸಾವಿಗೆ ಒಳಗಾಗುತ್ತಾರೆ (೧೯). ಬುದ್ಧಿಶಾಲಿಗಳಾದ ಕೆಲವರು ಆಹಾರವನ್ನು ವರ್ಜಿಸಿ ಇತರ ಇಂದ್ರಿಯಗಳನ್ನು ಬೇಗನೆ ಗೆಲ್ಲುತ್ತಾರೆ. ಆದರೆ ಜಿಹ್ವೇಂದ್ರಿಯವನ್ನು ಗೆಲ್ಲಲಾರರು. ಅನ್ನವಿಲ್ಲದಿದ್ದರೆ ಜಿಹ್ವೆಯ ಬಲವು ಹೆಚ್ಚುತ್ತದೆ! ಉಳಿದ ಎಲ್ಲ ಇಂದ್ರಿಯಗಳನ್ನು ಮನುಷ್ಯನು ಗೆದ್ದಿದ್ದರೂ ಜಿಹ್ವೇಂದ್ರಿಯವನ್ನು ಗೆಲ್ಲದಿದ್ದರೆ ಅವನು [1]ಜಿತೇಂದ್ರಿಯನೆನಿಸುವುದಿಲ್ಲ. ಜಿಹ್ವೆಯನ್ನು ಗೆದ್ದರೆ ಎಲ್ಲವನ್ನು ಗೆದ್ದಂತೆಯೇ! (೨೦–೨೧). ಯದುರಾಜ, ಹಿಂದೆ ವಿದೇಹ ನಗರದಲ್ಲಿ ಪಿಂಗಳೆಯೆಂಬ ವೇಶ್ಯೆ ಇದ್ದಳು. ಅವಳಿಂದ ನಾನು ಏನು ಕಲಿತೆನೆಂಬುದನ್ನು ಹೇಳುತ್ತೇನೆ, ಕೇಳು : ಕಾಮಚಾರಿಣಿಯಾದ ಆ ಸೂಳೆಯು ಕಾಂತನನ್ನು ರತಿಸ್ಥಾನಕ್ಕೆ ಕರೆದೊಯ್ಯಬೇಕೆಂಬ ಉದ್ದೇಶದಿಂದ, ತನ್ನ ರೂಪವನ್ನು

---

1. ಆಹಾರವನ್ನು ಬಿಟ್ಟರೆ ಜಿಹ್ವೇಂದ್ರಿಯವು ತೀವ್ರವಾಗಿ ಕ್ಷೋಭಿಸುತ್ತದೆ! ಆಹಾರವನ್ನು ತಿಂದರೆ ಎಲ್ಲ ಇಂದ್ರಿಯಗಳೂ ಚಿಗುರಿಕೊಳ್ಳುತ್ತವೆ. ಆದ್ದರಿಂದ ರುಚಿಯನ್ನು ಬಯಸದೆ, ಔಷಧದ ಹಾಗೆ ಆಹಾರವನ್ನು ಮಿತವಾಗಿ ತೆಗೆದುಕೊಳ್ಳಬೇಕು—ಎಂದು ಅಭಿಪ್ರಾಯ.

ಸಾ ಸ್ವೈರಿಣ್ಯೇಕದಾ ಕಾಂತಂ ಸಂಕೇತ ಉಪನೇಷ್ಯತೀ ।
ಅಭೂತ್ ಕಾಲೇ ಬಹಿರ್ದ್ವಾರಿ ಬಿಭ್ರತೀ ರೂಪಮುತ್ತಮಮ್ ॥ ೨೩

ಮಾರ್ಗ ಆಗಚ್ಛತೋ ವೀಕ್ಷ್ಯ ಪುರುಷಾನ್ ಪುರುಷರ್ಷಭ ।
ತಾನ್ ಶುಲ್ಕದಾನ್ ವಿತ್ತವತಃ ಕಾಂತಾನ್ ಮೇನೇsರ್ಥ ಕಾಮುಕಾ ॥ ೨೪

ಆಗತೇಷ್ವಪಯಾತೇಷು ಸಾ ಸಂಕೇತೋಪಜೀವಿನೀ ।
ಅಪ್ಯನ್ಯೋ ವಿತ್ತವಾನ್ ಕೋsಪಿ ಮಾಮುಪೈಷ್ಯತಿ ಭೂರಿದಃ ॥ ೨೫

ಏವಂ ದುರಾಶಯಾ ಧ್ವಸ್ತನಿದ್ರಾ ದ್ವಾರ್ಯವಲಂಬತೀ ।
ನಿರ್ಗಚ್ಛಂತೀ ಪ್ರವಿಶತೀ ನಿಶೀಥಂ ಸಮಪದ್ಯತ ॥ ೨೬

ತಸ್ಯಾ ವಿತ್ತಾಶಯಾ ಶುಷ್ಯದ್ವಕ್ತ್ರಾಯಾ ದೀನಚೇತಸಃ ।
ನಿರ್ವೇದಃ ಪರಮೋ ಜಜ್ಞೇ ಚಿಂತಾಹೇತುಃ ಸುಖಾವಹಃ ॥ ೨೭

ತಸ್ಯಾ ನಿರ್ವಿಣ್ಣಚಿತ್ತಾಯಾ ಗೀತಂ ಶೃಣು ಯಥಾ ಮಮ ।
ನಿರ್ವೇದ ಆಶಾಪಾಶಾನಾಂ ಪುರುಷಸ್ಯ ಯಥಾ ಹ್ಯಸಿಃ ॥ ೨೮

---

ಅಲಂಕರಿಸಿಕೊಂಡು, ಸಾಯಂಕಾಲ ಹೊರಬಾಗಿಲಲ್ಲಿ ನಿಲ್ಲುತ್ತಿದ್ದಳು (೨೨–೨೩). ಹಣದ ಮೇಲೆ ಕಣ್ಣಿದ್ದ ಅವಳು ತನ್ನ ಶುಲ್ಕವನ್ನು ಕೊಡಬಲ್ಲ ಶ್ರೀಮಂತರಾದ ದಾರಿಗರನ್ನು ನೋಡಿ, ಅವರು ತನ್ನ ಕಾಂತರೆಂದು ತಿಳಿಯುತ್ತಿದ್ದಳು. ಅವರು ಬಂದು ಹೊರಟು ಹೋದ ಮೇಲೆ, ಸಂಕೇತದಿಂದ ಜೀವಿಸುತ್ತಿದ್ದ ಆ ವೇಶ್ಯೆಯು 'ಇನ್ನೂ ಹೆಚ್ಚು ಹಣವನ್ನು ಕೊಡತಕ್ಕ ಇನ್ನೊಬ್ಬ ಶ್ರೀಮಂತನು ಯಾವನಾದರೂ ಬಂದಾನೆಂದು' ಮತ್ತೆ ಹೊರಬಾಗಿಲಿಗೆ ಬಂದು ನಿಲ್ಲುತ್ತಿದ್ದಳು ! (೨೪–೨೫). ಹೀಗೆ ದುರಾಸೆಯಿಂದ ನಿದ್ದೆಗೆಟ್ಟು ಒಳಗೆ ಹೋಗುತ್ತ ಬರುತ್ತ ಮಧ್ಯರಾತ್ರಿಯವರೆಗೆ ಇರುತ್ತಿದ್ದಳು. ಹಣದ ಆಸೆಯಿಂದ ಈ ರೀತಿಯಲ್ಲಿ ವ್ಯವಹರಿಸುತ್ತಿದ್ದ ಅವಳಿಗೆ ಒಂದು ಸಲ ಪರಮ ವೈರಾಗ್ಯ ಹುಟ್ಟಿತು. ದೈನ್ಯದಿಂದ ಅವಳ ಮುಖ ಬಾಡಿತು. ಈ ವೈರಾಗ್ಯವು ಮುಂದೆ ಸುಖವನ್ನು ನೀಡುವ ಚಿಂತನೆಗೆ ನಿಮಿತ್ತವಾಯಿತು (೨೬–೨೭). ವಿರಕ್ತಚಿತ್ತಳಾದ ಆ ಪಿಂಗಳೆಯು ಉದ್ಗಾರವೇನೆಂಬುದನ್ನು ಹೇಳುತ್ತೇನೆ, ಕೇಳು. ರಾಜ, ತೃಪ್ತಿಯೆನ್ನುವುದು ಮನುಷ್ಯನಿಗೆ ತನ್ನ ಆಶಾಪಾಶಗಳನ್ನು

ನ ಹ್ಯಂಗಾಜಾತನಿರ್ವೇದೋ ದೇಹಬಂಧಂ ಜಿಹಾಸತಿ ।
ಯಥಾ ವಿಜ್ಞಾನರಹಿತೋ ಮನುಜೋ ಮಮತಾಂ ನೃಪ ॥ ೨೯

ಪಿಂಗಲೋವಾಚ—

ಅಹೋ ಮೇ ಮೋಹವಿತತಿಂ ಪಶ್ಯತಾವಿಜಿತಾತ್ಮನಃ ।
ಯಾ ಕಾಂತಾದಸತಃ ಕಾಮಂ ಕಾಮಯೇ ಯೇನ ಬಾಲಿಶಾ ॥ ೩೦

ಸಂತಂ ಸಮೀಪೇ ರಮಣಂ ರತಿಪ್ರದಂ
ವಿತ್ತಪ್ರದಂ ನಿತ್ಯಮಿಮಂ ವಿಹಾಯ ।
ಅಕಾಮದಂ ದುಃಖಭಯಾಧಿಶೋಕ-
ಮೋಹಪ್ರದಂ ತುಚ್ಛಮಹಂ ಭಜೇऽಜ್ಞಾ ॥ ೩೧

ಅಹೋ ಮಯಾऽऽತ್ಮಾ ಪರಿತಾಪಿತೋ ವೃಥಾ
ಸಾಂಕೇತ್ಯವೃತ್ತ್ಯಾऽತಿ ವಿಗರ್ಹ್ಯ ವಾರ್ತಯಾ ।
ಸ್ತ್ರೈಣಾನ್ನರಾದ್ ಯಾರ್ಥತೃಷೋऽನುಶೋಚ್ಯಾತ್
ಕ್ರೀತೇನ ವಿತ್ತಂ ರತಿಮಾತ್ಮನೇಚ್ಛತೀ ॥ ೩೨

---

ಕತ್ತರಿಸಿ ಹಾಕುವ ಖಡ್ಗವಿದ್ದಂತೆ (೨೮). ಅಯ್ಯಾ-ರಾಜ, ಯಾವಾತನಿಗೆ ನಿರ್ವೇದ ಹುಟ್ಟಿಲ್ಲವೋ ಆತನು ದೇಹವೆಂಬ ಈ ಬಂಧನವನ್ನು ತಪ್ಪಿಸಿಕೊಳ್ಳಲು ಬಯಸುವುದೇ ಇಲ್ಲ. ವಿವೇಕವಿಲ್ಲದವನು ಮಮತೆಯನ್ನೂ ಗೆಲ್ಲಲಾರನು (೨೯) ಪಿಂಗಳೆಯು ಉದ್ಗರಿಸಿದ್ದೇನೆಂದರೆ, “ಆಹಾಹಾ! ನನ್ನ ಅಜ್ಞಾನದ ಪರಮಾವಧಿಯನ್ನು ನೋಡಿರಿ! ಎಂತಹ ಅಜಿತೇಂದ್ರಿಯಳು ನಾನು! ಬುದ್ಧಿಹೀನಳಾದ ನಾನು ತುಚ್ಛನಾದ ಮಾನವನಿಂದ ಇಷ್ಟಾರ್ಥವನ್ನು ಬಯಸುತ್ತಿದ್ದೇನೆ! (೩೦). ಸಮೀಪದಲ್ಲಿಯೇ ಅಂತರ್ಯಾಮಿಯಾಗಿರುವ, ಆನಂದಪ್ರದನೂ ಸದಾ ಇಷ್ಟಾರ್ಥಪ್ರದನೂ ಆದ ಭಗವಂತನೆಂಬ ಕಾಂತನಿರುವಾಗ, ಇಷ್ಟಾರ್ಥವನ್ನು ಕೊಡಲಾರದವನೂ ಕಷ್ಟ ಭಯ ಶೋಕ ಮೋಹಗಳನ್ನು ಕೊಡತಕ್ಕವನೂ ಆದ ಕ್ಷುದ್ರ ಮನುಷ್ಯನನ್ನು ಆಶ್ರಯಿಸುತ್ತಿದ್ದೇನಲ್ಲ, ಎಂತಹ ತಿಳಿಗೇಡಿ ನಾನು! (೩೧). ಅಯ್ಯೊ! ಅತ್ಯಂತನಿಂದನೀಯವಾದ ವೇಶ್ಯಾವೃತ್ತಿಯಿಂದ ವ್ಯರ್ಥವಾಗಿ ನನ್ನನ್ನು

ಯದಸ್ಥಿಭಿರ್ನಿರ್ಮಿತ ವಂಶವಂಶ್ಯ–
ಸ್ಥೂಣಂ ತ್ವಚಾ ರೋಮನಖೈಃ ಪಿನದ್ಧಮ್ ।
ಕ್ಷರನ್ನವದ್ವಾರಮಗಾರಮೇತದ್
ವಿಣ್ಮೂತ್ರಪೂರ್ಣಂ ಮದುಪೈತಿ ಕಾನ್ಯಾ ॥ ೩೩

ವಿದೇಹಾನಾಂ ಪುರೇ ಹ್ಯಸ್ಮಿನ್ನಹಮೇಕೈವ ಮೂಢಧೀಃ ।
ಯಾನ್ಯಮಿಚ್ಛಂತ್ಯಸತ್ಯಸ್ಮಾದಾತ್ಮದಾತ್ ಕಾಮಮಚ್ಯುತಾತ್ ॥ ೩೪

ಸುಹೃತ್ ಪ್ರೇಷ್ಠತಮೋ ನಾಥ ಆತ್ಮಾ ಚಾಯಂ ಶರೀರಿಣಾಮ್ ।
ತಂ ವಿಕ್ರೀಯಾತ್ಮನೈವಾಹಂ ರಮೇsನೇನ ಯಥಾ ರಮಾ ॥ ೩೫

ಕಿಯತ್ ಪ್ರಿಯಂ ತೇ ವ್ಯಭಜನ್ ಕಾಮಾ ಯೇ ಕಾಮದಾ ನರಾಃ ।
ಆದ್ಯಂತವಂತೋ ಭಾರ್ಯಾಯಾ ದೇವಾ ವಾ ಕಾಲವಿದ್ರುತಾಃ ॥ ೩೬

---

ನಾನೇ ಸಂತಾಪಕ್ಕೆ ಈಡುಮಾಡಿಕೊಂಡೆನು. ಈ ದೇಹವನ್ನು ಮಾರಿಕೊಂಡು, ಸ್ತ್ರೀಲಂಪಟನೂ ಲೋಭಿಯೂ ಶೋಚನೀಯನೂ ಆದ ಕ್ಷುದ್ರ ಮನುಷ್ಯನಿಂದ ಸಂತೋಷವನ್ನು ಬಯಸಿದೆನು (೩೨). ಈ ಮನುಷ್ಯ ಶರೀರವು ಮಲ ಮೂತ್ರಗಳಿಂದ ತುಂಬಿದ, ಸದಾ ಸೋರುತ್ತಿರುವ ನವದ್ವಾರಗಳುಳ್ಳ ಒಂದು ಮನೆ. ಇದರಲ್ಲಿ ಮೂಳೆಗಳು ಅಡ್ಡತೊಲೆಗಳಾಗಿ, ಉದ್ದನೆಯ ಗಳುಗಳಾಗಿ, [1]ಕಂಬಗಳಾಗಿ ನಿಂತಿವೆ. ಚರ್ಮ, ರೋಮ, ಉಗುರುಗಳ ಹೊದಿಕೆಯನ್ನು ಹೊದಿಸಲಾಗಿದೆ. ಇಂತಹ (ಬೀಭತ್ಸವಾದ) ದೇಹವನ್ನು 'ನನ್ನ ಕಾಂತ' ಎಂದು ಭಾವಿಸಿದ ನನ್ನನ್ನು ಬಿಟ್ಟರೆ ಇನ್ನು ಯಾವಳು ಮೋಹಿಸಿಯಾಳು? (೩೩). ಈ ವಿದೇಹನಗರದಲ್ಲಿ ನಾನೊಬ್ಬಳೇ ಮೂಢಳೆನ್ನಬೇಕು. ಆತ್ಮಸ್ವರೂಪವನ್ನೇ ಕರುಣಿಸುವ ಅಚ್ಯುತನನ್ನು ಬಿಟ್ಟು ಇನ್ನೊಂದು ಕಾಮ ಸುಖವನ್ನು ಬಯಸಿದ ನಾನು ದುಷ್ಟಳೇ ಸರಿ. ಭಗವಾನ್ ಅಚ್ಯುತನು ಸಕಲ ಮಾನವರಿಗೂ ಮಿತ್ರನೂ ಪ್ರಿಯತಮನೂ ನಾಥನೂ ಆತ್ಮನೂ ಆಗಿದ್ದಾನೆ. ಆತನಿಗೆ ಲಕ್ಷ್ಮೀದೇವಿಯಂತೆ ನನ್ನನ್ನು ಅರ್ಪಿಸಿ ಮಾರಿಕೊಂಡು ಆನಂದಿಸುವೆನು (೩೪–೩೫). ಹುಟ್ಟು ಸಾವುಗಳಿರುವ ಶಬ್ದಾದಿ ವಿಷಯಗಳಾಗಲಿ

---

1. 33ನೇ ಶ್ಲೋಕದಲ್ಲಿರುವ ಶಬ್ದಗಳ ಅರ್ಥ : ವಂಶ–ಕಂಬದ ಮೇಲೆ ಅಡ್ಡಲಾಗಿ ಇಟ್ಟಿರುವ ಬಿದಿರಿನ ಗಳ. ವಂಶ್ಯ–ಅದರ ಮೇಲೆ ಚಾಚಿರುವ ಉದ್ದನೆಯ ಗಳ. ಸ್ಥೂಣಾ–ಕಂಬ.

ನೂನಂ ಮೇ ಭಗವಾನ್ ಪ್ರೀತೋ ವಿಷ್ಣುಃ ಕೇನಾಪಿ ಕರ್ಮಣಾ ।
ನಿರ್ವೇದೋಽಯಂ ದುರಾಶಾಯಾ ಯನ್ಮೇ ಜಾತಃ ಸುಖಾವಹಃ ॥ ೩೭

ನೈವಂ ಸ್ಯುರ್ಮಂದಭಾಗ್ಯಾಯಾಃ ಕ್ಲೇಶಾ ನಿರ್ವೇದಹೇತವಃ ।
ಯೇನಾನುಬಂಧಂ ನಿರ್ಹೃತ್ಯ ಪುರುಷಃ ಶಮಮೃಚ್ಛತಿ ॥ ೩೮

ತೇನೋಪಕೃತಮಾದಾಯ ಶಿರಸಾ ಗ್ರಾಮ್ಯಸಂಗತಾಃ ।
ತ್ಯಕ್ತ್ವಾ ದುರಾಶಾಃ ಶರಣಂ ವ್ರಜಾಮಿ ತಮಧೀಶ್ವರಮ್ ॥ ೩೯

ಸಂತುಷ್ಟಾ ಶ್ರದ್ದಧತ್ಯೇತದ್ಯಥಾಲಾಭೇನ ಜೀವತೀ ।
ವಿಹರಾಮ್ಯಮುನೈವಾಹಮಾತ್ಮನಾ ರಮಣೇನ ವೈ ॥ ೪೦

ಸಂಸಾರಕೂಪೇ ಪತಿತಂ ವಿಷಯೈರ್ಮುಷಿತೇಕ್ಷಣಮ್ ।
ಗ್ರಸ್ತಂ ಕಾಲಾಹಿನಾಽಽತ್ಮಾನಂ ಕೋಽನ್ಯಸ್ತ್ರಾತುಮಧೀಶ್ವರಃ ॥ ೪೧

---

ಪುರುಷರಾಗಲಿ, ಕಾಲಕ್ಕೆ ಕಟ್ಟು ಬಿದ್ದಿರುವ ದೇವತೆಗಳೇ ಆಗಲಿ, ತಮ್ಮ ಹೆಂಡತಿಯರಿಗೆ ಹಂಚಿದ ಸುಖವಾದರೂ ಎಷ್ಟು? ನಿಜವಾಗಿಯೂ ನಾನು ಮಾಡಿದ ಯಾವುದೋ ಒಂದು ಪುಣ್ಯಕರ್ಮದಿಂದ ಭಗವಾನ್ ವಿಷ್ಣುವು ಸುಪ್ರೀತನಾಗಿದ್ದಾನೆ ಏಕೆಂದರೆ, ಹಣದ ಮೇಲೆ ಅಷ್ಟು ದುರಾಸೆಯಿದ್ದ ನನಗೆ ಪರಿಣಾಮದಲ್ಲಿ ಸುಖಕರವಾದ ವೈರಾಗ್ಯವು ಉದಿಸಿತಲ್ಲವೆ? (೩೬–೩೭). ಹಾಗಲ್ಲದೆ ನಾನು ಭಾಗ್ಯಹೀನಳಾಗಿದ್ದರೆ, ವೈರಾಗ್ಯ ಕಾರಣಗಳಾದ ಈ ಕ್ಲೇಶಚಿಂತನೆಗಳು ನನಗೆ ಹುಟ್ಟುತ್ತಲೇ ಇರಲಿಲ್ಲ. ಈ ವೈರಾಗ್ಯ ಬಂದರೆ ಮನುಷ್ಯನು ಎಲ್ಲ ಪರಿಹಾರವನ್ನೂ ತ್ಯಜಿಸಿ ಮೋಕ್ಷವನ್ನು ಬಯಸುತ್ತಾನೆ (೩೮). ಆದ್ದರಿಂದ ವೈರಾಗ್ಯವನ್ನು ಕರುಣಿಸಿದ ಭಗವಂತನ ಉಪಕಾರವನ್ನು ಶಿರಸಾವಹಿಸಿ, ಗ್ರಾಮ್ಯ ವಸ್ತುಗಳಲ್ಲಿ ನೆಟ್ಟುಹೋಗಿದ್ದ ಆ ದುರಾಸೆಗಳನ್ನು ದೂರಕ್ಕೆ ತಳ್ಳಿ ಅಧೀಶ್ವರನಾದ ವಿಷ್ಣುವಿಗೆ ಶರಣಾಗುವೆನು (೩೯). ಯಾವ ಕಾಲದಲ್ಲಿ ಏನು ಸಿಗುವುದೋ ಅಷ್ಟರಿಂದ ಸಂತುಷ್ಟಳಾಗಿ ಭಗವಂತನಲ್ಲಿ ಶ್ರದ್ಧೆಯನ್ನಿಟ್ಟು ಜೀವಿಸುತ್ತ, ಕಾಂತನಾದ ಈ ಆತ್ಮನೊಡನೆಯೇ ವಿಹರಿಸುತ್ತಿರುವೆನು (೪೦). ಯಾವಾತನು ವಿಷಯ ಸುಖಾಪೇಕ್ಷೆಯಿಂದ ಕಣ್ಣನ್ನು ಕಳೆದುಕೊಂಡು ಸಂಸಾರವೆಂಬ ಹಾಳು ಭಾವಿಯಲ್ಲಿ ಬಿದ್ದು ಕಾಲವೆಂಬ ಸರ್ಪದಿಂದ ಆಕ್ರಾಂತನಾಗಿರುವನೋ ಅಂತಹ ಜೀವಾತ್ಮನನ್ನು ಉದ್ಧರಿಸುವುದಕ್ಕೆ ವಿಷ್ಣುವನ್ನು

ಆತ್ಮೈವ ಹ್ಯಾತ್ಮನೋ ಗೋಪ್ತಾ ನಿರ್ವಿದ್ಯೇತ ಯದಾಖಿಲಾತ್ ।
ಅಪ್ರಮತ್ತ ಇದಂ ಪಶ್ಯೇದ್ ಗ್ರಸ್ತಂ ಕಾಲಾಹಿನಾ ಜಗತ್ ॥ ೪೨

ಬ್ರಾಹ್ಮಣ ಉವಾಚ—

ಏವಂ ವ್ಯವಸಿತಮತಿರ್ದುರಾಶಾಂ ಕಾಂತತರ್ಷಜಾಮ್ ।
ಛಿತ್ತ್ವೋಪಶಮಮಾಸ್ಥಾಯ ಶಯ್ಯಾಮುಪವಿವೇಶ ಸಾ ॥ ೪೩

ಆಶಾ ಹಿ ಪರಮಂ ದುಃಖಂ ನೈರಾಶ್ಯಂ ಪರಮಂ ಸುಖಮ್ ।
ಯಥಾ ಸಂಛಿದ್ಯ ಕಾಂತಾಶಾಂ ಸುಖಂ ಸುಷ್ವಾಪ ಪಿಂಗಲಾ ॥ ೪೪

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಅಷ್ಟಮಾಧ್ಯಾಯಃ



---

ಬಿಟ್ಟು ಇನ್ನು ಯಾವನು ಸಮರ್ಥನಾಗಿದ್ದಾನೆ ? (೪೧). ಈ ಜಗತ್ತೆಲ್ಲವೂ ಕಾಲ ಸರ್ಪದಿಂದ ಗ್ರಸ್ತವಾದದ್ದು—ಎಂದು ಯಾವಾಗ ಮನುಷ್ಯನು ಕಂಡುಕೊಳ್ಳುತ್ತಾನೊ ಆಗ ಆತನು ಅಪ್ರಮತ್ತನಾಗಿ ಎಚ್ಚರಿಕೆಯನ್ನುವಹಿಸಿ ಸಕಲಭೋಗಗಳಲ್ಲಿಯೂ ವಿರಕ್ತನಾಗುತ್ತಾನೆ. ಹೀಗೆ ವಿರಕ್ತನಾದಾಗ ತನಗೆ ತಾನೇ ರಕ್ಷಕನಾಗುತ್ತಾನೆ " ಎಂದು ಆಲೋಚಿಸಿದಳು (೪೨). ಯದುರಾಜ, ಹೀಗೆ ಆ ಪಿಂಗಳೆಯು ನಿಶ್ಚಯ ಮಾಡಿ, ಕಾಂತನನ್ನು ಹುಡುಕುವ ಆಸೆಯನ್ನು ಕತ್ತರಿಸಿ ಹಾಕಿ, ಮನಃಶಾಂತಿ ಯನ್ನು ತಳೆದು ಹಾಸಿಗೆಯಲ್ಲಿ ಸುಖವಾಗಿ ಮಲಗಿದಳು. ಆಸೆಯೆಂಬುದೇ ಪರಮ ದುಃಖ ಆಶಾರಾಹಿತ್ಯವೇ ಪರಮಸುಖ. ಆದ್ದರಿಂದಲೇ ಪಿಂಗಳೆಯು ಕಾಂತನ ಆಸೆಯನ್ನು ತೊರೆದ ಮೇಲೆ ಸುಖವಾಗಿ ನಿದ್ರಿಸಿದಳು ! " (೪೩–೪೪).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಎಂಟನೆಯ ಅಧ್ಯಾಯ



# ನವಮೋಧ್ಯಾಯಃ

ಬ್ರಾಹ್ಮಣ ಉವಾಚ—

ಪರಿಗ್ರಹೋ ಹಿ ದುಃಖಾಯ ಯದ್ ಯತ್ಪ್ರಿಯತಮಂ ನೃಣಾಮ್ ।
ಅನಂತಂ ಸುಖಮಾಪ್ನೋತಿ ತದ್ ವಿದ್ವಾನ್ ಯಸ್ತ್ವಕಿಂಚನಃ ॥ ೧

ಸಾಮಿಷಂ ಕುರರಂ ಜಘ್ನುರ್ಬಲಿನೋ ಯೇ ನಿರಾಮಿಷಾಃ ।
ತದಾಮಿಷಂ ಪರಿತ್ಯಜ್ಯ ಸ ಸುಖಂ ಸಮವಿಂದತ ॥ ೨

ನ ಮೇ ಮಾನಾವಮಾನೌ ಸ್ತೋ ನ ಚಿಂತಾ ಗೇಹಪುತ್ರಿಣಾಮ್ ।
ಆತ್ಮಕ್ರೀಡ ಆತ್ಮರತಿರ್ವಿಚರಾಮೀಹ ಬಾಲವತ್ ॥ ೩

ದ್ವಾವೇವ ಚಿಂತಯಾ ಮುಕ್ತೌ ಪರಮಾನಂದ ಆಪ್ಲುತೌ ।
ಯೋ ವಿಮುಗ್ಧೋ ಜಡೋ ಬಾಲೋ ಯೋ ಗುಣೇಭ್ಯಃ ಪರಂ ಗತಃ ॥ ೪

## ಅಧ್ಯಾಯ ೯

ಉಳಿದ ಕುರರಾದಿಗಳಿಂದಲೂ ತನ್ನ ದೇಹದಿಂದಲೂ ಕಲಿತ ಪಾಠವನ್ನು ಅವಧೂತನು ವರ್ಣಿಸುವುದು.. ಯದುರಾಜನು ಕೃತಾರ್ಥನಾದನೆಂದು ಶ್ರೀಕೃಷ್ಣನು ಉದ್ಧವನಿಗೆ ಹೇಳುವುದು.

ಅವಧೂತ ಬ್ರಾಹ್ಮಣನು ಹೀಗೆ ಮುಂದುವರಿಸಿದನು: “ ಯಾವಯಾವುದು ಪ್ರಿಯತಮವೆನಿಸುತ್ತದೆಯೋ ಅದನ್ನು ಪರಿಗ್ರಹಿಸುವುದಿದೆಯಲ್ಲ, ಆ ಪರಿಗ್ರಹವೇ ಮನುಷ್ಯರಿಗೆ ದುಃಖಪ್ರದವಾಗುತ್ತದೆ. ಇದನ್ನರಿತು ಯಾವಾತನು ಪರಿಗ್ರಹಿಸುವುದನ್ನು ತ್ಯಜಿಸಿಬಿಡುತ್ತಾನೋ ಅವನು ಅನಂತ ಸುಖವನ್ನೈದುತ್ತಾನೆ (೧). (ಇದಕ್ಕೆ ಉದಾಹರಣೆ) ಒಂದು ಕುರರಪಕ್ಷಿಯು ಮಾಂಸದ ತುಂಡನ್ನು ಕಚ್ಚಿಕೊಂಡಿತ್ತು. ಆಹಾರವಿಲ್ಲದ್ದರಿಂದ ಬಲಶಾಲಿಗಳಾದ ಇತರ ಪಕ್ಷಿಗಳು ಅದನ್ನು ಕುಕ್ಕಿ ತೊಂದರೆಪಡಿಸಿದವು. ಆಗ ಕುರರಪಕ್ಷಿಯು ಮಾಂಸದ ತುಂಡನ್ನು ಎಸೆದ ಮೇಲೆ ಸುಖವನ್ನು ಪಡೆಯಿತು (೨). ಯದುರಾಜ, ನನಗೆ ಮಾನಾವಮಾನಗಳ ಗೋಳು ಇಲ್ಲ. ಮನೆ, ಮಕ್ಕಳು—ಎಂಬ ಚಿಂತೆ ಇಲ್ಲ. ಆತ್ಮನನ್ನು ಪ್ರೀತಿಸುತ್ತ ಆತ್ಮನೊಡನೆ ಕ್ರೀಡಿಸುತ್ತ ಬಾಲಕನಂತೆ ಅಲೆದುಕೊಂಡಿದ್ದೇನೆ ! (೩) ಲೋಕದಲ್ಲಿ ಇಬ್ಬರು ಮಾತ್ರ ನಿಶ್ಚಿಂತೆಯಿಂದ ಪರಮಾನಂದದಲ್ಲಿ ಮುಳುಗಿರುತ್ತಾರೆ. ಯಾರೆಂದರೆ,

ಕ್ವಚಿತ್ ಕುಮಾರೀ ತ್ವಾತ್ಮಾನಂ ವೃಣಾನಾನ್ ಗೃಹಮಾಗತಾನ್ ।
ಸ್ವಯಂ ತಾನರ್ಹಯಾಮಾಸ ಕ್ವಾಪಿ ಯಾತೇಷು ಬಂಧುಷು ॥ ೫

ತೇಷಾಮಭ್ಯವಹಾರಾರ್ಥಂ ಶಾಲೀನ್ ರಹಸಿ ಪಾರ್ಥಿವ ।
ಅವಘ್ನಂತ್ಯಾಃ ಪ್ರಕೋಷ್ಠಸ್ಥಾಶ್ಚಕ್ರುಃ ಶಂಖಾಃ ಸ್ವನಂ ಮಹತ್ ॥ ೬

ಸಾ ತಜ್ಜುಗುಪ್ಸಿತಂ ಮತ್ವಾ ಮಹತೀ ವ್ರೀಡಿತಾ ತತಃ ।
ಬಭಂಜೈಕೈಕಶಃ ಶಂಖಾನ್ ದ್ವೌ ದ್ವೌ ಪಾಣ್ಯೋರಶೇಷಯತ್ ॥ ೭

ಉಭಯೋರಪ್ಯಭೂದ್ ಘೋಷೋ ಹ್ಯವಘ್ನಂತ್ಯಾಃ ಸ್ಮ ಶಂಖಯೋಃ ।
ತತ್ರಾಪ್ಯೇಕಂ ನಿರಭಿದದೇಕಸ್ಮಾನ್ನಾಭವದ್ ಧ್ವನಿಃ ॥ ೮

ಅನ್ವಶಿಕ್ಷಮಿಮಂ ತಸ್ಯಾ ಉಪದೇಶಮರಿಂದಮ ।
ಲೋಕಾನನುಚರನ್ನೇತಾನ್ ಲೋಕತತ್ತ್ವವಿವಿತ್ಸಯಾ ॥ ೯

---

ಅಜ್ಞನೂ ಕೆಲಸವಿಲ್ಲದವನೂ ಆದ ಬಾಲಕನೊಬ್ಬ. ಪ್ರಕೃತಿಯ ಬಲೆಗಳನ್ನು ತಪ್ಪಿಸಿಕೊಂಡು ಪರಮೇಶ್ವರನಲ್ಲಿ ನೆಲೆಸಿದವನೊಬ್ಬ—ಈ ಇಬ್ಬರೇ ಸುಖಿಗಳು (೪). ಒಂದು ಮನೆಗೆ ಕನ್ಯಾರ್ಥಿಗಳಾಗಿ ಕೆಲವರು ಬಂದರು. ಕನ್ಯೆಯ ತಂದೆ ತಾಯಿ ಮೊದಲಾದವರು ಎಲ್ಲಿಗೋ ಹೋಗಿದ್ದ ಕಾರಣ ಕನ್ಯೆಯೇ ತನ್ನ ನಿಮಿತ್ತವಾಗಿ ಬಂದವರನ್ನು ಸತ್ಕರಿಸಬೇಕಾಯಿತು. ಯದುರಾಜ, ಅವರ ಭೋಜನಕ್ಕಾಗಿ ಸಿದ್ಧತೆಯನ್ನು ಮಾಡಲು ಆ ಹುಡುಗಿಯೇ ಗುಟ್ಟಾಗಿ ಬತ್ತವನ್ನು ಕುಟ್ಟತೊಡಗಿದಳು. ಅವಳ ಕೈಯಲ್ಲಿದ್ದ ಶಂಖದ ಬಳೆಗಳು ಜಣಜಣ ಎಂದು ಗಟ್ಟಿಯಾಗಿ ಶಬ್ದ ಮಾಡುತ್ತಿದ್ದವು (೫-೬). (ತಾನೇ ಬತ್ತ ಕುಟ್ಟುವುದು) ಬಡತನವನ್ನು ವ್ಯಕ್ತಪಡಿಸುತ್ತದೆಯೆಂದು ನಾಚಿಕೊಂಡ ಬುದ್ಧಿಶಾಲಿಯಾದ ಆ ಹುಡುಗಿಯು ಕೈ ಬಳೆಗಳನ್ನು ಒಂದೊಂದಾಗಿ ತೆಗೆದುಹಾಕುತ್ತ ಎರಡೆರಡು ಬಳೆಗಳನ್ನು ಮಾತ್ರ ಉಳಿಸಿಕೊಂಡಳು (೭). ಆಗಲೂ ಎರಡೆರಡು ಬಳೆಗಳು ಶಬ್ದಮಾಡುತ್ತಿದ್ದರಿಂದ (ಎರಡು ಕೈಗಳಲ್ಲಿ) ಒಂದೊಂದನ್ನು ತೆಗೆದುಹಾಕಿದಳು. ಉಳಿದ ಒಂದೊಂದು ಬಳೆಯಿಂದ ಯಾವ ಶಬ್ದವೂ ಹುಟ್ಟಲಿಲ್ಲ! (೮) ರಾಜ, ಲೋಕದಸ್ಥಿತಿಯನ್ನು ಅರಿಯುವುದಕ್ಕಾಗಿ ಜನರ ನಡುವೆ ಸಂಚರಿಸುತ್ತಿದ್ದ ನಾನು ಆ ಕುಮಾರಿಯಿಂದಾದ ಉಪದೇಶವನ್ನು ಈ ರೀತಿಯಾಗಿ ಕಲಿತುಕೊಂಡೆನು. ಏನೆಂದರೆ, ಬಹಳ ಜನರ ಜೊತೆಗೆ ವಾಸಮಾಡುವುದರಿಂದ ಜಗಳ ಹುಟ್ಟಿಕೊಳ್ಳುತ್ತದೆ. ಆದ್ದರಿಂದ ಕೈಬಳೆಯಂತೆ ಒಬ್ಬನೇ ಅಲೆದಾಡಬೇಕು!

ವಾಸೇ ಬಹೂನಾಂ ಕಲಹೋ ಭವೇದ್ ವಾರ್ತಾ ದ್ವಯೋರಪಿ ।
ಏಕ ಏವ ಚರೇತ್ತಸ್ಮಾತ್ ಕುಮಾರ್ಯಾ ಇವ ಕಂಕಣಃ ॥ ೧೦

ಮನ ಏಕತ್ರ ಸಂಯುಂಜ್ಯಾಜ್ಜಿತಶ್ವಾಸೋ ಜಿತಾಸನಃ ।
ವೈರಾಗ್ಯಾಭ್ಯಾಸಯೋಗೇನ ಧ್ರಿಯಮಾಣಮತಂದ್ರಿತಃ ॥ ೧೧

ಯಸ್ಮಿನ್ ಮನೋ ಲಬ್ಧಪದಂ ಯದೇತ-
ಚ್ಛನೈಃ ಶನೈರ್ಮುಂಚತಿ ಕರ್ಮರೇಣೂನ್ ।
ಸತ್ತ್ವೇನ ವೃದ್ಧೇನ ರಜಸ್ತಮಶ್ಚ
ವಿಧೂಯ ನಿರ್ವಾಣಮುಪೈತ್ಯನಿಂಧನಮ್ ॥ ೧೨

ತದೈವಮಾತ್ಮನ್ಯವರುದ್ಧಚಿತ್ತೋ
ನ ವೇದ ಕಿಂಚಿದ್ ಬಹಿರಂತರಂ ವಾ ।
ಯಥೇಷುಕಾರೋ ನೃಪತಿಂ ವ್ರಜಂತ-
ಮಿಷೌ ಗತಾತ್ಮಾ ನ ದದರ್ಶ ಪಾರ್ಶ್ವೇ ॥ ೧೩

---

(೯-೧೦). ಸಾಧಕನು ಸ್ವಲ್ಪವೂ ಆಲಸ್ಯವಿಲ್ಲದವನಾಗಿ ಆಸನವನ್ನು ಜಯಿಸಿ, ಶ್ವಾಸವನ್ನು (ಪ್ರಾಣಾಯಾಮದಿಂದ) ಜಯಿಸಿ, ವೈರಾಗ್ಯದಿಂದಲೂ ಅಭ್ಯಾಸದಿಂದಲೂ ಮನಸ್ಸನ್ನು ಒಂದು ಕಡೆ ನಿಶ್ಚಲಗೊಳಿಸಬೇಕು. ಎಲ್ಲಿ ನಿಶ್ಚಲಗೊಳಿಸಬೇಕೆಂದರೆ, ಎಲ್ಲಿ (ಪರಮಾನಂದ ರೂಪನಾದ ಭಗವಂತನಲ್ಲಿ) ಮನಸ್ಸು ಆಸ್ಪದವನ್ನು ಪಡೆದು ಮೆಲ್ಲ ಮೆಲ್ಲನೆ ಕರ್ಮವಾಸನೆಗಳನ್ನು ಪರಿತ್ಯಜಿಸುವುದೋ ಅಲ್ಲಿ. ರಜಸ್ತಮೋಗುಣಗಳನ್ನು ಮೆಟ್ಟಿ ಸತ್ತ್ವ ಗುಣವು ವರ್ಧಿಸಿದಾಗ ಇಂಧನರೂಪವಾದ ರಜಸ್ತಮೋಗುಣಗಳಿಲ್ಲದ್ದರಿಂದ ಮನಸ್ಸು ವೃತ್ತಿರಹಿತವಾಗಿ ಶಾಂತವಾಗಿ [1]ನಿಲ್ಲುವುದು (೧೧-೧೨). ಆ ಸಂದರ್ಭದಲ್ಲಿ ಚಿತ್ತವು ಆತ್ಮನಲ್ಲಿ ತಲ್ಲೀನವಾಗಿರುವುದರಿಂದ ಸಾಧಕನಿಗೆ ಬಾಹ್ಯವಾಗಲಿ [2]ಆಂತರವಾಗಲಿ ತಿಳಿಯುವುದಿಲ್ಲ. ವ್ಯಾಧನೊಬ್ಬನು ಬಾಣವನ್ನು ಹದಗೊಳಿಸು

---

1. ರಜೋಗುಣದಿಂದ ಮನಸ್ಸಿಗೆ ವಿಕ್ಷೇಪವೂ ತಮೋಗುಣದಿಂದ ನಿದ್ರಾರೂಪವಾದ ಲಯವೂ ಸಂಭವಿಸುತ್ತವೆ. ಸತ್ತ್ವಗುಣದಿಂದಾದ ಮನಸ್ಸಿನ ಈ ಶಾಂತಸ್ಥಿತಿಗೆ ಅಸಂಪ್ರಜ್ಞಾತ ಸಮಾಧಿಯೆಂದು ಯೋಗಶಾಸ್ತ್ರದಲ್ಲಿ ಹೆಸರಿದೆ.

2. ನೋಡುವುದು, ಕೇಳುವುದು ಮೊದಲಾದದ್ದು ಬಾಹ್ಯ. ಯಾವುದನ್ನಾದರೂ ಸ್ಮರಿಸಿಕೊಳ್ಳುವುದು ಆಂತರ.

ಏಕಚಾರ್ಯನಿಕೇತಃ ಸ್ಯಾದಪ್ರಮತ್ತೋ ಗುಹಾಶಯಃ ।
ಅಲಕ್ಷ್ಯಮಾಣ ಆಚಾರೈರ್ಮುನಿರೇಕೋಽಲ್ಪಭಾಷಣಃ ॥ ೧೪
ಗೃಹಾರಂಭೋಽತಿದುಃಖಾಯ ವಿಫಲಶ್ಚಾಧ್ರುವಾತ್ಮನಃ ।
ಸರ್ಪಃ ಪರಕೃತಂ ವೇಶ್ಮ ಪ್ರವಿಶ್ಯ ಸುಖಮೇಧತೇ ॥ ೧೫
ಏಕೋ ನಾರಾಯಣೋ ದೇವಃ ಪೂರ್ವಸೃಷ್ಟಂ ಸ್ವಮಾಯಯಾ ।
ಸಂಹೃತ್ಯ ಕಾಲಕಲಯಾ ಕಲ್ಪಾಂತ ಇದಮೀಶ್ವರಃ ॥ ೧೬
ಏಕ ಏವಾದ್ವಿತೀಯೋಽಭೂದಾತ್ಮಾಧಾರೋಽಖಿಲಾಶ್ರಯಃ ।
ಕಾಲೇನಾತ್ಮಾನುಭಾವೇನ ಸಾಮ್ಯಂ ನೀತಾಸು ಶಕ್ತಿಷು ।
ಸತ್ತ್ವಾದಿಷ್ವಾದಿಪುರುಷಃ ಪ್ರಧಾನಪುರುಷೇಶ್ವರಃ ॥ ೧೮

---

ವುದರಲ್ಲಿ ತಲ್ಲೀನನಾಗಿದ್ದನಂತೆ. ಸಮೀಪದಲ್ಲಿಯೇ ಒಬ್ಬ ರಾಜನು (ನಗಾರಿಗಳ ಘೋಷದೊಡನೆ) ಹೋದರೂ ಬಾಣಕಾರನು ತಿರುಗಿ ನೋಡಲಿಲ್ಲ. ಹಾಗೆ ಮನಸ್ಸನ್ನು ಭಗವಂತನಲ್ಲಿ ನಿಲ್ಲಿಸಬೇಕು (೧೩). (ಸರ್ಪದಿಂದ ನಾನು ಕಲಿತು ಕೊಂಡಿದ್ದೇನೆಂದರೆ) ಮುನಿಯು ಜನ ಸಂಸರ್ಗವನ್ನು ತ್ಯಜಿಸಿ ಒಂಟಿಯಾಗಿ, ಮನೆಯನ್ನು ಕಟ್ಟಿಕೊಳ್ಳದೆ ತಿರುಗಾಡುತ್ತಿರಬೇಕು. ಅಪ್ರಮತ್ತನಾಗಿ ಗುಹೆಯಲ್ಲಿ ಮಲಗತಕ್ಕದ್ದು. ಮಾತನಾಡುವುದನ್ನು (ಶಬ್ದಮಾಡುವುದನ್ನು) ಪರಿಮಿತಗೊಳಿಸಬೇಕಲ್ಲದೆ ನಡೆನುಡಿಗಳಿಂದ ತನ್ನ ಸ್ವಭಾವವೇನೆಂಬುದು ಇನ್ನೊಬ್ಬರಿಗೆ ತಿಳಿಯದಂತಿರಬೇಕು (೧೪). ಅಲ್ಲದೆ ಈ ದೇಹವು ನಶ್ವರವಾದ ಪ್ರಯುಕ್ತ ಗೃಹ ನಿರ್ಮಾಣವು ಅತ್ಯಂತ ಕ್ಲೇಶಕಾರಿಯೂ ನಿಷ್ಫಲವೂ ಎಂದು ಸರ್ಪದಿಂದ ತಿಳಿದು ಕೊಂಡಿದ್ದೇನೆ. ಸರ್ಪವು ಇನ್ನೊಬ್ಬರು ಕಟ್ಟಿದ ಮನೆಯನ್ನು (ಹುತ್ತವನ್ನು) ಸೇರಿ ಸುಖವಾಗಿರುತ್ತದೆಯಲ್ಲವೆ? (೧೫). (ಜೇಡರ ಹುಳುವಿನ ದೃಷ್ಟಾಂತಕ್ಕೆ ಈಗ ಪೀಠಿಕೆ) ಈಶ್ವರನಾದ ಶ್ರೀಮನ್ನಾರಾಯಣಸ್ವಾಮಿಯು (ಅನ್ಯಸಾಧನ ನಿರಪೇಕ್ಷತೆಯಿಂದ) ಏಕನಾಗಿಯೇ ಇದ್ದರೂ ಸ್ವಮಾಯಾಶಕ್ತಿಯಿಂದ ಈ ಜಗತ್ತನ್ನು ಸೃಷ್ಟಿಸಿ, ಕಲ್ಪಾಂತದಲ್ಲಿ ಕಾಲಶಕ್ತಿಯಿಂದ ಸಂಹರಿಸಿ ಏಕನಾಗಿ [1]ಅದ್ವಿತೀಯನಾಗಿಯೇ ಇದ್ದನು. ಆತನ ಮಹಿಮೆಯೇ ಆದ ಕಾಲದಿಂದ ಸತ್ತ್ವರಜಸ್ತಮೋಗುಣಗಳೆಂಬ ಶಕ್ತಿಗಳು ಗುಣಸಾಮ್ಯವನ್ನೈದಿದವು. ಗುಣಸಾಮ್ಯವೆಂಬ ಪ್ರಧಾನಕ್ಕೂ (ಪ್ರಧಾನವೇ ಉಪಾಧಿಯಾಗಿರುವ) ಜೀವನಿಗೂ ಈಶ್ವರನಾಗಿ ಅಖಿಲಾಶ್ರಯನಾದ ಆದಿಪುರುಷನು ಪ್ರಳಯಕಾಲದಲ್ಲಿ

1. ಅದ್ವಿತೀಯ — ಸಜಾತೀಯ ವಿಜಾತೀಯ ಭೇದ ಶೂನ್ಯ.

*

ಪರಾವರಾಣಾಂ ಪರಮ ಆಸ್ತೇ ಕೈವಲ್ಯಸಂಜ್ಞಿತಃ ।
ಕೇವಲಾನುಭವಾನಂದಸಂದೋಹೋ ನಿರುಪಾಧಿಕಃ ॥ ೧೮

ಕೇವಲಾತ್ಮಾನುಭಾವೇನ ಸ್ವಮಾಯಾಂ ತ್ರಿಗುಣಾತ್ಮಿಕಾಮ್ ।
ಸಂಕ್ಷೋಭಯನ್ ಸೃಜತ್ಯಾದೌ ತಯಾ ಸೂತ್ರಮರಿಂದಮ ॥ ೧೯

ತಾಮಾಹುಸ್ತ್ರಿಗುಣವ್ಯಕ್ತಿಂ ಸೃಜಂತೀಂ ವಿಶ್ವತೋ ಮುಖಮ್ ।
ಯಸ್ಮಿನ್ ಪ್ರೋತಮಿದಂ ವಿಶ್ವಂ ಯೇನ ಸಂಸರತೇ ಪುಮಾನ್ ॥ ೨೦

ಯಥೋರ್ಣನಾಭಿರ್ಹೃದಯಾದೂರ್ಣಾಂ ಸಂತತ್ಯ ವಕ್ತ್ರತಃ ।
ತಯಾ ವಿಹೃತ್ಯ ಭೂಯಸ್ತಾಂ ಗ್ರಸತ್ಯೇವಂ ಮಹೇಶ್ವರಃ ॥ ೨೧

ಯತ್ರ ಯತ್ರ ಮನೋ ದೇಹೀ ಧಾರಯೇತ್ ಸಕಲಂ ಧಿಯಾ ।
ಸ್ನೇಹಾದ್ ದ್ವೇಷಾದ್ ಭಯಾದ್ ವಾಪಿ ಯಾತಿ ತತ್ತತ್ಸರೂಪತಾಮ್ ೨೨

---

[1]ಆತ್ಮಾಧಾರನಾಗಿದ್ದನು (೧೬-೧೭). ಆತನು ಪರರೆನಿಸಿದ ಬ್ರಹ್ಮಾದಿಗಳಿಗೂ ಅವರರೆನಿಸಿದ ಮುಕ್ತಜೀವರಿಗೂ ಪರಮಪ್ರಾಪ್ಯನಾಗಿ ಕೈವಲ್ಯನೆನಿಸಿದ್ದಾನೆ. ಏಕೆಂದರೆ, ಆತನು ಸರ್ವೋಪಾಧಿಗಳಿಂದ ನಿರ್ಮುಕ್ತನಾಗಿ ಕೇವಲವಾದ (ನಿರ್ವಿಷಯವಾದ) ಆನಂದಗಳ ಸಂದೋಹವಾಗಿದ್ದಾನೆ (೧೮). ಯದುರಾಜ, ಆ ಪರಮಾತ್ಮನು ಕಲ್ಪಾದಿಯಲ್ಲಿ ತ್ರಿಗುಣಾತ್ಮಕವಾದ ತನ್ನ ಮಾಯೆಯನ್ನು ಕೇವಲ ತನ್ನ ಶಕ್ತಿಯಾದ ಕಾಲದಿಂದ ಕ್ಷೋಭಿಸಿ ಸೂತ್ರವನ್ನು-ಎಂದರೆ-ಕ್ರಿಯಾಶಕ್ತಿ ಪ್ರಧಾನವಾದ ಮಹತ್ತತ್ತ್ವವನ್ನು ಸೃಜಿಸುತ್ತಾನೆ (೧೯). ಗುಣತ್ರಯ ಕಾರ್ಯವಾದ ಆ ಮಹತ್ತತ್ತ್ವವು ಸರ್ವತೋಮುಖವಾಗಿ ಈ ವಿಶ್ವವನ್ನು (ಅಹಂಕಾರದ ಮೂಲಕ) ಸೃಜಿಸುತ್ತದೆ ಎಂದು ಬಲ್ಲವರು ಹೇಳಿದ್ದಾರೆ. ಈ ವಿಶ್ವವು ಈ ಮಹತ್ತತ್ತ್ವದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದೆ. ಮತ್ತು ಜೀವನು ಸಂಸಾರದ ಬಲೆಯಲ್ಲಿ [2]ಸಿಕ್ಕಿಕೊಂಡಿದ್ದಾನೆ (೨೦). ಜೇಡರಹುಳು ತನ್ನ ಹೊಟ್ಟೆಯಿಂದ ಹೊರಬಂದ ದಾರವನ್ನು ಬಾಯಿಯಿಂದ ತೆಗೆದು ಹರಡಿ ಬಲೆಮಾಡಿ ಅದರಲ್ಲಿ ವಿಹರಿಸಿ ಮತ್ತೆ ಅದನ್ನು ತನ್ನಲ್ಲಿ ಹೇಗೆ ಅಡಗಿಸಿಕೊಳ್ಳುತ್ತದೆಯೋ ಹಾಗೆಯೇ ಮಹೇಶ್ವರನು ವಿಶ್ವವನ್ನು ತನ್ನಿಂದಲೇ ಸೃಜಿಸಿ ತನ್ನಲ್ಲಿ ಅಡಗಿಸಿಕೊಳ್ಳುತ್ತಾನೆ (೨೧). ಜೀವಿಯು

1. ಅನ್ಯಾಶ್ರಯರಹಿತನಾಗಿ ' ಸ್ವೇ ಮಹಿಮ್ನಿ ಪ್ರತಿಷ್ಠಿತಃ '

2. ಆದ್ದರಿಂದ ಮಹತ್ತತ್ತ್ವಕ್ಕೆ ಸೂತ್ರ (ಎಳೆ, ದಾರ) ಎಂದು ಹೆಸರು.

ಕೀಟಃ ಪೇಶಸ್ಕೃತಂ ಧ್ಯಾಯನ್ ಕುಡ್ಯಾಂ ತೇನ ಪ್ರವೇಶಿತಃ ।
ಯಾತಿ ತತ್ಸಾತ್ಮತಾಂ ರಾಜನ್ ಪೂರ್ವರೂಪಮಸಂತ್ಯಜನ್ ॥ ೨೩

ಏವಂ ಗುರುಭ್ಯ ಏತೇಭ್ಯ ಏಷಾ ಮೇ ಶಿಕ್ಷಿತಾ ಮತಿಃ ।
ಸ್ವಾತ್ಮೋಪಶಿಕ್ಷಿತಾಂ ಬುದ್ಧಿಂ ಶೃಣು ಮೇ ವದತಃ ಪ್ರಭೋ ॥ ೨೪

ದೇಹೋ ಗುರುರ್ಮಮ ವಿರಕ್ತಿವಿವೇಕಹೇತು-
ರ್ಬಿಭ್ರತ್ ಸ್ಮ ಸತ್ತ್ವನಿಧನಂ ಸತತಾರ್ತ್ಯುದರ್ಕಮ್ ।
ತತ್ತ್ವಾನ್ಯನೇನ ವಿಮೃಶಾಮಿ ಯಥಾ ತಥಾಪಿ
ಪಾರಕ್ಯಮಿತ್ಯವಸಿತೋ ವಿಚರಾಮ್ಯಸಂಗಃ ॥ ೨೫

---

ತನ್ನ ಸಕಲ ಮನಸ್ಸನ್ನೂ ಬುದ್ಧಿಪೂರ್ವಕವಾಗಿ ಯಾವಯಾವ ವಸ್ತುವಿನಲ್ಲಿ ದೃಢವಾಗಿ ನಿಲ್ಲಿಸುತ್ತಾನೋ, ಸ್ನೇಹದಿಂದಾಗಲಿ ದ್ವೇಷದಿಂದಾಗಲಿ ಭಯದಿಂದಾಗಲಿ ಮನಸ್ಸು ಎಲ್ಲಿ ನಿಲ್ಲುತ್ತದೆಯೋ, ಆ ವಸ್ತುವಿನ ಸಾರೂಪ್ಯವೇ ಈ ಜೀವಿಗೆ ಉಂಟಾಗುತ್ತದೆ(೨೨) ಯದುರಾಜ, ಪೇಶಸ್ಕಾರಿಯೆಂಬ ಭ್ರಮರವು ಕೀಟವನ್ನು ಗೋಡೆಯ ಗೂಡಿನಲ್ಲಿ ತಂದಿಡುತ್ತದೆ. ಆ ಕೀಟವು (ಭಯದಿಂದ) ಭ್ರಮರವನ್ನೇ ನೆನೆಸುತ್ತ, ಪೂರ್ವ ದೇಹವನ್ನು ಬಿಡದೆಯೇ, ಭ್ರಮರದ ಸಾರೂಪ್ಯವನ್ನು [1]ಪಡೆಯುತ್ತದೆ. (ಪೂರ್ವ ದೇಹವಿದ್ದಾಗಲೇ ಹೀಗೆ ಅನ್ಯಸಾರೂಪ್ಯವು ಬರುವುದಾದರೆ, ದೇಹಾಂತರದಲ್ಲಿ ಬರುತ್ತದೆಯೆಂದು ಹೇಳಬೇಕಾದ್ದೇನಿದೆ ?) (೨೩). ರಾಜ, ಈ ಪ್ರಕಾರವಾಗಿ ನನ್ನ ಗುರುಗಳಿಂದ ಬುದ್ಧಿಗೆ ಶಿಕ್ಷಣವನ್ನು ಪಡೆದಿದ್ದೇನೆ! ನನ್ನ ದೇಹದಿಂದಲೇ ಕಲಿತುಕೊಂಡ ಪಾಠವೇನೆಂಬುದನ್ನು ಕೇಳು! (೨೪) ನನಗೆ ವಿರಕ್ತಿಯನ್ನೂ ವಿವೇಕವನ್ನೂ ಕಲ್ಪಿಸಿಕೊಟ್ಟ ಈ ದೇಹವು ನನ್ನ ಗುರುವಾಗಿದೆ. ಸ್ವಯಂ ಉತ್ಪತ್ತಿ ನಾಶಗಳನ್ನು ಪಡೆದು ಸಂತತವಾಗಿ ದುಃಖವನ್ನೇ ಅಂತ್ಯ ಫಲವಾಗಿ ಕೊಡುತ್ತಿರುವ ದೇಹವು ವೈರಾಗ್ಯವನ್ನು ಬೋಧಿಸಿದೆ. ಈ ದೇಹದಿಂದ ಸೂಕ್ಷ್ಮತತ್ತ್ವಗಳನ್ನು ವಿಮರ್ಶಿಸಿ ತಿಳಿದುಕೊಳ್ಳಲು ಸಾಧ್ಯವಾಗಿರುವುದರಿಂದ ವಿವೇಕವನ್ನುಂಟುಮಾಡಿ ಇದು ಗುರುವಾಗಿದೆ. ಆದರೂ ಸಹ ಇದು ಪರಾಧೀನವಾಗಿ(ನಾಯಿ ನರಿಗಳಿಗೆ ಸೇರಿ) ಹೋಗುತ್ತದೆಯಾದ್ದರಿಂದ ಈ ದೇಹದಲ್ಲಿ ಆಸಕ್ತಿಯನ್ನಿಡದೆ ತಿರುಗುತ್ತಿದ್ದೇನೆ (೨೫)

1. ಇದಕ್ಕೆ ಭ್ರಮರ ಕೀಟ ನ್ಯಾಯವೆಂದು ಹೆಸರು.

ಜಾಯಾತ್ಮಜಾರ್ಥ ಪಶುಭೃತ್ಯ ಗೃಹಾಪ್ತವರ್ಗಾನ್
ಪುಷ್ಣಾತಿ ಯತ್ಪ್ರಿಯಚಿಕೀರ್ಷಯಾ ವಿತನ್ವನ್ ।
ಸ್ವಾಂತೇ ಸಕೃಚ್ಛ್ರಮವರುದ್ಧಧನಃ ಸ ದೇಹಃ
ಸೃಷ್ಟ್ವಾಸ್ಯ ಬೀಜಮವಸೀದತಿ ವೃಕ್ಷಧರ್ಮಾ ॥ ೨೬

ಜಿಹ್ವೈಕತೋಽಮುಮಪಕರ್ಷತಿ ಕರ್ಹಿ ತರ್ಷಾ
ಶಿಶ್ನೋಽನ್ಯತಸ್ತ್ವಗುದರಂ ಶ್ರವಣಂ ಕುತಶ್ಚಿತ್ ।
ಘ್ರಾಣೋಽನ್ಯತಶ್ಚಪಲದೃಕ್ ಕ್ವ ಚ ಕರ್ಮಶಕ್ತಿ-
ರ್ಬಹ್ವ್ಯಃ ಸಪತ್ನ್ಯ ಇವ ಗೇಹಪತಿಂ ಲುನಂತಿ ॥ ೨೭

ಸೃಷ್ಟ್ವಾ ಪುರಾಣಿ ವಿವಿಧಾನ್ಯಜಯಾಽತ್ಮಶಕ್ತ್ಯಾ
ವೃಕ್ಷಾನ್ ಸರೀಸೃಪಪಶೂನ್ ಖಗದಂಶಮತ್ಸ್ಯಾನ್ ।
ತೈಸ್ತೈರತುಷ್ಟಹೃದಯಃ ಪುರುಷಂ ವಿಧಾಯ
ಬ್ರಹ್ಮಾವಲೋಕಧಿಷಣಂ ಮುದಮಾಪ ದೇವಃ ॥ ೨೮

---

ಜೀವನು ಈ ದೇಹಕ್ಕೆ ಪ್ರೀತಿಯಾಗಲೆಂದು ದೇಹಭೋಗಕ್ಕಾಗಿ ಹೆಂಡತಿ, ಮಕ್ಕಳು, ಧನ, ಪಶು, ಆಳು, ಮನೆ, ಬಂಧುಬಳಗಗಳನ್ನು ಕಟ್ಟಿಕೊಂಡು ಬೆಳಸುತ್ತಾನೆ. ಬಹಳ ಕಷ್ಟಪಟ್ಟು ಹಣವನ್ನು ಕೂಡಿಹಾಕಿರುತ್ತಾನೆ. ಅಂತಕಾಲವು ಬಂದಾಗ ಆ ದೇಹವು ಜೀವನಿಗೆ ಇನ್ನೊಂದು ದೇಹವು ಬರಲೆಂದು, ವೃಕ್ಷದಂತೆ ಕರ್ಮಬೀಜವನ್ನು ಸೃಷ್ಟಿಸಿ, ತಾನು ನಾಶವಾಗುತ್ತದೆ! (೨೬). ಈ ಮನುಷ್ಯನನ್ನು ಜಿಹ್ವೆಯು ರುಚಿಯ ಕಡೆಗೂ, ಬಾಯಾರಿಕೆಯು ನೀರಿನ ಕಡೆಗೂ, ಶಿಶ್ನವು ಮೈಥುನದ ಕಡೆಗೂ, ಮೂಗು ಸುಗಂಧದ ಕಡೆಗೂ, ಚಪಲವಾದ ನೇತ್ರವು ರೂಪದ ಕಡೆಗೂ, ಹಾಗೆಯೇ ಇತರ ಕರ್ಮೇಂದ್ರಿಯಗಳು ಬೇರೆಬೇರೆ ಕಾರ್ಯಗಳ ಕಡೆಗೂ, ಸವತಿಯರು ಗಂಡನನ್ನು ಎಳೆದಾಡಿದ ಹಾಗೆ ಎಳೆದಾಡುತ್ತವೆ! (೨೭). ಆದಿದೇವನು ಆತ್ಮಶಕ್ತಿಯಾದ ಮಾಯೆಯಿಂದ ನಾನಾ ಬಗೆಯ ಶರೀರಗಳನ್ನು ಮೊದಲು ಸೃಜಿಸಿದನು—ವೃಕ್ಷ, ಸರೀಸೃಪ (ಹರಿದಾಡುವ ಹಾವು ಮೊದಲಾದದ್ದು), ಪಶು, ಪಕ್ಷಿ, ಕೀಟ ಮೀನು—ಮೊದಲಾದವನ್ನು ಸೃಜಿಸಿದನು. ಆವುಗಳಿಂದ ಮನಸ್ಸಿಗೆ ತೃಪ್ತಿಯಾಗದೆ ಕಡೆಯಲ್ಲಿ ಬ್ರಹ್ಮದರ್ಶನ ಸಮರ್ಥನಾದ ಮನುಷ್ಯನನ್ನು ಸೃಷ್ಟಿಸಿ ಭಗವಂತನು

ಲಬ್ಧ್ವಾ ಸುದುರ್ಲಭಮಿದಂ ಬಹುಸಂಭವಾಂತೇ
ಮಾನುಷ್ಯಮರ್ಥದಮನಿತ್ಯಮಪೀಹ ಧೀರಃ ।
ತೂರ್ಣಂ ಯತೇತ ನ ಪತೇದನುಮೃತ್ಯು ಯಾವ-
ನ್ನಿಃಶ್ರೇಯಸಾಯ ವಿಷಯಃ ಖಲು ಸರ್ವತಃ ಸ್ಯಾತ್ ॥ ೨೯

ಏವಂ ಸಂಜಾತವೈರಾಗ್ಯೋ ವಿಜ್ಞಾನಾಲೋಕ ಆತ್ಮನಿ ।
ವಿಚರಾಮಿ ಮಹೀಮೇತಾಂ ಮುಕ್ತಸಂಗೋಽನಹಂಕೃತಿಃ ॥ ೩೦

ನ ಹ್ಯೇಕಸ್ಮಾತ್ ಗುರೋರ್ಜ್ಞಾನಂ ಸುಸ್ಥಿರಂ ಸ್ಯಾತ್ ಸುಪುಷ್ಕಲಮ್ ।
ಬ್ರಹ್ಮೈತದದ್ವಿತೀಯಂ ವೈ ಗೀಯತೇ ಬಹುಧರ್ಷಿಭಿಃ ॥ ೩೧

---

ಸಂತೋಷಿಸಿದನು (೨೮). ಬಹುಜನ್ಮಗಳ ಕಡೆಯಲ್ಲಿ ಮನುಷ್ಯಜನ್ಮ ದೊರಕುತ್ತದೆ. ಇದು ಅತ್ಯಂತ ದುರ್ಲಭವಾದದ್ದು. ಇದು ಅನಿತ್ಯವಾದರೂ ಧರ್ಮಾದಿಪುರುಷಾರ್ಥಗಳನ್ನು ಸಂಪಾದಿಸಿಕೊಡುತ್ತದೆ. ಸದಾ ಸಾವಿಗೆ ಒಳಗಾಗಿರುವ ಈ ದೇಹವು ಬಿದ್ದು ಹೋಗುವುದರೊಳಗಾಗಿ ಬೇಗಬೇಗನೆ ಮೋಕ್ಷಕ್ಕಾಗಿ ಪ್ರಯತ್ನಿಸಬೇಕು. ವಿಷಯಸುಖವು ಎಲ್ಲೆಡೆಯೂ ಪಶ್ವಾದಿ ಜನ್ಮದಲ್ಲಿಯೂ ದೊರಕುತ್ತದೆಯಲ್ಲವೆ? (೨೯). ಹೀಗೆ ಬಹುಮಂದಿ ಗುರುಗಳಿಂದ ಶಿಕ್ಷಣವನ್ನು ಪಡೆದುದರಿಂದ ನನಗೆ ವೈರಾಗ್ಯ ಉಂಟಾಗಿ, ಚಿತ್ತದಲ್ಲಿ ವಿಜ್ಞಾನವೆಂಬ ದೀಪವನ್ನು ಹಿಡಿದುಕೊಂಡೆನು. ಅನಂತರ ನಿಃಸಂಗನೂ ನಿರಹಂಕಾರನೂ ಆಗಿ ಭೂಮಿಯಲ್ಲಿ ಸುತ್ತಾಡಿಕೊಂಡಿದ್ದೇನೆ. ಒಬ್ಬ ಗುರುವಿನಿಂದ ದೊರೆಯುವ [1]ಜ್ಞಾನವು ಸುಸ್ಥಿರವೂ ಬಹುವಿಚಾರಗಳನ್ನುಳ್ಳದ್ದೂ ಆಗಿರುವುದಿಲ್ಲ. ಏಕೆಂದರೆ, ಅದ್ವಿತೀಯವಾದ ಈ ಬ್ರಹ್ಮವು ಸವಿಶೇಷವೆಂದೂ ನಿರ್ವಿಶೇಷವೆಂದೂ ಬಹು ಪ್ರಕಾರವಾಗಿ ಋಷಿಗಳು ಹೇಳಿದ್ದಾರೆ. (ಇದರ ರಹಸ್ಯಾರ್ಥವನ್ನು ಬಿಡಿಸಿ ಪರಮಾರ್ಥವನ್ನು ತಿಳಿಸತಕ್ಕ ಗುರು ಒಬ್ಬನೇ) ಎಂದನು (೩೦-೩೧).

---

1. ತತ್ತ್ವಜ್ಞಾನವನ್ನು ಬೋಧಿಸತಕ್ಕ ಗುರು ಒಬ್ಬನೇ ಆಗಿರಬೇಕು. ಆದರೆ ದೇಹಾತಿರಿಕ್ತ ಆತ್ಮನಿದ್ದಾನೆಂದೂ ಕರ್ಮಫಲವು ಇದೆಯೆಂದೂ ಬೋಧಿಸಿ ನಾನಾ ವಿಷಯಗಳಲ್ಲಿ ವ್ಯುತ್ಪತ್ತಿಯನ್ನುಂಟು ಮಾಡುವ ಗುರುಗಳು ಅನೇಕರಿದ್ದರೆ ಉತ್ತಮ ಎಂದು ಅಭಿಪ್ರಾಯ.

ಶ್ರೀ ಭಗವಾನುವಾಚ—

ಇತ್ಯುಕ್ತ್ವಾ ಸ ಯದುಂ ವಿಪ್ರಸ್ತಮಾಮಂತ್ರ್ಯ ಗಭೀರಧೀಃ ।
ವಂದಿತೋಽಭ್ಯರ್ಥಿತೋ ರಾಜ್ಞಾ ಯಯೌ ಪ್ರೀತೋ ಯಥಾಗತಮ್ ॥ ೩೨

ಅವಧೂತವಚಃ ಶ್ರುತ್ವಾ ಪೂರ್ವೇಷಾಂ ನಃ ಸ ಪೂರ್ವಜಃ ।
ಸರ್ವಸಂಗವಿನಿರ್ಮುಕ್ತಃ ಸಮಚಿತ್ತೋ ಬಭೂವ ಹ ॥ ೩೩

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ನವಮಾಧ್ಯಾಯಃ





---

ಉದ್ಧವ, ಹೀಗೆ ಗಂಭೀರ ಬುದ್ಧಿಶಾಲಿಯಾದ ಆ ವಿಪ್ರನು ಯದುರಾಜನಿಗೆ ಹೇಳಿ ಹೊರಡಲು ಸಿದ್ಧನಾದನು. ಯದುರಾಯನು ಆತನಿಗೆ ವಂದಿಸಿ ಪೂಜಿಸಲಾಗಿ, ಸಂತುಷ್ಟನಾದ [1]ವಿಪ್ರನು ಬಂದಹಾಗೆ ಹೊರಟುಹೋದನು (೩೨). ಅವಧೂತನ ವಚನವನ್ನಾಲಿಸಿ ನಮ್ಮ ಪೂರ್ವಜರಿಗೂ ಪೂರ್ವಜನಾದ ಯದುರಾಜನು ಸರ್ವಸಂಗವನ್ನು ತ್ಯಜಿಸಿ ಬ್ರಹ್ಮನಿಷ್ಠನಾದನು (೩೩).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಒಂಬತ್ತನೆಯ ಅಧ್ಯಾಯ



---

1. ಈ ವಿಪ್ರನು ದತ್ತಾತ್ರೇಯನೇ ಆಗಿದ್ದನು.

# ದಶಮೋಧ್ಯಾಯಃ

ಶ್ರೀ ಭಗವಾನುವಾಚ—

ಮಯೋದಿತೇಷ್ವವಹಿತಃ ಸ್ವಧರ್ಮೇಷು ಮದಾಶ್ರಯಃ ।
ವರ್ಣಾಶ್ರಮಕುಲಾಚಾರಮಕಾಮಾತ್ಮಾ ಸಮಾಚರೇತ್ ॥ ೧

ಅನ್ವೀಕ್ಷೇತ ವಿಶುದ್ಧಾತ್ಮಾ ದೇಹಿನಾಂ ವಿಷಯಾತ್ಮನಾಮ್ ।
ಗುಣೇಷು ತತ್ತ್ವಧ್ಯಾನೇನ ಸರ್ವಾರಂಭವಿಪರ್ಯಯಮ್ ॥ ೨

ಸುಪ್ತಸ್ಯ ವಿಷಯಾಲೋಕೋ ಧ್ಯಾಯತೋ ವಾ ಮನೋರಥಃ ।
ನಾನಾತ್ಮಕತ್ವಾದ್ ವಿಫಲಸ್ತಥಾ ಭೇದಾತ್ಮಧೀರ್ಗುಣೈಃ ॥ ೩

## ಅಧ್ಯಾಯ ೧೦

ಮುಮುಕ್ಷುವಿನ ಲಕ್ಷಣ. ಕರ್ಮಫಲದ ನಶ್ವರತೆ. ದೇಹಸಂಬಂಧದಿಂದಲೇ ಸಂಸಾರ. ಆತ್ಮನಿಗೆ ಸ್ವತಃ ಸಂಸಾರವಿಲ್ಲ—ಇತ್ಯಾದಿ ವಿಷಯಗಳನ್ನು ಮತಾಂತರ ನಿರಸನಪೂರ್ವಕ ಉದ್ಧವನಿಗೆ ಹೇಳುವುದು.

ಭಗವಂತನು ಹೇಳಿದನು : ಉದ್ಧವ, ನನ್ನನ್ನು ಆಶ್ರಯನೆಂದು ನಂಬಿಕೊಂಡಿದ್ದು ನಾನು ಹೇಳಿದ [1]ಸ್ವಧರ್ಮಗಳಲ್ಲಿ ಅಪ್ರಮತ್ತನಾಗಿ, ಅವುಗಳಿಗೆ ವಿರೋಧವಾಗದಂತೆ ವರ್ಣಾಶ್ರಮ ಧರ್ಮಗಳನ್ನೂ ಕುಲಾಚಾರವನ್ನೂ ಫಲಾಸಕ್ತಿಯಿಲ್ಲದೆ ಆಚರಿಸಬೇಕು (೧). ಸ್ವಧರ್ಮಾಚರಣೆಯಿಂದ ವಿಶುದ್ಧಚಿತ್ತನಾಗಿ ವಿಷಯಾಪೇಕ್ಷಿಗಳಾದ ಇತರ ಜನರು ವಿಷಯಗಳಲ್ಲಿ ಸತ್ಯತ್ವಬುದ್ಧಿಯನ್ನಿಟ್ಟು ಮಾಡುವ ಸಕಲ ಕಾರ್ಯಗಳೂ ವಿರುದ್ಧ ಫಲವನ್ನು ಕೊಡುತ್ತಿರುವದನ್ನು ಗಮನಿಸಬೇಕು (೨). ಹೊರಗಡೆ ಅನೇಕ ವಸ್ತುಗಳಿವೆ ಎಂಬ ಯಾವ ಭೇದಾತ್ಮಕ ಬುದ್ಧಿಯುಂಟೋ ಅದು ಇಂದ್ರಿಯ ಗಳಿಂದ ಬಂದದ್ದರಿಂದಲೂ ನಾನಾತ್ಮಕವಾದ್ದರಿಂದಲೂ ಅರ್ಥಶೂನ್ಯವೆಂದು

1. ಪಾಂಚರಾತ್ರವೇ ಮೊದಲಾದ ವೈಷ್ಣವಾಗಮಗಳಲ್ಲಿ ಹೇಳಿದ ಧರ್ಮಗಳು ಇಲ್ಲಿ ಸ್ವಧರ್ಮಗಳು.

ನಿವೃತ್ತಂ ಕರ್ಮ ಸೇವೇತ ಪ್ರವೃತ್ತಂ ಮತ್ಪರಸ್ತ್ಯಜೇತ್ ।
ಜಿಜ್ಞಾಸಾಯಾಂ ಸಂಪ್ರವೃತ್ತೋ ನಾದ್ರಿಯೇತ್ ಕರ್ಮಚೋದನಾಂ ॥ ೪

ಯಮಾನಭೀಕ್ಷ್ಣಂ ಸೇವೇತ ನಿಯಮಾನ್ ಮತ್ಪರಃ ಕ್ವಚಿತ್ ।
ಮದಭಿಜ್ಞಂ ಗುರುಂ ಶಾಂತಮುಪಾಸೀತ ಮದಾತ್ಮಕಮ್ ॥ ೫

ಅಮಾನ್ಯಮತ್ಸರೋ ದಕ್ಷೋ ನಿರ್ಮಮೋ ದೃಢಸೌಹೃದಃ ।
ಅಸತ್ವರೋಽರ್ಥಜಿಜ್ಞಾಸುರನಸೂಯುರಮೋಘವಾಕ್ ॥ ೬

---

ತಿಳಿಯಬೇಕು ಮಲಗಿದವನಿಗೆ [1]ಕನಸಿನಲ್ಲಾಗುವ ವಿಷಯ ಜ್ಞಾನವೂ ಸುಮ್ಮನೆ ವಿಷಯವನ್ನೇ ಧ್ಯಾನಿಸತಕ್ಕವನಿಗೆ ಉಂಟಾಗುವ ಮನೋರಥವೂ ಹೇಗೆ ಅರ್ಥ ಶೂನ್ಯವೋ ಹಾಗೆ (೩). ನನ್ನ ಭಕ್ತನು ನಿವೃತ್ತವೆನಿಸುವ ನಿತ್ಯನೈಮಿತ್ತಿಕ ಕರ್ಮಗಳನ್ನು ಆಚರಿಸಬೇಕು. ಪ್ರವೃತ್ತವೆನಿಸುವ ಕಾಮ್ಯಕರ್ಮವನ್ನು ತ್ಯಜಿಸಬೇಕು. ಆತ್ಮವಿಚಾರದಲ್ಲಿ ಚೆನ್ನಾಗಿ ಪ್ರವೇಶಿಸಿದ ಮೇಲೆ ಕರ್ಮವಿಧಿಯನ್ನು ಆದರಿಸ ಬೇಕಾದ್ದಿಲ್ಲ—ಎಂದರೆ ನಿತ್ಯನೈಮಿತ್ತಿಕಕರ್ಮಗಳನ್ನು ಆಚರಿಸಬೇಕಾಗಿಲ್ಲ (೪). ನನ್ನ ಭಕ್ತನು ಅಹಿಂಸೆಯೇ ಮೊದಲಾದ ಯಮಗಳನ್ನು ಶ್ರದ್ಧೆಯಿಂದ ನಡೆಸಬೇಕು. ಶೌಚಾದಿನಿಯಮಗಳನ್ನಾದರೋ ಸೌಕರ್ಯವನ್ನನುಸರಿಸಿ ಯಥಾಶಕ್ತಿ ಪಾಲಿಸ ಬೇಕು. ಶಾಂತಸ್ವಭಾವದವನೂ ನನ್ನನ್ನು ಅರಿತಿರುವವನೂ ಆದ್ದರಿಂದಲೇ ಮತ್ಸ್ವರೂಪನೂ (ಭಗವತ್ಸ್ವರೂಪನೂ) ಆದ ಗುರುವನ್ನು ಶುಶ್ರೂಷಿಸಬೇಕು (೫). ಗುರುವಿನ ಶಿಷ್ಯನಾದವನು ಅಹಂಕಾರರಹಿತನೂ ಹೊಟ್ಟೆಕಿಚ್ಚು ಇಲ್ಲದವನೂ ಆಲಸ್ಯವಿಲ್ಲದವನೂ ಆಗಿರಬೇಕು. ವೈಯಕ್ತಿಕ ವಿಷಯಗಳಲ್ಲಿ ಅವನಿಗೆ ಮಮತೆ ಇರಬಾರದು. ಗುರುವಿನಲ್ಲಿ ಮಾತ್ರ ದೃಢವಾದ ಪ್ರೀತಿ ಇರಬೇಕು. ಕೆಲಸದಲ್ಲಿ ಗಡಿಬಿಡಿ ಮಾಡಬಾರದು. ಶಾಸ್ತ್ರಾರ್ಥವನ್ನು ತಿಳಿದುಕೊಳ್ಳಲು ಅಭಿಲಾಷೆ ಇರ ಬೇಕು. ಗುಣವನ್ನು ದೋಷವಾಗಿ ಭಾವಿಸುವ ಅಸೂಯೆ ಇರಬಾರದು. ಶಿಷ್ಯನು

---

1. ಸ್ವಪ್ನದಲ್ಲಿಯೂ, ಕಲ್ಪಿಸಿಕೊಂಡ ಮನೋರಥದಲ್ಲಿಯೂ ಬಾಹ್ಯವಸ್ತು ಇರುವು ದಿಲ್ಲ. ಇಂದ್ರಿಯ ಜನ್ಯವಾಗಿರುವುದೂ ನಾನಾತ್ಮಕವಾಗಿರುವುದೂ ಇದಕ್ಕೆ ಕಾರಣ. ಎಚ್ಚರದಲ್ಲಿ ಕಾಣುವ ವಸ್ತುವೂ ಪರಮಾರ್ಥದಲ್ಲಿ ಇಲ್ಲ. ಸ್ವಪ್ನದಂತೆ ಭ್ರಮೆಯಿಂದ ಎಚ್ಚರದಲ್ಲಿ ಕಾಣುತ್ತದೆ ಎಂದು ಅಭಿಪ್ರಾಯ. ಬ್ರಹ್ಮವು ಏಕವಾಗಿರುವಾಗ ನಾನಾ ವಸ್ತು ಕಂಡರೆ ಭ್ರಮೆಯೇ ಆಗುತ್ತದೆ.

ಜಾಯಾಪತ್ಯಗೃಹಕ್ಷೇತ್ರಸ್ವಜನದ್ರವಿಣಾದಿಷು ।
ಉದಾಸೀನಃ ಸಮಂ ಪಶ್ಯನ್ ಸರ್ವೇಷ್ವರ್ಥಮಿವಾತ್ಮನಃ ॥ ೭

ವಿಲಕ್ಷಣಃ ಸ್ಥೂಲಸೂಕ್ಷ್ಮಾದ್ ದೇಹಾದಾತ್ಮೇಕ್ಷಿತಾ ಸ್ವದೃಕ್ ।
ಯಥಾಗ್ನಿರ್ದಾರುಣೋ ದಾಹ್ಯಾದ್ ದಾಹಕೋಽನ್ಯಃ ಪ್ರಕಾಶಕಃ ॥ ೮

ನಿರೋಧೋತ್ಪತ್ತ್ಯಣು ಬೃಹನ್ನಾನಾತ್ವಂ ತತ್ಕೃತಾನ್ ಗುಣಾನ್ ।
ಅಂತಃಪ್ರವಿಷ್ಟ ಆಧತ್ತ ಏವಂ ದೇಹಗುಣಾನ್ ಪರಃ ॥ ೯

ಯೋಽಸೌ ಗುಣೈರ್ವಿರಚಿತೋ ದೇಹೋಽಯಂ ಪುರುಷಸ್ಯ ಹಿ ।
ಸಂಸಾರಸ್ತನ್ನಿಬಂಧೋಽಯಂ ಪುಂಸೋ ವಿದ್ಯಾಚ್ಛಿದಾತ್ಮನಃ ॥ ೧೦

---

ವ್ಯರ್ಥವಾಗಿ ಮಾತಾಡದೆ ಮಿತಭಾಷಿಯಾಗಿರಬೇಕು (೬). (ಆತ್ಮನು ಒಬ್ಬನೇ ಆದ್ದರಿಂದ) ತನಗಾಗುವ ಸುಖದುಃಖಾದಿಗಳೂ ಮಡದಿ ಮಕ್ಕಳು ಮನೆ ಹೊಲ ಬಂಧು ಧನ—ಮೊದಲಾದವುಗಳಿಗೆ ಸಂಬಂಧಿಸಿದವೂ ಸಮಾನವಾಗಿ ಇರುತ್ತವೆ—ಎಂಬುದನ್ನು ತಿಳಿದುಕೊಂಡು ಅವರ ವಿಷಯದಲ್ಲಿ ನಿರ್ಲಿಪ್ತನಾಗಿ ಗುರುಸೇವೆಮಾಡಿ ಕೊಂಡಿರಬೇಕು (೭). ದಾಹ್ಯವಾದ ಕಟ್ಟಿಗೆಗಿಂತ ದಾಹಕವೂ ಪ್ರಕಾಶಕವೂ ಆದ ಅಗ್ನಿಯು ಬೇರೆಯಷ್ಟೆ. ಹಾಗೆಯೇ ದ್ರಷ್ಟಾರನೂ ಸ್ವಪ್ರಕಾಶನೂ ಆದ ಆತ್ಮನು (ದೃಶ್ಯವೂ ಜಡವೂ ಆದ) ಸ್ಥೂಲಸೂಕ್ಷ್ಮ ದೇಹದ್ವಯಕ್ಕಿಂತ ವಿಲಕ್ಷಣನಾಗಿದ್ದಾನೆ (೮) ಅಗ್ನಿಯು ಕಟ್ಟಿಗೆಯಲ್ಲಿ ಸೇರಿ ಕಟ್ಟಿಗೆಯಲ್ಲಿರುವ ನಾಶ, ಉತ್ಪತ್ತಿ, ಅಲ್ಪತ್ವ, ಮಹತ್ವ, ನಾನಾತ್ವ—ಮುಂತಾದ ಕಟ್ಟಿಗೆಯ ಗುಣಗಳನ್ನು ಪಡೆದಂತೆ ಕಾಣಿಸುತ್ತದೆ. ಹಾಗೆಯೇ ಆತ್ಮನು ದೇಹದಲ್ಲಿರುವಾಗ ದೇಹಕ್ಕೆ ಸಂಭವಿಸುವ ನಾಶ, ಉತ್ಪತ್ತಿ ಮುಂತಾದ ಗುಣಗಳನ್ನು ಪಡೆದಂತೆ ಕಂಡುಬರುತ್ತಾನೆ (೯). ಮನುಷ್ಯನ ಸ್ಥೂಲಶರೀರವೂ ಸೂಕ್ಷ್ಮಶರೀರವೂ ಈಶ್ವರನಿಗೆ ಅಧೀನವಾದ ಮಾಯಾ ಗುಣಗಳಿಂದ ರಚಿತವಾಗಿದೆ. ಜೀವನಿಗೆ ಅಧ್ಯಾಸನಿಮಿತ್ತಕವಾದ ಈ ದೇಹ ಸಂಬಂಧದಿಂದ ಸಂಸಾರ ಉಂಟಾಗಿದೆ. [1]ಆತ್ಮವಿದ್ಯೆಯು ಈ ಸಂಸಾರವನ್ನು ಕತ್ತರಿಸಿ ಹಾಕುತ್ತದೆ (೧೦).

---

1. ಅಧ್ಯಾಸವೆಂದರೆ ಭ್ರಮೆ, ಅಜ್ಞಾನ. ಅದನ್ನು ಹೋಗಲಾಡಿಸತಕ್ಕದ್ದು ವಿದ್ಯೆಯೇ ಜ್ಞಾನವೇ, ಇನ್ನೊಂದಲ್ಲ.

ತಸ್ಮಾಜ್ಜಿಜ್ಞಾಸಯಾತ್ಮಾನಮಾತ್ಮಸ್ಥಂ ಕೇವಲಂ ಪರಮ್ ।
ಸಂಗಮ್ಯ ನಿರಸೇದೇತದ್ವಸ್ತುಬುದ್ಧಿಂ ಯಥಾಕ್ರಮಮ್ ॥ ೧೧

ಆಚಾರ್ಯೋಽರಣಿರಾದ್ಯಃ ಸ್ಯಾದಂತೇವಾಸ್ಯುತ್ತರಾರಣಿಃ ।
ತತ್ಸಂಧಾನಂ ಪ್ರವಚನಂ ವಿದ್ಯಾ ಸಂಧಿಃ ಸುಖಾವಹಃ ॥ ೧೨

ವೈಶಾರದೀ ಸಾತಿವಿಶುದ್ಧಬುದ್ಧಿ-
ರ್ಧುನೋತಿ ಮಾಯಾಂ ಗುಣಸಂಪ್ರಸೂತಾಮ್ ।
ಗುಣಾಂಶ್ಚ ಸಂದಹ್ಯ ಯದಾತ್ಮಮೇತತ್
ಸ್ವಯಂ ಚ ಶಾಮ್ಯತ್ಯಸಮಿದ್ ಯಥಾಗ್ನಿಃ ॥ ೧೩

ಅಥೈಷಾಂ ಕರ್ಮಕರ್ತೄಣಾಂ ಭೋಕ್ತೄಣಾಂ ಸುಖದುಃಖಯೋಃ ।
ನಾನಾತ್ವಮಥ ನಿತ್ಯತ್ವಂ ಲೋಕಕಾಲಾಗಮಾತ್ಮನಾಮ್ ॥ ೧೪

---

ಆದ್ದರಿಂದ ಅದ್ವಿತೀಯನೂ ದೇಹಾದಿಗಳಿಗಿಂತ ಭಿನ್ನನೂ ಆದ ಆತ್ಮನು ದೇಹದಲ್ಲಿದ್ದಾನೆಂದು ಚೆನ್ನಾಗಿ ತಿಳಿದುಕೊಂಡು, ' ಇದು ಸ್ಥೂಲಶರೀರ, ಇದು ಸೂಕ್ಷ್ಮಶರೀರ, ಇವೆಲ್ಲವೂ ಅನಿತ್ಯ ' ಎಂಬ ವಿಚಾರ ಕ್ರಮದಿಂದ ದೇಹೇಂದ್ರಿಯಾದಿಗಳಲ್ಲಿ ಆತ್ಮಬುದ್ಧಿಯನ್ನು ನಿರಸನ ಮಾಡಿಕೊಳ್ಳಬೇಕು (೧೧). ಆಚಾರ್ಯನು ಕೆಳಗಿರುವ [1]ಅಧರಾರಣಿ, ಶಿಷ್ಯನು ಉತ್ತರಾರಣಿ. ಗುರೂಪದೇಶವೇ ಸಂಧಾನವೆಂಬ ಮಂಥನ ಕಾಷ್ಠ. ಆತ್ಮವಿದ್ಯೆ ಇವುಗಳ ಸಂಧಿಯಾದಾಗ ಹುಟ್ಟುವ ಸುಖಕರವಾದ ಅಗ್ನಿ (೧೨). ಆತ್ಮವಿದ್ಯಾವಿಶಾರದನಿಂದ ಉಪದಿಷ್ಟವಾದ ಅತ್ಯಂತ ವಿಶುದ್ಧವಾದ ಜ್ಞಾನವು ಗುಣಕಾರ್ಯವಾದ ಮಾಯೆಯನ್ನು ದಹಿಸಿ, (ಸಂಸಾರಕ್ಕೆ ನಿಮಿತ್ತವಾದ) ಈ ದೇಹಾದಿ ಪ್ರಪಂಚಕ್ಕೆ ಕಾರಣಗಳಾದ ತ್ರಿಗುಣಗಳನ್ನು ಸುಟ್ಟುಹಾಕಿ, ನಿರಿಂಧನವಾದ ಅಗ್ನಿಯಂತೆ ಸ್ವಯಂ ಶಾಂತವಾಗುತ್ತದೆ (೧೩). ಒಂದು ವೇಳೆ ನೀನು ಹೀಗೆ [2]ಭಾವಿಸುವುದಾದರೆ, " ಕರ್ಮವನ್ನು ಮಾಡತಕ್ಕವರೂ ಸುಖದುಃಖ

---

1. ಆಚಾರ್ಯಃ ಪೂರ್ವರೂಪಮ್, ಅಂತೇವಾಸ್ಯುತ್ತರರೂಪಮ್, ವಿದ್ಯಾಸಂಧಿಃ, ಪ್ರವಚನಂ ಸಂಧಾನಮ್ ॥ —ತೈ. ಶಿಕ್ಷಾ ೩

2. ಇದು ಮೀಮಾಂಸಕರ ಮತ—ಜಗತ್ತು ನಿತ್ಯವೂ ಸತ್ಯವೂ ಆಗಿದೆ. ಜೀವಾತ್ಮರು ಅನಂತವಾಗಿದ್ದಾರೆ. ಸ್ವರ್ಗಾದಿಗಳು ನಿತ್ಯಸುಖವನ್ನು ಕೊಡುತ್ತವೆ. ಈಶ್ವರನಿಲ್ಲ. ಜೀವಾತ್ಮನಲ್ಲಿ ಜ್ಞಾನ ಹುಟ್ಟುತ್ತದೆ. ಆತ್ಮನು ಜ್ಞಾನಸ್ವರೂಪನಲ್ಲ—ಎಂದು. ಈ ಮತ ವನ್ನು ಮುಂದೆ ಖಂಡಿಸಲಾಗುತ್ತದೆ.

ಮನ್ಯಸೇ ಸರ್ವಭಾವಾನಾಂ ಸಂಸ್ಥಾ ಹ್ಯೌತ್ಪತ್ತಿಕೀ ಯಥಾ ।
ತತ್ತದಾಕೃತಿಭೇದೇನ ಜಾಯತೇ ಭಿದ್ಯತೇ ಚ ಧೀಃ ॥ ೧೫
ಏವಮಪ್ಯಂಗ ಸರ್ವೇಷಾಂ ದೇಹಿನಾಂ ದೇಹಯೋಗತಃ ।
ಕಾಲಾವಯವತಃ ಸಂತಿ ಭಾವಾ ಜನ್ಮಾದಯೋಽಸಕೃತ್ ॥ ೧೬
ಅತ್ರಾಪಿ ಕರ್ಮಣಾಂ ಕರ್ತುರಸ್ವಾತಂತ್ರ್ಯಂ ಚ ಲಕ್ಷ್ಯತೇ ।
ಭೋಕ್ತುಶ್ಚ ದುಃಖಸುಖಯೋಃ ಕೋನ್ವರ್ಥೋ ವಿವಶಂ ಭಜೇತ್ ॥ ೧೭
ನ ದೇಹಿನಾಂ ಸುಖಂ ಕಿಂಚಿದ್ ವಿದ್ಯತೇ ವಿದುಷಾಮಪಿ ।
ತಥಾ ಚ ದುಃಖಂ ಮೂಢಾನಾಂ ವೃಥಾಹಂಕರಣಂ ಪರಮ್ ॥ ೧೮

---

ಗಳನ್ನು ಭೋಗಿಸತಕ್ಕವರೂ ಜೀವಾತ್ಮರು. ಅವರು ಬೇರೆಬೇರೆಯಾಗಿ ಅನಂತ ಸಂಖ್ಯೆಯಲ್ಲಿದ್ದಾರೆ. ಭೋಗಸ್ಥಾನಗಳಾದ ಸ್ವರ್ಗಾದಿ ಲೋಕಗಳೂ ಭೋಗಕಾಲವೂ ಭೋಗೋಪಾಯವನ್ನು ತಿಳಿಸಿಕೊಡುವ ವೇದವೂ ಭೋಗವನ್ನನುಭವಿಸುವ ಜೀವಾತ್ಮರೂ ನಿತ್ಯರು (೧೪). ಸಕಲವಸ್ತುಗಳೂ ಔತ್ಪತ್ತಿಕವಾದವು—ಎಂದರೆ—ಪ್ರವಾಹದಂತೆ ನಿತ್ಯವಾದವು ಘಟಪಟಾದ್ಯಾಕೃತಿ ಭೇದವನ್ನನುಸರಿಸಿ ಭಿನ್ನ ಭಿನ್ನವಾದ ಜ್ಞಾನವು (ಆತ್ಮನಲ್ಲಿ) ಹುಟ್ಟುತ್ತದೆ. (ಆದ್ದರಿಂದ ಪ್ರವೃತ್ತಿ ಮಾರ್ಗವೇ ಶ್ರೇಯಸ್ಕರ)"ಎಂದು (೧೫). ಉದ್ಧವ,(ಈ ಮೀಮಾಂಸಕ ಮತವು ಸಮಂಜಸವಲ್ಲ. ಏಕೆಂದರೆ ಎಲ್ಲ ಜೀವರಿಗೂ ಭೋಗಕ್ಕಾಗಿ ದೇಹಗಳ ಸಂಬಂಧವಾಗಬೇಕಲ್ಲವೆ? ಕಾಲವು ನಿತ್ಯವಾದರೂ ಸಂವತ್ಸರ, ಮಾಸ—ಮುಂತಾದ ಅವಯವ ಭೇದಗಳಿವೆ. ಏವಂಚ, ದೇಹಗಳಿಗೆ ಈ ಕಾಲಾವಯವಗಳ ಸಂಬಂಧದಿಂದ ಜನ್ಮಾದಿಷಡ್‌ಭಾವ ವಿಕಾರಗಳು ಮತ್ತೆ ಮತ್ತೆ ಆಗುತ್ತಲೇ ಇರುತ್ತವೆ (ದೇಹವು ನಿತ್ಯವಲ್ಲವೆಂದು ಸಿದ್ಧವಾಯಿತು) (೧೬). ಈ ಮೀಮಾಂಸಕಮತದಲ್ಲಿ ಕರ್ಮವನ್ನು ಮಾಡುವ ಜೀವನು ಸ್ವತಂತ್ರನಲ್ಲವೆಂದು ಗೊತ್ತಾಗುತ್ತದೆ (ಸ್ವತಂತ್ರನಾಗಿದ್ದರೆ ದುಃಖ ಜನಕವಾದ ದುಷ್ಕರ್ಮವನ್ನು ಮಾಡುತ್ತಿರಲಿಲ್ಲ) ಸುಖದುಃಖಗಳನ್ನು ಭೋಗಿಸುವುದಕ್ಕೂ ಅವನು ಸ್ವತಂತ್ರನಲ್ಲ (ಸ್ವತಂತ್ರನಾಗಿದ್ದರೆ ದುಃಖವನ್ನು ಭೋಗಿಸುತ್ತಿರಲಿಲ್ಲ ) ಹೀಗೆ ಅಸ್ವತಂತ್ರನಾದ ಜೀವನಿಗೆ ಯಾವ ಪುರುಷಾರ್ಥವು [1]ಲಭಿಸೀತು ! (೧೭). ಕರ್ಮಕುಶಲರಾದ ವಿದ್ವಾಂಸರಿಗೂ ಸಹ ಸುಖವಿಲ್ಲದಿರುವುದೂ

1. ಸ್ವಾತಂತ್ರ್ಯವಿಲ್ಲದವನಿಗೆ ನಿತ್ಯ ಸುಖವಿಲ್ಲ. ಈ ದೋಷವು ವೇದಾಂತಿಮತದಲ್ಲಿಲ್ಲವೆಂಬುದು ಮುಂದೆ ಗೊತ್ತಾಗುತ್ತದೆ.

**ಯದಿ ಪ್ರಾಪ್ತಿಂ ವಿಘಾತಂ ಚ ಜಾನಂತಿ ಸುಖದುಃಖಯೋಃ ।**
**ತೇऽಪ್ಯದ್ಧಾ ನ ವಿದುರ್ಯೋಗಂ ಮೃತ್ಯುರ್ನ ಪ್ರಭವೇದ್ ಯಥಾ ॥ ೧೯**

**ಕೋನ್ವರ್ಥಃ ಸುಖಯತ್ಯೇನಂ ಕಾಮೋ ವಾ ಮೃತ್ಯುರಂತಿಕೇ ।**
**ಆಘಾತಂ ನೀಯಮಾನಸ್ಯ ವಧ್ಯಸ್ಯೇವ ನ ತುಷ್ಟಿದಃ ॥ ೨೦**

**ಶ್ರುತಂ ಚ ದೃಷ್ಟವದ್ದುಷ್ಟಂ ಸ್ಪರ್ಧಾಸೂಯಾತ್ಯಯವ್ಯಯೈಃ ।**
**ಬಹ್ವಂತರಾಯಕಾಮತ್ವಾತ್ ಕೃಷಿವಚ್ಚಾಪಿ ನಿಷ್ಫಲಮ್ ॥ ೨೧**

**ಅಂತರಾಯೈರವಿಹತೋ ಯದಿ ಧರ್ಮಃ ಸ್ವನುಷ್ಠಿತಃ ।**
**ತೇನಾಪಿ ನಿರ್ಜಿತಂ ಸ್ಥಾನಂ ಯಥಾ ಗಚ್ಛತಿ ತಚ್ಛೃಣು ॥ ೨೨**

---

ಮೂಢರಿಗೆ ದುಃಖವಿಲ್ಲದಿರುವುದೂ ಕಂಡುಬರುತ್ತದೆ. ಆದ್ದರಿಂದ (ಬುದ್ಧಿ ಇದ್ದರೆ ದುಃಖವನ್ನು ತಪ್ಪಿಸಿಕೊಳ್ಳಬಹುದು)–ಎಂಬುದು ವ್ಯರ್ಥವಾದ ಅಹಂಕಾರವೇ ಸರಿ (೧೮). ಸುಖದುಃಖಗಳು ಯಾವಾಗ ಬರುತ್ತವೆ, ಯಾವಾಗ ಹೋಗುತ್ತವೆ—ಎಂಬುದು ಯಾರಿಗೂ ಗೊತ್ತಿಲ್ಲ. ಒಂದು ವೇಳೆ ಯಾರಿಗಾದರೂ ಗೊತ್ತಿದ್ದರೂ ಸಾವು ಬರದೇ ಇರುವುದಕ್ಕೆ ಉಪಾಯವೇನೆಂಬುದನ್ನು ಯಾರೂ ತಿಳಿದಿಲ್ಲ (೧೯). ಸಮೀಪದಲ್ಲಿ ಮೃತ್ಯು ಕಾದಿದೆ ಎಂದು ತಿಳಿದಿರುವಾಗ ಯಾವ ವಿವೇಕಿಗೆ ತಾನೇ ಯಾವ ಪದಾರ್ಥವು, ಯಾವ ಇಷ್ಟಾರ್ಥಲಾಭವು ಸುಖವನ್ನು ಕೊಟ್ಟೀತು? ಗಲ್ಲುಹಾಕುವ ತಾಣಕ್ಕೆ ಎಳೆದೊಯ್ಯುತ್ತಿರುವಾಗ ವಧ್ಯನಾದ ಅಪರಾಧಿಗೆ ಯಾವ ಭೋಗವಸ್ತುವೂ ಸುಖವನ್ನು ನೀಡುವುದಿಲ್ಲ (೨೦). (ಈ ಲೋಕದಲ್ಲಿ ಸುಖವಿಲ್ಲವೆಂದಾಯಿತು. ಸ್ವರ್ಗದಲ್ಲಿಯೂ ಹಾಗೆಯೇ) ಶ್ರುತವಾಗಿರುವ ಪರಲೋಕವೂ ಸಹ ದೃಷ್ಟವಾದ ಈ ಲೋಕದಂತೆಯೇ ದೋಷದಿಂದ ಕೂಡಿದೆ. ಪರಲೋಕದಲ್ಲಿಯೂ ಅನ್ಯರ ಸುಖವನ್ನು ನೋಡಿ ಸ್ಪರ್ಧೆ, ಪರರ ಸುಖಾತಿಶಯವನ್ನು ನೋಡಿ ಅಸೂಯೆ, ತನ್ನ ಪುಣ್ಯದ ಕ್ಷಯದಿಂದ ದುಃಖ—ಇತ್ಯಾದಿಗಳು ಇದ್ದೇ ಇರುತ್ತವೆ. ಅಲ್ಲದೆ ಪರಲೋಕ ಸುಖಕ್ಕೆ ಸಾಧನಗಳಾದ ಯಾಗಾದಿಗಳಿಗೆ ಕೃಷಿಯಂತೆ ನಾನಾ ವಿಘ್ನಗಳಿರುವುದರಿಂದ ದುಃಖಬಾಹುಲ್ಯದ ಕಾರಣ ಪರಲೋಕವೂ ನಿಷ್ಫಲ (೨೧). ಒಂದು ವೇಳೆ ವಿಘ್ನಗಳನ್ನು ಪರಿಹರಿಸಿಕೊಂಡು ಯಾಗಾದಿ ಧರ್ಮಕಾರ್ಯವನ್ನು ಸಾಂಗವಾಗಿ ನೆರವೇರಿಸಿ ಪರಲೋಕವನ್ನು ಸಾಧಿಸಿಕೊಂಡರೂ ಅದು ಹೇಗೆ ನಶಿಸಿಹೋಗುತ್ತದೆ–

ಇಷ್ಟ್ವೇಹ ದೇವತಾ ಯಜ್ಞೈಃ ಸ್ವರ್ಲೋಕಂ ಯಾತಿ ಯಾಜ್ಞಿಕಃ ।
ಭುಂಜೀತ ದೇವವತ್ತತ್ರ ಭೋಗಾನ್ ದಿವ್ಯಾನ್ ನಿಜಾರ್ಜಿತಾನ್ ॥ ೨೩

ಸ್ವಪುಣ್ಯೋಪಚಿತೇ ಶುಭ್ರೇ ವಿಮಾನ ಉಪಗೀಯತೇ ।
ಗಂಧರ್ವೈರ್ವಿಹರನ್ ಮಧ್ಯೇ ದೇವೀನಾಂ ಹೃದ್ಯವೇಷಧೃಕ್ ॥ ೨೪

ಸ್ತ್ರೀಭಿಃ ಕಾಮಗಯಾನೇನ ಕಿಂಕಿಣೀಜಾಲಮಾಲಿನಾ ।
ಕ್ರೀಡನ್ ನ ವೇದಾತ್ಮಪಾತಂ ಸುರಾಕ್ರೀಡೇಷು ನಿರ್ವೃತಃ ॥ ೨೫

ತಾವತ್ ಪ್ರಮೋದತೇ ಸ್ವರ್ಗೇ ಯಾವತ್ ಪುಣ್ಯಂ ಸಮಾಪ್ಯತೇ ।
ಕ್ಷೀಣಪುಣ್ಯಃ ಪತತ್ಯರ್ವಾಗನಿಚ್ಛನ್ ಕಾಲಚಾಲಿತಃ ॥ ೨೬

ಯದ್ಯಧರ್ಮರತಃ ಸಂಗಾದಸತಾಂ ವಾಽಜಿತೇಂದ್ರಿಯಃ ।
ಕಾಮಾತ್ಮಾ ಕೃಪಣೋ ಲುಬ್ಧಃ ಸ್ತ್ರೈಣೋ ಭೂತವಿಹಿಂಸಕಃ ॥ ೨೭

---

ಎಂಬುದನ್ನು ಕೇಳು (೨೨): ಯಜ್ಞಗಳಿಂದ ಇಂದ್ರಾದಿ ದೇವತೆಗಳನ್ನು ಅರ್ಚಿಸಿ ಯಾಜ್ಞಿಕನು ಸ್ವರ್ಗಲೋಕಕ್ಕೆ ಹೋಗುತ್ತಾನೆ. ತಾನು ಸಂಪಾದಿಸಿದ ದಿವ್ಯ ಭೋಗಗಳನ್ನು ದೇವತೆಗಳಂತೆ ಅಲ್ಲಿ ಅನುಭವಿಸಿಯಾನು. ತನ್ನ ಪುಣ್ಯಬಲದಿಂದ ಸರ್ವಭೋಗ ಸಂಪನ್ನವಾದ ಶುಭ್ರ ವಿಮಾನದಲ್ಲಿ ಸುಂದರವಾದ ವೇಷವನ್ನು ಧರಿಸಿ ಅಪ್ಸರೆಯರ ನಡುವೆ ವಿಹರಿಸುತ್ತ ಗಂಧರ್ವರಿಂದ ಸ್ತುತಿಸಲ್ಪಡುತ್ತಾನೆ! (೨೩-೨೪). ಕಿರುಗೆಜ್ಜೆಗಳ ಮಾಲೆಗಳಿಂದ ಭೂಷಿತವಾದ ಕಾಮಗಾಮಿ ವಿಮಾನದಲ್ಲಿ ಕುಳಿತು ಸ್ತ್ರೀಯರೊಡನೆ ನಂದನಾದಿ ಕ್ರೀಡಾಸ್ಥಳಗಳಲ್ಲಿ ವಿಹರಿಸುತ್ತ ಸುಖಿಸುವನು. ಈ ಯಾಜ್ಞಿಕನು ತಾನು ಕೆಳಗೆ ಬೀಳುತ್ತೇನೆಂಬುದನ್ನು ಅರಿಯುವುದಿಲ್ಲ! (೨೫). ಈತನ ಪುಣ್ಯವು ಮುಗಿಯುವವರೆಗೂ ಸ್ವರ್ಗದಲ್ಲಿ ಪ್ರಮೋದಿಸುತ್ತಾನೆ. ಪುಣ್ಯವು ಮುಗಿದೊಡನೆ ಕಾಲವು ಇವನನ್ನು ತಳ್ಳಿಬಿಡುತ್ತದೆ. ಇಚ್ಛೆ ಇಲ್ಲದಿದ್ದರೂ ಯಾಜ್ಞಿಕನು ಕೆಳಗೆ ಭೂಲೋಕಕ್ಕೆ ಬೀಳುತ್ತಾನೆ (೨೬). (ಧರ್ಮಪ್ರವೃತ್ತಿಗೆ ಈ ಸ್ಥಿತಿಯಾದರೆ, ಅಧರ್ಮ ಪ್ರವೃತ್ತಿಗೆ ಮುಂದಿನ ಗತಿ) ಇನ್ನೊಬ್ಬನು ಅಜಿತೇಂದ್ರಿಯನಾದ್ದರಿಂದಲೋ ದುರ್ಜನರ ಸಂಗದಿಂದಲೋ ಅಧರ್ಮರತನಾಗುತ್ತಾನೆ. ಅವನು ಕಾಮಾತ್ಮನೂ ಕೃಪಣನೂ ಭೋಗತೃಷ್ಣೆಯಿಂದ ಆಕುಲನೂ ಸ್ತ್ರೀಲಂಪಟನೂ ಪ್ರಾಣಿಹಿಂಸಕನೂ ಆಗುತ್ತಾನೆ. ವಿಧಿವಿರುದ್ಧವಾಗಿ ಪ್ರಾಣಿಗಳನ್ನೇ ಕೊಂದು ಭೂತಪ್ರೇತ ಗಣಗಳನ್ನು ಪೂಜಿಸುತ್ತಾನೆ. ಅಂಥವನು ಬೇರೆ ಗತಿಯೇ

**ಪಶೂನವಿಧಿನಾಽಽಲಭ್ಯ ಪ್ರೇತಭೂತಗಣಾನ್ ಯಜನ್ ।**
**ನರಕಾನವಶೋ ಜಂತುರ್ಗತ್ವಾ ಯಾತ್ಯುಲ್ಬಣಂ ತಮಃ ॥ ೨೮**

**ಕರ್ಮಾಣಿ ದುಃಖೋದರ್ಕಾಣಿ ಕುರ್ವನ್ ದೇಹೇನ ತೈಃ ಪುನಃ ।**
**ದೇಹಮಾಭಜತೇ ತತ್ರ ಕಿಂ ಸುಖಂ ಮರ್ತ್ಯಧರ್ಮಿಣಃ ॥ ೨೯**

**ಲೋಕಾನಾಂ ಲೋಕಪಾಲಾನಾಂ ಮದ್ಭಯಂ ಕಲ್ಪಜೀವಿನಾಮ್ ।**
**ಬ್ರಹ್ಮಣೋಽಪಿ ಭಯಂ ಮತ್ತೋ ದ್ವಿಪರಾರ್ಧಪರಾಯುಷಃ ॥ ೩೦**

**ಗುಣಾಃ ಸೃಜಂತಿ ಕರ್ಮಾಣಿ ಗುಣೋಽನುಸೃಜತೇ ಗುಣಾನ್ ।**
**ಜೀವಸ್ತು ಗುಣಸಂಯುಕ್ತೋ ಭುಂಕ್ತೇ ಕರ್ಮಫಲಾನ್ಯಸೌ ॥ ೩೧**

**ಯಾವತ್ ಸ್ಯಾದ್ ಗುಣವೈಷಮ್ಯಂ ತಾವನ್ನಾನಾತ್ವಮಾತ್ಮನಃ ।**
**ನಾನಾತ್ವಮಾತ್ಮನೋ ಯಾವತ್ ಪಾರತಂತ್ರ್ಯಂ ತದೈವ ಹಿ ॥ ೩೨**

---

ಇಲ್ಲದೆ ನರಕವನ್ನನುಭವಿಸಿ ಉಲ್ಬಣವಾದ ತಮೋಗುಣವುಳ್ಳ ಸ್ಥಾವರ ಜನ್ಮವನ್ನು ಪಡೆಯುತ್ತಾನೆ (೨೭-೨೮). ಹೀಗೆ ಈ ದೇಹದಿಂದ ದುಃಖಫಲಕಗಳಾದ ಕರ್ಮಗಳನ್ನು ಮಾಡುತ್ತ, ಆ ಕರ್ಮಗಳ ಫಲವಾಗಿ ಮತ್ತೆ ದೇಹವನ್ನು ಪಡೆಯುತ್ತ ಇರುತ್ತಾನೆ ಈ ರೀತಿ ಹುಟ್ಟು ಸಾವುಗಳನ್ನನುಭವಿಸುವ ಜೀವಿಗೆ ಯಾವ [1]ಸುಖವಿದೆ ? (೨೯). ಸ್ವರ್ಗಾದಿಲೋಕಗಳೂ ಲೋಕಪಾಲಕರೂ ಒಂದು ಕಲ್ಪದ ವರೆಗೆ ಜೀವಿಸುತ್ತಾರೆ ಬ್ರಹ್ಮನಿಗೆ ಎರಡು ಪರಾರ್ಧಗಳ ಕಾಲವೇ ಪರಮಾಯುಸ್ಸು. ಇವರೆಲ್ಲರಿಗೂ ನನ್ನಿಂದ ಭಯವುಂಟು ! (೩೦). ಇಂದ್ರಿಯಗಳು ಕರ್ಮಗಳನ್ನು ನಡೆಸುತ್ತವೆ (ಆತ್ಮನಲ್ಲ). ಜೀವನು ಇಂದ್ರಿಯಗಳೊಡನೆ ಸೇರಿ - ಎಂದರೆ—ಅವುಗಳಲ್ಲಿ ನಾನೆಂಬ ಅಭಿಮಾನವನ್ನು ತಾಳಿ ಕರ್ಮಫಲಗಳನ್ನು [2]ಅನುಭವಿಸುತ್ತಾನೆ (೩೧). ತ್ರಿಗುಣಗಳ ವೈಷಮ್ಯದಿಂದಾದ ಅಹಂಕಾರಾದಿಗಳು ಇರುವವರೆಗೆ ಆತ್ಮನ ನಾನಾತ್ವವು ಕಂಡುಬರುತ್ತದೆ. ಆತ್ಮನಿಗೆ ನಾನಾತ್ವವು ಇರುವವರೆಗೆ ಪಾರತಂತ್ರ್ಯವೂ ಇರುತ್ತದೆ. ಎಲ್ಲಿಯವರೆಗೆ ಪಾರತಂತ್ರ್ಯವಿರುತ್ತದೆಯೋ ಅಲ್ಲಿಯವರೆಗೆ ಈಶ್ವರನಿಂದ

---

1. ಪ್ರವೃತ್ತಿ ಮಾರ್ಗದಲ್ಲಿ ಸುಖವಿಲ್ಲ. ಮೀಮಾಂಸಕರ ಹೇಳಿಕೆ ಹುರುಳಿಲ್ಲದ್ದು— ಎಂದು ಅಭಿಪ್ರಾಯ.

2. ಜೀವಾತ್ಮನಿಗೆ ಕರ್ತೃತ್ವಭೋಕ್ತೃತ್ವಗಳು ಔಪಾಧಿಕವಾಗಿ ತೋರುತ್ತವೆಯೇ ಹೊರತು, ಪರಮಾರ್ಥದಲ್ಲಿ ಇಲ್ಲ.

ಯಾವದಸ್ಯಾಸ್ವತಂತ್ರತ್ವಂ ತಾವದೀಶ್ವರತೋ ಭಯಮ್ ।
ಯ ಏತತ್ ಸಮುಪಾಸೀರಂಸ್ತೇ ಮುಹ್ಯಂತಿ ಶುಚಾರ್ಪಿತಾಃ ॥ ೩೩

ಕಾಲ ಆತ್ಮಾಽಽಗಮೋ ಲೋಕಃ ಸ್ವಭಾವೋ ಧರ್ಮ ಏವ ಚ ।
ಇತಿ ಮಾಂ ಬಹುಧಾ ಪ್ರಾಹುರ್ಗುಣವ್ಯತಿಕರೇ ಸತಿ ॥ ೩೪

ಉದ್ಧವ ಉವಾಚ—

ಗುಣೇಷು ವರ್ತಮಾನೋಽಪಿ ದೇಹಜೇಷ್ವನಪಾವೃತಃ ।
ಗುಣೈರ್ನ ಬಧ್ಯತೇ ದೇಹೀ ಬಧ್ಯತೇ ವಾ ಕಥಂ ವಿಭೋ ॥ ೩೫

ಕಥಂ ವರ್ತೇತ ವಿಹರೇತ್ ಕೈರ್ವಾ ಜ್ಞಾಯೇತ ಲಕ್ಷಣೈಃ ।
ಕಿಂ ಭುಂಜೀತೋತ ವಿಸೃಜೇಚ್ಛಯೀತಾಸೀತ ಯಾತಿ ವಾ ॥ ೩೬

---

ಭಯವುಂಟು! ಆದ್ದರಿಂದ, ಉದ್ಧವ, ಯಾರು ಗುಣವೈಷಮ್ಯದಿಂದಾಗುವಕರ್ಮವನ್ನೂ ಭೋಗವನ್ನೂ ಆಶ್ರಯಿಸುತ್ತಾರೋ ಅವರು ಶೋಕದಿಂದ ಓತಪ್ರೋತರಾಗಿ ದಿಕ್ಕು ಕಾಣದವರಾಗುತ್ತಾರೆ (೩೨-೩೩). ಮಾಯಾಗುಣದಿಂದ ಕ್ಷೋಭೆಯುಂಟಾದಾಗ ನನ್ನನ್ನೇ ಕಾಲ, ಜೀವಾತ್ಮ, ವೇದ, ಲೋಕ, ಸ್ವಭಾವ, ಧರ್ಮ—ಎಂದು ಬಹುಪ್ರಕಾರ ವಾಗಿ [1]ವ್ಯವಹರಿಸುತ್ತಾರೆ (ನನಗೆ ವ್ಯತಿರಿಕ್ತವಾದ ಇನ್ನೊಂದು ವಸ್ತುವೇ ಇಲ್ಲ) " ಎಂದನು (೩೪). ಆಗ ಉದ್ಧವನು " ಹೇ ಪ್ರಭು, ದೇಹಿಯಾದ ಆತ್ಮನು ಸತ್ತ್ವಾದಿ ಗುಣಗಳ ನಡುವೆ ಇದ್ದರೂ ಗುಣಕಾರ್ಯವಾದ ದೇಹದಿಂದ ಉಂಟಾದ ಕರ್ಮಸುಖಾದಿ ಗಳಲ್ಲಿ ಗುಣಗಳಿಂದ ಬದ್ಧನಾಗಲಾರನು ಏಕೆಂದರೆ, ಆತ್ಮನು (ಆಕಾಶದಂತೆ) ಅನಾವೃತನಾಗಿದ್ದಾನೆ. ಅವನು ಹೇಗೆ ಬಂಧನಕ್ಕೆ ಒಳಗಾಗುತ್ತಾನೆ? (೩೫). (ಗುಣಗಳಿಂದ ಬಂಧನವಾಗುತ್ತದೆಯೆಂದೂ ಬಂಧನದಿಂದ ಮುಕ್ತನಾಗುತ್ತಾನೆಂದೂ ಹೇಳುವ ಪಕ್ಷದಲ್ಲಿ) ಮುಕ್ತನಾದವನು ಹೇಗೆ ವಿಹರಿಸುತ್ತಾನೆ? ಯಾವ ಲಕ್ಷಣ ಗಳಿಂದ ಅವನು ಮುಕ್ತನೆಂದು ಅರಿಯಬಹುದು? ಆತನ ಭೋಜನ, ವಿಸರ್ಜನ,

---

1. ಇಲ್ಲಿಗೆ ಮೀಮಾಂಸಕರ ಎಲ್ಲ ಹೇಳಿಕೆಗಳನ್ನೂ ಖಂಡಿಸಿದ್ದಾಯಿತು.

ಏತದಚ್ಯುತ ಮೇ ಬ್ರೂಹಿ ಪ್ರಶ್ನಂ ಪ್ರಶ್ನವಿದಾಂ ವರ ।
ನಿತ್ಯಮುಕ್ತೋ ನಿತ್ಯಬದ್ಧ ಏಕ ಏವೇತಿ ಮೇ ಭ್ರಮಃ ॥ ೩೭

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ದಶಮಾಧ್ಯಾಯಃ



ಶಯನ, ಆಸನ, ಗಮನ—ಇವು ಹೇಗೆ ನಡೆಯುತ್ತವೆ ? (೩೬). ಈ ಪ್ರಶ್ನೆಗಳಿಗೆ ಉತ್ತರ ಹೇಳು. ಹೇ ಅಚ್ಯುತ, ಇವುಗಳಿಗೆ ಉತ್ತರವನ್ನು ತಿಳಿದು ಹೇಳಬಲ್ಲವರಲ್ಲಿ ನೀನೇ ಶ್ರೇಷ್ಠನಾಗಿದ್ದೀಯೆ. ಮತ್ತು ಒಬ್ಬನೇ ಆತ್ಮನೆಂದು ಹೇಳಿದ್ದೀಯೆ. (ಅನಾದಿ ಗುಣಸಂಬಂಧದಿಂದ) ಅವನು ನಿತ್ಯಬದ್ಧನೆನ್ನಬೇಕಾಗುತ್ತದೆ. (ಆಗ ಮೋಕ್ಷವು ಘಟಿಸುವುದಿಲ್ಲ. ಅಥವಾ ಮೋಕ್ಷವು ನಿತ್ಯವಾದ್ದರಿಂದ) ಆತನು ನಿತ್ಯಮುಕ್ತನೆನ್ನಬೇಕಾಗುತ್ತದೆ. ಈ ವಿಷಯದಲ್ಲಿ ನನಗೆ ಭ್ರಮೆಯಾಗಿ ತಲೆ ಸುತ್ತುತ್ತದೆ! ” ಎಂದು ಹೇಳಿದನು (೩೭).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಹತ್ತನೆಯ ಅಧ್ಯಾಯ



# ಏಕಾದಶಾಧ್ಯಾಯಃ

ಶ್ರೀ ಭಗವಾನುವಾಚ—

ಬದ್ಧೋ ಮುಕ್ತ ಇತಿ ವ್ಯಾಖ್ಯಾ ಗುಣತೋ ಮೇ ನ ವಸ್ತುತಃ ।
ಗುಣಸ್ಯ ಮಾಯಾಮೂಲತ್ವಾನ್ನ ಮೇ ಮೋಕ್ಷೋ ನ ಬಂಧನಮ್ ॥ ೧

ಶೋಕಮೋಹೌ ಸುಖಂ ದುಃಖಂ ದೇಹಾಪತ್ತಿಶ್ಚ ಮಾಯಯಾ ।
ಸ್ವಪ್ನೋ ಯಥಾಽಽತ್ಮನಃ ಖ್ಯಾತಿಃ ಸಂಸೃತಿರ್ನ ತು ವಾಸ್ತವೀ ॥ ೨

ವಿದ್ಯಾವಿದ್ಯೇ ಮಮ ತನೂ ವಿದ್ಧ್ಯುದ್ಧವ ಶರೀರಿಣಾಮ್ ।
ಮೋಕ್ಷಬಂಧಕರೀ ಆದ್ಯೇ ಮಾಯಯಾ ಮೇ ವಿನಿರ್ಮಿತೇ ॥ ೩

## ಅಧ್ಯಾಯ ೧೧

ಶ್ರೀಕೃಷ್ಣನು ಉದ್ಧವನಿಗೆ ಬೋಧಿಸುವುದು—ಬದ್ಧರ ಮತ್ತು ಮುಕ್ತರ ಲಕ್ಷಣ.
ಸಾಧುಗಳ ಸ್ವಭಾವ. ಭಕ್ತಿಯ ಲಕ್ಷಣ.

ಭಗವಂತನು ಹೇಳಿದನು : ಇವನು ಬದ್ಧ, ಮುಕ್ತ—ಎಂದು ಹೇಳುವುದು ನನಗೆ ಅಧೀನವಾದ ಸತ್ತ್ವಾದಿಗುಣದ ಉಪಾಧಿಯಿಂದ. ವಸ್ತುತಃ ಬಂಧ, ಮೋಕ್ಷ-ಎಂಬುದಿಲ್ಲ. ಈ ಸತ್ತ್ವಾದಿಗುಣವಾದರೋ ಮಾಯೆಯಿಂದುಂಟಾದದ್ದು. (ಆದ್ದರಿಂದಲೇ ಮಾಯಾನಿಯಾಮಕನಾದ) ನನಗೆ ಬಂಧವೂ ಇಲ್ಲ, ಮೋಕ್ಷವೂ [1]ಇಲ್ಲ (೧). ಶೋಕ, ಮೋಹ, ಸುಖ, ದುಃಖ, ದೇಹದ ಉತ್ಪತ್ತಿ-ಇವೆಲ್ಲವೂ ಮಾಯೆಯಿಂದ ತೋರಿಬರುತ್ತವೆ. ಸ್ವಪ್ನದಲ್ಲಿ ತನ್ನ ಬುದ್ಧಿಯೇ ಹೇಗೆ ರೂಪಾಂತರಗೊಂಡು ನಿಮಿತ್ತವಿಲ್ಲದೆಯೇ ಸುಖದುಃಖಾದಿ ರೂಪದಲ್ಲಿ ಪರಿಣಮಿಸಿರುತ್ತದೆಯೋ, ಹಾಗೆ ಜಗತ್ತಿನಲ್ಲಿ ಕಾಣುವ ಶೋಕಾದಿಗಳೆಲ್ಲವೂ ಬುದ್ಧಿ ವಿಪರಿಣಾಮಗಳು, ವಾಸ್ತವವಾದವುಗಳಲ್ಲ. ಆದ್ದರಿಂದ ಈ ಸಂಸಾರವು ಸತ್ಯವಲ್ಲ. (೨). ವಿದ್ಯೆ, ಅವಿದ್ಯೆ—ಇವು ನನ್ನ ಎರಡು ಶಕ್ತಿಗಳೆಂದು ತಿಳಿ. ಇವು ನನ್ನ ಮಾಯೆಯಿಂದಲೇ ನಿರ್ಮಿತವಾದ ಬುದ್ಧಿವೃತ್ತಿಗಳು. ಇವು ಅನಾದಿ

---

1. ಬಂಧ, ಮೋಕ್ಷ— ಎಂಬ ವ್ಯವಹಾರವು ಮಾಯೆಯಿಂದ ಬಂದದ್ದು. ಪರಮಾರ್ಥದಲ್ಲಿ ಬಂಧವೂ ಇಲ್ಲ, ಬಂಧವಿಲ್ಲದ್ದರಿಂದ ಮೋಕ್ಷವೂ ಇಲ್ಲ. ಮಾಯೆಗೊಳಗಾಗದಿರುವ ನಾನೇ ಅದಕ್ಕೆ ಉದಾಹರಣೆ—ಎಂದು ಅಭಿಪ್ರಾಯ.

ಏಕಸ್ಯೈವ ಮಮಾಂಶಸ್ಯ ಜೀವಸ್ಯೈವ ಮಹಾಮತೇ ।
ಬಂಧೋಽಸ್ಯಾವಿದ್ಯಯಾನಾದಿರ್ವಿದ್ಯಯಾ ಚ ತಥೇತರಃ ॥ ೪

ಅಥ ಬದ್ಧಸ್ಯ ಮುಕ್ತಸ್ಯ ವೈಲಕ್ಷಣ್ಯಂ ವದಾಮಿ ತೇ ।
ವಿರುದ್ಧಧರ್ಮಿಣೋಸ್ತಾತ ಸ್ಥಿತಯೋರೇಕಧರ್ಮಿಣಿ ॥ ೫

ಸುಪರ್ಣಾವೇತೌ ಸದೃಶೌ ಸಖಾಯೌ
ಯದೃಚ್ಛಯೈತೌ ಕೃತನೀಡೌ ಚ ವೃಕ್ಷೇ ।
ಏಕಸ್ತಯೋಃ ಖಾದತಿ ಪಿಪ್ಪಲಾನ್ನ-
ಮನ್ಯೋ ನಿರನ್ನೋಽಪಿ ಬಲೇನ ಭೂಯಾನ್ ॥ ೬

---

ಗಳಾಗಿದ್ದು ಪ್ರಾಣಿಗಳಿಗೆ [1]ಬಂಧಮೋಕ್ಷಗಳನ್ನುಂಟುಮಾಡುತ್ತವೆ (೩). ಹೇ ಬುದ್ಧಿಶಾಲಿ-ಉದ್ಧವ, ನನ್ನ ಅಂಶವಾದ [2]ಜೀವಕ್ಕೆ ಮಾತ್ರ ಅನಾದಿಯಾದ ಬಂಧವು ಅವಿದ್ಯೆಯಿಂದ ಕಂಡುಬರುತ್ತದೆ, ವಿದ್ಯೆಯಿಂದ ಮೋಕ್ಷವಾಗುತ್ತದೆ. ಇನ್ನು ಬದ್ಧಮುಕ್ತರಿಗಿರುವ ವೈಲಕ್ಷಣ್ಯವನ್ನು ನಿನಗೆ ಹೇಳುತ್ತೇನೆ. ಶೋಕ-ಆನಂದ ಇತ್ಯಾದಿ ವಿರುದ್ಧಧರ್ಮಗಳುಳ್ಳ ಜೀವೇಶ್ವರರು ಏಕಧರ್ಮಿಯಾದ ಶರೀರದಲ್ಲಿದ್ದಾರೆ (೪-೫). ಈ ಎರಡು ಪಕ್ಷಿಗಳು (ಚಿದ್ರೂಪದಿಂದ) ಪರಸ್ಪರ ಸದೃಶರಾಗಿ, (ವಿಯೋಗವಿಲ್ಲದ್ದರಿಂದ) ಸ್ನೇಹಿತರಾಗಿ, ಮಾಯಾನಿಮಿತ್ತದಿಂದ (ದೇಹವೆಂಬ) ಈ ಅಶ್ವತ್ಥವೃಕ್ಷದಲ್ಲಿ (ಹೃದಯವೆಂಬ) ಗೂಡನ್ನು ಕಟ್ಟಿಕೊಂಡು ಇರುತ್ತವೆ. ಇವುಗಳಲ್ಲಿ ಒಂದು (ಜೀವವು) ಅಶ್ವತ್ಥಫಲವೆಂಬ ಕರ್ಮಫಲವನ್ನು ತಿನ್ನುತ್ತದೆ. ಇನ್ನೊಂದು ಪಕ್ಷಿಯು (ಈಶ್ವರನು) ಅನ್ನವಿಲ್ಲದಿದ್ದರೂ (ಭೋಕ್ತೃವಲ್ಲದಿದ್ದರೂ) ಜ್ಞಾನಾದಿಗಳ ಬಲದಿಂದ

---

1. ಅವಿದ್ಯೆಯಿಂದ ಬಂಧ, ವಿದ್ಯೆಯಿಂದ ಮೋಕ್ಷ ಏವಂಚ ಔಪಾಧಿಕವಾಗಿ ಬಂಧಮೋಕ್ಷಗಳು ತೋರುತ್ತವೆ. ಆದ್ದರಿಂದ ವಿರೋಧವೇನೂ ಇಲ್ಲ.

2. ಒಬ್ಬನೇ ಚಂದ್ರನಾದರೂ ಜಲಾದ್ಯುಪಾಧಿಯಿಂದ ಹಲವು ಪ್ರತಿಬಿಂಬಗಳಿರುತ್ತವೆ. ಅಂತೆಯೇ ಒಬ್ಬನೇ ಆತ್ಮನಾದರೂ ಅವಿದ್ಯೆಯೆಂಬ ಉಪಾಧಿಯಿಂದ ಆತ್ಮನ ಅಂಶವೆನಿಸುವ ಅನಂತ ಜೀವಗಳಿರುತ್ತವೆ. ಪ್ರತಿಬಿಂಬಕ್ಕೆ ಸಂಬಂಧಿಸುವ ಕಂಪನಾದಿಗಳು ಚಂದ್ರನಿಗಿಲ್ಲ. ಹಾಗೆಯೇ ಜೀವಗಳ ಶೋಕಾದಿಗಳು ಪರಮಾತ್ಮನಿಗಿಲ್ಲ.

ಆತ್ಮಾನಮನ್ಯಂ ಚ ಸ ವೇದ ವಿದ್ವಾ-
ನಪಿಪ್ಪಲಾದೋ ನ ತು ಪಿಪ್ಪಲಾದಃ ।
ಯೋಽವಿದ್ಯಯಾ ಯುಕ್ ಸ ತು ನಿತ್ಯಬದ್ಧೋ
ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ ॥ ೭

ದೇಹಸ್ಥೋಽಪಿ ನ ದೇಹಸ್ಥೋ ವಿದ್ವಾನ್ ಸ್ವಪ್ನಾದ್ ಯಥೋತ್ಥಿತಃ ।
ಅದೇಹಸ್ಥೋಽಪಿ ದೇಹಸ್ಥಃ ಕುಮತಿಃ ಸ್ವಪ್ನದೃಗ್ ಯಥಾ ॥ ೮

ಇಂದ್ರಿಯೈರಿಂದ್ರಿಯಾರ್ಥೇಷು ಗುಣೈರಪಿ ಗುಣೇಷು ಚ ।
ಗೃಹ್ಯಮಾಣೇಷ್ವಹಂಕುರ್ಯಾನ್ನ ವಿದ್ವಾನ್ ಯಸ್ತ್ವವಿಕ್ರಿಯಃ ॥ ೯

---

ಶ್ರೇಷ್ಠವಾಗಿದೆ (೬). ಸರ್ವಜ್ಞನೂ ಕರ್ಮಫಲಭೋಕ್ತನಲ್ಲದವನೂ ಆದ ಈಶ್ವರನು ತಾನು ಯಾರೆಂಬುದನ್ನೂ ಜೀವನನ್ನೂ ಬಲ್ಲನು. ಆದರೆ ಪಿಪ್ಪಲಾದನು-ಕರ್ಮ ಫಲಭೋಕ್ತನಾದ ಜೀವನು ತನ್ನನ್ನು ಅರಿಯನು, ಈಶ್ವರನನ್ನೂ ಅರಿಯನು. ಯಾವನು ಅವಿದ್ಯಾಯುಕ್ತನಾಗಿ ಅಜ್ಞಾನಿಯಾಗಿರುತ್ತಾನೋ ಅವನು ನಿತ್ಯ ಬದ್ಧನು. ವಿದ್ಯಾಯೋಗವುಳ್ಳ ಜ್ಞಾನಿಯು ನಿತ್ಯಮುಕ್ತನು (೭). (ಜೀವರಲ್ಲಿಯೇ ಬದ್ಧಮುಕ್ತರಲ್ಲಿರುವ ವೈಲಕ್ಷಣ್ಯ ಇದು–) ಜ್ಞಾನಿಯಾದ ಮುಕ್ತನು (ಪ್ರಾರಬ್ಧ ವಶದಿಂದ) ದೇಹದಲ್ಲಿದ್ದರೂ ದೇಹಸ್ಥನಲ್ಲ. (ದೇಹಕ್ಕಾಗುವ ಸುಖದುಃಖಗಳು ಅವನಿಗಿಲ್ಲ). [1]ಸ್ವಪ್ನವನ್ನು ಕಂಡು ಎದ್ದವನು ಸ್ಮರಿಸಿಕೊಳ್ಳುವ ಸ್ವಪ್ನದೇಹದಲ್ಲಿ ಇದ್ದ ಹಾಗೆ ಮುಕ್ತನ ಸ್ಥಿತಿ. ಅಜ್ಞಾನಿಯಾದ ಬದ್ಧನು, ಪರಮಾರ್ಥವಾಗಿ ದೇಹ ಯುಕ್ತನಲ್ಲದಿದ್ದರೂ, ದೇಹದಲ್ಲಿರುತ್ತಾನೆ! (ದೇಹಕ್ಕಾಗುವ ಸುಖದುಃಖಗಳನ್ನು ತನ್ನವೆಂದು ತಿಳಿದಿರುತ್ತಾನೆ). ಸ್ವಪ್ನವನ್ನು ಕಾಣುತ್ತಿರವವನ ಹಾಗೆ ಅವನ ಸ್ಥಿತಿ (೮). ಇಂದ್ರಿಯಗಳು ಇಂದ್ರಿಯಾರ್ಥಗಳಾದ ವಿಷಯಗಳನ್ನು ಗ್ರಹಿಸಿದರೂ ಸಹ, ವಿದ್ವಾಂಸನಾದವನು 'ಗುಣಗಳು ಗುಣಗಳನ್ನು ಗ್ರಹಿಸುತ್ತಿವೆ. ನನಗೇನು ಸಂಬಂಧ?' ಎಂದು ಯಾವ ಮನೋವಿಕಾರವನ್ನೂ ಪಡೆಯದೆ 'ನಾನು ವಿಷಯ

---

1. ಮುಕ್ತ=ಸ್ವಪ್ನದಿಂದ ಎಚ್ಚರಗೊಂಡವನು. ಬದ್ಧ=ಇನ್ನೂ ಸ್ವಪ್ನಕಾಣು ತ್ತಿರುವವನು.

ದೈವಾಧೀನೇ ಶರೀರೇಽಸ್ಮಿನ್ ಗುಣಭಾವ್ಯೇನ ಕರ್ಮಣಾ ।
ವರ್ತಮಾನೋಽಬುಧಸ್ತತ್ರ ಕರ್ತಾಸ್ಮೀತಿ ನಿಬದ್ಧ್ಯತೇ ॥ ೧೦

ಏವಂ ವಿರಕ್ತಃ ಶಯನೇ ಆಸನಾಟನಮಜ್ಜನೇ ।
ದರ್ಶನಸ್ಪರ್ಶನಘ್ರಾಣ ಭೋಜನಶ್ರವಣಾದಿಷು ॥ ೧೧

ನ ತಥಾ ಬದ್ಧ್ಯತೇ ವಿದ್ವಾಂಸ್ತತ್ರ ತತ್ರಾದಯನ್ ಗುಣಾನ್ ।
ಪ್ರಕೃತಿಸ್ಥೋಽಪ್ಯಸಂಸಕ್ತೋ ಯಥಾ ಖಂ ಸವಿತಾನಿಲಃ ॥ ೧೨

ವೈಶಾರದ್ಯೇಕ್ಷಯಾಸಂಗಶಿತಯಾ ಛಿನ್ನಸಂಶಯಃ ।
ಪ್ರತಿಬುದ್ಧ ಇವ ಸ್ವಪ್ನಾನ್ನಾನಾತ್ವಾದ್ ವಿನಿವರ್ತತೇ ॥ ೧೩

---

ಗಳನ್ನು ಗ್ರಹಿಸುತ್ತಿಲ್ಲ'ವೆಂದು [1]ಭಾವಿಸಬೇಕು (೯). ಯಾವನು ವಿದ್ವಾಂಸನಲ್ಲವೋ ಆತನು ಪೂರ್ವ[2]ಕರ್ಮಾಧೀನವಾದ ಈ ಶರೀರದಲ್ಲಿ ವಾಸವಾಗಿರುತ್ತ, ಇಂದ್ರಿಯಗಳು ನಡೆಸುವ ಕರ್ಮಗಳನ್ನು ನೋಡಿ, ನಾನು ಈ ಕರ್ಮಗಳನ್ನು ಮಾಡತಕ್ಕ ಕರ್ತನೆಂಬ ಅಹಂಕಾರದಿಂದ ದೇಹದಲ್ಲಿ ಬದ್ಧನಾಗುತ್ತಾನೆ (೧೦). (ಅನ್ಯರು ಮಾಡುವ ಕರ್ಮದಿಂದ ನನಗೇಕೆ ಬಂಧ ?)—ಎಂಬುದಾಗಿ ವಿರಕ್ತನಾದ ಜ್ಞಾನಿಯು ಆಸನ, ಅಟನ (ಅಲೆದಾಡುವುದು), ಮಜ್ಜನ (ಸ್ನಾನ), ದರ್ಶನ, ಸ್ಪರ್ಶನ, ಘ್ರಾಣ, ಶ್ರವಣ—ಮುಂತಾದ ಕರ್ಮಗಳಲ್ಲಿ ತಾನು ಮಾಡುತ್ತೇನೆಂದು ಬದ್ಧನಾಗುವುದಿಲ್ಲ. ಅವನು ಪ್ರಕೃತಿಯ ಜೊತೆಗಿದ್ದರೂ ಸಹ, ಆಕಾಶದಂತೆ—ಸೂರ್ಯನಂತೆ—ಗಾಳಿಯಂತೆ, ಅಲಿಪ್ತನಾಗಿರುವನು (೧೧–೧೨). ವೈರಾಗ್ಯದಿಂದ ಹರಿತವಾದ ನಿಪುಣೇಕ್ಷಣದಿಂದ ತನ್ನ ಎಲ್ಲ ಸಂಶಯಗಳನ್ನು ಕತ್ತರಿಸಿ ಹಾಕಿದ ಜ್ಞಾನಿಯು, ಕನಸಿನಿಂದ ಎಚ್ಚತ್ತವನಂತೆ, ನಾನಾತ್ವಮಯವಾದ ದ್ವೈತಪ್ರಪಂಚ

---

1. ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।
ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥ —ಗೀತಾ ೩-೨೮
ಗುಣಾಃ = ಗುಣಾತ್ಮಕವಾದ ಇಂದ್ರಿಯಗಳು.
ಗುಣೇಷು = ಗುಣಾತ್ಮಕವಾದ ವಿಷಯಗಳಲ್ಲಿ.

2. ಮೂಲದಲ್ಲಿ 'ದೈವಾಧೀನೇ' ಎಂದಿದೆ. ದೈವ = ಪೂರ್ವಕರ್ಮ.

ಯಸ್ಯ ಸ್ಯುರ್ವೀತಸಂಕಲ್ಪಾಃ ಪ್ರಾಣೇಂದ್ರಿಯಮನೋಧಿಯಾಮ್ ।
ವೃತ್ತಯಃ ಸ ವಿನಿರ್ಮುಕ್ತೋ ದೇಹಸ್ಥೋಽಪಿ ಹಿ ತದ್ಗುಣೈಃ ॥ ೧೪

ಯಸ್ಯಾತ್ಮಾ ಹಿಂಸ್ಯತೇ ಹಿಂಸ್ರೈರ್ಯೇನ ಕಿಂಚಿದ್ ಯದೃಚ್ಛಯಾ ।
ಅರ್ಚ್ಯತೇ ವಾ ಕ್ವಚಿತ್ತತ್ರ ನ ವ್ಯತಿಕ್ರಿಯತೇ ಬುಧಃ ॥ ೧೫

ನ ಸ್ತುವೀತ ನ ನಿಂದೇತ ಕುರ್ವತಃ ಸಾಧ್ವಸಾಧು ವಾ ।
ವದತೋ ಗುಣದೋಷಾಭ್ಯಾಂ ವರ್ಜಿತಃ ಸಮದೃಙ್ ಮುನಿಃ ॥ ೧೬

ನ ಕುರ್ಯಾನ್ನ ವದೇತ್ ಕಿಂಚಿನ್ನ ಧ್ಯಾಯೇತ್ ಸಾಧ್ವಸಾಧು ವಾ ।
ಆತ್ಮಾರಾಮೋಽನಯಾ ವೃತ್ತ್ಯಾ ವಿಚರೇಜ್ಜಡವನ್ಮುನಿಃ ॥ ೧೭

ಶಬ್ದಬ್ರಹ್ಮಣಿ ನಿಷ್ಣಾತೋ ನ ನಿಷ್ಣಾಯಾತ್ ಪರೇ ಯದಿ ।
ಶ್ರಮಸ್ತಸ್ಯ ಶ್ರಮಫಲೋ ಹ್ಯಧೇನುಮಿವ ರಕ್ಷತಃ ॥ ೧೮

---

ದಿಂದ ನಿವೃತ್ತನಾಗುತ್ತಾನೆ (೧೩). ಪ್ರಾಣ, ಇಂದ್ರಿಯ, ಮನಸ್ಸು, ಬುದ್ಧಿ— ಇವುಗಳ ವೃತ್ತಿಗಳು ಯಾರಿಗೆ ಸಂಕಲ್ಪರಹಿತವಾಗಿ ಇರುತ್ತವೆಯೋ ಆತನು ದೇಹದಲ್ಲಿದ್ದರೂ ಅದರ ಗುಣಗಳಿಂದ ಮುಕ್ತನಾಗಿರುತ್ತಾನೆ. (ಪ್ರಾಣಾದಿವೃತ್ತಿಗಳು ಸಂಕಲ್ಪಶೂನ್ಯವಾಗಿದ್ದರೆ ಆತನು ಮುಕ್ತನೆಂದೇ ತಿಳಿಯಬೇಕು) (೧೪). ಕ್ರೂರಿಗಳು ದೇಹಕ್ಕೆ ಹಿಂಸೆಯನ್ನೆಸಗಿದರಾಗಲಿ ಅಥವಾ ಯಾವನೊಬ್ಬನು ಸ್ವೇಚ್ಛೆಯಿಂದ ಬಂದು ಪೂಜಿಸಿದರಾಗಲಿ, ಜ್ಞಾನಿಯು ಅವುಗಳಿಂದ ಯಾವ ವಿಕಾರವನ್ನೂ ಹೊಂದುವುದಿಲ್ಲ. ಜನರು ತನಗೆ ಒಳ್ಳೆಯದನ್ನು ಮಾಡಲಿ, ಕೆಟ್ಟದ್ದನ್ನು ಮಾಡಲಿ ಅಥವಾ ತನ್ನ ಗುಣವನ್ನು ಎತ್ತಿ ಹೊಗಳಲಿ, ಇಲ್ಲವೆ ದೂಷಿಸಲಿ, ಯಾವಾತನು ಅವರನ್ನು ಸ್ತುತಿಸುವುದೂ ಇಲ್ಲವೋ ನಿಂದಿಸುವುದೂ ಇಲ್ಲವೋ ಅಂತಹ ಸಮದೃಷ್ಟಿಯಾದವನು ಜೀವನ್ಮುಕ್ತನೆಂದು ತಿಳಿಯಬೇಕು (೧೫-೧೬). ಒಳ್ಳೆಯದನ್ನಾಗಲಿ ಕೆಟ್ಟದ್ದನ್ನಾಗಲಿ ಯಾವಾತನು ಮಾಡುವುದಿಲ್ಲವೋ ಹೇಳುವುದಿಲ್ಲವೋ ಆಲೋಚಿಸುವುದೂ ಇಲ್ಲವೋ ಆತ್ಮಾರಾಮನಾಗಿ ವಿರಕ್ತವೃತ್ತಿಯಿಂದ ಜಡನಂತೆ ತಿರುಗಾಡುತ್ತಿರುವನೋ ಆತನು ಮುನಿಯೆಂದು (ಮುಕ್ತನೆಂದು) ತಿಳಿಯಬೇಕು (೧೭). ಶಬ್ದಬ್ರಹ್ಮದಲ್ಲಿ ನಿಷ್ಣಾತನಾದವನು—ಎಂದರೆ—ವೇದಾಂತಶಾಸ್ತ್ರದಲ್ಲಿ ಪಾರಂಗತನಾದವನು, ಪರಬ್ರಹ್ಮದಲ್ಲಿ ನಿಷ್ಣಾತನಾಗದಿದ್ದರೆ—ಎಂದರೆ—ನಿದಿಧ್ಯಾಸ

**ಗಾಂ ದುಗ್ಧದೋಹಾಮಸತೀಂ ಚ ಭಾರ್ಯಾಂ**
**ದೇಹಂ ಪರಾಧೀನಮಸತ್ಪ್ರಜಾಂ ಚ ।**
**ವಿತ್ತಂ ತ್ವತೀರ್ಥೀಕೃತಮಂಗ ವಾಚಂ**
**ಹೀನಾಂ ಮಯಾ ರಕ್ಷತಿ ದುಃಖದುಃಖೀ ॥ ೧೯**

**ಯಸ್ಯಾಂ ನ ಮೇ ಪಾವನಮಂಗ ಕರ್ಮ**
**ಸ್ಥಿತ್ಯುದ್ಭವ ಪ್ರಾಣನಿರೋಧಮಸ್ಯ ।**
**ಲೀಲಾವತಾರೇಪ್ಸಿತಜನ್ಮ ವಾ ಸ್ಯಾದ್**
**ವಂಧ್ಯಾಂ ಗಿರಂ ತಾಂ ಬಿಭೃಯಾನ್ನ ಧೀರಃ ॥ ೨೦**

**ಏವಂ ಜಿಜ್ಞಾಸಯಾಪೋಹ್ಯ ನಾನಾತ್ವಭ್ರಮಮಾತ್ಮನಿ ।**
**ಉಪಾರಮೇತ ವಿರಜಂ ಮನೋ ಮಯ್ಯರ್ಪ್ಯ ಸರ್ವಗೇ ॥ ೨೧**

---

ನಾದಿ ಸಾಧನಗಳಲ್ಲಿ ತೊಡಗದಿದ್ದರೆ, ಅವನ ಶಾಸ್ತ್ರಾಧ್ಯಯನಶ್ರಮಕ್ಕೆ ಶ್ರಮ ಒಂದೇ ಫಲ. ಬರಡುಹಸುವನ್ನು ಸಾಕತಕ್ಕವನ ಶ್ರಮದಂತೆ ನಿಷ್ಫಲ (೧೮). ಹಾಲನ್ನು ಕರೆದು ಮುಗಿಸಿದ ಬರಡು ಹಸುವನ್ನೂ, ದುಷ್ಟಳಾದ ಮಡದಿಯನ್ನೂ, ಪರಾಧೀನವಾದ ದೇಹವನ್ನೂ, ಕೆಟ್ಟಬುದ್ಧಿಯ ಮಗನನ್ನೂ, ಸತ್ಪಾತ್ರಕ್ಕೆ ಅರ್ಪಿಸದ ಹಣವನ್ನೂ ಯಾವನು ರಕ್ಷಿಸಿಕೊಂಡಿರುತ್ತಾನೋ, ಉದ್ಧವ, ನನ್ನ ಸುದ್ದಿಯಿಲ್ಲದ ಮಾತನ್ನು ಯಾವನು ಆಡುತ್ತಾನೋ ಅವನೂ ದುಃಖದ ಮೇಲೆ ದುಃಖವನ್ನು ಪಡೆಯುತ್ತಲೇ ಇರುವರು (೧೯). ಯಾವ ನುಡಿಯಲ್ಲಿ ಲೋಕಪಾವನವಾದ ನನ್ನ ಚರಿತ್ರೆಯಿಲ್ಲವೋ, ಜಗತ್ತಿನ ಸೃಷ್ಟಿ ಸ್ಥಿತಿಲಯಗಳಿಗೆ ಸಂಬಂಧಿಸಿದ ವಿಷಯ ವಿಲ್ಲವೋ, ನನ್ನ ಲೀಲಾವತಾರಗಳಲ್ಲಿ ಜನರಿಗೆ ಪ್ರೇಮಾಸ್ಪದವಾದ ಶ್ರೀರಾಮ ಜನ್ಮಾದಿವೃತ್ತಾಂತವಿಲ್ಲವೋ ಅಂತಹ ಬರಡು ನುಡಿಯನ್ನು, ಉದ್ಧವ, ಪಂಡಿತನು ಆಡಬಾರದು (೨೦). ಈ ಪ್ರಕಾರವಾದ ಜಿಜ್ಞಾಸೆಯಿಂದ ಆತ್ಮನಲ್ಲಿ ನಾನಾತ್ವದ ಭ್ರಮೆಯನ್ನು ಹೋಗಲಾಡಿಸಿಕೊಂಡು, ನಿರ್ಮಲವಾದ ಮನಸ್ಸನ್ನು ಪರಿಪೂರ್ಣನಾದ ನನಗೆ ಒಪ್ಪಿಸಿ ವಿಶ್ರಾಂತನಾಗಬೇಕು. ಪರಬ್ರಹ್ಮವಾದ ನನ್ನಲ್ಲಿ ಮನಸ್ಸನ್ನು ನಿಶ್ಚಲವಾಗಿ ನಿಲ್ಲಿಸಲು ಸಾಧ್ಯವಾಗದೆ ಹೋದರೆ, ಸರ್ವಕರ್ಮಗಳನ್ನೂ ನನಗೆ

ಯದ್ಯನೀಶೋ ಧಾರಯಿತುಂ ಮನೋ ಬ್ರಹ್ಮಣಿ ನಿಶ್ಚಲಮ್ ।
ಮಯಿ ಸರ್ವಾಣಿ ಕರ್ಮಾಣಿ ನಿರಪೇಕ್ಷಃ ಸಮಾಚರ ॥ ೨೨

ಶ್ರದ್ಧಾಲುರ್ಮೇ ಕಥಾಃ ಶೃಣ್ವನ್ ಸುಭದ್ರಾ ಲೋಕಪಾವನೀಃ ।
ಗಾಯನ್ನನುಸ್ಮರನ್ ಕರ್ಮ ಜನ್ಮ ಚಾಭಿನಯನ್ ಮುಹುಃ॥ ೨೩

ಮದರ್ಥೇ ಧರ್ಮಕಾಮಾರ್ಥಾನಾಚರನ್ ಮದಪಾಶ್ರಯಃ ।
ಲಭತೇ ನಿಶ್ಚಲಾಂ ಭಕ್ತಿಂ ಮಯ್ಯುದ್ಧವ ಸನಾತನೇ ॥ ೨೪

ಸತ್ಸಂಗಲಬ್ಧಯಾ ಭಕ್ತ್ಯಾ ಮಯಿ ಮಾಂ ಸ ಉಪಾಸಿತಾ ।
ಸ ವೈ ಮೇ ದರ್ಶಿತಂ ಸದ್ಭಿರಂಜಸಾ ವಿಂದತೇ ಪದಮ್ ॥ ೨೫

ಉದ್ಧವ ಉವಾಚ—
ಸಾಧುಸ್ತವೋತ್ತಮಶ್ಲೋಕಮತಃ ಕೀದೃಗ್ವಿಧಃ ಪ್ರಭೋ ।
ಭಕ್ತಿಸ್ತ್ವಯ್ಯುಪಯುಜ್ಯೇತ ಕೀದೃಶೀ ಸದ್ಭಿರಾದೃತಾ ॥ ೨೬

---

ಒಪ್ಪಿಸಿ ಫಲಾಪೇಕ್ಷೆಯಿಲ್ಲದೆ ಅವನ್ನು ಆಚರಿಸುತ್ತಿರು (೨೧-೨೨). ಕಲ್ಯಾಣಕಾರಿಗಳೂ ಲೋಕಪಾವನಗಳೂ ಆದ ನನ್ನ ಕಥೆಗಳನ್ನು ಶ್ರದ್ಧೆಯಿಂದ ಆಲಿಸುತ್ತ, ಹಾಡುತ್ತ, ನನ್ನ ಕೃತ್ಯವನ್ನೂ ಜನ್ಮವೃತ್ತಾಂತವನ್ನೂ ಮತ್ತೆಮತ್ತೆ ಅನುಸರಿಸುತ್ತ, ಧರ್ಮಾರ್ಥಕಾಮಗಳಿಗೆ ಸಂಬಂಧಿಸಿದ ಕ್ರಿಯೆಗಳನ್ನು ನನ್ನ ಪ್ರೀತಿಗಾಗಿಯೇ ಆಚರಿಸುತ್ತ, ನನ್ನನ್ನೇ ನಂಬಿಕೊಂಡಿದ್ದರೆ, ಉದ್ಧವ, ಆತನು ಸನಾತನನಾದ ನನ್ನಲ್ಲಿ ನಿಶ್ಚಲವಾದ ಭಕ್ತಿಯನ್ನು ಪಡೆಯುವನು (೨೩-೨೪). ಆಗ ಸತ್ಸಂಗ ಉಂಟಾಗಿ ಅದರಿಂದ ನನ್ನಲ್ಲಿ ಉಂಟಾದ ದೃಢಭಕ್ತಿಯಿಂದ ನನ್ನನ್ನು ಧ್ಯಾನಿಸತೊಡಗುವನು. ಹೀಗೆ ಧ್ಯಾನನಿಷ್ಠನಾದ ಮೇಲೆ ಸಜ್ಜನರು ತೋರಿಸಿದ ದಾರಿಯಲ್ಲಿ ಹೋಗಿ (ಜ್ಞಾನವನ್ನು ಪಡೆದು) ನನ್ನ ಸ್ಥಾನವನ್ನು ಶೀಘ್ರವಾಗಿ [1]ಪಡೆಯುವನು" ಎಂದನು (೨೫). ಆಗ ಉದ್ಧವನು "ಹೇ ಉತ್ತಮಶ್ಲೋಕ, ಹಲವು ಬಗೆಯ ಸಜ್ಜನರಿರುತ್ತಾರೆ. ಅವರಲ್ಲಿ ಯಾವ ಬಗೆಯವನು ನಿನಗೆ ಸಂಮತನಾದವನು ? ಸಾಧು

---

1. ಭಗವಂತನು ಸಾಧಕರಿಗೆ ತೋರಿಸಿದ ಕ್ರಮ ಹೀಗೆ: ಭಗವತ್ಕಥೆಯಲ್ಲಿ ಆಸಕ್ತಿ, ಭಗವದರ್ಪಣಬುದ್ಧಿಯಿಂದ ಕರ್ಮಾಚರಣೆ, ಕಾಮ್ಯಕರ್ಮತ್ಯಾಗ, ಭಕ್ತಿ, ಸಜ್ಜನಸಂಗ, ಧ್ಯಾನ, ಗುರೂಪದೇಶದಿಂದ ಜ್ಞಾನ, ಅನಂತರ ಮುಕ್ತಿ.

ಏತನ್ಮೇ ಪುರುಷಾಧ್ಯಕ್ಷ ಲೋಕಾಧ್ಯಕ್ಷ ಜಗತ್ಪ್ರಭೋ ।
ಪ್ರಣತಾಯಾನುರಕ್ತಾಯ ಪ್ರಪನ್ನಾಯ ಚ ಕಥ್ಯತಾಮ್ ॥ ೨೭

ತ್ವಂ ಬ್ರಹ್ಮ ಪರಮಂ ವ್ಯೋಮ ಪುರುಷಃ ಪ್ರಕೃತೇಃ ಪರಃ ।
ಅವತೀರ್ಣೋಽಸಿ ಭಗವನ್ ಸ್ವೇಚ್ಛೋಪಾತ್ತಪೃಥಗ್ವಪುಃ ॥ ೨೮

ಶ್ರೀಭಗವಾನುವಾಚ—

ಕೃಪಾಲುರಕೃತದ್ರೋಹಸ್ತಿತಿಕ್ಷುಃ ಸರ್ವದೇಹಿನಾಮ್ ।
ಸತ್ಯಸಾರೋಽನವದ್ಯಾತ್ಮಾ ಸಮಃ ಸರ್ವೋಪಕಾರಕಃ ॥ ೨೯

ಕಾಮೈರಹತಧೀರ್ದಾಂತೋ ಮೃದುಃ ಶುಚಿರಕಿಂಚನಃ ।
ಅನೀಹೋ ಮಿತಭುಕ್ ಶಾಂತಃ ಸ್ಥಿರೋ ಮಚ್ಛರಣೋ ಮುನಿಃ ॥ ೩೦

ಅಪ್ರಮತ್ತೋ ಗಭೀರಾತ್ಮಾ ಧೃತಿಮಾನ್ ಜಿತಷಡ್ಗುಣಃ ।
ಅಮಾನೀ ಮಾನದಃ ಕಲ್ಯೋ ಮೈತ್ರಃ ಕಾರುಣಿಕಃ ಕವಿಃ ॥ ೩೧

---

ಗಳಾದ ನಾರದಾದಿಗಳು ಆದರಿಸುವ ಭಕ್ತಿಪ್ರಕಾರಗಳಲ್ಲಿ ಯಾವ ಭಕ್ತಿಪ್ರಕಾರವು ನಿನ್ನನ್ನು ತಿಳಿಯುವುದಕ್ಕೆ ಉಪಯುಕ್ತವಾಗುವುದು? (೨೬). ಹೇ ಪುರುಷಾಧ್ಯಕ್ಷ, ಲೋಕಾಧ್ಯಕ್ಷ, ಜಗತ್ಪ್ರಭು, ನಿನಗೆ ತಲೆಬಾಗಿದವನೂ ಪ್ರೀತಿಸತಕ್ಕವನೂ ಶರಣಾಗತನೂ ಆದ ನನಗೆ ಈ ವಿಷಯವನ್ನು ಹೇಳು. ನೀನೆ ಪರಬ್ರಹ್ಮನು. ಆಕಾಶದಂತೆ ಅಸಂಗ. ಪ್ರಕೃತಿಗೂ ಆಚೆಗಿರುವ ಪುರುಷ. ಹೇ ಭಗವನ್, ನಿನ್ನ ಭಕ್ತರ ಇಚ್ಛೆಯಂತೆ ಪರಿಮಿತವಾದ ಈ ದೇಹವನ್ನು ಧರಿಸಿ ಅವತರಿಸಿದ್ದೀಯೆ" ಎಂದನು (೨೭-೨೮). ಆಗ ಭಗವಂತನೆಂದನು : "ಉದ್ಧವ, ನನಗೆ ಪ್ರಿಯನಾದ ಸದ್ಭಕ್ತನು ಹೇಗಿರಬೇಕೆಂದರೆ, ಅವನು ಕೃಪಾಳುವೂ ಯಾರಿಗೂ ದ್ರೋಹ ಮಾಡದವನೂ ತಾಳ್ಮೆಯುಳ್ಳವನೂ ಆಗಿರಬೇಕು. ಅವನು ಸತ್ಯಸಂಧನೂ ಅಸೂಯಾದಿದೋಷರಹಿತನೂ ಸುಖದುಃಖಗಳಲ್ಲಿ ಸಮಬುದ್ಧಿಯುಳ್ಳವನೂ ಸರ್ವೋಪಕಾರಕನೂ ಆಗಿರಬೇಕು (೨೯). ವಿಷಯಭೋಗಗಳು ಅವನ ಚಿತ್ತವನ್ನು ಎಳೆಯಬಾರದು. ಅವನು ಬಾಹ್ಯೇಂದ್ರಿಯಗಳನ್ನು ನಿಗ್ರಹಿಸಿದವನೂ ಮೃದು ಸ್ವಭಾವದವನೂ ಸದಾಚಾರನೂ ಅಪರಿಗ್ರಹನೂ ಫಲಾಪೇಕ್ಷೆಯಿಂದ ಉದ್ಯೋಗ ಮಾಡದವನೂ ಮಿತಾಹಾರಿಯೂ ಶಾಂತನೂ ಸ್ವಧರ್ಮದಲ್ಲಿ ಸ್ಥಿರನೂ ನನಗೆ ಪೂರ್ತಿ ಶರಣಾದವನೂ ಮನನಶೀಲನೂ ಆಗಿರಬೇಕು (೩೦). ಅಲ್ಲದೆ ಸಾವಧಾನ

ಆಜ್ಞಾಯೈವಂ ಗುಣಾನ್ ದೋಷಾನ್ ಮಯಾದಿಷ್ಟಾನಪಿ ಸ್ವಕಾನ್ ।
ಧರ್ಮಾನ್ ಸಂತ್ಯಜ್ಯ ಯಃ ಸರ್ವಾನ್ ಮಾಂ ಭಜೇತ ಸ ಸತ್ತಮಃ ॥ ೩೨

ಜ್ಞಾತ್ವಾ ಜ್ಞಾತ್ವಾಥ ಯೇ ವೈ ಮಾಂ ಯಾವಾನ್ ಯಶ್ಚಾಸ್ಮಿ ಯಾದೃಶಃ ।
ಭಜಂತ್ಯನನ್ಯಭಾವೇನ ತೇ ಮೇ ಭಕ್ತತಮಾ ಮತಾಃ ॥ ೩೩

---

ವಾಗಿ ವ್ಯವಹರಿಸತಕ್ಕವನೂ ನಿರ್ವಿಕಾರಚಿತ್ತನೂ ಧೈರ್ಯಶಾಲಿಯೂ [1]ಷಡ್ಗುಣಗಳನ್ನು ಜಯಿಸಿದವನೂ ಅಹಂಕಾರರಹಿತನೂ ಅನ್ಯರಿಗೆ ಗೌರವವನ್ನು ಕೊಡತಕ್ಕವನೂ ಬೋಧನೆಯಲ್ಲಿ ದಕ್ಷನೂ ಸ್ನೇಹಪರನೂ ಕಾರುಣಿಕನೂ ಉತ್ತಮಜ್ಞಾನವುಳ್ಳವನೂ ಆದ ಭಕ್ತನು ನನಗೆ ಸಂಮತನು (೩೧). ಅಲ್ಲದೆ ನಾನು (ವೇದಗಳ ಮೂಲಕ) ಸ್ವಧರ್ಮಗಳನ್ನು ಆಚರಿಸಬೇಕೆಂದು ಆಜ್ಞಾಪಿಸಿದ್ದೇನಷ್ಟೆ. ಅವುಗಳ ಆಚರಣೆಯಿಂದಾಗುವ ಗುಣಗಳನ್ನೂ ಅನಾಚರಣೆಯಿಂದಾಗುವ ದೋಷಗಳನ್ನೂ ತಿಳಿದಿದ್ದರೂ ಸಹ, ಅವನ್ನು [2]ತ್ಯಜಿಸಿ ನನಗೆ ಶರಣಾಗಿ ನನ್ನನ್ನೇ ಯಾವಾತನು ಭಜಿಸುತ್ತಿರುವನೋ ಅವನೂ ಶ್ರೇಷ್ಠನಾದ ನನ್ನ ಭಕ್ತನು (೩೨). ಅಲ್ಲದೆ ದೇಶಕಾಲಗಳಿಂದ ಅಪರಿಚ್ಛಿನ್ನನಾದ ನಾನು ಯಾವ ಪರಿಣಾಮವುಳ್ಳವನು, ಸರ್ವಾತ್ಮನಾದ ನಾನು ಯಾರು, ಸಚ್ಚಿದಾನಂದರೂಪನಾದ ಯಾವ ಸ್ವರೂಪದವನು—ಎಂಬುದನ್ನು ಮತ್ತೆ ಮತ್ತೆ ಯಾರು ವಿಚಾರಮಾಡಿ [3]ತಿಳಿಯುತ್ತ, ಅನನ್ಯಭಾವದಿಂದ ನನ್ನನ್ನು ಭಜಿಸುವರೋ ಅವರು ನನ್ನ ಪರಮಭಕ್ತರೆಂದು

---

1. ಹಸಿವು, ಬಾಯಾರಿಕೆ, ಶೋಕ, ಮೋಹ, ಮುಪ್ಪು, ಸಾವಿನ ಭಯ—ಇವು ಷಡ್ಗುಣಗಳೆಂದೂ ಷಡೂರ್ಮಿಗಳೆಂದೂ ಹೇಳಲ್ಪಡುತ್ತವೆ.

2. ಭಕ್ತಿಯು ಪರಾಕಾಷ್ಠೆಗೆ ಮುಟ್ಟಿದಾಗ ಸ್ವಧರ್ಮವನ್ನೇ ತ್ಯಜಿಸಬಹುದು. ಭಗವದ್ಧ್ಯಾನಕ್ಕೆ ಈ ಕರ್ಮವಿಧಿಗಳು ಅಡ್ಡಿಯಾಗುತ್ತವೆಯೆಂದೂ ಭಕ್ತಿಯಿಂದಲೇ ಎಲ್ಲವೂ ಸಿದ್ಧಿಸುತ್ತದೆ ಎಂದೂ ಭಕ್ತಿಯಲ್ಲಿ ಆಧರ್ಮಗಳು ಅಡಗಿಹೋಗುತ್ತವೆಯೆಂದೂ—ಭಕ್ತನು ಭಾವಿಸಬಹುದು. ಭಕ್ತಿಯ ದಾರ್ಢ್ಯದಿಂದ ಕರ್ಮಾಚರಣೆಯ ಅವಶ್ಯಕತೆಯೂ ತೊಲಗಿಹೋಗುತ್ತದೆ. ನೋಡಿ—'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ'. —ಗೀತಾ ೧೮–೬೬

3. 'ಜ್ಞಾತ್ವಾಜ್ಞಾತ್ವಾ' ಎಂದು ಮೂಲದಲ್ಲಿದೆ. ಜ್ಞಾತ್ವಾ—ಅಜ್ಞಾತ್ವಾ ಎಂದು ಪದವಿಭಾಗಮಾಡಿ 'ನನ್ನ ಸ್ವರೂಪವನ್ನು ತಿಳಿಯಲಿ, ತಿಳಿಯದಿರಲಿ—ಯಾರು ನನ್ನನ್ನು ಅನನ್ಯಭಾವದಿಂದ ಭಜಿಸುತ್ತಾರೋ' ಎಂದೂ ಅರ್ಥವನ್ನು ಹೇಳಬಹುದು.

ಮಲ್ಲಿಂಗಮದ್ಭಕ್ತಜನದರ್ಶನಸ್ಪರ್ಶನಾರ್ಚನಮ್ ।
ಪರಿಚರ್ಯಾ ಸ್ತುತಿಃ ಪ್ರಹ್ವಗುಣಕರ್ಮಾನುಕೀರ್ತನಮ್ ॥ ೩೪

ಮತ್ಕಥಾಶ್ರವಣೇ ಶ್ರದ್ಧಾ ಮದನುಧ್ಯಾನಮುದ್ಧವ ।
ಸರ್ವಲಾಭೋಪಹರಣಂ ದಾಸ್ಯೇನಾತ್ಮನಿವೇದನಮ್ ॥ ೩೫

ಮಜ್ಜನ್ಮಕರ್ಮಕಥನಂ ಮಮ ಪರ್ವಾನುಮೋದನಮ್ ।
ಗೀತತಾಂಡವವಾದಿತ್ರಗೋಷ್ಠೀಭಿರ್ಮದ್ಗೃಹೋತ್ಸವಃ ॥ ೩೬

ಯಾತ್ರಾ ಬಲಿವಿಧಾನಂ ಚ ಸರ್ವವಾರ್ಷಿಕಪರ್ವಸು ।
ವೈದಿಕೀ ತಾಂತ್ರಿಕೀ ದೀಕ್ಷಾ ಮದೀಯವ್ರತಧಾರಣಮ್ ॥ ೩೭

ಮಮಾರ್ಚಾಸ್ಥಾಪನೇ ಶ್ರದ್ಧಾ ಸ್ವತಃ ಸಂಹತ್ಯ ಚೋದ್ಯಮಃ ।
ಉದ್ಯಾನೋಪವನಾಕ್ರೀಡಪುರಮಂದಿರ ಕರ್ಮಣಿ ॥ ೩೮

---

ತಿಳಿಯುತ್ತೇನೆ (೩೩). ನನ್ನ ಚಿಹ್ನೆಗಳಾದ ಪ್ರತಿಮಾದಿಗಳನ್ನೂ ಭಕ್ತಜನರನ್ನೂ ಸಂದರ್ಶಿಸುವುದು, ಸ್ಪರ್ಶಿಸುವುದು, ಅರ್ಚಿಸುವುದು, ಸೇವಿಸುವುದು, ಸ್ತುತಿಸುವುದು, ವಿನಯದಿಂದ ಗುಣಕರ್ಮಗಳನ್ನು ಹೇಳುವುದು—ಇವೆಲ್ಲ ಭಕ್ತಿಯ ಲಕ್ಷಣಗಳು (೩೪). ನನ್ನ ಕಥೆಯನ್ನು ಶ್ರವಣಮಾಡುವುದರಲ್ಲಿ ಆಸಕ್ತಿ, ನನ್ನ ಧ್ಯಾನ, ತನಗೆ ಬಂದದ್ದನ್ನೆಲ್ಲ ನನಗೆ ಅರ್ಪಿಸುವುದು, ದಾಸ್ಯಭಾವದಿಂದ ತನ್ನನ್ನು ನನಗೆ ಅರ್ಪಿಸಿಕೊಳ್ಳುವುದು, ನನ್ನ ಅವತಾರ ವೃತ್ತಾಂತವನ್ನೂ ಕ್ರಿಯಾವೃತ್ತಾಂತವನ್ನೂ ಹೇಳುವುದು, ಜನ್ಮಾಷ್ಟಮೀವ್ರತಾದಿಗಳನ್ನು ನಡೆಸುವುದು, ಗೀತ ನೃತ್ಯ ವಾದ್ಯಗಳಿಂದ ನನ್ನ ದೇವಸ್ಥಾನದಲ್ಲಿ ಉತ್ಸವವನ್ನು ನಡೆಸುವುದು—ಇವೆಲ್ಲವೂ ಭಕ್ತಿಯ ಲಕ್ಷಣಗಳು (೩೫–೩೬). ಉದ್ಧವ, ತೀರ್ಥಯಾತ್ರೆ, ಹೂ ಮೊದಲಾದ ಪೂಜಾದ್ರವ್ಯಗಳ ಅರ್ಪಣೆ, ವರ್ಷದಲ್ಲಿ ವಿಶೇಷವಾಗಿ ಬರುವ ಚಾತುರ್ಮಾಸ್ಯಾದಿ ದಿನಗಳಲ್ಲಿ ವೇದೋಕ್ತವಾದ ಮತ್ತು ಆಗಮೋಕ್ತವಾದ ದೀಕ್ಷೆ, ಅನಂತಚತುರ್ದಶ್ಯಾದಿ ನನ್ನ ವ್ರತಗಳನ್ನು ನಡೆಸುವುದು—ಇವೂ ಸಹ ಭಕ್ತಿಯ ಲಕ್ಷಣಗಳು (೩೭). ಅಲ್ಲದೆ ನನ್ನ ಅರ್ಚಾವಿಗ್ರಹವನ್ನು ಸ್ಥಾಪಿಸುವುದರಲ್ಲಿ ಆದರ, ಸಜ್ಜನರನ್ನು ಜೊತೆಗೆ ಸೇರಿಸಿಕೊಂಡು (ಪುಷ್ಪಪ್ರಧಾನವಾದ) ಉದ್ಯಾನ, (ಫಲಪ್ರಧಾನವಾದ) ಉಪವನ, ಕ್ರೀಡಾಂಗಣ, ನಗರೋಪಯುಕ್ತವಾದ ಛತ್ರ—ಇವುಗಳನ್ನು

ಸಮ್ಮಾರ್ಜನೋಪಲೇಪಾಭ್ಯಾಂ ಸೇಕಮಂಡಲವರ್ತನೈಃ ।
ಗೃಹಶುಶ್ರೂಷಣಂ ಮಹ್ಯಂ ದಾಸವದ್ ಯದಮಾಯಯಾ ॥ ೩೯

ಅಮಾನಿತ್ವಮದಂಭಿತ್ವಂ ಕೃತಸ್ಯಾಪರಿಕೀರ್ತನಮ್ ।
ಅಪಿ ದೀಪಾವಲೋಕಂ ಮೇ ನೋಪಯುಂಜ್ಯಾನ್ನಿವೇದಿತಮ್ ॥ ೪೦

ಯದ್ ಯದಿಷ್ಟತಮಂ ಲೋಕೇ ಯಚ್ಚಾತಿಪ್ರಿಯಮಾತ್ಮನಃ ।
ತತ್ತನ್ನಿವೇದಯೇನ್ಮಹ್ಯಂ ತದಾನಂತ್ಯಾಯ ಕಲ್ಪತೇ ॥ ೪೧

ಸೂರ್ಯೋಽಗ್ನಿರ್ಬ್ರಾಹ್ಮಣೋ ಗಾವೋ ವೈಷ್ಣವಃ ಖಂ ಮರುಜ್ಜಲಮ್ ।
ಭೂರಾತ್ಮಾ ಸರ್ವಭೂತಾನಿ ಭದ್ರ ಪೂಜಾಪದಾನಿ ಮೇ ॥ ೪೨

ಸೂರ್ಯೇ ತು ವಿದ್ಯಯಾ ತ್ರಯ್ಯಾ ಹವಿಷಾಗ್ನೌ ಯಜೇತ ಮಾಮ್ ।
ಆತಿಥ್ಯೇನ ತು ವಿಪ್ರಾಗ್ರ್ಯೇ ಗೋಷ್ವಂಗ ಯವಸಾದಿನಾ ॥ ೪೩

---

ನಿರ್ಮಿಸುವ ಉದ್ಯಮ—ಇವೂ ಭಕ್ತಿಯ ಲಕ್ಷಣಗಳು (೩೮). ನನ್ನ ಮಂದಿರದಲ್ಲಿ ಕಸಹೊಡೆಯುವುದು, ಗೋಮಯದಿಂದ ಬಳಿಯುವುದು, ನೀರು ಚಿಮುಕಿಸುವುದು, ಸರ್ವತೋಭದ್ರಾದಿಮಂಡಲಗಳನ್ನು ರಚಿಸುವುದು, ರಂಗವಲ್ಲಿ ಯನ್ನಿಡುವುದು—ಮುಂತಾದ ವಿಧಾನದಿಂದ ದಾಸನಂತೆ ಯಾವ ವಂಚನೆಯೂ ಇಲ್ಲದೆ ನನ್ನನ್ನು ಶುಶ್ರೂಷಿಸುವುದು ಭಕ್ತಿಯ ಲಕ್ಷಣ (೩೯). ಗರ್ವ ಮತ್ತು ಜಂಭಗಳನ್ನು ತ್ಯಜಿಸುವುದು, ತಾನು ಮಾಡಿದ ಒಳ್ಳೆಯ ಕೆಲಸವನ್ನು ಹೇಳಿ ಕೊಳ್ಳದಿರುವುದು—ಇವು ನನಗೆ ಪ್ರಿಯನಾದ ಭಕ್ತನ ಗುಣಗಳು. ಇನ್ನೊಬ್ಬರಿಗೆ ಅರ್ಪಿಸಿದ ದೀಪವನ್ನು ಸಹ ನನಗೆ ಅರ್ಪಿಸಬಾರದು. ಲೋಕದಲ್ಲಿ ತನಗೆ ಯಾವುದು ಅತ್ಯಂತ ಇಷ್ಟವೋ ಅತ್ಯಂತ ಪ್ರಿಯವೋ ಅದೆಲ್ಲವನ್ನೂ ನನಗೆ ಅರ್ಪಿಸಬೇಕು. ಹೀಗೆ ಮಾಡುವುದು ಶ್ರೇಯಸ್ಸಿಗೆ ಕಾರಣವಾಗುತ್ತದೆ (೪೦-೪೧). ಸೌಮ್ಯ-ಉದ್ಧವ, ಸೂರ್ಯ ಅಗ್ನಿ ಬ್ರಾಹ್ಮಣ ಗೋವು ವಿಷ್ಣುಭಕ್ತ ಆಕಾಶ ವಾಯು ಜಲ ಭೂಮಿ ಆತ್ಮ ಸಕಲ ಪ್ರಾಣಿಗಳು—ಇವೆಲ್ಲವೂ ನನ್ನ ಪೂಜಾಸ್ಥಾನಗಳು. ಸೂರ್ಯನಲ್ಲಿ ವೈದಿಕಸೂಕ್ತಗಳಿಂದ ಮಾಡುವ ಉಪಸ್ಥಾನಾದಿಗಳಿಂದಲೂ ಅಗ್ನಿಯಲ್ಲಿ ಹವಿಸ್ಸಿನಿಂದಲೂ ನನ್ನನ್ನು ಅರ್ಚಿಸಬೇಕು. ಬ್ರಾಹ್ಮಣನಲ್ಲಿ ಅತಿಥಿಸತ್ಕಾರದಿಂದಲೂ ಗೋವುಗಳಲ್ಲಿ ತವುಡು ಮೊದಲಾದ್ದರಿಂದಲೂ

ವೈಷ್ಣವೇ ಬಂಧುಸತ್ಕೃತ್ಯಾ ಹೃದಿ ಖೇ ಧ್ಯಾನನಿಷ್ಠಯಾ ।
ವಾಯೌ ಮುಖ್ಯಧಿಯಾ ತೋಯೇ ದ್ರವ್ಯೈಸ್ತೋಯಪುರಸ್ಕೃತೈಃ ॥ ೪೪

ಸ್ಥಂಡಿಲೇ ಮಂತ್ರಹೃದಯೈರ್ಭೋಗೈರಾತ್ಮಾನಮಾತ್ಮನಿ ।
ಕ್ಷೇತ್ರಜ್ಞಂ ಸರ್ವಭೂತೇಷು ಸಮತ್ವೇನ ಯಜೇತ ಮಾಮ್ ॥ ೪೫

ಧಿಷ್ಣ್ಯೇಷ್ವೇಷ್ವಿತಿ ಮದ್ರೂಪಂ ಶಂಖಚಕ್ರಗದಾಂಬುಜೈಃ ।
ಯುಕ್ತಂ ಚತುರ್ಭುಜಂ ಶಾಂತಂ ಧ್ಯಾಯನ್ನರ್ಚೇತ್ ಸಮಾಹಿತಃ ॥ ೪೬

ಇಷ್ಟಾಪೂರ್ತೇನ ಮಾಮೇವಂ ಯೋ ಯಜೇತ ಸಮಾಹಿತಃ ।
ಲಭತೇ ಮಯಿ ಸದ್ಭಕ್ತಿಂ ಮತ್ಸ್ಮೃತಿಃ ಸಾಧುಸೇವಯಾ ॥ ೪೭

ಪ್ರಾಯೇಣ ಭಕ್ತಿಯೋಗೇನ ಸತ್ಸಂಗೇನ ವಿನೋದ್ಧವ ।
ನೋಪಾಯೋ ವಿದ್ಯತೇ ಸಧ್ರ್ಯಙ್ ಪ್ರಾಯಣಂ ಹಿ ಸತಾಮಹಮ್ ॥ ೪೮

---

ನನ್ನನ್ನು ಅರ್ಚಿಸತಕ್ಕದ್ದು (೪೨-೪೩). ವಿಷ್ಣುಭಕ್ತನಲ್ಲಿ ಬಂಧುಸತ್ಕಾರದಿಂದಲೂ ಹೃದಯಾಕಾಶದಲ್ಲಿ ಧ್ಯಾನದಿಂದಲೂ ವಾಯುವಿನಲ್ಲಿ ಮುಖ್ಯಪ್ರಾಣನೆಂಬ ಬುದ್ಧಿಯಿಂದಲೂ ಜಲದಲ್ಲಿ ಜಲಾದಿತರ್ಪಣಗಳಿಂದಲೂ ಭೂಮಿಯಲ್ಲಿ ರಹಸ್ಯಮಂತ್ರನ್ಯಾಸಗಳಿಂದಲೂ ತನ್ನ ಆತ್ಮನಲ್ಲಿ ವಿವಿಧಭೋಗಗಳು ಆತ್ಮಾರ್ಪಣಗಳೆಂಬ ಬುದ್ಧಿಯಿಂದಲೂ ಸಕಲಪ್ರಾಣಿಗಳಲ್ಲಿ ಸಮತ್ವಬುದ್ಧಿಯಿಂದಲೂ ಕ್ಷೇತ್ರಜ್ಞನಾದ ನನ್ನನ್ನು ಅರ್ಚಿಸಬೇಕು (೪೪-೪೫). ಈ ಎಲ್ಲ ಸ್ಥಾನಗಳಲ್ಲಿಯೂ ಶಂಖ ಚಕ್ರ ಗದಾ ಪದ್ಮಗಳಿಂದ ಸಹಿತವಾದ ಚತುರ್ಭುಜವೂ ಶಾಂತವೂ ಆದ ನನ್ನ ರೂಪವನ್ನು ಧ್ಯಾನಿಸುತ್ತ ಸಮಾಹಿತನಾಗಿ ನನ್ನನ್ನು ಅರ್ಚಿಸಬೇಕು (೪೬). [1]ಇಷ್ಟಾಪೂರ್ತವೆಂಬ ಪೂರ್ವೋಕ್ತ ವಿಧಾನದಿಂದಲೂ ಯಾವಾತನು ಈ ರೀತಿ ಸಮಾಹಿತನಾಗಿ ನನ್ನನ್ನು ಪೂಜಿಸುತ್ತಾನೋ ಅವನಿಗೆ ನನ್ನಲ್ಲಿ ಭಕ್ತಿಯು ದೃಢವಾಗಿ ನೆಲೆಸುವುದು. ಅನಂತರ ಸಾಧುಸಂಗದಿಂದ ನನ್ನ ಜ್ಞಾನ ಉಂಟಾಗುವುದು (೪೭). ಉದ್ಧವ, ಸತ್ಸಂಗ ರಹಿತವಾದ ಯಾವ ಭಕ್ತಿಯೋಗ ಉಂಟೋ ಇದನ್ನು ಬಿಟ್ಟರೆ, (ಸಂಸಾರವನ್ನು

1. ಇಷ್ಟಾಪೂರ್ತ = ಅಗ್ನಿಹೋತ್ರಾದಿ ವೈದಿಕಕರ್ಮಗಳು ಇಷ್ಟ, ದೇವಾಲಯ ತಟಾಕಾದಿನಿರ್ಮಾಣಗಳು ಪೂರ್ತ.

ಅಥೈತತ್ ಪರಮಂ ಗುಹ್ಯಂ ಶೃಣ್ವತೋ ಯದುನಂದನ ।
ಸುಗೋಪ್ಯಮಪಿ ವಕ್ಷ್ಯಾಮಿ ತ್ವಂ ಮೇ ಭೃತ್ಯಃ ಸುಹೃತ್ ಸಖಾ ॥ ೪೯

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಏಕಾದಶಾಧ್ಯಾಯಃ



---

ದಾಟುವುದಕ್ಕೆ) ಉತ್ತಮವಾದ ಇನ್ನೊಂದು ಉಪಾಯವಿಲ್ಲ. ಏಕೆಂದರೆ, ಸಜ್ಜನರಿಗೆ ನಾನು ಪ್ರಧಾನವಾದ ಆಶ್ರಯ (೪೮). ಹೇ ಯದುನಂದನ—ಉದ್ಧವ, ಪರಮಗೋಪ್ಯವಾದ ಈ ವಿಚಾರವನ್ನು ಶ್ರದ್ಧೆಯಿಂದ ಆಲಿಸುತ್ತಿದ್ದೀಯೆ. ಈ ಸತ್ಸಂಗದ ಮಹಿಮೆಯು ಅತ್ಯಂತಗೋಪ್ಯವಾದರೂ ನಿನಗೆ ಹೇಳುವೆನು. ನೀನು ನನಗೆ ಭೃತ್ಯನಾಗಿದ್ದೀಯೆ ; ಮಿತ್ರನಾಗಿದ್ದೀಯೆ—ಎಂದನು (೪೯).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯ



# ದ್ವಾದಶಾಧ್ಯಾಯಃ

ಶ್ರೀ ಭಗವಾನುವಾಚ—

ನ ರೋಧಯತಿ ಮಾಂ ಯೋಗೋ ನ ಸಾಂಖ್ಯಂ ಧರ್ಮ ಏವ ಚ ।
ನ ಸ್ವಾಧ್ಯಾಯಸ್ತಪಸ್ತ್ಯಾಗೋ ನೇಷ್ಟಾಪೂರ್ತಂ ನ ದಕ್ಷಿಣಾ ॥ ೧

ವ್ರತಾನಿ ಯಜ್ಞಶ್ಛಂದಾಂಸಿ ತೀರ್ಥಾನಿ ನಿಯಮಾ ಯಮಾಃ ।
ಯಥಾವರುಂಧೇ ಸತ್ಸಂಗಃ ಸರ್ವಸಂಗಾಪಹೋ ಹಿ ಮಾಮ್ ॥ ೨

ಸತ್ಸಂಗೇನ ಹಿ ದೈತೇಯ ಯಾತುಧಾನಾ ಮೃಗಾಃ ಖಗಾಃ ।
ಗಂಧರ್ವಾಪ್ಸರಸೋ ನಾಗಾಃ ಸಿದ್ಧಾಶ್ಚಾರಣಗುಹ್ಯಕಾಃ ॥ ೩

## ಅಧ್ಯಾಯ ೧೨

ಸತ್ಸಂಗದ ಮಹಿಮೆ. ಪರಾ, ಪಶ್ಯಂತೀ—ಮುಂತಾದ ಶಬ್ದಸ್ವರೂಪ
ಸಂಸಾರವೃಕ್ಷ, ಕರ್ಮತ್ಯಾಗಗಳ ನಿರೂಪಣೆ

ಭಗವಂತನು ಹೇಳಿದನು : ಉದ್ಧವ, ಸತ್ಸಂಗವು ನನ್ನನ್ನು ವಶಪಡಿಸಿಕೊಳ್ಳುವಹಾಗೆ ಪ್ರಾಣಾಯಾಮಾದಿಯೋಗವಾಗಲಿ, ತತ್ತ್ವವಿವೇಕರೂಪವಾದ ಸಾಂಖ್ಯವಾಗಲಿ, ಅಹಿಂಸಾದಿ ಧರ್ಮವಾಗಲಿ ವಶಪಡಿಸಿಕೊಳ್ಳಲಾರದು. ವೇದ-ಪಾರಾಯಣ, ಕೃಚ್ಛ್ರಾದಿ ತಪಸ್ಸು, ಸಂನ್ಯಾಸ, ಅಗ್ನಿಹೋತ್ರವೇ ಮುಂತಾದ ಇಷ್ಟಕರ್ಮ, ವಾಪೀಕೂಪನಿರ್ಮಾಣ—ಮುಂತಾದ ಪೂರ್ತಕರ್ಮ, ದಾನ—ಮೊದಲಾದ ಪುಣ್ಯಕೃತ್ಯಗಳಿಗೂ ನಾನು ಅಷ್ಟು ಒಲಿಯತಕ್ಕವನಲ್ಲ (೧). ಏಕಾದಶ್ಯುಪವಾಸಾದಿವ್ರತಗಳು, ದೇವತಾಪೂಜೆ, ರಹಸ್ಯ ಮಂತ್ರಜಪ, ಗಂಗಾದಿ ತೀರ್ಥಕ್ಷೇತ್ರಯಾತ್ರೆ, ಯಮ, ನಿಯಮಗಳು—ಇವುಗಳಾವುದಕ್ಕೂ ನಾನು ಅಷ್ಟಾಗಿ ಒಲಿಯತಕ್ಕವನಲ್ಲ. ಸರ್ವದುಃಸಂಗಗಳನ್ನೂ ಹೋಗಲಾಡಿಸುವ ಸತ್ಸಂಗವು ಮಾತ್ರ ಇವೆಲ್ಲವಕ್ಕಿಂತ ಹೆಚ್ಚಾಗಿ ನನ್ನನ್ನು ವಶಪಡಿಸಿಕೊಳ್ಳುತ್ತದೆ (೨). ಸತ್ಸಂಗದ ಬಲದಿಂದ ದೈತ್ಯರೂ, ರಾಕ್ಷಸರೂ, ಮೃಗಖಗಗಳೂ, ಗಂಧರ್ವಾಪ್ಸರೆಯರೂ, ನಾಗಸಿದ್ಧಚಾರಣಗುಹ್ಯಕರೂ, ವಿದ್ಯಾಧರರೂ ನನ್ನ ಪದವನ್ನು ಪಡೆದಿದ್ದಾರೆ. ಹಾಗೆಯೇ ಮನುಷ್ಯರಲ್ಲಿ ವೈಶ್ಯಶೂದ್ರರೂ, ಸ್ತ್ರೀಯರೂ,

ವಿದ್ಯಾಧರಾ ಮನುಷ್ಯೇಷು ವೈಶ್ಯಾಃ ಶೂದ್ರಾಃ ಸ್ತ್ರಿಯೋಽಂತ್ಯಜಾಃ ।
ರಜಸ್ತಮಃ ಪ್ರಕೃತಯಸ್ತಸ್ಮಿಂಸ್ತಸ್ಮಿನ್ ಯುಗೇಽನಘ ॥ ೪
ಬಹವೋ ಮತ್ಪದಂ ಪ್ರಾಪ್ತಾಸ್ತ್ವಾಷ್ಟ್ರಕಾಯಾಧವಾದಯಃ ।
ವೃಷಪರ್ವಾ ಬಲಿರ್ಬಾಣೋ ಮಯಶ್ಚಾಥ ವಿಭೀಷಣಃ ॥ ೫
ಸುಗ್ರೀವೋ ಹನುಮಾನೃಕ್ಷೋ ಗಜೋ ಗೃಧ್ರೋ ವಣಿಕ್ಪಥಃ ।
ವ್ಯಾಧಃ ಕುಬ್ಜಾ ವ್ರಜೇ ಗೋಪ್ಯೋ ಯಜ್ಞಪತ್ನ್ಯಸ್ತಥಾಪರೇ ॥ ೬
ತೇ ನಾಧೀತಶ್ರುತಿಗಣಾ ನೋಪಾಸಿತಮಹತ್ತಮಾಃ ।
ಅವ್ರತಾತಪ್ತತಪಸಃ ಸತ್ಸಂಗಾನ್ಮಾಮುಪಾಗತಾಃ ॥ ೭
ಕೇವಲೇನ ಹಿ ಭಾವೇನ ಗೋಪ್ಯೋ ಗಾವೋ ನಗಾ ಮೃಗಾಃ ।
ಯೇಽನ್ಯೇ ಮೂಢಧಿಯೋ ನಾಗಾಃ ಸಿದ್ಧಾ ಮಾಮೀಯುರಂಜಸಾ ॥ ೮
ಯಂ ನ ಯೋಗೇನ ಸಾಂಖ್ಯೇನ ದಾನವ್ರತತಪೋಽಧ್ವರೈಃ ।
ವ್ಯಾಖ್ಯಾಸ್ವಾಧ್ಯಾಯಸಂನ್ಯಾಸೈಃ ಪ್ರಾಪ್ನುಯಾದ್ ಯತ್ನವಾನಪಿ ॥ ೯

ಅಂತ್ಯಜರೂ—ಈ ಪ್ರಕಾರವಾಗಿ ಬೇರೆಬೇರೆ ಯುಗಗಳಲ್ಲಿ ರಜೋಗುಣತಮೋಗುಣ ಪ್ರಧಾನರಾದವರೂ ಸಹ—ನನ್ನ ಪಾದವನ್ನು ಸೇರಿಕೊಂಡಿದ್ದಾರೆ (೩–೪). ವೃತ್ರಾಸುರ, ಕಯಾಧುವಿನ ಮಗನಾದ ಪ್ರಹ್ಲಾದ, ವೃಷಪರ್ವ, ಬಲಿ, ಬಾಣ, ಮಯ, ವಿಭೀಷಣ, ಸುಗ್ರೀವ, ಹನುಮಂತ, ಜಾಂಬವಂತ, ಗಜೇಂದ್ರ, ಜಟಾಯು, ತುಲಾಧಾರನೆಂಬ ವೈಶ್ಯ, ಧರ್ಮವ್ಯಾಧ, ಕುಬ್ಜೆ, ಗೋಕುಲದಲ್ಲಿದ್ದ ಗೋಪಿಯರು, ಯಜ್ಞದೀಕ್ಷಿತರಾಗಿದ್ದ ವಿಪ್ರರ ಪತ್ನಿಯರು—ಹೀಗೆಯೇ ಇನ್ನೂ ಅನೇಕರು ಸಾಧುಸಂಗದಿಂದ ನನ್ನ ಪದವನ್ನು ಪಡೆದಿದ್ದಾರೆ (೫–೬). ಅವರೇನೂ ವೇದರಾಶಿಯನ್ನು ಅಧ್ಯಯನ ಮಾಡಿದವರಲ್ಲ. ಮಹಾತ್ಮರನ್ನು ಸೇವಿಸಿದವರಲ್ಲ. ವ್ರತವನ್ನಾಗಲಿ, ತಪಸ್ಸನ್ನಾಗಲಿ ಆಚರಿಸಿದವರಲ್ಲ. ಅವರು ಕೇವಲ ನನ್ನ ಅಥವಾ ನನ್ನ ಭಕ್ತರ ಸಂಗಮಹಿಮೆಯಿಂದ ನನ್ನನ್ನು ಪಡೆದರು. ಸತ್ಸಂಗದಿಂದಾದ ಪ್ರೇಮ ಭಾವದಿಂದಲೇ ಗೋಪಿಯರೂ ಗೋವುಗಳೂ ನನ್ನನ್ನು ಪಡೆದಿದ್ದಾರೆ. ವೃಕ್ಷಗಳೂ, ಮೃಗಗಳೂ, ಮೂಢಬುದ್ಧಿಯ ಕಾಳಿಯಾದಿ ನಾಗಗಳೂ, ಸಿದ್ಧರೂ ಶೀಘ್ರವಾಗಿ ನನ್ನನ್ನು ಪಡೆದು ಕೃತಾರ್ಥರಾದದ್ದು ಸತ್ಸಂಗದಿಂದಲೇ (೭–೮). ಸಾಂಖ್ಯ ಯೋಗಗಳಿಂದಲೂ, ದಾನವ್ರತತಪೋಯಾಗಗಳಿಂದಲೂ ಅಧ್ಯಾಪನ ಅಧ್ಯಯನ

ರಾಮೇಣ ಸಾರ್ಧಂ ಮಧುರಾಂ ಪ್ರಣೀತೇ
ಶ್ವಾಫಲ್ಕಿನಾ ಮಯ್ಯನುರಕ್ತಚಿತ್ತಾಃ ।
ವಿಗಾಢಭಾವೇನ ನ ಮೇ ವಿಯೋಗ-
ತೀವ್ರಾಧಯೋऽನ್ಯಂ ದದೃಶುಃ ಸುಖಾಯ ॥ ೧೦

ತಾಸ್ತಾಃ ಕ್ಷಪಾಃ ಪ್ರೇಷ್ಠತಮೇನ ನೀತಾ
ಮಯೈವ ಬೃಂದಾವನಗೋಚರೇಣ ।
ಕ್ಷಣಾರ್ಧವತ್ತಾಃ ಪುನರಂಗ ತಾಸಾಂ
ಹೀನಾ ಮಯಾ ಕಲ್ಪಸಮಾ ಬಭೂವುಃ ॥ ೧೧

ತಾ ನಾವಿದನ್ ಮಯ್ಯನುಷಂಗ ಬದ್ಧ-
ಧಿಯಃ ಸ್ವಮಾತ್ಮಾನಮದಸ್ತಥೇದಮ್ ।
ಯಥಾ ಸಮಾಧೌ ಮುನಯೋऽಬ್ಧಿತೋಯೇ
ನದ್ಯಃ ಪ್ರವಿಷ್ಟಾ ಇವ ನಾಮರೂಪೇ ॥ ೧೨

ಸಂನ್ಯಾಸಗಳಿಂದಲೂ ಪ್ರಯತ್ನಿಸಿದವರಿಗೆ ದುರ್ಲಭನಾದ ನನ್ನನ್ನು [1]ಸತ್ಸಂಗದ ಮಹಿಮೆಯಿಂದ ಅವರು ಪಡೆದಿದ್ದಾರೆ (೯) ಹಿಂದೆ ಅಕ್ರೂರನು ನನ್ನನ್ನು ಬಲರಾಮನೊಡನೆ ಮಧುರೆಗೆ ಕರೆದೊಯ್ಯಲಾಗಿ, ಗೋಪಿಯರು ನನ್ನ ವಿರಹದಿಂದ ದುಃಸಹವಾದ ಮನೋವ್ಯಥೆಯನ್ನನುಭವಿಸಿದರು. ನನ್ನಲ್ಲಿರಿಸಿದ ದೃಢಪ್ರೇಮದಿಂದ ಆ ಗೋಪಿಯರಿಗೆ ನನ್ನನ್ನು ಬಿಟ್ಟು ಇನ್ನು ಯಾವುದೂ ಸುಖಕರವಾಗಿ ಕಾಣಲಿಲ್ಲ (೧೦). ಅವರಿಗೆ ಪರಮಪ್ರಿಯತಮನಾದ ನನ್ನೊಡನೆ ವೃಂದಾವನದಲ್ಲಿ ಯಾವ ರಾತ್ರಿಗಳನ್ನು ಕ್ಷಣಾರ್ಧದಂತೆ ಕಳೆದಿದ್ದರೋ ಆ ರಾತ್ರಿಗಳೇ ನಾನಿಲ್ಲದಾಗ ಅವರಿಗೆ ಎಷ್ಟೋ ಯುಗಗಳಂತೆ ತೋರಿದವು ! (೧೧). ಪ್ರೇಮದಿಂದ ಅವರ ಮನಸ್ಸು ನನ್ನಲ್ಲಿ ನೆಟ್ಟುಹೋಗಿತ್ತು. ಸಮುದ್ರಜಲದಲ್ಲಿ ಪ್ರವೇಶಿಸಿದ ನದಿಗಳು ತಮ್ಮ ನಾಮರೂಪಗಳನ್ನು ಕಳೆದುಕೊಳ್ಳುವ ಹಾಗೆ, ನನ್ನಲ್ಲಿ ಅನುರಾಗದಿಂದ ಪ್ರವೇಶಿಸಿದ ಗೋಪಿಯರು ತಮ್ಮ ನಾಮರೂಪಗಳನ್ನೇ ಮರೆತುಬಿಟ್ಟಿದ್ದರು. ಮುನಿಗಳಿಗೆ ಸಮಾಧಿಯಲ್ಲಿ ತಮ್ಮ ನಾಮರೂಪಗಳ ಅರಿವು ಹೇಗೆ ಇರುವುದಿಲ್ಲವೋ

1. ಸತ್ಸಂಗವೆಂದರೆ ಭಗವಂತನ ಸಂಗ ಮತ್ತು ಭಗವದ್ಭಕ್ತರ ಸಂಗ. ಇದರಿಂದ ಶ್ರೀಕೃಷ್ಣನಲ್ಲಿ ಭಕ್ತಿ ಉದಿಸಿ ದೃಢವಾಗುತ್ತದೆ. ಆ ಭಕ್ತಿಯೇ ಇಲ್ಲಿ ವಿವಕ್ಷಿತ.

ಮತ್ಕಾಮಾ ರಮಣಂ ಜಾರಮಸ್ವರೂಪವಿದೋಽಬಲಾಃ ।
ಬ್ರಹ್ಮ ಮಾಂ ಪರಮಂ ಪ್ರಾಪುಃ ಸಂಗಾಚ್ಛತಸಹಸ್ರಶಃ ॥ ೧೩

ತಸ್ಮಾತ್ತ್ವ ಮುದ್ಧವೋತ್ಸೃಜ್ಯ ಚೋದನಾಂ ಪ್ರತಿಚೋದನಾಮ್ ।
ಪ್ರವೃತ್ತಂ ಚ ನಿವೃತ್ತಂ ಚ ಶ್ರೋತವ್ಯಂ ಶ್ರುತಮೇವ ಚ ॥ ೧೪

ಮಾಮೇಕಮೇವ ಶರಣಮಾತ್ಮಾನಂ ಸರ್ವದೇಹಿನಾಮ್ ।
ಯಾಹಿ ಸರ್ವಾತ್ಮಭಾವೇನ ಮಯಾ ಸ್ಯಾ ಹ್ಯಕುತೋಭಯಃ ॥ ೧೫

ಉದ್ಧವ ಉವಾಚ—

ಸಂಶಯಃ ಶೃಣ್ವತೋ ವಾಚಂ ತವ ಯೋಗೇಶ್ವರೇಶ್ವರ ।
ನ ನಿವರ್ತತ ಆತ್ಮಸ್ಥೋ ಯೇನ ಭ್ರಾಮ್ಯತಿ ಮೇ ಮನಃ ॥ ೧೬

---

ಹಾಗೆ ಆ ಸ್ತ್ರೀಯರಿಗೆ ತಮ್ಮ ಪತಿಪುತ್ರಾದಿಗಳ ಅರಿವಾಗಲಿ, ಕಡೆಗೆ ತಮ್ಮ ದೇಹದ ಅರಿವಾಗಲಿ ಇರಲಿಲ್ಲ! (೧೨). ನನ್ನನ್ನು ಕಾಮಿಸುತ್ತಿದ್ದ ಆ ಅಬಲೆಯರಿಗೆ ನನ್ನ ಪರಮಾರ್ಥಸ್ವರೂಪವೇನೆಂಬುದು ಗೊತ್ತಿರಲಿಲ್ಲ. ನಾನು ರಮಣನೆಂಬ ಜಾರಬುದ್ಧಿಯಿಂದ ಪರಬ್ರಹ್ಮನಾದ ನನ್ನ ಬಳಿಗೆ ಬಂದಿದ್ದರು. ಆದರೆ ಸತ್ಸಂಗದ ಮಹಿಮೆಯಿಂದ ನೂರಾರು ಸಾವಿರಾರು ಗೋಪಿಯರು ನನ್ನ ಪರಮಪದವನ್ನೈದಿದರು (೧೩). ಆದ್ದರಿಂದ, ಉದ್ಧವ, ವಿಧಿ-ನಿಷೇಧ—ಪ್ರವೃತ್ತಿಮಾರ್ಗ—ನಿವೃತ್ತಿಮಾರ್ಗ—ಇದು ಶ್ರೋತವ್ಯ—ಇದು ಶ್ರುತವಾಯಿತು—ಇತ್ಯಾದಿ ಕರ್ಮವಿಚಾರಗಳನ್ನು ಬದಿಗಿಟ್ಟು, ಸರ್ವದೇಹಿಗಳಿಗೂ ಆತ್ಮನಾಗಿರುವ ಅದ್ವಿತೀಯನಾದ ನನಗೇ ಸರ್ವಾತ್ಮನೆಂಬ ಭಾವದಿಂದ [1]ಶರಣಾಗು. ನಿರ್ಭಯನಾಗಿರು" ಎಂದನು (೧೪-೧೫). ಆಗ ಉದ್ಧವನು "ಹೇ ಯೋಗೇಶ್ವರೇಶ್ವರ, ನಿನ್ನ ಉಪದೇಶವಾಕ್ಯವನ್ನು ಕೇಳುತ್ತಿರುವಾಗ ನನ್ನ ಹೃದಯದಲ್ಲುಂಟಾದ [2]ಸಂಶಯವು ಹೋಗುತ್ತಿಲ್ಲ. ನನ್ನ ಮನಸ್ಸು ಗಿರ್ರೆಂದು ತಿರುಗುವಂತಾಗುತ್ತಿದೆ" ಎಂದನು. (೧೬).

---

1. ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥
—ಗೀತಾ ೧೮-೬೬

2. ವಿಹಿತಕರ್ಮಗಳನ್ನು ಮಾಡಬೇಕೆಂದು ಹೇಳಿದ್ದೀಯೆ. ಈಗ ಎಲ್ಲವನ್ನು ಬಿಟ್ಟು ಶರಣಾಗು ಎನ್ನುತ್ತೀಯೆ—ಆದ್ದರಿಂದ ಸಂಶಯ.

*

ಶ್ರೀಭಗವಾನುವಾಚ—

ಸ ಏಷ ಜೀವೋ ವಿವರಪ್ರಸೂತಿಃ
ಪ್ರಾಣೇನ ಘೋಷೇಣ ಗುಹಾಂ ಪ್ರವಿಷ್ಟಃ
ಮನೋಮಯಂ ಸೂಕ್ಷ್ಮಮುಪೇತ್ಯ ರೂಪಂ
ಮಾತ್ರಾ ಸ್ವರೋ ವರ್ಣ ಇತಿ ಸ್ಥವಿಷ್ಠಃ ॥ ೧೭

ಯಥಾನಲಃ ಖೇಽನಿಲಬಂಧುರೂಷ್ಮಾ
ಬಲೇನ ದಾರುಣ್ಯಧಿಮಥ್ಯಮಾನಃ ।
ಅಣುಃ ಪ್ರಜಾತೋ ಹವಿಷಾ ಸಮಿಧ್ಯತೇ
ತಥೈವ ಮೇ ವ್ಯಕ್ತಿರಿಯಂ ಹಿ ವಾಣೀ ॥ ೧೮

ಏವಂ ಗದಿಃ ಕರ್ಮ ಗತಿರ್ವಿಸರ್ಗೋ
ಘ್ರಾಣೋ ರಸೋ ದೃಕ್ ಸ್ಪರ್ಶಃ ಶ್ರುತಿಶ್ಚ ।
ಸಂಕಲ್ಪವಿಜ್ಞಾನಮಥಾಭಿಮಾನಃ
ಸೂತ್ರಂ ರಜಃಸತ್ತ್ವತಮೋವಿಕಾರಃ ॥ ೧೯

---

ಅದಕ್ಕೆ ಭಗವಂತನಿಂತೆಂದನು : “ ಮೂಲಾಧಾರಾದಿ ಚಕ್ರಗಳಲ್ಲಿ ಅಭಿವ್ಯಕ್ತನಾದ ಪರಮೇಶ್ವರನು (ಪ್ರಾಣಧಾರಣೆಗೆ ಕಾರಣನಾಗಿ) ಇದೋ ಈ ಜೀವನೆನಿಸಿದ್ದಾನೆ. ಪರಮೇಶ್ವರನು (ಪರಾ ಎಂಬ ಹೆಸರಿನ) ನಾದಸ್ವರೂಪದಿಂದ ಪ್ರಾಣದೊಡನೆ ಮೂಲಾಧಾರವೆಂಬ ಗುಹೆಯನ್ನು ಪ್ರವೇಶಿಸಿದನು. ಅನಂತರ ಮನೋಮಯವೂ ಸೂಕ್ಷ್ಮವೂ ಆದ ಪಶ್ಯಂತೀರೂಪವನ್ನು ಧರಿಸಿ ( ಮಣಿಪೂರಚಕ್ರವನ್ನೂ ) ಮಧ್ಯಮಾರೂಪವನ್ನು ಧರಿಸಿ (ವಿಶುದ್ಧಿಚಕ್ರವನ್ನೂ ಪ್ರವೇಶಿಸಿ), ಆಮೇಲೆ (ವಕ್ತ್ರದಲ್ಲಿ) ಹ್ರಸ್ವಾದಿಮಾತ್ರೆ, ಉದಾತ್ತಾದಿಸ್ವರ, ಕಕಾರಾದಿ ವರ್ಣರೂಪಗಳನ್ನು ಪಡೆದು ಸ್ಥೂಲವಾದ (ವೈಖರೀ) ಶಬ್ದರೂಪವನ್ನು [1]ಪಡೆದಿದ್ದಾನೆ (೧೭). ಆಕಾಶದಲ್ಲಿ ಅಗ್ನಿಯು ಊಷ್ಮರೂಪದಿಂದ ಅವ್ಯಕ್ತವಾಗಿ ಸೂಕ್ಷ್ಮವಾಗಿರುತ್ತದೆ. ಮರದ ಅರಣಿಯಲ್ಲಿ ಬಲಪೂರ್ವಕವಾಗಿ ಕಡೆದಾಗ ಕಿಡಿಯಾಗಿ ಅಣುರೂಪದಿಂದ ಕಾಣಿಸಿಕೊಳ್ಳುತ್ತದೆ. ಅನಂತರ ಹವಿಸ್ಸನ್ನು ಹಾಕಿದಾಗ ಜ್ವಾಲೆಯಾಗಿ ಕಾಣಿಸಿಕೊಳ್ಳುತ್ತದೆ. ಹಾಗೆಯೇ ಈ ವಾಕ್ ಎನ್ನುವುದು ಕ್ರಮವಾಗಿ ಗೋಚರಿಸುವ ನನ್ನ ಅಭಿವ್ಯಕ್ತಿಯೇ ಸರಿ (೧೮). ಹೀಗೆ ಮಾತು ನನ್ನ ಅಭಿವ್ಯಕ್ತಿಯಾಗಿರುವಂತೆ

---

1. ಶಬ್ದವು ಪರಮೇಶ್ವರನ ಅಭಿವ್ಯಕ್ತಸ್ವರೂಪವೆಂದು ತಾತ್ಪರ್ಯ.

ಅಯಂ ಹಿ ಜೀವಸ್ತ್ರಿವೃದಬ್ಜಯೋನಿ-
ರವ್ಯಕ್ತ ಏಕೋ ವಯಸಾ ಸ ಆದ್ಯಃ ।
ವಿಶ್ಲಿಷ್ಟಶಕ್ತಿರ್ಬಹುಧೇವ ಭಾತಿ
ಬೀಜಾನಿ ಯೋನಿಂ ಪ್ರತಿಪದ್ಯ ಯದ್ವತ್ ॥ ೨೦

ಯಸ್ಮಿನ್ನಿದಂ ಪ್ರೋತಮಶೇಷಮೋತಂ
ಪಟೋ ಯಥಾ ತಂತುವಿತಾನಸಂಸ್ಥಃ ।
ಯ ಏಷ ಸಂಸಾರತರುಃ ಪುರಾಣಃ
ಕರ್ಮಾತ್ಮಕಃ ಪುಷ್ಪಫಲೇ ಪ್ರಸೂತೇ ॥ ೨೧

---

ಭಾಷಣ, ಹಸ್ತಗಳ ಕ್ರಿಯೆ, ಗಮನ, ಮಲಮೂತ್ರ ವಿಸರ್ಜನೆ, ಮೂಸುವುದು, ರುಚಿ ನೋಡುವುದು, ದರ್ಶನ, ಸ್ಪರ್ಶನ, ಶ್ರವಣಗಳೂ ಮನಃಕಾರ್ಯವಾದ ಸಂಕಲ್ಪ, ಬುದ್ಧಿಕಾರ್ಯವಾದ ವಿಜ್ಞಾನ, ಅಹಂಕಾರಕಾರ್ಯವಾದ ಅಭಿಮಾನ, ಪ್ರಧಾನಕಾರ್ಯವಾದ ಮಹತ್ತತ್ತ್ವ, ಸತ್ತ್ವರಜಸ್ತಮೋಗುಣಗಳ ವಿಕಾರವಾದ ಸಕಲಪ್ರಪಂಚ—ಇವೆಲ್ಲವೂ ನನ್ನ ಅಭಿವ್ಯಕ್ತಿಯೇ ಆಗಿವೆ (೧೯). ಈ ಜೀವನೆನಿಸಿದ ಈಶ್ವರನು ಆದಿಯಲ್ಲಿ ಅವ್ಯಕ್ತನಾಗಿ ಏಕನೇ ಆಗಿರುತ್ತಾನೆ. ಕಾಲ ಬಂದಾಗ ಈ ಆದಿಪುರುಷನು ವಿಶಿಷ್ಟವಾದ ಮಾಯಾಶಕ್ತಿಯನ್ನು ಧರಿಸಿ ತ್ರಿಗುಣ ಗಳಿಂದ ವೃತನಾಗುತ್ತಾನೆ. ಬೀಜವು ನೆಲವನ್ನು ಸೇರಿ ಕಾಂಡ, ಕೊಂಬೆ, ಎಲೆ, ಹೂ—ಇತ್ಯಾದಿ ನಾನಾರೂಪಗಳನ್ನು ಪಡೆದು, ಒಂದೇ ಹೇಗೆ ಬಹುವಾಗುವುದೋ ಹಾಗೆ, ಆದಿಪುರುಷನು ಮಾಯಾಶಕ್ತಿವಿಶಿಷ್ಟನಾಗಿ ಒಬ್ಬನೇ ಬಹುರೂಪಗಳನ್ನು ಪಡೆದಂತೆ ಕಾಣಿಸಿಕೊಳ್ಳುತ್ತ ಈ [1]ಲೋಕಪದ್ಮಕ್ಕೆ ಕಾರಣನಾಗುತ್ತಾನೆ (೨೦). ತಂತುಸಮುದಾಯದಲ್ಲಿರುವ ವಸ್ತ್ರವು ಉದ್ದ ಎಳೆಗಳ ರೂಪದಿಂದ ಓತವಾಗಿಯೂ ಅಡ್ಡ ಎಳೆಗಳ ರೂಪದಿಂದ ಪ್ರೋತವಾಗಿಯೂ ಇರುವಂತೆ, ಈ ಜಗತ್ತು ನಾನಾ ರೂಪಗಳಿಂದ ಈಶ್ವರನಲ್ಲಿ ಓತಪ್ರೋತವಾಗಿ [2]ಸೇರಿಕೊಂಡಿದೆ. ಈ ವಿಶ್ವವು ಅನಾದಿಯಾದ ಒಂದು ಸಂಸಾರವೃಕ್ಷ. ಕರ್ಮಾತ್ಮಕವಾದ— ಎಂದರೆ—ಪ್ರವೃತ್ತಿ

---

1. ವಿಷ್ಣುವನ್ನು ಪದ್ಮನಾಭನೆಂದು ವರ್ಣಿಸುವುದರ ತತ್ತ್ವಾರ್ಥವು ಇಲ್ಲಿದೆ. ಆತನ ನಾಭಿಯಿಂದ ಹುಟ್ಟತಕ್ಕದ್ದು ಲೋಕಪದ್ಮ—ವಿಶ್ವವೆಂಬ ಕಮಲ.

2. ವಸ್ತ್ರಕ್ಕಿಂತ ಬೇರೆಯಾಗಿ ತಂತುವಿಲ್ಲ. ಈಶ್ವರನಿಗಿಂತ ಬೇರೆಯಾಗಿ ಜಗತ್ತಿಲ್ಲ.

ದ್ವೇ ಅಸ್ಯ ಬೀಜೇ ಶತಮೂಲಸ್ತ್ರಿನಾಲಃ
ಪಂಚಸ್ಕಂಧಃ ಪಂಚರಸಪ್ರಸೂತಿಃ ।
ದಶೈಕಶಾಖೋ ದ್ವಿಸುಪರ್ಣನೀಡ-
ಸ್ತ್ರಿವಲ್ಕಲೋ ದ್ವಿಫಲೋಽರ್ಕಂ ಪ್ರವಿಷ್ಟಃ ॥ ೨೨

ಅದಂತಿ ಚೈಕಂ ಫಲಮಸ್ಯ ಗೃಧ್ರಾ-
ಗ್ರಾಮೇಚರಾ ಏಕಮರಣ್ಯವಾಸಾಃ ।
ಹಂಸಾ ಯ ಏಕಂ ಬಹುರೂಪಮಿಜ್ಯೈ-
ರ್ಮಾಯಾಮಯಂ ವೇದ ಸ ವೇದ ವೇದಮ್ ॥ ೨೩

---

ಸ್ವಭಾವದ ಈ ವೃಕ್ಷವು (ಕರ್ಮಜನ್ಯವಾದ ಅಪೂರ್ವವೆಂಬ) ಹೂವನ್ನೂ (ಸುಖ ದುಃಖಗಳೆಂಬ) ಹಣ್ಣುಗಳನ್ನೂ ಬಿಡುತ್ತದೆ (೨೧). ಈ ಸಂಸಾರವೃಕ್ಷಕ್ಕೆ ಪುಣ್ಯ ಪಾಪಗಳೆಂಬ ಎರಡು ಬೀಜಗಳು ಕಾರಣ. ಇದಕ್ಕೆ ವಾಸನೆಗಳೆಂಬ ನೂರಾರು ಬೇರುಗಳಿವೆ. ಸತ್ತ್ವಾದಿ ತ್ರಿಗುಣಗಳು ಇದರ ಕಾಂಡಗಳು. ಆಕಾಶಾದಿಪಂಚಭೂತ ಗಳು ಈ ಸಂಸಾರವೃಕ್ಷದ ದೊಡ್ಡ ಕೊಂಬೆಗಳು. ಶಬ್ದಾದಿ ಪಂಚವಿಷಯಗಳು ಇದರಲ್ಲಿರುವ ರಸಗಳು. ಏಕಾದಶೇಂದ್ರಿಯಗಳು ಇದರ ಚಿಕ್ಕ ರೆಂಬೆಗಳು. ಈ ವೃಕ್ಷದಲ್ಲಿ ಜೀವಾತ್ಮ ಪರಮಾತ್ಮರೆಂಬ ಎರಡು ಹಕ್ಕಿಗಳ ಗೂಡು (ದೇಹ) ಇದೆ. ಇದಕ್ಕೆ ವಾತಪಿತ್ತಕಫಗಳೆಂಬ ಮೂರು ತೊಗಟೆಗಳಿವೆ. ಸುಖದುಃಖಗಳು ಈ ಮರದ ಎರಡು ಹಣ್ಣುಗಳು. ಈ ಸಂಸಾರವೃಕ್ಷವು [1]ಸೂರ್ಯಮಂಡಲದವರೆಗೂ ವ್ಯಾಪಿಸಿಕೊಂಡಿದೆ (೨೨). ಗ್ರಾಮಚರರಾದ ಗೃಧ್ರಗಳು (ಗೃಹಸ್ಥರಾದ ಕಾಮಿಗಳು) ಈ ವೃಕ್ಷದ ಒಂದು ಫಲವನ್ನು (ದುಃಖವನ್ನು) ಉಣ್ಣುತ್ತಾರೆ. ಅರಣ್ಯವಾಸಿಗಳಾದ ಹಂಸಗಳು (ಸಂನ್ಯಾಸಿಗಳಾದ ಜ್ಞಾನಿಗಳು) ಇನ್ನೊಂದು ಫಲ ವನ್ನು (ಸುಖವನ್ನು) ಭೋಗಿಸುತ್ತಾರೆ. ಒಬ್ಬನೇ ಆದ ಪರಮಾತ್ಮನು ಮಾಯಾ ಮಯನಾಗಿ, ಹೀಗೆ ಬಹುರೂಪನಾಗಿದ್ದಾನೆಂದು ಯಾವಾತನು ಪೂಜ್ಯರಾದ ಗುರುಗಳ ಮೂಲಕ ತಿಳಿದುಕೊಳ್ಳುತ್ತಾನೋ ಅವನೇ ನಿಜವಾಗಿ ವೇದದ ತತ್ತ್ವಾರ್ಥ

---

1. ಸೂರ್ಯಮಂಡಲವನ್ನು ಭೇದಿಸಿ ಹೋದವರಿಗೆ ಸಂಸಾರವಿಲ್ಲ.

ಏವಂ ಗುರೂಪಾಸನಯೈಕಭಕ್ತ್ಯಾ
ವಿದ್ಯಾಕುಠಾರೇಣ ಶಿತೇನ ಧೀರಃ ।
ವಿವೃಶ್ಚ್ಯ ಜೀವಾಶಯಮಪ್ರಮತ್ತಃ
ಸಂಪದ್ಯ ಚಾತ್ಮಾನಮಥ ತ್ಯಜಾಸ್ತ್ರಮ್ ॥ ೨೪

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ದ್ವಾದಶಾಧ್ಯಾಯಃ



ವನ್ನು ಬಲ್ಲವನು (೨೩). ಹೇ ಉದ್ಧವ, ನೀನೂ ಸಹ ಧೀರನಾಗಿ ಏಕಾಂತ ಭಕ್ತಿಯನ್ನಾಚರಿಸಿ, ಗುರೂಪಾಸನೆಯಿಂದ ಆತ್ಮಜ್ಞಾನವನ್ನು ಗಳಿಸು. ಆತ್ಮಜ್ಞಾನವೆಂಬ ಹರಿತವಾದ ಕೊಡಲಿಯಿಂದ ಜೀವೋಪಾಧಿಯಾಗಿರುವ ಲಿಂಗಶರೀರವನ್ನು ಕತ್ತರಿಸಿಹಾಕು. ಅನಂತರ ಪರಮಾತ್ಮನಲ್ಲಿ ಸೇರಿಹೋಗಿ (ಕರ್ಮವೆಂಬ) ಸಾಧನವನ್ನು [1]ತ್ಯಜಿಸಿಬಿಡು" ಎಂದನು (೨೪).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯ



1. ಚಿತ್ತಶುದ್ಧಿಯಾಗುವವರೆಗೆ ಕರ್ಮಾಚರಣೆ ಆವಶ್ಯಕ. ಕ್ರಮವಾಗಿ ಕರ್ಮಜಾಡ್ಯವನ್ನು ಬಿಡುತ್ತ ಭಕ್ತಿನಿಷ್ಠನಾಗಬೇಕು. ಅನಂತರ ಆತ್ಮಜ್ಞಾನವಾದಮೇಲೆ ಯಾವ ಕರ್ಮವೂ ಬೇಕಾಗಿಲ್ಲ—ಎಂದು ಅಭಿಪ್ರಾಯ.

# ತ್ರಯೋದಶಾಧ್ಯಾಯಃ

ಶ್ರೀ ಭಗವಾನುವಾಚ—

ಸತ್ತ್ವಂ ರಜಸ್ತಮ ಇತಿ ಗುಣಾ ಬುದ್ಧೇರ್ನ ಚಾತ್ಮನಃ ।
ಸತ್ತ್ವೇನಾನ್ಯತಮೌ ಹನ್ಯಾತ್ ಸತ್ತ್ವಂ ಸತ್ತ್ವೇನ ಚೈವ ಹಿ ॥ ೧

ಸತ್ತ್ವಾದ್ ಧರ್ಮೋ ಭವೇದ್ ವೃದ್ಧಾತ್ ಪುಂಸೋ ಮದ್ಭಕ್ತಿಲಕ್ಷಣಃ ।
ಸಾತ್ತ್ವಿಕೋಪಾಸಯಾ ಸತ್ತ್ವಂ ತತೋ ಧರ್ಮಃ ಪ್ರವರ್ತತೇ ॥ ೨

ಧರ್ಮೋ ರಜಸ್ತಮೋ ಹನ್ಯಾತ್ ಸತ್ತ್ವವೃದ್ಧಿರನುತ್ತಮಃ ।
ಆಶು ನಶ್ಯತಿ ತನ್ಮೂಲೋ ಹ್ಯಧರ್ಮ ಉಭಯೇ ಹತೇ ॥ ೩

## ಅಧ್ಯಾಯ ೧೩

ಸತ್ತ್ವಗುಣದ ವೃದ್ಧಿಯಿಂದ ಜ್ಞಾನೋದಯ. ಭಗವಂತನು ಹಂಸರೂಪದಿಂದ ಬ್ರಹ್ಮಾದಿಗಳಿಗೆ ಅಧ್ಯಾತ್ಮವಿದ್ಯೆಯನ್ನು ಉಪದೇಶಿಸುವುದು. ಅವಸ್ಥಾತ್ರಯ ವಿಚಾರ.

ಭಗವಂತನು ಹೇಳಿದನು : "ಉದ್ಧವ, ಸತ್ತ್ವ ರಜಸ್ಸು ತಮಸ್ಸು—ಇವು ಬುದ್ಧಿಯಾದ ಪ್ರಕೃತಿಯ ಗುಣಗಳೇ ಹೊರತು ಆತ್ಮನ [1]ಗುಣಗಳಲ್ಲ. ಆದಕಾರಣ ಸತ್ತ್ವಗುಣದ ವೃದ್ಧಿಯಿಂದ ರಜಸ್ತಮೋವೃತ್ತಿಗಳನ್ನು ಜಯಿಸಬೇಕು. ಅನಂತರ (ವೃತ್ತಿರೂಪವಾದ) ಸತ್ತ್ವಗುಣವನ್ನು (ಉಪಶಮಾತ್ಮಕವಾದ)ಸತ್ತ್ವಗುಣದಿಂದಲೇ ಜಯಿಸಬೇಕು ! (೧). ಮನುಷ್ಯನ ಸತ್ತ್ವಗುಣವು ಬೆಳೆದರೆ ನನ್ನಲ್ಲಿ ಭಕ್ತಿಯೆಂಬ ಧರ್ಮವು ಉತ್ಪನ್ನವಾಗುತ್ತದೆ. ಸಾತ್ತ್ವಿಕ ಪದಾರ್ಥಗಳ ಸೇವನೆಯಿಂದ ಸತ್ತ್ವ ಗುಣವು ಬೆಳೆಯುತ್ತದೆ. ಅದರಿಂದ ಧರ್ಮಬುದ್ಧಿಯುಂಟಾಗುತ್ತದೆ. ಹೀಗೆ ಸತ್ವಗುಣದ ವೃದ್ಧಿಯಿಂದುಂಟಾದ ಶ್ರೇಷ್ಠವಾದ ಧರ್ಮಬುದ್ಧಿಯು ರಜಸ್ತಮೋ ಗುಣಗಳನ್ನು ಅಡಗಿಸುತ್ತದೆ. ಅವೆರಡೂ ನಾಶವಾದಾಗ ಆ ಗುಣಗಳಿಂದುಂಟಾದ ರಾಗದ್ವೇಷಾದಿ ಮೂಲವಾದ ಅಧರ್ಮವು ಶೀಘ್ರವಾಗಿ ನಶಿಸುತ್ತದೆ (೨–೩).

---

1. ಗುಣವು ಆತ್ಮನದಾದರೆ ಜ್ಞಾನಾನಂದಗಳಂತೆ ಆತ್ಮಸ್ವರೂಪವೇ ಆಗಿಬಿಡುವುದರಿಂದ ನಿವೃತ್ತಿಯಾಗುವುದಿಲ್ಲ. ಆಗ ವಿದ್ಯೋತ್ಪತ್ತಿಯೂ ಆಗಲಾರದು.

ಆಗನೋಽಪಃ ಪ್ರಜಾ ದೇಶಃ ಕಾಲಃ ಕರ್ಮ ಚ ಜನ್ಮ ಚ ।
ಧ್ಯಾನಂ ಮಂತ್ರೋಽಥ ಸಂಸ್ಕಾರೋ ದಶೈತೇ ಗುಣಹೇತವಃ ॥ ೪

ತತ್ತತ್ ಸಾತ್ತ್ವಿಕಮೇವೈಷಾಂ ಯದ್ ಯದ್ ವೃದ್ಧಾಃ ಪ್ರಚಕ್ಷತೇ ।
ನಿಂದಂತಿ ತಾಮಸಂ ತತ್ತದ್ ರಾಜಸಂ ತದುಪೇಕ್ಷಿತಮ್ ॥ ೫

ಸಾತ್ತ್ವಿಕಾನ್ಯೇವ ಸೇವೇತ ಪುಮಾನ್ ಸತ್ತ್ವವಿವೃದ್ಧಯೇ ।
ತತೋ ಧರ್ಮಸ್ತತೋ ಜ್ಞಾನಂ ಯಾವತ್ ಸ್ಮೃತಿ ರಪೋಹನಮ್ ॥ ೬

ವೇಣುಸಂಘರ್ಷಜೋ ವಹ್ನಿರ್ದಗ್ಧ್ವಾ ಶಾಮ್ಯತಿ ತದ್ವನಮ್ ।
ಏವಂ ಗುಣವ್ಯತ್ಯಯಜೋ ದೇಹಃ ಶಾಮ್ಯತಿ ತತ್ಕ್ರಿಯಃ ॥ ೭

ಉದ್ಧವ ಉವಾಚ—
ವಿದಂತಿ ಮರ್ತ್ಯಾಃ ಪ್ರಾಯೇಣ ವಿಷಯಾನ್ ಪದಮಾಪದಾಮ್ ।
ತಥಾಪಿ ಭುಂಜತೇ ಕೃಷ್ಣ ತತ್ ಕಥಂ ಶ್ವಖರಾಜವತ್ ॥ ೮

---

ಸಾಮಾನ್ಯವಾಗಿ ಗುಣತ್ರಯಗಳು ವರ್ಧಿಸುವುದಕ್ಕೆ ಶಾಸ್ತ್ರ, ಜಲ, ಜನರು, ದೇಶ, ಕಾಲ, ಕರ್ಮ, ಜನ್ಮ, ಚಿಂತನೆ, ಮಂತ್ರ ಮತ್ತು ಸಂಸ್ಕಾರ—ಈ ಹತ್ತು ಕಾರಣಗಳು. ಇವುಗಳಲ್ಲಿ ಶಾಸ್ತ್ರಜ್ಞರಾದವರು ಯಾವ ಯಾವುದನ್ನು ಹೊಗಳುತ್ತಾರೊ ಅದು ಸಾತ್ವಿಕವಾದದ್ದು—ಎಂದರೆ ಸತ್ತ್ವಗುಣವನ್ನು ಹೆಚ್ಚಿಸುತ್ತದೆ. ಯಾವುದನ್ನು ನಿಂದಿಸುತ್ತಾರೋ ಅದು ತಾಮಸವಾದದ್ದು. ಯಾವುದನ್ನು ಹೊಗಳುವುದೂ ಇಲ್ಲವೋ ನಿಂದಿಸುವುದೂ ಇಲ್ಲವೋ ಅದು ರಾಜಸ (೪-೫). ಮನುಷ್ಯನು ಸತ್ತ್ವಗುಣದ ವೃದ್ಧಿಗಾಗಿ ಸಾತ್ತ್ವಿಕ ವಸ್ತುಗಳನ್ನೇ ಸೇವಿಸಬೇಕು. ಸತ್ತ್ವಗುಣವು ವರ್ಧಿಸಿದರೆ ಸ್ಥೂಲ ದೇಹಾದಿಗಳನ್ನೆಲ್ಲ ಆತ್ಮವಲ್ಲವೆಂದು ತಿರಸ್ಕರಿಸತಕ್ಕ ಮತ್ತು ಅಪರೋಕ್ಷಾನುಭವ ರೂಪವಾಗಿರುವ ಆತ್ಮಜ್ಞಾನವು ಉದಿಸುವುದು (೬). ಬಿದಿರುಗಳು ಒಂದಕ್ಕೊಂದು ಘರ್ಷಿಸಿದಾಗ ಹುಟ್ಟುವ ಬೆಂಕಿಯು ಬಿದಿರುರಾಶಿಯನ್ನೇ ಸುಟ್ಟುಹಾಕಿ ತಾನು ಹೇಗೆ ಶಾಂತವಾಗುವುದೋ ಹಾಗೆ, ಗುಣತ್ರಯ ಸಂಮಿಶ್ರಣದಿಂದ ಹುಟ್ಟಿದ ದೇಹವು ಜ್ಞಾನವನ್ನು ಉತ್ಪಾದಿಸಿ ಅದರ ಮೂಲಕ ಗುಣತ್ರಯವನ್ನು ಸುಟ್ಟು ತಾನೂ ನಾಶವಾಗುವುದು !" (೭). ಆಗ ಉದ್ಧವನು "ಶ್ರೀಕೃಷ್ಣ, ಈ ರಾಜಸ ತಾಮಸ ವಿಷಯಗಳು ನಾನಾ ವಿಪತ್ತುಗಳಿಗೆ ಕಾರಣವೆಂದು ಜನರಿಗೆ ಪ್ರಾಯಶಃ

ಶ್ರೀ ಭಗವಾನುವಾಚ—

ಅಹಮಿತ್ಯನ್ಯಥಾಬುದ್ಧಿಃ ಪ್ರಮತ್ತಸ್ಯ ಯಥಾ ಹೃದಿ ।
ಉತ್ಸರ್ಪತಿ ರಜೋ ಘೋರಂ ತತೋ ವೈಕಾರಿಕಂ ಮನಃ ॥ ೯

ರಜೋಯುಕ್ತಸ್ಯ ಮನಸಃ ಸಂಕಲ್ಪಃ ಸವಿಕಲ್ಪಕಃ ।
ತತಃ ಕಾಮೋ ಗುಣಧ್ಯಾನಾದ್ ದುಸ್ಸಹಃ ಸ್ಯಾದ್ಧಿ ದುರ್ಮತೇಃ ॥ ೧೦

ಕರೋತಿ ಕಾಮವಶಗಃ ಕರ್ಮಾಣ್ಯವಿಜಿತೇಂದ್ರಿಯಃ ।
ದುಃಖೋದರ್ಕಾಣಿ ಸಂಪಶ್ಯನ್ ರಜೋವೇಗವಿಮೋಹಿತಃ ॥ ೧೧

ರಜಸ್ತಮೋಭ್ಯಾಂ ಯದಪಿ ವಿದ್ವಾನ್ ವಿಕ್ಷಿಪ್ತಧೀಃ ಪುನಃ ।
ಅತಂದ್ರಿತೋ ಮನೋ ಯುಂಜನ್ ದೋಷದೃಷ್ಟಿರ್ನ ಸಜ್ಜತೇ ॥ ೧೨

---

ಗೊತ್ತಿರುತ್ತದೆ. ಆದರೂ ಜನರು ಇವುಗಳನ್ನು ನಾಯಿಗಳಂತೆ-ಕತ್ತೆಗಳಂತೆ-[1]ಮೇಕೆಗಳಂತೆ ಸೇವಿಸುತ್ತಾರಲ್ಲ ! ಇದು ಏಕಿರಬಹುದು ? " ಎಂದು ಪ್ರಶ್ನೆ ಮಾಡಿದನು (೮). ಆದಕ್ಕೆ ಶ್ರೀಕೃಷ್ಣನು ಇಂತೆಂದನು : " ವಿವೇಕಶೂನ್ಯನಾದವನಿಗೆ ದೇಹಾದಿಗಳಲ್ಲಿ ' ನಾನು ' ಎಂಬ ಮಿಥ್ಯಾಬುದ್ಧಿಯು ಹೃದಯದಲ್ಲಿ ಹೊಮ್ಮಿದ ಹಾಗೆಲ್ಲ ಘೋರವಾದ—ದುಃಖಾತ್ಮಕವಾದ ರಜೋಗುಣವು ಸತ್ತ್ವವಿಕಾರದಿಂದ ಹುಟ್ಟಿದ ಮನಸ್ಸನ್ನು ಸಹ ವ್ಯಾಪಿಸಿಬಿಡುತ್ತದೆ (೯). ಮನಸ್ಸು ರಜೋಯುಕ್ತವಾಯಿತೆಂದರೆ, ' ಇದು ನನಗೆ ಬೇಕು, ಇದು ಭೋಗ್ಯ ' ಎಂಬ ವಿಕಲ್ಪಾತ್ಮಕವಾದ ಸಂಕಲ್ಪವು ಹುಟ್ಟುತ್ತದೆ. ಆಗ ' ಆಹಾ ! ಎಷ್ಟು ಚೆನ್ನಾಗಿದೆ ಈ ರೂಪ ! ಈ ರುಚಿ ! ' ಎಂದು ವಿಷಯಗುಣಗಳನ್ನು ಧ್ಯಾನಿಸುವುದರಿಂದ ' ಅದು ಬೇಕು ' ಎಂಬ ದುಃಸಹವಾದ ಕಾಮವು ಈ ದುರ್ಬುದ್ಧಿಯ ಮನುಷ್ಯನಿಗೆ ಹುಟ್ಟುತ್ತದೆ (೧೦). ಕಾಮವಶನಾದ ಈ ಅಜಿತೇಂದ್ರಿಯ ಮನುಷ್ಯನು ರಾಗಮೋಹಿತನಾಗಿ ಮುಂದೆ ದುಃಖವನ್ನು ತಂದುಕೊಡತಕ್ಕವಾಗಿದ್ದರೂ ಆ ಕರ್ಮಗಳಲ್ಲಿ ತೊಡಗುತ್ತಾನೆ. ಹೀಗೆ ರಜಸ್ತಮೋಗುಣಗಳಿಂದ ಮನಸ್ಸು ವಿಕ್ಷಿಪ್ತವಾದರೂ ಆ ವಿಷಯಗಳ ದೋಷವನ್ನು ಬಲ್ಲ ವಿದ್ವಾಂಸನು ಸತತವಾಗಿ ತನ್ನ ಮನಸ್ಸನ್ನು ತಡೆದು ನಿಲ್ಲಿಸಿ

---

1. ಬೈದರೂ ನಾಯಿಗಳಂತೆ, ಹೊಡೆದರೂ ಕತ್ತೆಗಳಂತೆ, ಕೊಲ್ಲುವುದಕ್ಕೆ ಎಳೆ ತಂದರೂ ಮೇಕೆಗಳಂತೆ, ರಾಜಸತಾಮಸ ವಸ್ತುಗಳನ್ನು ಸೇವಿಸುತ್ತಾರೆ.

ಅಪ್ರಮತ್ತೋಽನುಯುಂಜೀತ ಮನೋ ಮಯ್ಯರ್ಪಯನ್ ಶನೈಃ ।
ಅನಿರ್ವಿಣ್ಣೋ ಯಥಾಕಾಲಂ ಜಿತಶ್ವಾಸೋ ಜಿತಾಸನಃ ॥ ೧೩

ಏತಾವಾನ್ ಯೋಗ ಆದಿಷ್ಟೋ ಮಚ್ಛಿಷ್ಯೈಃ ಸನಕಾದಿಭಿಃ ।
ಸರ್ವತೋ ಮನ ಆಕೃಷ್ಯ ಮಯ್ಯದ್ಧಾಽಽವೇಶ್ಯತೇ ಯಥಾ ॥ ೧೪

ಉದ್ಧವ ಉವಾಚ—

ಯದಾ ತ್ವಂ ಸನಕಾದಿಭ್ಯೋ ಯೇನ ರೂಪೇಣ ಕೇಶವ ।
ಯೋಗಮಾದಿಷ್ಟವಾನೇತದ್ ರೂಪಮಿಚ್ಛಾಮಿ ವೇದಿತುಮ್ ॥ ೧೫

ಶ್ರೀ ಭಗವಾನುವಾಚ—

ಪುತ್ರಾ ಹಿರಣ್ಯಗರ್ಭಸ್ಯ ಮಾನಸಾಃ ಸನಕಾದಯಃ ।
ಪಪ್ರಚ್ಛುಃ ಪಿತರಂ ಸೂಕ್ಷ್ಮಾಂ ಯೋಗಸ್ಯೈಕಾಂತಿಕೀಂ ಗತಿಮ್ ॥ ೧೬

ಸನಕಾದಯ ಊಚುಃ—

ಗುಣೇಷ್ವಾವಿಶತೇ ಚೇತೋ ಗುಣಾಶ್ಚೇತಸಿ ಚ ಪ್ರಭೋ ।
ಕಥಮನ್ಯೋನ್ಯಸಂತ್ಯಾಗೋ ಮುಮುಕ್ಷೋರತಿತಿತೀರ್ಷೋಃ ॥ ೧೭

---

ಅಂತಹ ಕರ್ಮಗಳಲ್ಲಿ ತೊಡಗುವುದಿಲ್ಲ (೧೧-೧೨). ಆತನು ಆಲಸ್ಯವನ್ನು ಬದಿಗಿಟ್ಟು ಪ್ರಮಾದರಹಿತವಾಗಿ (ಪರಮಾನಂದರೂಪನಾದ) ನನ್ನಲ್ಲಿ ತ್ರಿಕಾಲದಲ್ಲಿಯೂ ಮನಸ್ಸನ್ನರ್ಪಿಸಬೇಕು. ವಿಹಿತಾಸನದಲ್ಲಿ ಕುಳಿತು ಪ್ರಾಣಾಯಾಮಪರನಾಗಿ ನನ್ನನ್ನು ಧ್ಯಾನಿಸುತ್ತಿರಬೇಕು (೧೩). ಮನಸ್ಸನ್ನು ಸರ್ವವಸ್ತುಗಳಿಂದಲೂ ಹಿಡಿದೆಳೆದು ನನ್ನಲ್ಲಿ ಸ್ಥಿರವಾಗಿ ನಿಲ್ಲಿಸುವುದುಂಟಲ್ಲ, ಯೋಗವೆಂದರೆ ಇಷ್ಟೇ ಎಂದು ನನ್ನ ಶಿಷ್ಯರಾದ ಸನಕಾದಿಗಳು ತಿಳಿಸಿದ್ದಾರೆ" ಎಂದನು. ಇದನ್ನು ಕೇಳಿ ಉದ್ಧವನು "ಕೇಶವ, ಸನಕಾದಿಗಳಿಗೆ ನೀನು ಯಾವಾಗ ಯಾವ ರೂಪದಲ್ಲಿ ಯೋಗವನ್ನು ಉಪದೇಶಿಸಿದ್ದೀಯೆ? ಅದನ್ನು ತಿಳಿಯಲು ಅಪೇಕ್ಷಿಸುತ್ತೇನೆ" ಎಂದನು (೧೪-೧೫). ಆಗ ಭಗವಂತನಿಂತೆಂದನು : "ಬ್ರಹ್ಮನ ಮಾನಸಪುತ್ರರಾದ ಸನಕಾದಿಗಳು ಯೋಗದ ಸೂಕ್ಷ್ಮವಾದ ಪರಾಕಾಷ್ಠೆಯನ್ನು ಕುರಿತು ತಂದೆಯಾದ ಬ್ರಹ್ಮನಿಗೆ ಪ್ರಶ್ನೆಮಾಡಿದರು. ಏನೆಂದರೆ, "ಹೇ ಪ್ರಭುವೆ, ಮನಸ್ಸು (ಸಹಜವಾಗಿ ರಾಗಾದಿವಶದಿಂದ) ಗುಣಾತ್ಮಕ ವಿಷಯಗಳಲ್ಲಿ ಪ್ರವೇಶಿಸುತ್ತದೆ. ಅನುಭವಿಸ

ಶ್ರೀಭಗವಾನುವಾಚ—

**ಏವಂ ಪೃಷ್ಟೋ ಮಹಾದೇವಃ ಸ್ವಯಂಭೂರ್ಭೂತಭಾವನಃ ।**
**ಧ್ಯಾಯಮಾನಃ ಪ್ರಶ್ನಬೀಜಂ ನಾಭ್ಯಪದ್ಯತ ಕರ್ಮಧೀಃ ॥ ೧೮**

**ಸ ಮಾಮಚಿಂತಯದ್ ದೇವಃ ಪ್ರಶ್ನಪಾರತಿತೀರ್ಷಯಾ ।**
**ತಸ್ಯಾಹಂ ಹಂಸರೂಪೇಣ ಸಕಾಶಮಗಮಂ ತದಾ ॥ ೧೯**

**ದೃಷ್ಟ್ವಾ ಮಾಂ ತ ಉಪವ್ರಜ್ಯ ಕೃತ್ವಾ ಪಾದಾಭಿವಂದನಮ್ ।**
**ಬ್ರಹ್ಮಾಣಮಗ್ರತಃ ಕೃತ್ವಾ ಪಪ್ರಚ್ಛುಃ ಕೋ ಭವಾನಿತಿ ॥ ೨೦**

**ಇತ್ಯಹಂ ಮುನಿಭಿಃ ಪೃಷ್ಟಸ್ತತ್ತ್ವಜಿಜ್ಞಾಸುಭಿಸ್ತದಾ ।**
**ಯದವೋಚಮಹಂ ತೇಭ್ಯಸ್ತದುದ್ಧವ ನಿಬೋಧ ಮೇ ॥ ೨೧**

---

ಲ್ಪಡುವ ವಿಷಯಗಳು (ಸಂಸ್ಕಾರರೂಪದಿಂದ) ಮನಸ್ಸನ್ನು ಹಿಡಿದುಕೊಳ್ಳುತ್ತವೆ. ವಿಷಯಾಭಿಲಾಷೆಯನ್ನು ಮೀರಿ ಹೋಗಬೇಕೆಂದಿರುವ ಮುಮುಕ್ಷುವಿಗೆ ಒಂದರಿಂದ ಇನ್ನೊಂದನ್ನು ಬಿಡಿಸಿಕೊಳ್ಳುವ ಬಗೆ ಯಾವುದು?" ಎಂದು (೧೬-೧೭). ಈ ಪ್ರಶ್ನೆಯನ್ನು ಹಾಕಿದಾಗ ಸ್ವಯಂಭುವಾದ ಬ್ರಹ್ಮದೇವನು "ಈ ಪ್ರಶ್ನೆಗೆ ಉತ್ತರವೇನು? ಯಾವುದು ಗೊತ್ತಿಲ್ಲದ್ದರಿಂದ ಈ ಪ್ರಶ್ನೆ ಹುಟ್ಟಿತು?" ಎಂದು ಆಲೋಚಿಸತೊಡಗಿದನು. ಅವನಿಗೆ ಉತ್ತರವು ಹೊಳೆಯಲಿಲ್ಲ. ಏಕೆಂದರೆ, ಬ್ರಹ್ಮನು ಸೃಷ್ಟಿಕರ್ತನಾಗಿದ್ದರೂ ಸ್ವಯಂ ಕರ್ಮಠನಾಗಿ ಕರ್ಮಗಳಿಂದ ವಿಕ್ಷಿಪ್ತ ಚಿತ್ತನಾಗಿದ್ದನು (೧೮). ಉದ್ಧವ, ಆಗ ಬ್ರಹ್ಮದೇವನು ಸನಕಾದಿಗಳ ಪ್ರಶ್ನೆಗೆ ಉತ್ತರವನ್ನು ಹೇಳುವ ಉದ್ದೇಶದಿಂದ ನನ್ನನ್ನು ಸ್ಮರಿಸಿದನು. ಆಗ ನಾನು [1]ಹಂಸರೂಪದಿಂದ ಬ್ರಹ್ಮನ ಬಳಿಗೆ ಹೋದೆನು. ಅಲ್ಲಿದ್ದ ಸನಕಾದಿಗಳು ನನ್ನನ್ನು ಕಂಡು ಬ್ರಹ್ಮನನ್ನು ಮುಂದೆ ಮಾಡಿಕೊಂಡು ಬಂದು ನನ್ನ ಪಾದಗಳಿಗೆ ವಂದಿಸಿ ಸತ್ಕರಿಸಿ "ನೀನು ಯಾರು?" ಎಂದು ಕೇಳಿದರು (೧೯-೨೦). ಉದ್ಧವ, ತತ್ತ್ವಜಿಜ್ಞಾಸುಗಳಾದ ಆ ಮುನಿಗಳು ಹೀಗೆ ಪ್ರಶ್ನೆಮಾಡಿದಾಗ, ಅವರಿಗೆ ನಾನು

---

1. ಹಂಸವು ನೀರನ್ನೂ ಕ್ಷೀರವನ್ನೂ ಬೇರ್ಪಡಿಸುವಂತೆ, ಗುಣಾತ್ಮಕ ವಿಷಯವನ್ನೂ ಬೇರ್ಪಡಿಸಬಲ್ಲೆನೆಂದು ತೋರಿಸುವುದಕ್ಕಾಗಿ ಹಂಸರೂಪಧಾರಣೆ.

ವಸ್ತುನೋ ಯದ್ಯನಾನಾತ್ವಮಾತ್ಮನಃ ಪ್ರಶ್ನ ಈದೃಶಃ ।
ಕಥಂ ಘಟೇತ ವೋ ವಿಪ್ರಾ ವಕ್ತುರ್ವಾ ಮೇ ಕ ಆಶ್ರಯಃ ॥ ೨೨

ಪಂಚಾತ್ಮಕೇಷು ಭೂತೇಷು ಸಮಾನೇಷು ಚ ವಸ್ತುತಃ ।
ಕೋ ಭವಾನಿತಿ ವಃ ಪ್ರಶ್ನೋ ವಾಚಾರಂಭೋ ಹ್ಯನರ್ಥಕಃ ॥ ೨೩

ಮನಸಾ ವಚಸಾ ದೃಷ್ಟ್ಯಾ ಗೃಹ್ಯತೇಽನ್ಯೈರಪೀಂದ್ರಿಯೈಃ ।
ಅಹಮೇವ ನ ಮತ್ತೋಽನ್ಯದಿತಿ ಬುಧ್ಯಧ್ವಮಂಜಸಾ ॥ ೨೪

---

ಹೇಗೆ ಉತ್ತರಕೊಟ್ಟೆನೆಂಬುದು ಹೇಳುತ್ತೇನೆ, ಕೇಳು (೨೧). "ಎಲೈ ವಿಪ್ರರೆ, ಪರಮಾರ್ಥದಲ್ಲಿ ಆತ್ಮನು ನಾನಾ ಅಲ್ಲ, ಒಬ್ಬನೇ ಎಂದಿರುವಾಗ, 'ನೀನು ಯಾರು ?' ಎಂಬ ನಿಮ್ಮ ಪ್ರಶ್ನೆ ಹೇಗೆ ಯುಕ್ತವಾಗುತ್ತದೆ? ಉತ್ತರ ಹೇಳಬೇಕಾದ ನನಗಾಗಲಿ ಉತ್ತರಕ್ಕಾಗಿ ಆಶ್ರಯಿಸಬೇಕಾದ ಜಾತಿಗುಣಾದಿಗಳಲ್ಲಿ [1]ಯಾವುದುಂಟು ? (ಯಾವುದನ್ನವಲಂಬಿಸಿ ಉತ್ತರ ಹೇಳಲಿ ?) (೨೨). (ಇನ್ನು ಆತ್ಮನ ಉಪಾಧಿಗಳಾದ ಪಂಚಭೂತಗಳನ್ನು ಕುರಿತು ಪ್ರಶ್ನೆ ಎಂದರೆ, ಆಗಲೂ ಸರಿಯಲ್ಲ) ದೇವಮನುಷ್ಯಾದಿಭೂತದೇಹಗಳು ಪೃಥಿವ್ಯಾದಿ ಪಂಚಾತ್ಮಕವಾಗಿರುವುದರಿಂದ ಎಲ್ಲವೂ ಒಂದೇ. ಮತ್ತು ಇವುಗಳಿಗೆ ಪರಮಕಾರಣವಾದ ವಸ್ತು ಒಂದೇ ಆದ್ದರಿಂದಲೂ ಇವು ಅಭಿನ್ನಗಳೇ ಆಗುತ್ತವೆ. ಆಗಲೂ ನಿಮ್ಮ ಪ್ರಶ್ನೆ [2]ವಾಙ್ಮಾತ್ರದಿಂದ ಆರಂಭವಾಗಿದ್ದು ನಿರರ್ಥಕವಾಗುತ್ತದೆ! (೨೩). ಮನಸ್ಸಿನಿಂದಾಗಲಿ ವಾಕ್ಕಿನಿಂದಾಗಲಿ ದೃಷ್ಟಿಯಿಂದಾಗಲಿ ಅಥವಾ ಇಂದ್ರಿಯಗಳಿಂದಾಗಲಿ,

---

1. ಜಾತಿಗುಣಾದಿಗಳಿಲ್ಲದ ಒಬ್ಬನೇ ನಿರ್ವಿಶೇಷ ಆತ್ಮ—ಎಂದು ಸಿದ್ಧಾಂತ. ಒಬ್ಬನೇ ಆತ್ಮನಿರುವಾಗ 'ನೀನು ಯಾವ ಆತ್ಮ ?' ಎಂಬ ಪ್ರಶ್ನೆಯೇ ಹುಟ್ಟುವುದಿಲ್ಲ. ಉತ್ತರ ಹೇಳತಕ್ಕವನಾದರೂ ಇಂಥ ಜಾತಿಯ, ಇಂಥ ಗುಣವಿರುವ, ಇಂಥ ಕೆಲಸ ಮಾಡುವ, ಇಂಥ ಹೆಸರಿನ ಆತ್ಮ—ಎಂದು ಜಾತ್ಯಾದಿಗಳನ್ನು ಆಶ್ರಯಿಸಲೇಬೇಕಾಗುತ್ತದೆ. ಜಾತ್ಯಾದಿಗಳೇ ಇಲ್ಲದಿರುವಾಗ ಉತ್ತರ ಹೇಳುವುದಾದರೂ ಹೇಗೆ—ಎಂದು ಅಭಿಪ್ರಾಯ.

2. ಎಲ್ಲ ದೇಹಗಳೂ ಪಂಚಭೂತಾತ್ಮಕಗಳಾದ್ದರಿಂದ 'ನಿನ್ನದು ಯಾವ ಪೃಥಿವಿಯ ದೇಹ ? ಯಾವ ಜಲದ ದೇಹ ?' ಎಂಬ ಪ್ರಶ್ನೆಯೂ ಅನರ್ಥಕ. ಪರಮಕಾರಣವಾದ ಆತ್ಮ ಒಂದೇ ಆದ್ದರಿಂದಲೂ ಪ್ರಶ್ನೆ ಅನರ್ಥಕ. 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್' —ಛಾಂ. ೬-೬

ಗುಣೇಷ್ವಾವಿಶತೇ ಚೇತೋ ಗುಣಾಶ್ಚೇತಸಿ ಚ ಪ್ರಜಾಃ ।
ಜೀವಸ್ಯ ದೇಹ ಉಭಯಂ ಗುಣಾಶ್ಚೇತೋ ಮದಾತ್ಮನಃ ॥ ೨೫

ಗುಣೇಷು ಚಾವಿಶಚ್ಚಿತ್ತಮಭೀಕ್ಷ್ಣಂ ಗುಣಸೇವಯಾ ।
ಗುಣಾಶ್ಚ ಚಿತ್ತಪ್ರಭವಾ ಮದ್ರೂಪ ಉಭಯಂ ತ್ಯಜೇತ್ ॥ ೨೬

ಜಾಗ್ರತ್ ಸ್ವಪ್ನಃ ಸುಷುಪ್ತಂ ಚ ಗುಣತೋ ಬುದ್ಧಿವೃತ್ತಯಃ ।
ತಾಸಾಂ ವಿಲಕ್ಷಣೋ ಜೀವಃ ಸಾಕ್ಷಿತ್ವೇನ ವಿನಿಶ್ಚಿತಃ ॥ ೨೭

ಯರ್ಹಿ ಸಂಸೃತಿಬಂಧೋಽಯಮಾತ್ಮನೋ ಗುಣವೃತ್ತಿದಃ ।
ಮಯಿ ತುರ್ಯೇ ಸ್ಥಿತೋ ಜಹ್ಯಾತ್ ತ್ಯಾಗಸ್ತದ್
ಗುಣಚೇತಸಾಮ್ ॥ ೨೮

---

ಯಾವಯಾವುದು ಗ್ರಹಿಸಲ್ಪಡುತ್ತದೆಯೋ ಆದೆಲ್ಲವೂ 'ನಾನೇ, ನನಗಿಂತ ಇನ್ನೊಂದಲ್ಲ' ಎಂಬುದಾಗಿ ತತ್ತ್ವವಿಚಾರದಿಂದ ತಿಳಿದುಕೊಳ್ಳಿರಿ (೨೪). ಮಕ್ಕಳಿರಾ, ಮನಸ್ಸು (ಸಹಜವಾಗಿ ರಾಗಾದಿವಶದಿಂದ) ಗುಣಾತ್ಮಕ ವಿಷಯ ಗಳಲ್ಲಿ ಪ್ರವೇಶಿಸುತ್ತದೆ. ವಿಷಯವು ಸಂಸ್ಕಾರರೂಪದಿಂದ ಮನಸ್ಸನ್ನು ಹಿಡಿದು ಕೊಳ್ಳುತ್ತದೆ. ಈ ಗುಣ ಮತ್ತು ಮನಸ್ಸು—ಎಂಬ ಉಭಯವೂ ನನ್ನ ಸ್ವರೂಪವೇ ಆದ ಜೀವನ [1]ದೇಹವಾಗಿರುತ್ತದೆ (೨೫) ಮತ್ತೆ ಮತ್ತೆ ಗುಣಾತ್ಮಕ ವಿಷಯುಗಳನ್ನು ಸೇವಿಸುವುದರಿಂದ ಸಂಸ್ಕಾರ ಉಂಟಾಗಿ ಮನಸ್ಸು ಆ ಗುಣಗಳಲ್ಲಿ ನೆಟ್ಟುಹೋಗು ತ್ತದೆ. ಮತ್ತೆ ವಿಷಯುಗಳು ವಾಸನಾರೂಪದಿಂದ ಮನಸ್ಸಿನಲ್ಲಿ ಹುಟ್ಟಿಕೊಳ್ಳುತ್ತವೆ. ಆದಕಾರಣ ಜೀವನು ಮದ್ರೂಪನಾಗಿ (ನಾನು ಪರಮಾತ್ಮ ಸ್ವರೂಪನು, ವಿಷಯುಗಳ ಅಥವಾ ಮನಸ್ಸಿನ ಸ್ವರೂಪವು ನನ್ನದಲ್ಲ—ಎಂದು ನಿಶ್ಚಯಿಸಿ) ವಿಷಯ (ಗುಣ), ಮನಸ್ಸು—ಎರಡನ್ನೂ ತ್ಯಜಿಸಿಬಿಡಬೇಕು (೨೬). ಜಾಗ್ರತ್, ಸ್ವಪ್ನ, ಸುಷುಪ್ತಿಯೆಂಬ ಅವಸ್ಥೆಗಳು ಸತ್ತ್ವಾದಿಗುಣನಿಮಿತ್ತವಾಗಿ ಆಗತಕ್ಕ ಬುದ್ಧಿಯ ವೃತ್ತಿಗಳು (ಜೀವಾತ್ಮನಿಗೆ ಸಂಬಂಧಿಸಿದವುಗಳಲ್ಲ). ಜೀವಾತ್ಮನಾದರೋ ಈ ಅವಸ್ಥೆಗಳಿಗೆ ವಿಲಕ್ಷಣನಾಗಿ ಇವನ್ನು ನೋಡತಕ್ಕ ಸಾಕ್ಷಿಯೆಂದು ನಿಶ್ಚಿತವಾಗಿದೆ (೨೭). ಸಂಸಾರನಿಮಿತ್ತವಾದ ಯಾವ ದೇಹವೇ ಆತ್ಮ—ಇತ್ಯಾದಿ ಬುದ್ಧಿ

---

1. ಜೀವನಲ್ಲಿ ದೇಹವು ಅಧ್ಯಸ್ತವಾದ ಉಪಾಧಿ. ಜೀವನು ನನ್ನ ಸ್ವರೂಪ, ಉಪಾಧಿ ಸ್ವರೂಪನಲ್ಲ.

ಅಹಂಕಾರಕೃತಂ ಬಂಧಮಾತ್ಮನೋಽರ್ಥವಿಪರ್ಯಯಮ್ ।
ವಿದ್ವಾನ್ ನಿರ್ವಿದ್ಯ ಸಂಸಾರಚಿಂತಾಂ ತುರ್ಯೇ ಸ್ಥಿತಸ್ತ್ಯಜೇತ್ ॥ ೨೯

ಯಾವನ್ನಾನಾರ್ಥಧೀಃ ಪುಂಸೋ ನ ನಿವರ್ತೇತ ಯುಕ್ತಿಭಿಃ ।
ಜಾಗರ್ತ್ಯಪಿ ಸ್ವಪನ್ನಜ್ಞಃ ಸ್ವಪ್ನೇ ಜಾಗರಣಂ ಯಥಾ ॥ ೩೦

ಅಸತ್ತ್ವಾದಾತ್ಮನೋಽನ್ಯೇಷಾಂ ಭಾವಾನಾಂ ತತ್ಕೃತಾ ಭಿದಾ ।
ಗತಯೋ ಹೇತವಶ್ಚಾಸ್ಯ ಮೃಷಾ ಸ್ವಪ್ನದೃಶೋ ಯಥಾ ॥ ೩೧

---

ಯುಂಟೋ ಅದೇ ಸಂಸಾರ. ಅದರಿಂದ ಜೀವಾತ್ಮನಿಗೆ ಬಂಧವಾಗಿದ್ದು ಆ ಬಂಧವು ಗುಣವೃತ್ತಿಗಳಾದ ಜಾಗ್ರದಾದಿಗಳನ್ನು ಆತ್ಮನಿಗೆ ಕೊಡುತ್ತದೆ—ಎಂದರೆ—ಆತ್ಮನಿಗೆ ಜಾಗ್ರದಾದಿಗಳು ಇವೆಯೆಂಬ ಭ್ರಮೆಯನ್ನುಂಟುಮಾಡುತ್ತದೆ. ಆದ್ದರಿಂದ ತುರೀಯನಾದ ನನ್ನಲ್ಲಿ ಜೀವನು ನೆಲೆನಿಂತು—ಎಂದರೆ—ತಾನೇ ತುರೀಯನೆಂದು ನಿಶ್ಚಯಿಸಿ ಈ ಸಂಸೃತಿ ಬಂಧವನ್ನು ತ್ಯಜಿಸಬೇಕು. ಆಗ ಗುಣಗಳಿಗೂ ಮನಸ್ಸಿಗೂ ಅನ್ಯೋನ್ಯ ತ್ಯಾಗವು ಘಟಿಸುತ್ತದೆ (೨೮). ಅಹಂಕಾರಕೃತವಾದ ಈ ಸಂಸಾರಬಂಧವು ಆತ್ಮನಿಗೆ ಅನರ್ಥವನ್ನುಂಟುಮಾಡುತ್ತದೆ. ಇದನ್ನರಿತವನು ಸಂಸಾರದಿಂದ ವಿರಕ್ತನಾಗಿ, ತುರ್ಯದಲ್ಲಿ ನೆಲೆನಿಂತು, ಸಂಸಾರದಲ್ಲಿ ಅಭಿಮಾನವನ್ನೂ ಅದರಿಂದಾಗುವ ಭೋಗಚಿಂತೆಯನ್ನೂ ತೊರೆಯಬೇಕು (೨೯). ನಾನಾ ವಸ್ತುಗಳಿವೆಯೆಂಬ ದ್ವೈತಬುದ್ಧಿಯು ಮನುಷ್ಯನಿಗೆ ಶ್ರವಣಮನನಾದ್ಯುಪಾಯಗಳಿಂದ ಎಲ್ಲಿಯವರೆಗೆ ನಿವೃತ್ತವಾಗುವುದಿಲ್ಲವೋ ಅಲ್ಲಿಯವರೆಗೆ ಆ ಅಜ್ಞಾನಿಯು ಜಾಗ್ರತ್ತಿನಲ್ಲಿದ್ದರೂ ಸ್ವಪ್ನವನ್ನು [1]ಕಾಣುತ್ತಿರುವಂತೆಯೇ ಸರಿ. ಸ್ವಪ್ನವನ್ನು ಕಾಣುತ್ತಿರುವವನಿಗೆ ತಾನು ಜಾಗ್ರತ್ತಿನಲ್ಲಿರುವಂತೆ ತೋರುತ್ತದೆಯಲ್ಲವೆ, ಹಾಗೆ (೩೦). ಆತ್ಮನಿಗಿಂತ ಅತಿರಿಕ್ತವಾಗಿ ದೇಹಾದಿಭಾವ ಪದಾರ್ಥಗಳು ಇಲ್ಲ. ಆದ್ದರಿಂದ ದೇಹಾದಿ ನಿಮಿತ್ತಕವಾದ ವರ್ಣಾಶ್ರಮಾದಿ ಭೇದವೂ ಸ್ವರ್ಗಾದಿಫಲಗಳೆಂಬ ಗತಿಗಳೂ ಇವಕ್ಕೆ ಹೇತುಗಳಾದ ಕರ್ಮಗಳೂ [2]ಮಿಥ್ಯೆಯೇ ಸರಿ. ಕನಸು ಕಾಣತಕ್ಕವನಿಗೆ

---

1. ಅವನ ಎಲ್ಲ ಕೃತ್ಯಗಳೂ ವ್ಯರ್ಥವೆಂದು ಅಭಿಪ್ರಾಯ.
2. ವೇದವು ಅವಿದ್ಯಾವದ್ವಿಷಯವೆಂದು ಅಭಿಪ್ರಾಯ.

ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।

—ಗೀತಾ ೨-೪೫

ಯೋ ಜಾಗರೇ ಬಹಿರನುಕ್ಷಣ ಧರ್ಮಿಣೋಽರ್ಥಾನ್
ಭುಙ್ಕ್ತೇ ಸಮಸ್ತಕರಣೈರ್ಹೃದಿ ತತ್ಸದೃಕ್ಷಾನ್ ।
ಸ್ವಪ್ನೇ ಸುಷುಪ್ತ ಉಪಸಂಹರತೇ ಸ ಏಕಃ
ಸ್ಮೃತ್ಯನ್ವಯಾತ್ತ್ರಿಗುಣವೃತ್ತಿದೃಗಿಂದ್ರಿಯೇಶಃ ॥ ೩೨

ಏವಂ ವಿಮೃಶ್ಯ ಗುಣತೋ ಮನಸಸ್ತ್ರ್ಯವಸ್ಥಾ
ಮನ್ಮಾಯಯಾ ಮಯಿ ಕೃತಾ ಇತಿ ನಿಶ್ಚಿತಾರ್ಥಾಃ ।
ಸಂಛಿದ್ಯ ಹಾರ್ದಮನುಮಾನಸದುಕ್ತಿತೀಕ್ಷ್ಣ-
ಜ್ಞಾನಾಸಿನಾ ಭಜತ ಮಾಖಿಲಸಂಶಯಾಧಿಮ್ ॥ ೩೩

ಈಕ್ಷೇತ ವಿಭ್ರಮಮಿದಂ ಮನಸೋ ವಿಲಾಸಂ
ದೃಷ್ಟಂ ವಿನಷ್ಟಮತಿಲೋಲಮಲಾತಚಕ್ರಮ್ ।
ವಿಜ್ಞಾನಮೇಕಮುರುಧೇವ ವಿಭಾತಿ ಮಾಯಾ
ಸ್ವಪ್ನಸ್ತ್ರಿಧಾ ಗುಣವಿಸರ್ಗಕೃತೋ ವಿಕಲ್ಪಃ ॥ ೩೪

---

ಕಾಣುವಂತೆ ಇವು ತೋರಿಬರುತ್ತವೆ (೩೧). ಯಾವಾತನು ಜಾಗರದಲ್ಲಿ ಕ್ಷಣಿಕವಾದ ಬಾಲ್ಯಾದಿ ಧರ್ಮಗಳುಳ್ಳ ಸ್ಥೂಲದೇಹಾದಿ ಬಾಹ್ಯವಸ್ತುಗಳನ್ನು ಸಮಸ್ತೇಂದ್ರಿಯಗಳಿಂದಲೂ ಅನುಭವಿಸುತ್ತಾನೋ, ಆತನೇ ಕನಸಿನಲ್ಲಿ ಜಾಗರ ದೃಷ್ಟ ವಸ್ತುಗಳಿಗೆ ಸದೃಶವಾದವುಗಳನ್ನು ಮನಸ್ಸಿನಿಂದ ಅನುಭವಿಸುತ್ತಾನೆ. ಸುಷುಪ್ತಿಯಲ್ಲಿ ಇವೆಲ್ಲವನ್ನೂ ಉಪಸಂಹರಿಸಿಕೊಳ್ಳುತ್ತಾನೆ. ಹೀಗೆ ಜಾಗರ ಸ್ವಪ್ನ ಸುಷುಪ್ತಿಗಳನ್ನು ಪಡೆಯತಕ್ಕವನು ಒಬ್ಬನೇ. ಏಕೆಂದರೆ, ಜಾಗರದಲ್ಲಿದ್ದ ನಾನೇ ಕನಸನ್ನು ಕಂಡೆನು, ನಾನೇ ಸುಷುಪ್ತಿಯನ್ನನುಭವಿಸಿದೆನು—ಎಂದು ಸ್ಮರಣೆಯ ಅನ್ವಯವು ಈ ಅವಸ್ಥೆಗಳಲ್ಲಿದೆ. ಈ ಅವಸ್ಥೆಗಳಿಗೆ ಸಾಕ್ಷಿಯಾದವನು ಇಂದ್ರಿಯೇಶ್ವರನಾದ ಜೀವನು (೩೨). ಹೀಗೆ ಸತ್ವಾದಿಗುಣಗಳಿಂದ ಮನಸ್ಸಿಗೆ ಜಾಗ್ರದಾದಿ ಮೂರು ಅವಸ್ಥೆಗಳು ಉಂಟಾಗುತ್ತವೆ. ಇವು ನನ್ನ (ಭಗವಂತನ) ಮಾಯೆಯಿಂದ ನನ್ನಲ್ಲಿ (ಜೀವಾತ್ಮನಲ್ಲಿ) ಉಂಟಾದವು, ವಸ್ತುತಃ ಇಲ್ಲ—ಎಂದು ವಿಮರ್ಶೆಯಿಂದ ನಿಶ್ಚಯಿಸಿಕೊಳ್ಳಿರಿ. ಅನುಮಾನ ಪ್ರಮಾಣದಿಂದಲೂ ಸಜ್ಜನರ ಉಪದೇಶಗಳಿಂದಲೂ ವೇದಗಳಿಂದಲೂ ಹರಿತವಾದ ಜ್ಞಾನಖಡ್ಗದಿಂದ ಸಮಸ್ತ ಸಂಶಯಗಳ ಆಗರವಾದ ಅಹಂಕಾರವನ್ನು ಕತ್ತರಿಸಿ ಹಾಕಿ, ನನ್ನನ್ನು ಭಜಿಸಿರಿ (೩೩). ಈ ಜಗತ್ತು ಬರಿಯ ಭ್ರಮೆಯೆಂದೂ ಮನಸ್ಸಿನ ವಿಲಾಸ ಮಾತ್ರವೆಂದೂ ದೃಷ್ಟ

ದೃಷ್ಟಿಂ ತತಃ ಪ್ರತಿನಿವರ್ತ್ಯ ನಿವೃತ್ತತೃಷ್ಣ-
ಸ್ತೂಷ್ಣೀಂ ಭವೇನ್ನಿಜಸುಖಾನುಭವೋ ನಿರೀಹಃ ।
ಸಂದೃಶ್ಯತೇ ಕ್ವ ಚ ಯದೀದಮವಸ್ತುಬುದ್ಧ್ಯಾ
ತ್ಯಕ್ತಂ ಭ್ರಮಾಯ ನ ಭವೇತ್ ಸ್ಮೃತಿರಾನಿಪಾತಾತ್ ॥ ೩೫

ದೇಹಂ ಚ ನಶ್ವರಮವಸ್ಥಿತಮುತ್ಥಿತಂ ವಾ
ಸಿದ್ಧೋ ನ ಪಶ್ಯತಿ ಯತೋಽಧ್ಯಗಮತ್ ಸ್ವರೂಪಮ್ ।
ದೈವಾದಪೇತಮುತ ದೈವವಶಾದುಪೇತಂ
ವಾಸೋ ಯಥಾ ಪರಿಕೃತಂ ಮದಿರಾಮದಾಂಧಃ ॥ ೩೬

---

ನಷ್ಟವೆಂದೂ ಅಲಾತಚಕ್ರದಂತೆ ಅತ್ಯಂತ ಚಂಚಲವೆಂದೂ ತಿಳಿಯಬೇಕು. ಇರತಕ್ಕ ಒಂದೇ ವಿಜ್ಞಾನವು ಬಹು ಪ್ರಕಾರವಾಗಿದೆಯೋ ಎಂಬಂತೆ ಕಾಣಿಸುತ್ತದೆ. ಗುಣ ಪರಿಣಾಮದಿಂದುಂಟಾದ ಜಾಗ್ರದಾದಿ ಮೂರು ಬಗೆಯ ಭೇದವು ಬರಿಯ ಮಾಯೆ, ಸ್ವಪ್ನ (೩೪). ಆದಕಾರಣ ಈ ದೃಶ್ಯ ಪ್ರಪಂಚದಿಂದ ದೃಷ್ಟಿಯನ್ನು ಹಿಂದಕ್ಕೆ ಸರಿಸಿ, ಅದರ ವಿಷಯದಲ್ಲಿ ಯಾವ ಆಸೆಯನ್ನೂ ಇಟ್ಟುಕೊಳ್ಳದೆ, ಅದಕ್ಕಾಗಿ ಯಾವ ಪ್ರಯತ್ನವನ್ನೂ ಮಾಡದೆ, ನಿಜಸುಖಾನುಭವದಲ್ಲಿ ಮಗ್ನನಾಗಬೇಕು. (ಆವಶ್ಯಕವಾದ ಆಹಾರಾದಿ ಸಂದರ್ಭಗಳಲ್ಲಿ) ಈ ದೃಶ್ಯಜಗತ್ತು ಕ್ವಚಿತ್ತಾಗಿ ಕಂಡು ಬಂದರೂ, 'ಇದು ಸತ್ಯವಲ್ಲ' ಎಂಬ ಬುದ್ಧಿಯಿಂದ ತ್ಯಜಿಸಿಬಿಟ್ಟಿರುವುದರಿಂದ, ಇದು ಮತ್ತೆ ಭ್ರಮೆಯನ್ನುಂಟುಮಾಡುವುದಿಲ್ಲ. ದೇಹಪಾತವಾಗುವವರೆಗೂ ದೇಹವು ಸಂಸ್ಕಾರಮಾತ್ರದಿಂದ ನೆನಪಿನಂತೆ ಉಳಿದುಕೊಂಡಿರುತ್ತದೆ (೩೫). ಸ್ವಸ್ವರೂಪ ಜ್ಞಾನವನ್ನು ಪಡೆದ ಸಿದ್ಧಪುರುಷನು ನಶ್ವರವಾದ ತನ್ನ ದೇಹವನ್ನೇ ಗಮನಿಸುವುದಿಲ್ಲ. ಈ ದೇಹವು ಪೀಠದಿಂದ ಎದ್ದಿತೆಂದೂ ಅಲ್ಲೇ ನಿಂತಿದೆಯೆಂದೂ ದೈವವಶದಿಂದ ಹೊರಗೆ ಹೋಯಿತೆಂದೂ ತಿರುಗಿ ಬಂದಿತೆಂದೂ ಸಹ ಅವನಿಗೆ ತಿಳಿಯುವುದಿಲ್ಲ. ಹೆಂಡದ ಅಮಲಿನಿಂದ ಕುರುಡಾದವನಿಗೆ ತಾನು ಬಟ್ಟೆಯುಟ್ಟಿರುವುದೂ ಬಿಸುಟಿರುವುದೂ ಹೇಗೆ ತಿಳಿಯುವುದಿಲ್ಲವೋ ಹಾಗೆ. (ದೇಹವೇ ಜ್ಞಾನಿಗೆ ಗೋಚರಿಸದಾಗ

ದೇಹೋಽಪಿ ದೈವವಶಗಃ ಖಲು ಕರ್ಮ ಯಾವತ್
ಸ್ವಾರಂಭಕಂ ಪ್ರತಿಸಮೀಕ್ಷತ ಏವ ಸಾಸುಃ ।
ತಂ ಸಪ್ರಪಂಚಮಧಿರೂಢ ಸಮಾಧಿಯೋಗಃ
ಸ್ವಾಪ್ನಂ ಪುನರ್ನ ಭಜತೇ ಪ್ರತಿಬುದ್ಧವಸ್ತುಃ ॥ ೩೭

ಮಯ್ಯೈತದುಕ್ತಂ ವೋ ವಿಪ್ರಾ ಗುಹ್ಯಂ ಯತ್ ಸಾಂಖ್ಯಯೋಗಯೋಃ ।
ಜಾನೀತ ಮಾಽಽಗತಂ ಯಜ್ಞಂ ಯುಷ್ಮದ್ಧರ್ಮವಿವಕ್ಷಯಾ ॥ ೩೮

ಅಹಂ ಯೋಗಸ್ಯ ಸಾಂಖ್ಯಸ್ಯ ಸತ್ಯಸ್ಯರ್ತಸ್ಯ ತೇಜಸಃ ।
ಪರಾಯಣಂ ದ್ವಿಜಶ್ರೇಷ್ಠಾಃ ಶ್ರಿಯಃ ಕೀರ್ತೇರ್ದಮಸ್ಯ ಚ ॥ ೩೯

ಮಾಂ ಭಜಂತಿ ಗುಣಾಃ ಸರ್ವೇ ನಿರ್ಗುಣಂ ನಿರಪೇಕ್ಷಕಮ್ ।
ಸುಹೃದಂ ಪ್ರಿಯಮಾತ್ಮಾನಂ ಸಾಮ್ಯಾಸಂಗಾದಯೋಽಗುಣಾಃ ॥ ೪೦

---

ಜಗತ್ತು ಗೋಚರಿಸುವುದೆ?) (೩೬). ದೈವವಶದಿಂದ ಸಂಚರಿಸತಕ್ಕ ದೇಹವೂ ಕೂಡ ತನಗೆ ಆರಂಭಕವಾದ ಯಾವ ಪ್ರಾರಬ್ಧಕರ್ಮವುಂಟೋ ಅದು ಇರುವವರೆಗೆ ಪ್ರಾಣೇಂದ್ರಿಯ ಸಹಿತವಾಗಿ ಕಾದುಕೊಂಡು ಇದ್ದೇ [1]ಇರುತ್ತದೆ. ಸಮಾಧಿ ಪರ್ಯಂತ ಯೋಗಾರೂಢನಾಗಿ ಪರಮಾರ್ಥವಸ್ತುವನ್ನರಿತ ಜ್ಞಾನಿಯು ಆ ದೇಹವನ್ನೂ ಪ್ರಪಂಚವನ್ನೂ ಸ್ವಪ್ನತುಲ್ಯವೆಂದೆಣಿಸಿ ಅದನ್ನು ಗಣಿಸುವುದೇ ಇಲ್ಲ (೩೭). ಎಲೈ ವಿಪ್ರರೆ, ಈ ಪ್ರಕಾರವಾಗಿರುವ [2]ಸಾಂಖ್ಯಯೋಗಗಳ ರಹಸ್ಯವನ್ನು ನಿಮಗೆ ಹೇಳಿದ್ದೇನೆ. ನಿಮಗೆ ಧರ್ಮವನ್ನು ಹೇಳುವ ಉದ್ದೇಶದಿಂದ ಬಂದಿರುವ ನಾನು ಯಜ್ಞರೂಪನಾದ ವಿಷ್ಣುವೆಂದರಿಯಿರಿ. ಹೇ ದ್ವಿಜೋತ್ತಮರೆ, ಯೋಗ ಸಾಂಖ್ಯ [3]ಸತ್ಯ ಋತ ತೇಜಸ್ಸು ಶ್ರೀ ಕೀರ್ತಿ ದಮ—ಇವೆಲ್ಲಕ್ಕೂ ನಾನೇ ಪರಮನಿಷ್ಠೆಯಾಗಿದ್ದೇನೆ (೩೮–೩೯). ನಾನು ಸಮಸ್ತಪ್ರಾಣಿಗಳಿಗೆ ಮಿತ್ರನೂ ಪ್ರಿಯನೂ ಆತ್ಮನೂ ಆಗಿದ್ದೇನೆ. ನಾನು ಪರಮಾರ್ಥದಲ್ಲಿ ನಿರ್ಗುಣನೂ ನಿರಪೇಕ್ಷನೂ

---

1. ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ ।
—ಛಾಂ. ೬–೧೪–೨

2. ಸಾಂಖ್ಯ=ಆತ್ಮಾನಾತ್ಮವಿವೇಕ.

3. ಸತ್ಯ – ಆಚರಿಸಲ್ಪಡತಕ್ಕ ಧರ್ಮ. ಋತ – ತಿಳಿಯಲ್ಪಡತಕ್ಕ ಧರ್ಮ.

ಇತಿ ಮೇ ಛಿನ್ನಸಂದೇಹಾ ಮುನಯಃ ಸನಕಾದಯಃ ।
ಸಭಾಜಯಿತ್ವಾ ಪರಯಾ ಭಕ್ತ್ಯಾಗೃಣತ ಸಂಸ್ತವೈಃ ॥ ೪೧

ತೈರಹಂ ಪೂಜಿತಃ ಸಮ್ಯಕ್ ಸಂಸ್ತುತಃ ಪರಮರ್ಷಿಭಿಃ ।
ಪ್ರತ್ಯೇಯಾಯ ಸ್ವಕಂ ಧಾಮ ಪಶ್ಯತಃ ಪರಮೇಷ್ಠಿನಃ ॥ ೪೨

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ತ್ರಯೋದಶಾಧ್ಯಾಯಃ



---

ಆಗಿದ್ದರೂ ಕಾರುಣ್ಯಾದಿ ಸಮಸ್ತಗುಣಗಳೂ ನನ್ನಲ್ಲಿ ಬಂದು ಸೇರಿಕೊಳ್ಳು ವುದುಂಟು! ನನ್ನಲ್ಲಿರುವ ಸಾಮ್ಯ, ಸಂಗರಾಹಿತ್ಯ—ಮುಂತಾದವು ಮಾತ್ರ ಗುಣ ಪರಿಣಾಮಗಳಲ್ಲ, ನಿತ್ಯವಾಗಿ ಇರತಕ್ಕವು" (೪೦). ಉದ್ಧವ, ಈ ರೀತಿ ಹೇಳಿ ಸನಕಾದಿ ಮುನಿಗಳ ಸಂದೇಹವನ್ನು ನಾನು ನಿವಾರಿಸಿದೆನು. ಅವರು ಪರಮ ಭಕ್ತಿಯಿಂದ ನನ್ನನ್ನು ಪೂಜಿಸಿ ಸ್ತುತಿಗೈದರು. ಆ ಪರಮರ್ಷಿಗಳು ವಿಶೇಷವಾಗಿ ನನ್ನನ್ನು ಪೂಜಿಸಿ ಸ್ತುತಿಸಿದಮೇಲೆ, ಬ್ರಹ್ಮನು ನೋಡುತ್ತಿರುವಾಗಲೇ ನಾನು ನನ್ನ ವೈಕುಂಠಧಾಮಕ್ಕೆ ಹಿಂದಿರುಗಿ ಬಂದೆನು" (೪೧–೪೨).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಹದಿಮೂರನೆಯ ಅಧ್ಯಾಯ



*

# ಚತುರ್ದಶಾಧ್ಯಾಯಃ

ಉದ್ಧವ ಉವಾಚ—

**ವದಂತಿ ಕೃಷ್ಣ ಶ್ರೇಯಾಂಸಿ ಬಹೂನಿ ಬ್ರಹ್ಮವಾದಿನಃ ।**
**ತೇಷಾಂ ವಿಕಲ್ಪಪ್ರಾಧಾನ್ಯಮುತಾಹೋ ಏಕಮುಖ್ಯತಾ ॥ ೧**

**ಭವತೋದಾಹೃತಃ ಸ್ವಾಮಿನ್ ಭಕ್ತಿಯೋಗೋಽನಪೇಕ್ಷಿತಃ ।**
**ನಿರಸ್ಯ ಸರ್ವತಃ ಸಂಗಂ ಯೇನ ತ್ವಯ್ಯಾವಿಶೇನ್ಮನಃ ॥ ೨**

ಶ್ರೀಭಗವಾನುವಾಚ—

**ಕಾಲೇನ ನಷ್ಟಾ ಪ್ರಲಯೇ ವಾಣೀಯಂ ವೇದಸಂಜ್ಞಿತಾ ।**
**ಮಯಾದೌ ಬ್ರಹ್ಮಣೇ ಪ್ರೋಕ್ತಾ ಧರ್ಮೋ ಯಸ್ಯಾಂ ಮದಾತ್ಮಕಃ ॥ ೩**

**ತೇನ ಪ್ರೋಕ್ತಾ ಚ ಪುತ್ರಾಯ ಮನವೇ ಪೂರ್ವಜಾಯ ಸಾ ।**
**ತತೋ ಭೃಗ್ವಾದಯೋಽಗೃಹ್ಣನ್ ಸಪ್ತ ಬ್ರಹ್ಮಮಹರ್ಷಯಃ ॥ ೪**

## ಅಧ್ಯಾಯ ೧೪

ಅನ್ಯಮತನಿರಾಸಪೂರ್ವಕವಾಗಿ ಭಕ್ತಿಯ ಶ್ರೇಷ್ಠತೆಯನ್ನು ಪ್ರತಿಪಾದಿಸುವುದು.
ಧ್ಯಾನಯೋಗ ಮತ್ತು ಅದರ ಸಾಧನೆಗಳು

ಅನಂತರ ಉದ್ಧವನು "ಶ್ರೀಕೃಷ್ಣ, ಮೋಕ್ಷಕ್ಕೆ ಹಲವಾರು ಸಾಧನಗಳಿವೆ ಯೆಂದು ಬ್ರಹ್ಮವಾದಿಗಳು ಹೇಳುತ್ತಾರೆ. ಅವುಗಳಲ್ಲಿ ಎಲ್ಲವೂ ಮತಭೇದದಿಂದ ಮುಖ್ಯಸಾಧನಗಳೇ ಆಗುತ್ತವೆಯೋ ಹೇಗೆ? ಅಥವಾ ಅವುಗಳಲ್ಲಿ ಒಂದು ಮಾತ್ರ ಮುಖ್ಯವೋ? ಸ್ವಾಮಿ, ಸಕಲ ವಿಷಯಗಳಲ್ಲಿಯೂ ಸಂಗವನ್ನು ಪರಿತ್ಯಜಿಸಿ, ನಿನ್ನಲ್ಲಿಯೇ ಮನಸ್ಸನ್ನು ನಿಲ್ಲಿಸುವ ಭಕ್ತಿಯೋಗವನ್ನು ನೀನು ಹೇಳುತ್ತಿದ್ದೀಯೆ. ಅದು ಅನ್ಯಸಾಪೇಕ್ಷವಾಗದೆ ಪ್ರಧಾನವಾಗಿ ಮೋಕ್ಷ ಸಾಧನವಾಗುತ್ತದೆಯೆ ?" ಎಂದು ಕೇಳಿದನು (೧-೨). ಆಗ ಭಗವಂತನಿಂತೆಂದನು : "ಸೃಷ್ಟಿಯ ಆದಿಯಲ್ಲಿ ನಾನು ಬ್ರಹ್ಮನಿಗೆ ವೇದವನ್ನುಪದೇಶಿಸಿದೆನು. ನನ್ನಲ್ಲಿಯೇ ಚಿತ್ತವನ್ನು ನಿಲ್ಲಿಸುವ ಭಕ್ತಿಯೋಗವೆಂಬ ಧರ್ಮವನ್ನು ಅದರಲ್ಲಿ ಬ್ರಹ್ಮನಿಗೆ ಬೋಧಿಸಿದ್ದೆನು. ಕಾಲ ಮಹಿಮೆಯಿಂದ ಪ್ರಳಯದಲ್ಲಿ ಆ ವೇದಭಾಗವು ನಷ್ಟವಾಯಿತು (೩). ಬ್ರಹ್ಮನು ಆ ಧರ್ಮವನ್ನು ತನ್ನ ಜ್ಯೇಷ್ಠಪುತ್ರನಾದ ಮನುವಿಗೆ ಬೋಧಿಸಿದನು. ಮನುವಿ-

ತೇಭ್ಯಃ ಪಿತೃಭ್ಯಸ್ತತ್ಪುತ್ರಾ ದೇವದಾನವಗುಹ್ಯಕಾಃ ।
ಮನುಷ್ಯಾಃ ಸಿದ್ಧಗಂಧರ್ವಾಃ ಸವಿದ್ಯಾಧರಚಾರಣಾಃ ॥ ೫

ಕಿಂ ದೇವಾಃ ಕಿಂನರಾ ನಾಗಾ ರಕ್ಷಃ ಕಿಂಪುರುಷಾದಯಃ ।
ಬಹ್ವ್ಯಸ್ತೇಷಾಂ ಪ್ರಕೃತಯೋ ರಜಃಸತ್ತ್ವತಮೋಭುವಃ ॥ ೬

ಯಾಭಿರ್ಭೂತಾನಿ ಭಿದ್ಯಂತೇ ಭೂತಾನಾಂ ಮತಯಸ್ತಥಾ ।
ಯಥಾಪ್ರಕೃತಿ ಸರ್ವೇಷಾಂ ಚಿತ್ರಾ ವಾಚಃ ಸ್ರವಂತಿ ಹಿ ॥ ೭

ಏವಂ ಪ್ರಕೃತಿವೈಚಿತ್ರ್ಯಾದ್ ಭಿದ್ಯಂತೇ ಮತಯೋ ನೃಣಾಮ್ ।
ಪಾರಂಪರ್ಯೇಣ ಕೇಷಾಂಚಿತ್ ಪಾಖಂಡಮತಯೋಽಪರೇ ॥ ೮

---

ನಿಂದ ಅದನ್ನು ಭೃಗುವೇ ಮೊದಲಾದ ಸಪ್ತ [1]ಬ್ರಹ್ಮರ್ಷಿಗಳು ತಿಳಿದುಕೊಂಡರು. ಪ್ರಜಾಪತಿಗಳೆನಿಸಿದ ಆ ಮಹರ್ಷಿಗಳಿಂದ ಅವರ ಪುತ್ರರಾದ ದೇವದಾನವಗುಹ್ಯಕರೂ ಮನುಷ್ಯರೂ ಸಿದ್ಧಗಂಧರ್ವರೂ ವಿದ್ಯಾಧರಚಾರಣರೂ ಭಕ್ತಿಯೋಗದ ಕ್ರಮವನ್ನರಿತುಕೊಂಡರು (೪–೫). ಅಲ್ಲದೆ [2]ಕಿಂದೇವ, ಕಿಂನರ, ನಾಗ, ರಾಕ್ಷಸ, ಕಿಂಪುರುಷ ಮೊದಲಾದವರೂ ಆ ಧರ್ಮವನ್ನು ಗ್ರಹಿಸಿದರು. ಈ ಜನರ ಸ್ವಭಾವಗಳು ಸತ್ತ್ವರಜಸ್ತಮೋಗುಣಗಳ ಪ್ರಭಾವದಿಂದ ಬಹುವಿಧವಾಗಿರುತ್ತವೆ. ಈ ಗುಣಗಳಿಂದಲೇ ದೇವಮನುಷ್ಯಾದಿಗಳು ಭಿನ್ನಭಿನ್ನ ಸ್ವಭಾವದವರಾಗುತ್ತಾರೆ. ಅವರ ಬುದ್ಧಿಗಳು ಬೇರೆಬೇರೆ ಪ್ರಕಾರವನ್ನು ಪಡೆಯುತ್ತವೆ. ಅನಂತರ ಅವರ ಪ್ರಕೃತಿಗೆ ತಕ್ಕಂತೆ ವೇದಾರ್ಥವ್ಯಾಖ್ಯಾನಗಳು ವಿಚಿತ್ರವಾಗಿ ಹರಿಯತೊಡಗುತ್ತವೆ (೬–೭). ಹೀಗೆ ಪ್ರಕೃತಿವೈಚಿತ್ರ್ಯದಿಂದ ಮಾನವರ ಮತಿಗಳಲ್ಲಿ ಭಿನ್ನರುಚಿಗಳಾಗುತ್ತವೆ. ಕೆಲವರಿಗೆ ವೇದಾಧ್ಯಯನಾದಿಗಳಿಲ್ಲದಿದ್ದರೂ ಹಿಂದಿನ ಪರಂಪರೆಯಿಂದ ಬಂದಿರುವ ಬೇರೆ ಬೇರೆ ನಂಬಿಕೆಗಳನ್ನು ಅವರು ತಳೆದಿರುತ್ತಾರೆ. ಇನ್ನು ಕೆಲವರು ವೇದ ವಿರುದ್ಧವಾದ ಪಾಖಂಡಬುದ್ಧಿಯನ್ನು ಹೊಂದಿರುತ್ತಾರೆ (೮). ಪುರುಷಶ್ರೇಷ್ಠ–ಉದ್ಧವ, ನನ್ನ ಮಾಯೆಯಿಂದ ಅವರ ಬುದ್ಧಿಗೆ ಮಂಕು ಕವಿದಿರುತ್ತದೆ! ಆದ್ದರಿಂದ

---

1. ಭೃಗು, ಮರೀಚಿ, ಅತ್ರಿ, ಅಂಗಿರಸ್, ಪುಲಸ್ತ್ಯ, ಪುಲಹ ಮತ್ತು ಕ್ರತು.

2. ದೇವತೆಗಳೊ ಮನುಷ್ಯರೊ ?—ಎಂಬ ಸಂದೇಹಕ್ಕೆ ಪಾತ್ರರಾದ ದ್ವೀಪಾಂತರ ವಾಸಿಗಳು.

ಮನ್ಮಾಯಾಮೋಹಿತಧಿಯಃ ಪುರುಷಾಃ ಪುರುಷರ್ಷಭ ।
ಶ್ರೇಯೋ ವದಂತ್ಯನೇಕಾಂತಂ ಯಥಾಕರ್ಮ ಯಥಾರುಚಿ ॥ ೯

ಧರ್ಮಮೇಕೇ ಯಶಶ್ಚಾನ್ಯೇ ಕಾಮಂ ಸತ್ಯಂ ದಮಂ ಶಮಮ್ ।
ಅನ್ಯೇ ವದಂತಿ ಸ್ವಾರ್ಥಂ ವಾ ಐಶ್ವರ್ಯಂ ತ್ಯಾಗಭೋಜನಮ್ ॥ ೧೦

ಕೇಚಿದ್ ಯಜ್ಞತಪೋದಾನಂ ವ್ರತಾನಿ ನಿಯಮಾನ್ ಯಮಾನ್ ।
ಆದ್ಯಂತವಂತ ಏವೈಷಾಂ ಲೋಕಾಃ ಕರ್ಮವಿನಿರ್ಮಿತಾಃ ।
ದುಃಖೋದರ್ಕಾಸ್ತಮೋನಿಷ್ಠಾಃ ಕ್ಷುದ್ರಾನಂದಾಃ ಶುಚಾರ್ಪಿತಾಃ ॥ ೧೧

ಮಯ್ಯರ್ಪಿತಾತ್ಮನಃ ಸಭ್ಯ ನಿರಪೇಕ್ಷಸ್ಯ ಸರ್ವತಃ ।
ಮಯಾಽಽತ್ಮನಾ ಸುಖಂ ಯತ್ತತ್ ಕುತಃ ಸ್ಯಾದ್ವಿಷಯಾತ್ಮನಾಮ್ ॥ ೧೨

---

ಈ ಜನರು ತಮ್ಮ ತಮ್ಮ ಕರ್ಮಾನುಗುಣವಾಗಿ "ಇದು ಶ್ರೇಯೋಮಾರ್ಗ, ಇದು ಮಾರ್ಗವಲ್ಲ" ಎಂದು ತಮಗೆ ತೋರಿದಂತೆ ನಾನಾ ಬಗೆಯಾಗಿ ಹೇಳುತ್ತಾರೆ (೯). ಮೀಮಾಂಸಕರು ಯಾಗಾದಿಕರ್ಮರೂಪವಾದ ಧರ್ಮವನ್ನು ಶ್ರೇಯಃ ಸಾಧನವೆಂದೂ, ಆಲಂಕಾರಿಕರು ಕೀರ್ತಿಯನ್ನೂ, ವಾತ್ಸ್ಯಾಯನಾದಿಗಳು ಕಾಮ ವನ್ನೂ ಯೋಗಿಗಳು ಸತ್ಯ, ದಮ, ಶಮಗಳನ್ನೂ ಅರ್ಥಶಾಸ್ತ್ರದವರು ಐಶ್ವರ್ಯ ವನ್ನೂ ಪುರುಷಾರ್ಥಸಾಧನವೆಂದು ಹೇಳುತ್ತಾರೆ. ಕೆಲವರು ಯಥೇಷ್ಟವಾಗಿ ವ್ಯಯಮಾಡಿ ಭೋಗಿಸುವುದೇ ಉತ್ತಮವೆಂದು ತಿಳಿಯುತ್ತಾರೆ. ಯಜ್ಞ ದಾನ ತಪಸ್ಸುಗಳು ಪುರುಷಾರ್ಥಸಾಧನಗಳೆಂದು ಇನ್ನು ಕೆಲವರು ಹೇಳುತ್ತಾರೆ. ಇತರರು ನಾನಾ ವ್ರತಗಳನ್ನೂ ಹಲವರು ನಿಯಮಗಳನ್ನೂ ಹಲವರು ಯಮಗಳನ್ನೂ ಶ್ರೇಯಃಸಾಧನಗಳೆಂದು ಹೇಳುತ್ತಾರೆ (೧೦). ಒಟ್ಟಿನಲ್ಲಿ, ಉದ್ಧವ, ಕರ್ಮ ನಿರ್ಮಿತಗಳಾದ ಇವುಗಳ ಫಲಗಳು ಆದ್ಯಂತವುಳ್ಳವುಗಳಾದ್ದರಿಂದ ನಶ್ವರವಾದವು. ಪರಿಣಾಮದಲ್ಲಿ ದುಃಖವನ್ನೇ ಕೊಡತಕ್ಕವು. ವಿಮೋಹದಲ್ಲಿ ಮುಗಿಯತಕ್ಕವು. ಈ ಫಲಗಳಲ್ಲಿರತಕ್ಕ ಆನಂದವು ಅತ್ಯಲ್ಪವಾದದ್ದು. ಅಲ್ಲದೆ ಭೋಗಕಾಲದಲ್ಲಿಯೂ ನಾನಾ ಚಿಂತೆಗಳಿಂದ ಕೂಡಿ ಶೋಕಮಿಶ್ರವಾಗಿರುತ್ತವೆ (೧೧). ಆದರೆ, ಸೌಮ್ಯ-ಉದ್ಧವ, ಸರ್ವವಸ್ತುಗಳಲ್ಲಿಯೂ ಅಪೇಕ್ಷೆಯನ್ನು ತೊರೆದು ಯಾವ ಭಕ್ತನು ನನ್ನಲ್ಲಿ ಚಿತ್ತವನ್ನರ್ಪಿಸಿರುತ್ತಾನೋ ಆತನಿಗೆ ಆತ್ಮನಾದ ನನ್ನಿಂದ ಯಾವ ಸುಖವು ದೊರೆಯುತ್ತದೆಯೋ ಅದು ವಿಷಯಾಸಕ್ತಚಿತ್ತರಿಗೆ ಎಲ್ಲಿಂದ ಬಂದೀತು ? (೧೨).

ಅಕಿಂಚನಸ್ಯ ದಾಂತಸ್ಯ ಶಾಂತಸ್ಯ ಸಮಚೇತಸಃ ।
ಮಯಾ ಸಂತುಷ್ಟಮನಸಃ ಸರ್ವಾಃ ಸುಖಮಯಾ ದಿಶಃ ॥ ೧೩

ನ ಪಾರಮೇಷ್ಠ್ಯಂ ನ ಮಹೇಂದ್ರಧಿಷ್ಣ್ಯಂ
ನ ಸಾರ್ವಭೌಮಂ ನ ರಸಾಧಿಪತ್ಯಮ್ ।
ನ ಯೋಗಸಿದ್ಧೀರಪುನರ್ಭವಂ ವಾ
ಮಯ್ಯರ್ಪಿತಾತ್ಮೇಚ್ಛತಿ ಮದ್ವಿನಾನ್ಯತ್ ॥ ೧೪

ನ ತಥಾ ಮೇ ಪ್ರಿಯತಮ ಆತ್ಮಯೋನಿರ್ನ ಶಂಕರಃ ।
ನ ಚ ಸಂಕರ್ಷಣೋ ನ ಶ್ರೀರ್ನೈವಾತ್ಮಾ ಚ ಯಥಾ ಭವಾನ್ ॥ ೧೫

ನಿರಪೇಕ್ಷಂ ಮುನಿಂ ಶಾಂತಂ ನಿರ್ವೈರಂ ಸಮದರ್ಶನಮ್ ।
ಅನುವ್ರಜಾಮ್ಯಹಂ ನಿತ್ಯಂ ಪೂಯೇಯೇತ್ಯಂಘ್ರಿರೇಣುಭಿಃ ॥ ೧೬

ನಿಷ್ಕಿಂಚನಾ ಮಯ್ಯನುರಕ್ತಚೇತಸಃ
ಶಾಂತಾ ಮಹಾಂತೋಽಖಿಲಜೀವವತ್ಸಲಾಃ ।

---

ನನ್ನದೆಂದು ಯಾವುದೂ ಇಲ್ಲದ ಅಕಿಂಚನನೂ ದಾಂತನೂ ಶಾಂತನೂ ಸಮತ್ವಬುದ್ಧಿಯವನೂ ನನ್ನಿಂದಲೇ ಸಂತೃಪ್ತಚಿತ್ತನೂ ಆದ ಭಕ್ತನಿಗೆ ಸಮಸ್ತ ದಿಕ್ಕುಗಳೂ ಸುಖಮಯವಾಗಿ ಪರಿಣಮಿಸುತ್ತವೆ. ನನ್ನಲ್ಲಿ ಚಿತ್ತವನ್ನು ಸಮರ್ಪಿಸಿದ ಭಕ್ತನು ನನ್ನನ್ನು ಬಿಟ್ಟು ಇನ್ನೇನನ್ನೂ ಬಯಸುವುದಿಲ್ಲ. ನನ್ನನ್ನುಳಿದು ಆತನಿಗೆ ಪರಮೇಷ್ಠಿಪದವಿಯೂ ಬೇಡ, ದೇವೇಂದ್ರಲೋಕವೂ ಬೇಡ, ಸಾರ್ವಭೌಮತೆಯೂ ಬೇಡ, ಪಾತಾಳದ ಒಡೆತನವೂ ಬೇಡವಾಗುತ್ತದೆ. ಯೋಗಸಿದ್ಧಿಗಳನ್ನೂ ಅವನು ಇಚ್ಛಿಸುವುದಿಲ್ಲ. ಮೋಕ್ಷವನ್ನೂ ಅಪೇಕ್ಷಿಸುವುದಿಲ್ಲ (೧೩–೧೪). ಹಾಗೆಯೇ ನನಗೂ ಸಹ (ಪುತ್ರನಾದ) ಬ್ರಹ್ಮನಾಗಲಿ, (ಮತ್ಸ್ವರೂಪನಾದ) ಶಿವನಾಗಲಿ, (ಸೋದರನಾದ) ಬಲರಾಮನಾಗಲಿ, (ಪತ್ನಿಯಾದ) ಲಕ್ಷ್ಮಿಯಾಗಲಿ ಅಥವಾ ನನ್ನ ದೇಹವೇ ಆಗಲಿ, ಉದ್ಧವ, (ಭಕ್ತನಾದ) ನಿನ್ನಷ್ಟು ಪ್ರಿಯತಮರಲ್ಲ ! (೧೫). ನಿರಪೇಕ್ಷನೂ ಶಾಂತನೂ ನಿರ್ವೈರನೂ ಸಮದೃಷ್ಟಿಯೂ ಆದ ಮುನಿಯ ಹಿಂದೆ ನಾನು, ಆತನ ಪಾದರೇಣುಗಳಿಂದ ಪವಿತ್ರನಾದೇನೆಂಬ ಭಾವದಿಂದ, ಸದಾ ಹಿಂಬಾಲಿಸಿ ಹೋಗುತ್ತೇನೆ ! (೧೬). ಅಕಿಂಚನರೂ ನನ್ನಲ್ಲಿ ಅನುರಕ್ತಚಿತ್ತರೂ

ಕಾಮ್ಯೈರನಾಲಬ್ಧಧಿಯೋ ಜುಷಂತಿ ಯತ್
ತನ್ನೈರಪೇಕ್ಷ್ಯಂ ನ ವಿದುಃ ಸುಖಂ ಮಮ ॥ ೧೭

ಬಾಧ್ಯಮಾನೋऽಪಿ ಮದ್ಭಕ್ತೋ ವಿಷಯೈರಜಿತೇಂದ್ರಿಯಃ ।
ಪ್ರಾಯಃ ಪ್ರಗಲ್ಭಯಾ ಭಕ್ತ್ಯಾ ವಿಷಯೈರ್ನಾಭಿಭೂಯತೇ ॥ ೧೮

ಯಥಾಗ್ನಿಃ ಸುಸಮೃದ್ಧಾರ್ಚಿಃ ಕರೋತ್ಯೇಧಾಂಸಿ ಭಸ್ಮಸಾತ್ ।
ತಥಾ ಮದ್ವಿಷಯಾ ಭಕ್ತಿರುದ್ಧವೈನಾಂಸಿ ಕೃತ್ಸ್ನಶಃ ॥ ೧೯

ನ ಸಾಧಯತಿ ಮಾಂ ಯೋಗೋ ನ ಸಾಂಖ್ಯಂ ಧರ್ಮ ಉದ್ಧವ ।
ನ ಸ್ವಾಧ್ಯಾಯಸ್ತಪಸ್ತ್ಯಾಗೋ ಯಥಾ ಭಕ್ತಿರ್ಮಮೋರ್ಜಿತಾ ॥ ೨೦

ಭಕ್ತ್ಯಾಹಮೇಕಯಾ ಗ್ರಾಹ್ಯಃ ಶ್ರದ್ಧಯಾತ್ಮಾ ಪ್ರಿಯಃ ಸತಾಮ್ ।
ಭಕ್ತಿಃ ಪುನಾತಿ ಮನ್ನಿಷ್ಠಾ ಶ್ವಪಾಕಾನಪಿ ಸಂಭವಾತ್ ॥ ೨೧

ಧರ್ಮಃ ಸತ್ಯದಯೋಪೇತೋ ವಿದ್ಯಾ ವಾ ತಪಸಾನ್ವಿತಾ ।
ಮದ್ಭಕ್ತ್ಯಾಪೇತಮಾತ್ಮಾನಂ ನ ಸಮ್ಯಕ್ ಪ್ರಪುನಾತಿ ಹಿ ॥ ೨೨

---

ಶಾಂತರೂ ಮಹಾಂತರೂ ಅಖಿಲ ಜೀವಗಳಲ್ಲಿ ವಾತ್ಸಲ್ಯವುಳ್ಳವರೂ ಆಸೆಗಳ ಸ್ಪರ್ಶವೂ ಇಲ್ಲದ ಬುದ್ಧಿಯುವರೂ ಆದ ನನ್ನ ಭಕ್ತರು ನಿರಪೇಕ್ಷವಾದ ಯಾವ ಸುಖವನ್ನು ಅನುಭವಿಸುತ್ತಾರೋ ಆ ಸುಖವನ್ನು ಅನ್ಯರು ಅರಿಯರು (೧೭). ನನ್ನ ಸಾಮಾನ್ಯ ಭಕ್ತನೊಬ್ಬನು ಅಜಿತೇಂದ್ರಿಯನಾಗಿ ವಿಷಯಾಭಿಲಾಷೆಗಳಿಂದ ಬಾಧಿಸಲ್ಪಡುತ್ತಿದ್ದರೂ ಸಹ, ಪ್ರಕೃಷ್ಟವಾದ ಭಕ್ತಿಯೊಂದಿದ್ದರೆ ಆತನು ವಿಷಯಗಳಿಂದ ಪರಾಜಿತನಾಗುವುದಿಲ್ಲ (೧೮). ಚೆನ್ನಾಗಿ ಜ್ವಲಿಸುತ್ತಿರುವ ಅಗ್ನಿಯು ಸೌದೆಗಳನ್ನು ಸುಟ್ಟು ಹೇಗೆ ಬೂದಿಮಾಡುವುದೋ ಹಾಗೆ ನನ್ನಲ್ಲಿಟ್ಟಿರುವ ಭಕ್ತಿಯು, ಉದ್ಧವ, ಪಾಪಗಳನ್ನು ಸಂಪೂರ್ಣವಾಗಿ ಸುಟ್ಟುಹಾಕುವುದು. ಯೋಗವಾಗಲಿ, ಸಾಂಖ್ಯವಾಗಲಿ, ಧರ್ಮವಾಗಲಿ, ಸ್ವಾಧ್ಯಾಯ ತಪಸ್ಸುಗಳಾಗಲಿ, ತ್ಯಾಗವಾಗಲಿ, ಊರ್ಜಿತವಾದ ಭಕ್ತಿಯ ಹಾಗೆ ನನ್ನನ್ನು ಮೆಚ್ಚಿಸಲಾರದು (೧೯–೨೦). ಸಜ್ಜನರಿಗೆ ಪ್ರಿಯನೂ ಅವರ ಆತ್ಮನೂ ಆಗಿರುವ ನಾನು ಶ್ರದ್ಧಾಪೂರ್ವಕವಾಗಿ ನನ್ನಲ್ಲಿಟ್ಟಿರುವ ಭಕ್ತಿಗೆ ಒಲಿದುಬಿಡುತ್ತೇನೆ. ನನ್ನಲ್ಲಿ ದೃಢವಾಗಿರುವ ಭಕ್ತಿಯು ಚಂಡಾಲರನ್ನೂ ಸಹ ಜಾತಿದೋಷದಿಂದ ಪಾರುಮಾಡಿ ಪವಿತ್ರಗೊಳಿಸುತ್ತದೆ (೨೧). ಸತ್ಯದಯೋಪೇತವಾದ ಧರ್ಮವಾಗಲಿ, ತಪೋನ್ವಿತವಾದ

ಕಥಂ ವಿನಾ ರೋಮಹರ್ಷಂ ದ್ರವತಾ ಚೇತಸಾ ವಿನಾ ।
ವಿನಾऽऽನಂದಾಶ್ರುಕಲಯಾ ಶುದ್ಧ್ಯೇದ್ ಭಕ್ತ್ಯಾ ವಿನಾऽऽಶಯಃ ॥ ೨೩

ವಾಗ್ ಗದ್ಗದಾ ದ್ರವತೇ ಯಸ್ಯ ಚಿತ್ತಂ
ರುದತ್ಯಭೀಕ್ಷ್ಣಂ ಹಸತಿ ಕ್ವಚಿಚ್ಚ ।
ವಿಲಜ್ಜ ಉದ್ಗಾಯತಿ ನೃತ್ಯತೇ ಚ
ಮದ್ಭಕ್ತಿಯುಕ್ತೋ ಭುವನಂ ಪುನಾತಿ ॥ ೨೪

ಯಥಾಗ್ನಿನಾ ಹೇಮ ಮಲಂ ಜಹಾತಿ
ಧ್ಮಾತಂ ಪುನಃ ಸ್ವಂ ಭಜತೇ ಚ ರೂಪಮ್ ।
ಆತ್ಮಾ ಚ ಕರ್ಮಾನುಶಯಂ ವಿಧೂಯ
ಮದ್ಭಕ್ತಿಯೋಗೇನ ಭಜತ್ಯಥೋ ಮಾಮ್ ॥ ೨೫

ಯಥಾ ಯಥಾऽऽತ್ಮಾ ಪರಿಮೃಜ್ಯತೇऽಸೌ
ಮತ್ಪುಣ್ಯಗಾಥಾಶ್ರವಣಾಭಿಧಾನೈಃ ।
ತಥಾ ತಥಾ ಪಶ್ಯತಿ ವಸ್ತು ಸೂಕ್ಷ್ಮಂ
ಚಕ್ಷುರ್ಯಥೈವಾಂಜನ ಸಂಪ್ರಯುಕ್ತಮ್ ॥ ೨೬

---

ವಿದ್ಯೆಯಾಗಲಿ, ನನ್ನಲ್ಲಿ ಭಕ್ತಿಯಿಲ್ಲದಿರುವ ಪುರುಷನನ್ನು ಅಷ್ಟು ಉತ್ತಮವಾಗಿ ಪವಿತ್ರಗೊಳಿಸಲಾರದು. ಭಕ್ತಿಯಿಂದ ದೇಹದಲ್ಲಿ ರೋಮಾಂಚವಾಗದೆ, ಮನಸ್ಸು ಕರಗದೆ, ಆನಂದಬಾಷ್ಪ ಉದುರದೆ ಇದ್ದಾಗ, ಭಕ್ತಿಯಿಲ್ಲದೆ ಅಂತಃಕರಣವು ಹೇಗೆ ಶುದ್ಧವಾದೀತು ? (೨೨-೨೩). ಭಕ್ತಿಯ ಆವೇಶದಿಂದ ಯಾವಾತನ ಮಾತು ಗದ್ಗದಿಸುವುದೋ, ಮನಸ್ಸು ಕರಗುವುದೋ, ಯಾವಾತನು ಭಕ್ತಿಭರದಿಂದ ಆಗಾಗ ಅಳುವನೋ, ನಗುವನೋ, ಕೆಲವುವೇಳೆ ಲಜ್ಜಾರಹಿತನಾಗಿಯೂ ವರ್ತಿಸುವನೋ, ಗಟ್ಟಿಯಾಗಿ ಹಾಡುವನೋ, ಕುಣಿಯುವನೋ, ಅಂತಹ ನನ್ನ ಭಕ್ತನು ಜಗತ್ತನ್ನೇ ಪವಿತ್ರಗೊಳಿಸುವನು (೨೪). ಬೆಂಕಿಯಿಂದ ದಹಿಸಿದಾಗ ಚಿನ್ನವು ತನ್ನಲ್ಲಿದ್ದ ಕಶ್ಮಲವನ್ನು ಕಳೆದುಕೊಂಡು ಹೇಗೆ ಮತ್ತೆ ನಿಜಸ್ವರೂಪವನ್ನು ಪಡೆಯುತ್ತದೆಯೋ ಹಾಗೆ ಜೀವಾತ್ಮನು ನನ್ನ ಭಕ್ತಿಯೋಗದಿಂದ ತನ್ನ ಕರ್ಮವಾಸನೆಯನ್ನು ಹೋಗಲಾಡಿಸಿಕೊಂಡು ನನ್ನನ್ನು ಭಜಿಸುತ್ತಾನೆ—ನನ್ನ ನಿಜಸ್ವರೂಪವನ್ನು ಪಡೆಯುತ್ತಾನೆ (೨೫). ನನ್ನ ಪುಣ್ಯಕಥೆಗಳ ಶ್ರವಣವನ್ನೂ ಕೀರ್ತನೆಯನ್ನೂ

ವಿಷಯಾನ್ ಧ್ಯಾಯತಶ್ಚಿತ್ತಂ ವಿಷಯೇಷು ವಿಷಜ್ಜತೇ ।
ಮಾಮನುಸ್ಮರತಶ್ಚಿತ್ತಂ ಮಯ್ಯೇವ ಪ್ರವಿಲೀಯತೇ ॥ ೨೭

ತಸ್ಮಾದಸದಭಿಧ್ಯಾನಂ ಯಥಾ ಸ್ವಪ್ನಮನೋರಥಮ್ ।
ಹಿತ್ವಾ ಮಯಿ ಸಮಾಧತ್ಸ್ವ ಮನೋ ಮದ್ಭಾವಭಾವಿತಮ್ ॥ ೨೮

ಸ್ತ್ರೀಣಾಂ ಸ್ತ್ರೀಸಂಗಿನಾಂ ಸಂಗಂ ತ್ಯಕ್ತ್ವಾ ದೂರತ ಆತ್ಮವಾನ್ ।
ಕ್ಷೇಮೇ ವಿವಿಕ್ತ ಆಸೀನಶ್ಚಿಂತಯೇನ್ಮಾಮತಂದ್ರಿತಃ ॥ ೨೯

ನ ತಥಾಸ್ಯ ಭವೇತ್ ಕ್ಲೇಶೋ ಬಂಧಶ್ಚಾನ್ಯಪ್ರಸಂಗತಃ ।
ಯೋಷಿತ್ಸಂಗಾದ್ ಯಥಾ ಪುಂಸೋ ಯಥಾ ತತ್ಸಂಗಿಸಂಗತಃ ॥ ೩೦

---

ಮಾಡುತ್ತಹೋದಂತೆ ನನ್ನ ಭಕ್ತನು (ಕರ್ಮಾಶಯದಿಂದ ಬಿಡುಗಡೆ ಹೊಂದಿ) ಪರಿಶುದ್ಧನಾಗುತ್ತ ಹೋಗುವನು. ಅಂಜನವನ್ನು ಹಚ್ಚಿಕೊಂಡ ನೇತ್ರವು ಹೇಗೆ ಸೂಕ್ಷ್ಮವಸ್ತುವನ್ನು ನೋಡಬಲ್ಲುದೋ ಹಾಗೆ ಪರಿಶುದ್ಧನಾದವನು ಸೂಕ್ಷ್ಮ ವಸ್ತುವನ್ನು ಗ್ರಹಿಸಬಲ್ಲ [1]ಜ್ಞಾನವನ್ನು ಪಡೆಯುವನು (೨೬). ಭೋಗವಿಷಯ ಗಳನ್ನು ಧ್ಯಾನಿಸತಕ್ಕವನ ಚಿತ್ತವು ಆ ವಿಷಯಗಳಲ್ಲಿ ಮುಳುಗಿಹೋಗುತ್ತದೆ. ಅಂತೆಯೇ ನನ್ನನ್ನು ಧ್ಯಾನಿಸತಕ್ಕವನ ಚಿತ್ತವು ನನ್ನಲ್ಲಿಯೇ ಲೀನವಾಗುತ್ತದೆ. ಈ ಭೋಗವಸ್ತುಗಳ ಅಭಿಧ್ಯಾನವು, ಕನಸಿನ ಮನೋರಥದಂತೆ, ಇಲ್ಲದ ಮಿಥ್ಯಾ ವಸ್ತುಗಳ ಚಿಂತನವಾಗಿರುತ್ತದೆ. ಆದ್ದರಿಂದ, ಉದ್ಧವ, ನಿನ್ನ ಚಿತ್ತವನ್ನು ನನ್ನ ಭಜನದಿಂದ ಶೋಧಿಸಿ ನನ್ನಲ್ಲಿಯೇ ಗಟ್ಟಿಯಾಗಿ ನಿಲ್ಲಿಸಿಬಿಡು (೨೭–೨೮). ಸ್ತ್ರೀಯರ ಮತ್ತು ಸ್ತ್ರೀಸಂಗ ಮಾಡತಕ್ಕವರ ಸಂಗವನ್ನು ದೂರದಿಂದಲೇ ವರ್ಜಿಸಿ, ನಿರ್ಭಯವೂ ಏಕಾಂತವೂ ಆದ ಸ್ಥಳದಲ್ಲಿ ಕುಳಿತುಕೊಂಡು ಆಲಸ್ಯವಿಲ್ಲದೆ ನನ್ನನ್ನು ಧ್ಯಾನಿಸುತ್ತಿರಬೇಕು. ಪುರುಷನಿಗೆ ಸ್ತ್ರೀಯರ ಸಂಗದಿಂದ ಯಾವ ಬಗೆಯಲ್ಲಿ ಬಂಧನ ಉಂಟಾಗುವುದೋ ಸ್ತ್ರೀಕಾಮುಕರ ಸಂಗದಿಂದ ಎಷ್ಟು ಕ್ಲೇಶ ಉಂಟಾಗು ವುದೋ ಅಂತಹ ಬಂಧಕ್ಲೇಶಗಳು ಅನ್ಯರ ಸಂಬಂಧದಿಂದ ಆಗುವುದಿಲ್ಲ" ಎಂದನು (೨೯–೩೦).

---

1. 'ತಮೇವ ವಿದಿತ್ವಾ ಅತಿಮೃತ್ಯುಮೇತಿ' ಇತ್ಯಾದಿ ವಚನಗಳಿಂದ ಜ್ಞಾನವೇ ಮೋಕ್ಷಸಾಧನವೆಂದು ನಿಶ್ಚಿತವಾಗಿದೆ, ಭಕ್ತಿಯಲ್ಲ—ಎಂಬ ಶಂಕೆಗೆ ಇದು ಉತ್ತರ. ಭಕ್ತಿ ಯಿಂದ ಜ್ಞಾನ ಹುಟ್ಟುತ್ತದೆ ಅಥವಾ ಭಕ್ತಿಯೇ ಜ್ಞಾನವಾಗಿ ಪರಿಣಮಿಸುತ್ತದೆ—ಎಂದು ಅಭಿಪ್ರಾಯ.

ಉದ್ಧವ ಉವಾಚ—

ಯಥಾ ತ್ವಾಮರವಿಂದಾಕ್ಷ ಯಾದೃಶಂ ವಾ ಯದಾತ್ಮಕಮ್ ।
ಧ್ಯಾಯೇನ್ಮುಮುಕ್ಷುರೇತನ್ಮೇ ಧ್ಯಾನಂ ತ್ವಂ ವಕ್ತುಮರ್ಹಸಿ ॥ ೩೧

ಶ್ರೀಭಗವಾನುವಾಚ—

ಸಮ ಆಸನ ಆಸೀನಃ ಸಮಕಾಯೋ ಯಥಾಸುಖಮ್ ।
ಹಸ್ತಾವುತ್ಸಂಗ ಆಧಾಯ ಸ್ವನಾಸಾಗ್ರಕೃತೇಕ್ಷಣಃ ॥ ೩೨

ಪ್ರಾಣಸ್ಯ ಶೋಧಯೇನ್ಮಾರ್ಗಂ ಪೂರಕುಂಭಕರೇಚಕೈಃ ।
ವಿಪರ್ಯಯೇಣಾಪಿ ಶನೈರಭ್ಯಸೇನ್ನಿರ್ಜಿತೇಂದ್ರಿಯಃ ॥ ೩೩

ಹೃದ್ಯವಿಚ್ಛಿನ್ನಮೋಂಕಾರಂ ಘಂಟನಾದಂ ಬಿಸೋರ್ಣವತ್ ।
ಪ್ರಾಣೇನೋದೀರ್ಯ ತತ್ರಾಥ ಪುನಃ ಸಂವೇಶಯೇತ್ ಸ್ವರಮ್ ॥ ೩೪

---

ಆಗ ಉದ್ಧವನು "ಹೇ ಅರವಿಂದನೇತ್ರ, ಮುಮುಕ್ಷುವಾದವನು ನಿನ್ನನ್ನು ಧ್ಯಾನಿಸಬೇಕೆಂದು ಹೇಳಿದೆಯಲ್ಲ, ಆ ಧ್ಯಾನವು ಯಾವ ರೀತಿಯಲ್ಲಿ ನಡೆಯಬೇಕು, ಯಾವ ಬಗೆಯ ವಸ್ತುವನ್ನು ಧ್ಯಾನಿಸಬೇಕು ಮತ್ತು ಧ್ಯಾನದ ಸ್ವರೂಪ ಹೇಗಿರಬೇಕು ?—ಎಂಬುದಾಗಿ ಧ್ಯಾನದ ವಿಚಾರವನ್ನು ನನಗೆ ಹೇಳು" ಎಂದನು (೩೧). ಆಗ ಭಗವಂತನಿಂತೆಂದನು : "ಹೆಚ್ಚು ಎತ್ತರವೂ ಅಲ್ಲದ ತಗ್ಗೂ ಅಲ್ಲದ ಸಮವಾದ ಆಸನದಲ್ಲಿ ದೇಹವನ್ನು ಸಮವಾಗಿರಿಸಿ ತನಗೆ ಸುಖವಾಗುವಂತೆ ಕುಳಿತುಕೊಳ್ಳಬೇಕು. ಎರಡು ಕೈಗಳನ್ನೂ ತೊಡೆಯಮೇಲಿಟ್ಟು ತನ್ನ ಮೂಗಿನ ತುದಿಯಲ್ಲಿ ದೃಷ್ಟಿಯನ್ನಿರಿಸಬೇಕು (೩೨). ಅನಂತರ ಜಿತೇಂದ್ರಿಯನಾಗಿ ಪೂರಕಕುಂಭಕರೇಚಕಕ್ರಮಗಳಿಂದಾಗಲಿ ಅಥವಾ [1]ವಿಪರ್ಯಯದಿಂದ ರೇಚಕಕುಂಭಕಪೂರಕಗಳಿಂದಾಗಲಿ ಮೆಲ್ಲಗೆ ಪ್ರಾಣವಾಯುವಿನ ಮಾರ್ಗವನ್ನು ಶೋಧಿಸಬೇಕು (೩೩). (ಮೂಲಾಧಾರದಿಂದ ಆರಂಭಿಸಿ) ಅವಿಚ್ಛಿನ್ನವಾಗಿ ಪ್ರವಹಿಸಿ,

---

1. ಇನ್ನೂ ಒಂದು ವಿಪರ್ಯಯಕ್ರಮ ಉಂಟು—

ಇಡಯಾ ಪೂರಯೇದ್ವಾಯುಂ ತ್ಯಜೇತ್ ಪಿಂಗಲಯಾ ತತಃ ।
ಪಿಂಗಲಾಪೂರಿತಂ ವಾಯುಮಿಡಯಾ ಚ ಪರಿತ್ಯಜೇತ್ ॥

—ಯೋಗಶಾಸ್ತ್ರ

ಏವಂ ಪ್ರಣವಸಂಯುಕ್ತಂ ಪ್ರಾಣಮೇವ ಸಮಭ್ಯಸೇತ್ ।
ದಶಕೃತ್ವಸ್ತ್ರಿಷವಣಂ ಮಾಸಾದರ್ವಾಗ್ ಜಿತಾನಿಲಃ ॥ ३४

ಹೃತ್ಪುಂಡರೀಕಮಂತಃಸ್ಥಮೂರ್ಧ್ವನಾಲಮಧೋಮುಖಮ್ ।
ಧ್ಯಾತ್ವೋರ್ಧ್ವಮುಖಮುನ್ನಿದ್ರಮಷ್ಟಪತ್ರಂ ಸಕರ್ಣಿಕಮ್ ॥ ३६

ಕರ್ಣಿಕಾಯಾಂ ನ್ಯಸೇತ್ ಸೂರ್ಯಸೋಮಾಗ್ನೀನುತ್ತರೋತ್ತರಮ್ ।
ವಹ್ನಿಮಧ್ಯೇ ಸ್ಮರೇದ್ ರೂಪಂ ಮಮೈತದ್ ಧ್ಯಾನಮಂಗಲಮ್ ॥ ३७

ಸಮಂ ಪ್ರಶಾಂತಂ ಸುಮುಖಂ ದೀರ್ಘಚಾರುಚತುರ್ಭುಜಮ್ ।
ಸುಚಾರುಸುಂದರಗ್ರೀವಂ ಸುಕಪೋಲಂ ಶುಚಿಸ್ಮಿತಮ್ ॥ ३८

---

ಘಂಟಾನಾದಕ್ಕೆ ಸಮವಾಗಿ ಹೃದಯದಲ್ಲಿ ಪ್ರತಿಷ್ಠಿತವಾಗಿರುವ ಓಂಕಾರವನ್ನು ಪ್ರಾಣವಾಯುವಿನಿಂದ ಕಮಲನಾಳದಂತೆ ಮೇಲಕ್ಕೆ ಎಳೆದು (ಹದಿನೈದನೆಯ) ಸ್ವರವಾದ ಬಿಂದುವನ್ನು ಆ ಪ್ರಣವಕ್ಕೆ ಜೋಡಿಸಬೇಕು (३೪). ಹೀಗೆ ಪ್ರಣವ ಸಂಯುಕ್ತವಾದ ಪ್ರಾಣಾಯಾಮವನ್ನು, ಒಂದೊಂದು ಬಾರಿಗೆ ಹತ್ತು ಪ್ರಾಣಾಯಾಮಗಳಂತೆ, ದಿನಕ್ಕೆ ಮೂರುಸಲ ಸಂಧ್ಯಾಕಾಲದಲ್ಲಿ ಅಭ್ಯಾಸಮಾಡಬೇಕು. ಒಂದು ತಿಂಗಳೊಳಗೆ ಅವನಿಗೆ ಪ್ರಾಣಾಯಾಮವು ಸಿದ್ಧಿಸುತ್ತದೆ (३४). ದೇಹದೊಳಗೆ ಊರ್ಧ್ವನಾಳವೂ ಅರಳದೆ ಮೊಗ್ಗಾಗಿಯೂ (ಬಾಳೆಹೂವಿನಂತೆ) ಅಧೋಮುಖವೂ ಆದ ಯಾವ ಹೃದಯಕಮಲವುಂಟೋ ಅದು ಊರ್ಧ್ವಮುಖವಾಗಿದೆಯೆಂದೂ ಅರಳಿದೆಯೆಂದೂ ಅಷ್ಟದಳಗಳಿಂದಲೂ ಕರ್ಣಿಕೆಯಿಂದಲೂ ಕೂಡಿದೆಯೆಂದೂ ಭಾವಿಸಿ ಅದನ್ನು ಧ್ಯಾನಿಸಬೇಕು (३६). ಆ ಕಮಲದ ಕರ್ಣಿಕೆಯಲ್ಲಿ ಸೂರ್ಯ, ಚಂದ್ರ, ಅಗ್ನಿಗಳನ್ನು ಉತ್ತರೋತ್ತರವಾಗಿ ಧ್ಯಾನಿಸಬೇಕು. ಅಗ್ನಿಮಂಡಲದಲ್ಲಿ ಧ್ಯಾನಕ್ಕೆ ಮಂಗಳಕರವಾದ ವಿಷಯವಾಗಿ ನನ್ನ ಈ ರೂಪವನ್ನು ಧ್ಯಾನಿಸಬೇಕು (३७). ಯಾವುದೆಂದರೆ, ಅನುರೂಪವಾದ ಅವಯವವುಳ್ಳದ್ದೂ ಪ್ರಶಾಂತವೂ ಸುಮುಖವೂ ದೀರ್ಘಸುಂದರಚತುರ್ಬಾಹುವೂ ಅತಿರಮಣೀಯಕಂಠವುಳ್ಳದ್ದೂ ಸುಕಪೋಲವೂ ಶುಚಿಸ್ಮಿತವೂ ಆದ ನನ್ನ ಮೂರ್ತಿಯನ್ನು ಧ್ಯಾನಿಸಬೇಕು. ಅಲ್ಲದೆ ಆ ಮೂರ್ತಿಯು ಉಭಯಕರ್ಣಗಳಲ್ಲಿಯೂ ಮಕರಕುಂಡಲವನ್ನು ಧರಿಸಿದ್ದೂ ಪೀತಾಂಬರಧಾರಿಯೂ ಘನಶ್ಯಾಮವರ್ಣವೂ ವಕ್ಷಃಸ್ಥಳದಲ್ಲಿ ಶ್ರೀವತ್ಸಚಿಹ್ನೆ

ಸಮಾನಕರ್ಣವಿನ್ಯಸ್ತಸ್ಫುರನ್ಮಕರಕುಂಡಲಮ್ ।
ಹೇಮಾಂಬರಂ ಘನಶ್ಯಾಮಂ ಶ್ರೀವತ್ಸ ಶ್ರೀನಿಕೇತನಮ್ ॥ ೩೯

ಶಂಖಚಕ್ರಗದಾಪದ್ಮವನಮಾಲಾವಿಭೂಷಿತಮ್ ।
ನೂಪುರೈರ್ವಿಲಸತ್ಪಾದಂ ಕೌಸ್ತುಭಪ್ರಭಯಾ ಯುತಮ್ ॥ ೪೦

ದ್ಯುಮತ್ಕಿರೀಟಕಟಕಕಟಿಸೂತ್ರಾಂಗದಾಯುತಮ್ ।
ಸರ್ವಾಂಗಸುಂದರಂ ಹೃದ್ಯಂ ಪ್ರಸಾದಸುಮುಖೇಕ್ಷಣಮ್ ।
ಸುಕುಮಾರಮಭಿಧ್ಯಾಯೇತ್ ಸರ್ವಾಂಗೇಷು ಮನೋ ದಧತ್ ॥ ೪೧

ಇಂದ್ರಿಯಾಣೀಂದ್ರಿಯಾರ್ಥೇಭ್ಯೋ ಮನಸಾಽಽಕೃಷ್ಯ ತನ್ಮನಃ ।
ಬುದ್ಧ್ಯಾ ಸಾರಥಿನಾ ಧೀರಃ ಪ್ರಣಯೇನ್ಮಯಿ ಸರ್ವತಃ ॥ ೪೨

ತತ್ ಸರ್ವವ್ಯಾಪಕಂ ಚಿತ್ತಮಾಕೃಷ್ಯೈಕತ್ರ ಧಾರಯೇತ್ ।
ನಾನ್ಯಾನಿ ಚಿಂತಯೇದ್ ಭೂಯಃ ಸುಸ್ಮಿತಂ ಭಾವಯೇನ್ಮುಖಮ್ ॥ ೪೩

---

ಯನ್ನೂ ಲಕ್ಷ್ಮಿಯನ್ನೂ ಧರಿಸಿರತಕ್ಕದ್ದೂ ಆಗಿರಬೇಕು (೩೮–೩೯). ಶಂಖ-ಚಕ್ರ - ಗದಾ - ಪದ್ಮ - ವನಮಾಲಾವಿಭೂಷಿತವೂ ನೂಪುರಗಳಿಂದ ಶೋಭಿತವಾದ ಯುಗಲವೂ ಕೌಸ್ತುಭಮಣಿಪ್ರಭೆಯಿಂದ ವಿರಾಜಿತವೂ ಆಗಿರಬೇಕು. ಅಲ್ಲದೆ ಆ ಮೂರ್ತಿಯು ದೀಪ್ತಿಮತ್ತಾದ ಕಿರೀಟ - ಕಟಕ - ಕಟಿಸೂತ್ರ - ಅಂಗದಗಳಿಂದ ಅಲಂಕೃತವೂ ಸರ್ವಾಂಗಸುಂದರವೂ ಹೃದ್ಯವೂ ಪ್ರಸನ್ನಮುಖನೇತ್ರವುಳ್ಳದ್ದೂ ಆಗಿರಬೇಕು (೪೦–೪೧). ಇಂತಹ ಸುಕುಮಾರವಾದ ಮೂರ್ತಿಯನ್ನು ಅದರ ಸರ್ವಾಂಗಗಳಲ್ಲಿಯೂ ಮನಸ್ಸನ್ನು ಕೇಂದ್ರೀಕರಿಸಿ ಧ್ಯಾನಿಸತಕ್ಕದ್ದು. ತನ್ನ ಸಮಸ್ತ ಇಂದ್ರಿಯಗಳನ್ನು ವಿಷಯಗಳದೆಸೆಯಿಂದ ಸೆಳೆದು, ಸಾರಥಿಯಾದ ಬುದ್ಧಿಯ ಸಹಾಯದಿಂದ ಮನಸ್ಸನ್ನೂ ಎಳೆದು, ಧೀರನಾದವನು ಆ ಮನಸ್ಸನ್ನು ಸರ್ವ ವಿಧದಲ್ಲಿಯೂ ನನ್ನಲ್ಲಿ ನಿಲ್ಲಿಸಬೇಕು (೪೨). ಅನಂತರ ಮೂರ್ತಿಯ ಸರ್ವಾಂಗ ವನ್ನು ವ್ಯಾಪಿಸಿದ್ದ ಚಿತ್ತವನ್ನು ಒಂದೆಡೆಗೆ ಆಕರ್ಷಿಸಿ ಸುಸ್ಮಿತವಾದ ಮುಖವೊಂದನ್ನೇ ಧ್ಯಾನಿಸುತ್ತಿರಬೇಕು. ಇತರ ಅಂಗಗಳನ್ನು ಚಿಂತಿಸಬಾರದು. ಹೀಗೆ ಮುಖ ಧ್ಯಾನದಲ್ಲಿಯೇ ಪ್ರತಿಷ್ಠಿತವಾಗಿ ನಿಲ್ಲುವ ಶಕ್ತಿಯನ್ನು ಗಳಿಸಿದ ಮನಸ್ಸನ್ನು ಅಲ್ಲಿಂದ ಸೆಳೆದು ಪರಮಕಾರಣವಾದ ಅವ್ಯಕ್ತಸ್ವರೂಪದಲ್ಲಿ ಧರಿಸಬೇಕು. ಅನಂತರ ಅದನ್ನೂ ತ್ಯಜಿಸಿ ಶುದ್ಧಬ್ರಹ್ಮನಾದ ನನ್ನಲ್ಲಿ ವಿಲೀನನಾಗಿ ಧ್ಯಾತೃಧ್ಯೇಯ ವಿಭಾಗ

ತತ್ರ ಲಬ್ಧಪದಂ ಚಿತ್ತಮಾಕೃಷ್ಯ ವ್ಯೋಮ್ನಿ ಧಾರಯೇತ್ ।
ತಚ್ಚ ತ್ಯಕ್ತ್ವಾ ಮದಾರೋಹೋ ನ ಕಿಂಚಿದಪಿ ಚಿಂತಯೇತ್ ॥ ೪೪

ಏವಂ ಸಮಾಹಿತಮತಿರ್ಮಾಮೇವಾತ್ಮಾನಮಾತ್ಮನಿ ।
ವಿಚಷ್ಟೇ ಮಯಿ ಸರ್ವಾತ್ಮನ್ ಜ್ಯೋತಿರ್ಜ್ಯೋತಿಷಿ ಸಂಯುತಮ್ ॥ ೪೫

ಧ್ಯಾನೇನೇತ್ಥಂ ಸುತೀವ್ರೇಣ ಯುಂಜತೋ ಯೋಗಿನೋ ಮನಃ ।
ಸಂಯಾಸ್ಯತ್ಯಾಶು ನಿರ್ವಾಣಂ ದ್ರವ್ಯಜ್ಞಾನಕ್ರಿಯಾಭ್ರಮಃ ॥ ೪೬

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಚತುರ್ದಶಾಧ್ಯಾಯಃ



---

ವನ್ನೂ ಚಿಂತಿಸದೆ ಇದ್ದುಬಿಡಬೇಕು (೪೩–೪೪). ಹೀಗೆ ಸಮಾಹಿತಚಿತ್ತನಾದ ಧೀರನು ನನ್ನನ್ನೇ ತನ್ನಲ್ಲಿಯೂ ತನ್ನನ್ನು ಸರ್ವಾತ್ಮನಾದ ನನ್ನಲ್ಲಿಯೂ, ಜ್ಯೋತಿಯು ಜ್ಯೋತಿಯಲ್ಲಿ ಕೂಡಿಹೋದಂತೆ, ಕಂಡುಕೊಳ್ಳುವನು (೪೫). ಈ ರೀತಿಯಲ್ಲಿ ತೀವ್ರವಾದ ಧ್ಯಾನದಿಂದ ಮನಸ್ಸನ್ನು ಸಮಾಧಿಸ್ಥಿತಿಗೆ ಒಯ್ಯುವ ಯೋಗಿಗೆ [1] 'ಇದು ದ್ರವ್ಯ, ಇದು ಜ್ಞಾನ, ಇದು ಕ್ರಿಯೆ' ಎಂಬ ಭ್ರಮೆ ಶಾಂತವಾಗುತ್ತದೆ" (೪೬).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಹದಿನಾಲ್ಕನೆಯ ಅಧ್ಯಾಯ



---

1. ದ್ರಷ್ಟೃ, ದೃಶ್ಯ, ದರ್ಶನ—ಎಂಬ ತ್ರಿಪುಟಿಯ ಭ್ರಮೆಯೆಂದು ತಾತ್ಪರ್ಯ.

# ಪಂಚದಶಾಧ್ಯಾಯಃ

ಶ್ರೀ ಭಗವಾನುವಾಚ—

ಜಿತೇಂದ್ರಿಯಸ್ಯ ಯುಕ್ತಸ್ಯ ಜಿತಶ್ವಾಸಸ್ಯ ಯೋಗಿನಃ ।
ಮಯಿ ಧಾರಯತಶ್ಚೇತ ಉಪತಿಷ್ಠಂತಿ ಸಿದ್ಧಯಃ ॥ ೧

ಉದ್ಧವ ಉವಾಚ—

ಕಯಾ ಧಾರಣಯಾ ಕಾಸ್ವಿತ್ ಕಥಂಸ್ವಿತ್ ಸಿದ್ಧಿರಚ್ಯುತ ।
ಕತಿ ವಾ ಸಿದ್ಧಯೋ ಬ್ರೂಹಿ ಯೋಗಿನಾಂ ಸಿದ್ಧಿದೋ ಭವಾನ್ ॥ ೨

ಶ್ರೀಭಗವಾನುವಾಚ—

ಸಿದ್ಧಯೋಽಷ್ಟಾದಶ ಪ್ರೋಕ್ತಾ ಧಾರಣಾಯೋಗಪಾರಗೈಃ ।
ತಾಸಾಮಷ್ಟೌ ಮತ್ಪ್ರಧಾನಾ ದಶೈವ ಗುಣಹೇತವಃ ॥ ೩

ಅಣಿಮಾ ಮಹಿಮಾ ಮೂರ್ತೇರ್ಲಘಿಮಾ ಪ್ರಾಪ್ತಿರಿಂದ್ರಿಯೈಃ ।
ಪ್ರಾಕಾಮ್ಯಂ ಶ್ರುತದೃಷ್ಟೇಷು ಶಕ್ತಿಪ್ರೇರಣಮೀಶಿತಾ ॥ ೪

## ಅಧ್ಯಾಯ ೧೫

ಅಣಿಮಾದಿ ಸಿದ್ಧಿಗಳ ಲಕ್ಷಣ. ಅವುಗಳಿಂದಾಗುವ ಲೌಕಿಕ ಪ್ರಯೋಜನ.
ಆದರೆ ವಿಷ್ಣುಪದಪ್ರಾಪ್ತಿಗೆ ಅವೆಲ್ಲವೂ ವಿಘ್ನಗಳು

ಭಗವಂತನು "ಉದ್ಧವ, ಜಿತೇಂದ್ರಿಯನೂ ಸ್ಥಿರಚಿತ್ತನೂ ಜಿತಶ್ವಾಸನೂ ನನ್ನಲ್ಲಿ ಮನಸ್ಸನ್ನು ನಿಲ್ಲಿಸಿದವನೂ ಆದ ಯೋಗಿಗೆ ನಾನಾಬಗೆಯ ಸಿದ್ಧಿಗಳು ಕಾಣಿಸಿಕೊಳ್ಳುತ್ತವೆ" ಎಂದನು (೧). ಆಗ ಉದ್ಧವನು "ಅಚ್ಯುತ, ಯಾವ ಧಾರಣೆಯಿಂದ ಯಾವ ಸಿದ್ಧಿಯು ಕಾಣಿಸಿಕೊಳ್ಳುತ್ತದೆ? ಯಾವ ಹೆಸರಿನ ಸಿದ್ಧಿ? ಎಷ್ಟು ಸಿದ್ಧಿಗಳಿವೆ? ಎಂಬುದನ್ನು ತಿಳಿಸು. ಯೋಗಿಗಳಿಗೆ ಸಿದ್ಧಿಯನ್ನು ಕರುಣಿಸ ತಕ್ಕವನು ನೀನೇ ಅಲ್ಲವೆ?" ಎಂದನು (೨). ಭಗವಂತನಿಂತೆಂದನು: "ಧಾರಣಾ ಯೋಗಪಾರಂಗತರು ಹದಿನೆಂಟು ಬಗೆಯ ಸಿದ್ಧಿಗಳನ್ನು ಹೇಳಿದ್ದಾರೆ. ಅವುಗಳಲ್ಲಿ ಎಂಟು ಸಿದ್ಧಿಗಳು ಪ್ರಧಾನವಾಗಿ[1] ನನ್ನಲ್ಲಿ ಇರತಕ್ಕವು. ಉಳಿದ ಹತ್ತು ಮಾತ್ರ ಸತ್ತ್ವಗುಣೋತ್ಕರ್ಷದಿಂದ ಅನ್ಯರಿಗೂ ಸಿದ್ಧಿಸತಕ್ಕವು (೩). ತನ್ನ ದೇಹಕ್ಕೆ

1. ನನಗೆ ಸರೂಪರಾದ ಯೋಗಿಗಳಲ್ಲಿ ಸ್ವಲ್ಪ ನ್ಯೂನತೆಯಿಂದ ಈ ಹತ್ತು ಸಿದ್ಧಿಗಳು ಇರುತ್ತವೆಯೆಂದು ಅಭಿಪ್ರಾಯ.

ಗುಣೇಷ್ವಸಂಗೋ ವಶಿತಾ ಯತ್ಕಾಮಸ್ತದವಸ್ಯತಿ ।
ಏತಾ ಮೇ ಸಿದ್ಧಯಃ ಸೌಮ್ಯ ಅಷ್ಟಾವೌತ್ಪತ್ತಿಕಾ ಮತಾಃ ॥ ೫

ಅನೂರ್ಮಿಮತ್ತ್ವಂ ದೇಹೇಽಸ್ಮಿನ್ ದೂರಶ್ರವಣದರ್ಶನಮ್ ।
ಮನೋಜವಃ ಕಾಮರೂಪಂ ಪರಕಾಯಪ್ರವೇಶನಮ್ ॥ ೬

ಸ್ವಚ್ಛಂದಮೃತ್ಯುರ್ದೇವಾನಾಂ ಸಹಕ್ರೀಡಾನುದರ್ಶನಮ್ ।
ಯಥಾಸಂಕಲ್ಪಸಂಸಿದ್ಧಿರಾಜ್ಞಾಪ್ರತಿಹತಾ ಗತಿಃ ॥ ೭

ತ್ರಿಕಾಲಜ್ಞತ್ವಮದ್ವಂದ್ವಂ ಪರಚಿತ್ತಾದ್ಯಭಿಜ್ಞತಾ ।
ಅಗ್ನ್ಯರ್ಕಾಂಬುವಿಷಾದೀನಾಂ ಪ್ರತಿಷ್ಟಂಭೋಽಪರಾಜಯಃ ॥ ೮

---

ಸಂಬಂಧಿಸಿದ ಅಣಿಮಾ, ಮಹಿಮಾ ಮತ್ತು ಲಘಿಮಾ—ಎಂಬಿವು ಮೂರು. ಎಲ್ಲ ಪ್ರಾಣಿಗಳ ಇಂದ್ರಿಯಗಳೊಡನೆ ಸೇರಿಕೊಳ್ಳಬಹುದಾದ ಪ್ರಾಪ್ತಿಯೆಂಬುದು ಇನ್ನೊಂದು ಸಿದ್ಧಿ. ಶ್ರುತವಾದ ಪರಲೋಕವಸ್ತುಗಳನ್ನೂ ದರ್ಶನಯೋಗ್ಯವಾದ ಇಹಲೋಕದ ವಸ್ತುಗಳನ್ನೂ ನೋಡಬಲ್ಲ ಪ್ರಾಕಾಶ್ಯವೆಂಬ ಸಿದ್ಧಿ, ಮಾಯೆಯನ್ನೂ ಅದರ ಅಂಶಗಳಾದ ಶಕ್ತಿಗಳನ್ನೂ ಪ್ರೇರಿಸಬಲ್ಲ ಈಶಿತಾ ಎಂಬ ಸಿದ್ಧಿ, ಶಬ್ದಾದಿ ವಿಷಯ ಗುಣಗಳಲ್ಲಿ ಅನಾಸಕ್ತಿಯೆಂಬ ವಶಿತಾಸಿದ್ಧಿ, ಯಾವಯಾವ ವಸ್ತುವನ್ನು ಬಯಸುತ್ತಾನೋ ಅದೆಲ್ಲವನ್ನೂ ಪಡೆದು ಸುಖಿಸಬಲ್ಲನೆಂಬ ಪ್ರಾಕಾಮ್ಯವೆಂಬಸಿದ್ಧಿ —ಈ ಎಂಟು[1] ಸಿದ್ಧಿಗಳು, ಉದ್ಧವ, ನನಗೆ ಸಹಜವಾಗಿರುವ ಶಾಶ್ವತಸಿದ್ಧಿಗಳು (೪–೫) .ಇನ್ನು ಸತ್ತ್ವಗುಣೋತ್ಕರ್ಷದಿಂದಾಗುವ ಸಿದ್ಧಿಗಳು ಯಾವುವೆಂದರೆ— ಹಸಿವು, ಬಾಯಾರಿಕೆ ಮುಂತಾದ ಷಡೂರ್ಮಿಗಳಿಲ್ಲದಿರುವುದು ದೇಹಕ್ಕೆ ಒದಗುವ ಒಂದು ಸಿದ್ಧಿ, ದೂರದಲ್ಲಾದ ಶಬ್ದದ ಶ್ರವಣ, ದೂರದಲ್ಲಿರುವ ವಸ್ತುವಿನ ದರ್ಶನ, ಮನೋವೇಗ, ಇಷ್ಟರೂಪಧಾರಣೆ, ಪರಕಾಯಪ್ರವೇಶ, ಸ್ವಚ್ಛಂದಮರಣ, ಅಪ್ಸರೆಯರೊಡನೆ ದೇವತಾಕ್ರೀಡೆಗಳ ಸಂದರ್ಶನ, ಸಂಕಲ್ಪಾನುಸಾರವಾಗಿ ಕಾರ್ಯ ಸಿದ್ಧಿ, ಸರ್ವತ್ರ ಅಪ್ರತಿಹತಗತಿಯುಳ್ಳ ಆಜ್ಞೆ—ಇವು ಹತ್ತು ಸಿದ್ಧಿಗಳು (೬–೭). ಇನ್ನೂ ಕ್ಷುದ್ರಸಿದ್ಧಿಗಳು ಐದು ಇವೆ—ತ್ರಿಕಾಲಜ್ಞಾನ, ಶೀತೋಷ್ಣಾದಿದ್ವಂದ್ವಗಳ

---

1. ಅಮರಕೋಶದಲ್ಲಿ 'ಅಣಿಮಾ ಮಹಿಮಾ ಚೈವ .......' ಎಂಬುದಾಗಿ ಅಷ್ಟಸಿದ್ಧಿಗಳನ್ನು ಹೇಳಿದೆ. ಅವುಗಳಲ್ಲಿ 'ಗರಿಮಾ' ಸಿದ್ಧಿಯನ್ನು ಇಲ್ಲಿ ಹೇಳಿಲ್ಲ. 'ಪ್ರಾಕಾಶ್ಯ' ಎಂಬ ಇನ್ನೊಂದು ಸಿದ್ಧಿಯನ್ನಿಲ್ಲಿ ಹೇಳಲಾಗಿದೆ.

ಏತಾಶ್ಚೋದ್ದೇಶತಃ ಪ್ರೋಕ್ತಾ ಯೋಗಧಾರಣಸಿದ್ಧಯಃ ।
ಯಯಾ ಧಾರಣಯಾ ಯಾ ಸ್ಯಾದ್ ಯಥಾ ವಾ ಸ್ಯಾನ್ನಿಬೋಧ ಮೇ ॥ ೯

ಭೂತಸೂಕ್ಷ್ಮಾತ್ಮನಿ ಮಯಿ ತನ್ಮಾತ್ರಂ ಧಾರಯೇನ್ಮನಃ ।
ಅಣಿಮಾನಮವಾಪ್ನೋತಿ ತನ್ಮಾತ್ರೋಪಾಸಕೋ ಮಮ ॥ ೧೦

ಮಹತ್ಯಾತ್ಮನ್ಮಯಿ ಪರೇ ಯಥಾಸಂಸ್ಥಂ ಮನೋ ದಧತ್ ।
ಮಹಿಮಾನಮವಾಪ್ನೋತಿ ಭೂತಾನಾಂ ಸ ಪೃಥಕ್ ಪೃಥಕ್ ॥ ೧೧

ಪರಮಾಣುಮಯೇ ಚಿತ್ತಂ ಭೂತಾನಾಂ ಮಯಿ ರಂಜಯನ್ ।
ಕಾಲಸೂಕ್ಷ್ಮಾರ್ಥತಾಂ ಯೋಗೀ ಲಘಿಮಾನಮವಾಪ್ನುಯಾತ್ ॥ ೧೨

ಧಾರಯನ್ ಮಯ್ಯಹಂತತ್ತ್ವೇ ಮನೋ ವೈಕಾರಿಕೇಽಖಿಲಮ್ ।
ಸರ್ವೇಂದ್ರಿಯಾಣಾಮಾತ್ಮತ್ವಂ ಪ್ರಾಪ್ತಿಂ ಪ್ರಾಪ್ನೋತಿ ಮನ್ಮನಾಃ ॥ ೧೩

---

ಜಯ, ಪರೇಂಗಿತಜ್ಞಾನ, ಅಗ್ನಿ ಸೂರ್ಯಜಲವಿಷಾದಿಗಳ ಸ್ತಂಭನ, ಇನ್ನೊಬ್ಬರಿಗೆ ಯಾವ ಬಗೆಯಲ್ಲಿಯೂ ಸೋಲದಿರುವುದು—ಇವು ಆ ಐದು ಸಿದ್ಧಿಗಳು (೮). ಯೋಗಧಾರಣೆಯಿಂದಾಗುವ ಈ ಸಿದ್ಧಿಗಳನ್ನು ನಾಮಪೂರ್ವಕವಾಗಿ ತಿಳಿಸಿದ್ದೇನೆ. ಯಾವ ಧಾರಣೆಯಿಂದ ಯಾವ ಸಿದ್ಧಿಯಾಗುತ್ತದೆಯೆಂಬುದನ್ನು ಈಗ ಹೇಳುತ್ತೇನೆ, ಕೇಳು : ಭೂತಸೂಕ್ಷ್ಮವೇ ಉಪಾಧಿಯಾಗಿರುವ ನನ್ನಲ್ಲಿ ಭೂತಸೂಕ್ಷ್ಮಾಕಾರದ ಮನಸ್ಸನ್ನು ಧಾರಣೆಮಾಡಿದರೆ, ಆ ತನ್ಮಾತ್ರೋಪಾಸಕನು ನನ್ನ ಅಣಿಮಾ ಸಿದ್ಧಿಯನ್ನು ಪಡೆಯುತ್ತಾನೆ (೯–೧೦) ಜ್ಞಾನಶಕ್ತಿಯೆಂಬ ಮಹತ್ತತ್ತ್ವವೇ ಉಪಾಧಿಯಾಗಿರುವ ನನ್ನಲ್ಲಿ ಮಹತ್ತತ್ತ್ವಾಕಾರದ ಮನಸ್ಸನ್ನು ಧಾರಣೆ ಮಾಡಿ, ಹಾಗೆಯೇ ಆಕಾಶಾದಿ ಭೂತೋಪಾಧಿಯಾದ ನನ್ನಲ್ಲಿಯೂ ಮನೋಧಾರಣೆ ಮಾಡುತ್ತಿದ್ದರೆ, ಆಯಾ ಭೂತಗಳ ಮಹತ್ತಾದ ರೂಪವನ್ನು ಪಡೆಯಬಲ್ಲವನಾಗುತ್ತಾನೆ (೧೧). ವಾಯ್ವಾದಿಗಳ ಪರಮಾಣುವೇ ಉಪಾಧಿಯಾದ ನನ್ನಲ್ಲಿ ಮನಸ್ಸನ್ನು ನಿಲ್ಲಿಸತಕ್ಕ ಯೋಗಿಯು ಕಾಲಪರಮಾಣುವೇ ಉಪಾಧಿಯಾದ ಲಘಿಮಾಸಿದ್ಧಿಯನ್ನು ಪಡೆಯುತ್ತಾನೆ. ವೈಕಾರಿಕವಾದ ಅಹಂಕಾರ ತತ್ತ್ವವನ್ನು ಉಪಾಧಿಯಾಗಿ ಉಳ್ಳ ನನ್ನಲ್ಲಿ ಮನಸ್ಸನ್ನು ಏಕಾಗ್ರವಾಗಿ ನಿಲ್ಲಿಸಿದವನು ನನ್ನಲ್ಲಿ ಮನೋಧಾರಣೆ ಮಾಡಿದ್ದರಿಂದ, ಸರ್ವಪ್ರಾಣಿಗಳ ಇಂದ್ರಿಯಗಳೊಡನೆ ಸೇರಿಕೊಳ್ಳತಕ್ಕ ಪ್ರಾಪ್ತಿಯೆಂಬ ಸಿದ್ಧಿಯನ್ನು ಪಡೆಯುತ್ತಾನೆ (೧೨–೧೩).

ಮಹತ್ಯಾತ್ಮನಿ ಯಃ ಸೂತ್ರೇ ಧಾರಯೇನ್ಮಯಿ ಮಾನಸಮ್ ।
ಪ್ರಾಕಾಮ್ಯಂ ಪಾರಮೇಷ್ಠ್ಯಂ ಮೇ ವಿಂದತೇಽವ್ಯಕ್ತಜನ್ಮನಃ ॥ ೧೪

ವಿಷ್ಣೌ ತ್ರ್ಯಧೀಶ್ವರೇ ಚಿತ್ತಂ ಧಾರಯೇತ್ ಕಾಲವಿಗ್ರಹೇ ।
ಸ ಈಶಿತ್ವಮವಾಪ್ನೋತಿ ಕ್ಷೇತ್ರ ಕ್ಷೇತ್ರಜ್ಞಚೋದನಾಮ್ ॥ ೧೫

ನಾರಾಯಣೇ ತುರೀಯಾಖ್ಯೇ ಭಗವಚ್ಛಬ್ದಶಬ್ದಿತೇ ।
ಮನೋ ಮಯ್ಯಾದಧದ್ ಯೋಗೀ ಮದ್ಧರ್ಮಾ ವಶಿತಾಮಿಯಾತ್ ॥ ೧೬

ನಿರ್ಗುಣೇ ಬ್ರಹ್ಮಣಿ ಮಯಿ ಧಾರಯನ್ ವಿಶದಂ ಮನಃ ।
ಪರಮಾನಂದಮಾಪ್ನೋತಿ ಯತ್ರ ಕಾಮೋಽವಸೀಯತೇ ॥ ೧೭

ಶ್ವೇತದ್ವೀಪಪತೌ ಚಿತ್ತಂ ಶುದ್ಧೇ ಧರ್ಮಮಯೇ ಮಯಿ ।
ಧಾರಯನ್ ಶ್ವೇತತಾಂ ಯಾತಿ ಷಡೂರ್ಮಿರಹಿತೋ ನರಃ ॥ ೧೮

---

ಕ್ರಿಯಾಶಕ್ತಿಪ್ರಧಾನವಾದ ಮಹತ್ತತ್ತ್ವವೇ ಸೂತ್ರವೆನಿಸುತ್ತದೆ. ಸೂತ್ರೋಪಾಧಿಯಾದ ನನ್ನಲ್ಲಿ ಮನೋಧಾರಣೆಮಾಡಿದಲ್ಲಿ, ಅವ್ಯಕ್ತಜನ್ಯವಾದ ಮಹತ್ತತ್ತ್ವವನ್ನು ಉಪಾಧಿಯಾಗಿ ಉಳ್ಳ ನನ್ನ ಸರ್ವೋತ್ಕೃಷ್ಟವಾದ ಪ್ರಾಕಾಶ್ಯವೆಂಬ ಸಿದ್ಧಿಯನ್ನು ಪಡೆಯಬಹುದು (೧೪). ತ್ರಿಗುಣಾತ್ಮಕ ಮಾಯೆಗೆ ನಿಯಂತೃವೂ ಕಾಲಸ್ವರೂಪನೂ ಆದ ವಿಷ್ಣುವಿನಲ್ಲಿ ಮನಸ್ಸನ್ನು ನಿಲ್ಲಿಸಿದವನು, ಕ್ಷೇತ್ರಕ್ಷೇತ್ರಜ್ಞರನ್ನು ನಿಯಮಿಸಬಲ್ಲ ಈಶಿತಾಸಿದ್ಧಿಯನ್ನು ಪಡೆಯಬಹುದು (೧೫). ತುರೀಯನೂ ಭಗವಚ್ಛಬ್ದವಾಚ್ಯನೂ ನಾರಾಯಣನೂ ಆದ ನನ್ನಲ್ಲಿ ಮನಸ್ಸನ್ನು ಧಾರಣೆಮಾಡುವ ನನ್ನ ಭಕ್ತನಾದ ಯೋಗಿಯು ವಶಿತಾ ಎಂಬ ಸಿದ್ಧಿಯನ್ನು ಗಳಿಸುತ್ತಾನೆ. ನಿರ್ಗುಣಬ್ರಹ್ಮನಾದ ನನ್ನಲ್ಲಿ ಪರಿಶುದ್ಧವಾದ ಮನಸ್ಸನ್ನು ನಿಲ್ಲಿಸಿದವನು ಸರ್ವಕಾಮಗಳೂ ಸಮಾಪ್ತವಾಗುವ ಪರಮಾನಂದಸಿದ್ಧಿಯನ್ನು ಪಡೆಯುತ್ತಾನೆ (೧೬–೧೭). ಶ್ವೇತದ್ವೀಪಾಧಿಪತಿಯೂ ಶುದ್ಧಸತ್ತ್ವಾತ್ಮಕನೂ ಧರ್ಮಮಯನೂ ಆದ ನನ್ನಲ್ಲಿ ಚಿತ್ತವನ್ನಿರಿಸಿದ ಮನುಷ್ಯನು ಷಡೂರ್ಮಿರಹಿತವಾದ ಸಿದ್ಧಿಯನ್ನು ಪಡೆದು ಪರಿಶುದ್ಧಿಯನ್ನೈದುತ್ತಾನೆ. ಆಕಾಶಾತ್ಮವಾದ ಯಾವ ಪ್ರಾಣ ಉಂಟೋ ಅದರ ಸಮಷ್ಟಿರೂಪನಾದ ನನ್ನಲ್ಲಿ ಮನಸ್ಸಿಟ್ಟು ನಾದವನ್ನು ಧ್ಯಾನಿಸುವ ಹಂಸರೂಪನಾದ ಜೀವನು ಆಕಾಶದಲ್ಲಿ ಅಭಿವ್ಯಕ್ತವಾದ

ಮಯ್ಯಾಕಾಶಾತ್ಮನಿ ಪ್ರಾಣೇ ಮನಸಾ ಘೋಷಮುದ್ವಹನ್ ।
ತತ್ರೋಪಲಬ್ಧಾ ಭೂತಾನಾಂ ಹಂಸೋ ವಾಚಃ ಶೃಣೋತ್ಯಸೌ ॥ ೧೯

ಚಕ್ಷುಸ್ತ್ವಷ್ಟರಿ ಸಂಯೋಜ್ಯ ತ್ವಷ್ಟಾರಮಪಿ ಚಕ್ಷುಷಿ ।
ಮಾಂ ತತ್ರ ಮನಸಾ ಧ್ಯಾಯನ್ ವಿಶ್ವಂ ಪಶ್ಯತಿ ಸೂಕ್ಷ್ಮದೃಕ್ ॥ ೨೦

ಮನೋ ಮಯಿ ಸುಸಂಯೋಜ್ಯ ದೇಹಂ ತದನು ವಾಯುನಾ ।
ಮದ್ಧಾರಣಾನುಭಾವೇನ ತತ್ರಾತ್ಮಾ ಯತ್ರ ವೈ ಮನಃ ॥ ೨೧

ಯದಾ ಮನ ಉಪಾದಾಯ ಯದ್ ಯದ್ ರೂಪಂ ಬುಭೂಷತಿ ।
ತತ್ತದ್ ಭವೇನ್ಮನೋರೂಪಂ ಮದ್ಯೋಗಬಲಮಾಶ್ರಯಃ ॥ ೨೨

ಪರಕಾಯಂ ವಿಶನ್ ಸಿದ್ಧ ಆತ್ಮಾನಂ ತತ್ರ ಭಾವಯೇತ್ ।
ಪಿಂಡಂ ಹಿತ್ವಾ ವಿಶೇತ್ಪ್ರಾಣೋ ವಾಯುಭೂತಃ ಷಡಂಘ್ರಿವತ್ ॥ ೨೩

ಪಾರ್ಷ್ಣ್ಯಾಪೀಡ್ಯ ಗುದಂ ಪ್ರಾಣಂ ಹೃದುರಃ ಕಂಠ ಮೂರ್ಧಸು ।
ಆರೋಪ್ಯ ಬ್ರಹ್ಮರಂಧ್ರೇಣ ಬ್ರಹ್ಮ ನೀತ್ವೋತ್ಸೃಜೇತ್ತನುಮ್ ॥ ೨೪

---

ಶಬ್ದಗಳನ್ನು ದೂರದಲ್ಲಿಯೇ ಕೇಳಬಲ್ಲವನಾಗುತ್ತಾನೆ (೧೮-೧೯). ಆದಿತ್ಯನಲ್ಲಿ ನೇತ್ರವನ್ನೂ ನೇತ್ರದಲ್ಲಿ ಆದಿತ್ಯನನ್ನೂ ಸಂಯೋಜಿಸಿ ಲೀನವಾದ ಉಭಯದಲ್ಲಿ ಮನಸ್ಸಿಟ್ಟು ಅದರಲ್ಲಿ ನಾನಿದ್ದೇನೆಂದು ಧ್ಯಾನಿಸುವ ಸೂಕ್ಷ್ಮದರ್ಶಿಯು ಸಮಸ್ತ ವಿಶ್ವವನ್ನೂ ನೋಡಬಲ್ಲವನಾಗುತ್ತಾನೆ (೨೦). ದೇಹವು ತನ್ನ ಪ್ರಾಣವಾಯುವಿನೊಡನೆ ನನ್ನಲ್ಲಿ ಲೀನವಾಗಿದೆಯೆಂದು ಭಾವಿಸಿ, ಮನಸ್ಸು ನನ್ನನ್ನು ಧ್ಯಾನಿಸುತ್ತಿದ್ದರೆ, ಅದರ ಮಹಿಮೆಯಿಂದ, ಮನಸ್ಸು ಎಲ್ಲಿಗೆ ಧಾವಿಸುವುದೋ ಅಲ್ಲಿಗೆ ದೇಹವೂ ಹೋಗಿ ಸೇರುವುದು (೨೧). ಯೋಗಿಯಾದವನು ತನ್ನ ಮನಸ್ಸಿನಿಂದ ಯಾವ ರೂಪವನ್ನು ತಳೆಯಬೇಕೆಂದು ಬಯಸುವನೋ ಆ ಮನೋಮಯರೂಪವನ್ನು ಆತನು ತಳೆಯಬಲ್ಲವನಾಗುತ್ತಾನೆ. ಆ ಯೋಗಿಯು ನನ್ನಲ್ಲಿ ಮನಸ್ಸನ್ನು ಧಾರಣೆಮಾಡಿದುದರ ಬಲವೇ ಅದಕ್ಕೆ ಕಾರಣ (೨೨). ಸಿದ್ಧಪುರುಷನು ಪರಕಾಯ ಪ್ರವೇಶವನ್ನು ಮಾಡಬೇಕೆಂದು ಇಚ್ಛಿಸಿದರೆ, ತಾನು ಆ ದೇಹದಲ್ಲಿದ್ದೇನೆಂದು ಚಿಂತಿಸಬೇಕು. ಆಗ ಆತನು ತನ್ನ ಮೊದಲಿನ ದೇಹವನ್ನು ಬಿಟ್ಟು ಪ್ರಾಣಪ್ರಧಾನಲಿಂಗಶರೀರೋಪಾಧಿಯಾಗಿ ಬಾಹ್ಯವಾಯುವಿನಲ್ಲಿ ಕೂಡಿ, ದುಂಬಿಯಂತೆ ಹಾರಿ, ಇನ್ನೊಂದು ಶರೀರಕ್ಕೆ ಹೋಗಿ ಸೇರಿಕೊಳ್ಳುತ್ತಾನೆ (೨೩). ಯೋಗಿಯು

*

ವಿಹರಿಷ್ಯನ್ ಸುರಾಕ್ರೀಡೇ ಮತ್ಸ್ಥಂ ಸತ್ತ್ವಂ ವಿಭಾವಯೇತ್ ।
ವಿಮಾನೇನೋಪತಿಷ್ಠಂತಿ ಸತ್ತ್ವವೃತ್ತೀಃ ಸುರಸ್ತ್ರಿಯಃ ॥ ೨೫

ಯಥಾ ಸಂಕಲ್ಪಯೇದ್ ಬುದ್ಧ್ಯಾ ಯದಾ ವಾ ಮತ್ಪರಃ ಪುಮಾನ್।
ಮಯಿ ಸತ್ಯೇ ಮನೋ ಯುಂಜನ್ ತಥಾ ತತ್ ಸಮುಪಾಶ್ನುತೇ ॥ ೨೬

ಯೋ ವೈ ಮದ್ಭಾವಮಾಪನ್ನ ಈಶಿತುರ್ವಶಿತುಃ ಪುಮಾನ್ ।
ಕುತಶ್ಚಿನ್ನ ವಿಹನ್ಯೇತ ತಸ್ಯ ಚಾಜ್ಞಾ ಯಥಾ ಮಮ ॥ ೨೭

ಮದ್ಭಕ್ತ್ಯಾ ಶುದ್ಧಸತ್ತ್ವಸ್ಯ ಯೋಗಿನೋ ಧಾರಣಾವಿದಃ ।
ತಸ್ಯ ತ್ರೈಕಾಲಿಕೀ ಬುದ್ಧಿರ್ಜನ್ಮಮೃತ್ಯೂಪಬೃಂಹಿತಾ ॥ ೨೮

---

ತನ್ನ (ಎಡಗಾಲಿನ) ಹಿಮ್ಮಡಿಯಿಂದ ಗುದಸ್ಥಾನವನ್ನು ಒತ್ತಿ ಹಿಡಿದು ಪ್ರಾಣೋಪಾಧಿಯಾದ ತನ್ನನ್ನು ಹೃದಯ, ಉರೋದೇಶ, ಕಂಠ, ಶಿರಸ್ಸುಗಳಿಗೆ ಕ್ರಮವಾಗಿ ಹತ್ತಿಸಿ ಬ್ರಹ್ಮರಂಧ್ರದ ಮೂಲಕ ತನಗೆ ಅಪೇಕ್ಷಿತವಾದ ಬ್ರಹ್ಮವನ್ನೋ ಅಥವಾ ಇನ್ನೊಂದು ಸ್ಥಾನವನ್ನೋ ಮನಸ್ಸಿನಿಂದ ತಲುಪಿ ಈ ಶರೀರವನ್ನು ಬಿಡಬಲ್ಲನು (ಇದು ಸ್ವಚ್ಛಂದಮರಣವೆಂಬ ಸಿದ್ಧಿ) (೨೪). ದೇವತೆಗಳ ಉದ್ಯಾನದಲ್ಲಿ ವಿಹರಿಸಬೇಕೆಂದು ಇಚ್ಛೆಯಾದರೆ, ಆ ಯೋಗಿಯು ನನ್ನ ಮೂರ್ತಿರೂಪವಾದ ಶುದ್ಧ ಸತ್ತ್ವವನ್ನು ಧ್ಯಾನಿಸಬೇಕು. ಆಗ ಸತ್ತ್ವಾಂಶಭೂತರಾದ ಅಪ್ಸರೆಯರು ವಿಮಾನದಲ್ಲಿ ಬಂದು ಉಪಸ್ಥಿತರಾಗುತ್ತಾರೆ (೨೫). ನನ್ನ ಭಕ್ತನಾದ ಮನುಷ್ಯನು ಸತ್ಯಸಂಕಲ್ಪನಾದ ನನ್ನಲ್ಲಿ ಮನಸ್ಸನ್ನು ಧಾರಣೆಮಾಡಿ, ಯಾವ ಕಾರ್ಯವಾಗಬೇಕೆಂದು ಬುದ್ಧಿಯಿಂದ ಸಂಕಲ್ಪಿಸುತ್ತಾನೋ ಆ ಕಾರ್ಯಸಿದ್ಧಿಯನ್ನು ಕೂಡಲೇ ಪಡೆಯುತ್ತಾನೆ. ಈಶಿತನೂ ವಶಯಿತನೂ ಆದ ನನ್ನ ಸ್ವಭಾವವನ್ನು ಪಡೆದ ಯಾವ ಯೋಗಿಯಿದ್ದಾನೋ ಆತನ ಆಜ್ಞೆಯು, ನನ್ನ ಆಜ್ಞೆಯಂತೆಯೇ ಅಪ್ರತಿಹತವಾಗಿ ನಡೆಯುತ್ತದೆ. ಅದಕ್ಕೆ ಪ್ರತಿರೋಧವೇ ಇಲ್ಲ (೨೬–೨೭). ನನ್ನಲ್ಲಿ ಭಕ್ತಿಯಿಂದ ಶುದ್ಧಚಿತ್ತನೂ ಧಾರಣಾವಿದನೂ ಆದ ಯೋಗಿಗೆ ತ್ರೈಕಾಲಿಕವಾದ ಜ್ಞಾನ ಉಂಟಾಗುವುದು. ಅವನಿಗೆ ತನ್ನ ಜನನ ಮರಣಗಳೂ ತಿಳಿದುಬರುತ್ತವೆ. ನನ್ನ ಧ್ಯಾನದಲ್ಲಿಯೇ ನೆಲೆಸಿದ ಚಿತ್ತವುಳ್ಳ ಮುನಿಯ ಯೋಗಮಯ ಶರೀರವು ಅಗ್ನಿಜಲಾದಿಗಳಿಂದ ಯಾವ ಪೀಡೆಯನ್ನೂ ಅನುಭವಿಸುವುದಿಲ್ಲ. ಜಲಚರಗಳನ್ನು

ಅಗ್ನ್ಯಾದಿಭಿರ್ನ ಹನ್ಯೇತ ಮುನೇರ್ಯೋಗಮಯಂ ವಪುಃ ।
ಮದ್ಯೋಗಶ್ರಾಂತಚಿತ್ತಸ್ಯ ಯಾದಸಾಮುದಕಂ ಯಥಾ ॥ ೨೯

ಮದ್ವಿಭೂತೀರಭಿಧ್ಯಾಯನ್ ಶ್ರೀವತ್ಸಾಸ್ತ್ರ ವಿಭೂಷಿತಾಃ ।
ಧ್ವಜಾತಪತ್ರವ್ಯಜನೈಃ ಸ ಭವೇದಪರಾಜಿತಃ ॥ ೩೦

ಉಪಾಸಕಸ್ಯ ಮಾಮೇವಂ ಯೋಗಧಾರಣಯಾ ಮುನೇಃ ।
ಸಿದ್ಧಯಃ ಪೂರ್ವಕಥಿತಾ ಉಪತಿಷ್ಠಂತ್ಯಶೇಷತಃ ॥ ೩೧

ಜಿತೇಂದ್ರಿಯಸ್ಯ ದಾಂತಸ್ಯ ಜಿತಶ್ವಾಸಾತ್ಮನೋ ಮುನೇಃ ।
ಮದ್ಧಾರಣಾಂ ಧಾರಯತಃ ಕಾ ಸಾ ಸಿದ್ಧಿಃ ಸುದುರ್ಲಭಾ ॥ ೩೨

ಅಂತರಾಯಾನ್ ವದಂತ್ಯೇತಾ ಯುಂಜತೋ ಯೋಗಮುತ್ತಮಮ್ ।
ಮಯಾ ಸಂಪದ್ಯಮಾನಸ್ಯ ಕಾಲಕ್ಷಪಣಹೇತವಃ ॥ ೩೩

ಜನ್ಮೌಷಧಿ ತಪೋಮಂತ್ರೈರ್ಯಾವತೀರಿಹ ಸಿದ್ಧಯಃ ।
ಯೋಗೇನಾಪ್ನೋತಿ ತಾಃ ಸರ್ವಾ ನಾನ್ಯೈರ್ಯೋಗಗತಿಂ ವ್ರಜೇತ್ ॥ ೩೪

---

ಜಲವು ಹೇಗೆ ಪೀಡಿಸುವುದಿಲ್ಲವೋ ಹಾಗೆ ಅಗ್ನಿಜಲಾದಿಗಳು ಅವನನ್ನು ಪೀಡಿಸುವುದಿಲ್ಲ (೨೮–೨೯). ಶ್ರೀವತ್ಸವೆಂಬ ಚಿಹ್ನೆ, ಸುದರ್ಶನಾದ್ಯಸ್ತ್ರಗಳು—ಇವುಗಳಿಂದ ಭೂಷಿತವಾಗಿಯೂ ಧ್ವಜ, ಛತ್ರ, ಚಾಮರಗಳಿಂದ ಸಹಿತವಾಗಿಯೂ ಇರುವ ನನ್ನ ಅವತಾರಮೂರ್ತಿಗಳನ್ನು ಧ್ಯಾನಿಸತಕ್ಕ ಯೋಗಿಯು ಯಾರಿಂದಲೂ ಪರಾಜಿತನಾಗುವುದಿಲ್ಲ (೩೦). ಈ ಪ್ರಕಾರವಾಗಿ ವಿಭಿನ್ನ ಯೋಗಧಾರಣೆಯಿಂದ ನನ್ನನ್ನು ಉಪಾಸನೆಮಾಡುವ ಯೋಗಿಗೆ ಇದುವರೆಗೆ ಹೇಳಿದ ಸಿದ್ಧಿಗಳು ಆವಿರ್ಭವಿಸುತ್ತವೆ. ಜಿತೇಂದ್ರಿಯನೂ ದಾಂತನೂ ಪ್ರಾಣಾಯಾಮಸಿದ್ಧನೂ ನನ್ನಲ್ಲಿ ಸದಾ ಮನೋಧಾರಣೆಯುಳ್ಳವನೂ ಆದ ಮುನಿಗೆ ದುರ್ಲಭವಾದ ಸಿದ್ಧಿಯು [1]ಯಾವುದಿದೆ ? (೩೧–೩೨). ಶ್ರೇಷ್ಠವಾದ ಯೋಗದಲ್ಲಿ ಸಮಾಹಿತನಾಗಿ ನನ್ನ ಸ್ವರೂಪವನ್ನೇ ಪಡೆಯಲಿರುವ ಯೋಗಿಗೆ ಈ ಸಿದ್ಧಿಗಳೆಲ್ಲವೂ ವಿಘ್ನಗಳೆಂದು ಬಲ್ಲವರು ಹೇಳುತ್ತಾರೆ. ಇವು ವ್ಯರ್ಥವಾಗಿ ಕಾಲಯಾಪನೆಗೆ ಕಾರಣವಾಗುತ್ತವೆ (೩೩). ಜನ್ಮ, ಓಷಧಿ, ತಪಸ್ಸು, ಮಂತ್ರಗಳಿಂದ ಯಾವ ಯಾವ ಸಿದ್ಧಿಗಳನ್ನು

---

1. ಕ್ಷುದ್ರಸಿದ್ಧಿಗಾಗಿ ವಿಭಿನ್ನಧಾರಣೆ ಬೇಕಾಗಿಲ್ಲ, ನನ್ನನ್ನು ದೃಢವಾಗಿ ನಂಬಿದ ಯೋಗಿಗೆ ಎಲ್ಲ ಸಿದ್ಧಿಗಳೂ ಒಟ್ಟಿಗೆ ದೊರೆಯುತ್ತವೆ—ಎಂದು ಅಭಿಪ್ರಾಯ.

ಸರ್ವಾಸಾಮಪಿ ಸಿದ್ಧೀನಾಂ ಹೇತುಃ ಪತಿರಹಂ ಪ್ರಭುಃ ।
ಅಹಂ ಯೋಗಸ್ಯ ಸಾಂಖ್ಯಸ್ಯ ಧರ್ಮಸ್ಯ ಬ್ರಹ್ಮವಾದಿನಾಮ್ ॥ ೩೫

ಅಹಮಾತ್ಮಾಽಽಂತರೋ ಬಾಹ್ಯೋಽನಾವೃತಃ ಸರ್ವದೇಹಿನಾಮ್ ।
ಯಥಾ ಭೂತಾನಿ ಭೂತೇಷು ಬಹಿರಂತಃ ಸ್ವಯಂ ತಥಾ ॥ ೩೬

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಪಂಚದಶೋಽಧ್ಯಾಯಃ



---

ಪಡೆಯಬಹುದೋ ಅವನ್ನು ಯೋಗದಿಂದ ಸಾಧಿಸಬಹುದು. ಆದರೆ ಯೋಗಧಾರಣೆಯಿಂದ ಸಾಧಿಸಬಹುದಾದ ಸಾಲೋಕ್ಯಾದಿ ಸಿದ್ಧಿಗಳನ್ನು, [1]ಜನ್ಮಾದಿಗಳಿಂದ ಪಡೆಯಲಾಗುವುದಿಲ್ಲ (೩೪). ಈ ಸಮಸ್ತಸಿದ್ಧಿಗಳಿಗೂ ನಾನು ಕಾರಣನೂ ರಕ್ಷಕನೂ ಆಗಿ ಪ್ರಭುವಾಗಿದ್ದೇನೆ. ಯೋಗವೆಂಬ ಕೈವಲ್ಯಕ್ಕೂ—ಸಾಂಖ್ಯವೆಂಬ ಜ್ಞಾನಕ್ಕೂ— ಧರ್ಮಕ್ಕೂ—ಬ್ರಹ್ಮವಾದಿಗಳಿಗೂ ನಾನೇ ಪ್ರಭು (೩೫). ನಾನು ಸಮಸ್ತದೇಹಿಗಳಿಗೂ ಆತ್ಮನಾಗಿದ್ದೇನೆ; ಅಂತರ್ಯಾಮಿಯಾಗಿದ್ದೇನೆ; ಬಾಹ್ಯದಲ್ಲಿಯೂ ಇದ್ದು ವ್ಯಾಪಕನಾಗಿದ್ದೇನೆ. ಏಕೆಂದರೆ, ನಾನು ಅಪರಿಚ್ಛಿನ್ನನು. ಆಕಾಶಾದಿಪಂಚಭೂತಗಳು ಸರ್ವವಿಧ ಪ್ರಾಣಿಗಳನ್ನೂ ಒಳಗೆ ಹೊರಗೆ ಹೇಗೆ ವ್ಯಾಪಿಸಿಕೊಂಡಿವೆಯೋ ಹಾಗೆ ನಾನು ಸಮಸ್ತವನ್ನೂ ವ್ಯಾಪಿಸಿಕೊಂಡಿದ್ದೇನೆ" ಎಂದನು (೩೬).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಹದಿನೈದನೆಯ ಅಧ್ಯಾಯ



---

1. ಪಕ್ಷಿಗಳಿಗೆ ಆಕಾಶಗತಿ, ಜಲಚರಗಳಿಗೆ ಉದಕಸ್ತಂಭ—ಮುಂತಾದವು ಜನ್ಮದಿಂದಲೇ ಸಿದ್ಧಿಸಿರುತ್ತವೆ. ಇವೆಲ್ಲವೂ ಕ್ಷುದ್ರವಾದವು. ಯೋಗಿಯು ಇದಕ್ಕಾಗಿ ಪ್ರಯತ್ನಿಸಬಾರದು—ಎಂದು ತಾತ್ಪರ್ಯ.

# ಷೋಡಶಾಧ್ಯಾಯಃ

ಉದ್ಧವ ಉವಾಚ—

ತ್ವಂ ಬ್ರಹ್ಮ ಪರಮಂ ಸಾಕ್ಷಾದನಾದ್ಯಂತಮಪಾವೃತಮ್ ।
ಸರ್ವೇಷಾಮಪಿ ಭಾವಾನಾಂ ತ್ರಾಣಸ್ಥಿತ್ಯಪ್ಯಯೋದ್ಭವಃ ॥ ೧

ಉಚ್ಚಾವಚೇಷು ಭೂತೇಷು ದುರ್ಜ್ಞೇಯಮಕೃತಾತ್ಮಭಿಃ ।
ಉಪಾಸತೇ ತ್ವಾಂ ಭಗವನ್ ಯಾಥಾತಥ್ಯೇನ ಬ್ರಾಹ್ಮಣಾಃ ॥ ೨

ಯೇಷು ಯೇಷು ಚ ಭಾವೇಷು ಭಕ್ತ್ಯಾ ತ್ವಾಂ ಪರಮರ್ಷಯಃ ।
ಉಪಾಸೀನಾಃ ಪ್ರಪದ್ಯಂತೇ ಸಂಸಿದ್ಧಿಂ ತದ್ ವದಸ್ವ ಮೇ ॥ ೩

ಗೂಢಶ್ಚರಸಿ ಭೂತಾತ್ಮಾ ಭೂತಾನಾಂ ಭೂತಭಾವನ ।
ನ ತ್ವಾಂ ಪಶ್ಯಂತಿ ಭೂತಾನಿ ಪಶ್ಯಂತಂ ಮೋಹಿತಾನಿ ತೇ ॥ ೪

## ಅಧ್ಯಾಯ ೧೬

### ಸರ್ವಪದಾರ್ಥಗಳಲ್ಲಿಯೂ ಇರುವ ಭಗವಂತನ ವಿಭೂತಿಗಳು. ಆತನ ಜ್ಞಾನವೀರ್ಯಾದಿ ಮಹಾಮಹಿಮೆಗಳು

ಆಗ ಉದ್ಧವನು “ಭಗವಂತ, ನೀನು ಆದ್ಯಂತವಿಲ್ಲದ್ದೂ ಸ್ವತಂತ್ರವೂ[1] ಆದ ಸಾಕ್ಷಾತ್ ಪರಬ್ರಹ್ಮವಾಗಿದ್ದೀಯೆ. ಸಕಲ ಭಾವವಸ್ತುಗಳ ರಕ್ಷಣೆ, ಸ್ಥಿತಿ, ಲಯ, ಉದ್ಭವಗಳಿಗೆ ಮೂಲಕಾರಣನಾಗಿದ್ದೀಯೆ (೧) ಉಚ್ಚಾವಚಗಳಾದ ಸಕಲ ಭೂತಗಳಲ್ಲಿ ನೀನು ನೆಲೆಸಿದ್ದರೂ ಅಸಂಸ್ಕೃತ ಬುದ್ಧಿಯ ಜನರಿಗೆ ಅಜ್ಞೇಯ ನಾಗಿದ್ದೀಯೆ. ಆದರೆ ವೇದಾರ್ಥವನ್ನು ಬಲ್ಲವರು ನಿನ್ನನ್ನು ಅವುಗಳಲ್ಲಿ ಯಥಾರ್ಥವಾಗಿ ಉಪಾಸನೆ ಮಾಡುತ್ತಾರೆ. ಆ ಪರಮರ್ಷಿಗಳು ಯಾವ ಯಾವ ಭಾವವಸ್ತುಗಳಲ್ಲಿ ನಿನ್ನನ್ನು ಭಕ್ತಿಯಿಂದ ಸೇವಿಸಿ ಸಿದ್ಧಿಯನ್ನು ಪಡೆಯುತ್ತಾರೆ? ಅದನ್ನು ನನಗೆ ಹೇಳು (೨–೩). ಹೇ ಭೂತಭಾವನ, ಭೂತಾತ್ಮನಾದ ನೀನು ಸಕಲಭೂತಗಳಲ್ಲಿ ಅವ್ಯಕ್ತನಾಗಿ ಸಂಚರಿಸುತ್ತಿದ್ದೀಯೆ. ಎಲ್ಲ ಪ್ರಾಣಿಗಳನ್ನು

1. ಮೂಲದಲ್ಲಿ ಅಪಾವೃತಂ ಎಂಬ ಶಬ್ದವಿದೆ. ಇದಕ್ಕೆ, ನಿರಾವರಣ, ಸ್ವತಂತ್ರ, ಅಪರಿಚ್ಛಿನ್ನ—ಎಂದು ಅರ್ಥವಾಗುತ್ತದೆ.

ಯಾಃ ಕಾಶ್ಚ ಭೂಮೌ ದಿವಿ ವೈ ರಸಾಯಾಂ
ವಿಭೂತಯೋ ದಿಕ್ಷು ಮಹಾವಿಭೂತೇ ।
ತಾ ಮಹ್ಯಮಾಖ್ಯಾಹ್ಯನುಭಾವಿತಾಸ್ತೇ
ನಮಾಮಿ ತೇ ತೀರ್ಥಪದಾಂಘ್ರಿಪದ್ಮಮ್ ॥ ೫

ಶ್ರೀಭಗವಾನುವಾಚ—

ಏವಮೇತದಹಂ ಪೃಷ್ಟಃ ಪ್ರಶ್ನಂ ಪ್ರಶ್ನವಿದಾಂ ವರ ।
ಯುಯುತ್ಸುನಾ ವಿನಶನೇ ಸಪತ್ನೈರರ್ಜುನೇನ ವೈ ॥ ೬

ಜ್ಞಾತ್ವಾ ಜ್ಞಾತಿವಧಂ ಗರ್ಹ್ಯಮಧರ್ಮಂ ರಾಜ್ಯಹೇತುಕಮ್ ।
ತತೋ ನಿವೃತ್ತೋ ಹಂತಾಹಂ ಹತೋಽಯಮಿತಿ ಲೌಕಿಕಃ ॥ ೭

ಸ ತದಾ ಪುರುಷವ್ಯಾಘ್ರೋ ಯುಕ್ತ್ಯಾ ಮೇ ಪ್ರತಿಬೋಧಿತಃ ।
ಅಭ್ಯಭಾಷತ ಮಾಮೇವಂ ಯಥಾ ತ್ವಂ ರಣಮೂರ್ಧನಿ ॥ ೮

---

ನೀನು ನೋಡುತ್ತೀಯೆ. ಆದರೆ ನಿನ್ನ ಮಾಯೆಯಿಂದ ಮೋಹಗೊಂಡ ಆ ಪ್ರಾಣಿಗಳು ಮಾತ್ರ ನಿನ್ನನ್ನು ನೋಡಲಾರದೆ ಹೋಗಿವೆ! (೪). ಓ ಮಹಾ ವಿಭೂತಿಯೆ, ಭೂಮಿಯಲ್ಲಿ, ಸ್ವರ್ಗದಲ್ಲಿ, ಪಾತಾಳದಲ್ಲಿ ನಿನ್ನ ಶಕ್ತಿವಿಶೇಷದಿಂದ ಅನುಭಾವಿತವಾದ ಯಾವ ವಿಭೂತಿಗಳುಂಟೋ ಅವನ್ನು ನನಗೆ ತಿಳಿಸು. ಹೇ ಪೂಜ್ಯಪಾದ, ನಿನ್ನ ಅಡಿದಾವರೆಗೆ ತಲೆಬಾಗಿದ್ದೇನೆ" ಎಂದನು (೫). ಭಗವಂತ ನಿಂತೆಂದನು : "ಉದ್ಧವ, ಯಾವ ಪ್ರಶ್ನೆಯನ್ನು ಹಾಕಬೇಕೆಂಬುದು ನಿನಗೆ ಚೆನ್ನಾಗಿ ಗೊತ್ತಿದೆ! ಒಳ್ಳೆಯದು. ಹಿಂದೆ ಕುರುಕ್ಷೇತ್ರದಲ್ಲಿ[1] ವೈರಿಗಳೊಡನೆ ಯುದ್ಧಕ್ಕೆ ನಿಂತಿದ್ದ ಅರ್ಜುನನು ಇದೇ ರೀತಿಯಲ್ಲಿ ನನಗೆ ಪ್ರಶ್ನೆಯನ್ನು ಹಾಕಿದ್ದನು! (೬). ಜ್ಞಾತಿವಧೆಯು ರಾಜ್ಯ ನಿಮಿತ್ತವಾದ್ದರಿಂದ ನಿಂದ್ಯವೂ ಅಧರ್ಮವೂ ಆಗಿದೆಯೆಂದು ತಿಳಿದು, 'ನಾನು ಕೊಲ್ಲುತ್ತೇನೆ, ಇವನು ಕೊಲ್ಲಿಸಿ ಕೊಳ್ಳುತ್ತಾನೆ' ಎಂಬ ಪ್ರಾಕೃತಬುದ್ಧಿಯುಳ್ಳವನಾಗಿ ಪಾರ್ಥನು ಯುದ್ಧ ಮಾಡಲು ಹಿಂಜರಿದನು (೭). ಆದರೆ ಆತನು ಪುರುಷಶ್ರೇಷ್ಠನೇ ಹೌದು. ಏಕೆಂದರೆ, ಆಮೇಲೆ ನಾನು ಯುಕ್ತಿಪೂರ್ವಕವಾಗಿ ಬುದ್ಧಿ ಹೇಳಲಾಗಿ, ಎಲ್ಲವನ್ನೂ

---

1. ಮೂಲದಲ್ಲಿ ವಿನಶನ ಎಂದಿದೆ. ಸರ್ವವಿನಾಶವು ಈ ಸ್ಥಳದಲ್ಲಿ ನಡೆದದ್ದರಿಂದ ಕುರುಕ್ಷೇತ್ರಕ್ಕೆ ವಿನಶನವೆಂದು ಹೆಸರು ಬಂದಿತು.

ಅಹಮಾತ್ಮೋದ್ಧವಾಮೀಷಾಂ ಭೂತಾನಾಂ ಸುಹೃದೀಶ್ವರಃ ।
ಅಹಂ ಸರ್ವಾಣಿ ಭೂತಾನಿ ತೇಷಾಂ ಸ್ಥಿತ್ಯುದ್ಭವಾಪ್ಯಯಃ ॥ ೯

ಅಹಂ ಗತಿರ್ಗತಿಮತಾಂ ಕಾಲಃ ಕಲಯತಾಮಹಮ್ ।
ಗುಣಾನಾಂ ಚಾಪ್ಯಹಂ ಸಾಮ್ಯಂ ಗುಣಿನ್ಯೌತ್ಪತ್ತಿಕೋ ಗುಣಃ ॥ ೧೦

ಗುಣಿನಾಮಪ್ಯಹಂ ಸೂತ್ರಂ ಮಹತಾಂ ಚ ಮಹಾನಹಮ್ ।
ಸೂಕ್ಷ್ಮಾಣಾಮಪ್ಯಹಂ ಜೀವೋ ದುರ್ಜಯಾನಾಮಹಂ ಮನಃ ॥ ೧೧

ಹಿರಣ್ಯಗರ್ಭೋ ವೇದಾನಾಂ ಮಂತ್ರಾಣಾಂ ಪ್ರಣವಸ್ತ್ರಿವೃತ್ ।
ಅಕ್ಷರಾಣಾಮಕಾರೋಽಸ್ಮಿ ಪದಾನಿ ಚ್ಛಂದಸಾಮಹಮ್ ॥ ೧೨

ಇಂದ್ರೋಽಹಂ ಸರ್ವದೇವಾನಾಂ ವಸೂನಾಮಸ್ಮಿ ಹವ್ಯವಾಟ್ ।
ಆದಿತ್ಯಾನಾಮಹಂ ವಿಷ್ಣೂ ರುದ್ರಾಣಾಂ ನೀಲಲೋಹಿತಃ ॥ ೧೩

---

ಒಪ್ಪಿಕೊಂಡು, ಈಗ ನೀನು ಕೇಳಿದಂತೆ, ಸಂಗ್ರಾಮ ಭೂಮಿಯಲ್ಲಿ ನನ್ನನ್ನು ಕೇಳಿದ್ದಾನೆ (೮). ಉದ್ಧವ, ನಾನು ಈ ಸಕಲ ಪ್ರಾಣಿಗಳ [1]ಆತ್ಮನಾಗಿದ್ದೇನೆ, ಮಿತ್ರನಾಗಿದ್ದೇನೆ, ನಿಯಾಮಕನಾಗಿದ್ದೇನೆ ಸಕಲ ಪ್ರಾಣಿಗಳೂ ನಾನೇ ಎಂದು ತಿಳಿದುಕೊ. ಇವುಗಳ ಸ್ಥಿತಿ ಉತ್ಪತ್ತಿ ಲಯುಗಳಿಗೂ ನಾನೇ ಕಾರಣ (೯). ಗಂತೃಗಳಲ್ಲಿ ಗತಿ ನಾನು. ವಶೀಕರಿಸತಕ್ಕವರಲ್ಲಿ ಕಾಲನೇ ನಾನು. ಗುಣಗಳಲ್ಲಿ ಗುಣಸಾಮ್ಯವಾದ ಅವ್ಯಕ್ತವೂ ಗುಣಿಯಲ್ಲಿ ಸಹಜವಾದ ಮೂಲಗುಣವೂ ನಾನೇ ಆಗಿದ್ದೇನೆ. ಸತ್ತ್ವಾದಿಗುಣ ನಿರ್ಮಿತವಸ್ತುಗಳಲ್ಲಿ ಪ್ರಥಮಕಾರ್ಯವಾದ ಸೂತ್ರ ನಾನು. ಮಹತ್ತುಗಳಲ್ಲಿ ಮಹತ್ತತ್ತ್ವವೇ ನಾನು. ಸೂಕ್ಷ್ಮವಸ್ತುಗಳಲ್ಲಿ ನಾನು ಜೀವವೂ ದುರ್ಜಯ ಪದಾರ್ಥಗಳಲ್ಲಿ ಮನಸ್ಸೂ ಆಗಿದ್ದೇನೆ! (೧೦–೧೧). ವೇದಗಳ ಅಧ್ಯಾಪಕರಲ್ಲಿ ಹಿರಣ್ಯಗರ್ಭನೂ ಮಂತ್ರಗಳಲ್ಲಿ ತ್ರಿವೃತ್ತಾದ ಓಂಕಾರವೂ ಅಕ್ಷರಗಳ ನಡುವೆ ಅಕಾರವೂ ಛಂದಸ್ಸುಗಳಲ್ಲಿ ತ್ರಿಪದಾ ಗಾಯತ್ರಿಯೂ ಆಗಿದ್ದೇನೆ. ಸಮಸ್ತ ದೇವತೆಗಳಲ್ಲಿ ಇಂದ್ರನೂ ವಸುಗಳಲ್ಲಿ ಹವ್ಯವಾಹನೂ ದ್ವಾದಶಾದಿತ್ಯರಲ್ಲಿ ವಿಷ್ಣುವೂ ಏಕಾದಶರುದ್ರರಲ್ಲಿ ನೀಲಲೋಹಿತನೂ ಆಗಿದ್ದೇನೆ (೧೨–೧೩).

---

1. ಇಲ್ಲಿ ಹೇಳಿರುವ ವಿಭೂತಿಗಳೆಲ್ಲವೂ ಭಕ್ತರಿಗೆ ಉಪಾಸನಾರ್ಥವಾಗಿ. ಸರ್ವವೂ ನಾನೇ, ನನ್ನನ್ನುಳಿದು ಇನ್ನೊಂದು ವಸ್ತುವೇ ಇಲ್ಲವೆಂದು ತಾತ್ಪರ್ಯ.

ಬ್ರಹ್ಮರ್ಷೀಣಾಂ ಭೃಗುರಹಂ ರಾಜರ್ಷೀಣಾಮಹಂ ಮನುಃ ।
ದೇವರ್ಷೀಣಾಂ ನಾರದೋಽಹಂ ಹವಿರ್ಧಾನ್ಯಸ್ಮಿ ಧೇನುಷು ॥ ೧೪

ಸಿದ್ಧೇಶ್ವರಾಣಾಂ ಕಪಿಲಃ ಸುಪರ್ಣೋಽಹಂ ಪತತ್ರಿಣಾಮ್ ।
ಪ್ರಜಾಪತೀನಾಂ ದಕ್ಷೋಽಹಂ ಪಿತೄಣಾಮಹಮರ್ಯಮಾ ॥ ೧೫

ಮಾಂ ವಿದ್ಧ್ಯುದ್ಧವ ದೈತ್ಯಾನಾಂ ಪ್ರಹ್ಲಾದಮಸುರೇಶ್ವರಮ್ ।
ಸೋಮಂ ನಕ್ಷತ್ರೌಷಧೀನಾಂ ಧನೇಶಂ ಯಕ್ಷರಕ್ಷಸಾಮ್ ॥ ೧೬

ಐರಾವತಂ ಗಜೇಂದ್ರಾಣಾಂ ಯಾದಸಾಂ ವರುಣಂ ಪ್ರಭುಮ್ ।
ತಪತಾಂ ದ್ಯುಮತಾಂ ಸೂರ್ಯಂ ಮನುಷ್ಯಾಣಾಂ ಚ ಭೂಪತಿಮ್ ॥ ೧೭

ಉಚ್ಚೈಃಶ್ರವಾಸ್ತುರಂಗಾಣಾಂ ಧಾತೂನಾಮಸ್ಮಿ ಕಾಂಚನಮ್ ।
ಯಮಃ ಸಂಯಮತಾಂ ಚಾಹಂ ಸರ್ಪಾಣಾಮಸ್ಮಿ ವಾಸುಕಿಃ ॥ ೧೮

ನಾಗೇಂದ್ರಾಣಾಮನಂತೋಽಹಂ ಮೃಗೇಂದ್ರಃ ಶೃಂಗಿದಂಷ್ಟ್ರಿಣಾಮ್ ।
ಆಶ್ರಮಾಣಾಮಹಂ ತುರ್ಯೋ ವರ್ಣಾನಾಂ ಪ್ರಥಮೋಽನಘ ॥ ೧೯

---

ಬ್ರಹ್ಮರ್ಷಿಗಳ ನಡುವೆ ಭೃಗುವೂ ರಾಜರ್ಷಿಗಳ ನಡುವೆ ಮನುವೂ ದೇವರ್ಷಿಗಳ ನಡುವೆ ನಾರದನೂ ಧೇನುಗಳ ನಡುವೆ ಕಾಮಧೇನುವೂ ನಾನು. ಸಿದ್ಧೇಶ್ವರಲ್ಲಿ ಕಪಿಲನೂ ಪಕ್ಷಿಗಳಲ್ಲಿ ಗರುಡನೂ ಪ್ರಜಾಪತಿಗಳಲ್ಲಿ ದಕ್ಷನೂ ಪಿತೃಗಳಲ್ಲಿ ಅರ್ಯಮನೂ ನಾನು (೧೪–೧೫). ಉದ್ಧವ, ದೈತ್ಯರಲ್ಲಿ ನಾನು ದೈತ್ಯೇಶ್ವರನಾದ ಪ್ರಹ್ಲಾದನೆಂದು ತಿಳಿ. ನಕ್ಷತ್ರಗಳಿಗೆ ಮತ್ತು ಓಷಧಿಗಳಿಗೆ ಪ್ರಭುವಾದ ಸೋಮನು ನಾನೆಂದೂ ಯಕ್ಷರಾಕ್ಷಸರ ನಡುವೆ ಕುಬೇರನು ನಾನೆಂದೂ ತಿಳಿ. ಉತ್ತಮ ಗಜಗಳಲ್ಲಿ ಐರಾವತವೇ ನಾನೆಂದೂ ಜಲಚರಗಳಿಗೆ ಪತಿಯಾದ ವರುಣನೆಂದೂ ಪ್ರಕಾಶಿಸುವ ಜ್ಯೋತಿಗಳಲ್ಲಿ ಸೂರ್ಯನೆಂದೂ ಮಾನವರಲ್ಲಿ ಭೂಪಾಲನೆಂದೂ ನನ್ನನ್ನು ತಿಳಿ (೧೬–೧೭). ಕುದುರೆಗಳಲ್ಲಿ ಉಚ್ಚೈಃಶ್ರವವೂ ಲೋಹಗಳಲ್ಲಿ ಚಿನ್ನವೂ ಆಗಿದ್ದೇನೆ. ದಂಡಿಸತಕ್ಕವರಲ್ಲಿ ನಾನು ಯಮ. ಸರ್ಪಗಳಲ್ಲಿ ವಾಸುಕಿ. ನಾಗಗಳಲ್ಲಿ ನಾನು ಅನಂತ. ಶೃಂಗಿಗಳು ಮತ್ತು ದಂಷ್ಟ್ರಿಗಳ ಮಧ್ಯದಲ್ಲಿ ನಾನು ಸಿಂಹ. ಆಶ್ರಮಗಳಲ್ಲಿ ನಾಲ್ಕನೆಯದಾದ ಸಂನ್ಯಾಸವೂ ವರ್ಣಗಳಲ್ಲಿ ಪ್ರಥಮನಾದ ಬ್ರಾಹ್ಮಣನೂ ಆಗಿದ್ದೇನೆ (೧೮–೧೯).

ತೀರ್ಥಾನಾಂ ಸ್ರೋತಸಾಂ ಗಂಗಾ ಸಮುದ್ರಃ ಸರಸಾಮಹಮ್ ।
ಆಯುಧಾನಾಂ ಧನುರಹಂ ತ್ರಿಪುರಘ್ನೋ ಧನುಷ್ಮತಾಮ್ ॥ ೨೦

ಧಿಷ್ಣ್ಯಾನಾಮಸ್ಮ್ಯಹಂ ಮೇರುರ್ಗಹನಾನಾಂ ಹಿಮಾಲಯಃ ।
ವನಸ್ಪತೀನಾಮಶ್ವತ್ಥ ಓಷಧೀನಾಮಹಂ ಯವಃ ॥ ೨೧

ಪುರೋಧಸಾಂ ವಸಿಷ್ಠೋಽಹಂ ಬ್ರಹ್ಮಿಷ್ಠಾನಾಂ ಬೃಹಸ್ಪತಿಃ ।
ಸ್ಕಂದೋಽಹಂ ಸರ್ವಸೇನಾನ್ಯಾಮಗ್ರಣ್ಯಾಂ ಭಗವಾನಜಃ ॥ ೨೨

ಯಜ್ಞಾನಾಂ ಬ್ರಹ್ಮಯಜ್ಞೋಽಹಂ ವ್ರತಾನಾಮವಿಹಿಂಸನಮ್ ।
ವಾಯ್ವಗ್ನ್ಯರ್ಕಾಂಬುವಾಗಾತ್ಮಾ ಶುಚೀನಾಮಪ್ಯಹಂ ಶುಚಿಃ ॥ ೨೩

ಯೋಗಾನಾಮಾತ್ಮಸಂರೋಧೋ ಮಂತ್ರೋಽಸ್ಮಿ ವಿಜಿಗೀಷತಾಮ್ ।
ಆನ್ವೀಕ್ಷಿಕೀ ಕೌಶಲಾನಾಂ ವಿಕಲ್ಪಃ ಖ್ಯಾತಿವಾದಿನಾಮ್ ॥ ೨೪

---

ಪವಿತ್ರನದಿಗಳಲ್ಲಿ ಗಂಗಾನದಿಯೂ ಜಲಾಶಯಗಳಲ್ಲಿ ಸಮುದ್ರವೂ ನಾನು. ಆಯುಧಗಳಲ್ಲಿ ಧನುಸ್ಸು ನಾನು. ಧನುರ್ಧಾರಿಗಳಲ್ಲಿ ತ್ರಿಪುರಾರಿಯಾದ ಶಿವನು ನಾನು. ನಿವಾಸಸ್ಥಾನಗಳಲ್ಲಿ ಮೇರುಪರ್ವತವೂ ದುರ್ಗಮ ಪರ್ವತಗಳಲ್ಲಿ ಹಿಮಾಲಯವೂ ಆಗಿದ್ದೇನೆ. ವೃಕ್ಷಗಳಲ್ಲಿ ಅಶ್ವತ್ಥವೂ ಓಷಧಿಗಳಲ್ಲಿ ಯವವೂ ಆಗಿದ್ದೇನೆ (೨೦–೨೧). ಪುರೋಹಿತರ ನಡುವೆ ವಸಿಷ್ಠನೂ ವೇದಾರ್ಥನಿಷ್ಠರ ನಡುವೆ ಬೃಹಸ್ಪತಿಯೂ ಸೇನಾಪತಿಗಳಲ್ಲಿ ಸ್ಕಂದನೂ ಸನ್ಮಾರ್ಗಪ್ರವರ್ತಕರಲ್ಲಿ ಭಗವಾನ್ ಬ್ರಹ್ಮನೂ ಆಗಿದ್ದೇನೆ. ಯಜ್ಞಗಳಲ್ಲಿ ಬ್ರಹ್ಮಯಜ್ಞವೂ ವ್ರತಗಳಲ್ಲಿ ಅಹಿಂಸಾವ್ರತವೂ ಶೋಧಕ ವಸ್ತುಗಳಲ್ಲಿ ವಾಯು ವಹ್ನಿ ಸೂರ್ಯ ಜಲ ವಾಗ್ರೂಪನಾದ ಶೋಧಕನೂ ನಾನು (೨೨–೨೩). ಯೋಗಾಂಗಗಳಲ್ಲಿ ಸಮಾಧಿಯೂ ಜಯಾಪೇಕ್ಷಿಗಳಿಗೆ ಮಂತ್ರಾಲೋಚನೆಯೂ ನಿಪುಣವಿದ್ಯೆಗಳಲ್ಲಿ ಆತ್ಮಾನಾತ್ಮವಿವೇಕ ವಿದ್ಯೆಯೂ ಖ್ಯಾತಿಪಂಚಕವಾದಿಗಳಲ್ಲಿ[1] ಸಂಭವಿಸುವ ವಿಕಲ್ಪವೂ ನಾನೇ. ಸ್ತ್ರೀಯರಲ್ಲಿ ಶತರೂಪೆಯೂ ಪುರುಷರಲ್ಲಿ ಸ್ವಾಯಂಭುವ ಮನುವೂ ಆಗಿದ್ದೇನೆ.

1. ಆತ್ಮಖ್ಯಾತಿರಸತ್ ಖ್ಯಾತಿರಖ್ಯಾತಿಃ ಖ್ಯಾತಿರನ್ಯಥಾ ।
ಅನಿರ್ವಚನೀಯಖ್ಯಾತಿರಿತ್ಯೇತತ್ ಖ್ಯಾತಿ ಪಂಚಕಮ್ ॥

ಸ್ತ್ರೀಣಾಂ ತು ಶತರೂಪಾಹಂ ಪುಂಸಾಂ ಸ್ವಾಯಂಭುವೋ ಮನುಃ ।
ನಾರಾಯಣೋ ಮುನೀನಾಂ ಚ ಕುಮಾರೋ ಬ್ರಹ್ಮಚಾರಿಣಾಮ್ ॥ ೨೫

ಧರ್ಮಾಣಾಮಸ್ಮಿ ಸಂನ್ಯಾಸಃ ಕ್ಷೇಮಾಣಾಮಬಹಿರ್ಮತಿಃ ।
ಗುಹ್ಯಾನಾಂ ಸೂನೃತಂ ಮೌನಂ ಮಿಥುನಾನಾಮಜಸ್ತ್ವಹಮ್ ॥ ೨೬

ಸಂವತ್ಸರೋಽಸ್ಮ್ಯನಿಮಿಷಾಮೃತೂನಾಂ ಮಧುಮಾಧವೌ ।
ಮಾಸಾನಾಂ ಮಾರ್ಗಶೀರ್ಷೋಽಹಂ ನಕ್ಷತ್ರಾಣಾಂ ತಥಾಭಿಜಿತ್ ॥ ೨೭

ಅಹಂ ಯುಗಾನಾಂ ಚ ಕೃತಂ ಧೀರಾಣಾಂ ದೇವಲೋಽಸಿತಃ ।
ದ್ವೈಪಾಯನೋಽಸ್ಮಿ ವ್ಯಾಸಾನಾಂ ಕವೀನಾಂ ಕಾವ್ಯ ಆತ್ಮವಾನ್ ॥ ೨೮

ವಾಸುದೇವೋ ಭಗವತಾಂ ತ್ವಂ ತು ಭಾಗವತೇಷ್ವಹಮ್ ।
ಕಿಂಪುರುಷಾಣಾಂ ಹನುಮಾನ್ ವಿದ್ಯಾಧ್ರಾಣಾಂ ಸುದರ್ಶನಃ ॥ ೨೯

---

ಮುನಿಗಳಲ್ಲಿ ನಾರಾಯಣನೂ ಬ್ರಹ್ಮಚಾರಿಗಳಲ್ಲಿ ಸನತ್ಕುಮಾರನೂ ನಾನು (೨೪–೨೫). ಧರ್ಮಗಳಲ್ಲಿ ಅಭಯಪ್ರದಾನರೂಪವಾದ ಸಂನ್ಯಾಸವೂ ನಿರ್ಭಯಸ್ಥಾನಗಳಲ್ಲಿ ಅಂತರ್ಮುಖತೆಯೂ ಗೋಪ್ಯಗಳಲ್ಲಿ ಪ್ರಿಯವಚನವೂ ಮೌನವೂ ದಂಪತಿಗಳಲ್ಲಿ ಪ್ರಜಾಪತಿಯೂ ನಾನು. ಪ್ರಮಾದವೆಸಗದ ಜಾಗರೂಕರಲ್ಲಿ ನಾನು ಸಂವತ್ಸರವಾಗಿದ್ದೇನೆ. ಋತುಗಳಲ್ಲಿ ವಸಂತವೂ ಮಾಸಗಳಲ್ಲಿ ಮಾರ್ಗಶೀರ್ಷವೂ ನಕ್ಷತ್ರಗಳಲ್ಲಿ ಅಭಿಜಿತ್[1] ಎಂಬುದೂ ನಾನು (೨೬–೨೭). ಯುಗಗಳಲ್ಲಿ ನಾನು ಕೃತಯುಗ. ಬುದ್ಧಿಶಾಲಿಗಳಲ್ಲಿ ದೇವಲನೂ ಅಸಿತನೂ ನಾನೇ. ವ್ಯಾಸರಲ್ಲಿ ದ್ವೈಪಾಯನನೂ ವಿದ್ವಾಂಸರಲ್ಲಿ ಧೀರನಾದ ಶುಕ್ರನೂ ನಾನೇ. ಭಗವಂತರಲ್ಲಿ[2] ನಾನು ವಾಸುದೇವ. ಭಗವದ್ಭಕ್ತರಲ್ಲಿ, ಉದ್ಧವ, ನೀನೇ ನಾನು! ಕಿಂಪುರುಷರಲ್ಲಿ ಹನುಮಂತನೂ ವಿದ್ಯಾಧರರಲ್ಲಿ ಸುದರ್ಶನನೂ ಆಗಿದ್ದೇನೆ (೨೮–೨೯).

---

1. ಉತ್ತರಾಷಾಢದ ಚತುರ್ಥಪಾದ ಮತ್ತು ಶ್ರವಣನಕ್ಷತ್ರದ ಪ್ರಥಮಪಾದ–ಇವಕ್ಕೆ ಅಭಿಜಿತ್ ಎಂದು ಹೆಸರಿದೆ.

2. ಉತ್ಪತ್ತಿಂ ಚ ವಿನಾಶಂ ಚ ಭೂತಾನಾಮಾಗತಿಂ ಗತಿಮ್ ।
ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥

ರತ್ನಾನಾಂ ಪದ್ಮರಾಗೋಽಸ್ಮಿ ಪದ್ಮಕೋಶಃ ಸುಪೇಶಸಾಮ್ ।
ಕುಶೋಽಸ್ಮಿ ದರ್ಭಜಾತೀನಾಂ ಗವ್ಯಮಾಜ್ಯಂ ಹವಿಃಷ್ವಹಮ್ ॥ ೩೦

ವ್ಯವಸಾಯಿನಾಮಹಂ ಲಕ್ಷ್ಮೀಃ ಕಿತವಾನಾಂ ಛಲಗ್ರಹಃ ।
ತಿತಿಕ್ಷಾಸ್ಮಿ ತಿತಿಕ್ಷೂಣಾಂ ಸತ್ತ್ವಂ ಸತ್ತ್ವವತಾಮಹಮ್ ॥ ೩೧

ಓಜಃ ಸಹೋ ಬಲವತಾಂ ಕರ್ಮಾಹಂ ವಿದ್ಧಿ ಸಾತ್ವತಾಮ್ ।
ಸಾತ್ವತಾಂ ನವಮೂರ್ತೀನಾಮಾದಿಮೂರ್ತಿರಹಂ ಪರಾ ॥ ೩೨

ವಿಶ್ವಾವಸುಃ ಪೂರ್ವಚಿತ್ತಿರ್ಗಂಧರ್ವಾಪ್ಸರಸಾಮಹಮ್ ।
ಭೂಧರಣಾಮಹಂ ಸ್ಥೈರ್ಯಂ ಗಂಧಮಾತ್ರಮಹಂ ಭುವಃ ॥ ೩೩

ಅಪಾಂ ರಸಶ್ಚ ಪರಮಸ್ತೇಜಿಷ್ಠಾನಾಂ ವಿಭಾವಸುಃ ।
ಪ್ರಭಾ ಸೂರ್ಯೇಂದುತಾರಾಣಾಂ ಶಬ್ದೋಽಹಂ ನಭಸಃ ಪರಃ ॥ ೩೪

ಬ್ರಹ್ಮಣ್ಯಾನಾಂ ಬಲಿರಹಂ ವೀರಾಣಾಮಹಮರ್ಜುನಃ ।
ಭೂತಾನಾಂ ಸ್ಥಿತಿರುತ್ಪತ್ತಿರಹಂ ವೈ ಪ್ರತಿಸಂಕ್ರಮಃ ॥ ೩೫

---

ರತ್ನಗಳಲ್ಲಿ ಪದ್ಮರಾಗವೂ ಸುಂದರ ವಸ್ತುಗಳಲ್ಲಿ ಪದ್ಮಕೋಶವೂ ದರ್ಭಜಾತಿಗಳಲ್ಲಿ ಕುಶವೂ ಹವಿಸ್ಸುಗಳಲ್ಲಿ ಹಸುವಿನ ತುಪ್ಪವೂ ನಾನು. ಉದ್ಯೋಗಶೀಲರಿಗೆ ನಾನು ಲಕ್ಷ್ಮಿಯಾಗಿದ್ದೇನೆ. ದ್ಯೂತಕಾರರಲ್ಲಿ ಛಲವಾಗಿದ್ದೇನೆ. ತಾಳ್ಮೆಯ ಜನರಲ್ಲಿ ತಾಳ್ಮೆಯೂ ಸತ್ತ್ವಶಾಲಿಗಳಲ್ಲಿ ಸತ್ತ್ವವೂ ನಾನು (೩೦–೩೧). ಬಲಶಾಲಿಗಳಲ್ಲಿ ಓಜಸ್ಸೂ ಬಲವೂ ನಾನು. ಭಾಗವತರಲ್ಲಿ ಭಕ್ತಿಪೂರ್ವಕವಾದ ಕರ್ಮ ನಾನು. ಸಾತ್ತ್ವತರು ಅರ್ಚಿಸುವ ನವಮೂರ್ತಿಗಳಲ್ಲಿ [1]ಆದಿಮೂರ್ತಿಯಾದ ಪರವಾಸುದೇವನೇ ನಾನು (೩೨). ಗಂಧರ್ವರಲ್ಲಿ ವಿಶ್ವಾವಸು ನಾನು. ಅಪ್ಸರಸ್ತ್ರೀಯರಲ್ಲಿ ಪೂರ್ವಚಿತ್ತಿ ನಾನು. ಪರ್ವತಗಳಲ್ಲಿ ಸ್ಥೈರ್ಯವೂ ಪೃಥಿವಿಯಲ್ಲಿ ಪರಿಶುದ್ಧ ಗಂಧವೂ ಜಲದಲ್ಲಿ ಮಧುರರಸವೂ ಆಗಿದ್ದೇನೆ. ತೇಜಸ್ವಿಗಳಲ್ಲಿ ಅಗ್ನಿಯಾಗಿದ್ದೇನೆ. ಸೂರ್ಯ ಚಂದ್ರ ನಕ್ಷತ್ರಗಳಲ್ಲಿ ಪ್ರಭೆಯೂ ಆಕಾಶದಲ್ಲಿ ಪರಾಶಬ್ದವೂ ಆಗಿದ್ದೇನೆ (೩೩–೩೪). ಬ್ರಾಹ್ಮಣಹಿತಕಾರಿಗಳಲ್ಲಿ ಬಲಿಚಕ್ರವರ್ತಿಯೂ ವೀರರಲ್ಲಿ

---

1. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣ, ಹಯಗ್ರೀವ, ವರಾಹ, ನರಸಿಂಹ, ಬ್ರಹ್ಮ—ಇವು ನವಮೂರ್ತಿಗಳು.

ಗತ್ಯುಕ್ತ್ಯುತ್ಸರ್ಗೋಪಾದಾನಮಾನಂದಸ್ಪರ್ಶಲಕ್ಷಣಮ್ ।
ಆಸ್ವಾದಶ್ರುತ್ಯವಘ್ರಾಣಮಹಂ ಸರ್ವೇಂದ್ರಿಯೇಂದ್ರಿಯಮ್ ॥ ೩೬

ಪೃಥಿವೀ ವಾಯುರಾಕಾಶ ಆಪೋ ಜ್ಯೋತಿರಹಂ ಮಹಾನ್ ।
ವಿಕಾರಃ ಪುರುಷೋಽವ್ಯಕ್ತಂ ರಜಃ ಸತ್ತ್ವಂ ತಮಃ ಪರಮ್ ॥ ೩೭

ಅಹಮೇತತ್ಪ್ರಸಂಖ್ಯಾನಂ ಜ್ಞಾನಂ ತತ್ತ್ವವಿನಿಶ್ಚಯಃ ।
ಮಯೇಶ್ವರೇಣ ಜೀವೇನ ಗುಣೇನ ಗುಣಿನಾ ವಿನಾ ।
ಸರ್ವಾತ್ಮನಾಪಿ ಸರ್ವೇಣ ನ ಭಾವೋ ವಿದ್ಯತೇ ಕ್ವಚಿತ್ ॥ ೩೮

ಸಂಖ್ಯಾನಂ ಪರಮಾಣೂನಾಂ ಕಾಲೇನ ಕ್ರಿಯತೇ ಮಯಾ ।
ನ ತಥಾ ಮೇ ವಿಭೂತೀನಾಂ ಸೃಜತೋಽಂಡಾನಿ ಕೋಟಿಶಃ ॥ ೩೯

---

ಪಾರ್ಥನೂ ಆಗಿದ್ದೇನೆ. ಪ್ರಾಣಿಗಳಿಗೆ ಸ್ಥಿತಿ ಉತ್ಪತ್ತಿಲಯಗಳೂ ನಾನೇ. ಪಂಚಕರ್ಮೇಂದ್ರಿಯವ್ಯಾಪಾರಗಳಾದ ಗಮನ, ವಚನ, ವಿಸರ್ಜನ, ಆದಾನ, ಆನಂದಗಳೂ ಪಂಚಜ್ಞಾನೇಂದ್ರಿಯ ವ್ಯಾಪಾರಗಳಾದ ಸ್ಪರ್ಶನ, ದರ್ಶನ, ಆಸ್ವಾದನ, ಶ್ರವಣ, ಅಘ್ರಾಣಗಳೂ ನಾನೇ ಆಗಿದ್ದೇನೆ. ಸಮಸ್ತೇಂದ್ರಿಯಗಳಿಗೂ ಶಕ್ತಿಯನ್ನು ನೀಡುವ ಇಂದ್ರಿಯವೇ ನಾನು! (೩೫–೩೬). ಪೃಥ್ವಿ, ವಾಯು, ಆಕಾಶ, ಜಲ, ವಹ್ನಿಗಳ ಗಂಧಾದಿ ತನ್ಮಾತ್ರೆಗಳು ನಾನು. ಅಹಂಕಾರವೂ ಮಹತ್ತತ್ತ್ವವೂ ವಿಕಾರವೂ (ಪಂಚಮಹಾಭೂತಗಳು, ಮನಸ್ಸು, ಹತ್ತು ಇಂದ್ರಿಯಗಳು) ನಾನೇ. ಜೀವಾತ್ಮನೂ ನಾನೇ. ಪ್ರಕೃತಿಯೂ[1] ನಾನೇ. ಪ್ರಕೃತಿಯ ಗುಣಗಳಾದ ರಜಃ ಸತ್ತ್ವತಮಸ್ಸುಗಳೂ ನಾನು. ಈ ತತ್ತ್ವಗಳ ಪರಿಗಣನೆಯೂ ಲಕ್ಷಣಜ್ಞಾನವೂ ಫಲವಾದ ತತ್ತ್ವನಿಶ್ಚಯವೂ ನಾನು (೩೭). ಈಶ್ವರನೂ ಜೀವವೂ ಗುಣವೂ ಗುಣಿಯೂ (ಕ್ಷೇತ್ರಜ್ಞನಾದ) ಸರ್ವಾತ್ಮನೂ (ಕ್ಷೇತ್ರವಾದ) ಸರ್ವವೂ ನಾನೇ ಆಗಿದ್ದೇನೆ. ಇಂತಹ ನನ್ನನ್ನು ಬಿಟ್ಟು ಇನ್ನೊಂದು ಪದಾರ್ಥವು ಎಲ್ಲಿಯೂ ಇಲ್ಲ (೩೮). ಅಯ್ಯ-ಉದ್ಧವ, ಪೃಥಿವ್ಯಾದಿ

---

1. ಪೃಥ್ವಿಯಿಂದ ಹಿಡಿದು ಪ್ರಕೃತಿಯವರೆಗೆ ಹೇಳಿದವು ಸಾಂಖ್ಯಮತದ ಪಂಚವಿಂಶತಿ ತತ್ತ್ವಗಳು. ಶ್ರೀಕೃಷ್ಣನು ಬೋಧಿಸುತ್ತಿರುವ ವೇದಾಂತದ ಪ್ರಕಾರ ಆತ್ಮ ಎಂಬುದೊಂದೇ ತತ್ತ್ವ.

ತೇಜಃ ಶ್ರೀಃ ಕೀರ್ತಿರೈಶ್ವರ್ಯಂ ಹ್ರೀಸ್ತ್ಯಾಗಃ ಸೌಭಗಂ ಭಗಃ ।
ವೀರ್ಯಂ ತಿತಿಕ್ಷಾ ವಿಜ್ಞಾನಂ ಯತ್ರ ಯತ್ರ ಸ ಮೇಽಂಶಕಃ ॥ ೪೦

ಏತಾಸ್ತೇ ಕೀರ್ತಿತಾಃ ಸರ್ವಾಃ ಸಂಕ್ಷೇಪೇಣ ವಿಭೂತಯಃ ।
ಮನೋವಿಕಾರಾ ಏವೈತೇ ಯಥಾ ವಾಚಾಭಿಧೀಯತೇ ॥ ೪೧

ವಾಚಂ ಯಚ್ಛ ಮನೋ ಯಚ್ಛ ಪ್ರಾಣಾನ್ ಯಚ್ಛೇಂದ್ರಿಯಾಣಿ ಚ ।
ಆತ್ಮಾನಮಾತ್ಮನಾ ಯಚ್ಛ ನ ಭೂಯಃ ಕಲ್ಪಸೇಽಧ್ವನೇ ॥ ೪೨

ಯೋ ವೈ ವಾಙ್ಮನಸೀ ಸಮ್ಯಗಸಂಯಚ್ಛನ್ ಧಿಯಾ ಯತಿಃ ।
ತಸ್ಯ ವ್ರತಂ ತಪೋದಾನಂ ಸ್ರವತ್ಯಾಮಘಟಾಂಬುವತ್ ॥ ೪೩

---

ದ್ರವ್ಯಗಳಲ್ಲಿ ಎಷ್ಟು ಪರಮಾಣುಗಳಿವೆಯೆಂಬುದನ್ನು ಕೆಲವು ಸಮಯದಲ್ಲಿ ನಾನೇ ಎಣಿಸಿ ಹೇಳಬಲ್ಲೆ ! ಆದರೆ ನನ್ನ ವಿಭೂತಿಗಳು ಎಷ್ಟೆಂದು ಎಣಿಸಿ ಹೇಳಲಳವಲ್ಲ ! ಏಕೆಂದರೆ, ಕೋಟಿಗಟ್ಟಲೆ ಬ್ರಹ್ಮಾಂಡಗಳನ್ನು ನಾನು ಸೃಜಿಸುತ್ತಲೇ ಇರುತ್ತೇನೆ ! (೩೯). ಎಲ್ಲೆಲ್ಲಿ ಪ್ರಭಾವ, ಸಂಪತ್ತು ಕೀರ್ತಿ, ಪ್ರಭುತ್ವ, ಲಜ್ಜಾ, ತ್ಯಾಗ, ಆಹ್ಲಾದಕತೆ, ಭಾಗ್ಯ, ಬಲ, ತಾಳ್ಮೆ, ವಿಜ್ಞಾನಗಳು ಕಂಡುಬರುತ್ತವೆಯೋ ಅದು ನನ್ನ ವಿಭೂತಿಯೆಂದು ತಿಳಿ. ಎಲ್ಲ ಬಗೆಯ ವಿಭೂತಿಪ್ರಕಾರಗಳನ್ನೂ ನಿನಗೆ ಸಂಕ್ಷೇಪವಾಗಿ ತಿಳಿಸಿದ್ದೇನೆ. ಇವೆಲ್ಲವೂ ಕಲ್ಪಿತವಾದ ಭಾವನಾವಿಶೇಷಗಳೇ ಹೊರತು ಪರಮಾರ್ಥಗಳಲ್ಲ. ವಾಙ್ಮಾತ್ರದಿಂದ ಹೇಳಬಹುದಾದ ([1]ಗಗನಪುಷ್ಪದಂತೆ) ಇವುಗಳು (೪೦–೪೧). ಆದ್ದರಿಂದ ಮಾತನ್ನು ನಿಯಂತ್ರಿಸು. ಮನಸ್ಸನ್ನು ನಿಯಂತ್ರಿಸು. ಉಸಿರನ್ನೂ ನಿಯಂತ್ರಿಸು. ಇಂದ್ರಿಯಗಳನ್ನೂ ನಿಯಂತ್ರಿಸು. ಬುದ್ಧಿಯನ್ನು ಸಾತ್ತ್ವಿಕ ಬುದ್ಧಿಯಿಂದ ನಿಯಂತ್ರಿಸು. ಹೀಗೆ ಮಾಡಿದರೆ ಮತ್ತೆ ಸಂಸಾರಮಾರ್ಗಕ್ಕೆ ನೀನು ಬರುವುದಿಲ್ಲ (೪೨). ಯಾವ ಯತಿಯು ವಿವೇಕ ಬುದ್ಧಿಯಿಂದ ವಾಙ್ಮನಸ್ಸುಗಳನ್ನು ನಿಯಂತ್ರಿಸುವುದಿಲ್ಲವೋ ಆತನ ವ್ರತ ತಪೋ-ದಾನಗಳು, ಹಸಿಗಡಿಗೆಯೊಳಗಿಟ್ಟ ನೀರಿನಂತೆ ಸ್ರವಿಸಿಹೋಗುತ್ತವೆ ! ಆದ್ದರಿಂದ

---

1. ನನ್ನ ಮಹಿಮೆಯನ್ನು ತಿಳಿಸಿ ನನ್ನಲ್ಲಿ ಭಕ್ತಿಯುಂಟಾಗುವಂತೆ ಮಾಡುವ ಪ್ರಯತ್ನ ಇದು. ಇದರಲ್ಲಿ ಅಭಿನಿವೇಶವು ಅನಾವಶ್ಯಕವೆಂದು ಅಭಿಪ್ರಾಯ.

ತಸ್ಮಾನ್ಮನೋವಚಃಪ್ರಾಣಾನ್ ನಿಯಚ್ಛೇನ್ಮತ್ಪರಾಯಣಃ ।
ಮದ್ಭಕ್ತಿಯುಕ್ತಯಾ ಬುದ್ಧ್ಯಾ ತತಃ ಪರಿಸಮಾಪ್ಯತೇ ॥ ೪೪

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಷೋಡಶೋಽಧ್ಯಾಯಃ



---

ನನ್ನನ್ನೇ ಗತಿಯೆಂದು ನಂಬಿದವನಾಗಿ ಭಕ್ತಿಪೂರ್ವಕವಾದ ವಿವೇಕಬುದ್ಧಿಯಿಂದ ಮನೋವಾಕ್ಕುಗಳನ್ನೂ ಪ್ರಾಣಜನ್ಯವಾದ ದೈಹಿಕಕ್ರಿಯೆಯನ್ನೂ ನಿಯಂತ್ರಿಸಬೇಕು. ಆಗ ಮಾನವನು ಕೃತಕೃತ್ಯನಾಗುವನು" (೪೩–೪೪).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಹದಿನಾರನೆಯ ಅಧ್ಯಾಯ



# ಸಪ್ತದಶಾಧ್ಯಾಯಃ

ಉದ್ಧವ ಉವಾಚ—

ಯಸ್ತ್ವಯಾಭಿಹಿತಃ ಪೂರ್ವಂ ಧರ್ಮಸ್ತ್ವದ್ಭಕ್ತಿಲಕ್ಷಣಃ ।
ವರ್ಣಾಶ್ರಮಾಚಾರವತಾಂ ಸರ್ವೇಷಾಂ ದ್ವಿಪದಾಮಪಿ ॥ ೧

ಯಥಾನುಷ್ಠೀಯಮಾನೇನ ತ್ವಯಿ ಭಕ್ತಿರ್ನೃಣಾಂ ಭವೇತ್ ।
ಸ್ವಧರ್ಮೇಣಾರವಿಂದಾಕ್ಷ ತತ್ ಸಮಾಖ್ಯಾತುಮರ್ಹಸಿ ॥ ೨

ಪುರಾ ಕಿಲ ಮಹಾಬಾಹೋ ಧರ್ಮಂ ಪರಮಕಂ ಪ್ರಭೋ ।
ಯತ್ತೇನ ಹಂಸರೂಪೇಣ ಬ್ರಹ್ಮಣೇಽಭ್ಯಾತ್ಥ ಮಾಧವ ॥ ೩

ಸ ಇದಾನೀಂ ಸುಮಹತಾ ಕಾಲೇನಾಮಿತ್ರಕರ್ಶನ ।
ನ ಪ್ರಾಯೋ ಭವಿತಾ ಮರ್ತ್ಯಲೋಕೇ ಪ್ರಾಗನುಶಾಸಿತಃ ॥ ೪

ವಕ್ತಾ ಕರ್ತಾವಿತಾ ನಾನ್ಯೋ ಧರ್ಮಸ್ಯಾಚ್ಯುತ ತೇ ಭುವಿ ।
ಸಭಾಯಾಮಪಿ ವೈರಿಂಚ್ಯಾಂ ಯತ್ರ ಮೂರ್ತಿಧರಾಃ ಕಲಾಃ ॥ ೫

## ಅಧ್ಯಾಯ ೧೭

ಭಕ್ತಿಸಾಧನವಾದ ಸ್ವಧರ್ಮದ ಸ್ವರೂಪ. ಬ್ರಹ್ಮಚಾರಿಗಳು ಮತ್ತು ಗೃಹಸ್ಥರು ಆಚರಿಸಬೇಕಾದ ಧರ್ಮದ ನಿರೂಪಣೆ.

ಆಗ ಉದ್ಧವನು ಹೀಗೆ ಕೇಳಿದನು : "ಹೇ ಅರವಿಂದಾಕ್ಷ, ನಿನ್ನಲ್ಲಿ ಭಕ್ತಿಯುಂಟಾಗಲು ಸಾಧನವೆಂದು ಕರ್ಮಾನುಷ್ಠಾನರೂಪವಾದ ಧರ್ಮವನ್ನು ಹಿಂದೆ ಹೇಳಿದ್ದೀಯೆ. ಈ ಕರ್ಮಾನುಷ್ಠಾನವು ವರ್ಣಾಶ್ರಮಗಳ ಆಚಾರವನ್ನು ಪಾಲಿಸತಕ್ಕವರಿಗೂ ಮತ್ತು ಇತರ ಎಲ್ಲ ಮನುಷ್ಯಮಾತ್ರದವರಿಗೂ ಸಂಬಂಧಿಸಿದೆಯೆಂದು ತಿಳಿಸಿದ್ದೀಯೆ (೧). ಯಾವ ರೀತಿಯಲ್ಲಿ ಈ ಸ್ವಧರ್ಮವನ್ನಾಚರಿಸಿದರೆ ಜನರಿಗೆ ನಿನ್ನಲ್ಲಿ ಭಕ್ತಿ ಉದಯಿಸುತ್ತದೆಯೆಂಬುದನ್ನು ಹೇಳು. ಹಿಂದೆ ನೀನು ಹಂಸರೂಪದಿಂದ ಆಗಮಿಸಿ ಪರಮವೂ ಸುಖರೂಪವೂ ಆದ ಧರ್ಮವನ್ನು ಬ್ರಹ್ಮನಿಗೆ ಬೋಧಿಸಿದ್ದೀಯಲ್ಲವೆ? ಬಹಳಕಾಲವಾದಮೇಲೆ ಈಗ ಅದು ಈ ಭೂಲೋಕದಲ್ಲಿ ಸಾಮಾನ್ಯವಾಗಿ ಅನುಷ್ಠಾನದಲ್ಲಿರುವುದಿಲ್ಲ (೨-೪). ಅಚ್ಯುತ, ಅಂತಹ ಧರ್ಮದ ವಕ್ತಾರನೂ ಕರ್ತಾರನು ರಕ್ಷಿತಾರನೂ ನಿನ್ನನ್ನು ಬಿಟ್ಟರೆ ಇನ್ನೊಬ್ಬನಿಲ್ಲ. ವೇದಾದಿಗಳೇ ಮೂರ್ತಿಮತ್ತಾಗಿರುವ ಬ್ರಹ್ಮಸಭೆಯಲ್ಲಿಯೂ ಅಂತಹವನಿಲ್ಲ.

ಕರ್ತ್ರಾವಿತ್ರಾ ಪ್ರವಕ್ತ್ರಾ ಚ ಭವತಾ ಮಧುಸೂದನ ।
ತ್ಯಕ್ತೇ ಮಹೀತಲೇ ದೇವ ವಿನಷ್ಟಂ ಕಃ ಪ್ರವಕ್ಷ್ಯತಿ ॥ ೬

ತತ್ತ್ವಂ ನಃ ಸರ್ವಧರ್ಮಜ್ಞ ಧರ್ಮಸ್ತ್ವದ್ಭಕ್ತಿಲಕ್ಷಣಃ ।
ಯಥಾ ಯಸ್ಯ ವಿಧೀಯೇತ ತಥಾ ವರ್ಣಯ ಮೇ ಪ್ರಭೋ ॥ ೭

ಶ್ರೀಶುಕ ಉವಾಚ—

ಇತ್ಥಂ ಸ್ವಭೃತ್ಯಮುಖ್ಯೇನ ಪೃಷ್ಟಃ ಸ ಭಗವಾನ್ ಹರಿಃ ।
ಪ್ರೀತಃ ಕ್ಷೇಮಾಯ ಮರ್ತ್ಯಾನಾಂ ಧರ್ಮಾನಾಹ ಸನಾತನಾನ್ ॥ ೮

ಶ್ರೀಭಗವಾನುವಾಚ—

ಧರ್ಮ್ಯ ಏಷ ತವ ಪ್ರಶ್ನೋ ನೈಃಶ್ರೇಯಸಕರೋ ನೃಣಾಮ್ ।
ವರ್ಣಾಶ್ರಮಾಚಾರವತಾಂ ತಮುದ್ಧವ ನಿಬೋಧ ಮೇ ॥ ೯

ಆದೌ ಕೃತಯುಗೇ ವರ್ಣೋ ನೃಣಾಂ ಹಂಸ ಇತಿ ಸ್ಮೃತಃ ।
ಕೃತಕೃತ್ಯಾಃ ಪ್ರಜಾ ಜಾತ್ಯಾ ತಸ್ಮಾತ್ ಕೃತಯುಗಂ ವಿದುಃ ॥ ೧೦

---

ಹೇ ದೇವ, ಕರ್ತಾರನೂ ರಕ್ಷಿತಾರನು ವಕ್ತಾರನೂ ಆದ ನೀನು ಈ ಮಹೀತಳ ವನ್ನು ತ್ಯಜಿಸಿಹೋದಮೇಲೆ ಆ ಧರ್ಮವನ್ನು ಹೇಳಿಕೊಡತಕ್ಕವನು ಯಾರು ? (೫–೬). ಸ್ವಾಮಿ, ಸರ್ವಧರ್ಮಜ್ಞ ನೀನು. ನಿನ್ನ ಭಕ್ತಿಗೆ ಸಾಧನವಾದ ಧರ್ಮವು ನಮ್ಮಲ್ಲಿ ಯಾರಿಗೆ ಯಾವ ಪ್ರಕಾರವಾಗಿ ವಿಹಿತವಾಗಿದೆ—ಎಂಬುದನ್ನು ವಿವರಿಸು " ಎಂದನು (೭). ಇವೆಲ್ಲವನ್ನೂ ಶುಕಮಹರ್ಷಿಗಳು ಪರೀಕ್ಷಿತರಾಜನಿಗೆ ತಿಳಿಸಿ ಮತ್ತೆ ಹೇಳಿದರು : ಪರೀಕ್ಷಿತ, ಈ ಪ್ರಕಾರವಾಗಿ ತನ್ನ ಭಕ್ತರಲ್ಲಿ ಅಗ್ರಗಣ್ಯ ನಾದ ಉದ್ಧವನು ಕೇಳಲಾಗಿ, ಸಂಪ್ರೀತನಾದ ಭಗವಾನ್ ಶ್ರೀಹರಿಯು ಮಾನವರ ಹಿತಕ್ಕೋಸ್ಕರ ಸನಾತನ ಧರ್ಮಗಳನ್ನು ವಿವರಿಸಿದನು (೮). ಭಗವಂತನು ಹೇಳಿದ್ದೇನೆಂದರೆ : " ಉದ್ಧವ, ನಿನ್ನ ಪ್ರಶ್ನೆಯು ಧಾರ್ಮಿಕವಾಗಿದೆ. ಇದು ಶ್ರೇಯೋರೂಪವಾದ ಭಕ್ತಿಯನ್ನುಂಟುಮಾಡತಕ್ಕದ್ದು. ವರ್ಣಾಶ್ರಮಗಳ ಆಚಾರ ವನ್ನು ಪಾಲಿಸತಕ್ಕವರಿಗೆ ಹಿತಕರವಾದ ಧರ್ಮವನ್ನು ಹೇಳುತ್ತೇನೆ, ಆಲಿಸು (೯): ಕಲ್ಪಾದಿಯ ಕೃತಯುಗದಲ್ಲಿ ಮನುಷ್ಯರಿಗಿದ್ದ ವರ್ಣಧರ್ಮವೆಂದರೆ [1]ಹಂಸ

---

1. ಹಂಸವೆಂದರೆ ಇಲ್ಲಿ ಭಗವದುಪಾಸನೆ. ಕೃತಯುಗದಲ್ಲಿ ಅದೊಂದೇ ಧರ್ಮ ವಾಗಿತ್ತು. ವರ್ಣಾಶ್ರಮಾಚಾರಗಳು ಅನಂತರ ಬಂದವು—ಎಂದು ಅಭಿಪ್ರಾಯ.

ವೇದಃ ಪ್ರಣವ ಏವಾಗ್ರೇ ಧರ್ಮೋಽಹಂ ವೃಷರೂಪಧೃಕ್ ।
ಉಪಾಸತೇ ತಪೋನಿಷ್ಠಾ ಹಂಸಂ ಮಾಂ ಮುಕ್ತಕಿಲ್ಬಿಷಾಃ ॥ ೧೧

ತ್ರೇತಾಮುಖೇ ಮಹಾಭಾಗ ಪ್ರಾಣಾನ್ಮೇ ಹೃದಯಾತ್ತ್ರಯೀ ।
ವಿದ್ಯಾ ಪ್ರಾದುರಭೂತ್ತಸ್ಯಾ ಅಹಮಾಸಂ ತ್ರಿವೃನ್ಮಖಃ ॥ ೧೨

ವಿಪ್ರಕ್ಷತ್ರಿಯವಿಟ್‌ಶೂದ್ರಾ ಮುಖಬಾಹೂರುಪಾದಜಾಃ ।
ವೈರಾಜಾತ್ ಪುರುಷಾಜ್ಜಾತಾ ಯ ಆತ್ಮಾಚಾರಲಕ್ಷಣಾಃ ॥ ೧೩

ಗೃಹಾಶ್ರಮೋ ಜಘನತೋ ಬ್ರಹ್ಮಚರ್ಯಂ ಹೃದೋ ಮಮ ।
ವಕ್ಷಃಸ್ಥಾನಾದ್ ವನೇ ವಾಸೋ ನ್ಯಾಸಃ ಶೀರ್ಷಣಿ ಸಂಸ್ಥಿತಃ ॥ ೧೪

---

ಎಂಬುದು. ಜನ್ಮದಿಂದಲೇ ಅವರೆಲ್ಲರೂ ಕೃತಕೃತ್ಯರಾಗುತ್ತಿದ್ದುದರಿಂದ ಆ ಯುಗಕ್ಕೆ ಕೃತಯುಗವೆಂದು ಹೆಸರು. ಏಕೆಂದರೆ, ಆದಿಯಲ್ಲಿ ವೇದವೆಂದರೆ [1]ಓಂಕಾರವೇ ಆಗಿತ್ತು. ವೃಷಭರೂಪನಾದ—ಎಂದರೆ ಚತುಷ್ಪಾತ್ ಆದ ನಾನೊಬ್ಬನೇ ಕೇವಲ ಮನೋವಿಷಯವಾದ ಧರ್ಮವಾಗಿದ್ದೆನು. ಜನರು ಪಾಪರಹಿತರಾಗಿ ತಪೋ ನಿಷ್ಠೆಯಿಂದ ಹಂಸರೂಪನಾದ ನನ್ನ ಉಪಾಸನೆಯನ್ನು ಮಾಡುತ್ತಿದ್ದರು (ಯಾಜ್ಞಿಕಕ್ರಿಯೆ ಇರಲಿಲ್ಲ) (೧೦-೧೧). ಮಹಾಭಾಗ, ಅನಂತರ ತ್ರೇತಾಯುಗದ ಪ್ರವೇಶವಾಗಲು ವೈರಾಜರೂಪನಾದ ನನ್ನ ಪ್ರಾಣದ ನಿಮಿತ್ತವಾಗಿ ನನ್ನ ಹೃದಯ ದಿಂದ ತ್ರಯೀ ವಿದ್ಯೆಯೆನಿಸಿದ ವೇದತ್ರಯವು ಪ್ರಾದುರ್ಭವಿಸಿತು. ಆ ವೇದದಿಂದ ನಾನು ಹೋತ್ರ, ಆಧ್ವರ್ಯವ, ಔದ್ಗಾತ್ರ—ಎಂಬುದಾಗಿ [2]ತ್ರಿರೂಪನಾದೆನು, (೧೨). ಈ ವಿರಾಟ್‌ಪುರುಷನ ಮುಖ, ಬಾಹು, ಊರು, ಪಾದಗಳಿಂದ ಕ್ರಮವಾಗಿ ವಿಪ್ರ, ಕ್ಷತ್ರಿಯ, ವೈಶ್ಯ, ಶೂದ್ರರು ಹುಟ್ಟಿದರು. ಸ್ವಧರ್ಮಾಚರಣೆಯೇ ಇವರ ಲಕ್ಷಣ. ನನ್ನ ವಿರಾಡ್ರೂಪದ ಜಘನಸ್ಥಾನದಲ್ಲಿ ಗೃಹಸ್ಥಾಶ್ರಮವೂ ಹೃದಯದ ಕೆಳಗೆ ನೈಷ್ಠಿಕ ಬ್ರಹ್ಮಚರ್ಯವೂ ವಕ್ಷಃಸ್ಥಳದಲ್ಲಿ ವಾನಪ್ರಸ್ಥವೂ ಶಿರಸ್ಸಿನಲ್ಲಿ

1. ವರ್ಣಾಶ್ರಮಧರ್ಮವಿಧಾಯಕವಾದ ವೇದದ ಆವಿರ್ಭಾವವಾಗಿರಲಿಲ್ಲ—ಎಂದು ಅಭಿಪ್ರಾಯ.

2. ವಿರಾಟ್‌ಪುರುಷನಿಂದ ವೇದತ್ರಯದ ಆವಿರ್ಭಾವ. 'ಯಜ್ಞೋ ವೈ ವಿಷ್ಣುಃ' ಎಂಬ ಶ್ರುತಿಯ ಪ್ರಕಾರ ಈ ಪುರುಷನು ಯಜ್ಞಸ್ವರೂಪನು. ಹೋತ್ರ = ಋಗ್ವೇದ, ಆಧ್ವರ್ಯವ = ಯಜುರ್ವೇದ, ಔದ್ಗಾತ್ರ = ಸಾಮವೇದ.

*

ವರ್ಣಾನಾಮಾಶ್ರಮಾಣಾಂ ಚ ಜನ್ಮಭೂಮ್ಯನುಸಾರಿಣೀಃ ।
ಆಸನ್ ಪ್ರಕೃತಯೋ ನೄಣಾಂ ನೀಚೈರ್ನೀಚೋತ್ತಮೋತ್ತಮಾಃ ॥ ೧೫
ಶಮೋ ದಮಸ್ತಪಃ ಶೌಚಂ ಸಂತೋಷಃ ಕ್ಷಾಂತಿರಾರ್ಜವಮ್ ।
ಮದ್ಭಕ್ತಿಶ್ಚ ದಯಾ ಸತ್ಯಂ ಬ್ರಹ್ಮಪ್ರಕೃತಯಸ್ತ್ವಿಮಾಃ ॥ ೧೬
ತೇಜೋ ಬಲಂ ಧೃತಿಃ ಶೌರ್ಯಂ ತಿತಿಕ್ಷೌದಾರ್ಯಮುದ್ಯಮಃ ।
ಸ್ಥೈರ್ಯಂ ಬ್ರಹ್ಮಣ್ಯತೈಶ್ವರ್ಯಂ ಕ್ಷತ್ರಪ್ರಕೃತಯಸ್ತ್ವಿಮಾಃ ॥ ೧೭
ಆಸ್ತಿಕ್ಯಂ ದಾನನಿಷ್ಠಾ ಚ ಅದಂಭೋ ಬ್ರಹ್ಮಸೇವನಮ್ ।
ಅತುಷ್ಟಿರರ್ಥೋಪಚಯೈರ್ವೈಶ್ಯಪ್ರಕೃತಯಸ್ತ್ವಿಮಾಃ ॥ ೧೮
ಶುಶ್ರೂಷಣಂ ದ್ವಿಜಗವಾಂ ದೇವಾನಾಂ ಚಾಪ್ಯಮಾಯಯಾ ।
ತತ್ರ ಲಬ್ಧೇನ ಸಂತೋಷಃ ಶೂದ್ರಪ್ರಕೃತಯಸ್ತ್ವಿಮಾಃ ॥ ೧೯
ಅಶೌಚಮನೃತಂ ಸ್ತೇಯಂ ನಾಸ್ತಿಕ್ಯಂ ಶುಷ್ಕವಿಗ್ರಹಃ ।
ಕಾಮಃ ಕ್ರೋಧಶ್ಚ ತರ್ಷಶ್ಚ ಸ್ವಭಾವೋಽಂತೇವಸಾಯಿನಾಮ್ ॥ ೨೦

---

ಸಂನ್ಯಾಸವೂ ಪ್ರತಿಷ್ಠಿತವಾಗಿವೆ (೧೩-೧೪). ಮಾನವರ ಸ್ವಭಾವಗಳು ಆಯಾ ವರ್ಣಾಶ್ರಮಗಳ ಜನ್ಮಸ್ಥಾನಗಳನ್ನನುಸರಿಸಿ ಕ್ರಮವಾಗಿ [1]ಮಂದ-ಮಧ್ಯಮ-ಉತ್ತಮಗಳಾದವು. ಶಮ, ದಮ, ತಪಸ್ಸು, ಶೌಚ, ಸಂತೃಪ್ತಿ, ಕ್ಷಮೆ, ಋಜುತ್ವ, ಭಗವದ್ಭಕ್ತಿ, ದಯೆ, ಸತ್ಯ — ಇವು ಬ್ರಾಹ್ಮಣ ಸ್ವಭಾವಗಳು (೧೫-೧೬). ಪ್ರತಾಪ, ಬಲ, ಧೈರ್ಯ, ಶೌರ್ಯ, ತಿತಿಕ್ಷೆ, ಔದಾರ್ಯ, ಉದ್ಯೋಗ, ಸ್ಥೈರ್ಯ, ಬ್ರಾಹ್ಮಣಪ್ರಿಯತೆ, ಪ್ರಭುತ್ವ—ಇವು ಕ್ಷತ್ರಿಯ ಸ್ವಭಾವಗಳು. ಆಸ್ತಿಕ್ಯ ಬುದ್ಧಿ, ದಾನನಿಷ್ಠೆ, ಅದಂಭ, ಬ್ರಾಹ್ಮಣ ಸೇವೆ, ಧನ ಸಂಗ್ರಹವಾದರೂ ಅತೃಪ್ತಿ—ಇವು ವೈಶ್ಯಸ್ವಭಾವಗಳು (೧೭-೧೮). ನಿರ್ವಂಚನೆಯಿಂದ ದ್ವಿಜರ ಮತ್ತು ಗೋವುಗಳ ಸೇವೆ, ದೇವರ ಸೇವೆ, ಅದರಿಂದ ದೊರಕಿದ ಧನದಿಂದ ಸಂತೃಪ್ತಿ—ಇವು ಶೂದ್ರ ಸ್ವಭಾವಗಳು (೧೯). ಕೊಳಕುತನ, ಸುಳ್ಳು, ಕಳ್ಳತನ, ನಾಸ್ತಿಕ್ಯಬುದ್ಧಿ, ವ್ಯರ್ಥವಾದ ಜಗಳ, ಕಾಮ, ಕ್ರೋಧ, ಆಸೆ—ಇವು

---

1. ನೀಚೈಃ—ನೀಚೋತ್ತಮ—ಉತ್ತಮ ಎಂದು ಸ್ವಭಾವ ಮೂರು ಬಗೆ. ನೀಚೈಃ (ಮಂದ). ನೀಚೋತ್ತಮ — ಮಧ್ಯಮ. ವರ್ಣದಿಂದ ವಿಪ್ರನು ಉತ್ತಮ, ಗೃಹಸ್ಥಾಶ್ರಮದಿಂದ ಮಂದ.

ಅಹಿಂಸಾ ಸತ್ಯಮಸ್ತೇಯಮಕಾಮಕ್ರೋಧಲೋಭತಾ ।
ಭೂತಪ್ರಿಯಹಿತೇಹಾ ಚ ಧರ್ಮೋಽಯಂ ಸಾರ್ವವರ್ಣಿಕಃ ॥ ೨೧

ದ್ವಿತೀಯಂ ಪ್ರಾಪ್ಯಾನುಪೂರ್ವ್ಯಾಜ್ಜನ್ಮೋಪನಯನಂ ದ್ವಿಜಃ ।
ವಸನ್ ಗುರುಕುಲೇ ದಾಂತೋ ಬ್ರಹ್ಮಾಧೀಯೀತ ಚಾಹುತಃ ॥ ೨೨

ಮೇಖಲಾಜಿನದಂಡಾಕ್ಷ ಬ್ರಹ್ಮಸೂತ್ರಕಮಂಡಲೂನ್ ।
ಜಟಿಲೋಽಧೌತದದ್ವಾಸೋಽರಕ್ತಪೀಠಃ ಕುಶಾನ್ ದಧತ್ ॥ ೨೩

ಸ್ನಾನಭೋಜನಹೋಮೇಷು ಜಪೋಚ್ಚಾರೇ ಚ ವಾಗ್ಯತಃ ।
ನಚ್ಛಿಂದ್ಯಾನ್ನಖರೋಮಾಣಿ ಕಕ್ಷೋಪಸ್ಥಗತಾನ್ಯಪಿ ॥ ೨೪

ರೇತೋ ನಾವಕಿರೇಜ್ಜಾತು ಬ್ರಹ್ಮವ್ರತಧರಃ ಸ್ವಯಮ್ ।
ಅವಕೀರ್ಣೇಽವಗಾಹ್ಯಾಪ್ಸು ಯತಾಸುಸ್ತ್ರಿಪದೀಂ ಜಪೇತ್ ॥ ೨೫

---

(ನಾಲ್ಕು ವರ್ಣಗಳಿಗೆ ಸೇರದ) ಅಂತ್ಯಜರ ಸ್ವಭಾವಗಳು (೨೦). ಅಹಿಂಸೆ, ಸತ್ಯ, ಅಸ್ತೇಯ, ಕಾಮ ಕ್ರೋಧ ಲೋಭಗಳಿಲ್ಲದಿರುವಿಕೆ, ಸಕಲಪ್ರಾಣಿಗಳಿಗೆ ಪ್ರಿಯವೂ ಹಿತವೂ ಆದದ್ದನ್ನು ಮಾಡಬೇಕೆಂಬ ಪ್ರಯತ್ನ—ಇವು ಸರ್ವವರ್ಣೀಯರೂ ಆಚರಿಸಬೇಕಾದ ಧರ್ಮ (೨೧). ತ್ರೈವರ್ಣಿಕನಾದ ದ್ವಿಜನು ಕ್ರಮವಾಗಿ ಜಾತ ಕರ್ಮಾದಿಸಂಸ್ಕಾರಗಳನ್ನು ಪಡೆದು ದ್ವಿತೀಯ ಜನ್ಮವೆನಿಸಿದ ಉಪನಯನವನ್ನು ಮಾಡಿಕೊಳ್ಳಬೇಕು. ಅನಂತರ ಆಚಾರ್ಯನಿಂದ ಆಹೂತನಾಗಿ ಗುರುಕುಲದಲ್ಲಿ ವಾಸಮಾಡುತ್ತ ಜಿತೇಂದ್ರಿಯನಾಗಿ ವೇದವನ್ನು ಅಧ್ಯಯನ ಮಾಡಬೇಕು (ವೇದದ ಅರ್ಥವನ್ನೂ ತಿಳಿದುಕೊಳ್ಳಬೇಕು) (೨೨). ಆ ವಟುವು ಮೇಖಲೆ, ಅಜಿನ, ದಂಡ, ಅಕ್ಷಮಾಲೆ, ಯಜ್ಞೋಪವೀತ, ಕಮಂಡಲಗಳನ್ನು ಧರಿಸಬೇಕು. ಜಟೆಯನ್ನು ಬೆಳೆಸಬಹುದು. ಹಲ್ಲು, ವಸ್ತ್ರಗಳನ್ನು ಅತ್ಯಂತ ಸ್ವಚ್ಛವಾಗಿ ಇರಿಸಿಕೊಳ್ಳುವ ಗೀಳನ್ನು ಹೊಂದಬಾರದು. ಕುಳಿತುಕೊಳ್ಳುವ ಪೀಠವು ವರ್ಣರಂಜಿತವಾಗಿರಬಾರದು. ದರ್ಭೆಯಿಂದ ಪವಿತ್ರಪಾಣಿಯಾಗಿರಬೇಕು (೨೩). ಸ್ನಾನ, ಭೋಜನ, ಹೋಮ, ಜಪಕಾಲಗಳಲ್ಲಿಯೂ ಮಲಮೂತ್ರ ವಿಸರ್ಜನ ಸಮಯದಲ್ಲಿಯೂ ಮೌನದಿಂದ ಇರಬೇಕು. ಉಗುರು ಮತ್ತು ರೋಮಗಳನ್ನು—ಬಗಲು ಗುಹ್ಯಸ್ಥಾನಗಳಲ್ಲಿ ಇರತಕ್ಕವನ್ನೂ ಸಹ—ಕತ್ತರಿಸಬಾರದು (೨೪). ಸ್ವಯಂ

**ಅಗ್ನ್ಯರ್ಕಾಚಾರ್ಯಗೋವಿಪ್ರಗುರುವೃದ್ಧಸುರಾನ್ ಶುಚಿಃ ।**
**ಸಮಾಹಿತ ಉಪಾಸೀತ ಸಂಧ್ಯೇ ಚ ಯತವಾಗ್ ಜಪನ್ ॥ ೨೬**

**ಆಚಾರ್ಯಂ ಮಾಂ ವಿಜಾನೀಯಾನ್ನಾವಮನ್ಯೇತ ಕರ್ಹಿಚಿತ್ ।**
**ನ ಮರ್ತ್ಯಬುದ್ಧ್ಯಾಸೂಯೇತ ಸರ್ವದೇವಮಯೋ ಗುರುಃ ॥ ೨೭**

**ಸಾಯಂ ಪ್ರಾತರುಪಾನೀಯ ಭೈಕ್ಷ್ಯಂ ತಸ್ಮೈ ನಿವೇದಯೇತ್ ।**
**ಯಚ್ಚಾನ್ಯದಪ್ಯನುಜ್ಞಾತಮುಪಯುಂಜೀತ ಸಂಯತಃ ॥ ೨೮**

**ಶುಶ್ರೂಷಮಾಣ ಆಚಾರ್ಯಂ ಸದೋಪಾಸೀತ ನೀಚವತ್ ।**
**ಯಾನಶಯ್ಯಾಸನಸ್ಥಾನೈರ್ನಾತಿದೂರೇ ಕೃತಾಂಜಲಿಃ ॥ ೨೯**

---

ಬ್ರಹ್ಮಚರ್ಯವ್ರತವನ್ನು ಪಾಲಿಸುತ್ತ ಯಾವ ಸಮಯದಲ್ಲಿಯೂ ವೀರ್ಯಸ್ಖಲನವಾಗದಂತೆ ನೋಡಿಕೊಳ್ಳಬೇಕು. ಅಕಸ್ಮಾತ್ ಗೊತ್ತಿಲ್ಲದೆ ಆಗಿಬಿಟ್ಟರೆ ನೀರಲ್ಲಿ ಮುಳುಗಿ ಸ್ನಾನಮಾಡಿ ಪ್ರಾಣಾಯಾಮಪೂರ್ವಕ ಗಾಯತ್ರಿಯನ್ನು ಜಪಿಸತಕ್ಕದ್ದು (೨೫). ಸದಾ ಶುಚಿಯಾಗಿದ್ದು ಸಮಾಹಿತನಾಗಿ ಅಗ್ನಿ, ಸೂರ್ಯ, ಆಚಾರ್ಯ, ಗೋವು, ವಿಪ್ರ, ಗುರು, ವೃದ್ಧ, ದೇವತೆಗಳು—ಇವರನ್ನು ಸೇವಿಸುತ್ತ [1]ಉಭಯಸಂಧ್ಯಾಕಾಲಗಳಲ್ಲಿಯೂ ಮೌನದಿಂದಿದ್ದು ಸಂಧ್ಯಾವಂದನೆಯನ್ನು ಆಚರಿಸಬೇಕು (೨೬). ಆಚಾರ್ಯನನ್ನು ಈಶ್ವರನಾದ ನಾನೆಂದು ತಿಳಿಯಬೇಕು. ಎಂದಿಗೂ ಆತನನ್ನು ಕಡೆಗಾಣಿಸಕೂಡದು. ಅವನೊಬ್ಬ ಮನುಷ್ಯ ಮಾತ್ರನೆಂದು ಭಾವಿಸಿ ದೋಷವನ್ನೆಣಿಸಬಾರದು. ಗುರುವೆಂದರೆ ಸರ್ವದೇವತಾ ಸ್ವರೂಪನೇ ಸರಿ (೨೭). ಪ್ರಾತಃಕಾಲ ಸಾಯಂಕಾಲಗಳಲ್ಲಿ ತಂದ ಭಿಕ್ಷಾನ್ನವನ್ನು, ಹಾಗೆಯೇ ಇನ್ನೇನಾದರೂ ದೊರಕಿದರೆ ಅದನ್ನೂ ಗುರುವಿಗೆ ನಿವೇದಿಸಿ, ಅವನ ಅನುಜ್ಞೆಯನ್ನು ಪಡೆದು ಸಂಯಮದಿಂದ ಭುಂಜಿಸತಕ್ಕದ್ದು (೨೮). ಬ್ರಹ್ಮಚಾರಿಯು ತನ್ನ ಆಚಾರ್ಯನನ್ನು ವಿನಯದಿಂದ ಸೇವಿಸಬೇಕು. ಆಚಾರ್ಯನು ಪ್ರಯಾಣ ಮಾಡುವಾಗ ಅವನ ಹಿಂದೆ ಹೋಗುತ್ತಲೂ ನಿದ್ರಿಸಿದಾಗ ಸಮೀಪದಲ್ಲಿ ಮಲಗಿರುತ್ತಲೂ ವಿಶ್ರಮಿಸುವಾಗ ಪಾದ ಸಂವಾಹನಾದಿಗಳಿಂದಲೂ ಕುಳಿತಿರುವಾಗ ಬಳಿಯಲ್ಲಿ ಕೈಮುಗಿದು ನಿಂತುಕೊಂಡೂ

---

1. ಮಧ್ಯಾಹ್ನ ಸಂಧ್ಯಾಸಮಯದಲ್ಲಿ ಮೌನವ್ರತವಿಲ್ಲ. ಆಚಾರ್ಯ – ವೇದಾಧ್ಯಾಪಕ, ಗುರು – ಶಾಸ್ತ್ರಾಧ್ಯಾಪಕ.

ಏವಂವೃತ್ತೋ ಗುರುಕುಲೇ ವಸೇದ್ ಭೋಗವಿವರ್ಜಿತಃ ।
ವಿದ್ಯಾ ಸಮಾಪ್ಯತೇ ಯಾವದ್ ಬಿಭ್ರದ್ ವ್ರತಮಖಂಡಿತಮ್ ॥ ೩೦

ಯದ್ಯಸೌ ಛಂದಸಾಂ ಲೋಕಮಾರೋಕ್ಷ್ಯನ್ ಬ್ರಹ್ಮವಿಷ್ಟಪಮ್ ।
ಗುರವೇ ವಿನ್ಯಸೇದ್ದೇಹಂ ಸ್ವಾಧ್ಯಾಯಾರ್ಥಂ ಬೃಹದ್ವ್ರತಃ ॥ ೩೧

ಅಗ್ನೌ ಗುರಾವಾತ್ಮನಿ ಚ ಸರ್ವಭೂತೇಷು ಮಾಂ ಪರಮ್ ।
ಅಪೃಥಗ್ಧೀರುಪಾಸೀತ ಬ್ರಹ್ಮವರ್ಚಸ್ವ್ಯಕಲ್ಮಷಃ ॥ ೩೨

ಸ್ತ್ರೀಣಾಂ ನಿರೀಕ್ಷಣಸ್ಪರ್ಶಸಂಲಾಪಕ್ಷ್ವೇಲನಾದಿಕಮ್ ।
ಪ್ರಾಣಿನೋ ಮಿಥುನೀಭೂತಾನಗೃಹಸ್ಥೋಽಗ್ರತಸ್ತ್ಯಜೇತ್ ॥ ೩೩

---

ಶುಶ್ರೂಷೆ ಮಾಡಬೇಕು (೨೯). ಈ ಪ್ರಕಾರವಾಗಿ ನಡೆದುಕೊಳ್ಳುತ್ತ, ಅಖಂಡವಾಗಿ ಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತ, ಭೋಗಾಪೇಕ್ಷೆಯನ್ನು ವರ್ಜಿಸಿ, ವಿದ್ಯಾರ್ಜನೆಯು ಮುಗಿಯುವವರೆಗೂ ಗುರುಕುಲದಲ್ಲಿ ಇರತಕ್ಕದ್ದು (೩೦). ಒಂದು ವೇಳೆ ಈ ಬ್ರಹ್ಮಚಾರಿಯು ವೇದಗಳ ನಿವಾಸಭೂಮಿಯಾದ ಬ್ರಹ್ಮಲೋಕಕ್ಕೆ ಹೋಗಬೇಕೆಂದು ಬಯಸುವುದಾದರೆ, ಆಗ ಬೃಹತ್ತಾದ ನೈಷ್ಠಿಕ [1]ಬ್ರಹ್ಮಚರ್ಯ ವ್ರತವನ್ನು ಸ್ವೀಕರಿಸಿ ಇನ್ನೂ ಹೆಚ್ಚಿನ ವೇದಾಧ್ಯಯನಕ್ಕಾಗಿ ತನ್ನ ದೇಹವನ್ನು ಗುರುವಿಗೆ ಅರ್ಪಿಸಿಕೊಳ್ಳಬೇಕು (೩೧). ಆ ನೈಷ್ಠಿಕ ಬ್ರಹ್ಮಚಾರಿಯು ಪರಿಶುದ್ಧವಾದ ಆಚಾರವನ್ನು ಪಾಲಿಸುತ್ತ, ಅಗ್ನಿಯಲ್ಲಿಯೂ ಗುರುವಿನಲ್ಲಿಯೂ ತನ್ನಲ್ಲಿಯೂ ಸಕಲ ಪ್ರಾಣಿಗಳಲ್ಲಿಯೂ ನಾನು ಏಕರೂಪದಲ್ಲಿದ್ದೇನೆಂದು ತಿಳಿದು ನನ್ನ ಉಪಾಸನೆಯನ್ನು ಮಾಡತಕ್ಕದ್ದು (೩೨). ಗೃಹಸ್ಥರಲ್ಲದ ಯಾರೊಬ್ಬರೂ ಸ್ತ್ರೀಯರನ್ನು ಭಾವಗರ್ಭವಾಗಿ ನೋಡಕೂಡದು, ಮುಟ್ಟಕೂಡದು. ಅವರೊಡನೆ ಭಾವಪೂರ್ವಕವಾಗಿ ಮಾತಾಡಕೂಡದು, ಪರಿಹಾಸಾದಿಗಳಲ್ಲಿ ತೊಡಗಕೂಡದು. ಮೈಥುನದಲ್ಲಿ ತೊಡಗಿದ ಪ್ರಾಣಿಗಳನ್ನಂತೂ ದೂರದಿಂದಲೂ ನೋಡಕೂಡದು (೩೩).

---

1. ಉಪಕುರ್ವಾಣ, ನೈಷ್ಠಿಕ ಎಂದು ಬ್ರಹ್ಮಚಾರಿಯು ದ್ವಿವಿಧ. ಉಪಕುರ್ವಾಣನು ಮುಂದೆ ಗೃಹಸ್ಥನಾಗುತ್ತಾನೆ. ನೈಷ್ಠಿಕನು ಸದಾ ಬ್ರಹ್ಮಚಾರಿಯಾಗಿಯೇ ಉಳಿಯುತ್ತಾನೆ.

ಶೌಚಮಾಚಮನಂ ಸ್ನಾನಂ ಸಂಧ್ಯೋಪಾಸನಮಾರ್ಜವಮ್ ।
ತೀರ್ಥಸೇವಾ ಜಪೋಽಸ್ಪೃಶ್ಯಾಭಕ್ಷ್ಯಾಸಂಭಾಷ್ಯವರ್ಜನಮ್ ॥ ೩೪

ಸರ್ವಾಶ್ರಮಪ್ರಯುಕ್ತೋಽಯಂ ನಿಯಮಃ ಕುಲನಂದನ ।
ಮದ್ಭಾವಃ ಸರ್ವಭೂತೇಷು ಮನೋವಾಕ್ಕಾಯಸಂಯಮಃ ॥ ೩೫

ಏವಂ ಬೃಹದ್ವ್ರತಧರೋ ಬ್ರಾಹ್ಮಣೋಽಗ್ನಿರಿವ ಜ್ವಲನ್ ।
ಮದ್ಭಕ್ತಸ್ತೀವ್ರತಪಸಾ ದಗ್ಧಕರ್ಮಾಶಯೋಽಮಲಃ ॥ ೩೬

ಅಥಾನಂತರಮಾವೇಕ್ಷ್ಯನ್ ಯಥಾಜಿಜ್ಞಾಸಿತಾಗಮಃ ।
ಗುರವೇ ದಕ್ಷಿಣಾಂ ದತ್ತ್ವಾ ಸ್ನಾಯಾದ್ ಗುರ್ವನುಮೋದಿತಃ ॥ ೩೭

ಗೃಹಂ ವನಂ ವೋಪವಿಶೇತ್ ಪ್ರವ್ರಜೇದ್ ವಾ ದ್ವಿಜೋತ್ತಮಃ ।
ಆಶ್ರಮಾದಾಶ್ರಮಂ ಗಚ್ಛೇನ್ನಾನ್ಯಥಾ ಮತ್ಪರಶ್ಚರೇತ್ ॥ ೩೮

---

ಕುಲನಂದನ—ಉದ್ಧವ, ಸಮಸ್ತ ಆಶ್ರಮದವರೂ ಪಾಲಿಸಬೇಕಾದ ಧರ್ಮವು ಯಾವುದೆಂದರೆ—ಶುಚಿತ್ವ, ಆಚಮನ, ಸ್ನಾನ, ಸಂಧ್ಯೋಪಾಸನೆ, ಋಜುತ್ವ, ಪೂಜ್ಯವಸ್ತುಸೇವೆ, ಜಪ, ಅಸ್ಪೃಶ್ಯವಸ್ತು ತ್ಯಾಗ, ಅಭಕ್ಷ್ಯಗಳ ವರ್ಜನೆ ಮತ್ತು ಆಡಬಾರದ ಕೆಟ್ಟ ಮಾತನ್ನು ತ್ಯಜಿಸುವುದು (೩೪). ಅಲ್ಲದೆ ಸಕಲ ಪ್ರಾಣಿಗಳಲ್ಲಿಯೂ ನಾನು ಇದ್ದೇನೆಂದು ತಿಳಿಯುವುದು, ಮನಸ್ಸು ವಾಕ್ ಕಾಯಗಳಲ್ಲಿ ಸಂಯಮ—ಇವು ಸರ್ವರಿಗೂ ಅನ್ವಯಿಸುವ ಧರ್ಮಗಳು (೩೫). ಈ ಪ್ರಕಾರ ಬೃಹದ್ವ್ರತವನ್ನು ಪಾಲಿಸುವ ನೈಷ್ಠಿಕ ಬ್ರಹ್ಮಚಾರಿಯು ಅಗ್ನಿಯಂತೆ ಪ್ರಕಾಶಿಸುತ್ತ, ತೀವ್ರವಾದ ತಪಸ್ಸಿನಿಂದ ತನ್ನ ಕರ್ಮರಾಶಿಯನ್ನು ಸುಟ್ಟುಹಾಕಿ ನಿರ್ಮಲನಾಗಿ ನನ್ನ ಭಕ್ತನಾಗುವನು (೩೬) ಗೃಹಸ್ಥಾಶ್ರಮವನ್ನು ಪ್ರವೇಶಿಸಲಿಚ್ಛಿಸುವ ಉಪಕುರ್ವಾಣ ಬ್ರಹ್ಮಚಾರಿಯಾದರೋ ವೇದಾಧ್ಯಯನವಾದಮೇಲೆ ವೇದಾರ್ಥವನ್ನು ತಿಳಿದುಕೊಂಡು, [1]ಗುರುದಕ್ಷಿಣೆಯನ್ನಿತ್ತು, ಗುರುವಿನ ಅನುಮತಿಯನ್ನು ಪಡೆದು [2]ಸಮಾವರ್ತನೆ ಮಾಡಿಕೊಳ್ಳಬೇಕು (೩೭). ಆತನು (ಸಕಾಮನಾಗಿದ್ದರೆ) ಗೃಹಸ್ಥಾಶ್ರಮ

---

1. ಅನಂತರ ಬ್ರಹ್ಮಜ್ಞಾನವನ್ನು ಪಡೆದು ಮುಕ್ತನಾಗುವನು ಎಂದು ಅಭಿಪ್ರಾಯ.

2. ಸಂ + ಆವರ್ತನ = ಸಮಾವರ್ತನ ; ಸ್ನಾನಮಾಡಿ ಗುರುಕುಲದಿಂದ ಹಿಂದಿರುಗುವುದು ಸಮಾವರ್ತನ.

ಗೃಹಾರ್ಥೀ ಸದೃಶೀಂ ಭಾರ್ಯಾಮುದ್ವಹೇದಜುಗುಪ್ಸಿತಾಮ್ ।
ಯವೀಯಸೀಂ ತು ವಯಸಾ ತಾಂ ಸವರ್ಣಾಮನುಕ್ರಮಾತ್ ॥ ೩೯

ಇಜ್ಯಾಧ್ಯಯನದಾನಾನಿ ಸರ್ವೇಷಾಂ ಚ ದ್ವಿಜನ್ಮನಾಮ್ ।
ಪ್ರತಿಗ್ರಹೋಽಧ್ಯಾಪನಂ ಚ ಬ್ರಾಹ್ಮಣಸ್ಯೈವ ಯಾಜನಮ್ ॥ ೪೦

ಪ್ರತಿಗ್ರಹಂ ಮನ್ಯಮಾನಸ್ತಪಸ್ತೇಜೋಯಶೋನುದಮ್ ।
ಅನ್ಯಾಭ್ಯಾಮೇವ ಜೀವೇತ ಶಿಲೈರ್ವಾ ದೋಷದೃಕ್ ತಯೋಃ ॥ ೪೧

---

ವನ್ನೂ (ಚಿತ್ತಶುದ್ಧಿಯನ್ನು ಬಯಸತಕ್ಕವನಾಗಿದ್ದರೆ) ವಾನಪ್ರಸ್ಥಾಶ್ರಮವನ್ನೂ ಸ್ವೀಕರಿಸಬಹುದು. ಆ ಬ್ರಾಹ್ಮಣನು (ಶುದ್ಧಚಿತ್ತನೇ ಆಗಿದ್ದರೆ) ಸಂನ್ಯಾಸವನ್ನು ಸ್ವೀಕರಿಸಬೇಕು. ಅಥವಾ ಕ್ರಮವಾಗಿ ಒಂದು ಆಶ್ರಮದಿಂದ ಇನ್ನೊಂದು ಆಶ್ರಮಕ್ಕೆ ಮುಂದುವರಿಯುತ್ತ ಹೋಗಬಹುದು. ಹಾಗಿಲ್ಲದಿದ್ದರೆ ನನ್ನ [1]ಭಕ್ತನಾಗಿಯೇ ಉಳಿದುಬಿಡಬಹುದು (೩೮). ಗೃಹಸ್ಥಾಶ್ರಮವನ್ನು ಪ್ರವೇಶಿಸತಕ್ಕವನು ತನ್ನ ಗುಣಕ್ಕೆ ಸದೃಶಳಾದ ಸವರ್ಣಳೂ ಕುಲದಲ್ಲಾಗಲಿ ಲಕ್ಷಣದಲ್ಲಾಗಲಿ ದೋಷ ರಹಿತಳೂ ವಯಸ್ಸಿನಿಂದ ಕಿರಿಯಳೂ ಆದ ಕನ್ಯೆಯನ್ನು ಮದುವೆಯಾಗಬೇಕು. ಸವರ್ಣೆಯನ್ನು ಮದುವೆಯಾದ ಮೇಲೆ, ಇಚ್ಛೆಯಾದರೆ ತನಗಿಂತ ಕೆಳವರ್ಣ ದವಳನ್ನು ಸ್ವೀಕರಿಸಬಹುದು (೩೯). ದ್ವಿಜರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಯಜ್ಞ, ವೇದಾಧ್ಯಯನ ಮತ್ತು ದಾನಗಳು ವಿಹಿತವಾಗಿದೆ. ಯಾಜನ, ವೇದಾಧ್ಯಾಪನ, ಪ್ರತಿಗ್ರಹಗಳು ಬ್ರಾಹ್ಮಣನಿಗೆ ಮಾತ್ರ ವಿಹಿತವಾಗಿದೆ. ಪ್ರತಿಗ್ರಹವು ತಪಸ್ಸನ್ನೂ ತೇಜಸ್ಸನ್ನೂ ಕೀರ್ತಿಯನ್ನೂ ನಾಶಪಡಿಸುತ್ತದೆಯೆಂದು ಭಾವಿಸ ತಕ್ಕವನು ಅಧ್ಯಾಪನಯಾಜನಗಳೆರಡರಿಂದಲೇ ಜೀವಿಸಬೇಕು. ಅಧ್ಯಾಪನಯಾಜನ ಗಳಲ್ಲಿಯೂ ಕಾರ್ಪಣ್ಯಾದಿ ದೋಷವಿದೆಯೆಂದು ಭಾವಿಸತಕ್ಕವನು ಅವುಗಳನ್ನೂ ತ್ಯಜಿಸಿ [2]ಶಿಲಗಳಿಂದ (ಅಥವಾ ಉಂಛವೃತ್ತಿಯಿಂದ) ಜೀವಿಸಬೇಕು (೪೦–೪೧).

---

1. ಭಕ್ತನಿಗೆ ಆಶ್ರಮನಿಯಮವಿಲ್ಲವೆಂದು ಮುಂದೆ ಹೇಳಿದೆ 'ಅನಾಶ್ರಮೀ ನ ತಿಷ್ಠೇತ' ಎಂಬ ನಿಯಮವು ಭಕ್ತನಿಗಿಲ್ಲ.

2. ಶಿಲ — ಹೊಲಗದ್ದೆಗಳಲ್ಲಿ ರೈತನು ಬೀಳಿಸಿಹೋದ ಧಾನ್ಯ.
ಉಂಛವೃತ್ತಿ — ಅಂಗಡಿಬೀದಿಗಳಲ್ಲಿ ಉದುರಿದ ಕಾಳುಗಳನ್ನಾರಿಸುವುದು.

ಬ್ರಾಹ್ಮಣಸ್ಯ ಹಿ ದೇಹೋऽಯಂ ಕ್ಷುದ್ರಕಾಮಾಯ ನೇಷ್ಯತೇ ।
ಕೃಚ್ಛ್ರಾಯ ತಪಸೇ ಚೇಹ ಪ್ರೇತ್ಯಾನಂತಸುಖಾಯ ಚ ॥ ೪೨

ಶಿಲೋಂಛವೃತ್ತ್ಯಾ ಪರಿತುಷ್ಟಚಿತ್ತೋ
ಧರ್ಮಂ ಮಹಾಂತಂ ವಿರಜಂ ಜುಷಾಣಃ ।
ಮಯ್ಯರ್ಪಿತಾತ್ಮಾ ಗೃಹ ಏವ ತಿಷ್ಠ-
ನ್ನಾತಿಪ್ರಸಕ್ತಃ ಸಮುಪೈತಿ ಶಾಂತಿಮ್ ॥ ೪೩

ಸಮುದ್ಧರಂತಿ ಯೇ ವಿಪ್ರಂ ಸೀದಂತಂ ಮತ್ಪರಾಯಣಮ್ ।
ತಾನುದ್ಧರಿಷ್ಯೇ ನಚಿರಾದಾಪದ್ಭ್ಯೋ ನೌರಿವಾರ್ಣವಾತ್ ॥ ೪೪

ಸರ್ವಾಃ ಸಮುದ್ಧರೇದ್ ರಾಜಾ ಪಿತೇವ ವ್ಯಸನಾತ್ಪ್ರಜಾಃ ।
ಆತ್ಮಾನಮಾತ್ಮನಾ ಧೀರೋ ಯಥಾ ಗಜಪತಿರ್ಗಜಾನ್ ॥ ೪೫

ಏವಂವಿಧೋ ನರಪತಿರ್ವಿಮಾನೇನಾರ್ಕವರ್ಚಸಾ ।
ವಿಧೂಯೇಹಾಶುಭಂ ಕೃತ್ಸ್ನಮಿಂದ್ರೇಣ ಸಹ ಮೋದತೇ ॥ ೪೬

---

ಏಕೆಂದರೆ, ಬ್ರಾಹ್ಮಣನ ಈ ದೇಹವು ಕ್ಷುದ್ರವಾದ ವಿಷಯಸುಖದ ಕಾಮನೆಗಾಗಿ ಬಂದದ್ದಲ್ಲ. ಈ ಲೋಕದಲ್ಲಿ ಕಠಿಣವಾದ ತಪಸ್ಸನ್ನಾಚರಿಸುವುದಕ್ಕಾಗಿಯೂ ಮರಣಾನಂತರದಲ್ಲಿ ಶಾಶ್ವತ ಸುಖವನ್ನು ಪಡೆಯುವುದಕ್ಕಾಗಿಯೂ ಬಂದಿದೆ (೪೨). ಶಿಲವೃತ್ತಿಯಿಂದಲೂ ಉಂಛವೃತ್ತಿಯಿಂದಲೂ ಸಂತೃಪ್ತನಾಗಿ ಜೀವಿಸುತ್ತ, ಪರಿಶುದ್ಧವೂ ಮಹತ್ತರವೂ ಆದ ಧರ್ಮವನ್ನಾಚರಿಸುತ್ತ, ಯಾವ ಪ್ರಮಾದವನ್ನೂ ಮಾಡದೆ ತನ್ನ ಚಿತ್ತವನ್ನು ನನಗೆ ಅರ್ಪಿಸಿದ ಭಕ್ತನು ಗೃಹಸ್ಥನಾಗಿಯೇ ಇದ್ದರೂ ಶಾಂತಿಯೆನಿಸಿದ ಮೋಕ್ಷವನ್ನೈದುವನು (೪೩). ವಿಪ್ರನಾಗಿರಲಿ ಅನ್ಯನೇ ಆಗಿರಲಿ, ಯಾವಾತನು ನನ್ನ ಭಕ್ತನಾಗಿರುವನೋ ಆತನನ್ನು ಉದ್ಧರಿಸತಕ್ಕವರನ್ನು ನಾನು ಉದ್ಧರಿಸುತ್ತೇನೆ. ಸಮುದ್ರದಲ್ಲಿ ಮುಳುಗುತ್ತಿರುವವನನ್ನು ದೋಣಿಯು ಪಾರು ಮಾಡುವಂತೆ ನಾನು ಅವರನ್ನು ಶೀಘ್ರದಲ್ಲಿ ಆಪತ್ತುಗಳಿಂದ ಪಾರುಮಾಡುತ್ತೇನೆ (೪೪). ರಾಜನು ತಂದೆಯಂತಿದ್ದು ಪ್ರಜೆಗಳನ್ನು ಕಷ್ಟದಿಂದ ರಕ್ಷಿಸಬೇಕು. ಆತನು ಧೀರನಾಗಿದ್ದು ತನ್ನನ್ನು ತಾನೇ ರಕ್ಷಿಸಿಕೊಳ್ಳುವುದಲ್ಲದೆ, ಸಲಗವು ತನ್ನ ಬಳಗದ ಆನೆಗಳನ್ನು ಪಾಲಿಸುವಂತೆ, ಪ್ರಜೆಗಳನ್ನು ಪಾಲಿಸುತ್ತಿರಬೇಕು (೪೫). ಈ ಪ್ರಕಾರ ವರ್ತಿಸುವ ರಾಜನು ತನ್ನ ಎಲ್ಲ ಅಶುಭಗಳನ್ನೂ ಇಲ್ಲಿಯೇ ಕೊಡವಿ

ಸೀದನ್ ವಿಪ್ರೋ ವಣಿಗ್ವೃತ್ತ್ಯಾ ಪಣ್ಯೈರೇವಾಪದಂ ತರೇತ್ ।
ಖಡ್ಗೇನ ವಾಽಽಪದಾಕ್ರಾಂತೋ ನ ಶ್ವ ವೃತ್ತ್ಯಾ ಕಥಂಚನ ॥ ೪೭

ವೈಶ್ಯವೃತ್ತ್ಯಾ ತು ರಾಜನ್ಯೋ ಜೀವೇನ್ಮೃಗಯಯಾಽಽಪದಿ ।
ಚರೇದ್ ವಾ ವಿಪ್ರರೂಪೇಣ ನ ಶ್ವವೃತ್ತ್ಯಾ ಕಥಂಚನ ॥ ೪೮

ಶೂದ್ರವೃತ್ತಿಂ ಭಜೇದ್ ವೈಶ್ಯಃ ಶೂದ್ರಃ ಕಾರುಕಟಕ್ರಿಯಾಮ್ ।
ಕೃಚ್ಛ್ರಾನ್ಮುಕ್ತೋ ನ ಗರ್ಹ್ಯೇಣ ವೃತ್ತಿಂ ಲಿಪ್ಸೇತ ಕರ್ಮಣಾ ॥ ೪೯

ವೇದಾಧ್ಯಾಯಸ್ವಧಾಸ್ವಾಹಾಬಲ್ಯನ್ನಾದ್ಯೈರ್ಯಥೋದಯಮ್ ।
ದೇವರ್ಷಿಪಿತೃಭೂತಾನಿ ಮದ್ರೂಪಾಣ್ಯನ್ವಹಂ ಯಜೇತ್ ॥ ೫೦

---

ಹಾಕಿ, ಸೂರ್ಯಸಮಾನವಾಗಿ ಬೆಳಗುವ ವಿಮಾನದಲ್ಲಿ ಕುಳಿತು ದೇವೇಂದ್ರನೊಡನೆ ಆನಂದಿಸುತ್ತ ಇರುವನು (೪೬). ಆಪತ್ತಿಗೆ ಸಿಕ್ಕಿದಾಗ ಬ್ರಾಹ್ಮಣನು ಮಾರಾಟಕ್ಕೆ ಅರ್ಹವಾದ[1] ವಸ್ತುಗಳನ್ನು ಮಾರಿ ವಾಣಿಜ್ಯ ವೃತ್ತಿಯಿಂದ ಆಪತ್ತನ್ನು ನೀಗಿಕೊಳ್ಳಬಹುದು. ಅಥವಾ ಖಡ್ಗವನ್ನು ಹಿಡಿದು ಕ್ಷತ್ರಿಯವೃತ್ತಿಯನ್ನಾದರೂ ಅವಲಂಬಿಸಬಹುದು. ಆದರೆ ನೀಚಸೇವೆಯಿಂದ ಮಾತ್ರ ಎಂದಿಗೂ ಜೀವಿಸಬಾರದು (೪೭). ಕ್ಷತ್ರಿಯನು ಆಪತ್ಕಾಲದಲ್ಲಿ ವೈಶ್ಯವೃತ್ತಿಯಾದ ವ್ಯಾಪಾರದಿಂದಾಗಲಿ, ಬೇಟೆಯಿಂದಾಗಲಿ ಜೀವಿಸಬಹುದು. ಅಥವಾ ಬ್ರಾಹ್ಮಣ ವೃತ್ತಿಗಳಾದ ಅಧ್ಯಾಪನಾದಿಗಳನ್ನೂ ಸ್ವೀಕರಿಸಬಹುದು. ನೀಚಸೇವೆಯನ್ನು ಅವಲಂಬಿಸಬಾರದು (೪೮). ಹೀಗೆಯೇ ಆಪತ್ಕಾಲದಲ್ಲಿ ವೈಶ್ಯನು ಶೂದ್ರವೃತ್ತಿಯನ್ನೂ ಶೂದ್ರನು ಬಡಗಿಯ ಕೆಲಸ, ಚಾಪೆ ಹೆಣೆಯುವುದು—ಮುಂತಾದ ವೃತ್ತಿಯನ್ನೂ ಅವಲಂಬಿಸಬೇಕು. ಆಪತ್ಕಾಲವನ್ನು ದಾಟಿದ ಮೇಲೆ ಯಾರೂ ಅವರಿಗೆ ನಿಂದ್ಯವಾದ ಇಂತಹ ವೃತ್ತಿಯನ್ನು ಬಯಸಬಾರದು (೪೯). ಗೃಹಸ್ಥನಾದ ದ್ವಿಜನು ಪ್ರತಿದಿನವೂ ಬ್ರಹ್ಮಯಜ್ಞ, ಪಿತೃಯಜ್ಞ, ದೇವಯಜ್ಞ, ಬಲಿಹರಣ, ಅನ್ನದಾನರೂಪ ಮನುಷ್ಯಯಜ್ಞಗಳಿಂದ ಕ್ರಮವಾಗಿ ನನ್ನ ಸ್ವರೂಪರೇ ಆದ ಋಷಿ, ಪಿತೃ, ದೇವ, ಭೂತ, ಮನುಷ್ಯರನ್ನು ತನ್ನಯೋಗ್ಯತೆಗೆ ಅನುಗುಣವಾಗಿ ತೃಪ್ತಿಗೊಳಿಸುತ್ತಿರಬೇಕು (೫೦).

---

1. ಹೆಂಡ, ಉಪ್ಪು, ಅನ್ನ—ಮುಂತಾದ್ದನ್ನು ಬ್ರಾಹ್ಮಣನು ಮಾರಬಾರದು. ಶ್ವವೃತ್ತಿ = ನೀಚಸೇವೆ.

**ಯದೃಚ್ಛಯೋಪಪನ್ನೇನ ಶುಕ್ಲೇನೋಪಾರ್ಜಿತೇನ ವಾ ।**
**ಧನೇನಾಪೀಡಯನ್ ಭೃತ್ಯಾನ್ ನ್ಯಾಯೇನೈವಾಹರೇತ್ ಕ್ರತೂನ್ ॥ ೫೧**

**ಕುಟುಂಬೇಷು ನ ಸಜ್ಜೇತ ನ ಪ್ರಮಾದ್ಯೇತ್ ಕುಟುಂಬ್ಯಪಿ ।**
**ವಿಪಶ್ಚಿನ್ನಶ್ವರಂ ಪಶ್ಯೇದದೃಷ್ಟಮಪಿ ದೃಷ್ಟವತ್ ॥ ೫೨**

**ಪುತ್ರದಾರಾಪ್ತಬಂಧೂನಾಂ ಸಂಗಮಃ ಪಾಂಥಸಂಗಮಃ ।**
**ಅನುದೇಹಂ ವಿಯಂತ್ಯೇತೇ ಸ್ವಪ್ನೋ ನಿದ್ರಾನುಗೋ ಯಥಾ ॥ ೫೩**

**ಇತ್ಥಂ ಪರಿಮೃಶನ್ಮುಕ್ತೋ ಗೃಹೇಷ್ವತಿಥಿವದ್ ವಸನ್ ।**
**ನ ಗೃಹೈರನುಬಧ್ಯೇತ ನಿರ್ಮಮೋ ನಿರಹಂಕೃತಃ ॥ ೫೪**

**ಕರ್ಮಭಿರ್ಗೃಹಮೇಧೀಯೈರಿಷ್ಟ್ವಾ ಮಾಮೇವ ಭಕ್ತಿಮಾನ್ ।**
**ತಿಷ್ಠೇದ್ ವನಂ ವೋಪವಿಶೇತ್ ಪ್ರಜಾವಾನ್ ವಾ ಪರಿವ್ರಜೇತ್ ॥ ೫೫**

---

ತಾನಾಗಿ ಬಂದದ್ದಾಗಲಿ ಅಥವಾ ತಾನು ಸಂಪಾದಿಸಿದ್ದಾಗಲಿ, ಒಟ್ಟಿನಲ್ಲಿ ಪರಿಶುದ್ಧವಾದ ಧನದಿಂದ ವಿಧಿವತ್ತಾಗಿ ಯಜ್ಞಗಳನ್ನಾಚರಿಸಬೇಕು. ಆದರೆ ಧನವ್ಯಯ ಮಾಡಿ ತನ್ನ ಪೋಷ್ಯವರ್ಗದವರನ್ನು ಪೀಡಿಸಬಾರದು (೫೧). ಗೃಹಸ್ಥನಾದರೂ ಕುಟುಂಬವರ್ಗದವರಲ್ಲಿ ವ್ಯಾಮೋಹದಿಂದ ಅನುರಕ್ತನಾಗಿ ಪ್ರಮಾದವನ್ನೆಸಗಬಾರದು ವಿದ್ವಾಂಸನಾದವನು ಅದೃಷ್ಟವಾದ ಸ್ವರ್ಗಾದಿ ಫಲವನ್ನೂ ದೃಷ್ಟಫಲದಂತೆಯೇ ನಶ್ವರವೆಂದು ತಿಳಿಯತಕ್ಕದ್ದು (೫೨). ಮಡದಿ ಮಕ್ಕಳ ಮತ್ತು ಮಿತ್ರಬಂಧುಗಳ ಸಂಗಮವು ಬೇರೆ ಬೇರೆ ಪ್ರಯಾಣಿಕರು ಒಂದೆಡೆ (ನಿಲ್ದಾಣದಲ್ಲಿ) ಸಂಗಮಿಸಿದ ಹಾಗೆಯೇ ಸರಿ ದೇಹದ ಜೊತೆಗೆ ಇವರೆಲ್ಲರೂ ಹೊರಟುಹೋಗತಕ್ಕವರೇ. ನಿದ್ರೆಯ ಜೊತೆಗೆ ಸ್ವಪ್ನದ ವ್ಯಕ್ತಿಗಳು ಹೋದ ಹಾಗೆಯೇ (೫೩). ಈ ರೀತಿಯಾಗಿ ನನ್ನ ಭಕ್ತನು ಗೃಹದಲ್ಲಿ ನಿರ್ಮಮನೂ ನಿರಹಂಕಾರನೂ ಆಗಿ, ಮನೆಗೆ ಬಂದ ಅತಿಥಿಯಂತೆ, ತಟಸ್ಥನಾಗಿರಬೇಕು. ಗೃಹಸಂಬಂಧಿ ವ್ಯಾಮೋಹಗಳಲ್ಲಿ ಸಿಕ್ಕಿಕೊಳ್ಳಬಾರದು. ನನ್ನ ಭಕ್ತನಾದ ಗೃಹಸ್ಥನು ಆತನಿಗೆ ವಿಹಿತವಾದ ಗೃಹಮೇಧೀಯ ಕರ್ಮಗಳಿಂದ ನನ್ನನ್ನು ಅರ್ಚಿಸುತ್ತ ಗೃಹಸ್ಥನಾಗಿಯೇ ಬೇಕಾದರೂ ಉಳಿಯಬಹುದು. ಅಥವಾ ವಾನಪ್ರಸ್ಥನಾಗಿ ವನಕ್ಕೆ ತೆರಳಬಹುದು. ಮಕ್ಕಳುಳ್ಳವನಾಗಿದ್ದರೆ ಸಂನ್ಯಾಸವನ್ನು ತೆಗೆದುಕೊಳ್ಳಬಹುದು (೫೪–೫೫).

ಯಸ್ತ್ವಾಸಕ್ತಮತಿರ್ಗೇಹೇ ಪುತ್ರವಿತ್ತೈಷಣಾತುರಃ ।
ಸ್ತ್ರೈಣಃ ಕೃಪಣಧೀರ್ಮೂಢೋ ಮಮಾಹಮಿತಿ ಬಧ್ಯತೇ ॥ ೫೬
ಅಹೋ ಮೇ ಪಿತರೌ ವೃದ್ಧೌ ಭಾರ್ಯಾ ಬಾಲಾತ್ಮಜಾತ್ಮಜಾಃ ।
ಅನಾಥಾ ಮಾಮೃತೇ ದೀನಾಃ ಕಥಂ ಜೀವಂತಿ ದುಃಖಿತಾಃ ॥ ೫೭
ಏವಂ ಗೃಹಾಶಯಾಕ್ಷಿಪ್ತಹೃದಯೋ ಮೂಢಧೀರಯಮ್ ।
ಅತೃಪ್ತಸ್ತಾನನುಧ್ಯಾಯನ್ ಮೃತೋಽಂಧಂ ವಿಶತೇ ತಮಃ ॥ ೫೮

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಸಪ್ತದಶಾಧ್ಯಾಯಃ



ಆದರೆ ಸಂಸಾರದಲ್ಲಿ ಅನುರಕ್ತನಾಗಿ, ಮಕ್ಕಳು ಹಣ ಎಂಬ ಈಷಣೆಗೆ ಪಕ್ಕಾಗಿ, ಸ್ತ್ರೀಲಂಪಟನೂ ಕೃಪಣಬುದ್ಧಿಯುವನೂ ಆದ ಮೂಢನು 'ನನ್ನದು—ನಾನು' ಎಂದುಕೊಳ್ಳುತ್ತ ಬಂಧನಕ್ಕೆ ಒಳಗಾಗುತ್ತಾನೆ (೫೬). "ಅಯ್ಯೋ! ನನ್ನ ತಾಯಿತಂದೆಗಳಿಗೆ ವಯಸ್ಸಾಗಿದೆ, ಅವರು ಮುದುಕರು. ನನ್ನ ಹೆಂಡತಿಯು ಚಿಕ್ಕಮಕ್ಕಳನ್ನು ನೋಡಿಕೊಳ್ಳಬೇಕಾಗಿದೆ. ನಾನಿಲ್ಲದಿದ್ದರೆ ನನ್ನ ಮಕ್ಕಳು ಅನಾಥರಾಗುವರು. ಇವರೆಲ್ಲರೂ ದೀನರಾಗಿ ದುಃಖಿತರಾಗುವರು. ನಾನಿಲ್ಲದೆ ಹೋದರೆ ಇವರು ಬದುಕುವುದಾದರೂ ಹೇಗೆ?" (೫೭). ಈ ರೀತಿಯಲ್ಲಿ ಮೂಢಬುದ್ಧಿಯುವನು ಗೃಹವಾಸನೆಯಿಂದ ಸೆಳೆಯಲ್ಪಡುತ್ತಾನೆ. ಅನುಭವಿಸುವ ಸುಖದಲ್ಲಿ ಯಾವ ತೃಪ್ತಿಯನ್ನೂ ಕಾಣದೆ ಹೆಂಡತಿ ಮಕ್ಕಳನ್ನೇ ಧ್ಯಾನಿಸುತ್ತ ಒಂದು ದಿನ ಸತ್ತು ಮೂಢಯೋನಿಯಲ್ಲಿ ಜನಿಸುವನು" (೫೮).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಹದಿನೇಳನೆಯ ಅಧ್ಯಾಯ



# ಅಷ್ಟಾದಶಾಧ್ಯಾಯಃ

ಶ್ರೀಭಗವಾನುವಾಚ—

ವನಂ ವಿವಿಕ್ಷುಃ ಪುತ್ರೇಷು ಭಾರ್ಯಾಂ ನ್ಯಸ್ಯ ಸಹೈವ ವಾ ।
ವನ ಏವ ವಸೇಚ್ಛಾಂತಸ್ತೃತೀಯಂ ಭಾಗಮಾಯುಷಃ ॥ ೧

ಕಂದಮೂಲಫಲೈರ್ವನ್ಯೈರ್ಮೇಧ್ಯೈರ್ವೃತ್ತಿಂ ಪ್ರಕಲ್ಪಯೇತ್ ।
ವಸೀತ ವಲ್ಕಲಂ ವಾಸಸ್ತೃಣಪರ್ಣಾಜಿನಾನಿ ಚ ॥ ೨

ಕೇಶರೋಮನಖಶ್ಮಶ್ರುಮಲಾನಿ ಬಿಭೃಯಾದ್ ದತಃ ।
ನ ಧಾವೇದಪ್ಸು ಮಜ್ಜೇತ ತ್ರಿಕಾಲಂ ಸ್ಥಂಡಿಲೇಶಯಃ ॥ ೩

ಗ್ರೀಷ್ಮೇ ತಪ್ಯೇತ ಪಂಚಾಗ್ನೀನ್ ವರ್ಷಾಸ್ವಾಸಾರಷಾಡ್ ಜಲೇ ।
ಆಕಂಠಮಗ್ನಃ ಶಿಶಿರೇ ಏವಂವೃತ್ತಸ್ತಪಶ್ಚರೇತ್ ॥ ೪

## ಅಧ್ಯಾಯ ೧೮

### ವಾನಪ್ರಸ್ಥರ ಮತ್ತು ಸಂನ್ಯಾಸಿಗಳ ಧರ್ಮ.

ಭಗವಂತನು ಹೇಳಿದನು : “ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸತಕ್ಕವನು ಪತ್ನಿಯನ್ನು ಮಗನ ಪೋಷಣೆಯಲ್ಲಿ ಬಿಟ್ಟು ಅಥವಾ ಪತ್ನಿಯನ್ನು ಕರೆದುಕೊಂಡು ವನವನ್ನು ಪ್ರವೇಶಿಸಿ ತನ್ನ ಆಯುಸ್ಸಿನ ಮೂರನೆಯ ಭಾಗವನ್ನು ಶಾಂತಿಯಿಂದ ಕಳೆಯಬೇಕು (೧). ವನದಲ್ಲಿ ಸಿಗುವ ಭಕ್ಷಣಯೋಗ್ಯವಾದ ಕಂದಮೂಲಫಲ ಗಳಿಂದ ಜೀವನವನ್ನು ಸಾಗಿಸಬೇಕು. ನಾರು ಬಟ್ಟೆಯನ್ನೋ ಹುಲ್ಲು, ಎಲೆ, ಚರ್ಮಗಳನ್ನೋ ಧರಿಸಬೇಕು. ತಲೆಕೂದಲು, ರೋಮ, ಉಗುರು, ಗಡ್ಡಮೀಸೆ ಗಳನ್ನು ಕತ್ತರಿಸದೆ ಧರಿಸಿರಬೇಕಲ್ಲದೆ, ಹಲ್ಲುಗಳನ್ನು ದಂತಧಾವನಗಳಿಂದ ಉಜ್ಜ ಬಾರದು. ತ್ರಿಕಾಲದಲ್ಲಿಯೂ ನೀರಿನಲ್ಲಿ ಮುಳುಗಿ ಸ್ನಾನಮಾಡಬೇಕು. ನೆಲದ ಮೇಲೆ ಮಲಗತಕ್ಕದ್ದು (೨–೩). ಬೇಸಿಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿದ್ದೂ ಮಳೆ ಗಾಲದಲ್ಲಿ ಜಡಿಮಳೆಯನ್ನು ಸಹಿಸಿಕೊಳ್ಳುತ್ತಲೂ ಚಳಿಗಾಲದಲ್ಲಿ ಕತ್ತಿನವರೆಗೆ ನೀರಿ ನಲ್ಲಿ ಮುಳುಗಿಯೂ ಆಯಾ [1]ವ್ರತಗಳನ್ನಾಚರಿಸುತ್ತ ತಪಸ್ಸು ಮಾಡಬೇಕು (೪).

---

1. ತನ್ನ ಸುತ್ತಲೂ ನಾಲ್ಕುಕಡೆ ಅಗ್ನಿಗಳನ್ನಿಟ್ಟು ಸೂರ್ಯನಿಗೆ ಎದುರಾಗಿ ತಪಸ್ಸನ್ನಾ ಚರಿಸುವುದು ಪಂಚಾಗ್ನಿವ್ರತ. ಸುರಿಯುವ ಜಡಿಮಳೆಯಲ್ಲಿ ನಿಂತು ಆಚರಿಸುವ ವ್ರತಕ್ಕೆ ಅಭ್ರಾವಕಾಶವೆಂದು ಹೆಸರು. ನೀರಲ್ಲಿ ಕತ್ತಿನವರೆಗೆ ಮುಳುಗಿಕೊಂಡಿರುವುದು ಉದವಾಸ ವ್ರತ.

ಅಗ್ನಿಪಕ್ವಂ ಸಮಶ್ನೀಯಾತ್ ಕಾಲಪಕ್ವಮಥಾಪಿ ವಾ ।
ಉಲೂಖಲಾಶ್ಮಕುಟ್ಟೋ ವಾ ದಂತೋಲೂಖಲ ಏವ ವಾ ॥ ೫

ಸ್ವಯಂ ಸಂಚಿನುಯಾತ್ ಸರ್ವಮಾತ್ಮನೋ ವೃತ್ತಿಕಾರಣಮ್ ।
ದೇಶಕಾಲಬಲಾಭಿಜ್ಞೋ ನಾದದೀತಾನ್ಯದಾಹೃತಮ್ ॥ ೬

ವನ್ಯೈಶ್ಚರುಪುರೋಡಾಶೈರ್ನಿರ್ವಪೇತ್ ಕಾಲಚೋದಿತಾನ್ ।
ನ ತು ಶ್ರೌತೇನ ಪಶುನಾ ಮಾಂ ಯಜೇತ ವನಾಶ್ರಮೀ ॥ ೭

ಅಗ್ನಿಹೋತ್ರಂ ಚ ದರ್ಶಶ್ಚ ಪೂರ್ಣಮಾಸಶ್ಚ ಪೂರ್ವವತ್ ।
ಚಾತುರ್ಮಾಸ್ಯಾನಿ ಚ ಮುನೇರಾಮ್ನಾತಾನಿ ಚ ನೈಗಮೈಃ ॥ ೮

---

ವಾನಪ್ರಸ್ಥನು ಬೆಂಕಿಯಲ್ಲಿ ಬೇಯಿಸಿದ್ದನ್ನಾಗಲಿ ಕಾಲದಿಂದ ಪಕ್ವವಾದ ಹಣ್ಣು ಮುಂತಾದ್ದನ್ನಾಗಲಿ ತಿನ್ನುವ ನಿಯಮವನ್ನಿಟ್ಟುಕೊಳ್ಳಬೇಕು. ಅಥವಾ ಒರಳಲ್ಲಿ ಬೀಸಿದ್ದು ಅಥವಾ ಕಲ್ಲಿನಿಂದ ಕುಟ್ಟಿದ್ದು—ಇವನ್ನು ತಿನ್ನುವುದು, ಇಲ್ಲವೆ ಹಲ್ಲಿನಿಂದ ಅಗಿದು ತಿನ್ನುವುದು ಮಾತ್ರ—ಇವುಗಳಲ್ಲೊಂದು ನಿಯಮವನ್ನಿಟ್ಟುಕೊಳ್ಳಬೇಕು (೫). ಆತನು ದೇಶಕಾಲಬಲಗಳನ್ನರಿತವನಾಗಿ ಬದುಕಿಗೆ ಬೇಕಾದ ಆಹಾರಪದಾರ್ಥವೆಲ್ಲವನ್ನೂ ತಾನೇ ಸಂಗ್ರಹಿಸಿ ತಂದುಕೊಳ್ಳಬೇಕು. ತಂದದ್ದನ್ನು ಯಾವಾಗಲೋ ಬಳಸಬಾರದು (ಹೊಸದನ್ನು ತಂದಾಗ ಹಳೆಯದನ್ನು ವರ್ಜಿಸಬೇಕು) (೬). ವಾನಪ್ರಸ್ಥನು ಕಾಡಿನಲ್ಲಿ ಸಿಗುವ ಚರುಪುರೋಡಾಶಗಳಿಂದಲೇ ಆಗ್ರಹಾಯಣೀ ಮುಂತಾದ ಕಾಲಿಕ ಇಷ್ಟಿಗಳನ್ನಾಚರಿಸಿ ನನ್ನನ್ನು ಅರ್ಚಿಸಬೇಕು. ಪಶುವಿನಿಂದ ಶ್ರೌತಯಾಗವನ್ನು ಮಾಡತಕ್ಕದ್ದಲ್ಲ (೭). ವಾನಪ್ರಸ್ಥನಾದ ಮುನಿಗೆ ಅಗ್ನಿಹೋತ್ರ, ದರ್ಶ, ಪೂರ್ಣಮಾಸ ಮತ್ತು ಚಾತುರ್ಮಾಸ್ಯವ್ರತಗಳನ್ನು ವೇದವಿದರು ವಿಧಿಸಿರುತ್ತಾರೆ. ಹೀಗೆ ವ್ರತವನ್ನಾಚರಿಸುತ್ತ ಮೈಮೇಲೆ ಎದ್ದುಕಾಣುವ ನರನಾಡಿಗಳಿಂದ ವ್ಯಾಪ್ತನಾದ ಮುನಿಯು ತನ್ನ ತಪಸ್ಸಿನಿಂದ ತಪೋಮಯನಾದ ನನ್ನನ್ನಾರಾಧಿಸಿ [1]ಋಷಿಲೋಕದಿಂದ ಮೇಲಕ್ಕೇರಿ ನನ್ನನ್ನು ಸೇರಿಕೊಳ್ಳುವನು

---

1. ಋಷಿಲೋಕದಿಂದ ಮಹರ್ಲೋಕ ಪ್ರಾಪ್ತಿ. ಹೀಗೆ ಕ್ರಮಮುಕ್ತಿಯನ್ನೈದುತ್ತಾನೆ. ಹಾಗಲ್ಲದೆ ಚಿತ್ತಶುದ್ಧಿ, ಭಕ್ತಿ, ಜ್ಞಾನಗಳು ಈ ಜನ್ಮದಲ್ಲೇ ಸಂಭವಿಸಿದರೆ ಇಲ್ಲಿಯೇ ಮುಕ್ತಿ ದೊರೆಯುತ್ತದೆ.

ಏವಂ ಚೀರ್ಣೇನ ತಪಸಾ ಮುನಿರ್ಧಮನಿಸಂತತಃ ।
ಮಾಂ ತಪೋಮಯಮಾರಾಧ್ಯ ಋಷಿಲೋಕಾದುಪೈತಿ ಮಾಮ್ ॥ ೯

ಯಸ್ತ್ವೇತತ್ ಕೃಚ್ಛ್ರತಶ್ಚೀರ್ಣಂ ತಪೋ ನಿಃಶ್ರೇಯಸಂ ಮಹತ್ ।
ಕಾಮಾಯಾಲ್ಪೀಯಸೇ ಯುಂಜ್ಯಾದ್ ಬಾಲಿಶಃ ಕೋಽಪರಸ್ತತಃ ॥ ೧೦

ಯದಾಸೌ ನಿಯಮೇಽಕಲ್ಪೋ ಜರಯಾ ಜಾತವೇಪಥುಃ ।
ಆತ್ಮನ್ಯಗ್ನೀನ್ ಸಮಾರೋಪ್ಯ ಮಚ್ಚಿತ್ತೋಽಗ್ನಿಂ ಸಮಾವಿಶೇತ್ ॥ ೧೧

ಯದಾ ಕರ್ಮವಿಪಾಕೇಷು ಲೋಕೇಷು ನಿರಯಾತ್ಮಸು ।
ವಿರಾಗೋ ಜಾಯತೇ ಸಮ್ಯಙ್ನ್ಯಸ್ತಾಗ್ನಿಃ ಪ್ರವ್ರಜೇತ್ತತಃ ॥ ೧೨

ಇಷ್ಟ್ವಾ ಯಥೋಪದೇಶಂ ಮಾಂ ದತ್ತ್ವಾ ಸರ್ವಸ್ವಮೃತ್ವಿಜೇ ।
ಅಗ್ನೀನ್ ಸ್ವಪ್ರಾಣ ಆವೇಶ್ಯ ನಿರಪೇಕ್ಷಃ ಪರಿವ್ರಜೇತ್ ॥ ೧೩

---

(೮–೯). ಬಹುಕಷ್ಟದಿಂದ ಆಚರಿಸಬೇಕಾದ ಈ ತಪಸ್ಸಿಗೆ ಮೋಕ್ಷವೆಂಬ ಮಹತ್ತರವಾದ ಫಲವು ದೊರೆಯುತ್ತದೆ. ಅದನ್ನು ಬಿಟ್ಟು ಯಾವನಾದರೂ ಕ್ಷುದ್ರವಾದ ಕಾಮನೆಗಾಗಿ ಇಂಥ ತಪಸ್ಸನ್ನು ವಿನಿಯೋಗಿಸುವುದಾದರೆ, ಅವನಿಗಿಂತ ಬಾಲಿಶನು ಇನ್ನಾರು? (೧೦) ಒಂದುವೇಳೆ ಮುಪ್ಪಿನಿಂದ ದೇಹವು ನಡುಗುವಂತಾಗಿ ನಿಯಮಾಚರಣೆಗೆ ವಾನಪ್ರಸ್ಥನು ಅಸಮರ್ಥನಾದರೆ, ಆತನು ಅಗ್ನಿಯನ್ನು ತನ್ನಲ್ಲಿ ಸಮಾರೋಪಮಾಡಿಕೊಂಡು ನನ್ನನ್ನೇ ಹೃದಯದಲ್ಲಿ ಧ್ಯಾನಿಸುತ್ತ ಅಗ್ನಿಪ್ರವೇಶಮಾಡಬೇಕು (೧೧.) ಕರ್ಮಜನ್ಯಗಳಾದ ಇಹಪರ ಲೋಕಗಳು ದುಃಖಮಯಗಳೆಂದು ದೃಢವಾದ ವೈರಾಗ್ಯವು ಹುಟ್ಟಿದರೆ, ಆತನು ಅಗ್ನಿಯನ್ನು ವಿಸರ್ಜಿಸಿ ಸಂನ್ಯಾಸವನ್ನು ಸ್ವೀಕರಿಸತಕ್ಕದ್ದು. (೧೨). ಆತನು ವಿಧ್ಯನುಸಾರವಾಗಿ ([1]ಶ್ರಾದ್ಧಾಷ್ಟಕವನ್ನು ನೆರವೇರಿಸಿ) ಪ್ರಾಜಾಪತ್ಯೇಷ್ಟಿಯಿಂದ ನನ್ನನ್ನು ಅರ್ಚಿಸಿ, ಸರ್ವಸ್ವವನ್ನೂ ಋತ್ವಿಜನಿಗೆ ಅರ್ಪಿಸಿ, ಅಗ್ನಿಯನ್ನು ತನ್ನ ಆತ್ಮದಲ್ಲಿ ಸಮಾರೋಪಿಸಿ, ಯಾರ ಅಪೇಕ್ಷೆಯನ್ನೂ ಇಟ್ಟುಕೊಳ್ಳದೆ ಪಾರಿವ್ರಾಜ್ಯ

---

1. ದೇವಶ್ರಾದ್ಧ, ಋಷಿಶ್ರಾದ್ಧ, ದಿವ್ಯಶ್ರಾದ್ಧ, ಮನುಷ್ಯಶ್ರಾದ್ಧ, ಭೂತಶ್ರಾದ್ಧ, ಪಿತೃಶ್ರಾದ್ಧ, ಮಾತೃಶ್ರಾದ್ಧ ಮತ್ತು ಆತ್ಮಶ್ರಾದ್ಧ.

ವಿಪ್ರಸ್ಯ ವೈ ಸಂನ್ಯಸತೋ ದೇವಾ ದಾರಾದಿರೂಪಿಣಃ ।
ವಿಘ್ನಾನ್ ಕುರ್ವಂತ್ಯಯಂ ಹ್ಯಸ್ಮಾನಾಕ್ರಮ್ಯ ಸಮಿಯಾತ್
ಪರಮ್ ॥ ೧೪

ಬಿಭೃಯಾಚ್ಚೇನ್ಮುನಿರ್ವಾಸಃ ಕೌಪೀನಾಚ್ಛಾದನಂ ಪರಮ್ ।
ತ್ಯಕ್ತಂ ನ ದಂಡಪಾತ್ರಾಭ್ಯಾಮನ್ಯತ್ ಕಿಂಚಿದನಾಪದಿ ॥ ೧೫

ದೃಷ್ಟಿಪೂತಂ ನ್ಯಸೇತ್ ಪಾದಂ ವಸ್ತ್ರಪೂತಂ ಪಿಬೇಜ್ಜಲಮ್ ।
ಸತ್ಯಪೂತಾಂ ವದೇದ್ ವಾಚಂ ಮನಃಪೂತಂ ಸಮಾಚರೇತ್ ॥ ೧೬

ಮೌನಾನೀಹಾನಿಲಾಯಾಮಾ ದಂಡಾ ವಾಗ್ದೇಹಚೇತಸಾಮ್ ।
ನ ಹ್ಯೇತೇ ಯಸ್ಯ ಸಂತ್ಯಂಗ ವೇಣುಭಿರ್ನ ಭವೇದ್ ಯತಿಃ ॥ ೧೭

ವನ್ನು ಸ್ವೀಕರಿಸಬೇಕು (೧೩). ಬ್ರಾಹ್ಮಣನು ಸಂನ್ಯಾಸವನ್ನು ತೆಗೆದುಕೊಳ್ಳಲು ಹೊರಟಾಗ ಮಡದಿ ಮಕ್ಕಳು—ಮುಂತಾದವರಿಂದ ದೇವತೆಗಳು ವಿಘ್ನಗಳನ್ನು ತಂದೊಡ್ಡುತ್ತಾರೆ. ಏಕೆಂದರೆ, ಈತನು ನಮ್ಮನ್ನು ತುಳಿದು ಪರಬ್ರಹ್ಮವನ್ನು ಸೇರಿಕೊಳ್ಳುತ್ತಾನೆಂದು ದೇವತೆಗಳಿಗೆ ಅಸೂಯೆ ಇರುತ್ತದೆ! (೧೪). ಕೌಪೀನಕ್ಕಿಂತ ಇನ್ನೊಂದು ವಸ್ತ್ರವು ಬೇಕೆನಿಸಿದರೆ, ಸಂನ್ಯಾಸಿಯು ಕೌಪೀನವನ್ನು ಮುಚ್ಚುವ ಇನ್ನೊಂದು ಬಟ್ಟೆಯನ್ನು ಸುತ್ತಿಕೊಳ್ಳಬಹುದು. ಆಪತ್ಕಾಲದ ಹೊರತು ಉಳಿದ ಸಮಯದಲ್ಲಿ, ದಂಡ ಕಮಂಡಲು (ಮತ್ತು ತೀರ ಆವಶ್ಯಕವಾದ ಭಿಕ್ಷಾಪಾತ್ರೆ ಮುಂತಾದದ್ದು)—ಇವುಗಳ ಹೊರತಾಗಿ ಇನ್ನು ಯಾವುದನ್ನೂ—ಪ್ರೈಷೋಚ್ಚಾರಣೆಗೆ ಪೂರ್ವದಲ್ಲಿ ಪರಿತ್ಯಕ್ತವಾದುದನ್ನು—ಜೊತೆಗೆ ಇಟ್ಟುಕೊಳ್ಳಬಾರದು (೧೫) ಪರಿವ್ರಾಜಕನು ದೃಷ್ಟಿಯಿಂದ [1]ಪೂತವಾದ ಹೆಜ್ಜೆಯನ್ನಿಡಬೇಕು. ಬಟ್ಟೆಯಿಂದ ಶೋಧಿಸಿದ [2]ನೀರನ್ನು ಕುಡಿಯಬೇಕು. ಸತ್ಯದಿಂದ ಪವಿತ್ರವಾದ ವಾಣಿಯನ್ನು ಉಚ್ಚರಿಸಬೇಕು. ಮನಸ್ಸಿನಿಂದ ಪಾವಿತವಾದ—ವಿಚಾರದಿಂದ ಶುದ್ಧವಾದ—ಕಾರ್ಯವನ್ನಾಚರಿಸಬೇಕು (೧೬). ಏ ಉದ್ಧವ, ಮೌನವು ವಾಗ್ದಂಡವೆನಿಸುತ್ತದೆ. ಕಾಮ್ಯಕರ್ಮತ್ಯಾಗವು ದೇಹದಂಡವೆನಿಸುತ್ತದೆ.

1. ಹೋಗುವ ದಾರಿಯನ್ನು ಪ್ರಸನ್ನದೃಷ್ಟಿಯಿಂದ ನೋಡುತ್ತ ಹೆಜ್ಜೆಯಿಡಬೇಕು. ಅತ್ತಿತ್ತ ನೋಡಬಾರದು—ಎಂದು ಅಭಿಪ್ರಾಯ.

2. ಬಾಯಾರಿಕೆಯಾದಾಗಲೆಲ್ಲ ಕುಡಿಯುತ್ತ ಇರಬಾರದು.

ಭಿಕ್ಷಾಂ ಚತುರ್ಷು ವರ್ಣೇಷು ವಿಗರ್ಹ್ಯಾನ್ ವರ್ಜಯಂಶ್ಚರೇತ್ ।
ಸಪ್ತಾಗಾರಾನ್ ಅಸಂಕ್ಲೃಪ್ತಾಂಸ್ತುಷ್ಯೇಲ್ಲಬ್ಧೇನ ತಾವತಾ ॥ ೧೮

ಬಹಿರ್ಜಲಾಶಯಂ ಗತ್ವಾ ತತ್ರೋಪಸ್ಪೃಶ್ಯ ವಾಗ್ಯತಃ ।
ವಿಭಜ್ಯ ಪಾವಿತಂ ಶೇಷಂ ಭುಂಜೀತಾಶೇಷಮಾಹೃತಮ್ ॥ ೧೯

ಏಕಶ್ಚರೇನ್ಮಹೀಮೇತಾಂ ನಿಸ್ಸಂಗಃ ಸಂಯತೇಂದ್ರಿಯಃ ।
ಆತ್ಮಕ್ರೀಡ ಆತ್ಮರತ ಆತ್ಮವಾನ್ ಸಮದರ್ಶನಃ ॥ ೨೦

ವಿವಿಕ್ತಕ್ಷೇಮಶರಣೋ ಮದ್ಭಾವವಿಮಲಾಶಯಃ ।
ಆತ್ಮಾನಂ ಚಿಂತಯೇದೇಕಮಭೇದೇನ ಮಯಾ ಮುನಿಃ ॥ ೨೧

---

ಪ್ರಾಣಾಯಾಮವು ಮನೋದಂಡವಾಗಿದೆ (ತ್ರಿಕರಣಗಳಿಗೆ ಸಂಬಂಧಿಸಿದ) ಈ ಮೂರು ದಂಡಗಳು ಯಾರಿಗಿಲ್ಲವೋ ಆತನು ಬಿದಿರುದೊಣ್ಣೆಯನ್ನು ಹಿಡಿದ ಮಾತ್ರದಿಂದ ಯತಿಯಾಗಲಾರನು (೧೭) ನಿಂದ್ಯರಾದವರನ್ನು ಬಿಟ್ಟು ನಾಲ್ಕು [1]ವರ್ಣಗಳಲ್ಲಿಯೂ ಭಿಕ್ಷಾಚರ್ಯೆಯನ್ನು ನಡೆಸಬಹುದು. ಹೋಗಬೇಕೆಂದು ಮೊದಲೇ ನಿರ್ಧಾರ ಮಾಡಿಕೊಳ್ಳದಿರುವ ಏಳು ಮನೆಗಳಿಗೆ ಹೋಗಿ ಭಿಕ್ಷೆಯನ್ನು ಬೇಡಬೇಕು. ದೊರೆತಷ್ಟರಿಂದ ತೃಪ್ತನಾಗಬೇಕು (೧೮). ಭಿಕ್ಷಾಟನೆಯಾದ ಮೇಲೆ ಗ್ರಾಮದ ಹೊರಗಡೆ ಇರುವ ಜಲಾಶಯಕ್ಕೆ ಹೋಗಿ ಕೈಕಾಲು ತೊಳೆದು ಆಚಮನಮಾಡಿ, ಭಿಕ್ಷಾನ್ನವನ್ನು ಪ್ರೋಕ್ಷಿಸಿ ಶುದ್ಧಿಗೊಳಿಸಬೇಕು. ಅನಂತರ ವಿಷ್ಣು, ಬ್ರಹ್ಮ, ಸೂರ್ಯ, ಪ್ರಾಣಿಗಳಿಗೆ ಭಾಗವನ್ನರ್ಪಿಸಿ ಉಳಿದುದೆಲ್ಲವನ್ನೂ ಮೌನವಾಗಿ ಭುಂಜಿಸಬೇಕು (೧೯). ಸಂನ್ಯಾಸಿಯು ಏಕಾಕಿಯೂ ನಿಃಸಂಗನೂ ಸಂಯತೇಂದ್ರಿಯನೂ ಆತ್ಮದರ್ಶನ ಕುತೂಹಲಿಯೂ ಆತ್ಮಸಂತುಷ್ಟನೂ ಧೀರನೂ ಸರ್ವತ್ರ ಸಮದೃಷ್ಟಿಯೂ ಆಗಿ ಲೋಕದಲ್ಲಿ ಸಂಚರಿಸುತ್ತಿರಬೇಕು. ಆ ಮುನಿಯು ವಿಜನವೂ ನಿರ್ಭಯವೂ ಆದ ಸ್ಥಳವನ್ನಾಶ್ರಯಿಸಿ, ನನ್ನಲ್ಲಿರಿಸಿದ ಭಕ್ತಿಯಿಂದ ಪರಿಶುದ್ಧಚಿತ್ತನಾಗಿ, ತನ್ನನ್ನು ನನ್ನೊಡನೆ ಅಭೇದದೃಷ್ಟಿಯಿಂದ ಏಕಾತ್ಮನೆಂದು

---

1. ಬ್ರಾಹ್ಮಣರಲ್ಲಿಯೇ ವೃತ್ತಿಭೇದದಿಂದ ನಾಲ್ಕು ವರ್ಗಗಳಾದವರು—ಎಂದು ಶ್ರೀಧರಸ್ವಾಮಿಗಳು ಅರ್ಥವನ್ನು ಹೇಳಿದ್ದಾರೆ. 'ಪೂರ್ವಪೂರ್ವಾಸಂಭವೇ ವಾ' ಎಂದೂ ಬರೆದಿದ್ದಾರೆ. ಆಪತ್ಕಾಲದಲ್ಲಿ ಅನ್ಯವರ್ಣದವರಿಂದಲೂ ಭಿಕ್ಷೆಯನ್ನು ಸ್ವೀಕರಿಸಬಹುದೆಂದು ಅಭಿಪ್ರಾಯ.

ಅನ್ವೀಕ್ಷೇತಾತ್ಮನೋ ಬಂಧಂ ಮೋಕ್ಷಂ ಚ ಜ್ಞಾನನಿಷ್ಠಯಾ ।
ಬಂಧ ಇಂದ್ರಿಯವಿಕ್ಷೇಪೋ ಮೋಕ್ಷ ಏಷಾಂ ಚ ಸಂಯಮಃ ॥ ೨೨

ತಸ್ಮಾನ್ನಿಯಮ್ಯ ಷಡ್ವರ್ಗಂ ಮದ್ಭಾವೇನ ಚರೇನ್ಮುನಿಃ ।
ವಿರಕ್ತಃ ಕ್ಷುಲ್ಲಕಾಮೇಭ್ಯೋ ಲಬ್ಧ್ವಾಽಽತ್ಮನಿ ಸುಖಂ ಮಹತ್ ॥ ೨೩

ಪುರಗ್ರಾಮವ್ರಜಾನ್ ಸಾರ್ಥಾನ್ ಭಿಕ್ಷಾರ್ಥಂ ಪ್ರವಿಶಂಶ್ಚರೇತ್ ।
ಪುಣ್ಯದೇಶಸರಿಚ್ಛೈಲವನಾಶ್ರಮವತೀಂ ಮಹೀಮ್ ॥ ೨೪

ವಾನಪ್ರಸ್ಥಾಶ್ರಮಪದೇಷ್ವಭೀಕ್ಷ್ಣಂ ಭೈಕ್ಷ್ಯಮಾಚರೇತ್ ।
ಸಂಸಿಧ್ಯತ್ಯಾಶ್ವಸಂಮೋಹಃ ಶುದ್ಧಸತ್ತ್ವಃ ಶಿಲಾಂಧಸಾ ॥ ೨೫

ನೈತದ್ವಸ್ತುತಯಾ ಪಶ್ಯೇದ್ ದೃಶ್ಯಮಾನಂ ವಿನಶ್ಯತಿ ।
ಅಸಕ್ತಚಿತ್ತೋ ವಿರಮೇದಿಹಾಮುತ್ರ ಚಿಕೀರ್ಷಿತಾತ್ ॥ ೨೬

---

ಚಿಂತಿಸುತ್ತಿರಬೇಕು (೨೦–೨೧). ಆತನು ಜ್ಞಾನನಿಷ್ಠೆಯಲ್ಲಿ ನಿಂತು ತನಗೆ ಬಂಧವೆಂದರೇನು, ಮೋಕ್ಷವೆಂದರೇನು — ಎಂದು ಯುಕ್ತಿಯಿಂದ ವಿಮರ್ಶಿಸಬೇಕು. ಇಂದ್ರಿಯ ಸಂಯಮವೇ ಮೋಕ್ಷ (೨೨). ಆದ್ದರಿಂದ (ಪಂಚೇಂದ್ರಿಯಗಳು, ಮನಸ್ಸು ಎಂಬ) ಷಡ್ವರ್ಗವನ್ನು ಹಿಡಿದು ನಿಲ್ಲಿಸಿ ನನ್ನಲ್ಲಿ ಭಾವವನ್ನಿರಿಸತಕ್ಕದ್ದು. ಮುನಿಯು ಕ್ಷುದ್ರಕಾಮನೆಗಳನ್ನು ಬಯಸದೆ ವಿರಕ್ತನಾಗಿ, ಆತ್ಮಚಿಂತನೆಯಲ್ಲಿಯೇ ಮಹತ್ತರವಾದ ಆನಂದವನ್ನು ಅನುಭವಿಸುತ್ತ ಸಂಚರಿಸುತ್ತಿರಬೇಕು (೨೩). ನಗರ, ಗ್ರಾಮ, ವ್ರಜ, ಯಾತ್ರಿಕಜನಸಮೂಹ— ಇವುಗಳಿಗೆ ಭಿಕ್ಷಾರ್ಥವಾಗಿ ಹೋಗುತ್ತ, ಪುಣ್ಯಕ್ಷೇತ್ರ-ನದೀ-ಶೈಲ-ವನ-ಆಶ್ರಮಗಳಲ್ಲಿ ಸಂಚರಿಸುತ್ತಿರಬೇಕು. ಯತಿಯು ವಾನಪ್ರಸ್ಥರಿರುವ ಆಶ್ರಮಗಳಲ್ಲಿ ಆಗಾಗ ಭಿಕ್ಷಾವೃತ್ತಿಯನ್ನು ಮಾಡಬೇಕು. ಅವರು ಸಂಪಾದಿಸಿದ ಶಿಲವೃತ್ತಿಯ ಅನ್ನದಿಂದ ಚಿತ್ತಶುದ್ಧಿಯಾಗುತ್ತದೆ. ಮೋಹವು ಅಳಿಯುತ್ತದೆ. ಆದ್ದರಿಂದ ಯತಿಯು ಬೇಗನೆ ಸಿದ್ಧಿಯನ್ನೈದುತ್ತಾನೆ (೨೪–೨೫). ಈ ಜಗತ್ತು ವಸ್ತುತಃ ಇದೆಯೆಂದೂ ಆದ್ದರಿಂದ ಶಿಲಾನ್ನಕ್ಕಿಂತ ಮಿಷ್ಟಾನ್ನವೇ ಉತ್ತಮವೆಂದೂ ಭಾವಿಸಬಾರದು. ಏಕೆಂದರೆ, ಯಾವಯಾವುದು ದೃಶ್ಯವೋ ಅದು ನಾಶವಾಗುತ್ತದೆ. ಆದ್ದರಿಂದ ಇಹಪರಗಳಲ್ಲಿ ಆಸಕ್ತಿಯನ್ನು ತೊರೆದು ಅದಕ್ಕಾಗಿ ಯಾವ

*

ಯದೇತದಾತ್ಮನಿ ಜಗನ್ಮನೋವಾಕ್ಪ್ರಾಣಸಂಹತಮ್ ।
ಸರ್ವಂ ಮಾಯೇತಿ ತರ್ಕೇಣ ಸ್ವಸ್ಥಸ್ತ್ಯಕ್ತ್ವಾ ನ ತತ್ ಸ್ಮರೇತ್ ॥ ೨೭

ಜ್ಞಾನನಿಷ್ಠೋ ವಿರಕ್ತೋ ವಾ ಮದ್ಭಕ್ತೋ ವಾನಪೇಕ್ಷಕಃ ।
ಸಲಿಂಗಾನಾಶ್ರಮಾಂಸ್ತ್ಯಕ್ತ್ವಾ ಚರೇದವಿಧಿಗೋಚರಃ ॥ ೨೮

ಬುಧೋ ಬಾಲಕವತ್ ಕ್ರೀಡೇತ್ ಕುಶಲೋ ಜಡವಚ್ಚರೇತ್ ।
ವದೇದುನ್ಮತ್ತವದ್ ವಿದ್ವಾನ್ ಗೋಚರ್ಯಾಂ ನೈಗಮಶ್ಚರೇತ್ ॥ ೨೯

ವೇದವಾದರತೋ ನ ಸ್ಯಾನ್ನ ಪಾಖಂಡೀ ನ ಹೈತುಕಃ ।
ಶುಷ್ಕವಾದವಿವಾದೇ ನ ಕಂಚಿತ್ ಪಕ್ಷಂ ಸಮಾಶ್ರಯೇತ್ ॥ ೩೦

---

ಕೃತ್ಯವನ್ನೂ ಮಾಡದೆ ಸುಮ್ಮನಾಗತಕ್ಕದ್ದು (೨೬). (ಮಮತಾಸ್ಪದವಾದ) ಈ ಜಗತ್ತು, ಮನೋವಾಕ್ ಪ್ರಾಣಗಳಿಂದ ಕೂಡಿದ (ಅಹಂಕಾರಾಸ್ಪದವಾದ) ಈ ಶರೀರ, (ಇವುಗಳಿಂದ ಗೋಚರಿಸುವ ಸುಖ) ಇವೆಲ್ಲವೂ ಮಾಯಾಮಾತ್ರವೆಂದು ಸ್ವಪ್ನಾದಿದೃಷ್ಟಾಂತಸಹಿತವಾದ ತರ್ಕದಿಂದ ನಿಶ್ಚಯಿಸಿ ಸ್ವಸ್ಥನಾಗಿರಬೇಕು. ಅದನ್ನು ನೆನಪಿಗೂ ತಂದುಕೊಳ್ಳಬಾರದು (೨೭). ವಿರಕ್ತನಾದ ಯತಿಯು ಜ್ಞಾನನಿಷ್ಠನಾಗಿ ಮೋಕ್ಷಾಪೇಕ್ಷೆಯುಳ್ಳವನಾದರೂ ಅಥವಾ ಮೋಕ್ಷದಲ್ಲಿಯೂ ಅಪೇಕ್ಷೆಯಿಲ್ಲದೆ ನನ್ನ ಭಕ್ತನಾಗಿದ್ದರೂ ಆಗ ತ್ರಿದಂಡಾದಿಲಿಂಗಸಹಿತವಾದ (ಬಹೂದಕಾದಿ) ಆಶ್ರಮಧರ್ಮವನ್ನು ತ್ಯಜಿಸಿ—ಎಂದರೆ—ಅದರಲ್ಲಿ ಆಸಕ್ತಿಯನ್ನಿಡದೆ (ಪರಮಹಂಸನಾಗಿ) ಸಂಚರಿಸಬೇಕು. ಆತನು ಯಾವ ವಿಧಿನಿಷೇಧಗಳಿಗೂ ಗೋಚರನಾಗುವುದಿಲ್ಲ (೨೮). ಪರಮಹಂಸನು ವಿವೇಕಿಯಾದರೂ ಬಾಲಕನಂತೆ ಆಡುವನು. ನಿಪುಣನಾದರೂ ಜಡನಂತೆ ಆಚರಿಸುವನು. ಪಂಡಿತನಾದರೂ ಹುಚ್ಚನಂತೆ ಮಾತಾಡುವನು. ವೇದಾರ್ಥವನ್ನು ಬಲ್ಲವನಾದರೂ ಎತ್ತಿನ ಹಾಗೆ ನಡೆದುಕೊಳ್ಳುವನು (೨೯). ಆ ಪರಮಹಂಸನು ವೈದಿಕಕರ್ಮಕಾಂಡದ ವ್ಯಾಖ್ಯಾನದಲ್ಲಿ ನಿರತನಲ್ಲ; ಆದರೆ ವೇದವಿರುದ್ಧವಾಗಿ ಆಚರಿಸುವ ಪಾಖಂಡಿಯೂ ಅಲ್ಲ. ಕೇವಲ ತರ್ಕನಿಷ್ಠನಲ್ಲ ನಿಷ್ಫಲವಾದ ವಾದಗೋಷ್ಠಿ

ನೋದ್ವಿಜೇತ ಜನಾದ್ ಧೀರೋ ಜನಂ ಚೋದ್ವೇಜಯೇನ್ನ ತು ।
ಅತಿವಾದಾಂಸ್ತಿತಿಕ್ಷೇತ ನಾವಮನ್ಯೇತ ಕಂಚನ ।
ದೇಹಮುದ್ದಿಶ್ಯ ಪಶುವದ್ ವೈರಂ ಕುರ್ಯಾನ್ನ ಕೇನಚಿತ್ ॥ ೩೧

ಏಕ ಏವ ಪರೋ ಹ್ಯಾತ್ಮಾ ಭೂತೇಷ್ವಾತ್ಮನ್ಯವಸ್ಥಿತಃ ।
ಯಥೇಂದುರುದಪಾತ್ರೇಷು ಭೂತಾನ್ಯೇಕಾತ್ಮಕಾನಿ ಚ ॥ ೩೨

ಅಲಬ್ಧ್ವಾ ನ ವಿಷೀದೇತ ಕಾಲೇ ಕಾಲೇऽಶನಂ ಕ್ವಚಿತ್ ।
ಲಬ್ಧ್ವಾ ನ ಹೃಷ್ಯೇದ್ ಧೃತಿಮಾನುಭಯಂ ದೈವತಂತ್ರಿತಮ್ ॥ ೩೩

ಆಹಾರಾರ್ಥಂ ಸಮೀಹೇತ ಯುಕ್ತಂ ತತ್ಪ್ರಾಣಧಾರಣಮ್ ।
ತತ್ತ್ವಂ ವಿಮೃಶ್ಯತೇ ತೇನ ತದ್ ವಿಜ್ಞಾಯ ವಿಮುಚ್ಯತೇ ॥ ೩೪

ಯದೃಚ್ಛಯೋಪಪನ್ನಾನ್ನಮದ್ಯಾಚ್ಛ್ರೇಷ್ಠಮುತಾಪರಮ್ ।
ತಥಾ ವಾಸಸ್ತಥಾ ಶಯ್ಯಾಂ ಪ್ರಾಪ್ತಂ ಪ್ರಾಪ್ತಂ ಭಜೇನ್ಮುನಿಃ ॥ ೩೫

---

ಯಲ್ಲಿ ಯಾವ ಪಕ್ಷವನ್ನೂ ವಹಿಸಿ ವಾದಮಾಡುವುದಿಲ್ಲ (೩೦). ಆ ಧೀರನಿಗೆ ಜನರಿಂದ ಉದ್ವೇಗವಿಲ್ಲ. ತಾನು ಯಾರನ್ನೂ ಉದ್ವೇಗಗೊಳಿಸುವುದೂ ಇಲ್ಲ. ತನ್ನ ವಿಷಯವಾಗಿ ಯಾರಾದರೂ ದುರುಕ್ತಿಗಳನ್ನಾಡಿದರೆ ಅವನ್ನು ಸಹಿಸಿ ಕೊಳ್ಳುತ್ತಾನೆಯೇ ಹೊರತು ಇನ್ನೊಬ್ಬರಿಗೆ ಅವಮಾನಮಾಡುವುದಿಲ್ಲ. ಪಶುವಿನಂತೆ ಈ ದೇಹದ ನಿಮಿತ್ತವಾಗಿ ಯಾರೊಡನೆಯೂ ವೈರವನ್ನು ಬೆಳೆಸುವುದಿಲ್ಲ (೩೧). ಇರತಕ್ಕ ಪರಮಾತ್ಮನು ಒಬ್ಬನೇ ಸರಿಯಷ್ಟೆ. ಆತನು ಎಲ್ಲ ಪ್ರಾಣಿ ದೇಹಗಳಲ್ಲಿಯೂ ತನ್ನ ದೇಹದಲ್ಲಿಯೂ ಅವಸ್ಥಿತನಾಗಿದ್ದಾನೆ ಒಬ್ಬನೇ ಚಂದ್ರನು ನಾನಾ ಜಲಪಾತ್ರಗಳಲ್ಲಿ ಕಾಣುತ್ತಾನಲ್ಲವೆ? ಹಾಗೆ ಸಕಲವಸ್ತುಗಳಲ್ಲಿಯೂ ಒಬ್ಬನೇ ಆತ್ಮನಿದ್ದಾನೆ (೩೨). ಕಾಲಕಾಲಕ್ಕೆ ಭಿಕ್ಷಾನ್ನವು ಎಲ್ಲಿಯೂ ದೊರೆಯ ಲಿಲ್ಲವೆಂದು ವಿಷಾದಿಸಬಾರದು. ದೊರಕಿತೆಂದು ಹಿಗ್ಗಲೂ ಬಾರದು. ದೊರಕು ವುದು, ದೊರಕದಿರುವುದು—ಇವೆರಡೂ ದೈವಾಧೀನವಾದದ್ದು (೩೩). ಆದರೆ ಆಹಾರಕ್ಕಾಗಿ ಭಿಕ್ಷಾಟನೆಗೆ ಹೋಗಲೇಬೇಕು. ಏಕೆಂದರೆ, ಪ್ರಾಣಧಾರಣೆಯು ಆತನಿಗೆ ಆವಶ್ಯಕ. ಪ್ರಾಣವಿದ್ದರೆ ತತ್ತ್ವವನ್ನು ವಿಮರ್ಶಿಸಲು ಸಾಧ್ಯವಾಗುತ್ತದೆ. ತತ್ತ್ವವಿಮರ್ಶೆಯಿಂದ ಹುಟ್ಟುವ ಜ್ಞಾನದಿಂದ ಇವನು ಮುಕ್ತನಾಗುತ್ತಾನೆ (೩೪). ಯದೃಚ್ಛೆಯಿಂದ ತಾನಾಗಿ ವಿಷ್ಟಾನ್ನವು ದೊರಕಿದರೆ ಅದನ್ನೂ ಭಕ್ಷಿಸಬಹುದು.

ಶೌಚಮಾಚಮನಂ ಸ್ನಾನಂ ನ ತು ಚೋದನಯಾ ಚರೇತ್ ।
ಅನ್ಯಾಂಶ್ಚ ನಿಯಮಾನ್ ಜ್ಞಾನೀ ಯಥಾಹಂ ಲೀಲಯೇಶ್ವರಃ ॥ ೩೬

ನ ಹಿ ತಸ್ಯ ವಿಕಲ್ಪಾಖ್ಯಾ ಯಾ ಚ ಮದ್ವೀಕ್ಷಯಾ ಹತಾ ।
ಆದೇಹಾಂತಾತ್ ಕ್ವಚಿತ್ ಖ್ಯಾತಿಸ್ತತಃ ಸಂಪದ್ಯತೇ ಮಯಾ ॥ ೩೭

ದುಃಖೋದರ್ಕೇಷು ಕಾಮೇಷು ಜಾತನಿರ್ವೇದ ಆತ್ಮವಾನ್ ।
ಅಜಿಜ್ಞಾಸಿತಮದ್ಧರ್ಮೋ ಗುರುಂ ಮುನಿಮುಪಾವ್ರಜೇತ್ ॥ ೩೮

ತಾವತ್ ಪರಿಚರೇದ್ ಭಕ್ತಃ ಶ್ರದ್ಧಾವಾನನಸೂಯಕಃ ।
ಯಾವದ್ ಬ್ರಹ್ಮ ವಿಜಾನೀಯಾನ್ಮಾಮೇವ ಗುರುಮಾದೃತಃ ॥ ೩೯

ಯಸ್ತ್ವಸಂಯತಷಡ್ವರ್ಗಃ ಪ್ರಚಂಡೇಂದ್ರಿಯಸಾರಥಿಃ ।
ಜ್ಞಾನವೈರಾಗ್ಯರಹಿತಸ್ತ್ರಿದಂಡಮುಪಜೀವತಿ ॥ ೪೦

---

ಕದನ್ನವು ದೊರಕಿದರೆ ಅದನ್ನು ತಿರಸ್ಕರಿಸದೆ ಭಕ್ಷಿಸಬೇಕು. ಹೀಗೆ ಬಟ್ಟೆ, ಹಾಸಿಗೆ—ಯಾವ ಬಗೆಯದು ದೊರಕಿದರೆ ಅದನ್ನು ಮುನಿಯು ಉಪಯೋಗಿಸಬೇಕು (೩೫). ಉದ್ಧವ, ಜ್ಞಾನನಿಷ್ಠನಾದವನು ಶೌಚ, ಆಚಮನ, ಸ್ನಾನ—ಮುಂತಾದ ನಿಯಮಗಳನ್ನು ಅನಾಸಕ್ತನಾಗಿ ಲೀಲೆಯಿಂದ ಆಚರಿಸುತ್ತಿರಬೇಕು, ಶಾಸ್ತ್ರವು ವಿಧಿಸಿದೆಯೆಂದು ವಿಧಿಕಿಂಕರನಾಗಿ ಅಲ್ಲ. ಈಶ್ವರನಾದ ನಾನು ಲೀಲೆಗಾಗಿ ಈ ನಿಯಮಗಳನ್ನು ಪಾಲಿಸುತ್ತಿದ್ದೇನಲ್ಲವೆ, ಹಾಗೆ (೩೬). ಏಕೆಂದರೆ, ಆತನಿಗೆ ವಿಕಲ್ಪವೆಂಬ ದ್ವೈತಪ್ರತೀತಿ ಇರುವುದಿಲ್ಲ. ಹಿಂದೆ ಇದ್ದ ಭೇದಪ್ರತೀತಿಯು ನನ್ನ ದರ್ಶನದಿಂದ ನಷ್ಟವಾಗಿರುತ್ತದೆ. ದೇಹವಿರುವವರೆಗೂ ಅದು ಬಾಧಿತವಾಗಿ ಅಲ್ಪಸ್ವಲ್ಪ ಅನುವೃತ್ತವಾಗಬಹುದು. ಅನಂತರ ಪರಮಹಂಸನು ನನ್ನೊಡನೆ ಸೇರಿಹೋಗುತ್ತಾನೆ (೩೭). ಇನ್ನು ಯಾವಾತನಿಗೆ ದುಃಖಫಲಕವಾದ ಕಾಮನೆಗಳಲ್ಲಿ ವೈರಾಗ್ಯ ಹುಟ್ಟಿದೆಯೋ, ಯಾವಾತನು ನನ್ನ ಪ್ರಾಪ್ತಿಸಾಧನವಾದ ಧರ್ಮವನ್ನು ವಿಚಾರಮಾಡಿಲ್ಲವೋ ಅಂತಹ ಧೀರನಾದ [1]ಜಿಜ್ಞಾಸುವು ಜ್ಞಾನಿಯಾದ ಗುರುವಿನ ಬಳಿಗೆ ಹೋಗಬೇಕು (೩೮). ಶ್ರದ್ಧಾವಂತನೂ ಅಸೂಯಾರಹಿತನೂ ಆದ ಅಂತಹ ಭಕ್ತನು ನಾನೇ (ಈಶ್ವರನೇ) ಗುರುವೆಂದು ಭಾವಿಸಿ, ಬ್ರಹ್ಮಜ್ಞಾನವಾಗುವವರೆಗೆ ಗುರುವನ್ನು ಆದರದಿಂದ ಸೇವಿಸುತ್ತಿರಬೇಕು (೩೯). ಇನ್ನು

1. ಈತನು ವಿವಿದಿಷಾ ಸಂನ್ಯಾಸವನ್ನು ಸ್ವೀಕರಿಸುತ್ತಾನೆ.

ಸುರಾನಾತ್ಮಾನಮಾತ್ಮಸ್ಥಂ ನಿಹ್ನುತೇ ಮಾಂ ಚ ಧರ್ಮಹಾ ।
ಅವಿಪಕ್ವಕಷಾಯೋಽಸ್ಮಾದಮುಷ್ಮಾಚ್ಚ ವಿಹೀಯತೇ ॥ ೪೧

ಭಿಕ್ಷೋರ್ಧರ್ಮಃ ಶಮೋಽಹಿಂಸಾ ತಪ ಈಕ್ಷಾ ವನೌಕಸಃ ।
ಗೃಹಿಣೋ ಭೂತರಕ್ಷೇಜ್ಯಾ ದ್ವಿಜಸ್ಯಾಚಾರ್ಯಸೇವನಮ್ ॥ ೪೨

ಬ್ರಹ್ಮಚರ್ಯಂ ತಪಃ ಶೌಚಂ ಸಂತೋಷೋ ಭೂತಸೌಹೃದಮ್ ।
ಗೃಹಸ್ಥಸ್ಯಾಪ್ಯೃತೌ ಗಂತುಃ ಸರ್ವೇಷಾಂ ಮದುಪಾಸನಮ್ ॥ ೪೩

ಇತಿ ಮಾಂ ಯಃ ಸ್ವಧರ್ಮೇಣ ಭಜೇನ್ನಿತ್ಯಮನನ್ಯಭಾಕ್ ।
ಸರ್ವಭೂತೇಷು ಮದ್ಭಾವೋ ಮದ್ಭಕ್ತಿಂ ವಿಂದತೇ ದೃಢಾಮ್ ॥ ೪೪

ಭಕ್ತ್ಯೋದ್ಧವಾನಪಾಯಿನ್ಯಾ ಸರ್ವಲೋಕಮಹೇಶ್ವರಮ್ ।
ಸರ್ವೋತ್ಪತ್ತ್ಯಪ್ಯಯಂ ಬ್ರಹ್ಮ ಕಾರಣಂ ಮೋಪಯಾತಿ ಸಃ ॥ ೪೫

---

ಯಾವಾತನಿಗೆ ಜ್ಞಾನವೈರಾಗ್ಯಗಳೆರಡೂ ಇಲ್ಲವೋ, ಷಡ್ವರ್ಗವನ್ನು ಜಯಿಸಿಲ್ಲವೋ, ಪ್ರಚಂಡವಾದ ಇಂದ್ರಿಯಗಳೇ ಯಾವಾತನಿಗೆ ದಾರಿತೋರಿಸುವ ಸಾರಥಿಯೋ ಆತನು ತ್ರಿದಂಡವನ್ನು ಹಿಡಿದು ಸಂನ್ಯಾಸಿಯೆನಿಸಿಕೊಂಡರೆ, ಧರ್ಮದ್ರೋಹಿಯಾಗುತ್ತಾನೆ. ದೇವತೆಗಳಿಗೂ ತನಗೂ ಹೃದಯಸ್ಥನಾದ ನನಗೂ ವಂಚನೆ ಮಾಡುತ್ತಾನೆ. ವಾಸನಾದೂಷಿತನಾದ ಅವನು ಇಹಪರಗಳಿಂದ ವಂಚಿತನಾಗುತ್ತಾನೆ (೪೦–೪೧). ಶಮ ಮತ್ತು ಅಹಿಂಸೆ ಭಿಕ್ಷುವಿನ ಧರ್ಮ. ತಪಸ್ಸು ಮತ್ತು ಆತ್ಮವಿಚಾರವು ವಾನಪ್ರಸ್ಥನ ಧರ್ಮ. ಪ್ರಾಣಿರಕ್ಷಣೆ ಮತ್ತು ಹೋಮವು ಗೃಹಸ್ಥನ ಧರ್ಮ. ಆಚಾರ್ಯಸೇವೆ ಉಪನೀತದ್ವಿಜನಾದ ಬ್ರಹ್ಮಚಾರಿಯ ಧರ್ಮ. ಬ್ರಹ್ಮಚರ್ಯ, ತಪಸ್ಸು, ಶೌಚ, ಸಂತೋಷ, ಭೂತಾನುಕಂಪೆ ಮತ್ತು ನನ್ನ ಉಪಾಸನೆ—ಇವು ಎಲ್ಲ ಆಶ್ರಮದವರಿಗೂ ಸಮಾನ ಧರ್ಮಗಳಾಗಿವೆ. ಇವುಗಳಲ್ಲಿ ಗೃಹಸ್ಥನಿಗೆ ಮಾತ್ರ ಋತುಕಾಲದಲ್ಲಿ ಪತ್ನೀಗಮನವು ಬ್ರಹ್ಮಚರ್ಯವೆನಿಸಿ ಧರ್ಮವಾಗುತ್ತದೆ (೪೨–೪೩). ಈ ಪ್ರಕಾರವಾಗಿ ಯಾವಾತನು ಸ್ವಧರ್ಮದಿಂದ ನನ್ನನ್ನು ಭಜಿಸುತ್ತ ಸರ್ವಭೂತಗಳಲ್ಲಿಯೂ ನಾನಿದ್ದೇನೆಂದು ತಿಳಿದು ಅನನ್ಯಶರಣನಾಗಿರುವನೋ ಆತನಿಗೆ ಬೇಗನೆ ನನ್ನಲ್ಲಿ ದೃಢವಾದ ಭಕ್ತಿ ಉದಯಿಸುವುದು (೪೪). ಹೇ ಉದ್ಧವ, ನಿತ್ಯವಾದ ಆ ಭಕ್ತಿಯಿಂದ ಆತನು ಸರ್ವಲೋಕ ಮಹೇಶ್ವರನೂ ಸರ್ವಪದಾರ್ಥಗಳ ಉತ್ಪತ್ತಿ ಲಯಗಳಿಗೆ ಕಾರಣನೂ

ಇತಿ ಸ್ವಧರ್ಮನಿರ್ಣಿಕ್ತಸತ್ತ್ವೋ ನಿರ್ಜ್ಞಾತಮದ್ಗತಿಃ ।
ಜ್ಞಾನವಿಜ್ಞಾನಸಂಪನ್ನೋ ನಚಿರಾತ್ ಸಮುಪೈತಿ ಮಾಮ್ ॥ ೪೬

ವರ್ಣಾಶ್ರಮವತಾಂ ಧರ್ಮ ಏಷ ಆಚಾರಲಕ್ಷಣಃ ।
ಸ ಏವ ಮದ್ಭಕ್ತಿಯುತೋ ನಿಃಶ್ರೇಯಸಕರಃ ಪರಃ ॥ ೪೭

ಏತತ್ತೇಽಭಿಹಿತಂ ಸಾಧೋ ಭವಾನ್ ಪೃಚ್ಛತಿ ಯಚ್ಚ ಮಾಮ್ ।
ಯಥಾ ಸ್ವಧರ್ಮಸಂಯುಕ್ತೋ ಭಕ್ತೋ ಮಾಂ ಸಮಿಯಾತ್
ಪರಮ್ ॥ ೪೮

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಅಷ್ಟಾದಶೋಧ್ಯಾಯಃ

---

ವೇದಾವಿರ್ಭಾವಕ್ಕೆ ಕಾರಣನೂ ಆದ ನನ್ನ [1]ಸಮೀಪಕ್ಕೆ ಬರುವನು. ಹೀಗೆ ಸ್ವಧರ್ಮಾಚರಣೆಯಿಂದ ಸ್ವಚ್ಛವಾದ ಚಿತ್ತವುಳ್ಳವನಾಗಿ, ನನ್ನ ಸ್ವರೂಪವನ್ನರಿತು ಜ್ಞಾನವಿಜ್ಞಾನಸಂಪನ್ನನಾಗಿ ಶೀಘ್ರದಲ್ಲಿ ನನ್ನನ್ನು ಸೇರಿ [2]ಮುಕ್ತನಾಗುವನು (೪೫–೪೬). ಇದು ವರ್ಣಾಶ್ರಮಗಳನ್ನು ಪಾಲಿಸತಕ್ಕವರಿಗೆ ವಿಹಿತವಾದ ಆಚಾರ ವೆಂಬ (ಪಿತೃಲೋಕಪ್ರದವಾದ) ಧರ್ಮವಾಗಿರುತ್ತದೆ. ನನ್ನಲ್ಲಿ ಭಕ್ತಿಯನ್ನಿಟ್ಟು ಮಾಡುವ ಈ ಧರ್ಮವೇ [3]ನಿಃಶ್ರೇಯಸವನ್ನುಂಟುಮಾಡತಕ್ಕದ್ದಾಗಿ ಶ್ರೇಷ್ಠವೆನಿಸು ತ್ತದೆ (೪೭). ಸೌಮ್ಯ-ಉದ್ಧವ, ನೀನು ಕೇಳಿದ್ದಕ್ಕೆ ಉತ್ತರವಾಗಿ, ಯಾವ ಬಗೆಯ ಸ್ವಧರ್ಮಾಚರಣೆಯಿಂದ ಭಕ್ತನಾದವನು ಪರಮಾತ್ಮನಾದ ನನ್ನನ್ನು ಪಡೆಯುವನೋ ಅಂತಹ ಸ್ವಧರ್ಮದ ಸ್ವರೂಪವನ್ನು ನಿನಗೆ ಹೇಳಿದ್ದೇನೆ" (೪೮).

ಇಲ್ಲಿಗೆ ಶ್ರೀಮದ್ಭಾಗವತಮಹಾಪುರಾಣದ ಏಕಾದಶಸ್ಕಂಧದಲ್ಲಿ
ಹದಿನೆಂಟನೆಯ ಅಧ್ಯಾಯ

---

1. ಇದು ಸಾಮೀಪ್ಯಮುಕ್ತಿ.

2. ಇದು ಸಾಯುಜ್ಯಮುಕ್ತಿ.

3. ಫಲಪೇಕ್ಷೆಯಿಂದ ಆಚರಿಸುವ ಧರ್ಮವು ಪಿತೃಲೋಕಾದಿಗಳನ್ನು ಕೊಡುತ್ತದೆ. ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣಬುದ್ಧಿಯಿಂದ ಆಚರಿಸುವ ಧರ್ಮವು ಮೋಕ್ಷವನ್ನೀಯು ತ್ತದೆ.

## ಏಕೋನವಿಂಶಾಧ್ಯಾಯಃ

ಶ್ರೀಭಗವಾನುವಾಚ—

ಯೋ ವಿದ್ಯಾಶ್ರುತಸಂಪನ್ನ ಆತ್ಮವಾನ್ ನಾನುಮಾನಿಕಃ ।
ಮಾಯಾಮಾತ್ರಮಿದಂ ಜ್ಞಾತ್ವಾ ಜ್ಞಾನಂ ಚ ಮಯಿ ಸಂನ್ಯಸೇತ್ ॥ ೧

ಜ್ಞಾನಿನಸ್ತ್ವಹಮೇವೇಷ್ಟಃ ಸ್ವಾರ್ಥೋ ಹೇತುಶ್ಚ ಸಂಮತಃ ।
ಸ್ವರ್ಗಶ್ಚೈವಾಪವರ್ಗಶ್ಚ ನಾನ್ಯೋಽರ್ಥೋ ಮದೃತೇ ಪ್ರಿಯಃ ॥ ೨

ಜ್ಞಾನವಿಜ್ಞಾನಸಂಸಿದ್ಧಾಃ ಪದಂ ಶ್ರೇಷ್ಠಂ ವಿದುರ್ಮಮ ।
ಜ್ಞಾನೀ ಪ್ರಿಯತಮೋಽತೋ ಮೇ ಜ್ಞಾನೇನಾಸೌ ಬಿಭರ್ತಿ ಮಾಮ್ ॥ ೩

ತಪಸ್ತೀರ್ಥಂ ಜಪೋ ದಾನಂ ಪವಿತ್ರಾಣೀತರಾಣಿ ಚ ।
ನಾಲಂ ಕುರ್ವಂತಿ ತಾಂ ಸಿದ್ಧಿಂ ಯಾ ಜ್ಞಾನಕಲಯಾ ಕೃತಾ ॥ ೪

### ಅಧ್ಯಾಯ ೧೯

ದ್ವೈತವು ಮಾಯಾಮಾತ್ರವೆಂದು ನಿರೂಪಿಸುವುದು. ಜ್ಞಾನದ ಪರಮನಿಷ್ಕರ್ಷೆ. ಭೀಷ್ಮನು ಹೇಳಿದ ಮೋಕ್ಷಧರ್ಮಗಳ ಅನುವಾದ. ಶಮಾದಿಗಳ ನಿರ್ಣಯ.

ಭಗವಂತನು ಹೇಳಿದನು : "ಉದ್ಧವ, ಯಾವಾತನು ಅನುಭವಪರ್ಯಂತವಾದ ಶ್ರುತಿಜ್ಞಾನದಿಂದ ಸಂಪನ್ನನಾಗಿರುತ್ತಾನೋ, ಆದ್ದರಿಂದಲೇ ಅನುಮಾನದಿಂದ ಆತ್ಮತತ್ತ್ವವನ್ನರಸದೆ ಸ್ವತಃ ಆತ್ಮತತ್ತ್ವವನ್ನು ಕಂಡುಕೊಂಡ ಆತ್ಮಜ್ಞಾನಿಯಾಗಿರುತ್ತಾನೋ, ಅವನು ಈ ದ್ವೈತ ಪ್ರಪಂಚವೆಲ್ಲವೂ ಮಾಯಾಮಾತ್ರವೆಂದು ನಿಶ್ಚಯಿಸಿ, ಜ್ಞಾನಸಾಧನವನ್ನೂ ನನಗೆ ಸಮರ್ಪಿಸಿ [1]ಸಂನ್ಯಸ್ತನಾಗಬೇಕು (೧). ಏಕೆಂದರೆ, ಜ್ಞಾನಿಗೆ ನಾನೊಬ್ಬನೇ ಇಷ್ಟನೂ ಸಾಧ್ಯನೂ ಸಾಧನವೂ ಆಗಿರುತ್ತೇನೆ. ನಾನು ಹೊರತಾಗಿ ಅವನಿಗೆ ಸ್ವರ್ಗವೂ ಬೇಡ, ಸಂಸಾರನಿವೃತ್ತಿಯೂ ಬೇಡ. ಅದಾವುದೂ ಅವನಿಗೆ ಪ್ರಿಯವಾಗುವುದಿಲ್ಲ (೨). ಜ್ಞಾನವಿಜ್ಞಾನ ಸಂಸಿದ್ಧರು ನನ್ನ ಶ್ರೇಷ್ಠವಾದ ಸ್ಥಾನವನ್ನು ಬಲ್ಲರು. ಆದ್ದರಿಂದ ನನಗೆ ಪ್ರಿಯತಮನಾದವನು ಜ್ಞಾನಿಯೊಬ್ಬನೇ. ಜ್ಞಾನಿಯು ನನ್ನನ್ನು ತನ್ನ ಜ್ಞಾನದಿಂದ ಧರಿಸಿರುತ್ತಾನೆ! (ಉಳಿಸಿರುತ್ತಾನೆ!) (೩). ತಪಸ್ಸು, ತೀರ್ಥ,

1. ಇದಕ್ಕೆ ವಿದ್ವತ್‌ಸಂನ್ಯಾಸವೆಂದು ಹೆಸರು.

ತಸ್ಮಾಜ್ಜ್ಞಾನೇನ ಸಹಿತಂ ಜ್ಞಾತ್ವಾ ಸ್ವಾತ್ಮಾನಮುದ್ಧವ ।
ಜ್ಞಾನವಿಜ್ಞಾನಸಂಪನ್ನೋ ಭಜ ಮಾಂ ಭಕ್ತಿಭಾವಿತಃ ॥ ೫
ಜ್ಞಾನವಿಜ್ಞಾನಯಜ್ಞೇನ ಮಾಮಿಷ್ಟ್ವಾಽಽತ್ಮಾನಮಾತ್ಮನಿ ।
ಸರ್ವಯಜ್ಞಪತಿಂ ಮಾಂ ವೈ ಸಂಸಿದ್ಧಿಂ ಮುನಯೋಽಗಮನ್ ॥ ೬

ತ್ವಯ್ಯುದ್ಧವಾಶ್ರಯತಿ ಯಸ್ತ್ರಿವಿಧೋ ವಿಕಾರೋ
ಮಾಯಾಂತರಾಽಽಪತತಿ ನಾದ್ಯಪವರ್ಗಯೋರ್ಯತ್ ।
ಜನ್ಮಾದಯೋಽಸ್ಯ ಯದಮೀ ತವ ತಸ್ಯ ಕಿಂ ಸ್ಯು-
ರಾದ್ಯಂತಯೋರ್ಯದಸತೋಽಸ್ತಿ ತದೇವ ಮಧ್ಯೇ ॥ ೭

ಜಪ, ದಾನ ಅಥವಾ ಇತರ ಪವಿತ್ರ ವಸ್ತುಗಳು—ಇವುಗಳಿಂದಾದ ಸಿದ್ಧಿಯು ಜ್ಞಾನಲೇಶದಿಂದಾಗುವ ಸಿದ್ಧಿಗೆ ಸಮಾನವಲ್ಲ. ಆದ್ದರಿಂದ, ಉದ್ಧವ, ಅನುಭವ ಪರ್ಯಂತವಾದ ಜ್ಞಾನದಿಂದ ನೀನು ಯಾರೆಂಬುದನ್ನು ತಿಳಿದು ಜ್ಞಾನವಿಜ್ಞಾನ ಸಂಪನ್ನನಾಗಿ ಭಕ್ತಿಭಾವದಿಂದ ನನ್ನನ್ನು ಭಜಿಸು (೪–೫). ಹಿಂದಿನ ಮುನಿಗಳು ಆತ್ಮನಾದ ನನ್ನನ್ನು ಜ್ಞಾನವಿಜ್ಞಾನವೆಂಬ ಯಜ್ಞದಿಂದ ಆತ್ಮನಲ್ಲಿಯೇ [1]ಅರ್ಚಿಸಿ, ಸರ್ವಯಜ್ಞಾಧಿಪತಿಯೂ ಸಂಸಿದ್ಧಿಯೂ ಆದ ನನ್ನನ್ನು ಸೇರಿದ್ದಾರೆ. ಉದ್ಧವ, (ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಎಂಬ) ತ್ರಿವಿಧ ವಿಕಾರವಾದ ದೇಹಾದಿ ಪ್ರಪಂಚವು ನಿನ್ನನ್ನು ಆಶ್ರಯಿಸಿಕೊಂಡಿದೆಯಷ್ಟೆ, ಅದು ಮಾಯೆಯೇ ಸರಿ (ಪರಮಾರ್ಥವಲ್ಲ). ಏಕೆಂದರೆ, ಅದು ನಡುವೆ ನಿನಗೆ ಗಂಟುಬಿದ್ದಿದೆ ಆದಿಯಲ್ಲಿಯೂ [2]ಅಂತ್ಯದಲ್ಲಿಯೂ ಇಲ್ಲ. ಜನ್ಮಾದಿಗಳೆಲ್ಲವೂ ವಿಕಾರವಾದ ಈ ದೇಹಕ್ಕೆ (ನಿನಗಲ್ಲ). ಹೀಗಿರುವಾಗ ದೇಹಾದಿಗಳಿಗೆ ಅಧಿಷ್ಠಾನವಾಗಿರುವ ನಿನಗೆ ಅವುಗಳಿಂದ ಏನಾಗುತ್ತದೆ? ಅಸತ್ತಾದ ಈ ವಿಕಾರದ ಆದ್ಯಂತಗಳಲ್ಲಿ ಯಾವುದಿರುತ್ತದೆಯೋ ಅದೇ ಬ್ರಹ್ಮವಸ್ತು [3]ಮಧ್ಯದಲ್ಲಿಯೂ ಇರುತ್ತದೆ" ಎಂದನು (೬–೭).

1. ಆತ್ಮನನ್ನು ಆತ್ಮನಲ್ಲಿ ಅರ್ಚಿಸುವುದು—ತನ್ನ ಆತ್ಮವೇ ಪರಮಾತ್ಮನೆಂದು ನಿಶ್ಚಯಿಸುವುದು.

2. 'ಆದಾವಂತೇ ಚ ಯನ್ನಾಸ್ತಿ ವರ್ತಮಾನೇಽಪಿ ತತ್ತಥಾ'

3. ಆದ್ಯಂತಗಳಲ್ಲಿಯೂ ಮಧ್ಯದಲ್ಲಿಯೂ ಇರತಕ್ಕದ್ದು ನಿರ್ವಿಕಾರಬ್ರಹ್ಮ. ಅದೇ ನೀನು—ಎಂದು ಅಭಿಪ್ರಾಯ. ಭ್ರಮೆಗೆ ಅಧಿಷ್ಠಾನ ಆತ್ಮ, ಸರ್ಪಭ್ರಮಕ್ಕೆ ರಜ್ಜು ಅಧಿಷ್ಠಾನ, ಆದ್ಯಂತಗಳಲ್ಲಿ ಇಲ್ಲದ ಸರ್ಪವು ನಡುವೆಯೂ ಇಲ್ಲ. ರಜ್ಜುಮಾತ್ರ ಆದ್ಯಂತಗಳಲ್ಲಿಯೂ ನಡುವೆಯೂ ಇರುತ್ತದೆ. ಅದೇ ಸತ್ಯ, ಹಾಗೆ ಆತ್ಮನೊಬ್ಬನೇ ಸತ್ಯ.

ಉದ್ಧವ ಉವಾಚ—

ಜ್ಞಾನಂ ವಿಶುದ್ಧಂ ವಿಪುಲಂ ಯಥೈತ-
ದ್ವೈರಾಗ್ಯವಿಜ್ಞಾನಯುತಂ ಪುರಾಣಮ್ ।
ಆಖ್ಯಾಹಿ ವಿಶ್ವೇಶ್ವರ ವಿಶ್ವಮೂರ್ತೇ
ತ್ವದ್ಭಕ್ತಿಯೋಗಂ ಚ ಮಹದ್ವಿಮೃಗ್ಯಮ್ ॥ ೮

ತಾಪತ್ರಯೇಣಾಭಿಹತಸ್ಯ ಘೋರೇ
ಸಂತಪ್ಯಮಾನಸ್ಯ ಭವಾಧ್ವನೀಶ ।
ಪಶ್ಯಾಮಿ ನಾನ್ಯಚ್ಛರಣಂ ತವಾಂಘ್ರಿ-
ದ್ವಂದ್ವಾತಪತ್ರಾದಮೃತಾಭಿವರ್ಷಾತ್ ॥ ೯

ದಷ್ಟಂ ಜನಂ ಸಂಪತಿತಂ ಬಿಲೇಽಸ್ಮಿನ್
ಕಾಲಾಹಿನಾ ಕ್ಷುದ್ರಸುಖೋರುತರ್ಷಮ್ ।
ಸಮುದ್ಧರೈನಂ ಕೃಪಯಾಽಪವರ್ಗ್ಯೈ-
ರ್ವಚೋಭಿರಾಸಿಂಚ ಮಹಾನುಭಾವ ॥ ೧೦

---

ಆಗ ಉದ್ಧವನು "ಹೇ ವಿಶ್ವೇಶ್ವರ—ವಿಶ್ವಮೂರ್ತಿ, ನೀನು ಹೇಳಿದ ವೈರಾಗ್ಯ ವಿಜ್ಞಾನಸಂಪನ್ನವೂ ಪುರಾತನವೂ ಆದ ಈ ವಿಶುದ್ಧಜ್ಞಾನವು ನಿಶ್ಚಿತವಾಗಿ ತಿಳಿಯುವಂತೆ ಹೇಳು. ಹಾಗೆಯೇ ನಿನ್ನ ಭಕ್ತಿಯೋಗವನ್ನೂ ವಿವರಿಸು. ಇದೆಲ್ಲವೂ ಮಹಾತ್ಮರಾದ ಬ್ರಹ್ಮಾದಿಗಳೂ ಸಹ ವಿಮರ್ಶಿಸಿ ತಿಳಿದುಕೊಳ್ಳ ಬೇಕಾದದ್ದು (೮). ತಾಪತ್ರಯದಿಂದ ಪೀಡಿತನಾಗಿ ಘೋರವಾದ ಸಂಸಾರ-ಮಾರ್ಗದಲ್ಲಿ ಬೆಂದುಹೋಗತಕ್ಕವನಿಗೆ, ಹೇ ಈಶ್ವರ, ಅಮೃತದ ಮಳೆಗೈಯುವ ನಿನ್ನ ಪಾದಪದ್ಮವನ್ನು ಬಿಟ್ಟು ಇನ್ನೊಂದು ಆಶ್ರಯವನ್ನು ನಾನು ಕಾಣೆನು. ಮಾನವನು ಸಂಸಾರಕೂಪದಲ್ಲಿ ಬಿದ್ದಿದ್ದಾನೆ. ಕಾಲವೆಂಬ ಸರ್ಪವು ಬೇರೆ ಅವನನ್ನು ಕಡಿದಿದೆ! ಆದರೂ ಕ್ಷುದ್ರಸುಖಕ್ಕಾಗಿ ಬಾಯಿಬಿಡುತ್ತಿದ್ದಾನೆ! ಓ ಮಹಾನುಭಾವ, ಮುಕ್ತಿಬೋಧಕವಾದ ವಾಗಮೃತಗಳನ್ನು ಸುರಿದು ಕೃಪೆ ಯಿಂದ ಆತನನ್ನು ಮೇಲಕ್ಕೆ ಎತ್ತಿಹಾಕು" ಎಂದು ಕೇಳಿಕೊಂಡನು (೯–೧೦).

ಶ್ರೀ ಭಗವಾನುವಾಚ—

ಇತ್ಥಮೇತತ್ ಪುರಾ ರಾಜಾ ಭೀಷ್ಮಂ ಧರ್ಮಭೃತಾಂ ವರಮ್ ।
ಅಜಾತಶತ್ರುಃ ಪಪ್ರಚ್ಛ ಸರ್ವೇಷಾಂ ನೋಽನುಶೃಣ್ವತಾಮ್ ॥ ೧೧

ನಿವೃತ್ತೇ ಭಾರತೇ ಯುದ್ಧೇ ಸುಹೃನ್ನಿಧನವಿಹ್ವಲಃ ।
ಶ್ರುತ್ವಾ ಧರ್ಮಾನ್ ಬಹೂನ್ ಪಶ್ಚಾನ್ಮೋಕ್ಷಧರ್ಮಾನಪೃಚ್ಛತ ॥ ೧೨

ತಾನಹಂ ತೇಽಭಿಧಾಸ್ಯಾಮಿ ದೇವವ್ರತಮುಖಾಚ್ಛ್ರುತಾನ್ ।
ಜ್ಞಾನವೈರಾಗ್ಯವಿಜ್ಞಾನಶ್ರದ್ಧಾಭಕ್ತ್ಯುಪಬೃಂಹಿತಾನ್ ॥ ೧೩

ನವೈಕಾದಶ ಪಂಚ ತ್ರೀನ್ ಭಾವಾನ್ ಭೂತೇಷು ಯೇನ ವೈ ।
ಈಕ್ಷೇತಾಥೈಕಮಪ್ಯೇಷು ತಜ್ಜ್ಞಾನಂ ಮಮ ನಿಶ್ಚಿತಮ್ ॥ ೧೪

---

ಭಗವಂತನಿಂತೆಂದನು : "ಇದೇ ರೀತಿಯಲ್ಲಿ ಹಿಂದೆ ರಾಜನಾದ ಯುಧಿಷ್ಠಿರನು ಧರ್ಮಜ್ಞವರೇಣ್ಯನಾದ ಭೀಷ್ಮನನ್ನು ಕುರಿತು ಪ್ರಶ್ನೆ ಮಾಡಿದ್ದನು. ನಾವೆಲ್ಲರೂ ಬಳಿಯಲ್ಲಿದ್ದು ಕೇಳುತ್ತಿದ್ದೆವು (೧೧). ಭಾರತಯುದ್ಧವು ಮುಗಿದಮೇಲೆ, ಬಂಧುಮಿತ್ರರ ನಿಧನದಿಂದ ಕಳವಳಿಸುತ್ತಿದ್ದ ಯುಧಿಷ್ಠಿರನು ಬಹುವಿಧವಾದ ಧರ್ಮಗಳ ವಿಷಯವಾಗಿ ಕೇಳಿ ತಿಳಿದುಕೊಂಡು, ಅನಂತರ ಮೋಕ್ಷಧರ್ಮವನ್ನು ಕುರಿತು ಪ್ರಶ್ನೆಮಾಡಿದನು (೧೨). ಉದ್ಧವ, ಭೀಷ್ಮನ ಬಾಯಿಯಿಂದ ನಾನು ಕೇಳಿದ ಆ ಧರ್ಮಗಳನ್ನು ನಿನಗೆ ಹೇಳುವೆನು. ಅವು ಜ್ಞಾನ, ವೈರಾಗ್ಯ, ವಿಜ್ಞಾನ, ಶ್ರದ್ಧೆ, ಭಕ್ತಿಗಳಿಂದ ಸಹಿತವಾದವುಗಳು (೧೩) (ಬ್ರಹ್ಮಾದಿ ಸ್ಥಾವರಾಂತಗಳಾದ) ಭೂತವಸ್ತುಗಳಲ್ಲಿ ಒಂಬತ್ತು, ಹನ್ನೊಂದು, ಐದು, ಮೂರು—ಎಂಬುದಾಗಿ ಇಪ್ಪತ್ತೆಂಟು ತತ್ತ್ವಗಳು ಅನುಗತವಾಗಿವೆಯೆಂದು ಯಾವ ಜ್ಞಾನದಿಂದ ನಿಶ್ಚಯಿಸುತ್ತಾನೋ ಮತ್ತು ಈ ಇಪ್ಪತ್ತೆಂಟು [1]ತತ್ತ್ವಗಳಲ್ಲಿ ಒಂದೇ ಪರಮಾತ್ಮತತ್ತ್ವವು ಅನುಗತವಾಗಿದೆಯೆಂದು ಯಾವುದರಿಂದ ನಿಶ್ಚಯಿಸುತ್ತಾನೋ

1. ಒಂಬತ್ತು = ಪ್ರಕೃತಿ, ಪುರುಷ, ಮಹತ್, ಅಹಂಕಾರ ಮತ್ತು ಪಂಚತನ್ಮಾತ್ರೆಗಳು.
ಹನ್ನೊಂದು = ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ ಮತ್ತು ಮನಸ್ಸು.
ಐದು — ಪಂಚಮಹಾಭೂತಗಳು.
ಮೂರು = ಸತ್ತ್ವರಜಸ್ತಮೋಗುಣಗಳು.

ಏತದೇವ ಹಿ ವಿಜ್ಞಾನಂ ನ ತಥೈಕೇನ ಯೇನ ಯತ್ ।
ಸ್ಥಿತ್ಯುತ್ಪತ್ತ್ಯಪ್ಯಯಾನ್ ಪಶ್ಯೇದ್ ಭಾವಾನಾಂ ತ್ರಿಗುಣಾತ್ಮನಾಮ್ ॥ ೧೫
ಆದಾವಂತೇ ಚ ಮಧ್ಯೇ ಚ ಸೃಜ್ಯಾತ್ ಸೃಜ್ಯಂ ಯದನ್ವಿಯಾತ್ ।
ಪುನಸ್ತತ್ಪ್ರತಿಸಂಕ್ರಾಮೇ ಯಚ್ಛಿಷ್ಯೇತ ತದೇವ ಸತ್ ॥ ೧೬
ಶ್ರುತಿಃ ಪ್ರತ್ಯಕ್ಷಮೈತಿಹ್ಯಮನುಮಾನಂ ಚತುಷ್ಟಯಮ್ ।
ಪ್ರಮಾಣೇಷ್ವನವಸ್ಥಾನಾದ್ ವಿಕಲ್ಪಾತ್ ಸ ವಿರಜ್ಯತೇ ॥ ೧೭

ಅದು ಜ್ಞಾನವೆಂದು ನನ್ನ ನಿರ್ಣಯ (೧೪). ಒಂದೇ ಪರಮಾತ್ಮತತ್ತ್ವವು ಸಮಸ್ತ ಭೂತವಸ್ತುಗಳಲ್ಲಿ ಅನುಗತವಾಗಿದೆಯೆಂದು ಜ್ಞಾನದಿಂದ ಮೊದಲು ನಿಶ್ಚಯಿಸಿರುತ್ತಾನಷ್ಟೆ. ಅನಂತರ 'ಅದು ಹಾಗಲ್ಲ. ಅನ್ಯವಸ್ತುಗಳಲ್ಲಿ ಪರಮಾತ್ಮ ತತ್ತ್ವವು ಅನುಗತವಾದದ್ದಲ್ಲ. ಕಿಂತು ಸಮಸ್ತವಸ್ತುಗಳೂ ಆ ಪರಮಾತ್ಮ ತತ್ತ್ವವೇ ಸರಿ—ಪರಮಕಾರಣವಾದ ಬ್ರಹ್ಮವೇ ಸರಿ'—ಎಂದು ತಿಳಿದಾಗ ಜ್ಞಾನವೇ [1]ವಿಜ್ಞಾನವೆನಿಸುತ್ತದೆ. ಪ್ರಕೃತ್ಯಾದಿ ಭಾವವಸ್ತುಗಳು ತ್ರಿಗುಣಾತ್ಮಕ ಗಳಾಗಿವೆ. ಆದ್ದರಿಂದ ಸಾವಯವಗಳಾದ ಈ ವಸ್ತುಗಳಿಗೆ ಉತ್ಪತ್ತಿ, ಸ್ಥಿತಿ, ಲಯಗಳಿವೆಯೆಂದು ತಿಳಿಯಬೇಕು (೧೫). ಆ ವಸ್ತುಗಳ ಉತ್ಪತ್ತಿಯಾದಾಗಲೂ ನಾಶವಾದಾಗಲೂ ಮಧ್ಯದ ಸ್ಥಿತಿಕಾಲದಲ್ಲಾಗುವ ಪರಿಣಾಮಾದಿ ವಿಕಾರಗಳ ಸಂದರ್ಭದಲ್ಲಿಯೂ ಯಾವುದು ಅನುಗತವಾಗಿ ಉಳಿದುಕೊಂಡಿರುತ್ತದೆಯೋ ಅದೇ ಸತ್. ಶ್ರುತಿ, ಪ್ರತ್ಯಕ್ಷ, ಐತಿಹ್ಯ, ಅನುಮಾನ—ಎಂಬ ಪ್ರಮಾಣ ಚತುಷ್ಟಯ ಗಳಿವೆಯಷ್ಟೆ. ಈ ಪ್ರಮಾಣಗಳಿಂದ ಜಗತ್ತಿಗೆ ಸ್ಥಿತಿಯೇ [2]ಇಲ್ಲವಾಗುವುದರಿಂದ ಈ ಜಗತ್ತು ಕೇವಲ ವಿಕಲ್ಪ—ಭ್ರಮೆ—ಎಂದು ತಿಳಿದು ವಿವೇಕಶಾಲಿಯು ವಿರಕ್ತ ನಾಗಬೇಕು (೧೬–೧೭).

1. ಜ್ಞಾನ=ಪರೋಕ್ಷಜ್ಞಾನ. ವಿಜ್ಞಾನ=ಅಪರೋಕ್ಷಜ್ಞಾನ. ಕೆಲವು ಕಡೆ ಪರೋಕ್ಷಜ್ಞಾನವನ್ನು ವಿಜ್ಞಾನವೆಂದು ಕರೆದಿರುವುದೂ ಉಂಟು. ಸಂದರ್ಭಾನುಸಾರವಾಗಿ ಈ ಎರಡು ಪದಗಳ ಅರ್ಥವು ಭಿನ್ನವಾಗುತ್ತದೆ.

2. ಶ್ರುತಿ=ನೇಹ ನಾನಾಸ್ತಿ ಕಿಂಚನ (ಬೃಹ. ೪–೪–೧೯), ಪ್ರತ್ಯಕ್ಷ=ಗಡಿಗೆ ಮಣ್ಣಿಗಿಂತ ಭಿನ್ನವಲ್ಲ, ಹಾಗೆಯೇ ಜಗತ್ತು ಬ್ರಹ್ಮಕ್ಕಿಂತ ಭಿನ್ನವಾಗಿಲ್ಲ. ಐತಿಹ್ಯ= ಮಹಾತ್ಮರ ಹೇಳಿಕೆ. ಅನುಮಾನ=ಜಗತ್ತು ಮಿಥ್ಯೆ, ದೃಶ್ಯವಾದ್ದರಿಂದ; ಶುಕ್ತಿರಜತ ದಂತೆ, ಸ್ವಪ್ನಸಿಂಹದಂತೆ. ಈ ಪ್ರಮಾಣಗಳಿಂದ 'ಈ ಜಗತ್ತು ವಸ್ತುತಃ ಇಲ್ಲ' ಎಂದು ಗೊತ್ತಾಗುತ್ತದೆ.

**ಕರ್ಮಣಾಂ ಪರಿಣಾಮಿತ್ವಾದಾವಿರಿಂಚಾದಮಂಗಲಮ್ ।**
**ವಿಪಶ್ಚಿನ್ನಶ್ವರಂ ಪಶ್ಯೇದದೃಷ್ಟಮಪಿ ದೃಷ್ಟವತ್ ॥** ೧೮

**ಭಕ್ತಿಯೋಗಃ ಪುರೈವೋಕ್ತಃ ಪ್ರೀಯಮಾಣಾಯ ತೇಽನಘ ।**
**ಪುನಶ್ಚ ಕಥಯಿಷ್ಯಾಮಿ ಮದ್ಭಕ್ತೇಃ ಕಾರಣಂ ಪರಮ್ ॥** ೧೯

**ಶ್ರದ್ಧಾಮೃತಕಥಾಯಾಂ ಮೇ ಶಶ್ವನ್ಮದನುಕೀರ್ತನಮ್ ।**
**ಪರಿನಿಷ್ಠಾ ಚ ಪೂಜಾಯಾಂ ಸ್ತುತಿಭಿಃ ಸ್ತವನಂ ಮಮ ॥** ೨೦

**ಆದರಃ ಪರಿಚರ್ಯಾಯಾಂ ಸರ್ವಾಂಗೈರಭಿವಂದನಮ್ ।**
**ಮದ್ಭಕ್ತಪೂಜಾಭ್ಯಧಿಕಾ ಸರ್ವಭೂತೇಷು ಮನ್ಮತಿಃ ॥** ೨೧

**ಮದರ್ಥೇಷ್ವಂಗಚೇಷ್ಟಾ ಚ ವಚಸಾ ಮದ್ಗುಣೇರಣಮ್ ।**
**ಮಯ್ಯರ್ಪಣಂ ಚ ಮನಸಃ ಸರ್ವಕಾಮವಿವರ್ಜನಮ್ ॥** ೨೨

---

ಕರ್ಮಗಳು ಜನ್ಯವಾದ ಫಲವನ್ನು ಕೊಡುತ್ತವೆ. ಬ್ರಹ್ಮಲೋಕ ಪರ್ಯಂತವಾದ ಕರ್ಮಫಲವೆಲ್ಲವೂ ಜನ್ಯವಾದ್ದರಿಂದ ದುಃಖರೂಪವೆಂದೂ ನಶ್ವರವೆಂದೂ ತಿಳಿಯಬೇಕು. ಸ್ವರ್ಗಾದಿಗಳು ನಮಗೆ ಅದೃಷ್ಟವಾದರೂ [1]ದೃಷ್ಟದಂತೆಯೇ ನಶ್ವರವೆಂದು ಊಹಿಸಿಕೊಳ್ಳಬಹುದು (೧೮). ಸೌಮ್ಯ—ಉದ್ಧವ, ಭಕ್ತಿಯೋಗವನ್ನು ಈಗಾಗಲೇ ನಿನಗೆ ಹೇಳಿದ್ದೇನೆ. ಆದರೂ ಅದರಲ್ಲಿ ನಿನಗೆ ಬಹಳ ಪ್ರೀತಿ ಇರುವುದರಿಂದ ಭಕ್ತಿಯ ದೃಢತೆಗೆ ಯಾವುದು ಕಾರಣ ವೆಂಬುದನ್ನು ನಿನಗೆ ಹೇಳುವೆನು (೧೯). ನನ್ನ ಅಮೃತಕಥೆಯನ್ನು ಶ್ರವಣ ಮಾಡುವುದರಲ್ಲಿ ಸದಾ ಆದರ, ಶ್ರವಣಾನಂತರ ಕಥೆಯನ್ನು ವಿವರಿಸುವುದು, ನನ್ನ ಪೂಜೆಯಲ್ಲಿ ನಿಷ್ಠೆ, ಸ್ತೋತ್ರಗಳಿಂದ ನನ್ನನ್ನು ಸ್ತುತಿಸುವುದು, ಸೇವಾ ವಿಧಾನಗಳಲ್ಲಿ ಆಸಕ್ತಿ, ನನಗೆ ಸಾಷ್ಟಾಂಗ ಪ್ರಣಾಮ, ನನ್ನ ಭಕ್ತರನ್ನು ವಿಶೇಷವಾಗಿ ಗೌರವಿಸುವುದು, ಸರ್ವಭೂತಗಳಲ್ಲಿಯೂ ನಾನಿದ್ದೇನೆಂಬ ಬುದ್ಧಿ (೨೦–೨೧), ನನ್ನ ಸೇವೆಗಾಗಿ ದೈಹಿಕವಾದ ಲೋಕವ್ಯವಹಾರ, ನನ್ನ ಗುಣಗಳನ್ನು ಕೀರ್ತಿಸು ವುದು, ಮನಸ್ಸನ್ನು ನನ್ನಲ್ಲಿಯೇ ಇಟ್ಟಿರುವುದು, ಸರ್ವಕಾಮನಾತ್ಯಾಗ, ನನ್ನನ್ನು ಭಜಿಸುವುದಕ್ಕಾಗಿ ಧನ, ಭೋಗಸಾಮಗ್ರಿ, ಸುಖ—ಇವುಗಳನ್ನು ಪರಿತ್ಯಜಿಸು

---

1. ಯತ್ ಕೃತಕಂ ತದನಿತ್ಯಂ, ಯಥಾ ಘಟಃ—ಎಂಬ ಊಹೆ. ಕೃತಕವಾದ ಘಟವು ನಶ್ವರವಾದಂತೆ ಕೃತಕವಾದ ಸ್ವರ್ಗವೂ ನಶ್ವರ.

ಮದರ್ಥೇಽರ್ಥಪರಿತ್ಯಾಗೋ ಭೋಗಸ್ಯ ಚ ಸುಖಸ್ಯ ಚ ।
ಇಷ್ಟಂ ದತ್ತಂ ಹುತಂ ಜಪ್ತಂ ಮದರ್ಥಂ ಯದ್ ವ್ರತಂ ತಪಃ ॥ ೨೩

ಏವಂ ಧರ್ಮೈರ್ಮನುಷ್ಯಾಣಾಮುದ್ಧವಾತ್ಮನಿವೇದಿನಾಮ್ ।
ಮಯಿ ಸಂಜಾಯತೇ ಭಕ್ತಿಃ ಕೋಽನ್ಯೋಽರ್ಥೋಽಸ್ಯಾವಶಿಷ್ಯತೇ ॥ ೨೪

ಯದಾಽಽತ್ಮನ್ಯರ್ಪಿತಂ ಚಿತ್ತಂ ಶಾಂತಂ ಸತ್ತ್ವೋಪಬೃಂಹಿತಮ್ ।
ಧರ್ಮಂ ಜ್ಞಾನಂ ಸವೈರಾಗ್ಯಮೈಶ್ವರ್ಯಂ ಚಾಭಿಪದ್ಯತೇ ॥ ೨೫

ಯದರ್ಪಿತಂ ತದ್ ವಿಕಲ್ಪೇ ಇಂದ್ರಿಯೈಃ ಪರಿಧಾವತಿ ।
ರಜಸ್ವಲಂ ಚಾಸನ್ನಿಷ್ಠಂ ಚಿತ್ತಂ ವಿದ್ಧಿ ವಿಪರ್ಯಯಮ್ ॥ ೨೬

ಧರ್ಮೋ ಮದ್ಭಕ್ತಿಕೃತ್ ಪ್ರೋಕ್ತೋ ಜ್ಞಾನಂ ಚೈಕಾತ್ಮ್ಯದರ್ಶನಮ್ ।
ಗುಣೇಷ್ವಸಂಗೋ ವೈರಾಗ್ಯಮೈಶ್ವರ್ಯಂ ಚಾಣಿಮಾದಯಃ ॥ ೨೭

---

ವುದು, ನನಗೋಸ್ಕರವೇ ಆಚರಿಸುವ ವೈದಿಕವಾದ ಯಾಗ, ದಾನ, ಹೋಮ, ಜಪ, ವ್ರತ, ತಪಸ್ಸು—ಇವೆಲ್ಲವೂ ಭಕ್ತಿಯ ದಾರ್ಢ್ಯಕ್ಕೆ ಕಾರಣಗಳು (೨೨–೨೩). ಉದ್ಧವ, ಇಂತು ಸರ್ವಸ್ವವನ್ನೂ ನನಗೆ ಸಮರ್ಪಣೆಮಾಡತಕ್ಕ ಮನುಷ್ಯರಿಗೆ ಈ ಧರ್ಮಾನುಷ್ಠಾನಗಳಿಂದ ನನ್ನಲ್ಲಿ (ಪ್ರೇಮರೂಪವಾದ) ಭಕ್ತಿಯು ಬೆಳೆಯುತ್ತದೆ. ಇಂತಹ ಭಕ್ತನಿಗೆ ಇನ್ನಾವ ಸಾಧನವಾಗಲಿ ಸಾಧ್ಯವಾಸಲಿ ಉಳಿದಿರುತ್ತದೆ? (೨೪). ಯಾವಾಗ ಮಾನವನು ಶಾಂತವೂ ಸಾತ್ತ್ವಿಕವೂ ಆದ ಚಿತ್ತವನ್ನು ಆತ್ಮನಾದ ನನಗೆ ಅರ್ಪಿಸಿಬಿಡುತ್ತಾನೋ ಆಗ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳನ್ನು ಪಡದೇ ಪಡೆಯುತ್ತಾನೆ. ಇದಕ್ಕೆ ವಿರುದ್ಧವಾಗಿ ದೇಹ, ಮನೆ—ಮುಂತಾದವುಗಳಲ್ಲಿ ಚಿತ್ತವನ್ನರ್ಪಿಸಿದರೆ, ಇಂದ್ರಿಯಗಳು ತೋರಿದ ಕಡೆಗೆ ಅದು ಓಡತೊಡಗುತ್ತದೆ. ಆ ಚಿತ್ತವು ರಜೋಮಯವೆಂದೂ ಅಸದ್ವಸ್ತುನಿಷ್ಠವೆಂದೂ ತಿಳಿ. ಅದಕ್ಕೆ ಫಲವು ಧರ್ಮಾದಿಗಳಿಗೆ ವಿರುದ್ಧವಾದ ಅಧರ್ಮಾದಿಗಳೇ (೨೫–೨೬). (ನನ್ನಲ್ಲಿ ಚಿತ್ತವನ್ನರ್ಪಿಸಿದರೆ ಧರ್ಮಾದಿಗಳು ಫಲವಾಗುತ್ತವೆಯೆಂದು ಹೇಳಿದೆನಷ್ಟೆ) ಅವುಗಳಲ್ಲಿ ಧರ್ಮವೆಂದರೆ ನನ್ನಲ್ಲಿ ಭಕ್ತಿಯನ್ನುಂಟುಮಾಡುವ ಸಂಸ್ಕಾರ; ಜ್ಞಾನವೆಂದರೆ ಒಬ್ಬನೇ ಆತ್ಮಸಿದ್ದಾನೆಂಬ ಐಕಾತ್ಮ್ಯದರ್ಶನ. ವಿಷಯಗಳಲ್ಲಿ ಅನಾಸಕ್ತಿಯೇ ವೈರಾಗ್ಯ. ಅಣಿಮಾದಿಸಿದ್ಧಿಯೇ ಐಶ್ವರ್ಯ" ವೆಂದನು (೨೭).

ಉದ್ಧವ ಉವಾಚ—

ಯಮಃ ಕತಿವಿಧಃ ಪ್ರೋಕ್ತೋ ನಿಯಮೋ ವಾರಿಕರ್ಶನ ।
ಕಃ ಶಮಃ ಕೋ ದಮಃ ಕೃಷ್ಣ ಕಾ ತಿತಿಕ್ಷಾ ಧೃತಿಃ ಪ್ರಭೋ ॥ ೨೮

ಕಿಂ ದಾನಂ ಕಿಂ ತಪಃ ಶೌರ್ಯಂ ಕಿಂ ಸತ್ಯಮೃತಮುಚ್ಯತೇ ।
ಕಸ್ತ್ಯಾಗಃ ಕಿಂ ಧನಂ ಚೇಷ್ಟಂ ಕೋ ಯಜ್ಞಃ ಕಾ ಚ ದಕ್ಷಿಣಾ ॥ ೨೯

ಪುಂಸಃ ಕಿಂಸ್ವಿದ್ ಬಲಂ ಶ್ರೀಮನ್ ಭಗೋ ಲಾಭಶ್ಚ ಕೇಶವ ।
ಕಾ ವಿದ್ಯಾ ಹ್ರೀಃ ಪರಾ ಕಾ ಶ್ರೀಃ ಕಿಂ ಸುಖಂ ದುಃಖಮೇವ ಚ ॥ ೩೦

ಕಃ ಪಂಡಿತಃ ಕಶ್ಚ ಮೂರ್ಖಃ ಕಃ ಪಂಥಾ ಉತ್ಪಥಶ್ಚ ಕಃ ।
ಕಃ ಸ್ವರ್ಗೋ ನರಕಃ ಕಃ ಸ್ವಿತ್ ಕೋ ಬಂಧುರುತ ಕಿಂ ಗೃಹಮ್ ॥ ೩೧

ಕ ಆಢ್ಯಃ ಕೋ ದರಿದ್ರೋ ವಾ ಕೃಪಣಃ ಕಃ ಕ ಈಶ್ವರಃ ।
ಏತಾನ್ ಪ್ರಶ್ನಾನ್ ಮಮ ಬ್ರೂಹಿ ವಿಪರೀತಾಂಶ್ಚ ಸತ್ಪತೇ ॥ ೩೨

---

ಆಗ ಉದ್ಧವನು ಹೀಗೆ ಹೇಳಿದನು : "ಹೇ ಪ್ರಭುವೆ, ಯಮನಿಯಮಗಳು ಎಷ್ಟು ವಿಧ? ಶಮ, ದಮ, ತಿತಿಕ್ಷಾ, ಧೃತಿಗಳೆಂದರೇನು? ದಾನ, ತಪಸ್ಸು, ಶೌರ್ಯ, ಸತ್ಯ, ಋತ, ತ್ಯಾಗಗಳ ಲಕ್ಷಣವಾವುದು? ಅಪೇಕ್ಷಿತವಾದ ಶ್ರೇಷ್ಠಧನ ಯಾವುದು? ಯಜ್ಞ, ದಕ್ಷಿಣೆಗಳ ಸ್ವರೂಪವೇನು? (೨೮-೨೯). ಮನುಷ್ಯನಿಗೆ ಯಾವುದು ನಿಜವಾದ ಬಲ? ನಿಜವಾದ ಭಾಗ್ಯ ಯಾವುದು? ಲಾಭ ಯಾವುದು? ಕೇಶವ, ಉತ್ತಮವಾದ ವಿದ್ಯೆ ಹ್ರೀ ಶ್ರೀ ಸುಖದುಃಖಗಳ ಸ್ವರೂಪವೇನು? ಪಂಡಿತನೆಂದರೆ ಯಾರು? ಮೂರ್ಖನೆಂದರೆ ಯಾರು? ಮಾರ್ಗ ಉನ್ಮಾರ್ಗಗಳು ಯಾವುವು? ಯಾವುದು ಸ್ವರ್ಗ? ಯಾವುದು ನರಕ? ಬಂಧು ಯಾರು? ಮನೆ ಯಾವುದು? (೩೦-೩೧). ಶ್ರೀಮಂತ ಮತ್ತು ದರಿದ್ರರ ಲಕ್ಷಣವೇನು? ಶೋಚನೀಯರಾದ ಕೃಪಣ ಮತ್ತು ಪ್ರಭುಗಳ ಸ್ವರೂಪವೇನು? ಓ ಸಜ್ಜನ ಪಾಲಕ—ಕೇಶವ, ಈ ಪ್ರಶ್ನೆಗಳಿಗೆ ಉತ್ತರವನ್ನು ಹೇಳು. ಮತ್ತು ಇವಕ್ಕೆ ವಿರುದ್ಧವಾಗಿರುವ ಅಶಮ, ಅದಮ—ಮುಂತಾದವುಗಳ ಸ್ವರೂಪವನ್ನೂ ತಿಳಿಸಿಕೊಡು" ಎಂದನು (೩೨).

ಶ್ರೀಭಗವಾನುವಾಚ—

ಅಹಿಂಸಾ ಸತ್ಯಮಸ್ತೇಯಮಸಂಗೋ ಹ್ರೀರಸಂಚಯಃ ।
ಆಸ್ತಿಕ್ಯಂ ಬ್ರಹ್ಮಚರ್ಯಂ ಚ ಮೌನಂ ಸ್ಥೈರ್ಯಂ ಕ್ಷಮಾಭಯಮ್ ॥ ೩೩
ಶೌಚಂ ಜಪಸ್ತಪೋ ಹೋಮಃ ಶ್ರದ್ಧಾಽಽತಿಥ್ಯಂ ಮದರ್ಚನಮ್ ।
ತೀರ್ಥಾಟನಂ ಪರಾರ್ಥೇಹಾ ತುಷ್ಟಿರಾಚಾರ್ಯಸೇವನಮ್ ॥ ೩೪
ಏತೇ ಯಮಾಃ ಸನಿಯಮಾ ಉಭಯೋರ್ದ್ವಾದಶ ಸ್ಮೃತಾಃ ।
ಪುಂಸಾಮುಪಾಸಿತಾಸ್ತಾತ ಯಥಾಕಾಮಂ ದುಹಂತಿ ಹಿ ॥ ೩೫
ಶಮೋ ಮನ್ನಿಷ್ಠತಾ ಬುದ್ಧೇರ್ದಮ ಇಂದ್ರಿಯಸಂಯಮಃ ।
ತಿತಿಕ್ಷಾ ದುಃಖಸಂಮರ್ಷೋ ಜಿಹ್ವೋಪಸ್ಥಜಯೋ ಧೃತಿಃ ॥ ೩೬
ದಂಡನ್ಯಾಸಃ ಪರಂ ದಾನಂ ಕಾಮತ್ಯಾಗಸ್ತಪಃ ಸ್ಮೃತಮ್ ।
ಸ್ವಭಾವವಿಜಯಃ ಶೌರ್ಯಂ ಸತ್ಯಂ ಚ ಸಮದರ್ಶನಮ್ ॥ ೩೭

---

ಆಗ ಭಗವಂತನಿಂತೆಂದನು: "ಅಹಿಂಸೆ, ಸತ್ಯ, ಅಸ್ತೇಯ, ಅಸಂಗ, ಹ್ರೀ, ಧನಗಳ ಅಸಂಚಯ, ಧರ್ಮದಲ್ಲಿ ವಿಶ್ವಾಸವೆಂಬ ಆಸ್ತಿಕ್ಯ, ಬ್ರಹ್ಮಚರ್ಯ, ಮೌನ, ಸ್ಥೈರ್ಯ, ಕ್ಷಮೆ ಮತ್ತು ಅಭಯ—ಇವು ಹನ್ನೆರಡು ಯಮಗಳೆನಿಸುತ್ತವೆ (೩೩). ಬಾಹ್ಯಶೌಚ, ಅಭ್ಯಂತರವಾದ ಮಾನಸಶೌಚ, ಜಪ, ತಪಸ್ಸು, ಹೋಮ, ಧರ್ಮಶ್ರದ್ಧೆ, ಅತಿಥಿಸತ್ಕಾರ, ನನ್ನ ಪೂಜೆ, ತೀರ್ಥಾಟನ, ಪರೋಪಕಾರ, ತೃಪ್ತಿ ಮತ್ತು ಆಚಾರ್ಯಸೇವೆ—ಇವು ಹನ್ನೆರಡು [1]ನಿಯಮಗಳು(೩೪). ಪ್ರವೃತ್ತಿಮಾರ್ಗದವರು, ನಿವೃತ್ತಿಮಾರ್ಗದವರು—ಹೀಗೆ ಉಭಯರಿಗೂ ಈ ಯಮ-ನಿಯಮಗಳು ಆವಶ್ಯಕ. ಸೌಮ್ಯ-ಉದ್ಧವ, ಉಪಾಸನಾನುಗುಣವಾಗಿ ಇವು ಇಷ್ಟಫಲಗಳನ್ನು ನೀಡುತ್ತವೆ (೩೫). ಬುದ್ಧಿಯನ್ನು ನನ್ನಲ್ಲಿಯೇ ನಿಲ್ಲಿಸುವುದು ಶಮ; ಇಂದ್ರಿಯನಿಗ್ರಹವೇ ದಮ; ಪ್ರಾಪ್ತವಾದ ದುಃಖವನ್ನು ಗೊಣಗದೆ ಸಹಿಸಿಕೊಳ್ಳುವುದು ತಿತಿಕ್ಷೆ; ನಾಲಗೆ ಮತ್ತು ಗುಹ್ಯೇಂದ್ರಿಯಗಳ ವೇಗವನ್ನು ತಡೆದುಕೊಳ್ಳುವುದು ಧೃತಿ (೩೬). ಪ್ರಾಣಿಗಳಿಗೆ ಕೆಡಕು ಮಾಡುವುದನ್ನು ತ್ಯಜಿಸುವುದೇ ದಾನ; ಭೋಗದಲ್ಲಿ ಉಪೇಕ್ಷೆಯೇ ತಪಸ್ಸು; ಪ್ರಾಚೀನವಾಸನೆ

1. ಅನ್ಯತ್ರ ಯೋಗ ಶಾಸ್ತ್ರಾದಿಗಳಲ್ಲಿರುವುದಕ್ಕಿಂತ ಭಿನ್ನವಾಗಿ ಯಮನಿಯಮಾದಿಗಳ ವಿವರಣೆ ಇಲ್ಲಿ ಬಂದಿದೆಯೆಂಬುದನ್ನು ಗಮನಿಸಬೇಕು.

ಋತಂ ಚ ಸೂನೃತಾ ವಾಣೀ ಕವಿಭಿಃ ಪರಿಕೀರ್ತಿತಾ ।
ಕರ್ಮಸ್ವಸಂಗಮಃ ಶೌಚಂ ತ್ಯಾಗಃ ಸಂನ್ಯಾಸ ಉಚ್ಯತೇ ॥ ೩೮

ಧರ್ಮ ಇಷ್ಟಂ ಧನಂ ನೄಣಾಂ ಯಜ್ಞೋಽಹಂ ಭಗವತ್ತಮಃ ।
ದಕ್ಷಿಣಾ ಜ್ಞಾನಸಂದೇಶಃ ಪ್ರಾಣಾಯಾಮಃ ಪರಂ ಬಲಮ್ ॥ ೩೯

ಭಗೋ ಮ ಐಶ್ವರೋ ಭಾವೋ ಲಾಭೋ ಮದ್ಭಕ್ತಿರುತ್ತಮಃ ।
ವಿದ್ಯಾಽಽತ್ಮನಿ ಭಿದಾಬಾಧೋ ಜುಗುಪ್ಸಾ ಹ್ರೀರಕರ್ಮಸು ॥ ೪೦

ಶ್ರೀರ್ಗುಣಾ ನೈರಪೇಕ್ಷ್ಯಾದ್ಯಾಃ ಸುಖಂ ದುಃಖಸುಖಾತ್ಯಯಃ ।
ದುಃಖಂ ಕಾಮಸುಖಾಪೇಕ್ಷಾ ಪಂಡಿತೋ ಬಂಧಮೋಕ್ಷವಿತ್ ॥ ೪೧

ಮೂರ್ಖೋ ದೇಹಾದ್ಯಹಂಬುದ್ಧಿಃ ಪಂಥಾ ಮನ್ನಿಗಮಃ ಸ್ಮೃತಃ ।
ಉತ್ಪಥಶ್ಚಿತ್ತವಿಕ್ಷೇಪಃ ಸ್ವರ್ಗಃ ಸತ್ತ್ವಗುಣೋದಯಃ ॥ ೪೨

---

ಯನ್ನು ತಡೆಗಟ್ಟುವುದೇ ಶೌರ್ಯ; ಸಮವೆನಿಸಿದ ಪರಬ್ರಹ್ಮವನ್ನು ಕುರಿತು ಚಿಂತಿಸುವುದೇ ಸತ್ಯ (೩೭). ಸತ್ಯವೂ ಪ್ರಿಯವೂ ಆದ ವಾಣಿಗೆ ಋತವೆಂದು ವಿದ್ವಾಂಸರು ಹೇಳಿದ್ದಾರೆ. ಕರ್ಮಫಲದಲ್ಲಿ ಅನಾಸಕ್ತಿಗೆ ಶೌಚವೆಂದೂ ಕರ್ಮಗಳ ತ್ಯಾಗಕ್ಕೆ ಸಂನ್ಯಾಸವೆಂದೂ ಹೆಸರು. ಅಪೇಕ್ಷಿತವಾದ ಶ್ರೇಷ್ಠಧನವೆಂದರೆ ಧರ್ಮ; ಯಜ್ಞವೆಂದರೆ ಭಗವಂತರಲ್ಲಿ ಉತ್ತಮನಾದ ನಾನೇ; ದಕ್ಷಿಣೆಯೆಂದರೆ ಜ್ಞಾನೋಪದೇಶವೇ; ನಿಜವಾದ ಬಲವೆಂದರೆ ಪ್ರಾಣಯಾಮವೇ (೩೮–೩೯). ನನ್ನ ಈಶ್ವರತ್ವಾದಿಷಾಡ್ಗುಣ್ಯಭಾವವೇನುಂಟೋ ಅದು ಭಾಗ್ಯವೆನಿಸುತ್ತದೆ. ನನ್ನಲ್ಲಿ ಭಕ್ತಿಯು ಉತ್ತಮವಾದ ಲಾಭವೆನಿಸುತ್ತದೆ. ಆತ್ಮನಲ್ಲಿ ಪ್ರತೀತವಾಗುವ ಭೇದ ಬುದ್ಧಿಯನ್ನು ಬಾಧಿಸಿ ಏಕಾತ್ಮನೆಂದು ತಿಳಿಯುವುದು ವಿದ್ಯೆಯೆನಿಸುತ್ತದೆ. ನಿಂದ್ಯ ಕರ್ಮಗಳಲ್ಲಿ ಜುಗುಪ್ಸೆ ಹ್ರೀ ಎನಿಸುತ್ತದೆ (೪೦). ಭೋಗನಿರಪೇಕ್ಷತೆ ಮುಂತಾದ ಸುಗುಣಗಳು ಶ್ರೀ ಎನಿಸುತ್ತವೆ. ಸುಖದುಃಖಗಳನ್ನು ಅನುಸಂಧಾನಮಾಡದಿರುವುದೇ ಸುಖ. ವಿಷಯಭೋಗಗಳ ಅಪೇಕ್ಷೆಯೇ ದುಃಖ. ಬಂಧಮೋಕ್ಷಗಳ ಸ್ವರೂಪವನ್ನು ಬಲ್ಲವನು ಪಂಡಿತ (೪೧). ದೇಹಾದಿಗಳಲ್ಲಿ ನಾನು ಎಂಬ ಬುದ್ಧಿಯಿಟ್ಟವನು ಮೂರ್ಖ. ನನ್ನ ಪ್ರಾಪ್ತಿಗೆ ಸಾಧನವಾದದ್ದು ಮಾರ್ಗ. ಚಿತ್ತವಿಕ್ಷೇಪವೇ ಉನ್ಮಾರ್ಗ. ಸತ್ತ್ವಗುಣದ ಉದಯವೇ ಸ್ವರ್ಗ (೪೨).

ನರಕಸ್ತಮ ಉನ್ನಾಹೋ ಬಂಧುರ್ಗುರುರಹಂ ಸಖೇ ।
ಗೃಹಂ ಶರೀರಂ ಮಾನುಷ್ಯಂ ಗುಣಾಢ್ಯೋ ಹ್ಯಾಢ್ಯ ಉಚ್ಯತೇ ॥ ೪೩

ದರಿದ್ರೋ ಯಸ್ತ್ವಸಂತುಷ್ಟಃ ಕೃಪಣೋ ಯೋಽಜಿತೇಂದ್ರಿಯಃ ।
ಗುಣೇಷ್ವಸಕ್ತಧೀರೀಶೋ ಗುಣಸಂಗೋ ವಿಪರ್ಯಯಃ ॥ ೪೪

ಏತ ಉದ್ಧವ ತೇ ಪ್ರಶ್ನಾಃ ಸರ್ವೇ ಸಾಧು ನಿರೂಪಿತಾಃ ।
ಕಿಂ ವರ್ಣಿತೇನ ಬಹುನಾ ಲಕ್ಷಣಂ ಗುಣದೋಷಯೋಃ ।
ಗುಣದೋಷದೃಶಿರ್ದೋಷೋ ಗುಣಸ್ತೂಭಯವರ್ಜಿತಃ ॥ ೪೫

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಏಕೋನವಿಂಶಾಧ್ಯಾಯಃ

---

ತಮೋ-ಗುಣದ ಉದ್ರೇಕವೇ ನರಕ. ಮಿತ್ರ-ಉದ್ಧವ, ಬಂಧುವೆಂದರೆ ಗುರು ; ಗುರುವೆಂದರೆ ನಾನೇ; ಮನುಷ್ಯ ಶರೀರವೇ ಮನೆ; ಗುಣಾಢ್ಯನಾದವನು ಶ್ರೀಮಂತ; ತೃಪ್ತಿಯಿಲ್ಲದವನು ದರಿದ್ರ ; ಇಂದ್ರಿಯ ಜಯವಿಲ್ಲದವನು ಶೋಚನೀಯನಾದ ಕೃಪಣ ; ವಿಷಯಸುಖಗಳಲ್ಲಿ ಯಾವನ ಬುದ್ಧಿಯು ಸಿಕ್ಕಿಕೊಂಡಿಲ್ಲವೋ ಅವನೇ ಪ್ರಭು. ಇದಕ್ಕೆ [1]ವಿಪರ್ಯಯವಾಗಿ ವಿಷಯಸುಖಗಳಲ್ಲಿ ಆಸಕ್ತಿಯಿದ್ದವನು ಪ್ರಭು ವಲ್ಲವೆಂದು ತಿಳಿಯಬೇಕು (೪೩–೪೪). ಉದ್ಧವ, ನಿನ್ನ ಎಲ್ಲ ಪ್ರಶ್ನೆಗಳಿಗೂ ಸಮೀಚೀನವಾದ ಉತ್ತರಗಳನ್ನು ನೀಡಿದ್ದೇನೆ. ಹೆಚ್ಚು ವರ್ಣಿಸಿ ಹೇಳುವುದ ರಿಂದೇನು ಪ್ರಯೋಜನ? (ನೀನು ಬಯಸುವುದು ಗುಣದೋಷಗಳ ವಿವೇಚನೆ) ಸಂಕ್ಷೇಪವಾಗಿ ಗುಣದೋಷಗಳ ಲಕ್ಷಣ ಇಷ್ಟೇ. 'ಇದು ಗುಣ-ಇದು ದೋಷ' ಎಂದು ಬಿಡಿಸಿ ತಿಳಿಯುವುದೇ ದೋಷ! ಉಭಯವನ್ನೂ ಎಣಿಸದಿರುವ ತಾಟಸ್ಥ್ಯ ಸ್ವಭಾವವೇ ಗುಣ!" ಎಂದನು (೪೫).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಹತ್ತೊಂಬತ್ತನೆಯ ಅಧ್ಯಾಯ

---

1. ಹೀಗೆಯೇ ಅಶಮ, ಅದಮ—ಮೊದಲಾದುದರ ಸ್ವರೂಪವನ್ನು ತಿಳಿದುಕೊಳ್ಳ ಬೇಕು.

*

## ವಿಂಶಾಧ್ಯಾಯಃ

ಉದ್ಧವ ಉವಾಚ—

ವಿಧಿಶ್ಚ ಪ್ರತಿಷೇಧಶ್ಚ ನಿಗಮೋ ಹೀಶ್ವರಸ್ಯ ತೇ ।
ಅವೇಕ್ಷತೇಽರವಿಂದಾಕ್ಷ ಗುಣಂ ದೋಷಂ ಚ ಕರ್ಮಣಾಮ್ ॥ ೧

ವರ್ಣಾಶ್ರಮವಿಕಲ್ಪಂ ಚ ಪ್ರತಿಲೋಮಾನುಲೋಮಜಮ್ ।
ದ್ರವ್ಯದೇಶವಯಃಕಾಲಾನ್ ಸ್ವರ್ಗಂ ನರಕಮೇವ ಚ ॥ ೨

ಗುಣದೋಷಭಿದಾದೃಷ್ಟಿಮಂತರೇಣ ವಚಸ್ತವ ।
ನಿಃಶ್ರೇಯಸಂ ಕಥಂ ನೃಣಾಂ ನಿಷೇಧವಿಧಿಲಕ್ಷಣಮ್ ॥ ೩

## ಅಧ್ಯಾಯ ೨೦

ಭೇದದೃಷ್ಟಿಯನ್ನು ತಳ್ಳುವುದು ಹೇಗೆಂದು ಉದ್ಧವನ ಆಕ್ಷೇಪ. ಉತ್ತರವಾಗಿ ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗಗಳ ನಿರೂಪಣೆ.

ಆಗ ಉದ್ಧವನು ಈ ರೀತಿಯಲ್ಲಿ ಆಕ್ಷೇಪವೆತ್ತಿ ಮಾತಾಡಿದನು : "ಹೇ ಅರವಿಂದನೇತ್ರ, ವಿಧಿ ಮತ್ತು ಪ್ರತಿಷೇಧ ಎಂಬುದು ಈಶ್ವರನಾದ ನಿನ್ನ ವೇದರೂಪದಲ್ಲಿರುವ ಆಜ್ಞೆಯಾಗಿದೆ. ಈ ಆಜ್ಞೆಯಾದರೋ ವಿಧಿಸಲ್ಪಡುವ ಕರ್ಮದಲ್ಲಿರುವ ಗುಣವನ್ನೂ ಪ್ರತಿಷೇಧಿಸಲ್ಪಡುವ ಕರ್ಮದಲ್ಲಿರುವ ದೋಷವನ್ನೂ ಅಪೇಕ್ಷಿಸುತ್ತದೆ (೧). ಈ ವೇದಾಜ್ಞೆಯು ವರ್ಣಾಶ್ರಮಗಳಲ್ಲಿರುವ ಗುಣದೋಷರೂಪವಾದ ಭೇದವನ್ನೂ ಅನುಲೋಮ ಪ್ರತಿಲೋಮಜನ್ಯಮಿಶ್ರಜಾತಿಗಳ ಭೇದವನ್ನು ಅನುಸರಿಸಿ ಹೊರಟಿರುತ್ತದೆ. ದ್ರವ್ಯ, ದೇಶ, ವಯಸ್ಸು, ಕಾಲಗಳನ್ನು ಆಯಾ ಕರ್ಮಗಳಿಗೆ ಅನುಗುಣವಾಗಿ ಅರ್ಹತೆಯೆಂಬ ಗುಣದಿಂದಲೂ ಅನರ್ಹತೆಯೆಂಬ ದೋಷದಿಂದಲೂ ಗೊತ್ತುಪಡಿಸುತ್ತದೆ. ಗುಣಾನುಸಾರವಾಗಿ ಸ್ವರ್ಗವನ್ನೂ ದೋಷಾನುಸಾರವಾಗಿ ನರಕವನ್ನೂ ಕರ್ಮಫಲವೆಂದು ವೇದವು ತಿಳಿಸುತ್ತದೆ (೨). (ಇದು ಗುಣ, ಇದು ದೋಷ—ಎಂದು ಬಿಡಿಸಿ ತಿಳಿಯುವುದೇ ದೋಷ, ಉಭಯವನ್ನೂ ಎಣಿಸದಿರುವುದೇ ಗುಣ—ಎಂದು ಹೇಳುತ್ತೀಯಲ್ಲ, ಇದು ಹೇಗೆ ?) 'ಇದು ಗುಣ-ಇದು ದೋಷ' ಎಂಬ ಭೇದದೃಷ್ಟಿ ಇಲ್ಲದೇ ಹೋದರೆ, ವಿಧಿನಿಷೇಧರೂಪವಾದ ನಿನ್ನ ವೇದವಾಣಿಯು ಹೇಗೆ ಸಂಗತವಾಗುತ್ತದೆ ? ಅವುಗಳಿಲ್ಲದೆ ಹೋದರೆ

ಪಿತೃದೇವಮನುಷ್ಯಾಣಾಂ ವೇದಶ್ಚಕ್ಷುಸ್ತವೇಶ್ವರ ।
ಶ್ರೇಯಸ್ತ್ವನುಪಲಬ್ಧೇಽರ್ಥೇ ಸಾಧ್ಯಸಾಧನಯೋರಪಿ ॥ ೪

ಗುಣದೋಷಭಿದಾದೃಷ್ಟಿರ್ನಿಗಮಾತ್ತೇ ನಹಿ ಸ್ವತಃ ।
ನಿಗಮೇನಾಪವಾದಶ್ಚ ಭಿದಾಯಾ ಇತಿ ಹ ಭ್ರಮಃ ॥ ೫

ಶ್ರೀಭಗವಾನುವಾಚ—

ಯೋಗಾಸ್ತ್ರಯೋ ಮಯಾ ಪ್ರೋಕ್ತಾ ನೃಣಾಂ ಶ್ರೇಯೋವಿಧಿತ್ಸಯಾ ।
ಜ್ಞಾನಂ ಕರ್ಮ ಚ ಭಕ್ತಿಶ್ಚ ನೋಪಾಯೋಽನ್ಯೋಽಸ್ತಿ ಕುತ್ರಚಿತ್ ॥ ೬

ನಿರ್ವಿಣ್ಣಾನಾಂ ಜ್ಞಾನಯೋಗೋ ನ್ಯಾಸಿನಾಮಿಹ ಕರ್ಮಸು ।
ತೇಷ್ವನಿರ್ವಿಣ್ಣಚಿತ್ತಾನಾಂ ಕರ್ಮಯೋಗಸ್ತು ಕಾಮಿನಾಮ್ ॥ ೭

---

ಜನರಿಗೆ ನಿಃಶ್ರೇಯಸವಾಗುವುದಾದರೂ ಹೇಗೆ? (೩). ಓ ಪರಮೇಶ್ವರ, ಪಿತೃಗಳಿಗಾಗಲಿ ದೇವತೆಗಳಿಗಾಗಲಿ ಮನುಷ್ಯರಿಗಾಗಲಿ ನಿನ್ನ ವೇದವೇ ಕಣ್ಣು. ಬೇರೆ ಪ್ರಮಾಣದಿಂದ ಗೊತ್ತಾಗದಿರುವ ಸ್ವರ್ಗಾದಿಫಲಗಳಲ್ಲಾಗಲಿ ಮೋಕ್ಷದಲ್ಲಾಗಲಿ, ಈ ಕೃತ್ಯಕ್ಕೆ ಇದು ಸಾಧ್ಯವಾದ ಫಲ, ಈ ಫಲಕ್ಕೆ ಇದು ಸಾಧನ—ಎಂದು ಗೊತ್ತುಪಡಿಸುವುದರಲ್ಲಾಗಲಿ ವೇದವೇ ಶ್ರೇಷ್ಠವಾದ ನೇತ್ರವಾಗಿದೆ (೪). ನಿನ್ನ ಆಜ್ಞಾರೂಪವಾದ ವೇದದಿಂದಲೇ ಇದು ಸರಿ—ಇದು ತಪ್ಪು ಎಂಬುದಾಗಿ ಗುಣದೋಷಗಳ ಭೇದದೃಷ್ಟಿಯು [1]ಹುಟ್ಟುತ್ತದೆಯೇ ಹೊರತು ತಾನಾಗಿ ಅಲ್ಲ (ಇದು ಧರ್ಮ, ಇದು ಅಧರ್ಮ—ಎಂಬುದನ್ನು ವೇದದಿಂದಲೇ ನಿರ್ಣಯಿಸಬೇಕು). ಈಗಲಾದರೋ ಗುಣದೋಷಗಳಲ್ಲಿ ಭೇದದೃಷ್ಟಿಯನ್ನು ತಳ್ಳಿಹಾಕಬೇಕೆಂದು ನಿನ್ನ ವಾಣಿಯೇ ಬೋಧಿಸುತ್ತಿದೆ! ಅಯ್ಯೊ, ನನಗೆ ಭ್ರಮೆಯಾಗುತ್ತಿದೆ!" ಎಂದನು (೫). ಆದಕ್ಕೆ ಭಗವಂತನಿಂತೆಂದನು: "ಉದ್ಧವ, ಜನರಿಗೆ ಶ್ರೇಯಸ್ಸಾಗಲೆಂದು ನಾನು ಮೂರು ಯೋಗಗಳನ್ನು ಹೇಳಿಕೊಟ್ಟಿದ್ದೇನೆ. ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ—ಇವೇ ಆ ಮೂರು ಯೋಗಗಳು. ಇವುಗಳನ್ನು ಬಿಟ್ಟರೆ ಇನ್ನೊಂದು ಉಪಾಯವು ಎಲ್ಲಿಯೂ ಇಲ್ಲ (೬). ಕರ್ಮಫಲಗಳಲ್ಲಿ ನಿರ್ವೇದ

---

1. ವಿಧಿಸಬೇಕಾದರೆ ಗುಣವೂ ನಿಷೇಧಿಸಬೇಕಾದರೆ ದೋಷವೂ ಇದ್ದೇ ಇರಬೇಕು. ವೇದವೂ ವೇದಮೂಲಕವಾದ ಸ್ಮೃತಿಯೂ ವಿಧಿನಿಷೇಧಘಟಿತವಾದವು 'ಶ್ರುತಿಸ್ಮೃತೀ ಮಮೈವಾಜ್ಞೇ'. ವರ್ಣಾಶ್ರಮಗಳಲ್ಲಿಯೂ ದೇಶಕಾಲಾದಿಗಳಲ್ಲಿಯೂ ಇರುವ ಗುಣದೋಷಗಳನ್ನವಲಂಬಿಸಿಯೇ ಇವು ಪ್ರವೃತ್ತವಾಗಿವೆಯೆಂದು ಉದ್ಧವನ ಆಕ್ಷೇಪದ ಸಾರಾಂಶ.

ಯದೃಚ್ಛಯಾ ಮತ್ಕಥಾದೌ ಜಾತಶ್ರದ್ಧಸ್ತು ಯಃ ಪುಮಾನ್
ನ ನಿರ್ವಿಣ್ಣೋ ನಾತಿಸಕ್ತೋ ಭಕ್ತಿಯೋಗೋಽಸ್ಯ ಸಿದ್ಧಿದಃ ॥ ೮

ತಾವತ್ ಕರ್ಮಾಣಿ ಕುರ್ವೀತ ನ ನಿರ್ವಿದ್ಯೇತ ಯಾವತಾ ।
ಮತ್ಕಥಾಶ್ರವಣಾದೌ ವಾ ಶ್ರದ್ಧಾ ಯಾವನ್ನ ಜಾಯತೇ ॥ ೯

ಸ್ವಧರ್ಮಸ್ಥೋ ಯಜನ್ ಯಜ್ಞೈರನಾಶೀಃಕಾಮ ಉದ್ಧವ ।
ನ ಯಾತಿ ಸ್ವರ್ಗನರಕೌ ಯದ್ಯನ್ಯನ್ನ ಸಮಾಚರೇತ್ ॥ ೧೦

ಅಸ್ಮಿನ್ ಲೋಕೇ ವರ್ತಮಾನಃ ಸ್ವಧರ್ಮಸ್ಥೋಽನಘಃ ಶುಚಿಃ ।
ಜ್ಞಾನಂ ವಿಶುದ್ಧಮಾಪ್ನೋತಿ ಮದ್ಭಕ್ತಿಂ ವಾ ಯದೃಚ್ಛಯಾ ॥ ೧೧

---

ವನ್ನು ಹೊಂದಿ ಕರ್ಮವನ್ನು ತ್ಯಜಿಸತಕ್ಕವರಿದ್ದಾರಲ್ಲ, ಅವರಿಗೆ ಜ್ಞಾನಯೋಗವು ಹೇಳಿಸಿದ್ದು. ಕರ್ಮಫಲಗಳಲ್ಲಿ ಯಾರ ಮನಸ್ಸಿಗೆ ಇನ್ನೂ ವೈರಾಗ್ಯ ಹುಟ್ಟಿಲ್ಲವೋ ಅಂತಹವರಿಗೆ ಕರ್ಮಯೋಗವು ಸಿದ್ಧಿಕಾರಕವಾಗುತ್ತವೆ (೭). ಇನ್ನು ಭಾಗ್ಯವಶದಿಂದ ಯಾವಾತನಿಗೆ ನನ್ನ ಕಥೆ ಮುಂತಾದವುಗಳಲ್ಲಿ ಶ್ರದ್ಧೆ ಹುಟ್ಟಿರುತ್ತದೆಯೋ, ಕರ್ಮಫಲಗಳಲ್ಲಿ ಪೂರ್ತಿಯಾಗಿ ವಿರಕ್ತಿಯೂ ಇಲ್ಲ—ವಿಶೇಷವಾದ ಆಸಕ್ತಿಯೂ ಇಲ್ಲ—ಎಂಬವನಾಗಿರುತ್ತಾನೋ ಅವನಿಗೆ ಭಕ್ತಿಯೋಗವು ಸಿದ್ಧಿಯನ್ನು ಕೊಡುತ್ತದೆ (೮). ಎಲ್ಲಿಯುವರೆಗೆ ಪೂರ್ಣವೈರಾಗ್ಯ ಹುಟ್ಟುವುದಿಲ್ಲವೋ ಅಲ್ಲಿಯುವರೆಗೆ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡಲೇಬೇಕು. ಅಥವಾ ಎಲ್ಲಿಯುವರೆಗೆ ನನ್ನ ಕಥಾಶ್ರವಣಾದಿಗಳಲ್ಲಿ ಶ್ರದ್ಧೆ ಹುಟ್ಟುವುದಿಲ್ಲವೋ ಅಲ್ಲಿಯುವರೆಗೆ [1]ಮಾಡಲೇಬೇಕು (೯). ಉದ್ಧವ, ಯಾವನು ಫಲಾಪೇಕ್ಷೆಯನ್ನು ವರ್ಜಿಸಿ ಸ್ವಧರ್ಮಸ್ಥನಾಗಿರುವನೋ, ಯಜ್ಞಗಳನ್ನಾಚರಿಸುತ್ತಿರುವನೋ, ಅವನು ನಿಷಿದ್ಧವನ್ನಾಗಲಿ ಕಾಮ್ಯವನ್ನಾಗಲಿ ಆಚರಿಸದಿರುವುದರಿಂದ, ಅವನಿಗೆ ಸ್ವರ್ಗವೂ ಇಲ್ಲ, ನರಕವೂ ಇಲ್ಲ (೧೦). ನಿಷಿದ್ಧಕರ್ಮವನ್ನು ತ್ಯಜಿಸಿ ಸ್ವಧರ್ಮಸ್ಥನಾಗಿರುವ ಆ ಕರ್ಮಯೋಗಿಯು

---

1. ಈ ಪ್ರಕರಣದ ಒಟ್ಟು ತಾತ್ಪರ್ಯವನ್ನು ಶ್ರೀಧರಸ್ವಾಮಿಗಳು ಹೀಗೆ ನಿರ್ಣಯಿಸಿದ್ದಾರೆ:—ಕಾಮ್ಯಕರ್ಮಗಳಲ್ಲಿ ತೊಡಗಿದವನಿಗೆ ಸರ್ವಾತ್ಮನಾ ವಿಧಿನಿಷೇಧಗಳುಂಟು. ನಿಷ್ಕಾಮಕರ್ಮಯೋಗಿಗೆ ಯಥಾಶಕ್ತಿ. ಆತನು ಜ್ಞಾನಯೋಗದಲ್ಲಾಗಲಿ ಭಕ್ತಿಯೋಗದಲ್ಲಾಗಲಿ ಅಧಿಕಾರವನ್ನು ಪಡೆದಾಗ ವಿಧಿನಿಷೇಧಗಳು ಇನ್ನೂ ಕಡಿಮೆ. ಅವುಗಳಿಂದ ಸಿದ್ಧಿಯನ್ನು ಪಡೆದವನಿಗೆ ವಿಧಿನಿಷೇಧಗಳಿಲ್ಲ.

ಸ್ವರ್ಗಿಣೋऽಪ್ಯೇತಮಿಚ್ಛಂತಿ ಲೋಕಂ ನಿರಯಿಣಸ್ತಥಾ ।
ಸಾಧಕಂ ಜ್ಞಾನಭಕ್ತಿಭ್ಯಾಮುಭಯಂ ತದಸಾಧಕಮ್ ॥ ೧೨

ನ ನರಃ ಸ್ವರ್ಗತಿಂ ಕಾಂಕ್ಷೇನ್ನಾರಕೀಂ ವಾ ವಿಚಕ್ಷಣಃ ।
ನೇಮಂ ಲೋಕಂ ಚ ಕಾಂಕ್ಷೇತ ದೇಹಾವೇಶಾತ್ ಪ್ರಮಾದ್ಯತಿ ॥ ೧೩

ಏತದ್ ವಿದ್ವಾನ್ ಪುರಾ ಮೃತ್ಯೋರಭವಾಯ ಘಟೇತ ಸಃ ।
ಅಪ್ರಮತ್ತ ಇದಂ ಜ್ಞಾತ್ವಾ ಮರ್ತ್ಯಮಪ್ಯರ್ಥಸಿದ್ಧಿದಮ್ ॥ ೧೪

ಛಿದ್ಯಮಾನಂ ಯಮೈರೇತೈಃ ಕೃತನೀಡಂ ವನಸ್ಪತಿಮ್ ।
ಖಗಃ ಸ್ವಕೇತಮುತ್ಸೃಜ್ಯ ಕ್ಷೇಮಂ ಯಾತಿ ಹ್ಯಲಂಪಟಃ ॥ ೧೫

---

ಚಿತ್ತಶುದ್ಧಿಯನ್ನು ಪಡೆದವನಾಗಿ ಪರಿಶುದ್ಧವಾದ ಜ್ಞಾನವನ್ನಾದರೂ ಪಡೆಯುತ್ತಾನೆ. ಅಥವಾ ಭಾಗ್ಯವಶದಿಂದ ನನ್ನಲ್ಲಿ ದೃಢವಾದ [1]ಭಕ್ತಿಯನ್ನು ಗಳಿಸುತ್ತಾನೆ (೧೧). ಉದ್ಧವ, ನರಕವಾಸಿಗಳು ಈ ಲೋಕದಲ್ಲಿ ಮಾನವದೇಹವನ್ನು ಧರಿಸಿ ಹುಟ್ಟಬೇಕೆಂದು ಬಯಸುವಂತೆ ದೇವತೆಗಳೂ ಸಹ ಮಾನವರಾಗಿ ಹುಟ್ಟಲು ಬಯಸುತ್ತಾರೆ! ಏಕೆಂದರೆ, ಮಾನವದೇಹವು ಜ್ಞಾನಭಕ್ತಿಗಳಿಗೆ ಸಾಧಕವಾಗಿದೆ. ದೇವತಾಶರೀರವೂ ನರಕಿಗಳ ಶರೀರವೂ ಜ್ಞಾನಭಕ್ತಿಗಳಿಗೆ ಸಾಧಕವಲ್ಲ (೧೨). ಬುದ್ಧಿಶಾಲಿಯಾದ ಮನುಷ್ಯನು ಸ್ವರ್ಗವನ್ನೂ ಬಯಸಬಾರದು, ನರಕವನ್ನೂ ಬಯಸಬಾರದು! ಎಂದರೆ, ಸ್ವರ್ಗನರಕಗಳಿಗೆ ಕಾರಣವಾದ ಕರ್ಮಗಳನ್ನು ಮಾಡಬಾರದು. ಹಾಗೆಯೇ (ಶ್ರೇಷ್ಠವೆಂದು ಭಾವಿಸಿ) ಮತ್ತೆ ಮನುಷ್ಯ ದೇಹವನ್ನೂ ಬಯಸಬಾರದು! ದೇಹಾಭಿಮಾನವಿದ್ದರೆ ಮನುಷ್ಯನು ಅವಧಾನಶೂನ್ಯನಾಗಿ ಪ್ರಮಾದವೆಸಗುತ್ತಾನೆ (೧೩). ಈ ದೇಹವು ಭಕ್ತಿಜ್ಞಾನಗಳಿಗೆ ಸಾಧಕವೆಂದು ಅರಿತ ಬುದ್ಧಿಶಾಲಿಯು, ಇದು ಸಿದ್ಧಿಪ್ರದವಾದರೂ ಒಂದು ದಿನ ಸತ್ತು ಹೋಗುತ್ತದೆಯೆಂಬುದನ್ನು ಮನಗಾಣಬೇಕು. ಆದ್ದರಿಂದ ಸಾವು ಬರುವುದಕ್ಕೆ ಮೊದಲೇ ಮೋಕ್ಷಪ್ರಾಪ್ತಿಗಾಗಿ ಆಲಸ್ಯವಿಲ್ಲದೆ ಪ್ರಯತ್ನಿಸಬೇಕು (೧೪). ಯಮನಂತೆ ನಿರ್ದಯರಾದ ಪುರುಷರು ಬಂದು ಮರವನ್ನು ಕಡಿಯಲು ತೊಡಗಿದಾಗ ಅದರಲ್ಲಿ ಗೂಡುಕಟ್ಟಿಕೊಂಡಿರುವ ಹಕ್ಕಿ ಏನು ಮಾಡುತ್ತದೆ? ಅದು ಆ

---

1. ಕರ್ಮಯೋಗವು ಜ್ಞಾನಯೋಗಕ್ಕೆ ಅಥವಾ ಭಕ್ತಿಯೋಗಕ್ಕೆ ಭೂಮಿಕೆಯಾಗಿರುತ್ತದೆ. ಭಕ್ತಿಯೋಗವು ಉತ್ತಮ—ಎಂದು ಅಭಿಪ್ರಾಯ.

ಅಹೋರಾತ್ರೈಶ್ಛಿದ್ಯಮಾನಂ ಬುದ್ಧ್ವಾಽಽಯುರ್ಭಯವೇಪಥುಃ ।
ಮುಕ್ತಸಂಗಃ ಪರಂ ಬುದ್ಧ್ವಾ ನಿರೀಹ ಉಪಶಾಮ್ಯತಿ ॥ ೧೬

ನೃದೇಹಮಾದ್ಯಂ ಸುಲಭಂ ಸುದುರ್ಲಭಂ
ಪ್ಲವಂ ಸುಕಲ್ಪಂ ಗುರುಕರ್ಣಧಾರಮ್ ।
ಮಯಾನುಕೂಲೇನ ನಭಸ್ವತೇರಿತಂ
ಪುಮಾನ್ ಭವಾಬ್ಧಿಂ ನ ತರೇತ್ ಸ ಆತ್ಮಹಾ ॥ ೧೭

ಯದಾಽಽರಂಭೇಷು ನಿರ್ವಿಣ್ಣೋ ವಿರಕ್ತಃ ಸಂಯತೇಂದ್ರಿಯಃ ।
ಅಭ್ಯಾಸೇನಾತ್ಮನೋ ಯೋಗೀ ಧಾರಯೇದಚಲಂ ಮನಃ ॥ ೧೮

ಧಾರ್ಯಮಾಣಂ ಮನೋ ಯರ್ಹಿ ಭ್ರಾಮ್ಯದಾಶ್ವನವಸ್ಥಿತಮ್ ।
ಅತಂದ್ರಿತೋಽನುರೋಧೇನ ಮಾರ್ಗೇಣಾತ್ಮವಶಂ ನಯೇತ್ ॥ ೧೯

---

ಮರದಲ್ಲಿ ಆಸಕ್ತಿಯನ್ನು ತೊರೆದು ಗೂಡನ್ನು ಬಿಟ್ಟು ಕ್ಷೇಮವಾಗಿ ಹಾರಿಹೋಗುತ್ತದೆ! ಹಾಗೆಯೇ ಈ ಶರೀರದ ಆಯುಸ್ಸನ್ನು ಹಗಲುರಾತ್ರಿಗಳು ಕತ್ತರಿಸಿ ಹಾಕುತ್ತಿವೆಯೆಂಬುದನ್ನರಿತ ಮನುಷ್ಯನು ಭಯದಿಂದ ನಡುಗುತ್ತಾನೆ. ಆತನು ಈ ಶರೀರದಲ್ಲಿ ಅಭಿಮಾನವನ್ನು ತೊರೆದು ಭೋಗಾಪೇಕ್ಷೆಯನ್ನು ವರ್ಜಿಸಿ ಪರತತ್ತ್ವವನ್ನರಿತು ಶಾಂತನಾಗುತ್ತಾನೆ (೧೫–೧೬). ಸರ್ವಫಲಗಳಿಗೆ ಮೂಲಕಾರಣವಾದ ಈ ಮನುಷ್ಯಶರೀರವು ಅತ್ಯಂತ ದುರ್ಲಭವಾದದ್ದು. ಹೇಗೋ ಸುಲಭವಾಗಿ ದೊರಕಿಬಿಟ್ಟಿದೆ! ಇದು ಕಾರ್ಯಸಾಧಕವಾದ ಒಂದು ನೌಕೆ. (ಶರಣಾದರೆ) ಗುರುವೆಂಬ ನಾವಿಕನು ಬಂದು ಒದಗುತ್ತಾನೆ. (ಸ್ಮರಿಸಿದರೆ ಸಾಕು) ನಾನು ಗಾಳಿಯಾಗಿ ಅನುಕೂಲರೀತಿಯಲ್ಲಿ ಬೀಸಿ ನೌಕೆಯನ್ನು ತಳ್ಳುತ್ತೇನೆ! ಉದ್ಧವ, ಇಂತಹ ನೌಕೆ ದೊರಕಿದಾಗ ಯಾವನು ಸಂಸಾರಸಾಗರವನ್ನು ದಾಟಲು ಯತ್ನಿಸುವುದಿಲ್ಲವೋ ಅವನು ಆತ್ಮಘಾತುಕ (೧೭). [1]ಯಾವಾಗ ಮನುಷ್ಯನಿಗೆ ಕರ್ಮಗಳಲ್ಲಿ ಉದ್ವೇಗ ಉಂಟಾಗಿ ವೈರಾಗ್ಯ ಹುಟ್ಟುತ್ತದೆಯೋ ಆಗ ಯೋಗಮಾರ್ಗದಲ್ಲಿ ಪ್ರವೃತ್ತನಾಗಬೇಕು. ಇಂದ್ರಿಯಗಳನ್ನು ನಿಗ್ರಹಿಸಿ ಮನೋವೃತ್ತಿಗಳನ್ನು ಆತ್ಮನಲ್ಲಿ ಕೇಂದ್ರೀಕರಿಸಿ ಮನಸ್ಸನ್ನು ಅಚಲವಾಗಿ ಹಿಡಿದು ನಿಲ್ಲಿಸಬೇಕು (೧೮). ಹಿಡಿದು

---

1. ಅವಿರಕ್ತನಾದವನಿಗೆ ಕರ್ಮಯೋಗವನ್ನು ಇದುವರೆಗೆ ಹೇಳಲಾಯಿತು. ಇನ್ನು ವಿರಕ್ತನಾದವನಿಗೆ ಜ್ಞಾನಯೋಗವನ್ನು ಹೇಳಲಾಗುತ್ತದೆ.

ಮನೋಗತಿಂ ನ ವಿಸೃಜೇಜ್ಜಿತಪ್ರಾಣೋ ಜಿತೇಂದ್ರಿಯಃ ।
ಸತ್ತ್ವಸಂಪನ್ನಯಾ ಬುದ್ಧ್ಯಾ ಮನ ಆತ್ಮವಶಂ ನಯೇತ್ ॥ ೨೦

ಏಷ ವೈ ಪರಮೋ ಯೋಗೋ ಮನಸಃ ಸಂಗ್ರಹಃ ಸ್ಮೃತಃ ।
ಹೃದಯಜ್ಞತ್ವಮನ್ವಿಚ್ಛನ್ ದಮ್ಯಸ್ಯೇವಾರ್ವತೋ ಮುಹುಃ ॥ ೨೧

ಸಾಂಖ್ಯೇನ ಸರ್ವಭಾವಾನಾಂ ಪ್ರತಿಲೋಮಾನುಲೋಮತಃ ।
ಭವಾಪ್ಯಯಾವನುಧ್ಯಾಯೇನ್ಮನೋ ಯಾವತ್ ಪ್ರಸೀದತಿ ॥ ೨೨

ನಿರ್ವಿಣ್ಣಸ್ಯ ವಿರಕ್ತಸ್ಯ ಪುರುಷಸ್ಯೋಕ್ತವೇದಿನಃ ।
ಮನಸ್ತ್ಯಜತಿ ದೌರಾತ್ಮ್ಯಂ ಚಿಂತಿತಸ್ಯಾನುಚಿಂತಯಾ ॥ ೨೩

---

ನಿಲ್ಲಿಸಿದರೂ ಮನಸ್ಸು ಒಂದೆಡೆ ನಿಲ್ಲದೆ ಅತ್ತಿತ್ತ ಚಲಿಸಿದರೆ, ಅದಕ್ಕೆ ಸ್ವಲ್ಪಸ್ವಲ್ಪ ಅವಕಾಶವನ್ನು ಕೊಡುತ್ತ, ಎಚ್ಚರಿಕೆಯಿಂದ ಮತ್ತೆ ತನ್ನ ವಶಕ್ಕೆ ತಂದುಕೊಳ್ಳಬೇಕು. ಮನಸ್ಸಿನ ಗತಿಯನ್ನು ಉಪೇಕ್ಷಿಸದೆ, ಅದು ಎತ್ತಕಡೆ ಚಲಿಸುತ್ತದೆ ಯೆಂಬುದನ್ನು ಗಮನಿಸುತ್ತಿರಬೇಕು ಜಿತಪ್ರಾಣನೂ ಜಿತೇಂದ್ರಿಯನೂ ಆಗಿ ಸಾತ್ತ್ವಿಕಬುದ್ಧಿಯಿಂದ ಮನಸ್ಸನ್ನು ಆತ್ಮಧ್ಯಾನದಲ್ಲಿ ನಿಲ್ಲಿಸಬೇಕು (೧೯–೨೦). ಸವಾರನು ಪಳಗಿಸಬೇಕಾದ ಕುದುರೆಯನ್ನು ಅದರ ಇಚ್ಛೆಯಂತೆ ಸ್ವಲ್ಪದೂರ ಬಿಡುತ್ತ, ಮತ್ತೆ ಮತ್ತೆ ಜಗ್ಗಿ ತನ್ನ ವಶಕ್ಕೆ ತೆಗೆದುಕೊಳ್ಳುತ್ತ, ಮೂಗುದಾಣವನ್ನು ಹಿಡಿದೇ ಇರುತ್ತಾನಲ್ಲವೆ? ಹಾಗೆ ಮನಸ್ಸನ್ನು ಅದರ ಇಚ್ಛೆಯಂತೆ ಸ್ವಲ್ಪ ದೂರ ಆಗಾಗಬಿಡುತ್ತ ಮತ್ತೆ ಅದನ್ನು ಜಗ್ಗಿ ಆತ್ಮನ ಕಡೆಗೆ ತಿರುಗಿಸುವುದು ಉತ್ತಮವಾದ ಯೋಗಮಾರ್ಗ (೨೧). (ಹೀಗೆ ಮನಸ್ಸು ಸ್ವಲ್ಪ ವಶವಾದ ಮೇಲೆ) ಸಕಲಭಾವಪದಾರ್ಥಗಳೂ ಅನುಲೋಮಕ್ರಮದಿಂದ—ಎಂದರೆ—ಅವ್ಯಕ್ತದಿಂದ ಮಹತ್ತು, ಮಹತ್ತಿನಿಂದ ಅಹಂಕಾರವೆಂದು ಪೃಥಿವೀಪರ್ಯಂತವಾಗಿ ಹುಟ್ಟುತ್ತವೆಯೆಂಬ ಉತ್ಪತ್ತಿಕ್ರಮವನ್ನೂ, ಪ್ರತಿಲೋಮಕ್ರಮದಿಂದ—ಎಂದರೆ—ಪೃಥಿವಿಯು ಜಲದಲ್ಲಿಯೂ ಜಲವು ಅಗ್ನಿಯಲ್ಲಿಯೂ ನಶಿಸುತ್ತದೆ ಎಂದು ಅವ್ಯಕ್ತ ಪರ್ಯಂತವಾಗಿ ಲಯವಾಗುವ ವಿನಾಶಕ್ರಮವನ್ನೂ ತತ್ತ್ವವಿವೇಚನೆಯಿಂದ ಪರಿಶೀಲಿಸಬೇಕು. ಮನಸ್ಸು ನಿಶ್ಚಲವಾಗುವವರೆಗೆ ಹೀಗೆ ಮಾಡತಕ್ಕದ್ದು (೨೨). (ಹೀಗೆ ಸಂಸಾರವೆಲ್ಲವೂ ನಶ್ವರವೆಂದು ಮನಸ್ಸಿಗೆ ನಾಟಿದಮೇಲೆ) ಸಂಸಾರದಲ್ಲಿ

ಯಮಾದಿಭಿರ್ಯೋಗಪಥೈರಾನ್ವೀಕ್ಷಿಕ್ಯಾ ಚ ವಿದ್ಯಯಾ ।
ಮಮಾರ್ಚೋಪಾಸನಾಭಿರ್ವಾ ನಾನ್ಯೈರ್ಯೋಗ್ಯಂ ಸ್ಮರೇನ್ಮನಃ ॥ ೨೪

ಯದಿ ಕುರ್ಯಾತ್ ಪ್ರಮಾದೇನ ಯೋಗೀ ಕರ್ಮವಿಗರ್ಹಿತಮ್ ।
ಯೋಗೇನೈವ ದಹೇದಂಹೋ ನಾನ್ಯತ್ತತ್ರ ಕದಾಚನ ॥ ೨೫

ಸ್ವೇ ಸ್ವೇऽಧಿಕಾರೇ ಯಾ ನಿಷ್ಠಾ ಸ ಗುಣಃ ಪರಿಕೀರ್ತಿತಃ ।
ಕರ್ಮಣಾಂ ಜಾತ್ಯಶುದ್ಧಾನಾಮನೇನ ನಿಯಮಃ ಕೃತಃ ।
ಗುಣದೋಷವಿಧಾನೇನ ಸಂಗಾನಾಂ ತ್ಯಾಜನೇಚ್ಛಯಾ ॥ ೨೬

---

ಉದ್ವಿಗ್ನನೂ ವಿರಕ್ತನೂ ಆದ ಪುರುಷನು ಗುರೂಪದಿಷ್ಟವಾದ್ದನ್ನು ಸರಿಯಾಗಿ ಅರ್ಥಮಾಡಿಕೊಂಡು, ಚಿಂತಿತವಾದ ಗುರೂಪದೇಶವನ್ನೇ ಮತ್ತೆ ಮತ್ತೆ ಅನುಚಿಂತನ ಮಾಡುವುದರಿಂದ ಮನಸ್ಸು ತನ್ನ ದೌರ್ಜನ್ಯವನ್ನು ತ್ಯಜಿಸುತ್ತದೆ (೨೩). ಯಮನಿಯಮಾದಿ ಯೋಗಮಾರ್ಗಗಳಿಂದಾಗಲಿ, ಜೀವಾತ್ಮ - ಪರಮಾತ್ಮರೆಂದರೆ ಯಾರೆಂದು ಶೋಧಿಸುವ ಜ್ಞಾನಮಾರ್ಗದಿಂದಾಗಲಿ ಅಥವಾ ನನ್ನ ಅರ್ಚನೆ ಉಪಾಸನೆಗಳಿಂದಾಗಲಿ, ಮನಸ್ಸು ಯೋಗೇಶ್ವರನಾದ ಪರಮಾತ್ಮನನ್ನು ಸ್ಮರಿಸುತ್ತ ಇರುವುದು. ಇನ್ನು ಯಾವ ಮಾರ್ಗದಿಂದಲೂ ಅಲ್ಲ (ಆಗ ಇನ್ನು ಯಾವ ಕರ್ಮವನ್ನೂ ಮಾಡಬೇಕಾದ್ದಿಲ್ಲ) (೨೪). ಒಂದುವೇಳೆ ಯೋಗಿಯಾದವನು ಪ್ರಮಾದವಶದಿಂದ [1]ನಿಷಿದ್ಧಕೃತ್ಯವನ್ನು ಮಾಡಿಬಿಟ್ಟರೆ, ಆಗ ಯೋಗದಿಂದಲೇ ಪಾಪವನ್ನು ನಿವಾರಿಸಿಕೊಳ್ಳಬೇಕು. ಬೇರೆ ಪ್ರಾಯಶ್ಚಿತ್ತಾದಿಗಳನ್ನು ಮಾಡಿ ಕೊಳ್ಳಬೇಕಾದ್ದಿಲ್ಲ (೨೫). ಮನುಷ್ಯನಿಗೆ ತನ್ನ ತನ್ನ ಯೋಗ್ಯತಾನುಸಾರವಾಗಿ ಯಾವ ಯಾವ ಅಧಿಕಾರವು ಪ್ರಾಪ್ತವಾಗಿರುತ್ತದೆಯೋ ಅದರಲ್ಲಿ ನಿಷ್ಠೆಯಿಂದಿರು ವುದೇ ಗುಣವೆನಿಸುತ್ತದೆ, ಇನ್ನೊಂದಲ್ಲ. ಸಹಜವಾಗಿ ಹುಟ್ಟಿನಿಂದಲೇ ಅಶುದ್ಧ ವಾಗಿರುವ ಕರ್ಮಗಳಿಗೆ, ವಿಧಿಪ್ರತಿಷೇಧಗಳಿಂದ ಗೊತ್ತಾಗುವ ಗುಣದೋಷಗಳ ವಿಧಾನದಿಂದ ಸಂಕೋಚವನ್ನು ಮಾಡಲಾಗಿದೆ. ಕರ್ಮಸಂಗಗಳನ್ನು ಬಿಡಿಸುವುದೇ

---

1. ಇದು ಉಪಲಕ್ಷಣ. ಜ್ಞಾನಮಾರ್ಗದವರಿಗೂ ಭಕ್ತಿಮಾರ್ಗದವರಿಗೂ ಸಹ ಅನ್ವಯಿಸುತ್ತದೆ.

ಜಾತಶ್ರದ್ಧೋ ಮತ್ಕಥಾಸು ನಿರ್ವಿಣ್ಣಃ ಸರ್ವಕರ್ಮಸು ।
ವೇದ ದುಃಖಾತ್ಮಕಾನ್ ಕಾಮಾನ್ ಪರಿತ್ಯಾಗೇಽಪ್ಯನೀಶ್ವರಃ ॥ ೨೭

ತತೋ ಭಜೇತ ಮಾಂ ಪ್ರೀತಃ ಶ್ರದ್ಧಾಲುರ್ದೃಢನಿಶ್ಚಯಃ ।
ಜುಷಮಾಣಶ್ಚ ತಾನ್ ಕಾಮಾನ್ ದುಃಖೋದರ್ಕಾಂಶ್ಚ ಗರ್ಹಯನ್॥೨೮

ಪ್ರೋಕ್ತೇನ ಭಕ್ತಿಯೋಗೇನ ಭಜತೋ ಮಾಸಕೃನ್ಮುನೇಃ ।
ಕಾಮಾ ಹೃದಯ್ಯಾ ನಶ್ಯಂತಿ ಸರ್ವೇ ಮಯಿ ಹೃದಿ ಸ್ಥಿತೇ ॥ ೨೯

ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ಮಯಿ ದೃಷ್ಟೇಽಖಿಲಾತ್ಮನಿ ॥ ೩೦

---

ಈ ಸಂಕೋಚದ [1]ಉದ್ದೇಶ (೨೭). ಯಾವಾತನಿಗೆ ನನ್ನ ಕಥೆಗಳಲ್ಲಿ ಶ್ರದ್ಧೆ ಹುಟ್ಟುತ್ತದೆಯೋ ಆತನಿಗೆ ಸಮಸ್ತಕರ್ಮಗಳಲ್ಲಿಯೂ ನಿರ್ವೇದ ಉಂಟಾಗುತ್ತದೆ. ಕಾಮಗಳು ದುಃಖಾತ್ಮಕಗಳೆಂದು ಗೊತ್ತಿದ್ದರೂ ಅವನ್ನು ತ್ಯಜಿಸುವ ಮನೋದಾರ್ಢ್ಯವು ಇರುವುದಿಲ್ಲ (೨೭). ಆದರೂ ಭಕ್ತಿಯಿಂದ ಎಲ್ಲವೂ ಸರಿಯಾದೀತೆಂದು ಶ್ರದ್ಧೆಯನ್ನಿಟ್ಟು ದೃಢನಿಶ್ಚಯವನ್ನು ಪಡೆದು ಸಂತೋಷದಿಂದ ನನ್ನನ್ನು ಭಜಿಸುತ್ತಿರಬೇಕು. ವಿಷಯಸುಖಗಳನ್ನು ಅನುಭವಿಸುತ್ತಿದ್ದರೂ ಪರಿಣಾಮದಲ್ಲಿ ಅವು ದುಃಖಕಾರಿಗಳೆಂದು ನಿಂದಾಭಾವವನ್ನು ತಳೆದಿರಬೇಕು (೨೮). ಹಿಂದೆ ಹೇಳಿದ ಭಕ್ತಿಯೋಗದ ಮಾರ್ಗದಿಂದ ಸತತವಾಗಿ ನನ್ನನ್ನು ಭಜಿಸುತ್ತ ಇದ್ದರೆ, ಕಾಮನೆಗಳು ಅಡಗುತ್ತ ಹೋಗುವುವು. ಆ ಸಾಧುಪುರುಷನ ಹೃದಯದಲ್ಲಿ ನಾನು ನಿಂತಾಗ, ಹೃದಯದಲ್ಲಿದ್ದ ವಿಷಯ ಕಾಮನೆಗಳು ನಶಿಸಿ ಹೋಗುತ್ತವೆ (೨೯). ಸರ್ವಾತ್ಮನಾದ ನನ್ನ ದರ್ಶನವಾದಾಗ ಹೃದಯದ ಅಹಂಕಾರ ಗ್ರಂಥಿಯು ಬಿಚ್ಚಿಹೋಗುತ್ತದೆ. ಅದರಲ್ಲಿದ್ದ ಸಕಲಸಂಶಯಗಳೂ ಕತ್ತರಿಸಿಹೋಗುತ್ತವೆ. ಸಂಸಾರಹೇತುಗಳಾದ ಕರ್ಮಗಳು ಧ್ವಂಸವಾಗುತ್ತವೆ (೩೦).

---

1. ಮನುಷ್ಯನಿಗೆ ಕರ್ಮದಲ್ಲಿ ಪ್ರವೃತ್ತಿಯು ಹುಟ್ಟನಿಂದಲೇ ಬಂದಿರುತ್ತದೆ. ಈ ಪ್ರವೃತ್ತಿಯೇ ಅಶುದ್ಧವಾದದ್ದು. ಈ ಕರ್ಮಪ್ರವೃತ್ತಿಯನ್ನು ಕ್ರಮವಾಗಿ ತಪ್ಪಿಸುವ ಉದ್ದೇಶದಿಂದ ನಿಷೇಧಶಾಸ್ತ್ರ ಹುಟ್ಟಿದೆ. ವೇದಕ್ಕೆ ನಿಷೇಧದಲ್ಲಿ ತಾತ್ಪರ್ಯ, ವಿಧಿಯಲ್ಲಲ್ಲ —ಎಂದು ಅಭಿಪ್ರಾಯ. ಶುದ್ಧಚಿತ್ತರು ಯಾವ ಕರ್ಮವನ್ನೂ ಮಾಡಬೇಕಾದ್ದಿಲ್ಲ.

ತಸ್ಮಾನ್ಮದ್ಭಕ್ತಿಯುಕ್ತಸ್ಯ ಯೋಗಿನೋ ವೈ ಮದಾತ್ಮನಃ ।
ನ ಜ್ಞಾನಂ ನ ಚ ವೈರಾಗ್ಯಂ ಪ್ರಾಯಃ ಶ್ರೇಯೋ ಭವೇದಿಹ ॥ ೩೧

ಯತ್ ಕರ್ಮಭಿರ್ಯತ್ತಪಸಾ ಜ್ಞಾನವೈರಾಗ್ಯತಶ್ಚ ಯತ್ ।
ಯೋಗೇನ ದಾನಧರ್ಮೇಣ ಶ್ರೇಯೋಭಿರಿತರೈರಪಿ ॥ ೩೨

ಸರ್ವಂ ಮದ್ಭಕ್ತಿಯೋಗೇನ ಮದ್ಭಕ್ತೋ ಲಭತೇಽಂಜಸಾ ।
ಸ್ವರ್ಗಾಪವರ್ಗಂ ಮದ್ಧಾಮ ಕಥಂಚಿದ್ ಯದಿ ವಾಂಛತಿ ॥ ೩೩

ನ ಕಿಂಚಿತ್ ಸಾಧವೋ ಧೀರಾ ಭಕ್ತಾ ಹ್ಯೇಕಾಂತಿನೋ ಮಮ ।
ವಾಂಛಂತ್ಯಪಿ ಮಯಾ ದತ್ತಂ ಕೈವಲ್ಯಮಪುನರ್ಭವಮ್ ॥ ೩೪

ನೈರಪೇಕ್ಷ್ಯಂ ಪರಂ ಪ್ರಾಹುರ್ನಿಃಶ್ರೇಯಸಮನಲ್ಪಕಮ್ ।
ತಸ್ಮಾನ್ನಿರಾಶಿಷೋ ಭಕ್ತಿರ್ನಿರಪೇಕ್ಷಸ್ಯ ಮೇ ಭವೇತ್ ॥ ೩೫

---

ಆದ್ದರಿಂದ ನನ್ನಲ್ಲೇ ಚಿತ್ತವನ್ನಿಟ್ಟು ಭಕ್ತಿಸಂಪನ್ನನಾದ ಭಕ್ತಿಯೋಗಿಗೆ ಸಾಮಾನ್ಯವಾಗಿ ಜ್ಞಾನವಾಗಲಿ ವೈರಾಗ್ಯವಾಗಲಿ ಶ್ರೇಯಃಸಾಧನವಲ್ಲವೆನ್ನಬೇಕು (೩೧). ಕರ್ಮಗಳಿಂದ, ತಪಸ್ಸಿನಿಂದ, ಜ್ಞಾನವೈರಾಗ್ಯಗಳಿಂದ, ಯೋಗದಿಂದ, ದಾನಧರ್ಮಗಳಿಂದ ಅಥವಾ ತೀರ್ಥಯಾತ್ರೆಯೇ ಮೊದಲಾದ ಇತರ ಶ್ರೇಯಃ ಸಾಧನಗಳಿಂದ ಲಭಿಸುವ ಚಿತ್ತಶುದ್ಧಿಯೇ ಮೊದಲಾದ ಯಾವ ಯಾವ ಪ್ರಯೋ-ಜನವುಂಟೋ ಅದೆಲ್ಲವನ್ನೂ ನನ್ನ ಭಕ್ತನು ನನ್ನ ಭಕ್ತಿಯೋಗವೊಂದರಿಂದಲೇ ಅನಾಯಾಸವಾಗಿ ಪಡೆಯುವನು. ಒಂದುವೇಳೆ ಆತನು ಸ್ವರ್ಗವನ್ನೋ ಮೋಕ್ಷವನ್ನೋ ನನ್ನ ಧಾಮವಾದ ವೈಕುಂಠವನ್ನೋ ಬಯಸಿದರೆ ಅದನ್ನೂ ಪಡೆಯುತ್ತಾನೆ (೩೨–೩೩). ಸಾಧುಗಳೂ ಧೀರರೂ ಆದ ನನ್ನ ಏಕಾಂತಭಕ್ತರು ಭಕ್ತಿಗೆ ಯಾವ ಫಲವನ್ನೂ ಬಯಸುವುದಿಲ್ಲ. ಜನ್ಮರಹಿತವಾದ ಕೈವಲ್ಯವನ್ನು ನಾನಾಗಿ ಕೊಡುತ್ತೇನೆಂದರೂ ಬೇಡವೆನ್ನುತ್ತಾರೆ. ಅಪೇಕ್ಷಾರಾಹಿತ್ಯವೇ ಉತ್ಕೃಷ್ಟವೂ ಮಹತ್ತರವೂ ಆದ ನಿಃಶ್ರೇಯಸವೆಂದೂ ಅದಕ್ಕೆ ಸಾಧನವೆಂದೂ ಹೇಳುತ್ತಾರೆ. ನಿರಪೇಕ್ಷನಾದ ನನ್ನಲ್ಲಿ ಭಕ್ತಿಯು ನಿರಪೇಕ್ಷನಾದವನಿಗೆ ಮಾತ್ರ ಹುಟ್ಟುತ್ತದೆ! (೩೪–೩೫).

ನ ಮಯ್ಯೇಕಾಂತಭಕ್ತಾನಾಂ ಗುಣದೋಷೋದ್ಭವಾ ಗುಣಾಃ ।
ಸಾಧೂನಾಂ ಸಮಚಿತ್ತಾನಾಂ ಬುದ್ಧೇಃ ಪರಮುಪೇಯುಷಾಮ್ ॥ ೩೬
ಏವಮೇತಾನ್ ಮಯಾಽಽದಿಷ್ಟಾನನುತಿಷ್ಠಂತಿ ಮೇ ಪಥಃ ।
ಕ್ಷೇಮಂ ವಿಂದಂತಿ ಮತ್ಸ್ಥಾನಂ ಯದ್ ಬ್ರಹ್ಮ ಪರಮಂ ವಿದುಃ ॥ ೩೭

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ವಿಂಶಾಧ್ಯಾಯಃ



ರಾಗದ್ವೇಷಗಳಿಲ್ಲದ ಸಾಧುಗಳೂ ಸರ್ವತ್ರ ಸಮಚಿತ್ತರೂ ಬುದ್ಧಿಗೆ ಪರನಾದ ಈಶ್ವರನನ್ನು ಪಡೆದುಕೊಂಡವರೂ ಆದ ನನ್ನ ಏಕಾಂತಭಕ್ತರಿಗೆ, ಗುಣ ದೋಷನಿಮಿತ್ತಗಳಾದ ವಿಧಿನಿಷೇಧಗಳಿಂದ ಹುಟ್ಟುವ ಪುಣ್ಯಪಾಪಗಳು ಅಂಟುವು ದಿಲ್ಲ (೩೬). ಉದ್ಧವ, ಈ ಪ್ರಕಾರವಾಗಿ ನನ್ನ ಪ್ರಾಪ್ತಿಗೆ ಮಾರ್ಗಗಳೇನೆಂಬು ದನ್ನು ತೋರಿಸಿಕೊಟ್ಟಿದ್ದೇನೆ. ಈ ಮಾರ್ಗಗಳಲ್ಲಿ ಹೋಗತಕ್ಕವರು ನನ್ನ ಸ್ಥಾನ ವಾದ ವೈಕುಂಠವನ್ನು ಕ್ಷೇಮವಾಗಿ ತಲುಪುವರು ಯಾವುದು ಪರಬ್ರಹ್ಮವೋ ಅದನ್ನೂ ತಿಳಿಯುವರು" ಎಂದನು (೩೭).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಇಪ್ಪತ್ತನೆಯ ಅಧ್ಯಾಯ



# ಏಕವಿಂಶಾಧ್ಯಾಯಃ

ಶ್ರೀಭಗವಾನುವಾಚ—

ಯ ಏತಾನ್ ಮತ್ಪಥೋ ಹಿತ್ವಾ ಭಕ್ತಿಜ್ಞಾನಕ್ರಿಯಾತ್ಮಕಾನ್ ।
ಕ್ಷುದ್ರಾನ್ ಕಾಮಾಂಶ್ಚಲೈಃ ಪ್ರಾಣೈರ್ಜುಷಂತಃ ಸಂಸರಂತಿ ತೇ ॥ ೧

ಸ್ವೇ ಸ್ವೇಽಧಿಕಾರೇ ಯಾ ನಿಷ್ಠಾ ಸ ಗುಣಃ ಪರಿಕೀರ್ತಿತಃ ।
ವಿಪರ್ಯಯಸ್ತು ದೋಷಃ ಸ್ಯಾದುಭಯೋರೇಷ ನಿಶ್ಚಯಃ ॥ ೨

ಶುದ್ಧ್ಯಶುದ್ಧೀ ವಿಧೀಯೇತೇ ಸಮಾನೇಷ್ವಪಿ ವಸ್ತುಷು ।
ದ್ರವ್ಯಸ್ಯ ವಿಚಿಕಿತ್ಸಾರ್ಥಂ ಗುಣದೋಷೌ ಶುಭಾಶುಭೌ ॥ ೩

## ಅಧ್ಯಾಯ ೨೧

ಕರ್ಮಯೋಗಾದಿಗಳಲ್ಲೊಂದನ್ನೂ ಮಾಡದವರಿಗೆ ಸಂಭವಿಸುವ ಗತಿ. ವೇದವು ಪರೋಕ್ಷಪ್ರಿಯ. ಆದರ ಅರ್ಥಜ್ಞಾನ ಸುಲಭವಲ್ಲ. ಶಬ್ದಬ್ರಹ್ಮದ ನಿರೂಪಣೆ.

ಭಗವಂತನು ಹೇಳಿದನು : “ಉದ್ಧವ, ನನ್ನನ್ನು ಸೇರಬಹುದಾದ ಭಕ್ತಿಮಾರ್ಗ, ಜ್ಞಾನಮಾರ್ಗ, ಕರ್ಮಮಾರ್ಗ—ಎಂಬ ಮೂರು ವಿಭಾಗಗಳನ್ನು ಹೇಳಿದೆನಷ್ಟೆ. ಯಾರು ಈ ಮೂರನ್ನೂ ತ್ಯಜಿಸಿ, ಕ್ಷುದ್ರವಾದ ವಿಷಯಸುಖಗಳನ್ನು ಪ್ರಾಣೇಂದ್ರಿಯಗಳಿಂದ ಸೇವಿಸುತ್ತ ಇದ್ದುಬಿಡುವರೋ ಅವರು ಸಂಸಾರದಲ್ಲಿ ಸಿಕ್ಕಿಕೊಂಡಿರುತ್ತಾರೆ (೧). ಯೋಗ್ಯತಾನುಗುಣವಾಗಿ ಪ್ರಾಪ್ತವಾದ ತಮ್ಮ ತಮ್ಮ ಅಧಿಕಾರದಲ್ಲಿ ನಿಷ್ಠೆಯಿಂದಿರುವುದು ಗುಣವೆಂದೂ ವಿಪರೀತವಾಗಿ ವರ್ತಿಸುವುದು [1]ದೋಷವೆಂದೂ ಗುಣದೋಷಗಳ ನಿರ್ಣಯವನ್ನೂ ಹೇಳಿದ್ದೇನೆ (೨).

---

1. ನಿಷ್ಕಾಮಕರ್ಮಿಗಳಾದ ಸಾಧಕರಿಗೆ ನಿತ್ಯನೈಮಿತ್ತಿಕ ಕರ್ಮಗಳು ಚಿತ್ತಶೋಧಕವಾದ್ದರಿಂದ ಗುಣ. ಅವನ್ನು ಆಚರಿಸದಿರುವುದು ದೋಷ. ಶುದ್ಧಚಿತ್ತರಾದ ಜ್ಞಾನನಿಷ್ಠರಿಗೆ ಜ್ಞಾನಾಭ್ಯಾಸವೇ ಗುಣ. ಭಕ್ತಿನಿಷ್ಠರಿಗೆ ಶ್ರವಣಕೀರ್ತನಾದಿ ಭಕ್ತಿಯೇ ಗುಣ. ವಿರುದ್ಧವಾದದ್ದು ಈ ಉಭಯರಿಗೂ ದೋಷ. ಕಾಮ್ಯಕರ್ಮಿಗಳ ವಿಷಯವನ್ನು ಇನ್ನು ಮುಂದೆ ಹೇಳಲಾಗುತ್ತದೆ.

ಧರ್ಮಾರ್ಥಂ ವ್ಯವಹಾರಾರ್ಥಂ ಯಾತ್ರಾರ್ಥಮಿತಿ ಚಾನಘ ।
ದರ್ಶಿತೋಽಯಂ ಮಯಾಽಽಚಾರೋ ಧರ್ಮಮುದ್ವಹತಾಂ ಧುರಮ್ ॥

ಭೂಮ್ಯಂಬ್ವಗ್ನ್ಯನಿಲಾಕಾಶಾ ಭೂತಾನಾಂ ಪಂಚ ಧಾತವಃ ।
ಆಬ್ರಹ್ಮಸ್ಥಾವರಾದೀನಾಂ ಶಾರೀರಾ ಆತ್ಮಸಂಯುತಾಃ ॥ ೫

---

ವಸ್ತುಗಳು [1]ಎಲ್ಲರಿಗೂ ಸಮಾನವೇ ಆಗಿದ್ದರೂ ಕೆಲವರಿಗೆ ಇದರಲ್ಲಿ ಶುದ್ಧಿ (ಯೋಗ್ಯತೆ), ಇದರಲ್ಲಿ ಅಶುದ್ಧಿ (ಅಯೋಗ್ಯತೆ) ಎಂಬುದೂ (ಹಿಂದೆ ಹೇಳಿದ ವಿಧಿ ಪ್ರತಿಷೇಧಜನ್ಯಗಳಾದ) ಗುಣದೋಷಗಳೂ, ಗುಣದಿಂದ ಶುಭ—ದೋಷದಿಂದ ಅಶುಭ—ಎಂಬುದೂ ಶಾಸ್ತ್ರ ವಿಹಿತವಾಗಿವೆ. ಈ ವಿಧಿಯು ಆಯಾಪುರುಷನಿಗೆ ಆಯಾಕ್ರಿಯೆಯು ಸರಿಯೆ, ಅಲ್ಲವೆ?—ಎಂಬ ಸಂದೇಹವನ್ನು ಹುಟ್ಟಿಸುವುದರ ಮೂಲಕ ನಿರ್ಣಯವನ್ನು ಬೋಧಿಸುವುದಕ್ಕಾಗಿ ಇರುತ್ತದೆ (೩). ಶುದ್ಧಕಾರ್ಯ ದಿಂದ ಧರ್ಮ, ಅಶುದ್ಧಕಾರ್ಯದಿಂದ ಅಧರ್ಮ—ಎಂದು ಧರ್ಮವ್ಯವಸ್ಥೆಗಾಗಿ ಶುದ್ಧಿ-ಅಶುದ್ಧಿಗಳನ್ನೂ, ಕೆಲವು ಸಂದರ್ಭಗಳಲ್ಲಿ ಬ್ರಹ್ಮಚಾರಿಗಳಿಗೂ ರಾಜರಿಗೂ ಅಶೌಚವಿಲ್ಲ—ಇತ್ಯಾದಿ ಗುಣದೋಷಗಳನ್ನು ವ್ಯವಹಾರಸಿದ್ಧಿಗಾಗಿಯೂ, ಇದು ದೋಷವಾದರೂ ಆಪತ್ಕಾಲದಲ್ಲಿ ಆಚರಿಸಿದರೆ ಪಾಪವಿಲ್ಲ—ಇತ್ಯಾದಿ ಶುಭಾಶುಭಗಳ ವ್ಯವಸ್ಥೆಯನ್ನು ಶರೀರಯಾತ್ರಾ ಸಿದ್ಧಿಗಾಗಿಯೂ ಬೋಧಿಸಿದ್ದೇನೆ. ಧರ್ಮ ಪಾಲನೆಯೆಂಬ ಕಾರ್ಯಭಾರವನ್ನು ಹೊತ್ತಿರುವ ಕರ್ಮಜಡರಿಗಾಗಿ ಈ ಬಗೆಯ ಆಚಾರವನ್ನು (ಮನ್ವಾದಿಸ್ಮೃತಿಕಾರರ ರೂಪದಿಂದ) ನಾನೇ ಗೊತ್ತುಪಡಿಸಿದ್ದೇನೆ (೪). ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶಗಳೆಂಬ ಪಂಚಭೂತಗಳೇ ಬ್ರಹ್ಮನಿಂದ ಹಿಡಿದು ಸ್ಥಾವರದವರೆಗಿನ ಸಕಲಪ್ರಾಣಿಗಳ ಶರೀರಗಳನ್ನು ಆರಂಭಿಸುವ ಕಾರಣದ್ರವ್ಯಗಳು. ಇವು [2]ಏಕಾತ್ಮನಿಂದ ಸಹಿತವಾಗಿರುತ್ತವೆ (೫).

---

1. ಕೆಲವರಿಗೆ ವಿಧಿನಿಷೇಧಗಳು ಇವೆ, ಕೆಲವರಿಗಿಲ್ಲ—ಎಂಬುದಕ್ಕೆ ನಿಮಿತ್ತವೇನು? ಎಂಬ ಶಂಕೆಗೆ ಇದು ಉತ್ತರ. ಅಧಿಕಾರಭೇದದಿಂದ ಇವು ಕಲ್ಪಿತವಾಗಿವೆ. ಅಧಿಕಾರಾನು ಗುಣವಾಗಿ ಫಲವನ್ನು ನೀಡುತ್ತವೆ. ಕರ್ಮದಲ್ಲಿ ಸ್ವಾಭಾವಿಕವಾದ ಪ್ರವೃತ್ತಿಯನ್ನು ತಡೆಯುವುದೇ ಇವುಗಳ ಉದ್ದೇಶ.

2. ಎಲ್ಲ ಶರೀರಗಳೂ ಪಂಚಭೂತಗಳಿಂದ ನಿರ್ಮಿತವಾಗಿವೆಯಾದ್ದರಿಂದ ಅವುಗಳಿಗೆ ತಾರತಮ್ಯವಿಲ್ಲ. ಆತ್ಮನಾದರೋ ಎಲ್ಲರಲ್ಲಿಯೂ ಒಬ್ಬನೇ. ಏವಂ ಚ ಎಲ್ಲ ವಸ್ತುಗಳೂ ಸಮಾನ.

ವೇದೇನ ನಾಮರೂಪಾಣಿ ವಿಷಮಾಣಿ ಸಮೇಷ್ವಪಿ ।
ಧಾತುಷೂದ್ಧವ ಕಲ್ಪ್ಯಂತೇ ಏತೇಷಾಂ ಸ್ವಾರ್ಥಸಿದ್ಧಯೇ ॥ ೬

ದೇಶಕಾಲಾದಿಭಾವಾನಾಂ ವಸ್ತೂನಾಂ ಮಮ ಸತ್ತಮ ।
ಗುಣದೋಷೌ ವಿಧೀಯೇತೇ ನಿಯಮಾರ್ಥಂ ಹಿ ಕರ್ಮಣಾಮ್ ॥ ೭

ಅಕೃಷ್ಣಸಾರೋ ದೇಶಾನಾಮಬ್ರಹ್ಮಣ್ಯೋಽಶುಚಿರ್ಭವೇತ್ ।
ಕೃಷ್ಣಸಾರೋಽಪ್ಯಸೌವೀರಕೀಕಟಾಸಂಸ್ಕೃತೇರಿಣಮ್ ॥ ೮

ಕರ್ಮಣ್ಯೋ ಗುಣವಾನ್ ಕಾಲೋ ದ್ರವ್ಯತಃ ಸ್ವತ ಏವ ವಾ ।
ಯತೋ ನಿವರ್ತತೇ ಕರ್ಮ ಸ ದೋಷೋಽಕರ್ಮಕಃ ಸ್ಮೃತಃ ॥ ೯

---

ಉದ್ಧವ, (ಒಂದೇ ಬಗೆಯ ವಸ್ತುಗಳಿಂದ ನಿರ್ಮಿತವಾದ ಪ್ರಯುಕ್ತ) ಎಲ್ಲ ಶರೀರಗಳೂ ಸಮವಾಗಿದ್ದರೂ ಅಸಮಗಳಾದ ವರ್ಣಾಶ್ರಮಾದಿ ನಾಮರೂಪಗಳನ್ನು ವೇದವು ಕಲ್ಪಿಸಿರುತ್ತದೆ. (ಈ ಪ್ರಾಣಿಗಳ ಪ್ರವೃತ್ತಿಯನ್ನು ಯೋಗ್ಯತಾನುಸಾರವಾಗಿ ನಿಯಮಿಸಿ) ಧರ್ಮಾದಿಪುರುಷಾರ್ಥಗಳು ಇವರಿಗೆ ಸಿದ್ಧಿಸಲೆಂದು ಹೀಗೆ ವ್ಯವಸ್ಥೆಮಾಡಿದೆ (೬). ಪ್ರವೃತ್ತಿರೂಪ ಕರ್ಮಗಳನ್ನು ಸಂಕೋಚಗೊಳಿಸುವ ಸಲುವಾಗಿ, ದೇಶ, ಕಾಲ, ಅಧಿಕಾರ—ಮೊದಲಾದವುಗಳಲ್ಲಿಯೂ ವ್ರೀಹಿ, ಯವ—ಮುಂತಾದ ವಸ್ತುಗಳಲ್ಲಿಯೂ ಗುಣದೋಷಗಳನ್ನು ನಾನು ಗೊತ್ತುಪಡಿಸಿದ್ದೇನೆ (ಕೇವಲ ಪ್ರಾಣಿದೇಹಗಳಲ್ಲಿ ಮಾತ್ರವಲ್ಲ) (೭). ಹೇಗೆಂದರೆ ದೇಶಗಳ ನಡುವೆ ಕೃಷ್ಣಸಾರವೆಂಬ ಕಪ್ಪು ಜಿಂಕೆಯಿಲ್ಲದ ದೇಶವೂ ಬ್ರಾಹ್ಮಣಭಕ್ತಿಶೂನ್ಯವಾದ ದೇಶವೂ ಅಶುಚಿಯೆಂದು ತಿಳಿಯಬೇಕು. ಕೃಷ್ಣಸಾರಮೃಗವು ಸಂಚರಿಸುತ್ತಿದ್ದರೂ ಸೌವೀರ ಮತ್ತು ಕೀಕಟ—ಎಂಬ ದೇಶಗಳೂ ಅಸಂಸ್ಕೃತವಾದ ಮ್ಲೇಚ್ಛದೇಶವೂ ಮರಳುಗಾಡಿನ ಪ್ರದೇಶವೂ ಶುಚಿಯಲ್ಲ (೮). ಆಯಾಕರ್ಮಕ್ಕೆ ಬೇಕಾದ ದ್ರವ್ಯವು ಒದಗಿದ ಕಾಲವೂ ಸ್ವತಃಸಿದ್ಧವಾದ ಪೂರ್ವಾಹ್ಣಾದಿಕಾಲವೂ ಆಯಾ ಕರ್ಮವನ್ನಾಚರಿಸಲು ಗುಣಯುಕ್ತಕಾಲವೆನಿಸುತ್ತದೆ. ಇನ್ನು ದ್ರವ್ಯದ ಅಭಾವದಿಂದಲೋ ರಾಷ್ಟ್ರವಿಪ್ಲವದಿಂದಲೋ ಆಶೌಚಪ್ರಾಪ್ತಿಯಿಂದಲೋ ಕರ್ಮವು ನಿವೃತ್ತವಾದಾಗ, ಕರ್ಮಾಚರಣೆಗೆ ಅನರ್ಹವಾದ್ದರಿಂದ ಆ ಕಾಲವು ದೋಷಯುಕ್ತವೆನಿಸುತ್ತದೆ (೯).



॥ ಕ್ಷೀಯಂತೇ ಚಾಸ್ಯ ಕರ್ಮಾಣಿ ಮಯಿ ದೃಷ್ಟೇಽಖಿಲಾತ್ಮನಿ ॥
೧೧-೨೦-೩೦

ದ್ರವ್ಯಸ್ಯ ಶುದ್ಧ್ಯಶುದ್ಧೀ ಚ ದ್ರವ್ಯೇಣ ವಚನೇನ ಚ ।
ಸಂಸ್ಕಾರೇಣಾಥ ಕಾಲೇನ ಮಹತ್ತ್ವಾಲ್ಪತಯಾಥವಾ ॥ ೧೦

ಶಕ್ತ್ಯಾಶಕ್ತ್ಯಾಥವಾ ಬುದ್ಧ್ಯಾ ಸಮೃದ್ಧ್ಯಾ ಚ ಯದಾತ್ಮನೇ ।
ಅಘಂ ಕುರ್ವಂತಿ ಹಿ ಯಥಾ ದೇಶಾವಸ್ಥಾನುಸಾರತಃ ॥ ೧೧

ಧಾನ್ಯದಾರ್ವಸ್ಥಿತಂತೂನಾಂ ರಸತೈಜಸಚರ್ಮಣಾಮ್ ।
ಕಾಲವಾಯ್ವಗ್ನಿಮೃತ್ತೋಯೈಃ ಪಾರ್ಥಿವಾನಾಂ ಯುತಾಯುತೈಃ ॥ ೧೨

---

ವಸ್ತ್ರಾದಿದ್ರವ್ಯಕ್ಕೆ ಜಲದ್ರವ್ಯದಿಂದ ಶುದ್ಧಿಯೂ ಮೂತ್ರಸ್ಪರ್ಶದಿಂದ ಅಶುದ್ಧಿಯೂ ಆಗುತ್ತದೆ. ಹಾಗೆಯೇ ಬ್ರಾಹ್ಮಣವಚನದಿಂದ ಒಂದು ವಸ್ತು ಶುದ್ಧವೂ ಅಶುದ್ಧವೂ ಆಗಬಹುದು. ಪುಷ್ಪವು ಪ್ರೋಕ್ಷಣವೆಂಬ ಸಂಸ್ಕಾರದಿಂದ ಶುದ್ಧವೂ ಆಘ್ರಾಣದಿಂದ ಅಶುದ್ಧವೂ ಆಗುತ್ತದೆ. ಅಂತೆಯೇ ಕಾಲದಿಂದಲೂ ಉಂಟು. ಹತ್ತು ರಾತ್ರಿ ಕಳೆದರೆ ಹೊಸ ನೀರು ಶುದ್ಧ, ಒಂದು ರಾತ್ರಿ ಕಳೆದರೆ ಅನ್ನ ಅಶುದ್ಧ. ಕೆರೆಯು ದೊಡ್ಡದೆಂಬ ಕಾರಣದಿಂದ ಅಂತ್ಯಜನು ಮುಟ್ಟಿದ ಕೆರೆಯ ನೀರು ಶುದ್ಧವೇ. ಚಿಕ್ಕದೆಂಬ ಕಾರಣದಿಂದ ಅವನು ಮುಟ್ಟಿದ ಪಾತ್ರೆಯ ನೀರು ಅಶುದ್ಧವೇ (೧೦) ಶಕ್ತಿ-ಅಶಕ್ತಿ, ಜ್ಞಾನ-ಅಜ್ಞಾನ, ಸಮೃದ್ಧಿ-ಬಡತನ ಮುಂತಾದವುಗಳಿಂದಲೂ ಈ ಬಗೆಯ ವ್ಯವಸ್ಥೆಯುಂಟು. ಹೇಗೆಂದರೆ, (ಉಪವಾಸಾದಿಗಳಲ್ಲಿ) ಶಕ್ತಿಯುಳ್ಳವರಿಗೆ ಸೂರ್ಯಗ್ರಹಣದಿಂದ ಅಶುದ್ಧಿ, ಶಕ್ತಿಯಿಲ್ಲದವರಿಗೆ ಶುದ್ಧಿ ; ದಶಾಹದೊಳಗೆ ಸೂತಕಜ್ಞಾನವಾದರೆ ಅಶುದ್ಧಿ, ಅದರ ಅಜ್ಞಾನದಿಂದ ಶುದ್ಧಿ ; ಶ್ರೀಮಂತನಿಗೆ ಹರಕು ಬಟ್ಟೆಯಿಂದ ಅಶುದ್ಧಿ, ಬಡವನಿಗೆ ಅದರಿಂದಲೇ ಶುದ್ಧಿ. ಅಲ್ಲದೆ ಈ ರೀತಿಯ ಅಶುದ್ಧಿಗಳೂ ದೇಶಪರಿಸ್ಥಿತಿಗಳನ್ನನುಸರಿಸಿಯೇ ಜೀವಾತ್ಮನಿಗೆ ಪಾಪವನ್ನು ಉಂಟು ಮಾಡುತ್ತವೆ. ಹೇಗೆಂದರೆ, ನಿರ್ಭಯವಾದ ದೇಶದಲ್ಲಿ ಆಚಾರ ಲೋಪವಾದರೆ ಪಾಪವೇ ಹೊರತು ಕಳ್ಳಕಾಕರಿಂದ ವ್ಯಾಪ್ತವಾದ ದೇಶದಲ್ಲಲ್ಲ. ಬಾಲ್ಯದಲ್ಲಿ ಅಥವಾ ರೋಗದ ಪರಿಸ್ಥಿತಿಯಲ್ಲಿ ಆಚಾರಲೋಪದಿಂದ ಪಾಪವಿಲ್ಲ (೧೧). ಕಾಳು, ಕಟ್ಟಿಗೆ, ಅಸ್ಥಿಯೆನಿಸುವ ಗಜದಂತ, ನೂಲು, ತೈಲಘೃತಾದಿ ರಸವಸ್ತು, ಅಗ್ನಿ ಸುವರ್ಣಾದಿ ತೈಜಸವಸ್ತು, ವ್ಯಾಘ್ರಚರ್ಮಾದಿಗಳು, ಪಾರ್ಥಿವಗಳಾದ ಗಡಿಗೆ ಇಟ್ಟಿಗೆ ಮೊದಲಾದವು—ಇವುಗಳು ಕಾಲ ವಾಯು ಅಗ್ನಿ ಜಲ ಮಣ್ಣುಗಳಿಂದ ಅಥವಾ ಅವುಗಳ ಮಿಶ್ರಣದಿಂದ ಯಥಾಯಥವಾಗಿ ಶುದ್ಧವಾಗುತ್ತವೆ (೧೨).

**ಅಮೇಧ್ಯಲಿಪ್ತಂ ಯದ್ ಯೇನ ಗಂಧಂ ಲೇಪಂ ವ್ಯಪೋಹತಿ ।**
**ಭಜತೇ ಪ್ರಕೃತಿಂ ತಸ್ಯ ತಚ್ಛೌಚಂ ತಾವದಿಷ್ಯತೇ ॥** ೧೩

**ಸ್ನಾನದಾನತಪೋಽವಸ್ಥಾ ವೀರ್ಯಸಂಸ್ಕಾರಕರ್ಮಭಿಃ ।**
**ಮತ್ಸ್ಮೃತ್ಯಾ ಚಾತ್ಮನಃ ಶೌಚಂ ಶುದ್ಧಃ ಕರ್ಮಾಚರೇದ್ ದ್ವಿಜಃ ॥** ೧೪

**ಮಂತ್ರಸ್ಯ ಚ ಪರಿಜ್ಞಾನಂ ಕರ್ಮಶುದ್ಧಿರ್ಮದರ್ಪಣಮ್ ।**
**ಧರ್ಮಃ ಸಂಪದ್ಯತೇ ಷಡ್ಭಿರಧರ್ಮಸ್ತು ವಿಪರ್ಯಯಃ ॥** ೧೫

**ಕ್ವಚಿದ್ಗುಣೋಽಪಿ ದೋಷಃ ಸ್ಯಾದ್ ದೋಷೋಽಪಿ ವಿಧಿನಾ ಗುಣಃ ।**
**ಗುಣದೋಷಾರ್ಥನಿಯಮಸ್ತದ್ಭಿದಾಮೇವ ಬಾಧತೇ ॥** ೧೬

---

ಪಾತ್ರೆ, ವಸ್ತ್ರ ಮೊದಲಾದದ್ದು ಕೊಳೆಯಿಂದ ಲಿಪ್ತವಾದಾಗ ಅದರ ದುರ್ಗಂಧವಾಗಲಿ ಲೇಪವಾಗಲಿ ಯಾವುದರಿಂದ ಸ್ವಚ್ಛವಾಗಿ ಸ್ವಸ್ವರೂಪವನ್ನು ಪಡೆಯುತ್ತದೆಯೋ ಅಂತಹ ನೀರು ಮೊದಲಾದ್ದರಿಂದ ಅದಕ್ಕೆ ಶುದ್ಧಿಯಾಗುತ್ತದೆ (೧೩). ಅಲ್ಲದೆ ಸ್ನಾನ, ದಾನ, ತಪಸ್ಸು, ಕೌಮಾರಾದ್ಯವಸ್ಥೆ, ಯೋಗಶಕ್ತಿ, ಉಪನಯನಾದಿ ಸಂಸ್ಕಾರ, ಸಂಧ್ಯೋಪಾಸನಾದಿ ಕರ್ಮಗಳಿಂದಲೂ ಈಶ್ವರನಾದ ನನ್ನ ಸ್ಮರಣೆಯಿಂದಲೂ ಕರ್ತೃವಾದ ಜೀವನಿಗೆ ಶುದ್ಧಿಯುಂಟು. ಇವುಗಳಿಂದ ಶುದ್ಧನಾಗಿ ಶಾಸ್ತ್ರೀಯ ಕರ್ಮವನ್ನಾಚರಿಸಬೇಕು (೧೪). ಉದ್ಧವ, ಸದ್ಗುರುವಿನ ಮುಖದಿಂದ ಅರಿತುಕೊಳ್ಳುವುದು ಮಂತ್ರಕ್ಕೆ ಶುದ್ಧಿ. ಈಶ್ವರಾರ್ಪಣವೇ ಕರ್ಮಕ್ಕೆ ಶುದ್ಧಿ. ಈ ಪ್ರಕಾರದಲ್ಲಿ ದೇಶ, ಕಾಲ, ದ್ರವ್ಯ, ಕರ್ತೃ, ಮಂತ್ರ, ಕರ್ಮ—ಇವು ಆರು ಶುದ್ಧವಾಗಿದ್ದರೆ ಧರ್ಮವೂ, ವ್ಯತ್ಯಸ್ತವಾಗಿದ್ದರೆ ಅಧರ್ಮವೂ ಉಂಟಾಗುತ್ತದೆ (೧೫). ಗುಣವೂ ಸಹ ಕೆಲವು ಸಂದರ್ಭದಲ್ಲಿ ದೋಷವಾಗುತ್ತದೆ, ದೋಷವೂ ಸಹ ವಿಧಿಬಲದಿಂದ ಗುಣವಾಗುವುದುಂಟು. ಈ ವಿಷಯದಲ್ಲಿ ಇದು ಗುಣ, ಈ ವಿಷಯದಲ್ಲಿ ಇದು ದೋಷ—ಎಂಬ ಗುಣದೋಷಗಳ ನಿಯಾಮಕ ಶಾಸ್ತ್ರವು ಪರಿಣಾಮದಲ್ಲಿ ಗುಣದೋಷಗಳ ಭೇದವನ್ನೇ [1]ಬಾಧಿಸುತ್ತದೆ (೧೬).

---

1. ಯುದ್ಧವು ಕ್ಷತ್ರಿಯನಿಗೆ ಧರ್ಮ, ಬ್ರಾಹ್ಮಣನಿಗೆ ಅಧರ್ಮ. ಸ್ತ್ರೀಸಂಗವು ಗೃಹಸ್ಥನಿಗೆ ಧರ್ಮ, ಸಂನ್ಯಾಸಿಗೆ ಅಧರ್ಮ. ಕುಟುಂಬತ್ಯಾಗವು ಗೃಹಸ್ಥನಿಗೆ ದೋಷವಾದರೂ ವಿರಕ್ತನಾದ ಮುಮುಕ್ಷುವಿಗೆ ವಿಧಿಬಲದಿಂದ ಗುಣ. ವಿಷಯಭೇದದಿಂದ ಗುಣದೋಷಗಳ ವಿಭಾಗವೆಂದರೆ—ವಾಸ್ತವದಲ್ಲಿ ಸ್ವತಃ ಯಾವುದೂ ಗುಣವಲ್ಲ, ಯಾವುದೂ ದೋಷವಲ್ಲವೆಂದು ಅಭಿಪ್ರಾಯ.

ಸಮಾನಕರ್ಮಾಚರಣಂ ಪತಿತಾನಾಂ ನ ಪಾತಕಮ್ ।
ಔತ್ಪತ್ತಿಕೋ ಗುಣಃ ಸಂಗೋ ನ ಶಯಾನಃ ಪತತ್ಯಧಃ ॥ ೧೭

ಯತೋ ಯತೋ ನಿವರ್ತೇತ ವಿಮುಚ್ಯೇತ ತತಸ್ತತಃ ।
ಏಷ ಧರ್ಮೋ ನೃಣಾಂ ಕ್ಷೇಮಃ ಶೋಕಮೋಹಭಯಾಪಹಃ ॥ ೧೮

ವಿಷಯೇಷು ಗುಣಾಧ್ಯಾಸಾತ್ ಪುಂಸಃ ಸಂಗಸ್ತತೋ ಭವೇತ್ ।
ಸಂಗಾತ್ತತ್ರ ಭವೇತ್ ಕಾಮಃ ಕಾಮಾದೇವ ಕಲಿರ್ನೃಣಾಮ್ ॥ ೧೯

ಕಲೇರ್ದುರ್ವಿಷಹಃ ಕ್ರೋಧಸ್ತಮಸ್ತಮನುವರ್ತತೇ ।
ತಮಸಾ ಗ್ರಸ್ಯತೇ ಪುಂಸಶ್ಚೇತನಾ ವ್ಯಾಪಿನೀ ದ್ರುತಮ್ ॥ ೨೦

ತಯಾ ವಿರಹಿತಃ ಸಾಧೋ ಜಂತುಃ ಶೂನ್ಯಾಯ ಕಲ್ಪತೇ ।
ತತೋಽಸ್ಯ ಸ್ವಾರ್ಥವಿಭ್ರಂಶೋ ಮೂರ್ಚ್ಛಿತಸ್ಯ ಮೃತಸ್ಯ ಚ ॥ ೨೧

---

(ಒಂದು ಕರ್ಮದ ಆಚರಣೆಯು ಪತಿತರಲ್ಲದವರಿಗೆ ಪತನಹೇತುವಾದ ಪಾತಕವಾಗಿದ್ದರೂ) ಪತಿತರಿಗೆ ಅದೇ ಕರ್ಮದ ಆಚರಣೆಯು ಪಾತಕವಾಗುವುದಿಲ್ಲ. (ಹೇಗೆಂದರೆ, ಶುದ್ಧನಾಗಿರತಕ್ಕವನಿಗೆ ಮದ್ಯಪಾನವು ಪಾತಕವಾಗುತ್ತದೆ, ಮೊದಲೇ ಪತಿತನಾಗಿ ದೋಷಿಯಾದವನಿಗೆ ಮದ್ಯಪಾನವು ಮತ್ತೆ ಪತನಹೇತುವಾಗುವುದಿಲ್ಲ) (ಹಾಗೆಯೇ ತಾಂಬೂಲ ಚರ್ವಣಾದಿ ವಿಷಯಸಂಗವು ಯತಿಗೆ ದೋಷವಾದರೂ) ಪೂರ್ವಸ್ವೀಕೃತವಾದ ಅದು ಗೃಹಸ್ಥನಿಗೆ ಗುಣವಾಗುತ್ತದೆ! ಕೆಳಗೆ ನೆಲದಮೇಲೆ ಮಲಗಿದವನು ಮತ್ತೆ ಬೀಳುವ ಪ್ರಸಂಗವಿಲ್ಲವಷ್ಟೆ! (೧೭). ಕರ್ಮಮಾರ್ಗದಿಂದ ಹೇಗೆ ಹೇಗೆ ನಿವೃತ್ತಿಹೊಂದುವನೋ ಹಾಗೆ ಹಾಗೆ ಆತನು ಸಂಸಾರದಿಂದ ವಿಮುಕ್ತನಾಗುತ್ತ ಹೋಗುವನು. ಹೀಗೆ ನಿವೃತ್ತಿಹೊಂದುವುದು ಮಾನವರಿಗೆ ಶೋಕಮೋಹಭಯಗಳನ್ನು ಹೋಗಲಾಡಿಸತಕ್ಕ ಕ್ಷೇಮಂಕರವಾದ ಧರ್ಮವಾಗಿದೆ (೧೮). ಶಬ್ದಾದಿ ವಿಷಯಗಳಲ್ಲಿ ಗುಣವಿದೆಯೆಂಬ ಭ್ರಮೆಯಿಂದ ಜನರಿಗೆ ಅವುಗಳಲ್ಲಿ ಆಸಕ್ತಿ ಹುಟ್ಟುತ್ತದೆ. ಆಸಕ್ತಿಯಿಂದ ಅವುಗಳಲ್ಲಿ ಅಭಿಲಾಷೆಯೂ ಅದಕ್ಕೆ ಅಡ್ಡಿಯಾದಾಗ ಅಭಿಲಾಷೆಯ ನಿಮಿತ್ತದಿಂದಲೇ ಕಲಹವೂ ಹುಟ್ಟುತ್ತದೆ (೧೯). ಕಲಹದಿಂದ ತೀವ್ರವಾದ ಕ್ರೋಧವು ಆವಿರ್ಭವಿಸುತ್ತದೆ. ಕ್ರೋಧದ ಹಿಂದೆ ಅಜ್ಞಾನವು ಆವರಿಸಿಕೊಂಡುಬರುತ್ತದೆ. ಅಜ್ಞಾನದಿಂದ ಒಡನೆಯೇ ಮನುಷ್ಯನ ಕಾರ್ಯಾಕಾರ್ಯವಿವೇಚನೆಯು ಮುಚ್ಚಿಹೋಗುತ್ತದೆ (೨೦). ಸೌಮ್ಯ-

*

ವಿಷಯಾಭಿನಿವೇಶೇನ ನಾತ್ಮಾನಂ ವೇದ ನಾಪರಮ್ ।
ವೃಕ್ಷಜೀವಿಕಯಾ ಜೀವನ್ ವ್ಯರ್ಥಂ ಭಸ್ತ್ರೇವ ಯಃ ಶ್ವಸನ್ ॥ ೨೨

ಫಲಶ್ರುತಿರಿಯಂ ನೃಣಾಂ ನ ಶ್ರೇಯೋ ರೋಚನಂ ಪರಮ್ ।
ಶ್ರೇಯೋವಿವಕ್ಷಯಾ ಪ್ರೋಕ್ತಂ ಯಥಾ ಭೈಷಜ್ಯರೋಚನಮ್ ॥ ೨೩

ಉತ್ಪತ್ತ್ಯೈವ ಹಿ ಕಾಮೇಷು ಪ್ರಾಣೇಷು ಸ್ವಜನೇಷು ಚ ।
ಆಸಕ್ತಮನಸೋ ಮರ್ತ್ಯಾ ಆತ್ಮನೋಽನರ್ಥಹೇತುಷು ॥ ೨೪

ನ ತಾನವಿದುಷಃ ಸ್ವಾರ್ಥಂ ಭ್ರಾಮ್ಯತೋ ವೃಜನಾಧ್ವನಿ ।
ಕಥಂ ಯುಂಜ್ಯಾತ್ ಪುನಸ್ತೇಷು ತಾಂಸ್ತಮೋ ವಿಶತೋ [2]ಬುಧಃ ॥ ೨೫

---

ಉದ್ಧವ, ಕಾರ್ಯಾಕಾರ್ಯವಿವೇಚನೆಯು ಹೋದಮೇಲೆ ಮನುಷ್ಯನು ಮನುಷ್ಯನೇ ಅಲ್ಲ—ಶೂನ್ಯನಾದನೆಂದು ತಿಳಿಯಬೇಕು. ಸತ್ತವನಿಗೆ ಹೇಗೆ ಪುರುಷಾರ್ಥವಿಲ್ಲವೋ ಹಾಗೆ ಸತ್ತವನಂತಾದ ಈ ಶೂನ್ಯಮನುಷ್ಯನಿಗೂ ಪುರುಷಾರ್ಥವಿಲ್ಲ! (೨೧). ವಿಷಯಾಭಿಸಂಗವುಳ್ಳವನಿಗೆ ತಾನು ಯಾರು, ತನ್ನ ಕರ್ತವ್ಯವೇನು ?—ಎಂಬುದೂ ತಿಳಿಯದು ; ಯಾವುದು ತನ್ನ ಕರ್ತವ್ಯವಲ್ಲ—ಎಂಬುದೂ ತಿಳಿಯದು. ಒಂದು ಮರವು ಇರುವಂತೆ ಅವನ ಅಸ್ತಿತ್ವ. ಆತನ ಬದುಕು ವ್ಯರ್ಥವಾದದ್ದು. ಕಮ್ಮಾರನ ತಿದಿಯು ಗಾಳಿಯಾಡಿಸುವಂತೆ ಆತನು ಉಸಿರಾಡುತ್ತಾನೆ (೨೨). ವೇದಘೋಷಿತವಾದ ಸ್ವರ್ಗಾದಿ ಫಲಶ್ರುತಿಯು ಪರಮಪುರುಷಾರ್ಥವಾದ ಶ್ರೇಯಸ್ಸನ್ನು ಬೋಧಿಸತಕ್ಕದ್ದಲ್ಲ. ಆದರೆ ಶ್ರೇಯಸ್ಸನ್ನು ಕಡೆಯ ಗುರಿಯಾಗಿಟ್ಟುಕೊಂಡು ವಿಹಿತಕರ್ಮಾಚರಣೆಯಲ್ಲಿ ರುಚಿಯನ್ನು ಹುಟ್ಟಿಸುವುದಕ್ಕಾಗಿ ಹೊರಟ ರೋಚಕವಾಕ್ಯವೇ ಫಲಶ್ರುತಿ. ಔಷಧದಲ್ಲಿ [1]ಕುಡಿಯುವ ಅಭಿಲಾಷೆಯನ್ನು ಹುಟ್ಟಿಸಿದ ಹಾಗೆ ಇದು! (೨೩). ಕಡೆಗೆ ತನ್ನ ದುಃಖದಲ್ಲಿ ಪರ್ಯವಸಾನವಾಗುವ ಗೃಹಾದಿ ಕಾಮ್ಯವಸ್ತುಗಳಲ್ಲಿಯೂ ಆಯುರಿಂದ್ರಿಯಬಲಾದಿಪ್ರಾಣಗಳಲ್ಲಿಯೂ ಭಾರ್ಯಾಪುತ್ರಾದಿ ಸ್ವಜನರಲ್ಲಿಯೂ ಮಾನವರು ಹುಟ್ಟಿನಿಂದಲೂ ಸಹಜವಾಗಿ ಆಸಕ್ತರಾಗಿರುತ್ತಾರೆ (೨೪). ಪರಮಸುಖವಾದ ಸ್ವಾರ್ಥವೆಂದರೇ-

---

1. ತಾಯಿ ಮಗುವಿಗೆ "ಔಷಧವನ್ನು ಕುಡಿ, ಕಲ್ಲುಸಕ್ಕರೆ ಕೊಡುತ್ತೇನೆ" ಎನ್ನುತ್ತಾಳೆ. ತಾಯಿಯ ಉದ್ದೇಶ ಸಕ್ಕರೆ ಕೊಡುವುದಲ್ಲ, ಮಗುವಿನ ರೋಗಶಮನವೇ ಅವಳ ಉದ್ದೇಶ. ಹಾಗೆ ಶಾಸ್ತ್ರವಿಧಿಯಲ್ಲಿ ಅಭಿಲಾಷೆ ಹುಟ್ಟಲಿ—ಎಂಬುದಿಷ್ಟೇ ಫಲಶ್ರುತಿಯ ಉದ್ದೇಶ. 2. ಬುಧ=ವೇದ.

ಏವಂ ವ್ಯವಸಿತಂ ಕೇಚಿದವಿಜ್ಞಾಯ ಕುಬುದ್ಧಯಃ ।
ಫಲಶ್ರುತಿಂ ಕುಸುಮಿತಾಂ ನ ವೇದಜ್ಞಾ ವದಂತಿ ಹಿ ॥ ೨೬

ಕಾಮಿನಃ ಕೃಪಣಾ ಲುಬ್ಧಾಃ ಪುಷ್ಪೇಷು ಫಲಬುದ್ಧಯಃ ।
ಅಗ್ನಿಮುಗ್ಧಾ ಧೂಮತಾಂತಾಃ ಸ್ವಂ ಲೋಕಂ ನ ವಿದಂತಿ ತೇ ॥ ೨೭

ನ ತೇ ಮಾಮಂಗ ಜಾನಂತಿ ಹೃದಿಸ್ಥಂ ಯ ಇದಂ ಯತಃ ।
ಉಕ್ಥಶಸ್ತ್ರಾ ಹ್ಯಸುತೃಪೋ ಯಥಾ ನೀಹಾರಚಕ್ಷುಷಃ ॥ ೨೮

---

ನೆಂಬುದನ್ನರಿಯದೆ ತಪ್ಪುದಾರಿಯನ್ನು ತುಳಿದು ನಾನಾಯೋನಿಗಳಲ್ಲಿ ಅಲೆಯುತ್ತಿರುವ ಆ ಮನುಜರು ಮತ್ತೆ ತಮಸ್ಸೆಂಬ ವೃಕ್ಷಾದಿಯೋನಿಗೆ ಹೋಗುತ್ತ ಇರುತ್ತಾರೆ. ಅಂತಹ ಮನುಜರು ಪುನಃ ಕಾಮನೆಗಳಲ್ಲಿ ತೊಡಗುವಂತೆ ಜ್ಞಾನಭಂಡಾರವೆನಿಸಿದ [1]ವೇದವು ಪ್ರವರ್ತನೆಮಾಡಿಸೀತೆ ? (೨೫). ವೇದದ ನಿಜವಾದ ಈ ಅಭಿಪ್ರಾಯವನ್ನರಿಯದೆ ಬುದ್ಧಿಹೀನರಾದ ಕೆಲವರು ಪುತ್ರಾದಿಫಲವನ್ನು ಹೇಳುವ ಫಲಶ್ರುತಿಯನ್ನು ಸೊಗಸಾದ ಪುಷ್ಪಿತವಾಕ್ಯವೆಂದು ಹೊಗಳುತ್ತಾರೆ. ಆದರೆ ವೇದಜ್ಞರಾದ ವ್ಯಾಸಾದಿಮಹರ್ಷಿಗಳು ಹಾಗೆ ಹೇಳುವುದಿಲ್ಲ (೨೬). ಕಾಮುಕಾಮಿಗಳೂ ಶೋಚನೀಯರೂ ಆಸೆಬುರುಕರೂ ಆದ ಜನರು ಹೂಗಳೇ ಹಣ್ಣುಗಳೆಂದು ಭ್ರಾಂತರಾಗಿ ' ಈ ಅಗ್ನಿಯಲ್ಲಿ ಹೋಮ ಮಾಡಬೇಕು, ಆ ಅಗ್ನಿಯಲ್ಲಿ ಹೋಮ ಮಾಡಬೇಕು ' ಎನ್ನುತ್ತ ವಿವೇಕಹೀನರಾಗಿ ಹೊಗೆಯಿಂದ ಬಳಲುತ್ತ ಧೂಮಮಾರ್ಗವನ್ನು ತುಳಿಯುತ್ತಾರೆ. ತಮ್ಮ ಆತ್ಮತತ್ತ್ವವನ್ನು ಅವರು ಅರಿಯದೆ ಹೋಗಿದ್ದಾರೆ (೨೭). ಅಯ್ಯೋ ! ಈ ಕರ್ಮಜಡರು ಇವರ ಹೃದಯದಲ್ಲಿಯೇ ನೆಲೆಸಿರುವ ನನ್ನನ್ನೂ ನಾನೇ ಈ ವಿಶ್ವವೆಂಬುದನ್ನೂ ನನ್ನಿಂದಲೇ ಇದು ಜನಿಸಿದೆಯೆಂಬುದನ್ನೂ ಅರಿಯದೆ ಇದ್ದಾರೆ. ಇಂದ್ರಿಯ ತೃಪ್ತಿಪರಾಯಣರಾದ ಈ ಜನರಿಗೆ [2]ಉಕ್ಥಕರ್ಮವೇ ಶಸ್ತ್ರವಾಗಿದೆ. ಮಂಜುಮುಸುಕಿದಾಗ ಕಣ್ಣಿಗೆ ಏನೂ ಕಾಣಿಸು

---

1. ಪ್ರವೃತ್ತಿ ಮಾರ್ಗದಲ್ಲಿದ್ದು ಸಹಜವಾಗಿ ಕಷ್ಟದಲ್ಲಿ ಸಿಕ್ಕಿರುವ ಮನುಷ್ಯನಿಗೆ ' ಪಶುಪುತ್ರಾದಿ ಕಾಮನೆಯಿಂದ ಇಂಥ ಯಾಗವನ್ನು ಮಾಡಬೇಕು ' ಎಂದು ವೇದವು ಪ್ರವೃತ್ತಿಯನ್ನೇ ಬೋಧಿಸುವುದಾದರೆ, ಅದು ಆಪ್ತವಚನವಾಗಲಾರದು—ಎಂದು ಅಭಿಪ್ರಾಯ.

2. ಉಕ್ಥಕರ್ಮ = ಯಜ್ಞ. ಶಸ್ತ್ರ = ಪ್ರಶಂಸನೀಯ ; ಆಯುಧ.

**ತೇ ಮೇ ಮತಮವಿಜ್ಞಾಯ ಪರೋಕ್ಷಂ ವಿಷಯಾತ್ಮಕಾಃ ।**
**ಹಿಂಸಾಯಾಂ ಯದಿ ರಾಗಃ ಸ್ಯಾದ್ ಯಜ್ಞ ಏವ ನ ಚೋದನಾ ॥ ೨೯**

**ಹಿಂಸಾವಿಹಾರಾ ಹ್ಯಾಲಬ್ಧೈಃ ಪಶುಭಿಃ ಸ್ವಸುಖೇಚ್ಛಯಾ ।**
**ಯಜಂತೇ ದೇವತಾ ಯಜ್ಞೈಃ ಪಿತೃಭೂತಪತೀನ್ ಖಲಾಃ ॥ ೩೦**

**ಸ್ವಪ್ನೋಪಮಮಮುಂ ಲೋಕಮಸಂತಂ ಶ್ರವಣಪ್ರಿಯಮ್ ।**
**ಆಶಿಷೋ ಹೃದಿ ಸಂಕಲ್ಪ್ಯ ತ್ಯಜಂತ್ಯರ್ಥಾನ್ ಯಥಾ ವಣಿಕ್ ॥ ೩೧**

**ರಜಃಸತ್ತ್ವತಮೋನಿಷ್ಠಾ ರಜಃಸತ್ತ್ವತಮೋಜುಷಃ ।**
**ಉಪಾಸತ ಇಂದ್ರಮುಖ್ಯಾನ್ ದೇವಾದೀನ್ ನ ತಥೈವ ಮಾಮ್ ॥ ೩೨**

ವುದಿಲ್ಲವಷ್ಟೆ? ಹಾಗೆ ಇವರ ಕಣ್ಣಿಗೆ ಮಂಜುಮುಸುಕಿದೆ (೨೮). ಪರೋಕ್ಷವಾಗಿ ಅಸ್ಫುಟರೀತಿಯಿಂದ ತಿಳಿಸಿರುವ ನನ್ನ ನಿಜವಾದ ತಾತ್ಪರ್ಯವನ್ನು ಈ ವಿಷಯ ಲೋಲುಪರು ಅರಿಯಲಾರದೆ ಹೋಗಿದ್ದಾರೆ. ಹಿಂಸಾಜನ್ಯವಾದ ಮಾಂಸಭಕ್ಷಣ ದಲ್ಲಿ ಆಸೆ ಇರುವುದಾದರೆ, ಯಾಗವನ್ನು ಮಾಡಿಯೇ ಮಾಂಸವನ್ನು ಭಕ್ಷಿಸ ಬಹುದು—ಎಂದು ಪರಿಸಂಖ್ಯೆಯು ನನಗೆ ಸಂಮತವೇ ಹೊರತು 'ಪಶುಯಾಗ ವನ್ನು ಮಾಡಬೇಕು' ಎಂದು ಅಪೂರ್ವವಿಧಿಯು ನನಗೆ ಸಂಮತವಲ್ಲ (೨೯). ಹಿಂಸಾಲೋಲುಪರಾದ ಖೂಳರು ತಮ್ಮ ವಿಷಯಸುಖಕ್ಕಾಗಿ ಪಶುಗಳನ್ನು ಕೊಂದು ಯಾಗಮಾಡಿ ಪಿತೃಭೂತಾದಿಗಳನ್ನು ಅರ್ಚಿಸುತ್ತಾರೆ. ವ್ಯಾಪಾರಿಗಳು ದ್ವೀಪಾಂತರ ದಲ್ಲಿ ಬಹಳ ಹಣವನ್ನು ಗಳಿಸುತ್ತೇವೆಂದು ಇರುವ ಬಂಡವಾಳವನ್ನು ಖರ್ಚುಮಾಡಿ ಉಭಯ ಭ್ರಷ್ಟರಾಗುವುದುಂಟು. ಹಾಗೆಯೇ ಈ ಕರ್ಮನಿಷ್ಠರು ಶ್ರೋತ್ರ ಪ್ರಿಯವೂ ಕನಸಿನಂತೆ ಅನಿತ್ಯವೂ ಉತ್ತಮವಲ್ಲದ್ದೂ ಆದ ಪರಲೋಕಕ್ಕಾಗಿ ಮತ್ತು ಈ ಲೋಕದ ಸುಖಗಳಿಗಾಗಿ ಆಸೆಪಡುತ್ತ, ಇರುವ ಧನವನ್ನು ಯಜ್ಞಾದಿ ಕರ್ಮಗಳಲ್ಲಿ ತೊಡಗಿಸುತ್ತಾರೆ! (೩೧). ಸತ್ತ್ವರಜಸ್ತಮೋಗುಣಗಳಿಂದ ಯುಕ್ತ ರಾದ ಇವರು ತಮ್ಮಂತೆಯೇ ಸತ್ತ್ವರಜಸ್ತಮೋಗುಣಯುಕ್ತರಾದ ಇಂದ್ರಾದಿ ವಿಭಿನ್ನದೇವತೆಗಳ ಉಪಾಸನೆ ಮಾಡುತ್ತಾರೆ. ಅದೇ ಪ್ರಕಾರ [1]ನನ್ನ ಉಪಾಸನೆ

1. ವಿಶ್ವರೂಪಾಧ್ಯಾಯದಲ್ಲಿ ಹೇಳಿದಂತೆ ಇಂದ್ರಾದಿಗಳೂ ಭಗವದಂಶಗಳೇ ಆಗಿರು ವಾಗ ಫಲದಲ್ಲಿ ವಿಶೇಷವೇಕೆ?—ಎಂಬ ಶಂಕೆ ಹುಟ್ಟಬಹುದು. ಅಭಿಪ್ರಾಯ ಹೀಗೆ— ಅನ್ಯದೇವತೆಗಳ ಉಪಾಸನೆಯಲ್ಲಿ ಕ್ಷುದ್ರಫಲಕಾಮನೆಯೂ ಭೇದದೃಷ್ಟಿಯೂ ಇರುತ್ತದೆ. ನನ್ನ ಉಪಾಸನೆಯಲ್ಲಿ ಮೋಕ್ಷಾಪೇಕ್ಷೆಯೂ ಅಭೇದದೃಷ್ಟಿಯೂ ಇರುತ್ತದೆ. ಆದ್ದರಿಂದ ಫಲವು ಭಿನ್ನವಾಗುತ್ತದೆ—ಎಂದು.

ಇಷ್ಟ್ವೇಹ ದೇವತಾ ಯಜ್ಞೈರ್ಗತ್ವಾ ರಂಸ್ಯಾಮಹೇ ದಿವಿ ।
ತಸ್ಯಾಂತ ಇಹ ಭೂಯಾಸ್ಮ ಮಹಾಶಾಲಾ ಮಹಾಕುಲಾಃ ॥ ೩೩

ಏವಂ ಪುಷ್ಪಿತಯಾ ವಾಚಾ ವ್ಯಾಕ್ಷಿಪ್ತಮನಸಾಂ ನೃಣಾಮ್ ।
ಮಾನಿನಾಂ ಚಾತಿಸ್ತಬ್ಧಾನಾಂ ಮದ್ವಾರ್ತಾಪಿ ನ ರೋಚತೇ ॥ ೩೪

ವೇದಾ ಬ್ರಹ್ಮಾತ್ಮವಿಷಯಾಸ್ತ್ರಿಕಾಂಡವಿಷಯಾ ಇಮೇ ।
ಪರೋಕ್ಷವಾದಾ ಋಷಯಃ ಪರೋಕ್ಷಂ ಮಮ ಚ ಪ್ರಿಯಮ್ ॥ ೩೫

ಶಬ್ದಬ್ರಹ್ಮ ಸುದುರ್ಬೋಧಂ ಪ್ರಾಣೇಂದ್ರಿಯಮನೋಮಯಮ್ ।
ಅನಂತಪಾರಂ ಗಂಭೀರಂ ದುರ್ವಿಗಾಹ್ಯಂ ಸಮುದ್ರವತ್ ॥ ೩೬

---

ಯಲ್ಲಿ ಮಾತ್ರ ತೊಡಗುವುದಿಲ್ಲ! (೩೨). "ದೇವತೆಗಳನ್ನು ಕುರಿತು ಈ ಲೋಕದಲ್ಲಿ ಯಜ್ಞಗಳನ್ನು ಮಾಡಿ, ಸ್ವರ್ಗಲೋಕಕ್ಕೆ ಹೋಗಿ ವಿಹರಿಸುತ್ತೇವೆ! ಸ್ವರ್ಗಫಲವು ಮುಗಿದಮೇಲೆ ಮತ್ತೆ ಮಹಾವಂಶದಲ್ಲಿ ಮಹಾಗೃಹಸ್ಥರಾಗಿ ಜನಿಸುತ್ತೇವೆ!" ಎಂಬುದು ಈ ಕರ್ಮಜಡರ ಆಸೆ (೩೩). ಹೂವಿನಂತೆ ರಂಗುರಂಗಾದ ಈ ಮಾತಿನಿಂದ ಯಾರ ಮನಸ್ಸು ಮರುಳಾಗಿಬಿಡುತ್ತದೆಯೋ ಅಂತಹ ಅಹಂಕಾರಿಗಳೂ ಅವಿನೀತರೂ ಆದ ಜನರಿಗೆ ನನ್ನ ಸುದ್ದಿಯೂ ರುಚಿಸುವುದಿಲ್ಲ! (೩೩-೩೪). ಉದ್ಧವ, ಕರ್ಮಕಾಂಡ-ದೇವತಾಕಾಂಡ-ಬ್ರಹ್ಮಕಾಂಡ ಎಂದು ಕಾಂಡತ್ರಯಾತ್ಮಕಗಳಾದ ಈ ವೇದಗಳು ಪರಮಾರ್ಥವಾಗಿ 'ಜೀವಾತ್ಮನು ಬ್ರಹ್ಮವೇ' (ಸಂಸಾರಿಯಲ್ಲ)—ಎಂದು ಬೋಧಿಸುವುದಕ್ಕಾಗಿ ಹೊರಟಿವೆ. ಮಂತ್ರಗಳು ಅಥವಾ ಮಂತ್ರದ್ರಷ್ಟಾರರಾದ ಋಷಿಗಳು ಪರೋಕ್ಷವಾಗಿ ಸತ್ಯವನ್ನು ತಿಳಿಸತಕ್ಕವರು. ನನಗೆ [1]ಪರೋಕ್ಷವೇ ಪ್ರಿಯವಾದದ್ದು (೩೫). ಶಬ್ದಬ್ರಹ್ಮವೆನಿಸಿದ ವೇದವನ್ನು ಅರ್ಥಮಾಡಿಕೊಳ್ಳುವುದು ಸುಲಭವಾದ್ದಲ್ಲ, ಬಹಳ ಕಠಿಣವಾದದ್ದು ಅದು. ಸೂಕ್ಷ್ಮರೂಪವಾದ ಶಬ್ದಬ್ರಹ್ಮವು ಪ್ರಾಣಮಯವಾಗಿ ಪರಾವಾಕ್ ಎಂದೂ ಉಕ್ತವಾಗಿದೆ. (ಸಮಷ್ಟಿಪ್ರಾಣಾದಿಮಯವೂ ನಿರ್ವಿಶೇಷವೂ ಆದ ಶಬ್ದಬ್ರಹ್ಮವು

1. 'ಪರೋಕ್ಷಪ್ರಿಯಾ ಇವ ಹಿ ದೇವಾಃ' (ಐತ. ೧-೩-೧೪). ಶುದ್ಧಾಂತಃಕರಣರು ಮಾತ್ರ ನಿವೃತ್ತಿ ಮಾರ್ಗದಲ್ಲಿದ್ದು ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳಬೇಕು—ಇತರರು ವೃಥಾ ಕರ್ಮತ್ಯಾಗ ಮಾಡಿ ಭ್ರಷ್ಟರಾಗಬಾರದು—ಎಂದು ವೇದದಲ್ಲಿ ಪರೋಕ್ಷವಾದವಿದೆ.

ಮಯೋಪಬೃಂಹಿತಂ ಭೂಮ್ನಾ ಬ್ರಹ್ಮಣಾನಂತಶಕ್ತಿನಾ ।
ಭೂತೇಷು ಘೋಷರೂಪೇಣ ಬಿಸೇಷೂರ್ಣೇವ ಲಕ್ಷ್ಯತೇ ॥ ೩೭

ಯಥೋರ್ಣನಾಭಿರ್ಹೃದಯಾದೂರ್ಣಾಮುದ್ವಮತೇ ಮುಖಾತ್ ।
ಆಕಾಶಾದ್ ಘೋಷವಾನ್ ಪ್ರಾಣೋ ಮನಸಾ ಸ್ಪರ್ಶರೂಪಿಣಾ ॥ ೩೮

ಛಂದೋಮಯೋಽಮೃತಮಯಃ ಸಹಸ್ರಪದವೀಂ ಪ್ರಭುಃ ।
ಓಂಕಾರಾದ್ ವ್ಯಂಜಿತಸ್ಪರ್ಶಸ್ವರೋಷ್ಮಾಂತಃಸ್ಥಭೂಷಿತಾಮ್ ॥ ೩೯

ವಿಚಿತ್ರಭಾಷಾವಿತತಾಂ ಛಂದೋಭಿಶ್ಚತುರುತ್ತರೈಃ ।
ಅನಂತಪಾರಾಂ ಬೃಹತೀಂ ಸೃಜತ್ಯಾಕ್ಷಿಪತೇ ಸ್ವಯಮ್ ॥ ೪೦

---

ದೇಶಕಾಲಗಳಿಂದ ಅಪರಿಚ್ಛಿನ್ನವಾದ ಪ್ರಯುಕ್ತ) ಪಾರವಿಲ್ಲದ್ದು. ಅದರ ಅರ್ಥವು ನಿಗೂಢವಾದದ್ದು. ಸಮುದ್ರದಂತೆ ದುರ್ವಿಗಾಹ್ಯವಾದದ್ದು (೩೬). ಅಪರಿಚ್ಛಿನ್ನನಾದ ಭೂಮನೂ ಅವಿಕಾರಿಯಾದ ಪರಬ್ರಹ್ಮವೂ ಅನಂತಶಕ್ತಿಯೂ ಆದ ನಾನು ಅಂತರ್ಯಾಮಿಯಾಗಿ ಈ ಶಬ್ದಬ್ರಹ್ಮದಲ್ಲಿ ಅಧಿಷ್ಠಿತನಾಗಿದ್ದೇನೆ. ತಾವರೆದಂಟುಗಳಲ್ಲಿ ಸೂಕ್ಷ್ಮವಾದ ಎಳೆಯಿರುವಂತೆ ಸಮಸ್ತಪ್ರಾಣಿಗಳಲ್ಲಿಯೂ ಈ ಸೂಕ್ಷ್ಮಶಬ್ದವು ನಾದರೂಪದಲ್ಲಿ ಕಂಡುಬರುತ್ತದೆ (೩೭). ಜೇಡರಹುಳು ತನ್ನ ಹೃದಯದಿಂದ ಬಾಯಿಯ ಮೂಲಕ ಎಳೆಯನ್ನು ಉಗುಳಿ ಪ್ರಕಟಿಸುವುದಷ್ಟೆ. ಹಾಗೆಯೇ ಪ್ರಾಣೋಪಾಧಿಯೂ ಅಮೃತಮಯನೂ ಪ್ರಭುವೂ ಆದ ಹಿರಣ್ಯಗರ್ಭನು ವೇದಮೂರ್ತಿಯಾಗಿ ಹೃದಯಾಕಾಶದಿಂದ ಮುಖದಮೂಲಕ ಬೃಹತೀ ಎಂಬ ವೈಖರೀವಾಕ್ಕನ್ನು ಪ್ರಕಟಿಸುತ್ತಾನೆ. ಘೋಷವೆನಿಸುವ ನಾದವನ್ನು ಈ ವಾಕ್ಕಿಗೆ ಉಪಾದಾನವಾಗಿ ತೆಗೆದುಕೊಳ್ಳುತ್ತಾನೆ. ಕವರ್ಗವೇ ಮೊದಲಾದ ಸ್ಪರ್ಶಾದಿ ವರ್ಣಗಳನ್ನು ರೂಪಿಸುವ ಮನಸ್ಸು ನಿಮಿತ್ತಕಾರಣವಾಗಿರುತ್ತದೆ. ಈ ವೈಖರಿಯು ಸಹಸ್ರಮಾರ್ಗವುಳ್ಳದ್ದು—ಎಂದರೆ—ನಾನಾರೂಪವಾದದ್ದು. ಪ್ರಣವದಿಂದ ವ್ಯಂಜಿಸಲ್ಪಟ್ಟ ಸ್ಪರ್ಶ, ಸ್ವರ, ಊಷ್ಮ, ಅಂತಃಸ್ಥಗಳೆಂಬ ವರ್ಣಗಳಿಂದ ಭೂಷಿತವಾದದ್ದು (೩೮–೩೯). ಹೀಗೆ ವಿಚಿತ್ರವಾದ ವೈದಿಕ ಲೌಕಿಕ ಭಾಷೆಗಳಿಂದ ವೈಖರಿಯು ವಿಸ್ತೃತವಾಗಿದೆ. ನಾಲ್ಕು ನಾಲ್ಕು ಅಕ್ಷರಗಳು ಕ್ರಮವಾಗಿ ಹೆಚ್ಚುವ ವಿಭಿನ್ನ ಛಂದಸ್ಸುಗಳಿಂದ ಕೂಡಿದೆ. ಪಾರವೇ ಇಲ್ಲದ ಈ ಬೃಹತಿಯನ್ನು ಪ್ರಾಣೋಪಾಧಿಯಾದ ಹಿರಣ್ಯಗರ್ಭನು ಸೃಜಿಸುತ್ತಾನೆ ಮತ್ತು ತಾನೇ ಉಪಸಂಹರಿಸು

ಗಾಯತ್ರ್ಯುಷ್ಣಿಗನುಷ್ಟುಪ್ ಚ ಬೃಹತೀ ಪಂಕ್ತಿರೇವ ಚ ।
ತ್ರಿಷ್ಟುಬ್ಜಗತ್ಯತಿಚ್ಛಂದೋ ಹ್ಯತ್ಯಷ್ಟ್ಯತಿಜಗದ್ ವಿರಾಟ್ ॥ ೪೧
ಕಿಂ ವಿಧತ್ತೇ ಕಿಮಾಚಷ್ಟೇ ಕಿಮನೂದ್ಯ ವಿಕಲ್ಪಯೇತ್ ।
ಇತ್ಯಸ್ಯಾ ಹೃದಯಂ ಲೋಕೇ ನಾನ್ಯೋ ಮದ್ ವೇದ ಕಶ್ಚನ ॥ ೪೨
ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಪೋಹ್ಯತೇ ತ್ವಹಮ್ ।
ಏತಾವಾನ್ ಸರ್ವವೇದಾರ್ಥಃ ಶಬ್ದ ಆಸ್ಥಾಯ ಮಾಂ ಭಿದಾಮ್ ।
ಮಾಯಾಮಾತ್ರಮನೂದ್ಯಾಂತೇ ಪ್ರತಿಷಿಧ್ಯ ಪ್ರಸೀದತಿ ॥ ೪೩

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಏಕವಿಂಶಾಧ್ಯಾಯಃ

---

ತ್ತಾನೆ (೪೦). ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ, 'ಅತಿ' ಶಬ್ದಯುಕ್ತ ಅತ್ಯಷ್ಟಿ, ಅತಿಜಗತಿ, ಅತಿವಿರಾಟ್—ಇತ್ಯಾದಿ ಛಂದಸ್ಸುಗಳಿಂದ ಉಪಲಕ್ಷಿತವಾದ ಬೃಹದ್ವೇದವು ದುರ್ಜ್ಞೇಯವೇ ಸರಿ (೪೧). ಉದ್ಧವ, ಈ ಶ್ರುತಿಯು ಕರ್ಮಕಾಂಡದಲ್ಲಿ ವಿಧಿವಾಕ್ಯಗಳಿಂದ ಏನನ್ನು ವಿಧಿಸುತ್ತದೆ, ದೇವತಾಕಾಂಡದಲ್ಲಿ ಮಂತ್ರವಾಕ್ಯಗಳಿಂದ ಯಾವುದನ್ನು ಪ್ರಕಾಶಪಡಿಸುತ್ತದೆ, ಜ್ಞಾನಕಾಂಡದಲ್ಲಿ ಯಾವುದನ್ನು ಅನುವಾದಿಸಿ ವಿಕಲ್ಪಿಸಿ ನಿಷೇಧಿಸುತ್ತದೆ—ಎಂಬ ರಹಸ್ಯವು ನನ್ನನ್ನು ಬಿಟ್ಟರೆ ಇನ್ನು ಯಾರಿಗೂ ತಿಳಿಯದು! (೪೨). ಉದ್ಧವ, ಈ ಶ್ರುತಿಯು ಯಜ್ಞರೂಪನಾದ ನನ್ನನ್ನೇ ವಿಧಿಸುತ್ತದೆ, ವಿಭಿನ್ನದೇವತಾರೂಪನಾದ ನನ್ನನ್ನೇ ಪ್ರಕಾಶಪಡಿಸುತ್ತದೆ, ನನ್ನನ್ನೇ ಆಕಾಶಾದಿರೂಪದಿಂದ ವಿಕಲ್ಪಿಸಿ ಆ ಕಲ್ಪನೆಗಳನ್ನು ನಿರಾಕರಿಸುತ್ತದೆ. ಈ ಶಬ್ದಬ್ರಹ್ಮವು ಪರಮಾರ್ಥರೂಪನಾದ ನನ್ನನ್ನು ಆಶ್ರಯಿಸಿಕೊಂಡು, ಭೇದವು ಮಾಯಾಮಾತ್ರವೆಂದು ಅನುವಾದಿಸಿ, ಕಡೆಯಲ್ಲಿ ' ನೇಹ ನಾನಾಸ್ತಿ ಕಿಂಚನ ' ಎಂದು ಭೇದವನ್ನು ಪ್ರತಿಷೇಧಿಸಿ [1]ಶಾಂತವಾಗುವುದು " ಎಂದನು (೪೩).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯ

---

1. ಮೊಳಕೆಯಲ್ಲಿ ಸಾರಭೂತವಾಗಿರುವ ಕಸವು ಮೊಳಕೆಯಿಂದ ಬೆಳೆದ ಮರದಲ್ಲಿ ವ್ಯಾಪಿಸಿಕೊಂಡಿರುತ್ತದೆ. ಹಾಗೆ ಪ್ರಣವಾರ್ಥವೇ ಆದ ಪರಮೇಶ್ವರನು ಪ್ರಣವದ ವಿಸ್ತಾರವಾದ ವೇದದಲ್ಲಿ ಎಲ್ಲೆಡೆಯೂ ವ್ಯಾಪಿಸಿರುತ್ತಾನೆ—ಎಂದು ಅಭಿಪ್ರಾಯ.

# ದ್ವಾವಿಂಶಾಧ್ಯಾಯಃ

ಉದ್ಧವ ಉವಾಚ—

**ಕತಿ ತತ್ತ್ವಾನಿ ವಿಶ್ವೇಶ ಸಂಖ್ಯಾತಾನ್ಯೃಷಿಭಿಃ ಪ್ರಭೋ ।**
**ನವೈಕಾದಶ ಪಂಚ ತ್ರೀಣ್ಯಾತ್ಥ ತ್ವಮಿಹ ಶುಶ್ರುಮ ॥** ೧

**ಕೇಚಿತ್ ಷಡ್ವಿಂಶತಿಂ ಪ್ರಾಹುರಪರೇ ಪಂಚವಿಂಶತಿಮ್ ।**
**ಸಪ್ತೈಕೇ ನವ ಷಟ್ ಕೇಚಿಚ್ಚತ್ವಾರ್ಯೇಕಾದಶಾಪರೇ ॥** ೨

**ಕೇಚಿತ್ ಸಪ್ತದಶ ಪ್ರಾಹುಃ ಷೋಡಶೈಕೇ ತ್ರಯೋದಶ ।**
**ಏತಾವತ್ತ್ವಂ ಹಿ ಸಂಖ್ಯಾನಾಮೃಷಯೋ ಯದ್ವಿವಕ್ಷಯಾ ।**
**ಗಾಯಂತಿ ಪೃಥಗಾಯುಷ್ಮನ್ನಿದಂ ನೋ ವಕ್ತುಮರ್ಹಸಿ ॥** ೩

ಶ್ರೀ ಭಗವಾನುವಾಚ—

**ಯುಕ್ತಂ ಚ ಸಂತಿ ಸರ್ವತ್ರ ಭಾಷಂತೇ ಬ್ರಾಹ್ಮಣಾ ಯಥಾ ।**
**ಮಾಯಾಂ ಮದೀಯಾಮುದ್ಗೃಹ್ಯ ವದತಾಂ ಕಿಂ ನು ದುರ್ಘಟಮ್ ॥** ೪

## ಅಧ್ಯಾಯ ೨೨

ಬೇರೆ ಬೇರೆ ಶಾಸ್ತ್ರಗಳಲ್ಲಿ ಹೇಳಿದ ತತ್ತ್ವಸಂಖ್ಯೆಗಳ ವಿರೋಧ ಪರಿಹಾರ.
ಪುರುಷ ಪ್ರಕೃತಿಗಳ ವಿವೇಚನೆ. ಪುನರ್ಜನ್ಮ ವಿಚಾರ

ಆಗ ಉದ್ಧವನು "ಹೇ ಪ್ರಭು–ವಿಶ್ವೇಶ್ವರ, ಋಷಿಗಳು ಶಾಸ್ತ್ರಗಳಲ್ಲಿ ಪರಿಗಣಿಸಿರುವ ತತ್ತ್ವಗಳು ಎಷ್ಟು? ನೀನಾದರೋ ಒಂಬತ್ತು, ಹನ್ನೊಂದು, ಐದು, ಮೂರು–ಎಂದು ಇಪ್ಪತ್ತೆಂಟು ತತ್ತ್ವಗಳೆಂದು ಹೇಳುತ್ತೀಯೆ, ಅದನ್ನು ನಾವು ಕೇಳಿದ್ದೇವೆ (೧). ಕೆಲವು ಋಷಿಗಳು ಇಪ್ಪತ್ತಾರು ತತ್ತ್ವಗಳೆಂದೂ ಕೆಲವರು ಇಪ್ಪತ್ತೈದು ತತ್ತ್ವಗಳೆಂದು ಹೇಳುತ್ತಾರೆ. ಕೆಲವರು ತತ್ತ್ವಗಳು ಏಳು ಎಂದೂ, ಒಂಬತ್ತು ಎಂದೂ, ಆರು ಎಂದೂ, ಹನ್ನೊಂದು ಎಂದೂ ಹೇಳಿದ್ದಾರೆ (೨). ಹಾಗೆಯೇ ಹದಿನೇಳು, ಹದಿನಾರು, ಹದಿಮೂರು ತತ್ತ್ವಗಳೆಂದೂ ಹೇಳತಕ್ಕವರಿದ್ದಾರೆ. ಶ್ರೀಕೃಷ್ಣ, ಈ ಪ್ರಕಾರದಲ್ಲಿ ತತ್ತ್ವಗಳ ಸಂಖ್ಯೆಯನ್ನು ನಾನಾವಿಧವಾಗಿ ಬೇರೆ ಬೇರೆ ಋಷಿಗಳು ಹೇಳಿದ್ದಾರಲ್ಲ, ಇದರ ಅಭಿಪ್ರಾಯವೇನೆಂಬುದನ್ನು ನೀನು ಹೇಳಬೇಕು" ಎಂದು ಕೇಳಿದನು (೩). ಅದಕ್ಕೆ ಭಗವಂತನಿಂತೆಂದನು: "ಉದ್ಧವ,

ನೈತದೇವಂ ಯಥಾಽಽತ್ಥ ತ್ವಂ ಯದಹಂ ವಚ್ಮಿ ತತ್ತಥಾ ।
ಏವಂ ವಿವದತಾಂ ಹೇತುಃ ಶಕ್ತಯೋ ಮೇ ದುರತ್ಯಯಾಃ ॥ ೫

ಯಾಸಾಂ ವ್ಯತಿಕರಾದಾಸೀದ್ ವಿಕಲ್ಪೋ ವದತಾಂ ಪದಮ್ ।
ಪ್ರಾಪ್ತೇ ಶಮದಮೇಽಪ್ಯೇತಿ ವಾದಸ್ತಮನುಶಾಮ್ಯತಿ ॥ ೬

ಪರಸ್ಪರಾನುಪ್ರವೇಶಾತ್ ತತ್ತ್ವಾನಾಂ ಪುರುಷರ್ಷಭ ।
ಪೌರ್ವಾಪರ್ಯಪ್ರಸಂಖ್ಯಾನಂ ಯಥಾ ವಕ್ತುರ್ವಿವಕ್ಷಿತಮ್ ॥ ೭

---

ಈ ಬ್ರಾಹ್ಮಣರು ಹೇಳಿರುವ ಹಾಗೆ ಎಲ್ಲ ಪಕ್ಷಗಳಲ್ಲಿಯೂ ತಕ್ಕ ಯುಕ್ತಿಗಳಿರುತ್ತವೆ. ನನ್ನ ಮಾಯೆಗೆ ಒಳಗಾದ್ದನ್ನು ಸತ್ಯವೆಂದು ಸ್ವೀಕರಿಸಿ ಮಾತಾಡತಕ್ಕವರಿಗೆ ಹೊಂದಿಸಲಾಗದ ವಿಷಯುವಾದರೂ ಯಾವುದಿದೆ! (೪). "ನೀನು ಹೇಳುತ್ತಿರುವುದು ಸರಿಯಲ್ಲ, ಅದು ಹೀಗಿದೆ, ನಾನು ಹೇಳುವುದೇ ಸರಿ!" ಎಂದು ಯುಕ್ತಿಗಳನ್ನೊಡ್ಡಿ ವಾದ ಮಾಡತಕ್ಕವರಿಗೆ ದುರತಿಕ್ರಮವಾದ ನನ್ನ ಸತ್ತ್ವಾದಿಗುಣಗಳೇ ಬುದ್ಧಿಬಲವನ್ನೊದಗಿಸುವ ಶಕ್ತಿಯಾಗಿರುತ್ತವೆ! (೫). ಈ ಸತ್ತ್ವಾದಿಗುಣತ್ರಯ ಶಕ್ತಿಗಳ ಕ್ಷೋಭೆಯಿಂದಲೇ ಒಂದು ವಸ್ತುವಿನ ವಿಷಯದಲ್ಲಿ ವಾದಿಗಳಿಗೆ ವಿಕಲ್ಪವು-ಎಂದರೆ ಭೇದಬುದ್ಧಿ ಹುಟ್ಟುತ್ತದೆ. ಈ ಚಿತ್ತಕ್ಷೋಭೆಯು ಹೋಗಿ ಯಾವಾಗ ಶಮದಮಾದಿಗಳು ಅಂಕುರಿಸುತ್ತವೆಯೋ ಆಗ ವಸ್ತುವಿಷಯದಲ್ಲಿ ವಿಕಲ್ಪವೂ—ಎಂದರೆ ಭೇದಬುದ್ಧಿಯೂ ಅಳಿಸಿ ಹೋಗುತ್ತದೆ. ವಿಕಲ್ಪವು ಹೋದೊಡನೆ ವಾದವು ಶಾಂತವಾಗುತ್ತದೆ! (೬). ಪುರುಷಶ್ರೇಷ್ಠ—ಉದ್ಧವ, ತತ್ತ್ವಗಳು ಪರಸ್ಪರವಾಗಿ ಒಂದರೊಡನೊಂದು ಸೇರಿಕೊಂಡಿರುವುದರಿಂದ, ವಕ್ತೃವಿನ ವಿವಕ್ಷೆಯನ್ನನುಸರಿಸಿ, ಕಾರ್ಯಕಾರಣಭಾವಾನುಗುಣವಾಗಿ [1]ತತ್ತ್ವಸಂಖ್ಯೆಯು ಗಣನೆಯಾಗುತ್ತದೆ, (ಕಾರಣವು ಅಲ್ಪ, ಕಾರ್ಯವು ಅಧಿಕ ಕಾರಣವು ಪೂರ್ವ. ಕಾರ್ಯವು ಅಪರ. ಕಾರ್ಯಕಾರಣಭಾವವೇ ಪೌರ್ವಾಪರ್ಯ. ಕಾರಣವನ್ನಿಟ್ಟುಕೊಂಡರೆ ತತ್ತ್ವಸಂಖ್ಯೆ

1. ಸರ್ವತ್ರ ಸರ್ವವೂ ಅಂತರ್ಭೂತವಾಗಿರುತ್ತದೆ. ವಿವಕ್ಷಾಭೇದದಿಂದ ಬೇರೆಬೇರೆ ತತ್ತ್ವವೆಂದು ವಿಭಜಿಸಲು ಸಾಧ್ಯವಾಗುತ್ತದೆ. ವಸ್ತುತಃ ನಾನಾ ತತ್ತ್ವಗಳು ಕಾಣುವುದೇ ಮಾಯೆಯಿಂದ. ಮಾಯಿಕವಸ್ತುವಿಗೆ ಬೆಲೆ ಎಲ್ಲಿದೆ? ಬಿಸಿಲ್ಗುದುರೆಯ ನೀರಿನ ತೂಕ ಎಷ್ಟಾದರೂ ಆಗಬಹುದು—ಎಂದು ಅಭಿಪ್ರಾಯ.

ಏಕಸ್ಮಿನ್ನಪಿ ದೃಶ್ಯಂತೇ ಪ್ರವಿಷ್ಟಾನೀತರಾಣಿ ಚ ।
ಪೂರ್ವಸ್ಮಿನ್ ವಾಪರಸ್ಮಿನ್ ವಾ ತತ್ತ್ವೇ ತತ್ತ್ವಾನಿ ಸರ್ವಶಃ ॥ ೮

ಪೌರ್ವಾಪರ್ಯಮತೋಽಮೀಷಾಂ ಪ್ರಸಂಖ್ಯಾನಮಭೀಪ್ಸತಾಮ್ ।
ಯಥಾ ವಿವಿಕ್ತಂ ಯದ್ವಕ್ತ್ರಂ ಗೃಹ್ಣೀಮೋ ಯುಕ್ತಿಸಂಭವಾತ್ ॥ ೯

ಅನಾದ್ಯವಿದ್ಯಾಯುಕ್ತಸ್ಯ ಪುರುಷಸ್ಯಾತ್ಮವೇದನಮ್ ।
ಸ್ವತೋ ನ ಸಂಭವಾದನ್ಯಸ್ತತ್ತ್ವಜ್ಞೋ ಜ್ಞಾನದೋ ಭವೇತ್ ॥ ೧೦

ಪುರುಷೇಶ್ವರಯೋರತ್ರ ನ ವೈಲಕ್ಷಣ್ಯಮಣ್ವಪಿ ।
ತದನ್ಯಕಲ್ಪನಾಪಾರ್ಥಾ ಜ್ಞಾನಂ ಚ ಪ್ರಕೃತೇರ್ಗುಣಃ ॥ ೧೧

---

ಅಲ್ಪ. ಕಾರ್ಯವನ್ನಿಟ್ಟುಕೊಂಡರೆ ತತ್ತ್ವಸಂಖ್ಯೆ ಅಧಿಕ) (೭). ಒಂದೇ ಪದಾರ್ಥದಲ್ಲಿ ಹಲವಾರು ಅನ್ಯತತ್ತ್ವಗಳು ಪ್ರತಿಷ್ಠಿತವಾಗಿರುವುದು ಕಂಡುಬರುತ್ತದೆ. ಮೊದಲನೆಯದಾದ ಕಾರಣತತ್ತ್ವದಲ್ಲಿ ಸೂಕ್ಷ್ಮರೂಪದಿಂದ ಕಾರ್ಯತತ್ತ್ವವೂ ಅನಂತರದ ಕಾರ್ಯತತ್ತ್ವದಲ್ಲಿ ಅನುಗತವಾಗಿ ಕಾರಣತತ್ತ್ವವೂ [1]ಸರ್ವತ್ರ ಸೇರಿಕೊಂಡಿರುತ್ತದೆ (೮). ಆದ್ದರಿಂದ ಈ ತತ್ತ್ವಗಳಿಗೆ ಕಾರ್ಯಕಾರಣಭಾವವನ್ನೂ ನ್ಯೂನಾಧಿಕವಾಗಿ ಸಂಖ್ಯಾಗಣನೆಯನ್ನೂ ತಮ್ಮ ತಮ್ಮ ವಿವಕ್ಷಾನುಸಾರವಾಗಿ ವಾದಿಸತಕ್ಕವರ ನಡುವೆ ಯಾರ ಬಾಯಿ ಹೇಗೆ ನುಡಿದರೂ ಅದು ಸರಿಯಾಗಿದೆಯೆಂದು ನಾವು ಗ್ರಹಿಸುತ್ತೇವೆ! ಏಕೆಂದರೆ, ಎಲ್ಲ ಪಕ್ಷಗಳಲ್ಲಿಯೂ ತಕ್ಕ ಯುಕ್ತಿಗಳಿರುತ್ತವೆ! (೯). "ಅನಾದಿಯಾದ ಅವಿದ್ಯೆಯಿಂದ ಕೂಡಿರುವ ಪುರುಷನಿಗೆ—ಎಂದರೆ—ಜೀವಾತ್ಮನಿಗೆ ಸ್ವತಃ ಆತ್ಮಜ್ಞಾನ ಹುಟ್ಟುವುದು ಶಕ್ಯವಲ್ಲ. ಆದ್ದರಿಂದ ಆತ್ಮಜ್ಞಾನವನ್ನು ಬೋಧಿಸತಕ್ಕ ಈಶ್ವರನು ಜೀವಾತ್ಮನಿಗಿಂತ ಅನ್ಯನೆಂದು ಗಣಿಸತಕ್ಕದ್ದು! (ಈ ಪ್ರಕಾರದ ವಿವಕ್ಷೆಯಿಂದ ಇಪ್ಪತ್ತಾರು ತತ್ತ್ವಗಳೆಂಬ ಪಕ್ಷ ಹೊರಟಿದೆ) (೧೦). "ಈ ತತ್ತ್ವಗಣನೆಯಲ್ಲಿ ಜೀವಾತ್ಮನಿಗೂ ಈಶ್ವರನಿಗೂ (ಈರ್ವರೂ ಚಿದ್ರೂಪರೇ ಆದಕಾರಣ) ಈಷನ್ಮಾತ್ರವೂ ವೈಲಕ್ಷಣ್ಯವಿಲ್ಲ. ಅವರು ಭಿನ್ನತತ್ತ್ವದವರೆಂಬ ಕಲ್ಪನೆ ವ್ಯರ್ಥವಾದದ್ದು". (ಈ ಅಭಿಪ್ರಾಯದಿಂದ

---

1. ಮಣ್ಣು ಕಾರಣ, ಗಡಿಗೆ ಕಾರ್ಯ. ಮಣ್ಣಿನಲ್ಲಿ ಸೂಕ್ಷ್ಮರೂಪದಿಂದ ಗಡಿಗೆ ಇರುತ್ತದೆಯೆಂದು ಸತ್ಕಾರ್ಯವಾದಿಗಳು ಹೇಳುತ್ತಾರೆ. ಗಡಿಗೆಯಲ್ಲಿ ಅನುಗತವಾಗಿ ಮಣ್ಣು ಇರುತ್ತದೆ.

ಪ್ರಕೃತಿರ್ಗುಣಸಾಮ್ಯಂ ವೈ ಪ್ರಕೃತೇರ್ನಾತ್ಮನೋ ಗುಣಾಃ ।
ಸತ್ತ್ವಂ ರಜಸ್ತಮ ಇತಿ ಸ್ಥಿತ್ಯುತ್ಪತ್ತ್ಯಂತಹೇತವಃ ॥ ೧೨

ಸತ್ತ್ವಂ ಜ್ಞಾನಂ ರಜಃ ಕರ್ಮ ತಮೋಽಜ್ಞಾನಮಿಹೋಚ್ಯತೇ ।
ಗುಣವ್ಯತಿಕರಃ ಕಾಲಃ ಸ್ವಭಾವಃ ಸೂತ್ರಮೇವ ಚ ॥ ೧೩

ಪುರುಷಃ ಪ್ರಕೃತಿರ್ವ್ಯಕ್ತಮಹಂಕಾರೋ ನಭೋಽನಿಲಃ ।
ಜ್ಯೋತಿರಾಪಃ ಕ್ಷಿತಿರಿತಿ ತತ್ತ್ವಾನ್ಯುಕ್ತಾನಿ ಮೇ ನವ ॥ ೧೪

ಶ್ರೋತ್ರಂ ತ್ವಗ್ದರ್ಶನಂ ಘ್ರಾಣೋ ಜಿಹ್ವೇತಿ ಜ್ಞಾನಶಕ್ತಯಃ ।
ವಾಕ್ಪಾಣ್ಯುಪಸ್ಥಪಾಯ್ವಂಘ್ರಿ ಕರ್ಮಾಣ್ಯಂಗೋಭಯಂ ಮನಃ ॥ ೧೫

---

ಇಪ್ಪತ್ತೈದು ತತ್ತ್ವಗಳೆಂಬ ಪಕ್ಷ ಹೊರಟಿದೆ) ಜ್ಞಾನವಾದರೋ ಪ್ರಕೃತಿಯ ಗುಣ (ಅದು ಭಿನ್ನತತ್ತ್ವವಲ್ಲ) (೧೧). ಸತ್ತ್ವರಜಸ್ತಮೋಗುಣಗಳ ಸಮಸ್ಥಿತಿಯೇ ಪ್ರಕೃತಿ. ಆದ್ದರಿಂದ ಗುಣಗಳು ಪ್ರಕೃತಿಗೆ ಸೇರಿದವು, ಜೀವಾತ್ಮನಿಗಲ್ಲ. ಜ್ಞಾನವು ಸತ್ತ್ವಮಯವೆಂದೂ ಕರ್ಮವು ರಜೋಮಯವೆಂದೂ ಅಜ್ಞಾನವು ತಮೋಮಯವೆಂದೂ ಉಕ್ತವಾಗಿದೆ. (ಆದ್ದರಿಂದ ಜ್ಞಾನ, ಕರ್ಮ, ಅಜ್ಞಾನಗಳಿಗೆ ಪ್ರಕೃತಿಯಲ್ಲಿ ಅಂತರ್ಭಾವ). ಕಾಲವೆಂದರೆ [1]ಗುಣವ್ಯತಿಕರವೇ ಸರಿ. ಮಹತ್ತತ್ತ್ವವೇ ಸ್ವಭಾವವೆನಿಸುತ್ತದೆ (ಆದ್ದರಿಂದ ಕಾಲಸ್ವಭಾವಗಳು ಬೇರೆ ತತ್ತ್ವಗಳಲ್ಲ) (೧೨–೧೩). ಇನ್ನು ನಾನು ಹೇಳಿರುವಂತೆ ಪುರುಷ, ಪ್ರಕೃತಿ, ಮಹತ್ತತ್ತ್ವ (ವ್ಯಕ್ತ), ಅಹಂಕಾರ, ಆಕಾಶಾದಿಗಳ ಸೂಕ್ಷ್ಮರೂಪಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ತನ್ಮಾತ್ರೆಗಳು—ಎಂಬಿವು ಒಂಬತ್ತು ತತ್ತ್ವಗಳು ; ಶ್ರೋತ್ರ, ತ್ವಕ್, ಚಕ್ಷು, ಘ್ರಾಣ, ಜಿಹ್ವಾ—ಎಂಬ ಜ್ಞಾನೇಂದ್ರಿಯಗಳು ಐದು ; ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಕರ್ಮೇಂದ್ರಿಯಗಳು ಐದು ; ಉಭಯಾತ್ಮಕವಾದ ಮನಸ್ಸು—ಎಂದು ಹನ್ನೊಂದು ತತ್ತ್ವಗಳು (೧೪–೧೫).

---

1. ಗುಣವ್ಯತಿಕರ = ಗುಣಗಳ ಸಂಮಿಶ್ರಣ. ಕಾಲವು ಪ್ರಕೃತಿಯಲ್ಲಿ ಸೇರುತ್ತದೆ ಎಂಬ ಅರ್ಥ ಸಹಜವಾಗಿ ಹೊರಡುತ್ತದೆ. ಇದು ಸಾಂಖ್ಯಮತ. "ಗುಣವ್ಯತಿಕರಕ್ಕೆ ಕಾರಣನಾದ ಈಶ್ವರ" ಎಂದು ಶ್ರೀಧರಸ್ವಾಮಿಗಳು ಅರ್ಥಮಾಡಿದ್ದಾರೆ. ಅದು ಸೇಶ್ವರ ಸಾಂಖ್ಯಮತ.

ಶಬ್ದಃ ಸ್ಪರ್ಶೋ ರಸೋ ಗಂಧೋ ರೂಪಂ ಚೇತ್ಯರ್ಥಜಾತಯಃ ।
ಗತ್ಯುಕ್ತ್ಯುತ್ಸರ್ಗಶಿಲ್ಪಾನಿ ಕರ್ಮಾಯತನಸಿದ್ಧಯಃ ॥ ೧೬

ಸರ್ಗಾದೌ ಪ್ರಕೃತಿರ್ಹ್ಯಸ್ಯ ಕಾರ್ಯಕಾರಣರೂಪಿಣೀ ।
ಸತ್ತ್ವಾದಿಭಿರ್ಗುಣೈರ್ಧತ್ತೇ ಪುರುಷೋಽವ್ಯಕ್ತ ಈಕ್ಷತೇ ॥ ೧೭

ವ್ಯಕ್ತಾದಯೋ ವಿಕುರ್ವಾಣಾ ಧಾತವಃ ಪುರುಷೇಕ್ಷಯಾ ।
ಲಬ್ಧವೀರ್ಯಾಃ ಸೃಜಂತ್ಯಂಡಂ ಸಂಹತಾಃ ಪ್ರಕೃತೇರ್ಬಲಾತ್ ॥ ೧೮

ಸಪ್ತೈವ ಧಾತವ ಇತಿ ತತ್ರಾರ್ಥಾಃ ಪಂಚ ಖಾದಯಃ ।
ಜ್ಞಾನಮಾತ್ಮೋಭಯಾಧಾರಸ್ತತೋ ದೇಹೇಂದ್ರಿಯಾಸವಃ ॥ ೧೯

---

ಶಬ್ದಾದಿ ತನ್ಮಾತ್ರೆಗಳ ಪರಿಣಾಮಗಳಾದ ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ—ಎಂಬ ಪಂಚಮಹಾಭೂತಗಳು. ಹೀಗೆ ಒಟ್ಟು ಇಪ್ಪತ್ತೈದು [1] ತತ್ತ್ವಗಳಾಗುತ್ತವೆ. ಗಮನವಚನಗಳೂ (ವಿಸರ್ಜನದಾನಗಳೆಂಬ) ಎರಡು ವಿಸರ್ಗಗಳೂ ಮತ್ತು ಸಂತಾನೋತ್ಪಾದನೆ—ಇವು ಪಂಚಕರ್ಮೇಂದ್ರಿಯಗಳ ಫಲಗಳೇ ಹೊರತು ತತ್ತ್ವಾಂತರಗಳಲ್ಲ (೧೬) ಕಾರ್ಯಕಾರಣರೂಪವನ್ನು ಧರಿಸುವ ಪ್ರಕೃತಿಯು ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳ ಸಂದರ್ಭದಲ್ಲಿ ಸತ್ತ್ವಾದಿಗುಣಗಳಿಂದ ಸೃಜ್ಯತ್ವವೇ ಮುಂತಾದ ಅವಸ್ಥೆಯನ್ನು ಧರಿಸುತ್ತದೆ. ಅವ್ಯಕ್ತನಾದ—ಎಂದರೆ—ಪರಿಣಾಮರಹಿತನಾದ ಪುರುಷನು ನಿಮಿತ್ತಭೂತನಾಗಿ ಕೇವಲ ಸಾಕ್ಷಿಯಾಗಿ ನೋಡುತ್ತಾನೆ (೧೭). ಮಹತ್ತೇ ಮೊದಲಾದ ವ್ಯಕ್ತತತ್ತ್ವಗಳು ಪುರುಷನ ಈಕ್ಷಣದಿಂದ ಶಕ್ತಿಯನ್ನು ಪಡೆದು ಒಟ್ಟುಗೂಡಿ ತಮ್ಮಲ್ಲಿ ನಾನಾ ವಿಕಾರಗಳನ್ನುಂಟುಮಾಡಿಕೊಳ್ಳುತ್ತ ಪ್ರಕೃತಿಯ ಬಲವನ್ನಾಶ್ರಯಿಸಿ ಬ್ರಹ್ಮಾಂಡವನ್ನು ನಿರ್ಮಿಸುತ್ತವೆ (೧೮). ಏಳು ಧಾತುಗಳು—ತತ್ತ್ವಗಳು ಎಂದು ಇನ್ನೊಂದು ಮತ. ಅದರ ಪ್ರಕಾರ ಆಕಾಶಾದಿ ಮಹಾಭೂತಗಳು ಐದು, ದ್ರಷ್ಟೃವಾದ ಜೀವ, ಈ ದ್ರಷ್ಟೃ ದೃಶ್ಯಗಳಿಗೆ ಆಶ್ರಯನಾದ ಆತ್ಮ—ಎಂದು ಏಳು ತತ್ತ್ವಗಳು. ದೇಹ, ಇಂದ್ರಿಯ, ಪ್ರಾಣಗಳು ಇವುಗಳಿಂದ ಹುಟ್ಟುವ ಕಾರ್ಯಗಳು. (ಪ್ರಕೃತ್ಯಾದಿಗಳು ಕಾರಣಗಳಾದ್ದ

---

1. ಪ್ರಕೃತಿಯಲ್ಲಿ ಮೂರು ಗುಣಗಳು ಅಂತರ್ಭೂತವಾಗಿವೆ. ಅವನ್ನು ಪ್ರತ್ಯೇಕವಾಗಿ ಗಣಿಸಿದರೆ ಇಪ್ಪತ್ತೆಂಟು ತತ್ತ್ವಗಳಾಗುತ್ತವೆ. ಪುರುಷನಲ್ಲಿ ಜೀವ, ಈಶ್ವರ—ಎಂಬ ಭೇದವನ್ನು ಕಲ್ಪಿಸಿದರೆ ಇಪ್ಪತ್ತಾರು ತತ್ತ್ವಗಳಾಗುತ್ತವೆ.

ಷಡಿತ್ಯತ್ರಾಪಿ ಭೂತಾನಿ ಪಂಚ ಷಷ್ಠಃ ಪರಃ ಪುಮಾನ್ ।
ತೈರ್ಯುಕ್ತ ಆತ್ಮಸಂಭೂತೈಃ ಸೃಷ್ಟ್ವೇದಂ ಸಮುಪಾವಿಶತ್ ॥ ೨೦

ಚತ್ವಾರ್ಯೇವೇತಿ ತತ್ರಾಪಿ ತೇಜ ಆಪೋಽನ್ನಮಾತ್ಮನಃ ।
ಜಾತಾನಿ ತೈರಿದಂ ಜಾತಂ ಜನ್ಮಾವಯವಿನಃ ಖಲು ॥ ೨೧

ಸಂಖ್ಯಾನೇ ಸಪ್ತದಶಕೇ ಭೂತಮಾತ್ರೇಂದ್ರಿಯಾಣಿ ಚ ।
ಪಂಚ ಪಂಚೈಕಮನಸಾ ಆತ್ಮಾ ಸಪ್ತದಶಃ ಸ್ಮೃತಃ ॥ ೨೨

ತದ್ವತ್ ಷೋಡಶಸಂಖ್ಯಾನೇ ಆತ್ಮೈವ ಮನ ಉಚ್ಯತೇ ।
ಭೂತೇಂದ್ರಿಯಾಣಿ ಪಂಚೈವ ಮನ ಆತ್ಮಾ ತ್ರಯೋದಶ ॥ ೨೩

---

ರಿಂದ ಮಹಾಭೂತಗಳಲ್ಲಿ ಅಂತರ್ಭಾವಹೊಂದುತ್ತದೆ, ದೇಹಾದಿ ಕಾರ್ಯಗಳಿಗೂ ಮಹಾಭೂತಗಳಲ್ಲಿ ಅಂತರ್ಭಾವ) (೧೯). ತತ್ತ್ವಗಳು ಆರು—ಎಂಬ ಮತದಲ್ಲಿ ಹೀಗೆ ವ್ಯವಸ್ಥೆ—ಮಹಾಭೂತಗಳು ಐದು, ಆರನೆಯವನು ಪರಮಾತ್ಮ (ಜೀವವು ಪರಮಾತ್ಮನಲ್ಲಿಯೂ ಉಳಿದವು ಪಂಚಭೂತಗಳಲ್ಲಿಯೂ ಅಂತರ್ಭೂತವಾಗುತ್ತವೆ) ಪರಮಾತ್ಮನು ತನ್ನಿಂದ ಹುಟ್ಟಿದ ಉಳಿದ ತತ್ತ್ವಗಳಿಂದ ಈ ಜಗತ್ತನ್ನು ತ್ಯಜಿಸಿ ಅವುಗಳಲ್ಲಿ ಪ್ರವೇಶಿಸಿದ್ದಾನೆ (೨೦). ಅಗ್ನಿ, ಜಲ, ಪೃಥ್ವಿ (ಅನ್ನ), ಆತ್ಮ—ಎಂಬಿವು ನಾಲ್ಕೇ ತತ್ತ್ವಗಳೆಂದು ಇನ್ನೊಂದು ಮತ. ಇವುಗಳಿಂದ ಇತರ ಎಲ್ಲ ಅವಯವಿಗಳಾದ ಕಾರ್ಯಜಾತಗಳೂ ಹುಟ್ಟಿವೆ. ಪಂಚಮಹಾಭೂತಗಳು, ಪಂಚತನ್ಮಾತ್ರೆಗಳು, ಪಂಚಜ್ಞಾನೇಂದ್ರಿಗಳು, ಮನಸ್ಸು, ಆತ್ಮ—ಇವಿಷ್ಟು ಹದಿನೇಳು ತತ್ತ್ವಗಳೆಂದು ಮತ್ತೊಂದು ಮತವಿದೆ (೨೧-೨೨). ಸಂಕಲ್ಪಿಸತಕ್ಕ ಆತ್ಮವೇ ಮನಸ್ಸು—ಎಂದು ಹೇಳಿದಾಗ ಹಿಂದಿನ ಗಣನೆಯಂತೆ ಹದಿನಾರೇ ತತ್ತ್ವಗಳಾಗುತ್ತವೆ. ಪಂಚಭೂತಗಳು, ಪಂಚೇಂದ್ರಿಯಗಳು, ಮನಸ್ಸು, ಜೀವ-ಈಶ್ವರ ಎಂದು ಇಬ್ಬರು ಆತ್ಮರು—ಎಂದು ಗಣಿಸಿದಾಗ ಹದಿಮೂರು ತತ್ತ್ವಗಳಾಗುತ್ತವೆ. ಹನ್ನೊಂದು ತತ್ತ್ವಗಳೆಂಬ ಮತದಲ್ಲಿ ಜೀವ, ಮನಸ್ಸುಗಳನ್ನು ಆತ್ಮನಲ್ಲಿ ಅಂತರ್ಭಾವ ಮಾಡಬೇಕು. ಆಗ ಪಂಚ ಮಹಾಭೂತಗಳು, [1]ಪಂಚಜ್ಞಾನೇಂದ್ರಿಯಗಳು, ಆತ್ಮ—ಎಂದು ಹನ್ನೊಂದು ಧಾತುಗಳು. ಇನ್ನು ಒಂಬತ್ತು ತತ್ತ್ವಗಳೆಂಬ ಪಕ್ಷದಲ್ಲಿ ಪ್ರಕೃತಿ, ಮಹತ್ತು,

---

1. ಕರ್ಮೇಂದ್ರಿಯಗಳು ಜ್ಞಾನೇಂದ್ರಿಯಗಳಲ್ಲಿ ಅಂತರ್ಭೂತಗಳೆಂದು ತಿಳಿಯಬೇಕು.

ಏಕಾದಶತ್ವ ಆತ್ಮಾಸೌ ಮಹಾಭೂತೇಂದ್ರಿಯಾಣಿ ಚ ।
ಅಷ್ಟೌ ಪ್ರಕೃತಯಶ್ಚೈವ ಪುರುಷಶ್ಚ ನವೇತ್ಯಥ ॥ ೨೪

ಇತಿ ನಾನಾಪ್ರಸಂಖ್ಯಾನಂ ತತ್ತ್ವಾನಾಮೃಷಿಭಿಃ ಕೃತಮ್ ।
ಸರ್ವಂ ನ್ಯಾಯ್ಯಂ ಯುಕ್ತಿಮತ್ತ್ವಾದ್ ವಿದುಷಾಂ ಕಿಮಶೋಭನಮ್ ॥೨೫

ಉದ್ಧವ ಉವಾಚ—

ಪ್ರಕೃತಿಃ ಪುರುಷಶ್ಚೋಭೌ ಯದ್ಯಪ್ಯಾತ್ಮವಿಲಕ್ಷಣೌ ।
ಅನ್ಯೋನ್ಯಾಪಾಶ್ರಯಾತ್ ಕೃಷ್ಣ ದೃಶ್ಯತೇ ನ ಭಿದಾ ತಯೋಃ ॥ ೨೬

ಪ್ರಕೃತೌ ಲಕ್ಷ್ಯತೇ ಹ್ಯಾತ್ಮಾ ಪ್ರಕೃತಿಶ್ಚ ತಥಾಽಽತ್ಮನಿ ।
ಏವಂ ಮೇ ಪುಂಡರೀಕಾಕ್ಷ ಮಹಾಂತಂ ಸಂಶಯಂ ಹೃದಿ ।
ಛೇತ್ತುಮರ್ಹಸಿ ಸರ್ವಜ್ಞ ವಚೋಭಿರ್ನಯನೈಪುಣ್ಯೈಃ ॥ ೨೭

---

ಅಹಂಕಾರ, ಪಂಚತನ್ಮಾತ್ರೆಗಳು ಎಂಬ ಒಟ್ಟು ಅಷ್ಟ ಪ್ರಕೃತಿಗಳು ಮತ್ತು ಆತ್ಮ—ಎಂದು ಒಂಬತ್ತು (೨೩–೨೪). ಉದ್ಧವ, ಈ ಪ್ರಕಾರವಾಗಿ (ಪ್ರಕೃತಿಪುರುಷರಿಗೆ ಭೇದವನ್ನು ತೋರಿಸುವ ಮುಖ್ಯೋದ್ದೇಶದಿಂದ) ಋಷಿಗಳು ನಾನಾ ಸಂಖ್ಯೆಯಲ್ಲಿ ತತ್ತ್ವಗಳನ್ನು ಪರಿಗಣನೆ ಮಾಡಿದ್ದಾರೆ. ಎಲ್ಲದಕ್ಕೂ ಯುಕ್ತಿಗಳಿರುವುದರಿಂದ ಸರ್ವವೂ ನ್ಯಾಯವೇ. ವಿದ್ವಾಂಸರ ಯಾವ ಕೃತ್ಯವು ಶೋಭಿಸದೆ ಇದ್ದೀತು!" ಎಂದನು (೨೫). ಆಗ ಉದ್ಧವನು "ಶ್ರೀಕೃಷ್ಣ, ಪ್ರಕೃತಿ-ಪುರುಷ ಎಂಬೆರಡು ತತ್ತ್ವಗಳು ತಮ್ಮ [1]ಸ್ವರೂಪದಿಂದಲೇ ವಿಲಕ್ಷಣವಾಗಿವೆ. ಆದರೂ ಒಂದನ್ನೊಂದು ಬಿಟ್ಟು ಅವು ತೋರದೆ ಇರುವುದರಿಂದ ಅವೆರಡರಲ್ಲಿ ಭೇದವೇ ಗೊತ್ತಾಗುವುದಿಲ್ಲ. ಪ್ರಕೃತಿಕಾರ್ಯವಾದ ದೇಹದಲ್ಲಿಯೇ ಆತ್ಮನು ಗೋಚರಿಸುತ್ತಾನೆ. ಆತ್ಮನಿದ್ದರೆ ಮಾತ್ರ ಪ್ರಕೃತಿಯು ಗೋಚರಿಸುತ್ತದೆ. ಅಲ್ಲದೆ 'ನಾನು' ಎಂದು ದೇಹದೊಡನೆ ಆತ್ಮನಿಗೆ ಅಭೇದವೇ ತೋರುವುದರಿಂದಲೂ ಪ್ರಕೃತಿ ಪುರುಷರಿಗಿರುವ ಭೇದವೇನೆಂದು ತಿಳಿಯುವುದಿಲ್ಲ. (೨೬). ಓ ಪುಂಡರೀಕಾಕ್ಷ, ನನ್ನ ಹೃದಯದಲ್ಲಿ ಇದೊಂದು ದೊಡ್ಡ ಸಂಶಯ ಹುಟ್ಟಿಕೊಂಡಿದೆ. ಹೇ ಸರ್ವಜ್ಞ, ಯುಕ್ತಿಯುಕ್ತವಾದ ನಿಪುಣ ವಚನಗಳಿಂದ ಈ ಸಂಶಯವನ್ನು ನೀನೇ ಕತ್ತರಿಸಿ ಹಾಕಬೇಕು. (ನಮ್ಮಂತಹ)

---

1. ಆತ್ಮನ ಸ್ವಭಾವ ಚೈತನ್ಯ, ಪ್ರಕೃತಿಯ ಸ್ವಭಾವ ಜಡತ್ವ.

ತ್ವತ್ತೋ ಜ್ಞಾನಂ ಹಿ ಜೀವಾನಾಂ ಪ್ರದೋಷಸ್ತೇಽತ್ರ ಶಕ್ತಿತಃ ।
ತ್ವಮೇವ ಹ್ಯಾತ್ಮಮಾಯಾಯಾ ಗತಿಂ ವೇತ್ಥ ನ ಚಾಪರಃ ॥ ೨೮

ಶ್ರೀಭಗವಾನುವಾಚ —
ಪ್ರಕೃತಿಃ ಪುರುಷಶ್ಚೇತಿ ವಿಕಲ್ಪಃ ಪುರುಷರ್ಷಭ ।
ಏಷ ವೈಕಾರಿಕಃ ಸರ್ಗೋ ಗುಣವ್ಯತಿಕರಾತ್ಮಕಃ ॥ ೨೯

ಮಮಾಂಗ ಮಾಯಾ ಗುಣಮಯ್ಯನೇಕಧಾ
ವಿಕಲ್ಪಬುದ್ಧೀಶ್ಚ ಗುಣೈರ್ವಿಧತ್ತೇ ।
ವೈಕಾರಿಕಸ್ತ್ರಿವಿಧೋಽಧ್ಯಾತ್ಮಮೇಕ-
ಮಥಾಧಿದೈವಮಧಿಭೂತಮನ್ಯತ್ ॥ ೩೦

ದೃಗ್ ರೂಪಮಾರ್ಕಂ ವಪುರತ್ರ ರಂಧ್ರೇ
ಪರಸ್ಪರಂ ಸಿಧ್ಯತಿ ಯಃ ಸ್ವತಃ ಖೇ ।
ಆತ್ಮಾ ಯದೇಷಾಮಪರೋ ಯ ಆದ್ಯಃ
ಸ್ವಯಾನುಭೂತ್ಯಾಖಿಲಸಿದ್ಧಸಿದ್ಧಿಃ ।
ಏವಂ ತ್ವಗಾದಿ ಶ್ರವಣಾದಿ ಚಕ್ಷು-
ರ್ಜಿಹ್ವಾದಿ ನಾಸಾದಿ ಚ ಚಿತ್ತಯುಕ್ತಮ್ ॥ ೩೧

---

ಜೀವರಿಗೆ ಜ್ಞಾನೋದಯವಾಗಲಿ ಜ್ಞಾನಭ್ರಂಶವಾಗಲಿ ನಿನ್ನ ಮಾಯಾಶಕ್ತಿಯಿಂದಲೇ ಆಗುತ್ತದೆ. ನಿನ್ನ ಮಾಯೆಯ ಪ್ರಭಾವ ಏನೆಂಬುದು ನಿನಗೇ ಗೊತ್ತು, ಇನ್ನೊಬ್ಬನಿಗೆ ತಿಳಿಯದು" ಎಂದನು (೨೭–೨೮). ಭಗವಂತನಿಂತೆಂದನು : "ಪುರುಷಶ್ರೇಷ್ಠ - ಉದ್ಧವ, ಪ್ರಕೃತಿ - ಪುರುಷರಿಗೆ ಅತ್ಯಂತ ಭೇದವೇ ಇದೆ. ಸೃಷ್ಟವಾದ ಈ ದೇಹಾದಿಸಂಘಾತವು ವಿಕೃತಿರೂಪವಾದದ್ದು. ಏಕೆಂದರೆ, ಇದು ಗುಣತ್ರಯದ ಸಂಕ್ಷೋಭೆಯಿಂದ ಹುಟ್ಟಿದೆ. ಎಲೋ ಉದ್ಧವ, ನನ್ನ ಗುಣತ್ರಯಾತ್ಮಕವಾದ ಮಾಯೆಯು ತನ್ನ ಗುಣಗಳ ಬಲದಿಂದ ವಸ್ತುವಿನಲ್ಲಿ ಭೇದವನ್ನೂ ಭೇದಬುದ್ಧಿಗಳನ್ನೂ ನಾನಾ ವಿಧವಾಗಿ ಉಂಟುಮಾಡುತ್ತದೆ. ವಿಕೃತಿರೂಪವಾದ ಈ ಸೃಷ್ಟಿಯು ಮುಖ್ಯವಾಗಿ ಮೂರುವಿಧ—ಅಧ್ಯಾತ್ಮ, ಅಧಿದೈವ, ಅಧಿಭೂತ ಎಂಬುದಾಗಿ (೨೯–೩೦). (ಈ ಮೂರು ರೂಪಗಳಲ್ಲಿ ಚಕ್ಷುರಿಂದ್ರಿಯದ ವಿಷಯವನ್ನು ತೆಗೆದುಕೊಂಡರೆ) ದೃಕ್ ಅಧ್ಯಾತ್ಮ, ರೂಪವು ಅಧಿಭೂತ, ನೇತ್ರಗೋಳಕದಲ್ಲಿ ಪ್ರವಿಷ್ಟವಾದ ಸೂರ್ಯಾಂಶವು ಅಧಿದೈವ.

**ಯೋಽಸೌ ಗುಣಕ್ಷೋಭಕೃತೋ ವಿಕಾರಃ**
**ಪ್ರಧಾನಮೂಲಾನ್ಮಹತಃ ಪ್ರಸೂತಃ ।**
**ಅಹಂ ತ್ರಿವೃನ್ಮೋಹವಿಕಲ್ಪಹೇತು-**
**ರ್ವೈಕಾರಿಕಸ್ತಾಮಸ ಐಂದ್ರಿಯಶ್ಚ ॥** ೩೨

ಈ ಮೂರು ಪರಸ್ಪರ ಸಾಪೇಕ್ಷವಾಗಿ ಸಿದ್ಧವಾಗುತ್ತವೆ. (ಹೇಗೆಂದರೆ—ಚಕ್ಷುಸ್ಸಿನಿಂದ ರೂಪ ತಿಳಿಯುತ್ತದೆ. ರೂಪವು ತಿಳಿಯಬೇಕಾದರೆ ಚಕ್ಷುಸ್ಸು ಇರಲೇಬೇಕು. ಈ ಇಂದ್ರಿಯ ಪ್ರವೃತ್ತಿಗೆ ಅಧಿಷ್ಠಾತೃದೇವತೆ ಇರಲೇಬೇಕು. ಆ ದೇವತೆಯೇ ನೇತ್ರರಂಧ್ರಪ್ರವಿಷ್ಟನಾದ ಸೂರ್ಯ.) ಆದರೆ ಆಕಾಶದಲ್ಲಿರುವ ಮಂಡಲಾತ್ಮಕ ಸೂರ್ಯನು ಸ್ವತಃಸಿದ್ಧನೇ. ಈ ತ್ರಿರೂಪಗಳಿಗೆ ಆದ್ಯಕಾರಣನಾದ ಆತ್ಮನು ಏಕನೂ ಭೇದರಹಿತನೂ ಆಗಿದ್ದಾನೆ ಆತನು ಸ್ವಾನುಭೂತಿಗೆ ಗೋಚರನಾಗಿ ಸಿದ್ಧನೂ ಅನ್ಯೋನ್ಯ ಪ್ರಕಾಶಸಿದ್ಧವಸ್ತುಗಳಿಗೂ ಸಹ ಸ್ವತಃ ಪ್ರಕಾಶಕನೂ ಆಗಿದ್ದಾನೆ. ಈ ಪ್ರಕಾರ ಮೂರು ರೂಪಗಳನ್ನು ಎಲ್ಲ ಇಂದ್ರಿಯಗಳಿಗೂ ಅನ್ವಯಿಸಿ ತ್ವಗಾದಿ, ಶ್ರವಣಾದಿ, ಚಕ್ಷುರಾದಿ, ಜಿಹ್ವಾದಿ, ನಾಸಾದಿಗಳೆಂದೂ ಚಿತ್ತಾದ್ಯಂತಃ ಕರಣಗಳಿಗೆ ಅನ್ವಯಿಸಿ ಚಿತ್ತಾದಿ, ಮನಆದಿ, ಬುದ್ಧ್ಯಾದಿ, ಅಹಂಕಾರಾದಿ—[1]ಎಂದೂ ತಿಳಿಯಬೇಕು (೩೧). ಗುಣಗಳಲ್ಲಿ ಕ್ಷೋಭೆಯನ್ನುಂಟುಮಾಡುವ ಈಶ್ವರನ ಅಥವಾ ಕಾಲದ ನಿಮಿತ್ತದಿಂದ ಅಹಂಕಾರವು ಹುಟ್ಟಿದೆ. ಇದು ಪ್ರಧಾನವನ್ನು ಉಪಾದಾನವನ್ನಾಗಿಟ್ಟುಕೊಂಡು ಹುಟ್ಟಿರುವ ಮಹತ್ತತ್ತ್ವದಿಂದ ಉದ್ಭವಿಸಿದ ವಿಕಾರವಾಗಿರುತ್ತದೆ. ಈ ಅಹಂಕಾರವು ಮೋಹಮಯವಾದ ತ್ರಿವಿಧವಿಕಲ್ಪಕ್ಕೆ ಎಂದರೆ—ಭೇದಜ್ಞಾನಕ್ಕೆ ಹೇತುವಾಗಿದೆ. ಈ ವಿಕಲ್ಪವು ವೈಕಾರಿಕ, ತಾಮಸ, ಐಂದ್ರಿಯ—[2]ಎಂದು ತ್ರಿವಿಧವಾಗಿದೆ (೩೨). ಈ

1. ಅನುಬಂಧವನ್ನು ನೋಡಿ—೩.

2. ಈ ಶ್ಲೋಕದಲ್ಲಿ ಅಹಂ ಎಂದರೆ ಅಹಂಕಾರವೆಂದರ್ಥ. 'ಗುಣಕ್ಷೋಭಂ ಕರೋತೀತಿ ಗುಣಕ್ಷೋಭಕೃತ್, ತಸ್ಮಾತ್' ಎಂದು ಪಂಚಮ್ಯಂತವಾಗಿಟ್ಟುಕೊಂಡು ಶ್ರೀಧರೀಯದಲ್ಲಿ ಅರ್ಥವನ್ನು ಹೇಳಿದೆ. 'ಗುಣಕ್ಷೋಭದಿಂದ ಕೃತವಾದದ್ದು' ಎಂದು ಪ್ರಥಮಾಂತವಾಗಿ ಹೇಳಿದರೂ ಬಾಧಕವಿಲ್ಲ. ಹಿಂದಿನ ಶ್ಲೋಕದಲ್ಲಿ ಹೇಳಿದ ತ್ರಿಪುಟೀ ಜ್ಞಾನವೇ ತ್ರಿವಿಧವಿಕಲ್ಪ. ಈ ಶ್ಲೋಕದಲ್ಲಿ ಅಧ್ಯಾತ್ಮ=ವೈಕಾರಿಕ, ಅಧಿಭೂತ=ತಾಮಸ, ಅಧಿದೈವ=ಐಂದ್ರಿಯ.

ಆತ್ಮಾಽಪರಿಜ್ಞಾನಮಯೋ ವಿವಾದೋ
ಹ್ಯಸ್ತೀತಿ ನಾಸ್ತೀತಿ ಭಿದಾರ್ಥನಿಷ್ಠಃ ।
ವ್ಯರ್ಥೋಽಪಿ ನೈವೋಪರಮೇತ ಪುಂಸಾಂ
ಮತ್ತಃ ಪರಾವೃತ್ತಧಿಯಾಂ ಸ್ವಲೋಕಾತ್ ॥ ೩೩

ಉದ್ಧವ ಉವಾಚ—

ತ್ವತ್ತಃ ಪರಾವೃತ್ತಧಿಯಃ ಸ್ವಕೃತೈಃ ಕರ್ಮಭಿಃ ಪ್ರಭೋ ।
ಉಚ್ಚಾವಚಾನ್ ಯಥಾ ದೇಹಾನ್ ಗೃಹ್ಣಂತಿ ವಿಸೃಜಂತಿ ಚ ॥ ೩೪

ತನ್ಮಮಾಖ್ಯಾಹಿ ಗೋವಿಂದ ದುರ್ವಿಭಾವ್ಯಮನಾತ್ಮಭಿಃ ।
ನ ಹ್ಯೇತತ್ ಪ್ರಾಯಶೋ ಲೋಕೇ ವಿದ್ವಾಂಸಃ ಸಂತಿ ವಂಚಿತಾಃ ॥ ೩೫

ಶ್ರೀಭಗವಾನುವಾಚ—

ಮನಃ ಕರ್ಮಮಯಂ ನೄಣಾಮಿಂದ್ರಿಯೈಃ ಪಂಚಭಿರ್ಯುತಮ್ ।
ಲೋಕಾಲ್ಲೋಕಂ ಪ್ರಯಾತ್ಯನ್ಯ ಆತ್ಮಾ ತದನುವರ್ತತೇ ॥ ೩೬

---

ಮೋಹಮಯವಾದ ವಿಕಲ್ಪಜ್ಞಾನಕ್ಕೆ ಗೋಚರವಾಗತಕ್ಕ ದ್ವೈತವು ಇದೆಯೆಂದೂ ಇಲ್ಲವೆಂದೂ ವಸ್ತುನಿಷ್ಠವಾದ ಯಾವ ವಿವಾದ ಉಂಟೋ ಅದು ಆತ್ಮನ ಅಜ್ಞಾನದಿಂದ ಉಂಟಾದದ್ದು. ಜನರಿಗೆ ತಮ್ಮ ಲೋಕವೇ ಆಗಿರುವ—ಎಂದರೆ—ಸ್ವಸ್ವರೂಪನೇ ಆಗಿರುವ ನನ್ನನ್ನು ಬಿಟ್ಟು ಯಾರ ಮನಸ್ಸು ಅನ್ಯತ್ರ ಧಾವಿಸುವುದೋ ಅವರಿಗೆ ಈ ವಿವಾದವು ಅಥವಾ ವಿಕಲ್ಪಜ್ಞಾನವು ಹೋಗುವುದೇ ಇಲ್ಲ" ಎಂದನು (೩೩). ಆಗ ಉದ್ಧವನು "ಹೇ ಸ್ವಾಮಿ, ಯಾರು ನಿನ್ನನ್ನು ಧ್ಯಾನಿಸದೆ ಪರಾವೃತ್ತರಾಗಿರುತ್ತಾರೋ ಅವರು ತಾವು ಮಾಡಿದ ಕರ್ಮಗಳಿಗೆ ಅನುಗುಣವಾಗಿ ನಾನಾ ಬಗೆಯ ದೇಹಗಳನ್ನು ಗ್ರಹಿಸುತ್ತಾರೆ, ಹಾಗೆಯೇ ತ್ಯಜಿಸುತ್ತಾರೆ—ಎಂಬುದುಂಟಷ್ಟೆ (೩೪). ಆತ್ಮಜ್ಞಾನವಿಲ್ಲದವರಿಗೆ ಈ ವಿಚಾರವು ದುರವಗಾಹವಾದದ್ದು. ಲೋಕದಲ್ಲಿ ಪಂಡಿತರಿಗೂ ಇದು ಪ್ರಾಯಶಃ ಗೊತ್ತಿಲ್ಲ. ಅವರೂ ಮಾಯೆಯಿಂದ ವಂಚಿತರೇ. ಆದ್ದರಿಂದ, ಗೋವಿಂದ, ಈ ವಿಷಯವನ್ನು ನನಗೆ ತಿಳಿಸಿಕೊಡು" ಎಂದನು (೩೫). ಆಗ ಭಗವಂತನು ಹೀಗೆ ಹೇಳಿದನು: "ಕರ್ಮಸಂಸ್ಕಾರವನ್ನೊಳಗೊಂಡ ಮನುಷ್ಯರ ಮನಸ್ಸೆಂಬುದೇನುಂಟು, ಅದು ಪಂಚೇಂದ್ರಿಯ [1]ಸಹಿತವಾಗಿ ಒಂದು ದೇಹದಿಂದ ಇನ್ನೊಂದು ದೇಹಕ್ಕೆ ಹೋಗಿ

1. ಪ್ರಾಣಾದಿಗಳಿಗೆ ಇದು ಉಪಲಕ್ಷಣ.

*

ಧ್ಯಾಯನ್ ಮನೋಽನು ವಿಷಯಾನ್ ದೃಷ್ಟಾನ್ ವಾನುಶ್ರುತಾನಥ ।
ಉದ್ಯತ್ ಸೀದತ್ ಕರ್ಮತಂತ್ರಂ ಸ್ಮೃತಿಸ್ತದನುಶಾಮ್ಯತಿ ॥ ೩೭

ವಿಷಯಾಭಿನಿವೇಶೇನ ನಾತ್ಮಾನಂ ಯತ್ ಸ್ಮರೇತ್ ಪುನಃ ।
ಜಂತೋರ್ವೈ ಕಸ್ಯಚಿದ್ಧೇತೋರ್ಮೃತ್ಯುರತ್ಯಂತವಿಸ್ಮೃತಿಃ ॥ ೩೮

ಜನ್ಮ ತ್ವಾತ್ಮತಯಾ ಪುಂಸಃ ಸರ್ವಭಾವೇನ ಭೂರಿದ ।
ವಿಷಯಸ್ವೀಕೃತಿಂ ಪ್ರಾಹುರ್ಯಥಾ ಸ್ವಪ್ನಮನೋರಥಃ ॥ ೩೯

ಸ್ವಪ್ನಂ ಮನೋರಥಂ ಚೇತ್ಥಂ ಪ್ರಾಕ್ತನಂ ನ ಸ್ಮರತ್ಯಸೌ ।
ತತ್ರ ಪೂರ್ವಮಿವಾತ್ಮಾನಮಪೂರ್ವಂ ಚಾನುಪಶ್ಯತಿ ॥ ೪೦

ಇಂದ್ರಿಯಾಯನಸೃಷ್ಟ್ಯೇದಂ ತ್ರೈವಿಧ್ಯಂ ಭಾತಿ ವಸ್ತುನಿ ।
ಬಹಿರಂತರ್ಭಿದಾಹೇತುರ್ಜನೋಽಸಜ್ಜನಕೃದ್ ಯಥಾ ॥ ೪೧

---

ಸೇರುತ್ತದೆ. ಆಗ ಮನಸ್ಸಿಗಿಂತ ಭಿನ್ನನಾದ ಆತ್ಮನು ಅಹಂಕಾರರೂಪದಿಂದ ಆ ಮನಸ್ಸನ್ನು ಹಿಂಬಾಲಿಸುವನು (೩೬). ಮನಸ್ಸಾದರೋ ಕರ್ಮತಂತ್ರ ವಾದದ್ದು. ಅದು ಕರ್ಮಬಲದಿಂದ ಉಪಸ್ಥಿತವಾಗಿರುವ ದೃಷ್ಟವಾದ ಅಥವಾ ಶ್ರುತವಾದ ಹಿಂದಿನ ವಿಷಯಗಳನ್ನು ಸ್ಮರಿಸಿಕೊಂಡು ಚಿಂತಿಸುತ್ತ ಇರುತ್ತದೆ. ಅನಂತರ ಎಲ್ಲ ವಿಷಯಗಳಿಂದಲೂ ಹಿಂದಕ್ಕೆ ಸರಿದು ಸ್ಮೃತಿಯನ್ನು ಕಳೆದು ಕೊಳ್ಳುತ್ತದೆ. ಕರ್ಮಾನುಗುಣವಾಗಿ ಪ್ರಾಪ್ತವಾದ ಯಾವ ನೂತನ ದೇಹ ಉಂಟೋ ಅದರಲ್ಲಿ ಮನಸ್ಸು ನಾನೆಂಬ ಅಭಿನಿವೇಶವನ್ನು ತಾಳುತ್ತದೆ. ತನ್ನ ಹಿಂದಿನ ದೇಹವನ್ನು ಅದು ಸ್ಮರಿಸಿಕೊಳ್ಳುವುದೇ ಇಲ್ಲ. ಸ್ಮರಿಸಿಕೊಳ್ಳದೇ ಇರುವುದಕ್ಕೆ ಕಾರಣ ಇನ್ನೊಂದು ದೇಹದಲ್ಲುಂಟಾಗುವ ಅಹಂಬುದ್ಧಿ. ಹೀಗಾಗಿ ಪೂರ್ವದೇಹದ ಅತ್ಯಂತ ವಿಸ್ಮೃತಿಯೇ ಮರಣವೆನಿಸುತ್ತದೆ (ಮನಸ್ಸಿಗೆ ನಾಶವಿಲ್ಲ) (೩೭–೩೮). ಇನ್ನೊಂದು ದೇಹವನ್ನು 'ಇದೇ ನಾನು' ಎಂದು ಸರ್ವಾತ್ಮಭಾವದಿಂದ ಸ್ವೀಕರಿ ಸುವುದೇನುಂಟೋ ಅದೇ ಪುನರ್ಜನ್ಮವೆಂದು ಹೇಳುತ್ತಾರೆ. ಈ ಹುಟ್ಟು ಸಾವುಗಳು ಸ್ವಪ್ನ ಮತ್ತು ಮನೋರಥಗಳು ಇದ್ದ ಹಾಗೆ. ಸ್ವಪ್ನದಲ್ಲಾಗಲಿ—ಮನೋರಥವನ್ನು ಕಲ್ಪಿಸಿಕೊಂಡ ಸಮಯದಲ್ಲಾಗಲಿ, ಮನುಷ್ಯನು ಮೊದಲಿನಂತೆಯೇ ಇದ್ದರೂ ತಾನು ಹೊಸಬನೆಂದು ಭಾವಿಸುತ್ತಾನಲ್ಲವೆ? (ಹಾಗೆ ಅನ್ಯ ದೇಹಾಭಿಮಾನವೇ ಹುಟ್ಟುಸಾವುಗಳು) (೩೯–೪೦). ಇಂದ್ರಿಯಗಳಿಗೆ ಪರಾಯಣವಾದ ಮನಸ್ಸಿನ

ನಿತ್ಯದಾ ಹ್ಯಂಗ ಭೂತಾನಿ ಭವಂತಿ ನ ಭವಂತಿ ಚ ।
ಕಾಲೇನಾಲಕ್ಷ್ಯವೇಗೇನ ಸೂಕ್ಷ್ಮತ್ವಾತ್ತನ್ನ ದೃಶ್ಯತೇ ॥ ೪೨

ಯಥಾರ್ಚಿಷಾಂ ಸ್ರೋತಸಾಂ ಚ ಫಲಾನಾಂ ವಾ ವನಸ್ಪತೇಃ ।
ತಥೈವ ಸರ್ವಭೂತಾನಾಂ ವಯೋಽವಸ್ಥಾದಯಃ ಕೃತಾಃ ॥ ೪೩

ಸೋಽಯಂ ದೀಪೋಽರ್ಚಿಷಾಂ ಯದ್ವತ್ಸ್ರೋತಸಾಂ ತದಿದಂ ಜಲಮ್ ।
ಸೋಽಯಂ ಪುಮಾನಿತಿ ನೃಣಾಂ ಮೃಷಾ ಗೀರ್ಧೀರ್ಮೃಷಾ-
ಯುಷಾಮ್ ॥ ೪೪

ಮಾ ಸ್ವಸ್ಯ ಕರ್ಮಬೀಜೇನ ಜಾಯತೇ ಸೋಽಪ್ಯಯಂ ಪುಮಾನ್ ।
ಮ್ರಿಯತೇ ವಾಮರೋ ಭ್ರಾಂತ್ಯಾ ಯಥಾಗ್ನಿರ್ದಾರುಸಂಯುತಃ ॥ ೪೫

---

ಸೃಷ್ಟಿಯಿಂದಲೇ ಏಕವಾದ ಆತ್ಮ ವಸ್ತುವಿನಲ್ಲಿ ಉತ್ತಮ, ಮಧ್ಯಮ, ನೀಚ— ಎಂಬ ವಿಕಲ್ಪತ್ರಯವು ಕಂಡುಬರುತ್ತದೆ. ಈ ಬಾಹ್ಯಾಭ್ಯಂತರಭೇದಗಳಿಗೆ ಮನಸ್ಸಿನಿಂದ ಕೂಡಿದ ಜೀವನು ನಿಮಿತ್ತನಾಗುತ್ತಾನೆ. ಈ ಜೀವನು ಇಲ್ಲದ ವಸ್ತುಗಳನ್ನು ಸ್ವಪ್ನದಲ್ಲಿ ಹೇಗೆ ಕಲ್ಪಿಸಿಕೊಳ್ಳುತ್ತಾನೋ ಹಾಗೆ (ಜಾಗ್ರತ್ತಿನಲ್ಲಿಯೂ ಸಹ) ಇಲ್ಲದ ಭೇದಗಳನ್ನು ಕಲ್ಪಿಸಿಕೊಂಡಿರುತ್ತಾನೆ (೪೧). ಎಲೋ ಉದ್ಧವ, ಶರೀರಗಳು ಪ್ರತಿಕ್ಷಣದಲ್ಲಿಯೂ ಹುಟ್ಟುತ್ತ ಸಾಯುತ್ತ ಇರುತ್ತವೆ! ಕಾಲವು ಅತಿ ಸೂಕ್ಷ್ಮವಾಗಿದ್ದು ಅದರ ವೇಗವು ತಿಳಿಯದೆ ಹೋಗುವುದರಿಂದ ಕಾಲಕ್ಕೆ ಸಿಕ್ಕಿದ ಈ ಹುಟ್ಟು ಸಾವುಗಳು ಗೊತ್ತಾಗುವುದಿಲ್ಲ. ಜ್ವಾಲೆಗಳಲ್ಲಿ ಆನಂತರ್ಯದಿಂದಲೂ ಪ್ರವಾಹಗಳಲ್ಲಿ ಗತಿಯಿಂದಲೂ ಮರದ ಹಣ್ಣುಗಳಲ್ಲಿ ರೂಪದಿಂದಲೂ ಅವುಗಳ ಅವಸ್ಥಾಭೇದಗಳು ಕಾಲಕೃತವಾಗಿ ನಡೆಯುತ್ತಿದ್ದರೂ ತಿಳಿಯುವುದಿಲ್ಲ. ಹಾಗೆಯೇ ಸಕಲ ಪ್ರಾಣಿಗಳ ವಯಸ್ಸು, ಅವಸ್ಥಾಭೇದಗಳು ಕಾಲಕೃತವಾಗಿ ಪ್ರತಿಕ್ಷಣದಲ್ಲಿ ಬದಲಾಗುತ್ತಿದ್ದರೂ ತಿಳಿಯುವುದಿಲ್ಲ (೪೨–೪೩). ಹಲವಾರು ಜ್ವಾಲೆಗಳು ಗತಿಸಿಹೋದರೂ ಅದೇ ದೀಪ ಇದು ಎಂದೂ, ಹಲವಾರು ಪ್ರವಾಹಗಳು ಹರಿದು ಹೋಗಿದ್ದರೂ ಅದೇ ಜಲ ಇದು ಎಂದೂ (ಬಾಲ್ಯವೇ ಮೊದಲಾದ ಅವಸ್ಥೆಗಳಿಂದ) ಹಲವಾರು ದೇಹಗಳು ಬದಲಾಯಿಸಿದ್ದರೂ ಅವನೇ ಇವನು ಎಂದೂ ಹೇಳುವುದು ಮತ್ತು ತಿಳಿಯುವುದು ಸುಳ್ಳೇ ಸರಿ. ವ್ಯರ್ಥವಾಗಿ ಆಯುಸ್ಸನ್ನು ಕಳೆಯುವ ಅವಿವೇಕಿಗಳಿಗೆ ಮಾತ್ರ ಹಾಗೆ ತೋರುತ್ತದೆ! (೪೪). ಅಜ್ಞನಾದವನು ತನ್ನ

**ನಿಷೇಕಗರ್ಭಜನ್ಮಾನಿ ಬಾಲ್ಯಕೌಮಾರಯೌವನಮ್ ।**
**ವಯೋಮಧ್ಯಂ ಜರಾ ಮೃತ್ಯುರಿತ್ಯವಸ್ಥಾಸ್ತನೋರ್ನವ ॥** ೪೬

**ಏತಾ ಮನೋರಥಮಯೀರ್ಹಾನ್ಯಸ್ಯೋಚ್ಚಾವಚಾಸ್ತನೂಃ ।**
**ಗುಣಸಂಗಾದುಪಾದತ್ತೇ ಕ್ವಚಿತ್ ಕಶ್ಚಿಜ್ಜಹಾತಿ ಚ ॥** ೪೭

**ಆತ್ಮನಃ ಪಿತೃಪುತ್ರಾಭ್ಯಾಮನುಮೇಯೌ ಭವಾಪ್ಯಯೌ ।**
**ನ ಭವಾಪ್ಯಯವಸ್ತೂನಾಮಭಿಜ್ಞೋ ದ್ವಯಲಕ್ಷಣಃ ॥** ೪೮

---

ಕರ್ಮಬೀಜದಿಂದ ಹುಟ್ಟುತ್ತಾನೆ-ಸಾಯುತ್ತಾನೆ ಎಂದು ಯಾರೂ ತಿಳಿಯಬಾರದು. (ಅಜ್ಞಾನಿಗೂ ಹುಟ್ಟು ಸಾವುಗಳಿಲ್ಲ) ಆತನು ಸ್ವತಃ ಅಜನಾಗಿದ್ದರೂ ಭ್ರಾಂತಿಯಿಂದ ಹುಟ್ಟುತ್ತೇನೆಂದೂ ಅಮರನಾಗಿದ್ದರೂ ಭ್ರಾಂತಿಯಿಂದ ಸಾಯುತ್ತೇನೆಂದೂ ಭಾವಿಸುತ್ತಾನೆ. ಸರ್ವದಾ ಅವಿನಾಶಿಯಾದ ಅಗ್ನಿಯು, ಮರದಲ್ಲಿ ಹತ್ತಿಕೊಂಡಾಗ ಹುಟ್ಟಿದಂತೆಯೂ ಆರಿಹೋದಾಗ ನಾಶವಾದಂತೆಯೂ ಕಾಣುತ್ತದೆಯಲ್ಲವೆ? ಹಾಗೆಯೇ ಇದು (೪೫). ಗರ್ಭಪ್ರವೇಶ, ಗರ್ಭದಲ್ಲಿ ವೃದ್ಧಿ, ಜನನ, [1]ಬಾಲ್ಯ, ಕೌಮಾರ, ಯೌವನ, ಮಧ್ಯಮಾವಸ್ಥೆ, ಮುಪ್ಪು, ಮರಣ—ಎಂಬುದಾಗಿ ಶರೀರಕ್ಕೆ ಒಂಬತ್ತು ಅವಸ್ಥೆಗಳುಂಟು. ಹೀಗೆ ಮನಃಕಲ್ಪಿತವಾದ ನಾನಾ ಬಗೆಯ ದೇಹದ ಅವಸ್ಥೆಗಳನ್ನು ಗುಣಸಂಗದಿಂದ—ಎಂದರೆ—ಪ್ರಕೃತಿ ಪುರುಷ ವಿವೇಕವಿಲ್ಲದ್ದರಿಂದ ಮನುಷ್ಯನು ತನ್ನವೇ ಎಂದು ಸ್ವೀಕರಿಸುತ್ತಾನೆ! ಪರಮೇಶ್ವರಾನುಗ್ರಹದಿಂದ ಯಾವನೋ ಒಬ್ಬನು 'ನಾನು ಈ ಅವಸ್ಥೆಗಳ ದ್ರಷ್ಟಾರನು. ನನಗೆ ಇವು ಇಲ್ಲ' ಎಂದು ಅವನ್ನು ವಿವೇಕಜ್ಞಾನದಿಂದ ತ್ಯಜಿಸಿಬಿಡುತ್ತಾನೆ (೪೬–೪೭). ತಂದೆಗೆ ಊರ್ಧ್ವಕ್ರಿಯೆಯನ್ನು ಮಾಡುವಾಗ ಅವನ ದೇಹದಂತೆ ತನ್ನ ದೇಹಕ್ಕೂ ಮರಣವಿದೆಯೆಂದೂ ಮಗನಿಗೆ ಜಾತಕರ್ಮವನ್ನು ಮಾಡುವಾಗ ತನ್ನ ದೇಹಕ್ಕೂ ಜನ್ಮವಿದೆಯೆಂದೂ ಊಹಿಸಿ ತಿಳಿದುಕೊಳ್ಳಬೇಕು! ಹೀಗೆ ಹುಟ್ಟುಸಾವುಗಳುಳ್ಳ ದೇಹಗಳಿಗೆ ಯಾವನು ತಟಸ್ಥನಾಗಿ ದ್ರಷ್ಟಾರನಾಗುವನೋ ಅವನು ಈ ಹುಟ್ಟುಸಾವುಗಳೆರಡೂ ಇಲ್ಲದವನಾಗುವನು (೪೮).

---

1. ಬಾಲ್ಯ = ಹುಟ್ಟಿದ ಐದು ವರ್ಷಗಳವರೆಗೆ. ಕೌಮಾರ = ಹದಿನಾರು ವರ್ಷಪರ್ಯಂತ. ಯೌವನ = ಐವತ್ತು ವರ್ಷಪರ್ಯಂತ. ಮಧ್ಯಮಾವಸ್ಥೆ = ಅರುವತ್ತು ವರ್ಷಪರ್ಯಂತ. ಅರುವತ್ತು ವರ್ಷಗಳಮೇಲೆ ಮುಪ್ಪು.

ತರೋರ್ಬೀಜವಿಪಾಕಾಭ್ಯಾಂ ಯೋ ವಿದ್ವಾನ್ ಜನ್ಮಸಂಯಮೌ ।
ತರೋರ್ವಿಲಕ್ಷಣೋ ದ್ರಷ್ಟಾ ಏವಂ ದ್ರಷ್ಟಾ ತನೋಃ ಪೃಥಕ್ ॥ ೪೯

ಪ್ರಕೃತೇರೇವಮಾತ್ಮಾನಮವಿವಿಚ್ಯಾಬುಧಃ ಪುಮಾನ್ ।
ತತ್ತ್ವೇನ ಸ್ಪರ್ಶಸಮ್ಮೂಢಃ ಸಂಸಾರಂ ಪ್ರತಿಪದ್ಯತೇ ॥ ೫೦

ಸತ್ತ್ವಸಂಗಾದೃಷೀನ್ ದೇವಾನ್ ರಜಸಾಸುರಮಾನುಷಾನ್ ।
ತಮಸಾ ಭೂತತಿರ್ಯಕ್ತ್ವಂ ಭ್ರಾಮಿತೋ ಯಾತಿ ಕರ್ಮಭಿಃ ॥ ೫೧

ನೃತ್ಯತೋ ಗಾಯತಃ ಪಶ್ಯನ್ ಯಥೈವಾನುಕರೋತಿ ತಾನ್ ।
ಏವಂ ಬುದ್ಧಿಗುಣಾನ್ ಪಶ್ಯನ್ನನೀಹೋಽಪ್ಯನುಕಾರ್ಯತೇ ॥ ೫೨

ಯಥಾಂಭಸಾ ಪ್ರಚಲತಾ ತರವೋಽಪಿ ಚಲಾ ಇವ ।
ಚಕ್ಷುಷಾ ಭ್ರಾಮ್ಯಮಾಣೇನ ದೃಶ್ಯತೇ ಭ್ರಮತೀವ ಭೂಃ ॥ ೫೩

---

ಒಂದು ಮರವು ಹುಟ್ಟುವುದನ್ನೂ ಸಾಯುವುದನ್ನೂ ನೋಡುವುದರಿಂದ ಆ ತರುವಿಗೆ ಜನ್ಮವೂ ವಿನಾಶವೂ ಇದೆಯೆಂದು ಅರಿತುಕೊಂಡಿರುವ ದ್ರಷ್ಟಾರನು, ಹೇಗೆ ತರುವಿಗಿಂತ ಬೇರೆಯವನೋ ಹಾಗೆ ತನುವನ್ನು ಅರಿತುಕೊಂಡವನು ತನುವಿಗಿಂತ ಬೇರೆಯವನಾಗಿಯೇ ಉಳಿಯುತ್ತಾನೆ. ಅವನಿಗೆ ತನುವಿನ ಹುಟ್ಟು ಸಾವುಗಳು ಅಂಟುವುದಿಲ್ಲ (೪೯). ಈ ರೀತಿಯಲ್ಲಿ ಪ್ರಕೃತಿಗಿಂತ ಆತ್ಮನಾದ ತಾನು ಬೇರೆ ಎಂಬುದನ್ನು ವಿವೇಚನೆ ಮಾಡದಿರುವ ಅಜ್ಞಾನಿಯಾದ ಮಾನವನು ತತ್ತ್ವದೃಷ್ಟಿಯಿಂದ ಶಬ್ದಾದಿ ವಿಷಯಗಳಲ್ಲಿ ಸಂಮೂಢನಾಗಿ ಸಂಸಾರವನ್ನು ಅನುಭವಿಸುತ್ತ ಇರುವನು (೫೦). ಕರ್ಮಗಳ ಭ್ರಮಣೆಗೆ ಸಿಕ್ಕಿದ ಅಜ್ಞಾನಿಯು ಸತ್ತ್ವಗುಣದಿಂದ ಋಷಿ ದೇವ ಜನ್ಮಗಳನ್ನೂ ರಜೋಗುಣದಿಂದ ಅಸುರ ಮಾನವ ಜನ್ಮಗಳನ್ನೂ ತಮೋಗುಣದಿಂದ ಭೂತ ತಿರ್ಯಗ್ ಜನ್ಮಗಳನ್ನೂ ಪಡೆಯುವನು. ನರ್ತಿಸತಕ್ಕವರನ್ನೂ ಹಾಡತಕ್ಕವರನ್ನೂ ನೋಡುತ್ತಿರುವ ಮನುಷ್ಯನು ಅವರಂತೆಯೇ ತಾಳಗತಿಯನ್ನು ಅನುಕರಿಸುತ್ತ ಹೇಗೆ ಶೃಂಗಾರಾದಿರಸವನ್ನು ಮನಸ್ಸಿನಲ್ಲಿ ಭಾವಿಸಿಕೊಳ್ಳುತ್ತ ಇರುವನೋ ಹಾಗೆಯೇ ಬುದ್ಧಿನಿಷ್ಠವಾದ ಪ್ರಕೃತಿಗುಣಗಳನ್ನು ಕಾಣುವ ಪುರುಷನು ಕರ್ತೃವಲ್ಲದಿದ್ದರೂ ಅವನ್ನು ಅನುಕರಿಸುತ್ತಿರುವಂತೆ ಗುಣಗಳಿಂದ ಪ್ರೇರಿಸಲ್ಪಡುತ್ತಾನೆ (ದೃಶ್ಯಧರ್ಮವು ಉಪಾಧಿವಶದಿಂದ ದ್ರಷ್ಟೃವಿನಲ್ಲಿ ಇರುವಂತೆ ಕಾಣುತ್ತದೆ) (೫೧–೫೨). ನೀರು ಅಲ್ಲಾಡುತ್ತಿದ್ದರೆ ಅದರಲ್ಲಿ

ಯಥಾ ಮನೋರಥಧಿಯೋ ವಿಷಯಾನುಭವೋ ಮೃಷಾ ।
ಸ್ವಪ್ನದೃಷ್ಟಾಶ್ಚ ದಾಶಾರ್ಹ ತಥಾ ಸಂಸಾರ ಆತ್ಮನಃ ॥ ೫೮

ಅರ್ಥೇ ಹ್ಯವಿದ್ಯಮಾನೇऽಪಿ ಸಂಸೃತಿರ್ನ ನಿವರ್ತತೇ ।
ಧ್ಯಾಯತೋ ವಿಷಯಾನಸ್ಯ ಸ್ವಪ್ನೇऽನರ್ಥಾಗಮೋ ಯಥಾ ॥ ೫೫

ತಸ್ಮಾದುದ್ಧವ ಮಾ ಭುಂಕ್ಷ್ವ ವಿಷಯಾನಸದಿಂದ್ರಿಯೈಃ ।
ಆತ್ಮಾಗ್ರಹಣನಿರ್ಭಾತಂ ಪಶ್ಯ ವೈಕಲ್ಪಿಕಂ ಭ್ರಮಮ್ ॥ ೫೬

ಕ್ಷಿಪ್ತೋऽವಮಾನಿತೋऽಸದ್ಭಿಃ ಪ್ರಲಬ್ಧೋऽಸೂಯಿತೋऽಥವಾ ।
ತಾಡಿತಃ ಸನ್ನಿಬದ್ಧೋ ವಾ ವೃತ್ತ್ಯಾ ವಾ ಪರಿಹಾಪಿತಃ ॥ ೫೭

---

ಪ್ರತಿಬಿಂಬಿಸಿದ ತೀರವೃಕ್ಷಗಳೂ ಅಲ್ಲಾಡುತ್ತಿರುವಂತೆ ಕಾಣುತ್ತವೆ. (ಪಿತ್ತದೋಷದಿಂದ) ಕಣ್ಣು ತಿರುಗುತ್ತಿದ್ದರೆ ನೆಲವೇ ಚಲಿಸುತ್ತಿರುವಂತೆ ತೋರುತ್ತದೆ! ಹಾಗೆ ಬುದ್ಧಿಯ ಗುಣಗಳು ಆತ್ಮನಲ್ಲಿರುವಂತೆ ಪ್ರತೀತವಾಗುತ್ತವೆ (೫೩). ಮನೋರಥ ಕಲ್ಪಿತವಾದ ವಿಷಯಾನುಭವಗಳೂ ಕನಸಿನಲ್ಲಿ ಕಂಡ ವಿಷಯಾನುಭವಗಳೂ ಹೇಗೆ ಮಿಥ್ಯೆಯೋ—ಹಾಗೆಯೇ, ಉದ್ಧವ, ಸಂಸಾರದ ವಿಷಯಾನುಭವಗಳೂ ಆತ್ಮನಿಗೆ ಮಿಥ್ಯೆಯಾಗಿರುತ್ತವೆ (೫೮). ಸಂಸಾರದ ಪದಾರ್ಥವು ಮಿಥ್ಯೆಯಾಗಿದ್ದರೂ ಇದು ತಾನಾಗಿ ನಿವೃತ್ತವಾಗುವುದಿಲ್ಲ. ಏಕೆಂದರೆ, ಸ್ವಪ್ನದಲ್ಲಿರುವಂತೆ ಜೀವನು ಸಂಸಾರ ವಿಷಯಗಳನ್ನು ಧ್ಯಾನಿಸುತ್ತಲೇ ಇರುತ್ತಾನೆ. ಸ್ವಪ್ನದ ವಸ್ತು ಮಿಥ್ಯೆಯಾದರೂ ಸ್ವಪ್ನದಲ್ಲಿ ಭಯವೇ ಮುಂತಾದ ಅನರ್ಥ ಉಂಟಾಗುವಂತೆ ಈ ಸಂಸಾರ ಉಂಟಾಗಿರುತ್ತದೆ (೫೫) ಆದ್ದರಿಂದ, ಉದ್ಧವ, ಇಲ್ಲದ ಇಂದ್ರಿಯಗಳಿಂದ (ಇಲ್ಲದ) ವಿಷಯಗಳನ್ನು ಅನುಭವಿಸುವುದಕ್ಕೆ ತೊಡಗಬೇಡ! ಇದೆಲ್ಲವೂ ಆತ್ಮನ ಯಥಾರ್ಥಜ್ಞಾನವಿಲ್ಲದ ಕಾರಣ ಹುಟ್ಟಿದ ವಿಕಲ್ಪ ಸ್ವರೂಪದ ಭ್ರಮೆಯೆಂದು ತಿಳಿ (೫೬). ಶ್ರೇಯಸ್ಕಾಮನಾದವನು ಎಂತಹ ಕಷ್ಟದಲ್ಲಿ ಸಿಕ್ಕಿದರೂ ದೃಢ ಮನಸ್ಸಿನಿಂದ ತನ್ನನ್ನು ಉದ್ಧರಿಸಿಕೊಳ್ಳಬೇಕು. ಅಯೋಗ್ಯರಾದ ಅಜ್ಞಾನಿಗಳು ತನ್ನನ್ನು ಆಕ್ಷೇಪಿಸಲಿ, ಅವಮಾನಮಾಡಲಿ, ಹಾಸ್ಯಮಾಡಲಿ, ಹೊಟ್ಟೆಕಿಚ್ಚು ಪಡಲಿ, ಹೊಡೆಯಲಿ, ಕಟ್ಟಿಹಾಕಲಿ ಅಥವಾ ತನ್ನಿಂದ ಜೀವನ ವೃತ್ತಿಯನ್ನು ಕಸಿದುಕೊಳ್ಳಲಿ, ಮೈಮೇಲೆ ಉಗುಳಲಿ ಅಥವಾ ಉಚ್ಚೆಹೊಯ್ಯಲಿ—ಈ ಪ್ರಕಾರ ನಾನಾ ವಿಧವಾದ ಕಿರುಕುಳವನ್ನು ಕೊಟ್ಟು ಭಗವನ್ನಿಷ್ಠೆಯಿಂದ ತನ್ನನ್ನು ತಪ್ಪಿಸಲು

ನಿಷ್ಠ್ಯುತೋ ಮೂತ್ರಿತೋ ವಾಜ್ಞೈರ್ಬಹುಧೈವಂ ಪ್ರಕಂಪಿತಃ ।
ಶ್ರೇಯಸ್ಕಾಮಃ ಕೃಚ್ಛ್ರಗತ ಆತ್ಮನಾಽಽತ್ಮಾನಮುದ್ಧರೇತ್ ॥ ೫೮

ಉದ್ಧವ ಉವಾಚ—

ಯಥೈವಮನುಬುಧ್ಯೇಯಂ ವದ ನೋ ವದತಾಂ ವರ ।
ಸುದುಸ್ಸಹಮಿಮಂ ಮನ್ಯೇ ಆತ್ಮನ್ಯಸದತಿಕ್ರಮಮ್ ॥ ೫೯

ವಿದುಷಾಮಪಿ ವಿಶ್ವಾತ್ಮನ್ ಪ್ರಕೃತಿರ್ಹಿ ಬಲೀಯಸೀ ।
ಋತೇ ತ್ವದ್ಧರ್ಮನಿರತಾನ್ ಶಾಂತಾಂಸ್ತೇ ಚರಣಾಲಯಾನ್ ॥ ೬೦

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ದ್ವಾವಿಂಶಾಧ್ಯಾಯಃ



---

ಪ್ರಯತ್ನಿಸಿದರೂ ಶ್ರೇಯಸ್ಕಾಮನು ಬಿಡದೆ ಆತ್ಮೋದ್ಧಾರವನ್ನು ಮಾಡಿಕೊಳ್ಳಬೇಕು" ಎಂದನು (೫೭–೫೮). ಆಗ ಉದ್ಧವನು "ಹೇ ವಿಶ್ವಾತ್ಮ, ವಾಗ್ಮಿಗಳಲ್ಲಿ ಶ್ರೇಷ್ಠನಾದವನು ನೀನು. ನಿನ್ನ ಉಪದೇಶವನ್ನು ನಾನು ಪಾಲಿಸುವ ಬಗೆ ಹೇಗೆ? ತಿಳಿಸಿಕೊಡು. ದುಷ್ಟರು ನಮ್ಮ ಮೇಲೆಸಗುವ ಅತಿಕ್ರಮಣವು ದುಃಸಹವಾದದ್ದೆಂದು ಭಾವಿಸಿದ್ದೇನೆ. ನಿನ್ನ ಪಾದವನ್ನೇ ನಂಬಿಕೊಂಡಿರುವ ಪರಮಶಾಂತರೂ ಏಕಾಂತಭಕ್ತರೂ ಆದವರನ್ನು ಬಿಟ್ಟರೆ ಉಳಿದವರಿಗೆ ದುಷ್ಟರಿಂದಾಗುವ ಕಿರುಕುಳವನ್ನು ಸಹಿಸಲಾಗುವುದಿಲ್ಲ. ಎಂತಹ ವಿದ್ವಾಂಸರಿಗೂ ಸ್ವಭಾವವು ಮೀರಲಾಗದಷ್ಟು ಪ್ರಬಲವಾದದ್ದು" ಎಂದನು (೫೯–೬೦).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯ



# ತ್ರಯೋವಿಂಶಾಧ್ಯಾಯಃ

ಶ್ರೀಶುಕ ಉವಾಚ—

ಸ ಏವಮಾಶಂಸಿತ ಉದ್ಧವೇನ
ಭಾಗವತಮುಖ್ಯೇನ ದಾಶಾರ್ಹಮುಖ್ಯಃ ।
ಸಭಾಜಯನ್ ಭೃತ್ಯವಚೋ ಮುಕುಂದ-
ಸ್ತಮಾಬಭಾಷೇ ಶ್ರವಣೀಯವೀರ್ಯಃ ॥ ೧

ಶ್ರೀಭಗವಾನುವಾಚ—

ಬಾರ್ಹಸ್ಪತ್ಯ ಸ ವೈ ನಾತ್ರ ಸಾಧುರ್ವೈ ದುರ್ಜನೇರಿತೈಃ ।
ದುರುಕ್ತೈರ್ಭಿನ್ನಮಾತ್ಮಾನಂ ಯಃ ಸಮಾಧಾತುಮೀಶ್ವರಃ ॥ ೨

ನ ತಥಾ ತಪ್ಯತೇ ವಿದ್ಧಃ ಪುಮಾನ್ ಬಾಣೈಃ ಸುಮರ್ಮಗೈಃ ।
ಯಥಾ ತುದಂತಿ ಮರ್ಮಸ್ಥಾ ಹ್ಯಸತಾಂ ಪರುಷೇಷವಃ ॥ ೩

ಕಥಯಂತಿ ಮಹತ್ಪುಣ್ಯಮಿತಿಹಾಸಮಿಹೋದ್ಧವ ।
ತಮಹಂ ವರ್ಣಯಿಷ್ಯಾಮಿ ನಿಬೋಧ ಸುಸಮಾಹಿತಃ ॥ ೪

## ಅಧ್ಯಾಯ ೨೩

ಜ್ಞಾನಿಯು ದುರ್ಜನರ ನಿಂದೆಯನ್ನು ಅಲಕ್ಷಿಸಬೇಕು. ಇದಕ್ಕೆ ನಿದರ್ಶನವಾಗಿ ಭಿಕ್ಷುಗೀತದ ಪ್ರಕರಣ. ನಾನಾ ನಿದರ್ಶನಗಳಿಂದ ಮನಃಸಂಯಮದ ಸಮರ್ಥನೆ.

ಪರೀಕ್ಷಿತರಾಜನನ್ನು ಕುರಿತು ಶುಕಮಹರ್ಷಿಗಳು ಹೇಳಿದರು: ರಾಜ, ಭಾಗವತೋತ್ತಮನಾದ ಉದ್ಧವನು ಈ ರೀತಿ ಪ್ರಾರ್ಥಿಸಲಾಗಿ ಯದುಕುಲೋತ್ತಮನೂ ಸರ್ವಶಕ್ತನೂ ಆದ ಮುಕುಂದನು ಭಕ್ತನ ಮಾತನ್ನು ಗೌರವಿಸುತ್ತ ಹೀಗೆಂದನು (೧). ಭಗವಂತನು ಹೇಳಿದ್ದೇನೆಂದರೆ: "ಬೃಹಸ್ಪತಿಶಿಷ್ಯ—ಉದ್ಧವ, ನೀನು ಹೇಳುವುದು ಸರಿ. ದುರ್ಜನರ ದುರುಕ್ತಿಗಳಿಂದ ತಳಮಳಿಸುವ ಮನಸ್ಸನ್ನು ಹತೋಟಿಯಲ್ಲಿಡಬಲ್ಲ ಸಾಧುಪುರುಷನು ಲೋಕದಲ್ಲಿಲ್ಲ. ಅಯೋಗ್ಯಜನರಾಡುವ ಪರುಷೋಕ್ತಿಗಳು ಮರ್ಮಸ್ಥಳದಲ್ಲಿ ನಿಂತು ಎಷ್ಟು ಯಾತನೆ ಕೊಡುತ್ತವೆಯೆಂದರೆ, ಮರ್ಮಸ್ಥಳಗಳನ್ನು ಭೇದಿಸುವ ಬಾಣಗಳಿಂದಲೇ ಹೊಡೆದಾಗಲೂ ಸಹ ಮನುಷ್ಯನು ಅಷ್ಟು ವೇದನೆಯನ್ನನುಭವಿಸುವುದಿಲ್ಲ! (೨–೩). ಈ ವಿಷಯವಾಗಿ ಮಹಾ

ಕೇನಚಿದ್ ಭಿಕ್ಷುಣಾ ಗೀತಂ ಪರಿಭೂತೇನ ದುರ್ಜನೈಃ ।
ಸ್ಮರತಾ ಧೃತಿಯುಕ್ತೇನ ವಿಪಾಕಂ ನಿಜಕರ್ಮಣಾಮ್ ॥ ೫

ಅವಂತಿಷು ದ್ವಿಜಃ ಕಶ್ಚಿದಾಸೀದಾಢ್ಯತಮಃ ಶ್ರಿಯಾ ।
ವಾರ್ತಾವೃತ್ತಿಃ ಕದರ್ಯಸ್ತು ಕಾಮೀ ಲುಬ್ಧೋಽತಿಕೋಪನಃ ॥ ೬

ಜ್ಞಾತಯೋಽತಿಥಯಸ್ತಸ್ಯ ವಾಙ್ಮಾತ್ರೇಣಾಪಿ ನಾರ್ಚಿತಾಃ ।
ಶೂನ್ಯಾವಸಥ ಆತ್ಮಾಪಿ ಕಾಲೇ ಕಾಮೈರನರ್ಚಿತಃ ॥ ೭

ದುಃಶೀಲಸ್ಯ ಕದರ್ಯಸ್ಯ ದ್ರುಹ್ಯಂತೇ ಪುತ್ರಬಾಂಧವಾಃ ।
ದಾರಾ ದುಹಿತರೋ ಭೃತ್ಯಾ ವಿಷಣ್ಣಾ ನಾಚರನ್ ಪ್ರಿಯಮ್ ॥ ೮

---

ಪುಣ್ಯಕರವಾದ ಒಂದು ಇತಿಹಾಸವನ್ನು ಬಲ್ಲವರು ಹೇಳಿದ್ದಾರೆ. ಅದನ್ನು ಹೇಳುವೆನು, ಸಾವಧಾನವಾಗಿ ಕೇಳು. ದುರ್ಜನರಿಂದ ಅವಮಾನಕ್ಕೆ ಒಳಗಾದ ಒಬ್ಬ ಭಿಕ್ಷುವಿನ ಗೀತವಿದು. ತನ್ನ ಕರ್ಮವಿಪಾಕವನ್ನು ಧೀರತನದಿಂದಲೇ ಸ್ಮರಿಸಿಕೊಂಡ ಭಿಕ್ಷು ಅವನು (೪–೫). ಅವಂತಿದೇಶದಲ್ಲಿ ಬಹಳ ಶ್ರೀಮಂತನಾದ ಒಬ್ಬ ಬ್ರಾಹ್ಮಣನಿದ್ದನು. ಕೃಷಿ ವಾಣಿಜ್ಯಾದಿ ವೃತ್ತಿಯಿಂದ ಅವನು ಜೀವಿಸುದ್ದನು. ಆತನು [1]ಕದರ್ಯನೂ ಕಾಮಿಯೂ ಲೋಭಿಯೂ ಕೋಪಿಷ್ಠನೂ ಆಗಿದ್ದನು (೬). ಬಂಧುಗಳನ್ನೂ ಅತಿಥಿಗಳನ್ನೂ ಅವನು ಬರಿಯ ಮಾತಿನಿಂದಲೂ ಸತ್ಕರಿಸುತ್ತಿರಲಿಲ್ಲ. ಧರ್ಮಕರ್ಮ ಹೀನವಾದ ಆತನ ಮನೆ ಒಂದು ಶೂನ್ಯಾಗಾರದಂತಿತ್ತು. ಕಾಲಕಾಲಕ್ಕೆ ತನಗೆ ಬೇಕಾದ ಸುಖೋಪಚಾರಗಳನ್ನೂ ಅವನು ಮಾಡಿಕೊಳ್ಳುತ್ತಿರಲಿಲ್ಲ (೭). ದುಃಶೀಲನೂ ಕದರ್ಯನೂ ಆದ ಲೋಭಿಗೆ ಪುತ್ರಬಾಂಧವರೂ ಸಹ ದ್ರೋಹವನ್ನೆಣಿಸುತ್ತಾರೆ. ಮಡದಿ, ಹೆಣ್ಣುಮಕ್ಕಳು, ಸೇವಕರು ಸಹ ಖಿನ್ನರಾಗಿದ್ದರೇ ಹೊರತು ಅವರು ಆ ಬ್ರಾಹ್ಮಣನಲ್ಲಿ ಪ್ರೀತಿಯಿಂದ ನಡೆದುಕೊಳ್ಳಲಿಲ್ಲ (೮).

---

1. ಆತ್ಮಾನಂ ಧರ್ಮಕೃತ್ಯಂ ಚ ಪುತ್ರದಾರಾಂಶ್ಚ ಪೀಡಯನ್ ।
ದೇವತಾತಿಥಿಭೃತ್ಯಾಂಶ್ಚ ಸ ಕದರ್ಯ ಇತಿ ಸ್ಮೃತಃ ॥
(ಶ್ರೀಧರೀಯದಲ್ಲಿ ಉದ್ಧೃತ)

**ತಸ್ಯೈವಂ ಯಕ್ಷವಿತ್ತಸ್ಯ ಚ್ಯುತಸ್ಯೋಭಯಲೋಕತಃ ।**
**ಧರ್ಮಕಾಮವಿಹೀನಸ್ಯ ಚುಕ್ರುಧುಃ ಪಂಚ ಭಾಗಿನಃ ॥ ೯**

**ತದವಧ್ಯಾನವಿಸ್ರಸ್ತ ಪುಣ್ಯಸ್ಕಂಧಸ್ಯ ಭೂರಿದ ।**
**ಅರ್ಥೋಽಪ್ಯಗಚ್ಛನ್ನಿಧನಂ ಬಹ್ವಾಯಾಸಪರಿಶ್ರಮಃ ॥ ೧೦**

**ಜ್ಞಾತಯೋ ಜಗೃಹುಃ ಕಿಂಚಿತ್ ಕಿಂಚಿದ್ ದಸ್ಯವ ಉದ್ಧವ ।**
**ದೈವತಃ ಕಾಲತಃ ಕಿಂಚಿದ್ ಬ್ರಹ್ಮಬಂಧೋರ್ನೃಪಾರ್ಥಿವಾತ್ ॥ ೧೧**

**ಸ ಏವಂ ದ್ರವಿಣೇ ನಷ್ಟೇ ಧರ್ಮಕಾಮವಿವರ್ಜಿತಃ ।**
**ಉಪೇಕ್ಷಿತಶ್ಚ ಸ್ವಜನೈಶ್ಚಿಂತಾಮಾಪ ದುರತ್ಯಯಾಮ್ ॥ ೧೨**

**ತಸ್ಯೈವಂ ಧ್ಯಾಯತೋ ದೀರ್ಘಂ ನಷ್ಟರಾಯಸ್ತಪಸ್ವಿನಃ ।**
**ಖಿದ್ಯತೋ ಬಾಷ್ಪಕಂಠಸ್ಯ ನಿರ್ವೇದಃ ಸುಮಹಾನಭೂತ್ ॥ ೧೩**

ಅವನೊಬ್ಬ [1]ಯಕ್ಷವಿತ್ತ. ಹೀಗೆ ಇಹಪರಗಳಿಂದ ಚ್ಯುತನಾಗಿ ಧರ್ಮಕಾಮಗಳಿಂದ ಹೀನನಾದ ಆತನ ಮೇಲೆ ಪಂಚಯಜ್ಞದೇವತೆಗಳು ಕುಪಿತರಾದರು. ಆ ದೇವತೆಗಳನ್ನು ಅನಾದರಿಸಿದ್ದರಿಂದ ಧನನಿಮಿತ್ತವಾದ ಪುಣ್ಯರಾಶಿಯೂ ನಶಿಸಿತು (ಹಿಂದೆ ಆರ್ಜಿಸಿದ್ದ ಧರ್ಮವು ಕ್ಷೀಣಿಸಿತು). ಬಹಳ ಪ್ರಯತ್ನಗಳಿಂದ ಶ್ರಮಿಸಿ ಸಂಪಾದಿಸಿದ್ದ ಅರ್ಥವೂ ನಶಿಸಿತು (೯–೧೦). ಉದ್ಧವ, ಕೆಲವು ಹಣವು ಬಂಧುಗಳ ಪಾಲಾಯಿತು. ಕೆಲವನ್ನು ಕಳ್ಳರು ಅಪಹರಿಸಿದರು. ಗೃಹದಹನಾದಿ ದೈವನಿಮಿತ್ತದಿಂದ ಕೆಲವು, ಕಾಲವಿಳಂಬದಿಂದ ಕೆಲವು ಹೊರಟು ಹೋದವು. ದುಃಶೀಲನಾದ ಆ ಬ್ರಾಹ್ಮಣನ ಉಳಿದ ಹಣವನ್ನು ಬೇರೆ ಬೇರೆ ಜನರೂ ರಾಜನೂ ಕಿತ್ತುಕೊಂಡರು (೧೧). ಹೀಗೆ ಐಶ್ವರ್ಯವೆಲ್ಲವೂ ಹೊರಟು ಹೋದಮೇಲೆ ಧರ್ಮಕಾಮವರ್ಜಿತನಾದ ಆತನು ಸ್ವಜನರಿಂದಲೂ ಉಪೇಕ್ಷಿತನಾದನು. ಆಗ ಆತನಿಗೆ ಅಪಾರವಾದ ಚಿಂತೆ ಅಂಟಿಕೊಂಡಿತು. ಹಣವನ್ನು ಕಳೆದುಕೊಂಡು ಸಂಕಟಕ್ಕೊಳಗಾದ ಅವನು ದೀರ್ಘವಾಗಿ ಆಲೋಚಿಸತೊಡಗಿದನು. ಮೈಬೆವರಿತು. ಕಣ್ಣೀರು ಹರಿದು ಕುತ್ತಿಗೆ ಒತ್ತರಿಸಿತು. ಒಮ್ಮೆಗೇ ಮಹತ್ತರವಾದ ನಿರ್ವೇದ ಹುಟ್ಟಿತು (೧೨–೧೩).

1. ವಿತ್ತವನ್ನು ಕಾಪಾಡತಕ್ಕ ಯಕ್ಷ. ತಾನು ತಿನ್ನುವುದೂ ಇಲ್ಲ, ಇನ್ನೊಬ್ಬರಿಗೆ ಕೊಡುವುದೂ ಇಲ್ಲ.

ಸ ಚಾಹೇದಮಹೋ ಕಷ್ಟಂ ವೃಥಾತ್ಮಾ ಮೇಽನುತಾಪಿತಃ ।
ನ ಧರ್ಮಾಯ ನ ಕಾಮಾಯ ಯಸ್ಯಾರ್ಥಾಯಾಸ ಈದೃಶಃ ॥ ೧೪

ಪ್ರಾಯೇಣಾರ್ಥಾಃ ಕದರ್ಯಾಣಾಂ ನ ಸುಖಾಯ ಕದಾಚನ ।
ಇಹ ಚಾತ್ಮೋಪತಾಪಾಯ ಮೃತಸ್ಯ ನರಕಾಯ ಚ ॥ ೧೫

ಯಶೋ ಯಶಸ್ವಿನಾಂ ಶುದ್ಧಂ ಶ್ಲಾಘ್ಯಾ ಯೇ ಗುಣಿನಾಂ ಗುಣಾಃ ।
ಲೋಭಃ ಸ್ವಲ್ಪೋಽಪಿ ತಾನ್ ಹಂತಿ ಶ್ವಿತ್ರೋ ರೂಪಮಿವೇಪ್ಸಿತಮ್ ॥ ೧೬

ಅರ್ಥಸ್ಯ ಸಾಧನೇ ಸಿದ್ಧೇ ಉತ್ಕರ್ಷೇ ರಕ್ಷಣೇ ವ್ಯಯೇ ।
ನಾಶೋಪಭೋಗ ಆಯಾಸಸ್ತ್ರಾಸಶ್ಚಿಂತಾ ಭ್ರಮೋ ನೃಣಾಮ್ ॥ ೧೭

ಸ್ತೇಯಂ ಹಿಂಸಾನೃತಂ ದಂಭಃ ಕಾಮಃ ಕ್ರೋಧಃ ಸ್ಮಯೋ ಮದಃ ।
ಭೇದೋ ವೈರಮವಿಶ್ವಾಸಃ ಸಂಸ್ಪರ್ಧಾ ವ್ಯಸನಾನಿ ಚ ॥ ೧೮

---

ತನ್ನಲ್ಲಿಯೇ ಹೀಗೆಂದುಕೊಂಡನು : "ಅಯ್ಯೋ ! ಕಷ್ಟವೇ ! ವ್ಯರ್ಥವಾಗಿಯೇ ಈ ದೇಹಕ್ಕೆ ಆಯಾಸವನ್ನಿತ್ತೆನು. ಹಣಕ್ಕಾಗಿ ಇಷ್ಟು ಶ್ರಮವಾಯಿತೇ ಹೊರತು, ಇದು ಧರ್ಮಕ್ಕಾಗಲಿಲ್ಲ, ಕಾಮಕ್ಕಾಗಲಿಲ್ಲ (೧೪). ಕದರ್ಯರಾದ ಲೋಭಿಗಳ ಐಶ್ವರ್ಯವು ಪ್ರಾಯಶಃ ಎಂದಿಗೂ ಸುಖಕ್ಕಾಗಿ ಉಪಯುಕ್ತವಾಗುವುದಿಲ್ಲ. ಇಲ್ಲಿ ದೇಹಕ್ಕೆ ಆಯಾಸ, ಸತ್ತಮೇಲೆ ನರಕ, ಇಷ್ಟೇ ಇದಕ್ಕೆ ಫಲ. ಕೀರ್ತಿಶಾಲಿಗಳಲ್ಲಿ ಯಾವ ಶುದ್ಧ ಕೀರ್ತಿಯುಂಟೋ ಗುಣಾಢ್ಯರಲ್ಲಿ ಪ್ರಶಸ್ತವಾದ ಯಾವ ಗುಣಗಳುಂಟೋ ಅವೆಲ್ಲವನ್ನು ಲೋಭವು ಸ್ವಲ್ಪವಾಗಿದ್ದರೂ ಕೆಡಿಸಿಬಿಡುತ್ತದೆ, ಬಿಳಿಯ ತೊನ್ನು ರೂಪವನ್ನು ಕೆಡಿಸಿದಂತೆ (೧೫—೧೬). ಜನರಿಗೆ ಧನವನ್ನು ಸಂಪಾದಿಸುವಾಗ ಆಯಾಸ, ಸಂಪಾದಿಸಿದ್ದನ್ನು ಬೆಳೆಸುವಾಗ ಆಯಾಸ, ಅದನ್ನು ರಕ್ಷಿಸುವಾಗ ಭಯ ಚಿಂತೆಗಳು, ವ್ಯಯವಾದಾಗ ಚಿಂತೆ, ಭೋಗಿಸಿದಾಗ ಭಯ, ಧನವು ನಾಶವಾದರಂತೂ ಶಿರೋಭ್ರಮಣವೇ ! (೧೭). ಅಲ್ಲದೆ ಧನನಿಮಿತ್ತವಾಗಿ ಮನುಷ್ಯರಿಗೆ ಪ್ರಾಪ್ತವಾಗುವ ಅನರ್ಥಗಳು ಎಷ್ಟು ! ಕಳ್ಳತನ, ಹಿಂಸೆ, ಸುಳ್ಳು, ದಂಭ, ಕಾಮ, ಕ್ರೋಧ, ಗರ್ವ, ಮದ, ಸ್ನೇಹತ್ಯಾಗ (ಭೇದ), ವೈರ, ಅವಿಶ್ವಾಸ, ಸ್ಪರ್ಧೆ, (ಮೂರು) ವ್ಯಸನಗಳು—ಹೀಗೆ ಹದಿನೈದು

ಏತೇ ಪಂಚದಶಾನರ್ಥಾ ಹ್ಯರ್ಥಮೂಲಾ ಮತಾ ನೃಣಾಮ್ ।
ತಸ್ಮಾದನರ್ಥಮರ್ಥಾಖ್ಯಂ ಶ್ರೇಯೋऽರ್ಥೀ ದೂರತಸ್ತ್ಯಜೇತ್ ॥ ೧೯

ಭಿದ್ಯಂತೇ ಭ್ರಾತರೋ ದಾರಾಃ ಪಿತರಃ ಸುಹೃದಸ್ತಥಾ ।
ಏಕಾಸ್ನಿಗ್ಧಾಃ ಕಾಕಿಣಿನಾ ಸದ್ಯಃ ಸರ್ವೇऽರಯಃ ಕೃತಾಃ ॥ ೨೦

ಅರ್ಥೇನಾಲ್ಪೀಯಸಾ ಹ್ಯೇತೇ ಸಂರಬ್ಧಾ ದೀಪ್ತಮನ್ಯವಃ ।
ತ್ಯಜಂತ್ಯಾಶು ಸ್ಪೃಧೋ ಘ್ನಂತಿ ಸಹಸೋತ್ಸೃಜ್ಯ ಸೌಹೃದಮ್ ॥ ೨೧

ಲಬ್ಧ್ವಾ ಜನ್ಮಾಮರಪ್ರಾರ್ಥ್ಯಂ ಮಾನುಷ್ಯಂ ತದ್ ದ್ವಿಜಾಗ್ರ್ಯತಾಮ್ ।
ತದನಾದೃತ್ಯ ಯೇ ಸ್ವಾರ್ಥಂ ಘ್ನಂತಿ ಯಾಂತ್ಯಶುಭಾಂ ಗತಿಮ್ ॥ ೨೨

---

[1]ಅನರ್ಥಗಳು ಹಣದಿಂದ ಬರುತ್ತವೆ. ಆದ್ದರಿಂದ ಶ್ರೇಯಸ್ಕಾಮನು ಅರ್ಥವೆಂಬ ಹೆಸರಿರುವ ಅನರ್ಥವನ್ನು ದೂರದಿಂದಲೇ ತ್ಯಜಿಸಬೇಕು (೧೮–೧೯). ಮೊದಲು ಒಂದೇ ಪ್ರಾಣವಿರುವಂತೆ [2]ಅತ್ಯಂತ ಪ್ರೇಮಿಗಳಾಗಿದ್ದ ಅಣ್ಣತಮ್ಮಂದಿರು, ಮಡದಿಯರು, ತಂದೆತಾಯಿಗಳು ಮತ್ತು ಗೆಳೆಯರು ಹಣಕ್ಕಾಗಿ ಜಗಳ ಹುಟ್ಟುವುದರಿಂದ ಸ್ನೇಹವನ್ನು ತ್ಯಜಿಸುತ್ತಾರೆ. ಒಂದು ಕಾಸಿನ ನಿಮಿತ್ತದಿಂದ ಇವರೆಲ್ಲರೂ ಇದ್ದಕ್ಕಿದ್ದಂತೆ ವೈರಿಗಳಾಗಿಬಿಡುತ್ತಾರೆ! (೨೦). ಸ್ವಲ್ಪ ಹಣಕ್ಕಾಗಿಯೇ ಈ ಜನರು ಕ್ಷೋಭೆಗೊಂಡು ಸಿಟ್ಟಿನಿಂದ ಉರಿಯುತ್ತ, ಥಟ್ಟನೆ ನಮ್ಮನ್ನು ತ್ಯಜಿಸಿಹೋಗುತ್ತಾರೆ. ಸ್ನೇಹವನ್ನು ಬದಿಗೊತ್ತಿ ಸ್ಪರ್ಧಿಸುತ್ತ ಕೊಲ್ಲುವುದಕ್ಕೂ ಯತ್ನಿಸುತ್ತಾರೆ (೨೧). ದೇವತೆಗಳೂ ಬಯಸುವ ಮನುಷ್ಯಜನ್ಮವನ್ನು ಪಡೆದು, ಅದರಲ್ಲಿಯೂ ಬ್ರಾಹ್ಮಣ್ಯವನ್ನು ಪಡೆದು, ಅದನ್ನು ಅನಾದರಿಸಿ ಯಾರು ಆತ್ಮಹಿತವನ್ನು ಹಾಳುಮಾಡಿಕೊಳ್ಳುತ್ತಾರೋ ಅವರು ದುರ್ಗತಿಯನ್ನೈದುವರು (೨೨).

---

1. ಕಳ್ಳತನದಿಂದ ಕ್ರೋಧದವರೆಗೆ ಆರು ಅನರ್ಥಗಳು ಧನಸಂಪಾದನೆಗೆ ಮೊದಲು ಆಗತಕ್ಕವು. ಗರ್ವದಿಂದ ವ್ಯಸನದವರೆಗೆ ಒಂಬತ್ತು ಅನರ್ಥಗಳು ಧನವನ್ನು ಸಂಪಾದಿಸಿದ ಮೇಲೆ ಆಗತಕ್ಕವು. ಸ್ತ್ರೀ ವ್ಯಸನ, ದ್ಯೂತವ್ಯಸನ, ಮದ್ಯವ್ಯಸನ—ಎಂದು ವ್ಯಸನಗಳು ಮೂರು.

2. ಮೂಲದಲ್ಲಿರುವ ಏಕಾಸ್ನಿಗ್ಧಾ ಎಂಬ ಸಮಸ್ತ ಪದವನ್ನು 'ಏಕ + ಆಸ್ನಿಗ್ಧಾಃ' ಎಂದು ಬಿಡಿಸಿಕೊಳ್ಳಬೇಕು.

ಸ್ವರ್ಗಾಪವರ್ಗಯೋರ್ದ್ವಾರಂ ಪ್ರಾಪ್ಯ ಲೋಕಮಿಮಂ ಪುಮಾನ್ ।
ದ್ರವಿಣೇ ಕೋಽನುಷಜ್ಜೇತ ಮರ್ತ್ಯೋಽನರ್ಥಸ್ಯ ಧಾಮನಿ ॥ ೨೩

ದೇವರ್ಷಿಪಿತೃಭೂತಾನಿ ಜ್ಞಾತೀನ್ ಬಂಧೂಂಶ್ಚ ಭಾಗಿನಃ ।
ಅಸಂವಿಭಜ್ಯ ಚಾತ್ಮಾನಂ ಯಕ್ಷವಿತ್ತಃ ಪತತ್ಯಧಃ ॥ ೨೪

ವ್ಯರ್ಥಯಾರ್ಥೇಹಯಾ ವಿತ್ತಂ ಪ್ರಮತ್ತಸ್ಯ ವಯೋ ಬಲಮ್ ।
ಕುಶಲಾ ಯೇನ ಸಿಧ್ಯಂತಿ ಜರಠಃ ಕಿಂ ನು ಸಾಧಯೇ ॥ ೨೫

ಕಸ್ಮಾತ್ ಸಂಕ್ಲಿಶ್ಯತೇ ವಿದ್ವಾನ್ ವ್ಯರ್ಥಯಾರ್ಥೇಹಯಾಸಕೃತ್ ।
ಕಸ್ಯಚಿನ್ಮಾಯಯಾ ನೂನಂ ಲೋಕೋಽಯಂ ಸುವಿಮೋಹಿತಃ ॥ ೨೬

ಕಿಂ ಧನೈರ್ಧನದೈರ್ವಾ ಕಿಂ ಕಾಮೈರ್ವಾ ಕಾಮದೈರುತ ।
ಮೃತ್ಯುನಾ ಗ್ರಸ್ಯಮಾನಸ್ಯ ಕರ್ಮಭಿರ್ವೋತ ಜನ್ಮದೈಃ ॥ ೨೭

---

ಸ್ವರ್ಗಮೋಕ್ಷಗಳಿಗೆ ದಾರಿಯಾದ ಈ ಲೋಕದಲ್ಲಿ ಮನುಷ್ಯಜನ್ಮವನ್ನು ಪಡೆದ ಯಾವಾತನು ಅನರ್ಥದ ತವರುಮನೆಯಾದ ಹಣದಲ್ಲಿ ಆಸಕ್ತಿ ವಹಿಸಿಯಾನು? ಧನಕ್ಕೆ ಭಾಗಿಗಳಾದ ದೇವ, ಋಷಿ, ಪಿತೃ, ಭೂತಗಳನ್ನೂ ದಾಯಾದಿಗಳನ್ನೂ ಬಂಧುಗಳನ್ನೂ ತನ್ನನ್ನೂ ಸಹ ಅನ್ನಾದಿಗಳಿಂದ ತೃಪ್ತಿಪಡಿಸದಿರುವ ಯಕ್ಷವಿತ್ತನಾದ ಲೋಭಿಯು ನರಕಗಾಮಿಯಾಗಿ ಹಾಳಾಗುತ್ತಾನೆ (೨೩–೨೪). ವ್ಯರ್ಥವಾಗಿ ಹಣದ ಆಸೆಯಿಂದ ಇಷ್ಟುದಿನ ಪ್ರಮತ್ತನಾಗಿದ್ದ ನನಗೆ ಹಣವು ಹೋಯಿತು, ವಯಸ್ಸು ಗತಿಸಿತು, ದೇಹಬಲವು ಕುಗ್ಗಿತು. ಇದೇ ಹಣ, ಯೌವನ, ದೇಹಬಲಗಳಿಂದ ಬುದ್ಧಿಶಾಲಿಗಳು ಶ್ರೇಯಸ್ಸನ್ನು ಸಾಧಿಸಿಕೊಳ್ಳುತ್ತಿದ್ದರು. ಏನೂ ಇಲ್ಲದೆ ಮುದುಕನಾದ ನಾನು ಈಗ ಏನನ್ನು ಸಾಧಿಸಿಯೇನು? (೨೫). ನಿಷ್ಫಲವಾದ ಧನದಲ್ಲಿ ಆಸೆಯನ್ನಿಟ್ಟುಕೊಂಡು ವಿದ್ವಾಂಸನಾದವನೂ ಸಹ ಮತ್ತೆ ಮತ್ತೆ ಏತಕ್ಕಾಗಿ ಕಷ್ಟಪಡುತ್ತಿರಬಹುದು? ನಿಜವಾಗಿಯೂ ಯಾರದೋ ಮಾಯೆಯಿಂದ ಈ ಲೋಕವು ಪೂರ್ತಿಯಾಗಿ ಬುದ್ಧಿಯನ್ನು ಕಳೆದುಕೊಂಡು ಮೂಢವಾಗಿದೆ! (೨೬). ಮೃತ್ಯುವು ಬಂದು ಹಿಡಿದುಕೊಂಡು ನುಂಗುತ್ತಿರುವಾಗ ನಮಗೆ ಧನದಿಂದೇನಾದೀತು? ಧನವನ್ನು ಕೊಡತಕ್ಕ ಜನರಿಂದೇನಾದೀತು? ಕಾಮನೆಗಳಿಂದಾಗುವುದೇನು? ಕಾಮನೆಗಳನ್ನು ಪೂರೈಸತಕ್ಕವರಿಂದ ಆಗುವುದೇನು? ಕ್ರಿಯೆಗಳು ಏನು ಮಾಡಿಯಾವು? ತಂದೆತಾಯಿಗಳು ಏನು ಮಾಡಿಯಾರು? (೨೭).

ನೂನಂ ಮೇ ಭಗವಾಂಸ್ತುಷ್ಟಃ ಸರ್ವದೇವಮಯೋ ಹರಿಃ ।
ಯೇನ ನೀತೋ ದಶಾಮೇತಾಂ ನಿರ್ವೇದಶ್ಚಾತ್ಮನಃ ಪ್ಲವಃ ॥ ೨೮

ಸೋಽಹಂ ಕಾಲಾವಶೇಷೇಣ ಶೋಷಯಿಷ್ಯೇಽಂಗಮಾತ್ಮನಃ ।
ಅಪ್ರಮತ್ತೋಽಖಿಲಸ್ವಾರ್ಥೇ ಯದಿ ಸ್ಯಾತ್ ಸಿದ್ಧ ಆತ್ಮನಿ ॥ ೨೯

ತತ್ರ ಮಾಮನುಮೋದೇರನ್ ದೇವಾಸ್ತ್ರಿಭುವನೇಶ್ವರಾಃ ।
ಮುಹೂರ್ತೇನ ಬ್ರಹ್ಮಲೋಕಂ ಖಟ್ವಾಂಗಃ ಸಮಸಾಧಯತ್ ॥ ೩೦

ಶ್ರೀಭಗವಾನುವಾಚ—
ಇತ್ಯಭಿಪ್ರೇತ್ಯ ಮನಸಾ ಹ್ಯಾವಂತ್ಯೋ ದ್ವಿಜಸತ್ತಮಃ ।
ಉನ್ಮುಚ್ಯ ಹೃದಯಗ್ರಂಥೀನ್ ಶಾಂತೋ ಭಿಕ್ಷುರಭೂನ್ಮುನಿಃ ॥ ೩೧

---

ಅಹೋ! ಸರ್ವದೇವಮಯನಾದ ಭಗವಾನ್ ಶ್ರೀಹರಿಯು ನನ್ನಲ್ಲಿ ಸಂತುಷ್ಟನಾಗಿ ಅನುಗ್ರಹಿಸಿದ್ದಾನೆ! ಅವನು ಸಂಪ್ರೀತನಾಗಿ ನನಗೆ ಈ ಸ್ಥಿತಿಯನ್ನು ತಂದು ಕೊಟ್ಟಿದ್ದಾನೆ! ವೈರಾಗ್ಯವೆಂಬ ದೋಣಿಯನ್ನು ತಂದುಕೊಟ್ಟನು! (೨೮). ಇನ್ನು ಉಳಿದಿರುವ ಕಾಲಾವಶೇಷದಲ್ಲಿ ನನ್ನ ದೇಹವನ್ನು ತಪಸ್ಸಿನಿಂದ ಶೋಷಿಸುವೆನು. ಇನ್ನೂ ಕಾಲ ಉಳಿದಿದ್ದರೆ ನನ್ನಲ್ಲಿಯೇ ಸಂತೃಪ್ತನಾಗಿ ಆತ್ಮಹಿತಗಳಾದ ಸಮಸ್ತ ಸಾಧನಗಳಲ್ಲಿಯೂ ತಪ್ಪುಮಾಡದೆ ಎಚ್ಚರದಿಂದಿರುವೆನು. ಈ ವಿಷಯದಲ್ಲಿ ತ್ರಿಭುವನೇಶ್ವರರಾದ ಬ್ರಹ್ಮಾದಿದೇವತೆಗಳು ನನ್ನನ್ನು ಅನುಗ್ರಹಿಸಲಿ. [1]ಖಟ್ವಾಂಗ ದಿಲೀಪನು ಒಂದು ಮುಹೂರ್ತಕಾಲದಲ್ಲಿಯೇ ಬ್ರಹ್ಮಲೋಕವನ್ನು ಸಾಧಿಸಿದ್ದಾನಲ್ಲವೆ?" ಎಂದುಕೊಂಡನು (೨೯–೩೦). ಉದ್ಧವ, ಅವಂತೀದೇಶದ ಆ ಬ್ರಾಹ್ಮಣೋತ್ತಮನು ಈ ರೀತಿಯಾಗಿ ನಿರ್ಧರಿಸಿ, ಅಹಂಕಾರಮಮಕಾರಾದಿ ಹೃದಯಗ್ರಂಥಿಗಳನ್ನು ತೊರೆದು ಶಾಂತನೂ ಮುನಿಯೂ ಆದ ಒಬ್ಬ ಭಿಕ್ಷುವಾಗಿ ಬಿಟ್ಟನು! ಮನಸ್ಸು ಇಂದ್ರಿಯ ಪ್ರಾಣವಾಯುಗಳನ್ನು ಬಿಗಿಹಿಡಿದು ನಿಗ್ರಹಿಸಿ ಲೋಕದಲ್ಲಿ ಸಂಚರಿಸುತ್ತಿದ್ದನು. ಯಾವುದರಲ್ಲಿಯೂ ಆಸಕ್ತಿಯನ್ನಿಡದೆ, ತಾನು ಶ್ರೀಷ್ಠನೆಂದು ತೋರಿಸಿಕೊಳ್ಳದೆ, ಭಿಕ್ಷೆಗಾಗಿ ನಗರಗಳಿಗೂ ಹಳ್ಳಿಗಳಿಗೂ

---

1. ಅನುಬಂಧವನ್ನು ನೋಡಿ–೪

ಸ ಚಚಾರ ಮಹೀಮೇತಾಂ ಸಂಯತಾತ್ಮೇಂದ್ರಿಯಾನಿಲಃ ।
ಭಿಕ್ಷಾರ್ಥಂ ನಗರಗ್ರಾಮಾನಸಂಗೋಽಲಕ್ಷಿತೋಽವಿಶತ್ ॥ ೩೨

ತಂ ವೈ ಪ್ರವಯಸಂ ಭಿಕ್ಷುಮವಧೂತಮಸಜ್ಜನಾಃ ।
ದೃಷ್ಟ್ವಾ ಪರ್ಯಭವನ್ ಭದ್ರ ಬಹ್ವೀಭಿಃ ಪರಿಭೂತಿಭಿಃ ॥ ೩೩

ಕೇಚಿತ್ತ್ರಿವೇಣುಂ ಜಗೃಹುರೇಕೇ ಪಾತ್ರಂ ಕಮಂಡಲುಮ್ ।
ಪೀಠಂ ಚೈಕೇಽಕ್ಷಸೂತ್ರಂ ಚ ಕಂಥಾಂ ಚೀರಾಣಿ ಕೇಚನ ॥ ೩೪

ಪ್ರದಾಯ ಚ ಪುನಸ್ತಾನಿ ದರ್ಶಿತಾನ್ಯಾದದುರ್ಮುನೇಃ ।
ಅನ್ನಂ ಚ ಭೈಕ್ಷ್ಯಸಂಪನ್ನಂ ಭುಂಜಾನಸ್ಯ ಸರಿತ್ತಟೇ ॥ ೩೫

ಮೂತ್ರಯಂತಿ ಚ ಪಾಪಿಷ್ಠಾಃ ಷ್ಠೀವಂತ್ಯಸ್ಯ ಚ ಮೂರ್ಧನಿ ।
ಯತವಾಚಂ ವಾಚಯಂತಿ ತಾಡಯಂತಿ ನ ವಕ್ತಿ ಚೇತ್ ॥ ೩೬

ತರ್ಜಯಂತ್ಯಪರೇ ವಾಗ್ಭಿಃ ಸ್ತೇನೋಽಯಮಿತಿ ವಾದಿನಃ ।
ಬಧ್ನಂತಿ ರಜ್ಜ್ವಾ ತಂ ಕೇಚಿದ್ ಬಧ್ಯತಾಂ ಬಧ್ಯತಾಮಿತಿ ॥ ೩೭

---

ಹೋಗುತ್ತಿದ್ದನು (೩೧-೩೨). ಭದ್ರ–ಉದ್ಧವ, ವೃದ್ಧನೂ ಮಲಿನನೂ ಆಗಿದ್ದ ಆ ಭಿಕ್ಷುವನ್ನು ನೋಡಿ (ಆತನ ಪೂರ್ವಚರಿತೆಯನ್ನು ತಿಳಿದಿದ್ದ) ದುಷ್ಟಜನರು ನಾನಾಬಗೆಯ ತಿರಸ್ಕಾರಗಳಿಂದ ಆತನಿಗೆ ಅವಮಾನಮಾಡಿದರು. ಕೆಲವರು ಭಿಕ್ಷುವಿನ ತ್ರಿದಂಡವನ್ನು ಕಿತ್ತುಕೊಂಡರು. ಕೆಲವರು ಭಿಕ್ಷಾಪಾತ್ರೆಯನ್ನೂ ಕಮಂಡಲುವನ್ನೂ ಸೆಳೆದರು. ಪೀಠವನ್ನೂ ಜಪಸರವನ್ನೂ ಕೆಲವರೂ ಚೀಲವನ್ನೂ ನಾರುಬಟ್ಟೆಗಳನ್ನೂ ಕೆಲವರೂ ಅಪಹರಿಸಿದರು (೩೩–೩೪). ಅನಂತರ 'ಪೂಜ್ಯರೆ, ತೆಗೆದುಕೊಳ್ಳಿ !' ಎಂದು ಅವುಗಳನ್ನು ಹಿಂದಕ್ಕೆ ಕೊಟ್ಟು ಮತ್ತೆ ಕಿತ್ತುಕೊಂಡು ಹೋಗುತ್ತಿದ್ದರು. ಆ ಭಿಕ್ಷುವು ಭಿಕ್ಷೆ ಬೇಡಿ ತಂದ ಅನ್ನವನ್ನು ನದೀತೀರದಲ್ಲಿ ಕುಳಿತು ಊಟ ಮಾಡುತ್ತಿರುವಾಗ, ಈ ಪಾಪಿಷ್ಠರು ಅದರಲ್ಲಿ ಮೂತ್ರವನ್ನು ಹೊಯ್ದು ತಲೆಯಮೇಲೆ ಉಗುಳುತ್ತಿದ್ದರು ! ಆತನು ಮಾತಾಡದಿದ್ದರೆ ಒತ್ತಾಯದಿಂದ ಮಾತಾಡಿಸುತ್ತಿದ್ದರು. ಮಾತಾಡದಿದ್ದರೆ ಹೊಡೆಯುತ್ತಿದ್ದರು (೩೫–೩೬). ಕೆಲವರು 'ಈತನು ಕಳ್ಳ !' ಎಂದು ಹೇಳುತ್ತ ಆತನನ್ನು ದಂಡಿಸುವುದಾಗಿ ಹೆದರಿಸುತ್ತಿದ್ದರು. ಹಲವರು 'ಈತನನ್ನು ಕಟ್ಟಿಹಾಕಿರಿ, ಕಟ್ಟಿಹಾಕಿರಿ !' ಎನ್ನುತ್ತ ಹಗ್ಗದಿಂದ ಬಿಗಿದು ಹಾಕುತ್ತಿದ್ದರು. ಇನ್ನು ಕೆಲವರು

ಕ್ಷಿಪಂತ್ಯೇಕೇsವಜಾನಂತ ಏಷ ಧರ್ಮಧ್ವಜಃ ಶಠಃ ।
ಕ್ಷೀಣವಿತ್ತ ಇಮಾಂ ವೃತ್ತಿಮಗ್ರಹೀತ್ ಸ್ವಜನೋಜ್ಝಿತಃ ॥ ೩೮

ಅಹೋ ಏಷ ಮಹಾಸಾರೋ ಧೃತಿಮಾನ್ ಗಿರಿರಾಡಿವ ।
ಮೌನೇನ ಸಾಧಯತ್ಯರ್ಥಂ ಬಕವದ್ ದೃಢನಿಶ್ಚಯಃ ॥ ೩೯

ಇತ್ಯೇಕೇ ವಿಹಸಂತ್ಯೇನಮೇಕೇ ದುರ್ವಾತಯಂತಿ ಚ ।
ತಂ ಬಬಂಧುರ್ನಿರುರುಧುರ್ಯಥಾ ಕ್ರೀಡನಕಂ ದ್ವಿಜಮ್ ॥ ೪೦

ಏವಂ ಸ ಭೌತಿಕಂ ದುಃಖಂ ದೈವಿಕಂ ದೈಹಿಕಂ ಚ ಯತ್ ।
ಭೋಕ್ತವ್ಯಮಾತ್ಮನೋ ದಿಷ್ಟಂ ಪ್ರಾಪ್ತಂ ಪ್ರಾಪ್ತಮಬುಧ್ಯತ ॥ ೪೧

ಪರಿಭೂತ ಇಮಾಂ ಗಾಥಾಮಗಾಯತ ನರಾಧಮೈಃ ।
ಪಾತಯದ್ಭಿಃ ಸ್ವಧರ್ಮಸ್ಥೋ ಧೃತಿಮಾಸ್ಥಾಯ ಸಾತ್ತ್ವಿಕೀಮ್ ॥ ೪೨

"ಇವನು ಡಂಭಾಚಾರಿ, ಮೋಸಗಾರ. ಕೈಯಲ್ಲಿ ಕಾಸಿಲ್ಲದ್ದರಿಂದ ಈ ವೃತ್ತಿಯನ್ನು ಅವಲಂಬಿಸಿದ್ದಾನೆ. ಸ್ವಜನರು ಇವನನ್ನು ದೂರ ಮಾಡಿದ್ದಾರೆ" ಎಂದು ಹಂಗಿಸುತ್ತಿದ್ದರು (೩೭–೩೮). "ಅಬ್ಬಾ! ಈತನು ಮಹಾಬಲಶಾಲಿ! ಪರ್ವತರಾಜನಂತೆ ಧೀರ! ದೃಢನಿಶ್ಚಯಮಾಡಿ ಬಕಪಕ್ಷಿಯಂತೆ ಮೌನವನ್ನು ವಹಿಸಿ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುತ್ತಿದ್ದಾನೆ!" ಎಂದು ಕೆಲವರು ಆ ಭಿಕ್ಷುವನ್ನು ಅಪಹಾಸ್ಯ ಮಾಡುತ್ತಿದ್ದರು. ಅವನ ಮೈಮೇಲೆ ಅಪಾನವಾಯುವನ್ನು ಬಿಡುತ್ತಿದ್ದರು. ಆಟದ ಬೊಂಬೆಯಂತೆ, ಪಂಜರದ ಹಕ್ಕಿಯಂತೆ, ಭಿಕ್ಷುವನ್ನು ಕಟ್ಟಿಹಾಕುತ್ತಿದ್ದರು. ಬಂಧಿಸಿ ಸೆರೆಯಿಡುತ್ತಿದ್ದರು (೩೯–೪೦). ಭಿಕ್ಷುವಾದರೋ ಈ ಪ್ರಕಾರದಲ್ಲಿ ತನಗೊದಗಿದ ದುರ್ಜನಕೃತವಾದ ಭೌತಿಕ ದುಃಖವನ್ನೂ ದೈವಿಕವಾದ ಶೀತೋಷ್ಣಾದಿಗಳನ್ನೂ ದೈಹಿಕವಾದ ಜ್ವರಾದಿ ಪೀಡೆಯನ್ನೂ ನೋಡಿ 'ಇದು ನನಗೆ ದೈವ ಪ್ರಾಪ್ತವಾದದ್ದು. ಅನುಭವಿಸಬೇಕು' ಎಂದು ನಿಶ್ಚಯಿಸಿಕೊಂಡನು (೪೧). ತನ್ನನ್ನು ಧರ್ಮಚ್ಯುತನನ್ನಾಗಿ ಮಾಡಲು ಯತ್ನಿಸುತ್ತಿದ್ದ ಆ ನರಾಧಮರು ಹೀಗೆ ಅವಮಾನ ಮಾಡಿದರೂ ಸಾತ್ತ್ವಿಕವಾದ ಧೀರ ವೃತ್ತಿಯನ್ನು ಅವಲಂಬಿಸಿ ಆ ಭಿಕ್ಷುವು ಸ್ವಧರ್ಮದಲ್ಲಿ ಸ್ಥಿರನಾಗಿ ನಿಂತಿದ್ದನು.

ದ್ವಿಜ ಉವಾಚ—

ನಾಯಂ ಜನೋ ಮೇ ಸುಖದುಃಖಹೇತು-
ರ್ನ ದೇವತಾऽऽತ್ಮಾ ಗ್ರಹಕರ್ಮಕಾಲಾಃ ।
ಮನಃ ಪರಂ ಕಾರಣಮಾಮನಂತಿ
ಸಂಸಾರಚಕ್ರಂ ಪರಿವರ್ತಯೇದ್ ಯತ್ ॥ ೪೩

ಮನೋ ಗುಣಾನ್ ವೈ ಸೃಜತೇ ಬಲೀಯ-
ಸ್ತತಶ್ಚ ಕರ್ಮಾಣಿ ವಿಲಕ್ಷಣಾನಿ ।
ಶುಕ್ಲಾನಿ ಕೃಷ್ಣಾನ್ಯಥ ಲೋಹಿತಾನಿ
ತೇಭ್ಯಃ ಸವರ್ಣಾಃ ಸೃತಯೋ ಭವಂತಿ ॥ ೪೪

ಅನೀಹ ಆತ್ಮಾ ಮನಸಾ ಸಮೀಹತಾ
ಹಿರಣ್ಮಯೋ ಮತ್ಸಖ ಉದ್ವಿಚಷ್ಟೇ ।
ಮನಃ ಸ್ವಲಿಂಗಂ ಪರಿಗೃಹ್ಯ ಕಾಮಾನ್
ಜುಷನ್ ನಿಬದ್ಧೋ ಗುಣಸಂಗತೋऽಸೌ ॥ ೪೫

---

ಭಿಕ್ಷುವು ತನ್ನಲ್ಲಿಯೇ ಈ ಗಾಥೆಯನ್ನು ಹಾಡಿಕೊಂಡನು (೪೨): "ನನ್ನ ಸುಖ ದುಃಖಗಳಿಗೆ ಈ ಜನರು ಕಾರಣರಲ್ಲ. ಯಾವ ದೇವತೆಯೂ ಕಾರಣವಲ್ಲ, ನನ್ನ ಆತ್ಮನೂ ಅಲ್ಲ, ಗ್ರಹವೂ ಅಲ್ಲ, ಕರ್ಮಕಾಲಗಳೂ ಅಲ್ಲ. ಮನಸ್ಸು ಮಾತ್ರವೇ ಸುಖದುಃಖಗಳಿಗೆ ಕಾರಣವೆಂದು ಶಾಸ್ತ್ರಜ್ಞರು ಮತ್ತೆ ಮತ್ತೆ ಹೇಳಿದ್ದಾರೆ. ಈ ಮನಸ್ಸೇ ಸಂಸಾರಚಕ್ರವನ್ನು ಆಡಿಸುತ್ತದೆ! (೪೩). ಪ್ರಬಲವಾದ ಈ ಮನಸ್ಸು ಗುಣಗಳಲ್ಲಿ ಪ್ರವೃತ್ತಿಯನ್ನುಂಟುಮಾಡುತ್ತದೆ. ಗುಣಗಳು ವಿಲಕ್ಷಣವಾದ ಸಾತ್ತ್ವಿಕ, ರಾಜಸ, ತಾಮಸ ಕರ್ಮಗಳನ್ನು ನಡೆಸುತ್ತವೆ. ಆ ಕರ್ಮಗಳಿಂದ ದೇವಮನುಷ್ಯತಿರ್ಯಗಾದಿಗತಿಗಳು ಪ್ರಾಪ್ತವಾಗುತ್ತವೆ (೪೪). ನನ್ನ ಸಖನಾದ ಆತ್ಮನು—ನನಗೆ ನಿಯಂತೃವಾದ ಪರಮಾತ್ಮನು ಪ್ರತ್ಯಕ್ಷಜ್ಞಾನದಿಂದ ಸರ್ವಕ್ಕೂ ಕೇವಲ ಸಾಕ್ಷಿಯಾಗಿದ್ದಾನೆ. ಆತನು ಕ್ರಿಯಾಶೀಲವಾದ ಮನಸ್ಸಿನ ಜೊತೆಗಿದ್ದರೂ ಹಿರಣ್ಮಯನಾಗಿ—ವಿದ್ಯಾಶಕ್ತಿ ಪ್ರಧಾನನಾಗಿ ನಿಷ್ಕ್ರಿಯನಾಗಿಯೇ ಇರುತ್ತಾನೆ. ಈ ನಾನಾದರೋ ನನ್ನಲ್ಲಿ ಸಂಸಾರದರ್ಶಕವಾದ ಮನಸ್ಸನ್ನು 'ಮನಸ್ಸೇ ನಾನು' ಎಂದು ಸ್ವೀಕರಿಸಿ ಮನಸ್ಸಿನ ಗುಣತ್ರಯ ಸಂಬಂಧದಿಂದ ಕಾಮಗಳನ್ನು ಸೇವಿಸುತ್ತ

ದಾನಂ ಸ್ವಧರ್ಮೋ ನಿಯಮೋ ಯಮಶ್ಚ
ಶ್ರುತಂ ಚ ಕರ್ಮಾಣಿ ಚ ಸದ್ವ್ರತಾನಿ ।
ಸರ್ವೇ ಮನೋನಿಗ್ರಹಲಕ್ಷಣಾಂತಾಃ
ಪರೋ ಹಿ ಯೋಗೋ ಮನಸಃ ಸಮಾಧಿಃ ॥ ೪೬

ಸಮಾಹಿತಂ ಯಸ್ಯ ಮನಃ ಪ್ರಶಾಂತಂ
ದಾನಾದಿಭಿಃ ಕಿಂ ವದ ತಸ್ಯ ಕೃತ್ಯಮ್ ।
ಅಸಂಯುತಂ ಯಸ್ಯ ಮನೋ ವಿನಶ್ಯದ್
ದಾನಾದಿಭಿಶ್ಚೇದಪರಂ ಕಿಮೇಭಿಃ ॥ ೪೭

ಮನೋವಶೇಽನ್ಯೇ ಹ್ಯಭವನ್ ಸ್ಮ ದೇವಾ
ಮನಶ್ಚ ನಾನ್ಯಸ್ಯ ವಶಂ ಸಮೇತಿ ।
ಭೀಷ್ಮೋ ಹಿ ದೇವಃ ಸಹಸಃ ಸಹೀಯಾನ್
ಯುಂಜ್ಯಾದ್ ವಶೇ ತಂ ಸ ಹಿ ದೇವದೇವಃ ॥ ೪೮

---

[1]ಸಂಸಾರದಲ್ಲಿ ಬದ್ಧನಾಗಿಬಿಟ್ಟೆನು! (೪೫). ದಾನ, ನಿತ್ಯನೈಮಿತ್ತಿಕಾದಿ ಸ್ವಧರ್ಮಾನುಷ್ಠಾನ, ನಿಯಮ, ಯಮ, ವೇದಾರ್ಥಜ್ಞಾನ, ಏಕಾದಶ್ಯುಪವಾಸವೇ ಮೊದಲಾದ ಕರ್ಮಗಳು—ಇವೆಲ್ಲವೂ ಮನೋನಿಗ್ರಹವೆಂಬ ಫಲದಲ್ಲಿ ಪರ್ಯವಸಾನ ವಾಗತಕ್ಕವು. ಮನೋನಿಗ್ರಹವೇ ಶ್ರೇಷ್ಠವಾದ ಯೋಗ—ಜ್ಞಾನವೆನಿಸುತ್ತದೆ (೪೬). ಯಾವಾತನ ಮನಸ್ಸು ಸಮಾಹಿತವಾಗಿ ಪ್ರಶಾಂತವಾಗಿದೆಯೋ ಆತನಿಗೆ ದಾನಾದಿ ಕರ್ಮಗಳಿಂದ ಆಗಬೇಕಾದ ಕೃತ್ಯವೇನಿದೆ, ಹೇಳು. ಯಾವಾತನ ಮನಸ್ಸು ಸಮಾಹಿತವಾಗದೆ ವಿಕ್ಷಿಪ್ತವಾಗಿರುತ್ತದೆಯೋ ಅಥವಾ ಆಲಸ್ಯದಿಂದ ಲಯಿಸಿ ಹೋಗುತ್ತದೆಯೋ, ಆತನಿಗೆ ದಾನಾದಿಗಳಿಂದ ಆಗುವ ಪ್ರಯೋಜನವಾದರೂ ಏನು? (೪೭). ಇಂದ್ರಿಯಗಳು ಮನಸ್ಸಿಗೆ ಅಧೀನವಾಗಿವೆ. ಮನಸ್ಸು ಮಾತ್ರ ಇನ್ನೊಬ್ಬನಿಗೆ ವಶವಾಗತಕ್ಕದ್ದಲ್ಲ. ಮನಸ್ಸೆಂಬ ದೇವತೆಯು ಭೀಕರವಾದದ್ದು. ಬಲಶಾಲಿಗಳಿಗಿಂತ ಬಲಿಷ್ಠವಾದದ್ದು. ಯಾವಾತನು ಮನಸ್ಸನ್ನು ವಶಕ್ಕೆ ತರು

1. ಅವಿದ್ಯೆಯಿಂದ ಆತ್ಮನಿಗೆ ಸಂಸಾರ, ಸ್ವತಃ ಅಲ್ಲ. ಅವಿದ್ಯಾರಹಿತನಾದ ಈಶ್ವರನಿಗೆ ಸಂಸಾರವಿಲ್ಲ, ಅವಿದ್ಯಾಸಹಿತನಾದ ಜೀವನಿಗೆ ಉಂಟು. ಆದ್ದರಿಂದ ಅವಿದ್ಯೆಯೇ ಸಂಸಾರಕ್ಕೆ ಕಾರಣ—ಎಂದು ತಾತ್ಪರ್ಯ.

ತಂ ದುರ್ಜಯಂ ಶತ್ರುಮಸಹ್ಯವೇಗ-
ಮರುಂತುದಂ ತನ್ನ ವಿಜಿತ್ಯ ಕೇಚಿತ್ ।
ಕುರ್ವಂತ್ಯಸದ್ವಿಗ್ರಹಮತ್ರ ಮರ್ತ್ಯೈ-
ರ್ಮಿತ್ರಾಣ್ಯುದಾಸೀನರಿಪೂನ್ ವಿಮೂಢಾಃ ॥ ೪೯

ದೇಹಂ ಮನೋಮಾತ್ರಮಿಮಂ ಗೃಹೀತ್ವಾ
ಮಮಾಹಮಿತ್ಯಂಧಧಿಯೋ ಮನುಷ್ಯಾಃ ।
ಏಷೋಽಹಮನ್ಯೋಽಯಮಿತಿ ಭ್ರಮೇಣ
ದುರಂತಪಾರೇ ತಮಸಿ ಭ್ರಮಂತಿ ॥ ೫೦

ಜನಸ್ತು ಹೇತುಃ ಸುಖದುಃಖಯೋಶ್ಚೇತ್
ಕಿಮಾತ್ಮನಶ್ಚಾತ್ರ ಹ ಭೌಮಯೋಸ್ತತ್ ।
ಜಿಹ್ವಾಂ ಕ್ವಚಿತ್ ಸಂದಶತಿ ಸ್ವದದ್ಭಿ-
ಸ್ತದ್ವೇದನಾಯಾಂ ಕತಮಾಯ ಕುಪ್ಯೇತ್ ॥ ೫೧

ತ್ತಾನೋ ಅವನು [1]ದೇವದೇವನೇ ಸರಿ (೪೮). ಮನಸ್ಸೆಂಬುದು ಸಹಿಸಲಶಕ್ಯವಾದ ರಾಗದ್ವೇಷಾದಿವೇಗಗಳಿಂದ ಕೂಡಿದ ದುರ್ಜಯವೂ ಮರ್ಮಭೇದಕವೂ ಆದ ಶತ್ರು. ಜನರು ಇಂಥ ಶತ್ರುವನ್ನು ಜಯಿಸದೆ ಮಾನವರೊಡನೆ ಶುಷ್ಕಯುದ್ಧಕ್ಕೆಳಿಯುತ್ತಾರೆ. ಅವರಲ್ಲಿ ಇವನು ಮಿತ್ರ, ಇವನು ಶತ್ರು, ಇವನು ತಟಸ್ಥ—ಎಂದು ವಿಭಾಗಮಾಡಲೆಳೆಸುತ್ತಾರೆ. ಇವರೆಲ್ಲರೂ ಮೂಢರು (೪೯). ಕೇವಲ ಮನಃಕಲ್ಪಿತವಾದ ದೇಹವನ್ನು ನೋಡಿ 'ಇದು ನಾನು' ಎಂಬುದಾಗಿಯೂ ಪುತ್ರಾದಿದೇಹವನ್ನು ನೋಡಿ 'ಇದು ನನ್ನದು' ಎಂಬುದಾಗಿಯೂ ಭ್ರಮಿಸಿ, ಕುರುಡುಬುದ್ಧಿಯ ಈ ಮನುಷ್ಯರು 'ಇವನು ನಾನು, ಅವನು ಅನ್ಯ' ಎಂದು ಭ್ರಾಂತಿಪಡುತ್ತ ದುರಂತವಾದ ಸಂಸಾರದಲ್ಲಿ ಅಲೆಯುತ್ತಿದ್ದಾರೆ (೫೦). ದುಃಖಗಳಿಗೆ ಜನರು ಕಾರಣ (ಮನಸ್ಸು ಕಾರಣವಲ್ಲ)—ಎಂದು ಹೇಳುವ ಪಕ್ಷದಲ್ಲಿ ಆತ್ಮನಿಗೆ, ಆದರಿಂದೇನಾಗುತ್ತದೆ? ಪೃಥಿವೀವಿಕಾರಗಳಾದ (ಜಗಳವಾಡುವ)

1. ಮನಸೋ ವಶೇ ಸರ್ವಮಿದಂ ಬಭೂವ ನಾನ್ಯಸ್ಯ ಮನೋ ವಶಮನ್ವಿಯಾಯ । ಭೀಷ್ಮೋ ಹಿ ದೇವಃ ಸಹಸಃ ಸಹೀಯಾನ್ ॥ —ಶ್ರುತಿ (ಶ್ರೀಧರೀಯದಲ್ಲಿ ಉದ್ಧೃತ)

ದುಃಖಸ್ಯ ಹೇತುರ್ಯದಿ ದೇವತಾಸ್ತು
ಕಿಮಾತ್ಮನಸ್ತತ್ರ ವಿಕಾರಯೋಸ್ತತ್ ।
ಯದಂಗಮಂಗೇನ ನಿಹನ್ಯತೇ ಕ್ವಚಿತ್
ಕ್ರುಧ್ಯೇತ ಕಸ್ಮೈ ಪುರುಷಃ ಸ್ವದೇಹೇ ॥ ೫೨

ಆತ್ಮಾ ಯದಿ ಸ್ಯಾತ್ ಸುಖದುಃಖಹೇತುಃ
ಕಿಮನ್ಯತಸ್ತತ್ರ ನಿಜಸ್ವಭಾವಃ ।
ನ ಹ್ಯಾತ್ಮನೋಽನ್ಯದ್ ಯದಿ ತನ್ಮೃಷಾ ಸ್ಯಾತ್
ಕ್ರುಧ್ಯೇತ ಕಸ್ಮಾನ್ನ ಸುಖಂ ನ ದುಃಖಮ್ ॥ ೫೩

---

ಎರಡು ದೇಹಗಳಿಗೆ ದುಃಖವಾಗುತ್ತದೆಯಲ್ಲವೆ? (ಅಮೂರ್ತನೂ ಅಕ್ರಿಯನೂ ಆದ ಆತ್ಮನು ಹನನಾದಿಗಳಿಗೆ ಕರ್ತೃವೂ ಅಲ್ಲ ಕರ್ಮವೂ ಅಲ್ಲ) ಒಂದುವೇಳೆ ದುಃಖವು ಆತ್ಮನಿಗಾಗುತ್ತದೆಯೆಂದು ಹೇಳುವುದಾದರೂ ಯಾರ ಮೇಲೆ ಯಾರು ಕೋಪಿಸಬೇಕು? (ಆತ್ಮನು ಒಬ್ಬನೇ ಆಗಿದ್ದಾನೆ). ತನ್ನ ಹಲ್ಲುಗಳಿಂದ ತನ್ನ ನಾಲಿಗೆಯನ್ನು ಕಚ್ಚಿಕೊಂಡಾಗ ವೇದನೆಯಾದರೆ ಯಾರ ಮೇಲೆ ಯಾರು ಕೋಪಿಸಿಕೊಳ್ಳಬೇಕು! (೫೧). ದುಃಖಕ್ಕೆ ಹೇತುವಾದದ್ದು ದೇವತೆ—ಎಂದು ಹೇಳುವ ಪಕ್ಷದಲ್ಲಿಯೂ ಅದರಿಂದ ಆತ್ಮನಿಗೇನಾಗುತ್ತದೆ? ಒಬ್ಬನ ಅಂಗದಿಂದ ಇನ್ನೊಬ್ಬನ ಅಂಗವು ಹೊಡೆಯಲ್ಪಟ್ಟಾಗ, ವಿಕಾರಗೊಳ್ಳುವ ಅಂಗಗಳಿಗೆ ಅಧಿಷ್ಠಾತೃದೇವತೆಗಳಾದ ಇಂದ್ರಾದಿಗಳಿಗಲ್ಲವೆ ಪೆಟ್ಟಾಗುತ್ತದೆ? (ಎಲ್ಲರ ಅಂಗಗಳಿಗೂ ಅಧಿಷ್ಠಾತೃವಾದ ದೇವತೆ ಒಬ್ಬನೇ). ತನ್ನ ಕೈಕಾಲುಗಳೇ ಅನ್ಯೋನ್ಯವಾಗಿ ತಾಗಿ ಪೆಟ್ಟಾದಾಗ ಯಾರ ಮೇಲೆ ಸಿಟ್ಟಾಗುವುದು? (೫೨). ಸುಖದುಃಖಗಳಿಗೆ ಆತ್ಮನೇ ಕಾರಣವೆನ್ನುವುದಾದರೆ, ಬೇರೆಯವರಿಂದ ಏನಾಯಿತು? (ಬೇರೆಯವರಿಂದ ಏನೂ ಆಗಲಿಲ್ಲವೆಂದಮೇಲೆ ಯಾರನ್ನುದ್ದೇಶಿಸಿ ಕೋಪಗೊಳ್ಳುವುದು?) ಆ ಪಕ್ಷದಲ್ಲಿ ಸುಖದುಃಖಗಳು ಆತ್ಮನ ಸ್ವಭಾವವೆಂದು ಹೇಳಿದಂತಾಗುತ್ತದೆ. ಹಾಗಲ್ಲದೆ ಇನ್ನೊಂದರಿಂದ ಆತ್ಮನಿಗೆ ಸುಖದುಃಖಗಳಾಗುತ್ತವೆಯೆನ್ನುವುದಾದರೆ ಅದು ಸುಳ್ಳು. ಏಕೆಂದರೆ, ಆತ್ಮವ್ಯತಿರಿಕ್ತವಾದದ್ದು ಇಲ್ಲವೇ ಇಲ್ಲ. ಆದ್ದರಿಂದ ಕೋಪಕ್ಕೆ ನಿಮಿತ್ತವೇನು? ಏವಂಚ ಆತ್ಮನ ಸುಖದುಃಖಗಳಿಗೆ ನಿಮಿತ್ತವಿಲ್ಲದ ಮೇಲೆ

ಗ್ರಹಾ ನಿಮಿತ್ತಂ ಸುಖದುಃಖಯೋಶ್ಚೇತ್
ಕಿಮಾತ್ಮನೋಽಜಸ್ಯ ಜನಸ್ಯ ತೇ ವೈ ।
ಗ್ರಹೈರ್ಗ್ರಹಸ್ಯೈವ ವದಂತಿ ಪೀಡಾಂ
ಕ್ರುಧ್ಯೇತ ಕಸ್ಮೈ ಪುರುಷಸ್ತತೋಽನ್ಯಃ ॥ ೫೪

ಕರ್ಮಾಸ್ತು ಹೇತುಃ ಸುಖದುಃಖಯೋಶ್ಚೇತ್
ಕಿಮಾತ್ಮನಸ್ತದ್ಧಿ ಜಡಾಜಡತ್ವೇ ।
ದೇಹಸ್ತ್ವಚಿತ್ ಪುರುಷೋಽಯಂ ಸುಪರ್ಣಃ
ಕ್ರುಧ್ಯೇತ ಕಸ್ಮೈ ನ ಹಿ ಕರ್ಮ ಮೂಲಮ್ ॥ ೫೫

ಕಾಲಸ್ತು ಹೇತುಃ ಸುಖದುಃಖಯೋಶ್ಚೇತ್
ಕಿಮಾತ್ಮನಸ್ತತ್ರ ತದಾತ್ಮಕೋಽಸೌ ।

---

ಆತ್ಮನಿಗೆ ಸುಖವೂ ಇಲ್ಲ ದುಃಖವೂ ಇಲ್ಲ! (೫೩). ಸೂರ್ಯಾದಿಗ್ರಹಗಳು ಸುಖದುಃಖಗಳಿಗೆ ಕಾರಣವೆನ್ನುವುದಾದರೆ, ಜನ್ಮರಹಿತನಾದ ಆತ್ಮನಿಗೆ ಗ್ರಹಗಳಿಂದ ಏನಾಗುವುದು? ಆಯಾ ಲಗ್ನದಲ್ಲಿ ಹುಟ್ಟಿದ ದೇಹಕ್ಕಲ್ಲವೆ ಸುಖದುಃಖಗಳು? ಮತ್ತು ಗ್ರಹಗಳಿಂದ ಗ್ರಹಕ್ಕೇ ಪೀಡೆಯೆಂದು [1]ದೈವಜ್ಞರು ಹೇಳುತ್ತಾರೆ. ಪೀಡೆಯೂ ಮನುಷ್ಯನಿಗಲ್ಲ. ಹೀಗಿರುವಾಗ ಗ್ರಹವೂ ದೇಹವೂ ಅಲ್ಲದ ಪುರುಷನು ಯಾರ ಮೇಲೆ ಸಿಟ್ಟಾಗಬೇಕು? (೫೪). ಸುಖದುಃಖಗಳಿಗೆ ಕರ್ಮವು ಕಾರಣವಾಗಲಿ— ಎನ್ನುವುದಾದರೆ, ಅದರಿಂದ ಆತ್ಮನಿಗೆ ಏನಾದೀತು? ಒಂದು ವಸ್ತು ಜಡವೂ ಚೇತನವೂ ಎಂದು ಸಂಮಿಶ್ರವಾಗಿದ್ದರಲ್ಲವೆ ಕರ್ಮ ಹುಟ್ಟುತ್ತದೆ! ದೇಹವಾದರೋ ಚೇತನವಲ್ಲದ ಕೇವಲ ಜಡವಾಗಿದೆ. ಆತ್ಮನಾದರೋ ಜ್ಞಾನಸ್ವರೂಪನಾಗಿ ಕೇವಲ ಚೇತನನಾಗಿದ್ದಾನೆ. ಯಾರಮೇಲೆ ಕೋಪಿಸಬೇಕು? ಅದಕ್ಕೆ ಮೂಲವಾದ ಕರ್ಮವೇ ಆತ್ಮನಿಗೆ [2]ಇಲ್ಲವಲ್ಲ! (೫೫). ಇನ್ನು ಸುಖದುಃಖಗಳಿಗೆ ಕಾಲವು ಕಾರಣ

---

1. ಶತ್ರುತ್ವ ಮಿತ್ರತ್ವಾದಿಗಳು ಪರಸ್ಪರ ಗ್ರಹಗಳಿಗೇ ಹೊರತು ಗ್ರಹಗಳಿಗೂ ಮನುಷ್ಯನಿಗೂ ಅಲ್ಲ. ಅರ್ಧದೃಷ್ಟಿ, ಪಾದದೃಷ್ಟಿ—ಮೊದಲಾದದ್ದು ಸಹ ಅಂತರಿಕ್ಷದಲ್ಲಿರುವ ಗ್ರಹಗಳಿಗೆ ಮತ್ತು ಆಯಾ ಲಗ್ನಗಳಿಗೆ. ಆ ಲಗ್ನದಲ್ಲಿ ಹುಟ್ಟಿದ ದೇಹಕ್ಕೆ ಗ್ರಹಾಭಿಮಾನದಿಂದ ಸುಖದುಃಖಗಳಾಗಬಹುದು. ಆತ್ಮನು ಗ್ರಹವೂ ಅಲ್ಲ, ದೇಹವೂ ಅಲ್ಲ.

2. ಅನುಬಂಧವನ್ನು ನೋಡಿ—.೫

ನಾಗ್ನೇರ್ಹಿ ತಾಪೋ ನ ಹಿಮಸ್ಯ ತತ್ ಸ್ಯಾತ್
ಕ್ರುಧ್ಯೇತ ಕಸ್ಮೈ ನ ಪರಸ್ಯ ದ್ವಂದ್ವಮ್ ॥ ೫೬

ನ ಕೇನಚಿತ್ ಕ್ವಾಪಿ ಕಥಂಚನಾಸ್ಯ
ದ್ವಂದ್ವೋಪರಾಗಃ ಪರತಃ ಪರಸ್ಯ ।
ಯಥಾಹಮಃ ಸಂಸೃತಿರೂಪಿಣಃ ಸ್ಯಾ-
ದೇವಂ ಪ್ರಬುದ್ಧೋ ನ ಬಿಭೇತಿ ಭೂತೈಃ ॥ ೫೭

ಏತಾಂ ಸ ಆಸ್ಥಾಯ ಪರಾತ್ಮನಿಷ್ಠಾ-
ಮಧ್ಯಾಸಿತಾಂ ಪೂರ್ವತಮೈರ್ಮಹರ್ಷಿಭಿಃ ।
ಅಹಂ ತರಿಷ್ಯಾಮಿ ದುರಂತಪಾರಂ
ತಮೋ ಮುಕುಂದಾಂಘ್ರಿನಿಷೇವಯೈವ ॥ ೫೮

ವೆನ್ನುವುದಾದರೆ, ಅದರಿಂದ ಆತ್ಮನಿಗೇನಾಗುತ್ತದೆ? ಈ ಆತ್ಮನು [1]ಕಾಲಾತ್ಮಕನೇ ಆಗಿದ್ದಾನಲ್ಲವೆ? (ತನ್ನಿಂದ ತನ್ನ ಅಂಶಕ್ಕೆ ಪೀಡೆಯಾಗದು). ಅಗ್ನಿಯು ತನ್ನ ಅಂಶವಾದ ಜ್ವಾಲೆಯನ್ನು ಸುಟ್ಟುಹಾಕುವುದಿಲ್ಲ. ಹಿಮವು ತನ್ನ ಅಂಶವಾದ ತುಂತುರುಹನಿಯಲ್ಲಿ ಶೈತ್ಯವನ್ನು ಹೆಚ್ಚಿಸುವುದಿಲ್ಲ. ಇಷ್ಟಾಗಿ ಸುಖದುಃಖಗಳೆಂಬ ದ್ವಂದ್ವವು ಆತ್ಮನಿಗೆ ಇಲ್ಲವೇ ಇಲ್ಲ (೫೬). ಆದ್ದರಿಂದ ಆತ್ಮನಿಗೆ ಸುಖದುಃಖ ಗಳೆಂಬ ದ್ವಂದ್ವದ ಸಂಬಂಧವು ಯಾವ ರೀತಿಯಲ್ಲಿಯೂ ಎಂದಿಗೂ ಇನ್ನೊಬ್ಬರಿಂದ ಆಗತಕ್ಕದ್ದೇ ಅಲ್ಲ. ಸಂಸಾರವನ್ನು ರೂಪಿಸತಕ್ಕ ಯಾವ ಅಹಂಕಾರ ಉಂಟೋ ಅದಕ್ಕೆ ಮಾತ್ರ ಈ ದ್ವಂದ್ವಗಳ ಸಂಬಂಧವಿರುತ್ತದೆ. ಈ ರೀತಿಯಲ್ಲಿ ಯಾವನು ತಿಳಿದುಕೊಂಡಿದ್ದಾನೋ ಅವನು ಯಾವ ಪ್ರಾಣಿಗಳಿಗೂ ಹೆದರುವುದಿಲ್ಲ (೫೭). ಪ್ರಾಚೀನ ಮಹರ್ಷಿಗಳು ಆದರದಿಂದ ಪಾಲಿಸುತ್ತಿದ್ದ ಈ ಪರಮಾತ್ಮನಿಷ್ಠೆಯನ್ನು ನಾನೂ ಅವಲಂಬಿಸಿ, ಅಪಾರವಾದ ಈ ಸಂಸಾರವನ್ನು ದಾಟುವೆನು. ಈ ನಿಷ್ಠೆಯು ಮುಕುಂದನ ಪಾದಸೇವೆಯಿಂದಲೇ ಲಭಿಸತಕ್ಕದ್ದು". ಈ ಪ್ರಕಾರವಾಗಿ

1. ಕಾಲವು ಈಶ್ವರನೇ. ಜೀವನು ಈಶ್ವರಾಂಶ.

ಶ್ರೀ ಭಗವಾನುವಾಚ—

ನಿರ್ವಿದ್ಯ ನಷ್ಟದ್ರವಿಣೋ ಗತಕ್ಲಮಃ
ಪ್ರವ್ರಜ್ಯ ಗಾಂ ಪರ್ಯಟಮಾನ ಇತ್ಥಮ್ ।
ನಿರಾಕೃತೋಽಸದ್ಭಿರಪಿ ಸ್ವಧರ್ಮಾ-
ದಕಂಪಿತೋಽಮೂಂ ಮುನಿರಾಹ ಗಾಥಾಮ್ ॥ ೫೯

ಸುಖದುಃಖಪ್ರದೋ ನಾನ್ಯಃ ಪುರುಷಸ್ಯಾತ್ಮವಿಭ್ರಮಃ ।
ಮಿತ್ರೋದಾಸೀನರಿಪವಃ ಸಂಸಾರಸ್ತಮಸಃ ಕೃತಃ ॥ ೬೦

ತಸ್ಮಾತ್ ಸರ್ವಾತ್ಮನಾ ತಾತ ನಿಗೃಹಾಣ ಮನೋ ಧಿಯಾ ।
ಮಯ್ಯಾವೇಶಿತಯಾ ಯುಕ್ತ ಏತಾವಾನ್ ಯೋಗಸಂಗ್ರಹಃ ॥ ೬೧

ಯ ಏತಾಂ ಭಿಕ್ಷುಣಾ ಗೀತಾಂ ಬ್ರಹ್ಮನಿಷ್ಠಾಂ ಸಮಾಹಿತಃ ।
ಧಾರಯನ್ ಶ್ರಾವಯನ್ ಶೃಣ್ವನ್ ದ್ವಂದ್ವೈರ್ನೈವಾಭಿಭೂಯತೇ ॥ ೬೨

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ತ್ರಯೋವಿಂಶಾಧ್ಯಾಯಃ

---

ಭಿಕ್ಷುವು ಗಾಥೆಯನ್ನು ಹಾಡಿದನು (೫೮). ಐಶ್ವರ್ಯವನ್ನು ಕಳೆದುಕೊಂಡ ಮೇಲೆ ಆ ಬ್ರಾಹ್ಮಣನು ವಿರಕ್ತನಾಗಿ ಸಂನ್ಯಾಸವನ್ನು ಸ್ವೀಕರಿಸಿ ಶ್ರಮವನ್ನೆಣಿಸದೆ ಅಲೆದಾಡುತ್ತಿದ್ದನು. ದುರ್ಜನರು ತನ್ನನ್ನು ನಿಂದಿಸಿ ತಿರಸ್ಕರಿಸಿದರೂ ಸಹ ಸ್ವಧರ್ಮದಿಂದ ಅಲ್ಲಾಡದೆ ಆ ಮುನಿಯು ಈ ಗಾಥೆಯನ್ನು ಹೇಳಿಕೊಂಡನು (೫೯). ಉದ್ಧವ, ಆತ್ಮನಿಗೆ ಸುಖದುಃಖಗಳನ್ನು ಕೊಡತಕ್ಕ ಅನ್ಯವಸ್ತುವಿಲ್ಲ. ತನಗೆ ಸುಖದುಃಖಗಳಿವೆಯೆನ್ನುವುದು ಮನಸ್ಸಿನ ಭ್ರಮೆ ಮಿತ್ರ, ಉದಾಸೀನ, ಶತ್ರು—ಇತ್ಯಾದಿ ರೂಪವಾದ ಸಂಸಾರವು ಅಜ್ಞಾನದಿಂದ ಉಂಟಾದದ್ದು (೬೦). ಆದ್ದರಿಂದ, ಸೌಮ್ಯ-ಉದ್ಧವ, ಸರ್ವಪ್ರಯತ್ನವನ್ನು ಮಾಡಿ ವಿವೇಕಬುದ್ಧಿಯಿಂದ ಮನಸ್ಸನ್ನು ನಿಗ್ರಹಿಸು. ಬುದ್ಧಿಯನ್ನು ಸದಾ ನನ್ನ ಧ್ಯಾನದಲ್ಲಿ ನಿಲ್ಲಿಸು. ಸಂಕ್ಷೇಪವಾಗಿ ಜ್ಞಾನಪ್ರಕರಣವು ಇಷ್ಟೇ ಆಗಿರುತ್ತದೆ. ಯಾವಾತನು ಸಮಾಹಿತನಾಗಿ ಬ್ರಹ್ಮನಿಷ್ಠಾರೂಪವಾದ ಈ ಭಿಕ್ಷುಗೀತವನ್ನು ಕೇಳುತ್ತಾನೋ, ಇನ್ನೊಬ್ಬರಿಗೆ ಬೋಧಿಸುತ್ತಾನೋ, ತನ್ನ ಹೃದಯದಲ್ಲಿ ಧರಿಸಿರುತ್ತಾನೋ ಆತನನ್ನು ಸುಖ ದುಃಖಾದಿ ದ್ವಂದ್ವಗಳು ಬಾಧಿಸುವುದಿಲ್ಲ" ಎಂದನು (೬೧–೬೨).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಇಪ್ಪತ್ತುಮೂರನೆಯ ಅಧ್ಯಾಯ

## ಚತುರ್ವಿಂಶಾಧ್ಯಾಯಃ

ಶ್ರೀ ಭಗವಾನುವಾಚ—

ಅಥ ತೇ ಸಂಪ್ರವಕ್ಷ್ಯಾಮಿ ಸಾಂಖ್ಯಂ ಪೂರ್ವೈರ್ವಿನಿಶ್ಚಿತಮ್ ।
ಯದ್ವಿಜ್ಞಾಯ ಪುಮಾನ್‌ಸದ್ಯೋ ಜಹ್ಯಾದ್ ವೈಕಲ್ಪಿಕಂ ಭ್ರಮಮ್ ॥ ೧

ಆಸೀಜ್ಞಾನಮಥೋ ಹ್ಯರ್ಥ ಏಕಮೇವಾವಿಕಲ್ಪಿತಮ್ ।
ಯದಾ ವಿವೇಕನಿಪುಣಾ ಆದೌ ಕೃತಯುಗೇಽಯುಗೇ ॥ ೨

ತನ್ಮಾಯಾಫಲರೂಪೇಣ ಕೇವಲಂ ನಿರ್ವಿಕಲ್ಪಿತಮ್ ।
ವಾಙ್ಮನೋಽಗೋಚರಂ ಸತ್ಯಂ ದ್ವಿಧಾ ಸಮಭವದ್ಬೃಹತ್ ॥ ೩

### ಅಧ್ಯಾಯ ೨೪

ಸಾಂಖ್ಯಯೋಗದಿಂದ ಮೋಹನಿವಾರಣೆ. ಆತ್ಮನೊಬ್ಬನೇ ಸತ್ಯ, ಉಳಿದವುಗಳೆಲ್ಲ ಮಿಥ್ಯೆಯೆಂದು ಪ್ರತಿಪಾದನೆ.

ಮತ್ತೆ ಭಗವಂತನು ಹೇಳಿದನು : “ ಉದ್ಧವ, ಇನ್ನು ನಿನಗೆ ಪೂರ್ವಮಹರ್ಷಿಗಳಿಂದ ನಿರ್ಣಯಿಸಲ್ಪಟ್ಟ ಸಾಂಖ್ಯವೆಂಬ ಜ್ಞಾನಯೋಗವನ್ನು ಹೇಳುವೆನು. ಇದನ್ನರಿತರೆ ಮನುಷ್ಯನು ಭೇದನಿಮಿತ್ತವಾದ ಭ್ರಮೆಯನ್ನು ಹೋಗಲಾಡಿಸಿ ಕೊಳ್ಳುವನು (೧). ದ್ರಷ್ಟೃವೂ ದೃಶ್ಯವಾದ ವಸ್ತುವೂ ಭೇದಶೂನ್ಯವಾದ ಒಂದೇ ಪದಾರ್ಥವಾಗಿದೆ. ಸೃಷ್ಟಿಯ ಆದಿಕಾಲದ ಕೃತಯುಗದಲ್ಲಾಗಲಿ, ವಿವೇಕನಿಪುಣರಾದ ಜ್ಞಾನಿಗಳಿರುವ ಯಾವ ಸಮಯದಲ್ಲಾಗಲಿ, ಪ್ರಳಯಕಾಲದಲ್ಲಾಗಲಿ ಇರತಕ್ಕದ್ದು ದ್ವೈತರಹಿತವಾದ ಒಂದೇ ವಸ್ತು (೨). ಏಕವೂ ನಿರ್ವಿಶೇಷವೂ ಸತ್ಯವೂ ಆದ ಆ ಪರಬ್ರಹ್ಮವು ಮಾಯಾಸಂಬಂಧದಿಂದ ಅದರ ಫಲರೂಪವಾಗಿ ವಾಙ್ಮನಸ್ಸುಗಳಿಗೆ ಗೋಚರವಾಗುವಂತೆ ಎರಡು ವಿಧವಾಯಿತು. ಆ ಎರಡು ವಿಧಗಳಲ್ಲಿ ಪ್ರಕೃತಿ ಎಂಬುದು ಒಂದು. ಇದು (ಮಹತ್ತು, ಅಹಂಕಾರಾದಿ ರೂಪಗಳಿಂದ) ಕಾರ್ಯಕಾರಣರೂಪವನ್ನು ತಳೆದಿದೆ. (ಈ ಪ್ರಕೃತಿಯು ದೃಶ್ಯವಾದದ್ದು) ಇದನ್ನು ನೋಡುವ ಜ್ಞಾನಸ್ವರೂಪನಾದ ದ್ರಷ್ಟಾರನು ಪರಬ್ರಹ್ಮದ ಇನ್ನೊಂದು

ತಯೋರೇಕತರೋ ಹ್ಯರ್ಥಃ ಪ್ರಕೃತಿಃ ಸೋಭಯಾತ್ಮಿಕಾ ।
ಜ್ಞಾನಂ ತ್ವನ್ಯತಮೋ ಭಾವಃ ಪುರುಷಃ ಸೋಽಭಿಧೀಯತೇ ॥ ೪

ತಮೋ ರಜಃ ಸತ್ತ್ವಮಿತಿ ಪ್ರಕೃತೇರಭವನ್ ಗುಣಾಃ ।
ಮಯಾ ಪ್ರಕ್ಷೋಭ್ಯಮಾಣಾಯಾಃ ಪುರುಷಾನುಮತೇನ ಚ ॥ ೫

ತೇಭ್ಯಃ ಸಮಭವತ್ ಸೂತ್ರಂ ಮಹಾನ್ ಸೂತ್ರೇಣ ಸಂಯುತಃ ।
ತತೋ ವಿಕುರ್ವತೋ ಜಾತೋಽಹಂಕಾರೋ ಯೋ ವಿಮೋಹನಃ ॥ ೬

ವೈಕಾರಿಕಸ್ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿವೃತ್ ।
ತನ್ಮಾತ್ರೇಂದ್ರಿಯಮನಸಾಂ ಕಾರಣಂ ಚಿದಚಿನ್ಮಯಃ ॥ ೭

---

ವಿಧ. ಈ ದ್ರಷ್ಟಾರನಿಗೆ [1]ಪುರುಷನೆಂದು ಹೆಸರು (೩–೪) ಜೀವರಾದ ಪುರುಷರ ಅದೃಷ್ಟನಿಮಿತ್ತದಿಂದ ನಾನು ಪ್ರಕ್ಷೋಭೆಗೊಳಿಸಲಾಗಿ ಪ್ರಕೃತಿಯಿಂದ ಸತ್ತ್ವ ರಜಸ್ತಮೋಗುಣಗಳು ಉದಿಸಿದವು. ಅವುಗಳಿಂದ (ಕ್ರಿಯಾಶಕ್ತಿ ಪ್ರಧಾನವಾದ) ಸೂತ್ರವು ಹುಟ್ಟಿತು. (ಜ್ಞಾನಶಕ್ತಿಪ್ರಧಾನವಾದ) ಮಹತ್ತು ಸೂತ್ರದೊಡನೆ ಸೇರಿಕೊಂಡಿದೆ, [2]ಬೇರೆಯಲ್ಲ. ಅನಂತರ ಕ್ಷೋಭೆಗೊಂಡ ಸೂತ್ರದಿಂದ—ಮಹತ್ತತ್ತ್ವದಿಂದ ಅಹಂಕಾರವು ಹುಟ್ಟಿತು. ಇದು ಜೀವರಿಗೆ ಚಿತ್ತಭ್ರಮೆಯನ್ನುಂಟು ಮಾಡತಕ್ಕದ್ದು (೫–೬). ಸಾತ್ತ್ವಿಕ, ರಾಜಸ, ತಾಮಸ—ಎಂದು ಮೂರು ವಿಧವಾದ ಅಹಂಕಾರತತ್ತ್ವವು ಪಂಚತನ್ಮಾತ್ರೆಗಳಿಗೂ ಇಂದ್ರಿಯಗಳಿಗೂ ಮನಸ್ಸಿಗೂ (ಆಯಾ ಅಭಿಮಾನಿ ದೇವತೆಗಳಿಗೂ) ಕಾರಣವಾಗಿದೆ. ಅಹಂಕಾರವು (ಚಿದಾಭಾಸ ವ್ಯಾಪ್ತವಾದ್ದರಿಂದ ಉಭಯಗ್ರಂಥಿರೂಪವಾಗಿ) [3]ಚಿದಚಿನ್ಮಯವಾಗಿದೆ (೭).

---

1. ಪುರುಷ, ಪ್ರಕೃತಿ—ಎಂಬ ಎರಡು ಮೂಲ ತತ್ತ್ವಗಳನ್ನು ಕಾಪಿಲಸಾಂಖ್ಯರು ಒಪ್ಪಿದ್ದಾರೆ. ಪುರುಷನು ದ್ರಷ್ಟೃ, ಪ್ರಕೃತಿಯು ದೃಶ್ಯ. ಇವೆರಡಕ್ಕೂ ಮೂಲವಾದ ಪರಬ್ರಹ್ಮವೆಂಬ ಒಂದೇ ತತ್ತ್ವವಿದೆಯೆಂಬ ವೇದಾಂತಿಗಳ ಸಿದ್ಧಾಂತವನ್ನು ಇಲ್ಲಿ ವಿವರಿಸಿದ್ದಾರೆ.

2. ಒಂದೇ ತತ್ತ್ವವು ಕ್ರಿಯಾಶಕ್ತಿ ಪ್ರಧಾನವಾದಾಗ ಸೂತ್ರವೆಂದೂ ಜ್ಞಾನಶಕ್ತಿ ಪ್ರಧಾನವಾದಾಗ ಮಹತ್ತೆಂದೂ ಹೇಳಲ್ಪಡುತ್ತದೆ. ಇವು ಬೇರೆಬೇರೆ ತತ್ತ್ವಗಳಲ್ಲ.

3. ಅನುಬಂಧವನ್ನು ನೋಡಿ—೬.

ಅರ್ಥಸ್ತನ್ಮಾತ್ರಿಕಾಜ್ಜಜ್ಞೇ ತಾಮಸಾದಿಂದ್ರಿಯಾಣಿ ಚ ।
ತೈಜಸಾದ್ ದೇವತಾ ಆಸನ್ನೇಕಾದಶ ಚ ವೈಕೃತಾತ್ ॥ ೮

ಮಯಾ ಸಂಚೋದಿತಾ ಭಾವಾಃ ಸರ್ವೇ ಸಂಹತ್ಯಕಾರಿಣಃ ।
ಅಂಡಮುತ್ಪಾದಯಾಮಾಸುರ್ಮಮಾಯತನಮುತ್ತಮಮ್ ॥ ೯

ತಸ್ಮಿನ್ನಹಂ ಸಮಭವಮಂಡೇ ಸಲಿಲಸಂಸ್ಥಿತೌ ।
ಮಮ ನಾಭ್ಯಾಮಭೂತ್ ಪದ್ಮಂ ವಿಶ್ವಾಖ್ಯಂ ತತ್ರ ಚಾತ್ಮಭೂಃ ॥ ೧೦

ಸೋಽಸೃಜತ್ತಪಸಾ ಯುಕ್ತೋ ರಜಸಾ ಮದನುಗ್ರಹಾತ್ ।
ಲೋಕಾನ್ ಸಪಾಲಾನ್ ವಿಶ್ವಾತ್ಮಾ ಭೂರ್ಭುವಃ ಸ್ವರಿತಿ ತ್ರಿಧಾ ॥ ೧೧

---

(ಅಹಂಕಾರದಿಂದ ಹುಟ್ಟಿದ) ಪಂಚತನ್ಮಾತ್ರೆಗಳ ತಾಮಸಾಂಶದಿಂದ ಪಂಚಮಹಾಭೂತಗಳೆಂಬ ಪದಾರ್ಥಗಳು ಉದಿಸಿದವು. ತನ್ಮಾತ್ರೆಗಳ ತೈಜಸಾಂಶದಿಂದ ದಶೇಂದ್ರಿಯಗಳು ಹುಟ್ಟಿದವು. ಆ ತನ್ಮಾತ್ರೆಗಳ ವೈಕೃತವಾದ ಸಾತ್ತ್ವಿಕಾಂಶದಿಂದ ಇಂದ್ರಿಯಾಭಿಮಾನಿಗಳಾದ [1]ಹನ್ನೊಂದು ದೇವತೆಗಳೂ (ಮನಸ್ಸೂ) ಹುಟ್ಟಿದವು (೮). ನನ್ನಿಂದ ಪ್ರೇರಿತವಾದ ಈ ಎಲ್ಲ ಪದಾರ್ಥಗಳೂ ಒಟ್ಟಿಗೆ ಸೇರಿ ವಿರಾಡಂತರ್ಯಾಮಿಯಾದ ನನಗೆ ಬ್ರಹ್ಮಾಂಡವೆಂಬ ಉತ್ತಮವಾದ ಗೃಹವನ್ನು ನಿರ್ಮಿಸಿಕೊಟ್ಟವು! ಜಲಮಧ್ಯದಲ್ಲಿದ್ದ ಅಂಡದಲ್ಲಿ ನಾನು ಶ್ರೀಮನ್ನಾರಾಯಣರೂಪದಿಂದ ಪ್ರಕಟವಾದೆನು. ನನ್ನ ನಾಭಿಯಲ್ಲಿ ಲೋಕಕಾರಣವಾದ ವಿಶ್ವವೆಂಬ ಪದ್ಮವಿತ್ತು. ಅದರಲ್ಲಿ ಸ್ವಯಂಭುವಾದ [2]ಬ್ರಹ್ಮನು ಆವಿರ್ಭವಿಸಿದನು (೯–೧೦). ಆ ಬ್ರಹ್ಮನು ರಜೋಗುಣಯುಕ್ತನಾಗಿ ನನ್ನ ಅನುಗ್ರಹದಿಂದ ತಪಸ್ಸಿನ ಮೂಲಕ ಎಲ್ಲ ಲೋಕಗಳನ್ನೂ ಲೋಕಪಾಲರನ್ನೂ ಸೃಜಿಸಿದನು. ಆ ವಿಶ್ವಾತ್ಮನು ಸೃಜಿಸಿದ ಲೋಕಗಳು ಭೂಲೋಕ, ಭುವರ್ಲೋಕ, ಸುವರ್ಲೋಕ—ಎಂದು ಮೂರು ವಿಧ (ಭೂಲೋಕದಲ್ಲಿ ಪಾತಾಳಾದಿಗಳನ್ನೂ ಸುವರ್ಲೋಕದಲ್ಲಿ ಮಹರ್ಲೋಕಾದಿ

---

1. ದಿಕ್, ವಾಯು, ಸೂರ್ಯ, ವರುಣ, ಅಶ್ವಿನೀ, ಅಗ್ನಿ, ಇಂದ್ರ, ಉಪೇಂದ್ರ, ಮಿತ್ರ, ಪ್ರಜಾಪತಿ ಮತ್ತು ಚಂದ್ರ—ಇವರು ಕ್ರಮವಾಗಿ ಜ್ಞಾನೇಂದ್ರಿಯಗಳಿಗೂ ಕರ್ಮೇಂದ್ರಿಯಗಳಿಗೂ ಮನಸ್ಸಿಗೂ ಅಧಿದೇವತೆಗಳು.

2. ಬ್ರಹ್ಮನು ಭೋಗವಿಗ್ರಹ. ನಾರಾಯಣನು ಲೀಲಾವಿಗ್ರಹ. ನಾನೇ ನಾರಾಯಣನಾಗಿಯೂ ಬ್ರಹ್ಮನಾಗಿಯೂ ಪ್ರಕಟವಾದೆನು ಎಂದು ತಾತ್ಪರ್ಯ.

ದೇವಾನಾಮೋಕ ಆಸೀತ್ ಸ್ವರ್ಭೂತಾನಾಂ ಚ ಭುವಃ ಪದಮ್ ।
ಮರ್ತ್ಯಾದೀನಾಂ ಚ ಭೂರ್ಲೋಕಃ ಸಿದ್ಧಾನಾಂ ತ್ರಿತಯಾತ್ ಪರಮ್ ॥ ೧೨

ಅಧೋಽಸುರಾಣಾಂ ನಾಗಾನಾಂ ಭೂಮೇರೋಕೋಽಸೃಜತ್ ಪ್ರಭುಃ ।
ತ್ರಿಲೋಕ್ಯಾಂ ಗತಯಃ ಸರ್ವಾಃ ಕರ್ಮಣಾಂ ತ್ರಿಗುಣಾತ್ಮನಾಮ್ ॥ ೧೩

ಯೋಗಸ್ಯ ತಪಸಶ್ಚೈವ ನ್ಯಾಸಸ್ಯ ಗತಯೋಽಮಲಾಃ ।
ಮಹರ್ಜನಸ್ತಪಃ ಸತ್ಯಂ ಭಕ್ತಿಯೋಗಸ್ಯ ಮದ್ಗತಿಃ ॥ ೧೪

ಮಯಾ ಕಾಲಾತ್ಮನಾ ಧಾತ್ರಾ ಕರ್ಮಯುಕ್ತಮಿದಂ ಜಗತ್ ।
ಗುಣಪ್ರವಾಹ ಏತಸ್ಮಿನ್ನುನ್ಮಜ್ಜತಿ ನಿಮಜ್ಜತಿ ॥ ೧೫

ಅಣುರ್ಬೃಹತ್ ಕೃಶಃ ಸ್ಥೂಲೋ ಯೋ ಯೋ ಭಾವಃ ಪ್ರಸಿಧ್ಯತಿ ।
ಸರ್ವೋಽಪ್ಯುಭಯಸಂಯುಕ್ತಃ ಪ್ರಕೃತ್ಯಾ ಪುರುಷೇಣ ಚ ॥ ೧೬

---

ಗಳನ್ನೂ ಸೇರಿಸಿಕೊಳ್ಳಬೇಕು) (೧೧). ದೇವತೆಗಳಿಗೆ ಸ್ವರ್ಲೋಕವೂ ಗ್ರಹನಕ್ಷತ್ರಾದಿಗಳಿಗೆ ಭುವರ್ಲೋಕವೂ ಮನುಷ್ಯಾದಿ ಪ್ರಾಣಿಗಳಿಗೆ ಭೂಲೋಕವೂ ವಾಸಸ್ಥಾನಗಳಾದವು. ಸಿದ್ಧಪುರುಷರಿಗೆ ಈ ಮೂರಕ್ಕಿಂತ ಮೇಲಿನವುಗಳಾದ ಮಹರ್ಲೋಕಾದಿಗಳು ವಾಸಸ್ಥಾನಗಳು (೧೨). ಅಸುರರಿಗೂ ನಾಗರಿಗೂ ಭೂಮಿಯ ಕೆಳಗೆ ಅತಲಾದಿ ಲೋಕಗಳನ್ನು ಬ್ರಹ್ಮನು ಸೃಜಿಸಿದನು ತ್ರಿಗುಣಾತ್ಮಕವಾದ ಕರ್ಮಗಳ ಎಲ್ಲ ಫಲಗಳು (ಪಾತಾಳಾದಿಸಹಿತವಾದ) ಈ ತ್ರಿಲೋಕದಲ್ಲಿ ನಡೆಯುತ್ತವೆ. ಯೋಗ, ತಪಸ್ಸು, ಸಂನ್ಯಾಸ—ಮೊದಲಾದವುಗಳಿಗೆ ಯೋಗ್ಯತಾಭೇದದಿಂದ ಮಹರ್ಲೋಕ, ಜನರ್ಲೋಕ, ತಪೋಲೋಕ, ಸತ್ಯಲೋಕಗಳಲ್ಲಿ ಪರಿಶುದ್ಧಗತಿಗಳು ದೊರೆಯುತ್ತವೆ. ಭಕ್ತಿಯೋಗಕ್ಕೆ ನನ್ನ ವೈಕುಂಠಲೋಕವೇ ಫಲ (೧೩–೧೪) ಗುಣಪ್ರವಾಹರೂಪವಾದ ಈ ಸಂಸಾರ ಪ್ರವಾಹದಲ್ಲಿ ತನ್ನ ತನ್ನ ಕರ್ಮಗಳಿಂದ ಯುಕ್ತವಾದ ಜಗತ್ತು, ಕಾಲಶಕ್ತಿಯೂ ಪರಮೇಶ್ವರನೂ ಆದ ನನ್ನಿಂದ, ಮೇಲೇರುತ್ತಲೂ ಮುಳುಗುತ್ತಲೂ ಇರುತ್ತದೆ (೧೫). ಅಣು-ಬೃಹತ್ತು, ಕೃಶ-ಸ್ಥೂಲ ಎಂಬುದಾಗಿ ಯಾವ ಯಾವ ಪದಾರ್ಥವು ಜಗತ್ತಿನಲ್ಲಿ ಇದೆಯೋ ಅದೆಲ್ಲವೂ ಪ್ರಕೃತಿ, ಪುರುಷ—ಎಂಬ ಎರಡು ತತ್ತ್ವಗಳಿಂದ ಕೂಡಿರುತ್ತದೆ. ಯಾವ ಕಾರ್ಯ ವಸ್ತುವಿಗೆ ಯಾವುದು ಆದಿಯೋ

ಯಸ್ತು ಯಸ್ಯಾದಿರಂತಶ್ಚ ಸ ವೈ ಮಧ್ಯಂ ಚ ತಸ್ಯ ಸನ್ ।
ವಿಕಾರೋ ವ್ಯವಹಾರಾರ್ಥೋ ಯಥಾ ತೈಜಸಪಾರ್ಥಿವಾಃ ॥ ೧೭

ಯದುಪಾದಾಯ ಪೂರ್ವಸ್ತು ಭಾವೋ ವಿಕುರುತೇಽಪರಮ್ ।
ಆದಿರಂತೋ ಯದಾ ಯಸ್ಯ ತತ್ ಸತ್ಯಮಭಿಧೀಯತೇ ॥ ೧೮

ಪ್ರಕೃತಿರ್ಹ್ಯಸ್ಯೋಪಾದಾನಮಾಧಾರಃ ಪುರುಷಃ ಪರಃ ।
ಸತೋಽಭಿವ್ಯಂಜಕಃ ಕಾಲೋ ಬ್ರಹ್ಮ ತತ್ತ್ರಿತಯಂ ತ್ವಹಮ್ ॥ ೧೯

ಸರ್ಗಃ ಪ್ರವರ್ತತೇ ತಾವತ್ ಪೌರ್ವಾಪರ್ಯೇಣ ನಿತ್ಯಶಃ ।
ಮಹಾನ್ ಗುಣವಿಸರ್ಗಾರ್ಥಃ ಸ್ಥಿತ್ಯಂತೋ ಯಾವದೀಕ್ಷಣಮ್ ॥ ೨೦

---

ಯಾವುದು ಅಂತ್ಯವೋ ಆದೇ ಅದರ ಮಧ್ಯಾವಸ್ಥೆಯೂ ಆಗಿರುತ್ತದೆ. (ಮಧ್ಯದಲ್ಲಿರುವ) ಕಾರ್ಯವೆಂಬ ವಿಕಾರವು ವ್ಯವಹಾರಾರ್ಥವಾಗಿ ಇರುತ್ತದೆ. ತೈಜಸವಾದ ಕಟಕ ಕುಂಡಲಾದಿಗಳೂ ಪಾರ್ಥಿವಗಳಾದ ಘಟಶರಾವಾದಿಗಳೂ ಇದ್ದಂತೆ (ಆದಿಯಲ್ಲಿ ಮಣ್ಣು, ಮಧ್ಯದಲ್ಲಿ ಘಟ, ಅಂತ್ಯದಲ್ಲಿ ನಾಶವಾದ ಮೇಲೆ ಮತ್ತೆ ಮಣ್ಣು. ಏವಂ ಚ ಕಾರ್ಯವಾದ ಘಟವು ಕಾರಣವಾದ ಮಣ್ಣು ಎಂದೇ ಸಿದ್ಧವಾಗುತ್ತದೆ) (೧೬–೧೭). ಭಾವಪದಾರ್ಥವು ಯಾವುದನ್ನು ಉಪಾದಾನಕಾರಣವನ್ನಾಗಿಟ್ಟುಕೊಂಡು ಮುಂದಿನ ಕಾರ್ಯವನ್ನು ಹುಟ್ಟಿಸುತ್ತದೆಯೋ ಮತ್ತು ಯಾವುದು ಸಮಸ್ತ ಕಾರ್ಯದ ಆದಿಯೂ ಅಂತ್ಯವೂ ಆಗಿರುತ್ತದೆಯೋ ಆ ಪರಮಕಾರಣವು ಸತ್ಯವೆನಿಸುತ್ತದೆ (ನಡುವೆ ಇರತಕ್ಕ ಮಹದಾದಿಗಳು ಸತ್ಯವಲ್ಲ) (೧೮). ಕಾರ್ಯವೆನಿಸತಕ್ಕ ಈ ಜಗತ್ತಿಗೆ ಪ್ರಕೃತಿಯು ಉಪಾದಾನಕಾರಣ. ಪ್ರಕೃತಿಗಿಂತ ಅನ್ಯನಾದ ಪುರುಷನು ಪ್ರಕೃತಿಗೆ ಅಧಿಷ್ಠಾತೃವಾದ ಆಧಾರ. ಪ್ರಕೃತಿಯನ್ನು ಕ್ಷೋಭಿಸತಕ್ಕದ್ದು ಕಾಲ. ಪ್ರಕೃತಿ, ಪುರುಷ, ಕಾಲ—ಈ ಮೂರೂ ಸಹ [1]ಪರಬ್ರಹ್ಮವಾದ ನಾನೇ ಆಗಿದ್ದೇನೆ (೧೯). ಈ ಸೃಷ್ಟಿಯು ಪಿತೃಪುತ್ರಾದಿರೂಪದಲ್ಲಿ ಅವಿಚ್ಛಿನ್ನ ಪರಂಪರೆಯಿಂದ ಬಹುಪ್ರಕಾರವಾಗಿ ನಡೆಯುತ್ತಿರುವುದು. ಜೀವನಿಗೆ ಸುಖದುಃಖಾದಿಗುಣಭೋಗವನ್ನುಂಟುಮಾಡುವುದಕ್ಕೋಸ್ಕರ ಜಗತ್ತಿನ ಸ್ಥಿತಿ ಇರುವ

---

1. ಪರಮಕಾರಣವಾದ ಬ್ರಹ್ಮ ಒಂದೇ ಸತ್ಯ. ಪ್ರಕೃತಿಯು ಬ್ರಹ್ಮದ ಶಕ್ತಿವಿಶೇಷ. ಪುರುಷನೂ (ಜೀವ), ಕಾಲವೂ ಬ್ರಹ್ಮದ ಅವಸ್ಥಾವಿಶೇಷ. ಬ್ರಹ್ಮಕ್ಕಿಂತ ಅತಿರಿಕ್ತವಾದ ಪದಾರ್ಥವಿಲ್ಲವೆಂದು ಅಭಿಪ್ರಾಯ.

ನಿರಾಣ್ಮಯಾsಽಸಾದ್ಯಮಾನೋ ಲೋಕಕಲ್ಪವಿಕಲ್ಪಕಃ ।
ಪಂಚತ್ವಾಯ ವಿಶೇಷಾಯ ಕಲ್ಪತೇ ಭುವನೈಃ ಸಹ ॥ ೨೧

ಅನ್ನೇ ಪ್ರಲೀಯತೇ ಮರ್ತ್ಯಮನ್ನಂ ಧಾನಾಸು ಲೀಯತೇ ।
ಧಾನಾ ಭೂಮೌ ಪ್ರಲೀಯಂತೇ ಭೂಮಿರ್ಗಂಧೇ ಪ್ರಲೀಯತೇ ॥ ೨೨

ಅಪ್ಸು ಪ್ರಲೀಯತೇ ಗಂಧ ಆಪಶ್ಚ ಸ್ವಗುಣೇ ರಸೇ ।
ಲೀಯತೇ ಜ್ಯೋತಿಷಿ ರಸೋ ಜ್ಯೋತೀರೂಪೇ ಪ್ರಲೀಯತೇ ॥ ೨೩

ರೂಪಂ ವಾಯೌ ಸ ಚ ಸ್ಪರ್ಶೇ ಲೀಯತೇ ಸೋಽಪಿ ಚಾಂಬರೇ ।
ಅಂಬರಂ ಶಬ್ದತನ್ಮಾತ್ರ ಇಂದ್ರಿಯಾಣಿ ಸ್ವಯೋನಿಷು ॥ ೨೪

---

ವರೆಗೆ ಸೃಷ್ಟಿಕಾರ್ಯವು ನಡೆಯುವುದು. ಸ್ಥಿತಿಯಾದರೋ ಪರಮೇಶ್ವರನ [1]ಈಕ್ಷಣ ಪರ್ಯಂತ ಇರುತ್ತದೆ (೨೦) ಈ ಬ್ರಹ್ಮಾಂಡವು ತನ್ನಲ್ಲಿರುವ ವಿವಿಧ ಲೋಕಗಳ ದೈನಂದಿನ ಸೃಷ್ಟಿ ಪ್ರಳಯಗಳಿಗೆ ಆಶ್ರಯವಾಗಿದ್ದರೂ, ಕಾಲರೂಪನಾದ ನನ್ನಿಂದ ವ್ಯಾಪ್ತವಾದಾಗ ಆ ಎಲ್ಲ ಲೋಕಗಳೊಡನೆ ತಾನೂ ಸಹ [2]ಪಂಚತ್ವವೆಂಬ ವಿಶೇಷ ವನ್ನು (ವಿಭಾಗವನ್ನು) ಪಡೆಯುತ್ತದೆ। (೨೧). ಆಗ ಶರೀರವು ತನಗೆ ಕಾರಣ ವಾದ ಅನ್ನದಲ್ಲಿ ಲಯವಾಗುತ್ತದೆ (ಅನಾವೃಷ್ಟಿಯಿಂದ ಅನ್ನವು ದುರ್ಲಭವಾಗಿ ಶರೀರವು ಮಣ್ಣಿನಲ್ಲಿ ಕೂಡಿಹೋಗುವುದು). ಅನ್ನವು ಬೀಜಗಳಲ್ಲಿ ಲಯಿಸುತ್ತದೆ (ಬಿತ್ತಿದ ಬೀಜಗಳು ಬೆಳೆಯುವುದಿಲ್ಲ). ಬೀಜಗಳು ಭೂಮಿಯಲ್ಲಿಯೂ ಭೂಮಿಯು ಭೂತಸೂಕ್ಷ್ಮವಾದ ಗಂಧದಲ್ಲಿಯೂ ಅಡಗುತ್ತವೆ (೨೨) ಗಂಧವು ಜಲದಲ್ಲಿಯೂ ಜಲವು ತನಗೆ ಕಾರಣವಾದ ಭೂತಸೂಕ್ಷ್ಮರಸದಲ್ಲಿಯೂ ರಸವು ಅಗ್ನಿಯಲ್ಲಿಯೂ ಅಗ್ನಿಯು ಜ್ಯೋತೀರೂಪದಲ್ಲಿಯೂ ಅಡಗುತ್ತವೆ. ರೂಪವು ವಾಯುವಿನಲ್ಲಿಯೂ ವಾಯುವು ತನ್ಮಾತ್ರೆಯಾದ ಸ್ಪರ್ಶದಲ್ಲಿಯೂ ಸ್ಪರ್ಶವು ಆಕಾಶದಲ್ಲಿಯೂ ಆಕಾಶವು ಶಬ್ದತನ್ಮಾತ್ರೆಯಲ್ಲಿಯೂ ಲಯಿಸುತ್ತವೆ. ಇಂದ್ರಿಯ ಗಳು ತಮಗೆ ಪ್ರವರ್ತಕರಾದ ಅಧಿಷ್ಠಾತೃದೇವತೆಗಳಲ್ಲಿ ಲಯಿಸುತ್ತವೆ (೨೩–೨೪).

---

1. ಸ ಐಕ್ಷತ ಬಹು ಸ್ಯಾಂ ಪ್ರಜಾಯೇಯೇತಿ—ಛಾಂ. ೬–೪–೩.

2. ಪಂಚಭೂತಗಳ ಸಂಮಿಶ್ರಣವೇ ಜಗತ್ತು. ಇದು ಪೃಥಿವ್ಯಾದಿ ಪಂಚರೂಪಗಳಲ್ಲಿ ವಿಭಕ್ತವಾಗುತ್ತದೆ. ನಾಶವಾಗುತ್ತದೆಯೆಂದರ್ಥ. ಪಂಚತ್ವ=ಮರಣ, ಪಂಚಭೂತಗಳಲ್ಲಿ ಲಯಿಸುವುದು.

ಯೋನಿರ್ವೈಕಾರಿಕೇ ಸೌಮ್ಯ ಲೀಯತೇ ಮನಸೀಶ್ವರೇ ।
ಶಬ್ದೋ ಭೂತಾದಿಮಪ್ಯೇತಿ ಭೂತಾದಿರ್ಮಹತಿ ಪ್ರಭುಃ ॥ ೨೫

ಸ ಲೀಯತೇ ಮಹಾನ್ ಸ್ವೇಷು ಗುಣೇಷು ಗುಣವತ್ತಮಃ ।
ತೇಽವ್ಯಕ್ತೇ ಸಂಪ್ರಲೀಯಂತೇ ತತ್ ಕಾಲೇ ಲೀಯತೇಽವ್ಯಯೇ ॥ ೨೬

ಕಾಲೋ ಮಾಯಾಮಯೇ ಜೀವೇ ಜೀವ ಆತ್ಮನಿ ಮಯ್ಯಜೇ ।
ಆತ್ಮಾ ಕೇವಲ ಆತ್ಮಸ್ಥೋ ವಿಕಲ್ಪಾಪಾಯಲಕ್ಷಣಃ ॥ ೨೭

ಏವಮನ್ವೀಕ್ಷಮಾಣಸ್ಯ ಕಥಂ ವೈಕಲ್ಪಿಕೋ ಭ್ರಮಃ ।
ಮನಸೋ ಹೃದಿ ತಿಷ್ಠೇತ ವ್ಯೋಮ್ನೀವಾರ್ಕೋದಯೇ ತಮಃ ॥ ೨೮

---

ದೇವತೆಗಳು ವೈಕಾರಿಕವೂ ನಿಯಂತೃವೂ ಆದ ಮನಸ್ಸಿನಲ್ಲಿ ಲಯಿಸುತ್ತವೆ (ವಸ್ತುತಃ ಇಂದ್ರಿಯಗಳು ತತ್ತ್ವದೇವತೆಗಳೊಡನೆ ರಾಜಸಾಹಂಕಾರದಲ್ಲಿಯೂ ಮನಸ್ಸು ಸಾತ್ತ್ವಿಕಾಹಂಕಾರದಲ್ಲಿಯೂ ಲಯಿಸುತ್ತವೆ—ಎಂದು ಅಭಿಪ್ರಾಯ) ಇತ್ತಲಾಗಿ ಶಬ್ದತನ್ಮಾತ್ರೆಯು ತಾಮಸಾಹಂಕಾರದಲ್ಲಿ ಲೀನವಾಗುತ್ತದೆ. ಅನಂತರ ಜಗನ್ಮೋಹನ ಸಮರ್ಥವಾದ ಅಹಂಕಾರವು ಮಹತ್ತತ್ತ್ವದಲ್ಲಿ ಲಯಿಸುತ್ತದೆ—ಎಂದರೆ—ತ್ರಿವಿಧವಾದ ಅಹಂಕಾರವೂ ಜಡಾಂಶವನ್ನು ತ್ಯಜಿಸಿ ಜ್ಞಾನಕ್ರಿಯಾ ಶಕ್ತಿರೂಪವಾಗಿ ನಿಲ್ಲುತ್ತದೆ (೨೫). ಗುಣವತ್ತಮವಾದ ಮಹತ್ತತ್ತ್ವವು ಸತ್ತ್ವಾದಿಗುಣಗಳಲ್ಲಿಯೂ ಗುಣಗಳು ಅವ್ಯಕ್ತದಲ್ಲಿಯೂ (ಪ್ರಕೃತಿಯಲ್ಲಿ) ಲೀನವಾಗುತ್ತವೆ. ಅವ್ಯಕ್ತವು ನಿಮೇಷಾದಿ ವೃತ್ತಿಭೇದವಿಲ್ಲದ ಕಾಲದಲ್ಲಿ ಏಕೀಭವಿಸುತ್ತದೆ (೨೬). ಕಾಲವು ಮಾಯಾಸಂಸೃಷ್ಟನಾದ ಜೀವನಲ್ಲಿ ಕೂಡಿಹೋಗುತ್ತದೆ. ಈ ಜೀವನಾದರೋ ಆತ್ಮನೂ ಅಜನೂ ಆದ ನನ್ನಲ್ಲಿ ಏಕೀಭವಿಸುತ್ತಾನೆ. ಈ ಪರಮಾತ್ಮನು ನಿರುಪಾಧಿಯಾದ್ದರಿಂದ ಸ್ವಸ್ವರೂಪದಲ್ಲಿಯೇ ಇರುತ್ತಾನೆ. (ಏಕೆಂದರೆ, ಪರಮಾತ್ಮನು ವಿಶ್ವದ ಉತ್ಪತ್ತಿ ಲಯಗಳಿಗೆ [1]ಅಧಿಷ್ಠಾನವಾದವನು) (೨೭). ಉದ್ಧವ, ಈ

---

1. ಮಾಯೆಯಿಂದ ಪ್ರಕೃತಿಯ ನಿರ್ಮಾಣ. ದೃಶ್ಯವಾದ ಪ್ರಕೃತಿಯು ಇಲ್ಲದಾಗ ಜೀವನು ದೃಗ್‌ರೂಪನಾಗಿ ನಿಲ್ಲುವುದು ಸಹಜವೇ. ಅಧಿಷ್ಠಾನ ಪರ್ಯಂತವಾಗಿ ಲಯ. ಅಧಿಷ್ಠಾನವು ಮಾತ್ರ ಶಾಶ್ವತ. ಶ್ರೀಧರೀಯ ವ್ಯಾಖ್ಯಾನವು ಸ್ವಲ್ಪ ಭಿನ್ನವಾಗಿದೆ. ಅನುಬಂಧವನ್ನು ನೋಡಿ—೭.

ಏಷ ಸಾಂಖ್ಯವಿಧಿಃ ಪ್ರೋಕ್ತಃ ಸಂಶಯಗ್ರಂಥಿಭೇದನಃ ।
ಪ್ರತಿಲೋಮಾನುಲೋಮಾಭ್ಯಾಂ ಪರಾವರದೃಶಾ ಮಯಾ ॥ ೨೯

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಚತುರ್ವಿಂಶಾಧ್ಯಾಯಃ



ಪ್ರಕಾರವಾಗಿ ವಿವೇಚನೆಮಾಡಿ ತಿಳಿದುಕೊಳ್ಳತಕ್ಕವನ ಮನಸ್ಸಿಗೆ ಭೇದನಿಮಿತ್ತಕ ವಾದ ಭ್ರಮೆಯು ಹೇಗೆ ಉಂಟಾದೀತು? ಮೊದಲು ಉಂಟಾದರೂ ಹೃದಯದಲ್ಲಿ ಹೇಗೆ ನಿಂತೀತು? ಸೂರ್ಯೋದಯವಾದಾಗ ಗಗನದಲ್ಲಿ ಕತ್ತಲೆ ಇರುತ್ತದೆಯೆ? (೨೮). ಇದು ಸಂಶಯಗ್ರಂಥಿಯನ್ನು ಭೇದಿಸತಕ್ಕ ಜ್ಞಾನಯೋಗವಾಗಿದೆ. [1]ಪರಾವರಗಳನ್ನು ಬಲ್ಲ ನಾನು ಅನುಲೋಮ ಪ್ರತಿಲೋಮಗಳಿಂದ ವಿವೇಕರೂಪ ವಾದ ಈ ಸಾಂಖ್ಯವಿಧಿಯನ್ನು ನಿನಗೆ ಹೇಳಿದ್ದೇನೆ" ಎಂದನು (೨೯).

ಇಲ್ಲಿಗೆ ಶ್ರೀಮದ್ಭಾಗವತಮಹಾಪುರಾಣದ ಏಕಾದಶಸ್ಕಂಧದಲ್ಲಿ
ಇಪ್ಪತ್ತನಾಲ್ಕನೆಯ ಅಧ್ಯಾಯ



1. ಪರ=ಪರಬ್ರಹ್ಮ. ಅವರ=ಪ್ರಕೃತಿವಿಸ್ತರ. ಅನುಲೋಮದಿಂದ ಸೃಷ್ಟಿ ವಿಧಾನವನ್ನೂ ಪ್ರತಿಲೋಮದಿಂದ ಪ್ರಳಯವಿಧಾನವನ್ನೂ ಹೇಳಿದ್ದಾಗಿದೆ.

# ಪಂಚವಿಂಶಾಧ್ಯಾಯಃ

ಶ್ರೀಭಗವಾನುವಾಚ—

ಗುಣಾನಾಮಸಮಿಶ್ರಾಣಾಂ ಪುಮಾನ್ ಯೇನ ಯಥಾ ಭವೇತ್ ।
ತನ್ಮೇ ಪುರುಷವರ್ಯೇದಮುಪಧಾರಯ ಶಂಸತಃ ॥ ೧

ಶಮೋ ದಮಸ್ತಿತಿಕ್ಷೇಕ್ಷಾ ತಪಃ ಸತ್ಯಂ ದಯಾ ಸ್ಮೃತಿಃ ।
ತುಷ್ಟಿಸ್ತ್ಯಾಗೋಽಸ್ಪೃಹಾ ಶ್ರದ್ಧಾ ಹ್ರೀರ್ದಯಾದಿಃ ಸ್ವನಿರ್ವೃತಿಃ ॥ ೨

ಕಾಮ ಈಹಾ ಮದಸ್ತೃಷ್ಣಾ ಸ್ತಂಭ ಆಶೀರ್ಭಿದಾ ಸುಖಮ್ ।
ಮದೋತ್ಸಾಹೋ ಯಶಃಪ್ರೀತಿರ್ಹಾಸ್ಯಂ ವೀರ್ಯಂ ಬಲೋದ್ಯಮಃ ॥ ೩

ಕ್ರೋಧೋ ಲೋಭೋಽನೃತಂ ಹಿಂಸಾ ಯಾಚ್ಞಾ ದಂಭಃ ಕ್ಲಮಃ ಕಲಿಃ ।
ಶೋಕಮೋಹೌ ವಿಷಾದಾರ್ತೀ ನಿದ್ರಾಽಽಶಾ ಭೀರನುದ್ಯಮಃ ॥ ೪

## ಅಧ್ಯಾಯ ೨೫

ಗುಣತ್ರಯದ ವೃತ್ತಿಗಳ ನಿರೂಪಣೆ. ಗುಣತ್ರಯಕ್ಕೂ ಸಂಸಾರಕ್ಕೂ ಇರುವ ನಿಕಟ ಸಂಬಂಧ.

ಭಗವಂತನು ಹೀಗೆಂದನು : " ಉದ್ಧವ, ಸಂಮಿಶ್ರವಾಗದಿರುವ ಸತ್ತ್ವಾದಿ ಗುಣಗಳಲ್ಲಿ ಯಾವ ಗುಣದ ಪ್ರಭಾವದಿಂದ ಮನುಷ್ಯನು ಯಾವ ಬಗೆಯುವನಾಗುತ್ತಾನೆ—ಎಂಬುದನ್ನು ವಿವರಿಸುತ್ತೇನೆ, ಕೇಳು (೧) : ಮನೋನಿಗ್ರಹರೂಪವಾದ ಶಮ, ಇಂದ್ರಿಯನಿಗ್ರಹರೂಪವಾದ ದಮ, ಸಹಿಷ್ಣುತೆ, ವಿವೇಕ, ಸ್ವಧರ್ಮನಿಷ್ಠೆ, ಸತ್ಯ, ದಯೆ, ಪೂರ್ವಾಪರಾನುಸಂಧಾನ, ಸಂತೃಪ್ತಿ, ತ್ಯಾಗ, ಆಶಾರಾಹಿತ್ಯ, ಶಾಸ್ತ್ರಾದಿಗಳಲ್ಲಿ ನಂಬಿಕೆ, ಲಜ್ಜೆ, ದಯಾ ವಿನಯ ಆರ್ಜವಗಳು, ಆತ್ಮನಿಷ್ಠೆ—ಇವು ಸತ್ತ್ವಗುಣದ ವೃತ್ತಿಗಳು (೨). ಅಭಿಲಾಷೆ, ಉದ್ಯಮ, ದರ್ಪ, ಅತೃಪ್ತಿ, ಗರ್ವ, ಧನಾದ್ಯಭಿಲಾಷೆಯಿಂದ ಪ್ರಾರ್ಥನೆ, ಭೇದಬುದ್ಧಿ, ವಿಷಯಸುಖ, ಯುದ್ಧಾದಿಗಳಲ್ಲಿ ಅಭಿನಿವೇಶ, ಕೀರ್ತಿಕಾಮನೆ, ಸ್ತುತಿಪ್ರಿಯತೆ, ಉಪಹಾಸ, ಪ್ರಭಾವಪ್ರದರ್ಶನ, ಬಲಪೂರ್ವಕವಾದ ಪ್ರವೃತ್ತಿ—ಇವು ರಜೋಗುಣದ ವೃತ್ತಿಗಳು (೩). ಕೋಪ, ಲೋಭ, ಸುಳ್ಳು, ಹಿಂಸೆ, ಯಾಚನೆ, ಡಂಭಾಚಾರ, ವ್ಯರ್ಥವಾದ

ಸತ್ತ್ವಸ್ಯ ರಜಸಶ್ಚೈತಾಸ್ತಮಸಶ್ಚಾನುಪೂರ್ವಶಃ ।
ವೃತ್ತಯೋ ವರ್ಣಿತಪ್ರಾಯಾಃ ಸಂನಿಪಾತಮಥೋ ಶೃಣು ॥ ೫

ಸಂನಿಪಾತಸ್ತ್ವಹಮಿತಿ ಮಮೇತ್ಯುದ್ಧವ ಯಾ ಮತಿಃ ।
ವ್ಯವಹಾರಃ ಸಂನಿಪಾತೋ ಮನೋಮಾತ್ರೇಂದ್ರಿಯಾಸುಭಿಃ ॥ ೬

ಧರ್ಮೇ ಚಾರ್ಥೇ ಚ ಕಾಮೇ ಚ ಯದಾಸೌ ಪರಿನಿಷ್ಠಿತಃ ।
ಗುಣಾನಾಂ ಸಂನಿಕರ್ಷೋಽಯಂ ಶ್ರದ್ಧಾರತಿಧನಾವಹಃ ॥ ೭

ಪ್ರವೃತ್ತಿಲಕ್ಷಣೇ ನಿಷ್ಠಾ ಪುಮಾನ್ ಯರ್ಹಿ ಗೃಹಾಶ್ರಮೇ ।
ಸ್ವಧರ್ಮೇ ಚಾನುತಿಷ್ಠೇತ ಗುಣಾನಾಂ ಸಮಿತಿರ್ಹಿ ಸಾ ॥ ೮

---

ಆಯಾಸ, ಜಗಳ, ಶೋಕ, ಭ್ರಾಂತಿ, ದುಃಖ, ದೈನ್ಯ, ಆಲಸ್ಯ, ಆಸೆ, ಭಯ, ಜಡತ್ವ—ಇವು ತಮೋಗುಣದ ವೃತ್ತಿಗಳು. ಈ ರೀತಿಯಲ್ಲಿ ಕ್ರಮವಾಗಿ ಸತ್ತ್ವ ರಜಸ್ತಮೋಗುಣಗಳ ಪ್ರಸಿದ್ಧ ವೃತ್ತಿಗಳನ್ನು ಹೇಳಿದ್ದಾಯಿತು. ಇದೇ ಬಗೆಯಲ್ಲಿ ಇನ್ನೂ ಕೆಲವು ವೃತ್ತಿಗಳನ್ನು ಊಹಿಸಿಕೊಳ್ಳಬೇಕು. ಇನ್ನು ಸಂಮಿಶ್ರಗುಣಗಳ ವೃತ್ತಿಗಳನ್ನು ಕೇಳು (೪-೫). ಉದ್ಧವ, ನಾನು—ನನ್ನದು ಎಂಬ ಯಾವ ಚಿತ್ತ ವೃತ್ತಿಯುಂಟೋ ತತ್ಪೂರ್ವಕವಾದ ಸಮಸ್ತ ವ್ಯವಹಾರವೂ ಮನಸ್ಸು, ತನ್ಮಾತ್ರೆಗಳು, ಇಂದ್ರಿಯಗಳು ಮತ್ತು ಪ್ರಾಣಗಳು—ಇವುಗಳಿಂದ ನಡೆಯುತ್ತದೆ. ಆದ್ದರಿಂದ ಈ ವ್ಯವಹಾರವು [1]ಗುಣತ್ರಯ ಸಂಮಿಶ್ರಣದಿಂದಾಗಿರುತ್ತದೆ (೬). ಮಾನವನು ಧರ್ಮ, ಅರ್ಥ, ಕಾಮಗಳಲ್ಲಿ ಉದ್ಯತನಾದಾಗ ಇವನಿಗೆ ಶ್ರದ್ಧೆ, ಧನ, ಸಂತೋಷಗಳು ಫಲವಾಗಿ ದೊರಕುತ್ತವೆ. ಈತನ ಉದ್ಯಮವೂ ಫಲಗಳೂ ಸಹ ಗುಣತ್ರಯ ಸಂಮಿಶ್ರಣದಿಂದ ಆದವುಗಳೇ (೭). ಪ್ರವೃತ್ತಿ ಲಕ್ಷಣವಾದ ಕಾಮ್ಯವಿಧಿಯಲ್ಲಿ ಮನುಷ್ಯನಿಗೆ ಆದರ ಹುಟ್ಟಿದಾಗ ಆತನು ಗೃಹಸ್ಥಾಶ್ರಮದಲ್ಲಿ ನಿಲ್ಲುವುದೂ ಸ್ವಧರ್ಮವನ್ನಾಚರಿಸುವುದೂ ಸಹ ಗುಣತ್ರಯ ಸಂನಿಪಾತವೇ ಸರಿ. ಹಿಂದೆ ಹೇಳಿದಂತೆ ಶಮಾದಿಗುಣಗಳಿಂದ ಸಂಯುಕ್ತನಾದವನು ಸಾತ್ತ್ವಿಕನೆಂದೂ ಕಾಮಾದಿ

---

1. 'ನಾನು ಶಾಂತ, ಕಾಮಿ, ಕ್ರೋಧಿ'—ಎಂಬುದು ಅಹಂಪೂರ್ವಕವ್ಯವಹಾರ. ನನ್ನ ಶಾಂತಿ, ನನ್ನ ಆಸೆ, ನನ್ನ ಕ್ರೋಧ'—ಎಂಬುದು ಮಮತಾಪೂರ್ವಕ ವ್ಯವಹಾರ. ಸಮಸ್ತ ವ್ಯವಹಾರದಲ್ಲಿಯೂ ಈ ಎರಡು ಅಂಶ ಉಂಟು. ಇಂದ್ರಿಯಾದಿಗಳು ಗುಣತ್ರಯಸಂಮಿಶ್ರಿತಗಳಾದ್ದರಿಂದ, ವ್ಯವಹಾರದಲ್ಲಿ ಗುಣತ್ರಯ ಸಂಮಿಶ್ರಣವಿರುತ್ತದೆ.

*

ಪುರುಷಂ ಸತ್ತ್ವಸಂಯುಕ್ತಮನುಮೀಯಾಚ್ಛಮಾದಿಭಿಃ ।
ಕಾಮಾದಿಭೀ ರಜೋಯುಕ್ತಂ ಕ್ರೋಧಾದ್ಯೈಸ್ತಮಸಾ ಯುತಮ್ ॥ ೯

ಯದಾ ಭಜತಿ ಮಾಂ ಭಕ್ತ್ಯಾ ನಿರಪೇಕ್ಷಃ ಸ್ವಕರ್ಮಭಿಃ ।
ತಂ ಸತ್ತ್ವಪ್ರಕೃತಿಂ ವಿದ್ಯಾತ್ ಪುರುಷಂ ಸ್ತ್ರಿಯಮೇವ ವಾ ॥ ೧೦

ಯದಾ ಆಶಿಷ ಆಶಾಸ್ಯ ಮಾಂ ಭಜೇತ ಸ್ವಕರ್ಮಭಿಃ ।
ತಂ ರಜಃಪ್ರಕೃತಿಂ ವಿದ್ಯಾದ್ಧಿಂಸಾಮಾಶಾಸ್ಯ ತಾಮಸಮ್ ॥ ೧೧

ಸತ್ತ್ವಂ ರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ ।
ಚಿತ್ತಜಾ ಯೈಸ್ತು ಭೂತಾನಾಂ ಸಜ್ಜಮಾನೋ ನಿಬಧ್ಯತೇ ॥ ೧೨

ಯದೇತರೌ ಜಯೇತ್ ಸತ್ತ್ವಂ ಭಾಸ್ವರಂ ವಿಶದಂ ಶಿವಮ್ ।
ತದಾ ಸುಖೇನ ಯುಜ್ಯೇತ ಧರ್ಮಜ್ಞಾನಾದಿಭಿಃ ಪುಮಾನ್ ॥ ೧೩

---

ಗಳಿಂದ ಕೂಡಿದವನು ರಾಜಸನೆಂದೂ ಕ್ರೋಧಾದಿಗಳಿಂದ ಸಮೇತನಾದವನು ತಾಮಸನೆಂದೂ ಊಹಿಸಬೇಕು (೮–೯). ಗಂಡಸಾಗಲಿ ಹೆಂಗಸಾಗಲಿ ಯಾವ ಫಲಾಪೇಕ್ಷೆಯೂ ಇಲ್ಲದೆ ತನ್ನ ಕರ್ತವ್ಯಗಳನ್ನಾಚರಿಸುತ್ತ ನನ್ನನ್ನು ಭಕ್ತಿಯಿಂದ ಸೇವಿಸತಕ್ಕವರು ಸಾತ್ತ್ವಿಕರೆಂದು ತಿಳಿಯಬೇಕು (೧೦). ಆದರೆ ಯಾವಾತನು ಉತ್ತಮ ಫಲವನ್ನು ಬಯಸುತ್ತಾನೋ, ತನ್ನ ವಿಹಿತಕರ್ಮಗಳನ್ನಾಚರಿಸುತ್ತ ನನ್ನನ್ನು ಭಜಿಸುತ್ತಾನೋ, ಅವನು ರಾಜಸನೆಂದು ತಿಳಿಯಬೇಕು. ಶತ್ರುವಿಗೆ ಮರಣವಾಗಲಿ—ಇತ್ಯಾದಿ ಹಿಂಸಾಫಲವನ್ನು ಬಯಸುತ್ತ ಯಾವನು ನನ್ನನ್ನು ಅರ್ಚಿಸುವನೋ ಅವನು ತಾಮಸನೆಂದು ತಿಳಿಯತಕ್ಕದ್ದು (೧೧). ಸತ್ತ್ವ, ರಜಸ್ಸು, ತಮಸ್ಸು—ಎಂಬ ಗುಣಗಳು ಜೀವನಿಗೇ ಹೊರತು ನನಗಲ್ಲ. ಏಕೆಂದರೆ, ಭೌತಿಕವಾದ ಚಿತ್ತದಲ್ಲಿ ಅಭಿವ್ಯಕ್ತವಾಗುವ [1]ಗುಣಗಳಿವು. ಚಿತ್ತದಲ್ಲಿ ಅಭಿಮಾನ ವಿಟ್ಟಿರುವ ಚಿತ್ತೋಪಾಧಿಯಾದ ಜೀವನು ಮಾತ್ರ ಬಂಧನಕ್ಕೆ ಸಿಕ್ಕಿರುತ್ತಾನೆ (೧೨). ಪ್ರಕಾಶಕವೂ ಸ್ವಚ್ಛವೂ ಶಾಂತವೂ ಆದ ಸತ್ತ್ವಗುಣವು ಉಳಿದೆರಡು ಗುಣಗಳನ್ನು ಜಯಿಸಿದಾಗ, ಮನುಷ್ಯನಿಗೆ ಸುಖ, ಧರ್ಮ, ಜ್ಞಾನಾದಿಗಳು ಲಭಿಸುತ್ತವೆ. ಆಸಕ್ತಿಗೆ ಕಾರಣವೂ ಭೇದಬುದ್ಧಿಜನಕವೂ ಪ್ರವೃತ್ತಿಸ್ವಭಾವವುಳ್ಳದ್ದೂ ಆದ

1. ಈಶ್ವರನು ಗುಣಗಳಿಗೆ ನಿಯಾಮಕ, ಗುಣಗಳಿಗೆ ಅಧೀನನಲ್ಲ, ಚಿತ್ತೋಪಾಧಿಯೂ ಅಲ್ಲ.

ಯದಾ ಜಯೇತ್ತಮಃ ಸತ್ತ್ವಂ ರಜಃ ಸಂಗಂ ಭಿದಾ ಚಲಮ್ ।
ತದಾ ದುಃಖೇನ ಯುಜ್ಯೇತ ಕರ್ಮಣಾ ಯಶಸಾ ಶ್ರಿಯಾ ॥ ೧೪

ಯದಾ ಜಯೇದ್ ರಜಃ ಸತ್ತ್ವಂ ತಮೋ ಮೂಢಂ ಲಯಂ ಜಡಮ್ ।
ಯುಜ್ಯೇತ ಶೋಕಮೋಹಾಭ್ಯಾಂ ನಿದ್ರಯಾ ಹಿಂಸಯಾಽಽಶಯಾ ॥ ೧೫

ತದಾ ಚಿತ್ತಂ ಪ್ರಸೀದೇತ ಇಂದ್ರಿಯಾಣಾಂ ಚ ನಿರ್ವೃತಿಃ ।
ದೇಹೇಽಭಯಂ ಮನೋಽಸಂಗಂ ತತ್ ಸತ್ತ್ವಂ ವಿದ್ಧಿ ಮತ್ಪದಮ್ ॥ ೧೬

ವಿಕುರ್ವನ್ ಕ್ರಿಯಯಾ ಚಾಧೀರನಿರ್ವೃತ್ತಿಶ್ಚ ಚೇತಸಾಮ್ ।
ಗಾತ್ರಾಸ್ವಾಸ್ಥ್ಯಂ ಮನೋ ಭ್ರಾಂತಂ ರಜ ಏತೈರ್ನಿಶಾಮಯ ॥ ೧೭

ಸೀದಚ್ಚಿತ್ತಂ ವಿಲೀಯೇತ ಚೇತಸೋ ಗ್ರಹಣೇಽಕ್ಷಮಮ್ ।
ಮನೋ ನಷ್ಟಂ ತಮೋ ಗ್ಲಾನಿಸ್ತಮಸ್ತದುಪಧಾರಯ ॥ ೧೮

---

ರಜೋಗುಣವು ಸತ್ತ್ವತಮೋಗುಣಗಳೆರಡನ್ನೂ ಜಯಿಸಿದಾಗ, ದುಃಖ ಕರ್ಮಾಸಕ್ತಿ ಕೀರ್ತಿ ಐಶ್ವರ್ಯ—ಇವು ಫಲವಾಗಿ ದೊರಕಬಹುದು (೧೩–೧೪). ಇನ್ನು ವಿವೇಕ-ಭ್ರಂಶಕವೂ ಆವರಣಾತ್ಮಕವೂ ಆಲಸ್ಯಪ್ರದವೂ ಆದ ತಮೋಗುಣವು ಸತ್ತ್ವರಜೋ ಗುಣಗಳೆರಡನ್ನೂ ಗೆದ್ದಾಗ, ಶೋಕ ಮೋಹ ನಿದ್ರೆ ಹಿಂಸೆ ಆಸೆ—ಇತ್ಯಾದಿ ಫಲಗಳು ಮನುಷ್ಯನಿಗೆ ಪ್ರಾಪ್ತವಾಗುತ್ತವೆ (೧೫). ಅಲ್ಲದೆ ಯಾವಾಗ ಚಿತ್ತವು ಪ್ರಸನ್ನವಾಗುತ್ತದೆಯೋ ಇಂದ್ರಿಯಗಳು ಉಪಶಾಂತವಾಗುತ್ತವೆಯೋ ದೇಹದಲ್ಲಿ ನಿರ್ಭಯ ಭಾವನೆ ಹುಟ್ಟುತ್ತದೆಯೋ ಮನಸ್ಸು ವಿಷಯಭೋಗದಲ್ಲಿ ಆಸಕ್ತಿಯನ್ನು ತ್ಯಜಿಸುತ್ತದೆಯೋ ಆಗ ನನ್ನ ಪ್ರಾಪ್ತಿಗೆ ಕಾರಣವಾದ ಸತ್ತ್ವಗುಣವು ಅಭಿವೃದ್ಧಿಗೊಂಡಿದೆಯೆಂದು ತಿಳಿ (೧೬). ಯಾವಾಗ ಕ್ರಿಯೆಯನ್ನು ಮಾಡುತ್ತ [1]ವಿಕೃತಿಯನ್ನು ತಳೆಯುತ್ತಾನೋ, ಬುದ್ಧಿಯು ವಿಕ್ಷಿಪ್ತವಾಗುತ್ತದೆಯೋ, ಜ್ಞಾನೇಂದ್ರಿಯಗಳಿಗೆ ಉಪಶಾಂತಿಯಿರುವುದಿಲ್ಲವೋ, ಕರ್ಮೇಂದ್ರಿಯಗಳಲ್ಲಿ ಅಧಿಕಪ್ರವೃತ್ತಿ ಹುಟ್ಟುವುದೋ, ಮನಸ್ಸು ಚಂಚಲವಾಗಿರುವುದೋ ಆಗ, ಈ ಲಕ್ಷಣಗಳಿಂದ ರಜೋಗುಣವು ಅಧಿಕವಾಗಿದೆಯೆಂದು ತಿಳಿ (೧೭.) ಚಿತ್ತಕ್ಕೆ [2]ವಿಷಯವಾಗಬೇಕಾದ

---

1. ವಿಕೃತಿ = ದೇಹದ ವಿವಿಧಾಕಾರ.

2. 'ಚೇತಸೋ ಗ್ರಹಣೇ' ಎಂಬುದಕ್ಕೆ 'ಚಿದಾಕಾರಪರಿಣಾಮೇ' ಎಂದು ಶ್ರೀಧರೀಯದಲ್ಲಿ ಅರ್ಥವನ್ನು ಬರೆದಿದೆ. ಜ್ಞಾನಾಕಾರವಾಗಿಪರಿಣಮಿಸುವುದರಲ್ಲಿ—ಎಂದರ್ಥ.

**ಏಧಮಾನೇ ಗುಣೇ ಸತ್ತ್ವೇ ದೇವಾನಾಂ ಬಲಮೇಧತೇ ।**
**ಅಸುರಾಣಾಂ ಚ ರಜಸಿ ತಮಸ್ಯುದ್ಧವ ರಕ್ಷಸಾಮ್ ॥ ೧೯**

**ಸತ್ತ್ವಾಜ್ಜಾಗರಣಂ ವಿದ್ಯಾದ್ ರಜಸಾ ಸ್ವಪ್ನಮಾದಿಶೇತ್ ।**
**ಪ್ರಸ್ವಾಪಂ ತಮಸಾ ಜಂತೋಸ್ತುರೀಯಂ ತ್ರಿಷು ಸಂತತಮ್ ॥ ೨೦**

**ಉಪರ್ಯುಪರಿ ಗಚ್ಛಂತಿ ಸತ್ತ್ವೇನ ಬ್ರಾಹ್ಮಣಾ ಜನಾಃ ।**
**ತಮಸಾಧೋಽಧ ಆಮುಖ್ಯಾದ್ ರಜಸಾಂತರಚಾರಿಣಃ ॥ ೨೧**

**ಸತ್ತ್ವೇ ಪ್ರಲೀನಾಃ ಸ್ವರ್ಯಾಂತಿ ನರಲೋಕಂ ರಜೋಲಯಾಃ ।**
**ತಮೋಲಯಾಸ್ತು ನಿರಯಂ ಯಾಂತಿ ಮಾಮೇವ ನಿರ್ಗುಣಾಃ ॥ ೨೨**

---

ವಸ್ತುವಿನ ಯಥಾರ್ಥಗ್ರಹಣದಲ್ಲಿ ಅಸಮರ್ಥವಾದ ಚಿತ್ತವು ಯಾವಾಗ ಹಿಂಜರಿದು ಕುಗ್ಗಿ ಹೋಗುವುದೋ ಸಂಕಲ್ಪಾತ್ಮಕವಾದ ಮನಸ್ಸು ಸಂಕಲ್ಪಿಸಲಾರದೆ ಲೀನವಾಗುವುದೋ ಅಜ್ಞಾನವೂ ವಿಷಾದವೂ ಸೇರಿಕೊಳ್ಳುತ್ತವೆಯೋ ಆಗ ತಮೋಗುಣವು ಉದ್ರಿಕ್ತವಾಗಿದೆ ಎಂದು ನಿರ್ಧರಿಸು (೧೮). ಸತ್ತ್ವಗುಣವು ವರ್ಧಿಸಿದಾಗ ದೇವತೆಗಳ [1]ಬಲವೂ ರಜೋಗುಣವು ವರ್ಧಿಸಿದಾಗ ಅಸುರರ ಬಲವೂ ತಮೋಗುಣವು ವರ್ಧಿಸಿದಾಗ ರಾಕ್ಷಸರ ಬಲವೂ ಅಧಿಕವಾಗಿರುತ್ತದೆ. ಸತ್ತ್ವದ ಉತ್ಕರ್ಷದಿಂದ ಜಾಗ್ರದವಸ್ಥೆಯೂ ರಜಸ್ಸಿನ ಉತ್ಕರ್ಷದಿಂದ ಸ್ವಪ್ನವೂ ತಮಸ್ಸಿನ ಉತ್ಕರ್ಷದಿಂದ ಸುಷುಪ್ತಿಯೂ ಜಂತುವಿಗೆ ಒದಗುತ್ತವೆಯೆಂದು ತಿಳಿಯಬೇಕು. ಈ ಮೂರು ಅವಸ್ಥೆಗಳಲ್ಲಿಯೂ ಏಕರೂಪವಾಗಿರತಕ್ಕದ್ದು ತುರೀಯವಾದ ಆತ್ಮತತ್ತ್ವವೇ (೧೯–೨೦). ವೇದೋಕ್ತವಾಗಿ ಅನುಷ್ಠಾನ ಮಾಡತಕ್ಕ ಜನರು ಸತ್ತ್ವಗುಣದಿಂದ ಉತ್ತಮಜನ್ಮವನ್ನು ಪಡೆಯುತ್ತ ಮೇಲಕ್ಕೆ ಏರುತ್ತಾರೆ. ತಮೋಗುಣನಿಮಿತ್ತವಾಗಿ ಸ್ಥಾವರಜನ್ಮದವರೆಗೆ ಕೆಳಗೆ ಇಳಿಯುತ್ತ ಹೋಗುವರು. ರಜೋಗುಣದಿಂದ ಮಧ್ಯವರ್ತಿಗಳಾದ ಮನುಷ್ಯರ ಜನ್ಮವನ್ನು ಪಡೆಯುವರು (೨೧). ಸತ್ತ್ವಗುಣವು ಬೆಳೆದಾಗ ಯಾರು ಮೃತರಾಗುತ್ತಾರೋ ಅವರು ಸ್ವರ್ಗವನ್ನೂ ರಜೋಗುಣವು ವರ್ಧಿಸಿದಾಗ ಮೃತರಾದರೆ ಮನುಷ್ಯಲೋಕವನ್ನೂ ತಮೋಗುಣವು ಬೆಳೆದಾಗ ಸತ್ತರೆ ನರಕವನ್ನೂ ಪಡೆಯುತ್ತಾರೆ. ಯಾರು ಗುಣಾತೀತರಾಗು

---

1. ನಿವೃತ್ತಿಸ್ವಭಾವದ ಇಂದ್ರಿಯಗಳು ದೇವತೆಗಳು, ಪ್ರವೃತ್ತಿಸ್ವಭಾವದವು ಅಸುರರು, ಮೋಹಸ್ವಭಾವದವು ರಾಕ್ಷಸರು.

ಮದರ್ಪಣಂ ನಿಷ್ಫಲಂ ವಾ ಸಾತ್ತ್ವಿಕಂ ನಿಜಕರ್ಮ ತತ್ ।
ರಾಜಸಂ ಫಲಸಂಕಲ್ಪಂ ಹಿಂಸಾಪ್ರಾಯಾದಿ ತಾಮಸಮ್ ॥ ೨೩

ಕೈವಲ್ಯಂ ಸಾತ್ತ್ವಿಕಂ ಜ್ಞಾನಂ ರಜೋ ವೈಕಲ್ಪಿಕಂ ಚ ಯತ್ ।
ಪ್ರಾಕೃತಂ ತಾಮಸಂ ಜ್ಞಾನಂ ಮನ್ನಿಷ್ಠಂ ನಿರ್ಗುಣಂ ಸ್ಮೃತಮ್ ॥ ೨೪

ವನಂ ತು ಸಾತ್ತ್ವಿಕೋ ವಾಸೋ ಗ್ರಾಮೋ ರಾಜಸ ಉಚ್ಯತೇ ।
ತಾಮಸಂ ದ್ಯೂತಸದನಂ ಮನ್ನಿಕೇತಂ ತು ನಿರ್ಗುಣಮ್ ॥ ೨೫

ಸಾತ್ತ್ವಿಕಃ ಕಾರಕೋಽಸಂಗೀ ರಾಗಾಂಧೋ ರಾಜಸಃ ಸ್ಮೃತಃ ।
ತಾಮಸಃ ಸ್ಮೃತಿವಿಭ್ರಷ್ಟೋ ನಿರ್ಗುಣೋ ಮದಪಾಶ್ರಯಃ ॥ ೨೬

ಸಾತ್ತ್ವಿಕ್ಯಾಧ್ಯಾತ್ಮಿಕೀ ಶ್ರದ್ಧಾ ಕರ್ಮಶ್ರದ್ಧಾ ತು ರಾಜಸೀ ।
ತಾಮಸ್ಯಧರ್ಮೇ ಯಾ ಶ್ರದ್ಧಾ ಮತ್ಸೇವಾಯಾಂ ತು ನಿರ್ಗುಣಾ ॥ ೨೭

---

ತ್ತಾರೋ ಅವರು ನನ್ನನ್ನೇ ಪಡೆಯುವರು (೨೨). ಕೇವಲ ನನ್ನ ಪ್ರೀತ್ಯರ್ಥವಾಗಿ ಮಾಡುವ ನಿಷ್ಕಾಮವಾದ ಯಾವ ತನ್ನ ವಿಹಿತಕರ್ಮ ಉಂಟೋ ಅದು ಸಾತ್ತ್ವಿಕ ಕರ್ಮ. ಫಲಸಂಕಲ್ಪವುಳ್ಳದ್ದು ರಾಜಸ. ಹಿಂಸಾಪ್ರಾಯವಾದದ್ದು ತಾಮಸ ಕರ್ಮ. ಆತ್ಮನು ದೇಹಾದ್ಯತಿರಿಕ್ತನೆಂಬ ಜ್ಞಾನವು ಸಾತ್ತ್ವಿಕಜ್ಞಾನವೆನಿಸುತ್ತದೆ. ಭೇದಗ್ರಾಹಿಯಾದ ದೇಹಾತ್ಮವಿಷಯಕಜ್ಞಾನವು ರಾಜಸವೆನಿಸುತ್ತದೆ. ಆತ್ಮ ಸಂಬಂಧವಿಲ್ಲದ ಪ್ರಾಕೃತಜ್ಞಾನವು ತಾಮಸ. ಪರಬ್ರಹ್ಮನಾದ ನನ್ನ ಜ್ಞಾನವು ನಿರ್ಗುಣಜ್ಞಾನ (೨೩–೨೪). ವಿವಿಕ್ತವಾದ ವನದಲ್ಲಿ ವಾಸವು ಸಾತ್ತ್ವಿಕ. ಗ್ರಾಮದಲ್ಲಿ ವಾಸಮಾಡುವುದು ರಾಜಸ. ದ್ಯೂತಾದಿಗಳು ನಡೆಯುವ ಸ್ಥಳದಲ್ಲಿ ವಾಸವು ತಾಮಸ. ನನ್ನ ದೇವಸ್ಥಾನದಲ್ಲಿರುವುದು ನಿರ್ಗುಣ. ಫಲದಲ್ಲಿ ಅನಾಸಕ್ತ ನಾದ ಕರ್ತನು ಸಾತ್ತ್ವಿಕ. ಅತ್ಯಂತ ಆಸಕ್ತಿಯುಳ್ಳವನು ರಾಜಸ. ಪೂರ್ವಾಪರ ವಿವೇಚನೆಯಿಲ್ಲದ ಕರ್ತನು ತಾಮಸ. ನನ್ನನ್ನೇ ಏಕಶರಣನೆಂದು ನಂಬಿಕೊಂಡಿರುವ [1]ಕರ್ತನು ನಿರ್ಗುಣನೆನಿಸುತ್ತಾನೆ (೨೫–೨೬). ಅಧ್ಯಾತ್ಮಜ್ಞಾನದಲ್ಲಿರುವ ಶ್ರದ್ಧೆ ಸಾತ್ತ್ವಿಕೀ. ಕರ್ಮಶ್ರದ್ಧೆ ರಾಜಸಿಯೆನಿಸುತ್ತದೆ. ಅಧರ್ಮವನ್ನೇ ಧರ್ಮವೆಂದು ಕಲ್ಪಿಸಿಕೊಳ್ಳುವ ಶ್ರದ್ಧೆ ತಾಮಸೀ. ನನ್ನ ಸೇವೆಯಲ್ಲಿರುವ ಶ್ರದ್ಧೆ ನಿರ್ಗುಣ ಶ್ರದ್ಧೆ. ಆರೋಗ್ಯಕಾರಿಯೂ ಪವಿತ್ರವೂ ಯದೃಚ್ಛೆಯಿಂದ ದೊರಕಿದ್ದೂ ಆದ

---

1. ಅಹಂಕಾರರಹಿತನಾದ್ದರಿಂದ ಈತನು ನಿರ್ಗುಣ.

ಪಥ್ಯಂ ಪೂತಮನಾಯಸ್ತಮಾಹಾರ್ಯಂ ಸಾತ್ತ್ವಿಕಂ ಸ್ಮೃತಮ್ ।
ರಾಜಸಂ ಚೇಂದ್ರಿಯಪ್ರೇಷ್ಠಂ ತಾಮಸಂ ಚಾರ್ತಿದಾಶುಚಿ ॥ ೨೮

ಸಾತ್ತ್ವಿಕಂ ಸುಖಮಾತ್ಮೋತ್ಥಂ ವಿಷಯೋತ್ಥಂ ತು ರಾಜಸಮ್ ।
ತಾಮಸಂ ಮೋಹದೈನ್ಯೋತ್ಥಂ ನಿರ್ಗುಣಂ ಮದಪಾಶ್ರಯಮ್ ॥ ೨೯

ದ್ರವ್ಯಂ ದೇಶಃ ಫಲಂ ಕಾಲೋ ಜ್ಞಾನಂ ಕರ್ಮ ಚ ಕಾರಕಃ ।
ಶ್ರದ್ಧಾವಸ್ಥಾಽಽಕೃತಿರ್ನಿಷ್ಠಾ ತ್ರೈಗುಣ್ಯಃ ಸರ್ವ ಏವ ಹಿ ॥ ೩೦

ಸರ್ವೇ ಗುಣಮಯಾ ಭಾವಾಃ ಪುರುಷಾವ್ಯಕ್ತಧಿಷ್ಠಿತಾಃ ।
ದೃಷ್ಟಂ ಶ್ರುತಮನುಧ್ಯಾತಂ ಬುದ್ಧ್ಯಾ ವಾ ಪುರುಷರ್ಷಭ ॥ ೩೧

ಏತಾಃ ಸಂಸೃತಯಃ ಪುಂಸೋ ಗುಣಕರ್ಮನಿಬಂಧನಾಃ ।
ಯೇನೇಮೇ ನಿರ್ಜಿತಾಃ ಸೌಮ್ಯ ಗುಣಾ ಜೀವೇನ ಚಿತ್ತಜಾಃ ।
ಭಕ್ತಿಯೋಗೇನ ಮನ್ನಿಷ್ಠೋ ಮದ್ಭಾವಾಯ ಪ್ರಪದ್ಯತೇ ॥ ೩೨

---

ಆಹಾರವು ಸಾತ್ತ್ವಿಕವೆನ್ನಲ್ಪಡುತ್ತದೆ. ಇಂದ್ರಿಯಪ್ರಿಯವಾದ ಹುಳಿ, ಕಾರ—ಮುಂತಾದ್ದರಿಂದ ಕೂಡಿದ್ದು ರಾಜಸವೆನ್ನಲ್ಪಡುತ್ತದೆ. ಅಶುಚಿಯೂ ಮನಸ್ಸಿಗೆ ಖೇದವನ್ನುಂಟುಮಾಡತಕ್ಕದ್ದೂ ಆದ ಆಹಾರವು ತಾಮಸ. (ನನಗೆ ಅರ್ಪಿತವಾದದ್ದು ನಿರ್ಗುಣ) (೨೭–೨೮). ಆತ್ಮಜಿಜ್ಞಾಸೆಯಿಂದಾಗುವ ಸುಖವು ಸಾತ್ತ್ವಿಕ. ವಿಷಯ ಭೋಗದಿಂದಾಗುವ ಸುಖವು ರಾಜಸ. ಮೋಹ, ದೈನ್ಯಾದಿಗಳಿಂದ ಬಂದ ಸುಖವು ತಾಮಸ. ನನಗೆ ಸಂಬಂಧಿಸಿದ ಶುದ್ಧಾತ್ಮಜ್ಞಾನಸುಖವು ನಿರ್ಗುಣ (೨೯). ಈ ಪ್ರಕಾರದಲ್ಲಿ ದ್ರವ್ಯ, ದೇಶ, ಕಾಲ, ಜ್ಞಾನ, ಕರ್ಮ, ಕಾರಕ, ಶ್ರದ್ಧೆ, ಜಾಗ್ರದಾದ್ಯವಸ್ಥೆ, ಊರ್ಧ್ವಗಮನಾದ್ಯಾಕೃತಿ, ಸ್ವರ್ಗಪ್ರಾಪ್ತ್ಯಾದಿನಿಷ್ಠೆ—ಮುಂತಾದುವೆಲ್ಲವೂ ತ್ರಿಗುಣಾತ್ಮಕವಾದದ್ದು (೩೦). ಇಷ್ಟೇ ಅಲ್ಲ, ಜೀವ ಮತ್ತು ಪ್ರಕೃತಿಗಳಿಗೆ ಸಂಬಂಧಿಸಿದ ಸಮಸ್ತ ಭಾವಗಳೂ ಗುಣಮಯಗಳೇ ಆಗಿರುತ್ತವೆ. ಕಂಡದ್ದು, ಕೇಳಿದ್ದು, ಬುದ್ಧಿಗೆ ಗೋಚರವಾದದ್ದು—ಎಲ್ಲವೂ ಗುಣಮಯವೇ (೩೧). ಸೌಮ್ಯ-ಉದ್ಧವ, ಗುಣಕರ್ಮಗಳಿಗೆ ಕಟ್ಟುಬಿದ್ದ ವಸ್ತುಗಳೆಲ್ಲವೂ ಸಂಸಾರಕ್ಕೆ ಒಯ್ಯುವ ಮಾರ್ಗಗಳು. ಮನಃಕಲ್ಪಿತವಾದ ಈ ಗುಣಮಯಮಾರ್ಗಗಳನ್ನು ಯಾವ ಜೀವನು ಗೆಲ್ಲುತ್ತಾನೋ ಭಕ್ತಿಯೋಗದಿಂದ ನನ್ನಲ್ಲಿಯೇ ನಿಷ್ಠೆಯನ್ನು

ತಸ್ಮಾದ್ ದೇಹಮಿಮಂ ಲಬ್ಧ್ವಾ ಜ್ಞಾನವಿಜ್ಞಾನಸಂಭವಮ್ ।
ಗುಣಸಂಗಂ ವಿನಿರ್ಧೂಯ ಮಾಂ ಭಜಂತು ವಿಚಕ್ಷಣಾಃ ॥ ೩೩
ನಿಸ್ಸಂಗೋ ಮಾಂ ಭಜೇದ್ ವಿದ್ವಾನಪ್ರಮತ್ತೋ ಜಿತೇಂದ್ರಿಯಃ ।
ರಜಸ್ತಮಶ್ಚಾಭಿಜಯೇತ್ ಸತ್ತ್ವಸಂಸೇವಯಾ ಮುನಿಃ ॥ ೩೪
ಸತ್ತ್ವಂ ಚಾಭಿಜಯೇದ್ ಯುಕ್ತೋ ನೈರಪೇಕ್ಷ್ಯೇಣ ಶಾಂತಧೀಃ ।
ಸಂಪದ್ಯತೇ ಗುಣೈರ್ಮುಕ್ತೋ ಜೀವೋ ಜೀವಂ ವಿಹಾಯ ಮಾಮ್ ॥ ೩೫
ಜೀವೋ ಜೀವವಿನಿರ್ಮುಕ್ತೋ ಗುಣೈಶ್ಚಾಶಯಸಂಭವೈಃ ।
ಮಯೈವ ಬ್ರಹ್ಮಣಾ ಪೂರ್ಣೋ ನ ಬಹಿರ್ನಾಂತರಶ್ಚರೇತ್ ॥ ೩೬

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಪಂಚವಿಂಶಾಧ್ಯಾಯಃ

ಪಡೆದುಬಿಡುತ್ತಾನೋ ಅವನು ನನ್ನ ಸ್ವರೂಪವಾದ ಮೋಕ್ಷಕ್ಕೆ ಯೋಗ್ಯನಾಗುತ್ತಾನೆ (೩೨). ಆದ್ದರಿಂದ ಜ್ಞಾನವಿಜ್ಞಾನಗಳನ್ನು ಸಂಪಾದಿಸಿಕೊಡುವ ಮಾನವ ದೇಹವನ್ನು ಪಡೆದಿರುವಾಗ, ಬುದ್ಧಿಶಾಲಿಗಳಾದವರು ಈ ಗುಣಾಸಕ್ತಿಯನ್ನು ದೂರದಲ್ಲಿ ತೊಡೆದುಹಾಕಿ ನನ್ನನ್ನು ಭಜಿಸುತ್ತಿರಲಿ. ವಿದ್ವಾಂಸನಾದವನು ನಿಃಸಂಗನೂ ಜಿತೇಂದ್ರಿಯನೂ ಆಗಿ ಪ್ರಮಾದವನ್ನು ಮಾಡದೆ ನನ್ನನ್ನು ಭಜಿಸಲಿ (೩೩–೩೪). ಮುನಿಯಾದವನು ಸತ್ತ್ವಗುಣವನ್ನಾಶ್ರಯಿಸಿ ರಜೋಗುಣವನ್ನೂ ತಮೋಗುಣವನ್ನೂ ಜಯಿಸಬೇಕು. ಅನಂತರ ಶಾಂತಚಿತ್ತನಾಗಿ ಉಪಶಮಾತ್ಮಕವಾದ ಸತ್ತ್ವಗುಣದಿಂದಲೇ ಸತ್ತ್ವಗುಣವನ್ನು ಜಯಿಸಿಬಿಡಬೇಕು. ಈ ರೀತಿಯಲ್ಲಿ ಗುಣತ್ರಯದಿಂದಲೂ ಮುಕ್ತನಾದ ಜೀವನು ಜೀವತ್ವಕಾರಣವಾದ ಲಿಂಗಶರೀರವನ್ನು ತ್ಯಜಿಸಿ ನನ್ನನ್ನು ಸೇರುತ್ತಾನೆ (೩೫) ಹೃದಯದಲ್ಲಿ ನೆಲೆಸಿದ್ದ ಗುಣಸಂಸ್ಕಾರಗಳಿಂದಲೂ ಲಿಂಗಶರೀರದಿಂದಲೂ ನಿರ್ಮುಕ್ತನಾದ ಜೀವನು ಪರಬ್ರಹ್ಮನಾದ ನನ್ನಲ್ಲಿ ಸೇರಿ ಪೂರ್ಣಾತ್ಮನಾಗುತ್ತಾನೆ. ಆತನಿಗೆ ಬಾಹ್ಯವಾದ ವಿಷಯ ಭೋಗವೂ ಇರುವುದಿಲ್ಲ, ಸ್ಮರಣೆಯಿಂದ ಆಗುವ ಆಂತರವಾದ ವಿಷಯ ಭೋಗವೂ ಇರುವುದಿಲ್ಲ" ಎಂದನು (೩೬).

ಇಲ್ಲಿಗೆ ಶ್ರೀಮದ್ಭಾಗವತಮಹಾಪುರಾಣದ ಏಕಾದಶಸ್ಕಂಧದಲ್ಲಿ
ಇಪ್ಪತ್ತೈದನೆಯ ಅಧ್ಯಾಯ

# ಷಡ್ವಿಂಶಾಧ್ಯಾಯಃ

ಶ್ರೀಭಗವಾನುವಾಚ—

ಮಲ್ಲಕ್ಷಣಮಿಮಂ ಕಾಯಂ ಲಬ್ಧ್ವಾ ಮದ್ಧರ್ಮ ಆಸ್ಥಿತಃ ।
ಆನಂದಂ ಪರಮಾತ್ಮಾನಮಾತ್ಮಸ್ಥಂ ಸಮುಪೈತಿ ಮಾಮ್ ॥ ೧

ಗುಣಮಯ್ಯಾ ಜೀವಯೋನ್ಯಾ ವಿಮುಕ್ತೋ ಜ್ಞಾನನಿಷ್ಠಯಾ ।
ಗುಣೇಷು ಮಾಯಾಮಾತ್ರೇಷು ದೃಶ್ಯಮಾನೇಷ್ವವಸ್ತುತಃ ।
ವರ್ತಮಾನೋऽಪಿ ನ ಪುಮಾನ್ ಯುಜ್ಯತೇऽವಸ್ತುಭಿರ್ಗುಣೈಃ ॥ ೨

ಸಂಗಂ ನ ಕುರ್ಯಾದಸತಾಂ ಶಿಶ್ನೋದರತೃಪಾಂ ಕ್ವಚಿತ್ ।
ತಸ್ಯಾನುಗಸ್ತಮಸ್ಯಂಧೇ ಪತತ್ಯಂಧಾನುಗಾಂಧವತ್ ॥ ೩

## ಅಧ್ಯಾಯ ೨೬

ಯೋಗನಿಷ್ಠೆಗೆ ದುಃಸಂಗದಿಂದ ವಿಘಾತವಾಗುತ್ತದೆ. ಸತ್ಸಂಗದಿಂದ ಆಗುವ ಪ್ರಯೋಜನ. ಪುರೂರವನ ಪಶ್ಚಾತ್ತಾಪ

ಭಗವಂತನಿಂತೆಂದನು : “ ನನ್ನ ಸ್ವರೂಪವನ್ನರಿಯಲು ಸಾಧನವಾದ ಈ ಮನುಷ್ಯದೇಹವನ್ನು ಪಡೆದವನು ನನ್ನ ಧರ್ಮವಾದ ಭಕ್ತಿಯಲ್ಲಿ ನೆಲೆನಿಂತಾಗ, ತನ್ನ ಅಂತಃಕರಣದಲ್ಲಿಯೇ ನಿಯಂತೃವಾಗಿರತಕ್ಕವನೂ ಪರಮಾನಂದಸ್ವರೂಪನೂ ಆತ್ಮನೂ ಆದ ನನ್ನನ್ನು ಸೇರಿಕೊಳ್ಳುವನು (೧). ಗುಣಮಯವಾದ ಜೀವೋಪಾಧಿಯಿಂದ ವಿಮುಕ್ತನಾದ ಪುರುಷನು ಗುಣಗಳ ನಡುವೆ ಇದ್ದರೂ [1]ಅವಸ್ತುಗಳಾದ ಗುಣಗಳಿಂದ ಸಂಬದ್ಧನಾಗುವುಲ್ಲ. ಏಕೆಂದರೆ, ಗುಣಮಯವಾಗಿರುವ ವಸ್ತುಗಳು ಜ್ಞಾನನಿಷ್ಠೆಯಿಂದ ಮಾಯಾಮಾತ್ರಗಳೆಂದೂ, ಪರಮಾರ್ಥವಾಗಿ ಅವಸ್ತುಗಳೆಂದೂ ಕೇವಲ ಕಾಣುತ್ತವೆಯೇ ಹೊರತು ವಾಸ್ತವದಲ್ಲಿ ಇರುವುದಿಲ್ಲವೆಂದೂ ಅವನಿಗೆ ತಿಳಿದುಬರುತ್ತದೆ (೨). ಶಿಶ್ನೋದರಗಳ ತರ್ಪಣದಲ್ಲಿ ನಿರತರಾದ ಅಯೋಗ್ಯರ ಸಂಗವನ್ನು ಎಂದಿಗೂ ಮಾಡಬಾರದು. ಅವರನ್ನು ಅನುಸರಿಸತಕ್ಕವನು, ಕುರುಡನ

1. ಅವಸ್ತು = ಪರಮಾರ್ಥವಾಗಿ ಇಲ್ಲದ್ದು, ಮಾಯಾಮಾತ್ರವಾದದ್ದು.

ಐಲಃ ಸಮ್ರಾಡಿಮಾಂ ಗಾಥಾಮಗಾಯತ ಬೃಹಚ್ಛ್ರವಾಃ ।
ಉರ್ವಶೀವಿರಹಾನ್ಮುಹ್ಯನ್ ನಿರ್ವಿಣ್ಣಃ ಶೋಕಸಂಯಮೇ ॥ ೪

ತ್ಯಕ್ತ್ವಾಽಽತ್ಮಾನಂ ವ್ರಜಂತೀಂ ತಾಂ ನಗ್ನ ಉನ್ಮತ್ತವನ್ನೃಪಃ ।
ವಿಲಪನ್ನನ್ವಗಾಜ್ಜಾಯೇ ಘೋರೇ ತಿಷ್ಠೇತಿ ವಿಕ್ಲವಃ ॥ ೫

ಕಾಮಾನತೃಪ್ತೋಽನುಜುಷನ್ ಕ್ಷುಲ್ಲಕಾನ್ ವರ್ಷಯಾಮಿನೀಃ ।
ನ ವೇದ ಯಾಂತೀರ್ನಾಯಾಂತೀರುರ್ವಶ್ಯಾಕೃಷ್ಟ ಚೇತನಃ ॥ ೬

ಐಲ ಉವಾಚ—

ಅಹೋ ಮೇ ಮೋಹವಿಸ್ತಾರಃ ಕಾಮಕಶ್ಮಲಚೇತಸಃ ।
ದೇವ್ಯಾ ಗೃಹೀತಕಂಠಸ್ಯ ನಾಯುಃಖಂಡಾ ಇಮೇ ಸ್ಮೃತಾಃ ॥ ೭

---

ಹಿಂದೆ ಓಡುವ ಕುರುಡನಂತೆ, ಅಂಧಕೂಪದಲ್ಲಿ ಬೀಳುವನು (೩). ಮಹಾಕೀರ್ತಿಶಾಲಿಯೂ ಚಕ್ರವರ್ತಿಯೂ ಆದ ಇಲಾಪುತ್ರ ಪುರೂರವನು ಒಂದು ಗಾಥೆಯನ್ನು ಹಾಡಿದ್ದಾನೆ. ಉರ್ವಶೀ ವಿರಹದಿಂದ ಮೋಹಗೊಂಡು, ಕಡೆಗೆ ಶೋಕವು ಹೋದ ಮೇಲೆ ವಿರಕ್ತನಾಗಿ [1]ಇದನ್ನು ಹಾಡಿದ್ದಾನೆ (೪). ಮೊದಲು ತನ್ನನ್ನು ಪರಿತ್ಯಜಿಸಿ ಹೋಗುತ್ತಿದ್ದ ಉರ್ವಶಿಯನ್ನುದ್ದೇಶಿಸಿ, ವಿಷಣ್ಣನಾದ ಆ ರಾಜನು ನಗ್ನನಾಗಿಯೇ ಹುಚ್ಚನಂತೆ ‘ಜಾಯೇ, ಘೋರೇ, ನಿಲ್ಲು’ (ಹಯೇ ಜಾಯೇ [2]ಮನಸಾ ತಿಷ್ಠ ಘೋರೇ) ಎಂದು ಹಲುಬುತ್ತ ಅವಳ ಹಿಂದೆ ಹೋದನು (೫). ಉರ್ವಶಿಯಿಂದ ಆಕೃಷ್ಟಚಿತ್ತನಾದ ಪುರೂರವನು ಕಾಮಸುಖಗಳನ್ನನುಭವಿಸಿ ತೃಪ್ತನಾಗದೆ, ಎಷ್ಟು ವರ್ಷಗಳಲ್ಲಿ ಎಷ್ಟು ರಾತ್ರಿಗಳು ಸಂದವು, ಎಷ್ಟು ಉಳಿದವು—ಎಂಬುದೇನನ್ನೂ ಅರಿಯದೆ ಇದ್ದನು (೬). ಕಡೆಯಲ್ಲಿ ವೈರಾಗ್ಯ ಹುಟ್ಟಿದಾಗ ಆತನು ಹೇಳಿಕೊಂಡ ಗಾಥೆಯೇನೆಂದರೆ : “ಅಯ್ಯೋ ನನ್ನ ಮೋಹದ ವಿಸ್ತಾರವೇ ! ಕಾಮದಿಂದ ನನ್ನ ಬುದ್ಧಿಯು ಕಲುಷಿತವಾಗಿ ಹೋಯಿತು. ಉರ್ವಶಿಯು ನನ್ನ ಕಂಠವನ್ನು ಅಪ್ಪಿಕೊಂಡಿದ್ದಾಗ, ಹಗಲುರಾತ್ರಿಗಳೆಂಬ ನನ್ನ ಆಯುಸ್ಸಿನ ತುಂಡುಗಳು ಎಷ್ಟು ಕಳಚಿ

---

1. ಪುರೂರವನಿಗೆ ದೇವಲೋಕದಲ್ಲಿ ಮತ್ತೆ ಉರ್ವಶಿಯ ಭೇಟಿಯಾಗುತ್ತದೆ. ಆಮೇಲೆ ವೈರಾಗ್ಯ ಹುಟ್ಟುತ್ತದೆ. ನೋಡಿ : ಸ್ಕಂಧ–೯, ಅಧ್ಯಾಯ ೧೪.

2. ಇದು ಒಂದು ಋಗ್ವೇದಮಂತ್ರ.

ನಾಹಂ ವೇದಾಭಿನಿರ್ಮುಕ್ತಃ ಸೂರ್ಯೋ ವಾಭ್ಯುದಿತೋಽಮುಯಾ ।
ಮುಷಿತೋ ವರ್ಷಪೂಗಾನಾಂ ಬತಾಹಾನಿ ಗತಾನ್ಯುತ ॥ ೮

ಅಹೋ ಮೇ ಆತ್ಮಸಮ್ಮೋಹೋ ಯೇನಾತ್ಮಾ ಯೋಷಿತಾಂ ಕೃತಃ ।
ಕ್ರೀಡಾಮೃಗಶ್ಚಕ್ರವರ್ತೀ ನರದೇವಶಿಖಾಮಣಿಃ ॥ ೯

ಸಪರಿಚ್ಛದಮಾತ್ಮಾನಂ ಹಿತ್ವಾ ತೃಣಮಿವೇಶ್ವರಮ್ ।
ಯಾಂತೀಂ ಸ್ತ್ರಿಯಂ ಚಾನ್ವಗಮಂ ನಗ್ನ ಉನ್ಮತ್ತವದ್ ರುದನ್ ॥ ೧೦

ಕುತಸ್ತಸ್ಯಾನುಭಾವಃ ಸ್ಯಾತ್ ತೇಜ ಈಶತ್ವಮೇವ ವಾ ।
ಯೋಽನ್ವಗಚ್ಛಂ ಸ್ತ್ರಿಯಂ ಯಾಂತೀಂ ಖರವತ್ ಪಾದತಾಡಿತಃ ॥ ೧೧

ಕಿಂ ವಿದ್ಯಯಾ ಕಿಂ ತಪಸಾ ಕಿಂ ತ್ಯಾಗೇನ ಶ್ರುತೇನ ವಾ ।
ಕಿಂ ವಿವಿಕ್ತೇನ ಮೌನೇನ ಸ್ತ್ರೀಭಿರ್ಯಸ್ಯ ಮನೋ ಹೃತಮ್ ॥ ೧೨

---

ಬಿದ್ದವೆಂಬುದೇ ಮರೆತುಹೋಯಿತು! (೭). ಇವಳೊಡನೆ ರಮಿಸುತ್ತಿರುವಾಗ ಸೂರ್ಯನು ಮುಳುಗಿದ್ದೂ ನನಗೆ ತಿಳಿಯಲಿಲ್ಲ! ಸೂರ್ಯನು ಹುಟ್ಟಿದ್ದೂ ತಿಳಿಯಲಿಲ್ಲ! ಅಬ್ಬಾ! ಮೋಸಹೋದೆ! ಎಷ್ಟು ದಿನಗಳು, ಎಷ್ಟು ವರ್ಷಗಳು ಕಳೆದುಹೋದವೊ! (೮). ನನ್ನ ಮೋಹ ಎಷ್ಟಿರಬಹುದು? ನನ್ನ ಯೋಗ್ಯತೆ ಏನೆಂಬುದನ್ನೇ ಮರೆತುಬಿಟ್ಟೆನಲ್ಲ! ನರಪತಿಶ್ರೇಷ್ಠನಾಗಿ, ಸಾರ್ವಭೌಮನಾಗಿ, ಹೆಂಗಸರ ಕೈಯಲ್ಲಿ ಕ್ರೀಡಾಮೃಗವಾಗಿಬಿಟ್ಟೆನು! ಶ್ವೇತಚ್ಛತ್ರಾದಿ ರಾಜಚಿಹ್ನೆಗಳಿಂದ ಭೂಷಿತನಾದ ಈ ಪೃಥ್ವೀಶ್ವರನನ್ನು ಹುಲ್ಲುಕಡ್ಡಿಯೋ ಎಂಬಂತೆ ಕಡೆಗಣಿಸಿಹೋದ ಒಬ್ಬ ಹೆಂಗಸಿನ ಹಿಂದೆ, ಹುಚ್ಚನಂತೆ ಬೆತ್ತಲೆಯಾಗಿ ಅಳುತ್ತ ಹೋಗಿಬಿಟ್ಟೆನಲ್ಲ!(೯-೧೦). ಹೆಣ್ಣುಕತ್ತೆಯು ಒದೆಯುತ್ತಿದ್ದರೂ ಅದರ ಹಿಂದೆ ಓಡುವ ಗಂಡುಕತ್ತೆಯಂತೆ, ಓಡಿಹೋಗುತ್ತಿದ್ದ ಒಬ್ಬ ಸ್ತ್ರೀಯ ಹಿಂದೆ ನಾನೂ ಒದೆಸಿಕೊಂಡು ಓಡುತ್ತಹೋದೆನು! ಇಂತಹವನಿಗೆ ಯಾವ ಪ್ರಭಾವವಿದ್ದೀತು? ಯಾವ ಬಲವಿದ್ದೀತು? ಯಾವ ಪ್ರಭುತ್ವವಿದ್ದೀತು? (೧೧). ಯಾವನ ಮನಸ್ಸು ಸ್ತ್ರೀಯರಿಂದ ಅಪಹೃತವಾಗಿಬಿಡುತ್ತದೆಯೋ ಅವನಿಗೆ ವಿದ್ಯೆಯಿದ್ದರೇನು ಫಲ? ತಪಸ್ಸಿನಿಂದೇನು? ಸಂನ್ಯಾಸದಿಂದೇನು? ವೇದಾರ್ಥಜ್ಞಾನವಿದ್ದರೇನು? ಏಕಾಂತದಿಂದಾಗಲಿ ಮೌನವ್ರತ

ಸ್ವಾರ್ಥಸ್ಯಾಕೋವಿದಂ ಧಿಙ್ಮಾಂ ಮೂರ್ಖಂ ಪಂಡಿತಮಾನಿನಮ್ ।
ಯೋಽಹಮೀಶ್ವರತಾಂ ಪ್ರಾಪ್ಯ ಸ್ತ್ರೀಭಿರ್ಗೋಖರವಜ್ಜಿತಃ ॥ ೧೩

ಸೇವತೋ ವರ್ಷಪೂಗಾನ್ ಮೇ ಉರ್ವಶ್ಯಾ ಅಧರಾಸವಮ್ ।
ನ ತೃಪ್ಯತ್ಯಾತ್ಮಭೂಃ ಕಾಮೋ ವಹ್ನಿರಾಹುತಿಭಿರ್ಯಥಾ ॥ ೧೪

ಪುಂಶ್ಚಲ್ಯಾಪಹೃತಂ ಚಿತ್ತಂ ಕೋ ನ್ವನ್ಯೋ ಮೋಚಿತುಂ ಪ್ರಭುಃ ।
ಆತ್ಮಾರಾಮೇಶ್ವರಮೃತೇ ಭಗವಂತಮಧೋಕ್ಷಜಮ್ ॥ ೧೫

ಬೋಧಿತಸ್ಯಾಪಿ ದೇವ್ಯಾ ಮೇ ಸೂಕ್ತವಾಕ್ಯೇನ ದುರ್ಮತೇಃ ।
ಮನೋಗತೋ ಮಹಾಮೋಹೋ ನಾಪಯಾತ್ಯಜಿತಾತ್ಮನಃ ॥ ೧೬

ಕಿಮೇತಯಾ ನೋಽಪಕೃತಂ ರಜ್ಜ್ವಾ ವಾ ಸರ್ಪಚೇತಸಃ ।
ರಜ್ಜುಸ್ವರೂಪಾವಿದುಷೋ ಯೋಽಹಂ ಯದಜಿತೇಂದ್ರಿಯಃ ॥ ೧೭

---

ದಿಂದಾಗಲಿ ಆಗುವ ಪ್ರಯೋಜನವೇನು ? (೧೨). ನಾನು ಪಂಡಿತನೆಂದು ನಾನೇ ಭಾವಿಸಿಕೊಂಡಿದ್ದೇನೆ, ಅಷ್ಟೇ. ವಸ್ತುತಃ ಮೂರ್ಖ ನಾನು. ಆತ್ಮಹಿತವೇನೆಂಬುದನ್ನೇ ಅರಿಯದ ನನಗೆ ಧಿಕ್ಕಾರವಿರಲಿ ! ರಾಜಾಧಿರಾಜನಾಗಿ ಒಂದು ಎತ್ತಿನಂತೆ, ಕತ್ತೆಯಂತೆ, ಸ್ತ್ರೀಯರಿಗೆ ಸೋತುಹೋದೆನು ! (೧೩). ವರ್ಷಗಟ್ಟಲೆ ಉರ್ವಶಿಯ ಅಧರಾಮೃತವನ್ನು ಪಾನಮಾಡುತ್ತಿದ್ದರೂ ಮನಸಿಜನಾದ ಕಾಮನಿಗೆ ತೃಪ್ತಿಯಾಗಲಿಲ್ಲ. ತುಪ್ಪದ ಆಹುತಿಗಳನ್ನಿತ್ತರೆ ಬೆಂಕಿಗೆ ತೃಪ್ತಿಯಾದೀತೆ ? ಒಬ್ಬ ಸೂಳೆಯು ನನ್ನ ಚಿತ್ತವನ್ನು ಅಪಹರಿಸಿರುವಾಗ ಅದನ್ನು ಬಿಡುಗಡೆ ಮಾಡಿಸಲು ಸಮರ್ಥನಾದವನು ಯಾರು ? ಆತ್ಮಾರಾಮನೂ ಈಶ್ವರನೂ ಭಗವಂತನೂ ಆದ ಶ್ರೀಮನ್ನಾರಾಯಣನನ್ನು ಬಿಟ್ಟು ಇನ್ನು ಯಾರು ಸಮರ್ಥರು ? (೧೪–೧೫). ಉರ್ವಶೀದೇವಿಯು [1]ಸೂಕ್ತವಾದ ವಚನದಿಂದ ನನಗೆ ಬುದ್ಧಿ ಹೇಳಿದ್ದರೂ ದುರ್ಬುದ್ಧಿಯೂ ಅಜಿತೇಂದ್ರಿಯನೂ ಆದ ನನ್ನ ಮನಸ್ಸಿಗೆ ಅಂಟಿಕೊಂಡಿರುವ ಈ ಮಹಾಮೋಹವು ತೊಲಗುವುದೇ ಇಲ್ಲ ! (೧೬). ನಾನೇ ಅಜಿತೇಂದ್ರಿಯನಾಗಿ ಸ್ತ್ರೀಲಂಪಟನಾಗಿರುವಾಗ ಇವಳಿಂದ ನಮಗಾದ ಅಪರಾಧ

---

1. ಉರ್ವಶಿ ಹೇಳಿದುದು :—

ಪುರೂರವೋ ಮಾ ಮೃಥಾ ಮಾ ಪ್ರಪಪ್ತೋ ಮಾ ತ್ವಾ ವೃಕಾಸೋ ಅಶಿವಾಸ ಉಕ್ಷನ್ ।
ನ ವೈ ಸ್ತ್ರೈಣಾನಿ ಸಖ್ಯಾನಿ ಸಂತಿ ಸಾಲಾವೃಕಾಣಾಂ ಹೃದಯಾನ್ಯೇತಾಃ ॥—ಋಗ್ವೇದ

ಕ್ವಾಯಂ ಮಲೀಮಸಃ ಕಾಯೋ ದೌರ್ಗಂಧ್ಯಾದ್ಯಾತ್ಮಕೋಽಶುಚಿಃ ।
ಕ್ವ ಗುಣಾಃ ಸೌಮನಸ್ಯಾದ್ಯಾ ಹ್ಯಧ್ಯಾಸೋಽವಿದ್ಯಯಾ ಕೃತಃ ॥ ೧೮

ಪಿತ್ರೋಃ ಕಿಂ ಸ್ವಂ ನು ಭಾರ್ಯಾಯಾಃ ಸ್ವಾಮಿನೋಽಗ್ನೇಃ ಶ್ವಗೃಧ್ರಯೋಃ।
ಕಿಮಾತ್ಮನಃ ಕಿಂ ಸುಹೃದಾಮಿತಿ ಯೋ ನಾವಸೀಯತೇ ॥ ೧೯

ತಸ್ಮಿನ್ ಕಲೇವರೇಽಮೇಧ್ಯೇ ತುಚ್ಛನಿಷ್ಠೇ ವಿಷಜ್ಜತೇ ।
ಅಹೋ ಸುಭದ್ರಂ ಸುನಸಂ ಸುಸ್ಮಿತಂ ಚ ಮುಖಂ ಸ್ತ್ರಿಯಃ ॥ ೨೦

ತ್ವಙ್ಮಾಂಸರುಧಿರ ಸ್ನಾಯು ಮೇದೋಮಜ್ಜಾಸ್ಥಿ ಸಂಹತೌ ।
ವಿಣ್ಮೂತ್ರಪೂಯೇ ರಮತಾಂ ಕೃಮೀಣಾಂ ಕಿಯದಂತರಮ್ ॥ ೨೧

---

ವಾದರೂ ಏನು? ಹಗ್ಗದ ನಿಜಸ್ವರೂಪವನ್ನರಿಯದೆ ಸರ್ಪವೆಂದು ಭ್ರಮಿಸಿ ತಳಮಳಿಸಿದರೆ, ಹಗ್ಗದಿಂದಾದ ಅಪಕಾರವಾದರೂ ಏನು? (೧೭) ದುರ್ಗಂಧಾದಿಗಳಿಂದ ತುಂಬಿ ಅಶುಚಿಯೂ ಅತ್ಯಂತ ಮಲಿನವೂ ಆದ ಈ ದೇಹವೆಲ್ಲಿ? ಹೂಗಳಲ್ಲಿರತಕ್ಕ ಪರಿಮಳ ಮೃದುತ್ವಾದಿಗಳೆಲ್ಲಿ? ಈ ದೇಹವು ರಮಣೀಯವೆಂಬ ಭ್ರಮೆ ಅವಿದ್ಯೆಯಿಂದ ಹುಟ್ಟಿದ್ದು (೧೮). ಈ ದೇಹವಾದರೋ ತಂದೆ ತಾಯಿಗಳಿಗೆ ಸೇರಿದ್ದೆ? ಮಡದಿಗೆ ಸೇರಿದ್ದೆ? ಒಡೆಯನಿಗೆ ಸೇರಿದ್ದೆ? ಅಥವಾ ಅಗ್ನಿಗೋ? ನಾಯಿ ಹದ್ದುಗಳಿಗೋ? ಅಥವಾ ಈ ದೇಹವು ಆತ್ಮನಿಗೆ ಸೇರಿದೆಯೊ? ಮಿತ್ರರಿಗೆ ಸೇರಿದೆಯೊ?—ಇದನ್ನು ನಿಶ್ಚಯಿಸಲಾಗುವುದಿಲ್ಲ! (೧೯). ಕಡೆಗೆ ತುಚ್ಛವಾಗಿ ಅಂತ್ಯವಾಗತಕ್ಕ—ಅಮೇಧ್ಯವಾದ ಈ ದೇಹವನ್ನು ಕಾಮಿಸತಕ್ಕವನಿಗೆ ಸ್ತ್ರೀಯ ಮುಖವು 'ಆಹಾ! ಎಷ್ಟು ಸುಂದರವಾಗಿದೆ! ಮಾಟವಾದ ಮೂಗು! ಮಧುರವಾದ ಮುಗುಳ್ನಗೆ!' ಎನ್ನಿಸುತ್ತದೆ! (೨೦). ಚರ್ಮ, ಮಾಂಸ, ರಕ್ತ, ನರ, ಮೇದಸ್ಸು, ಮಜ್ಜೆ, ಮೂಳೆಗಳ ರಾಶಿಯೂ ಮಲಮೂತ್ರ ಕೀವುಗಳಿಂದ ತುಂಬಿರತಕ್ಕದ್ದೂ ಆದ ಈ ದೇಹದಲ್ಲಿ ರಮಿಸತಕ್ಕ ಜನರಿಗೂ ಕ್ರಿಮಿಗಳಿಗೂ ಯಾವ ವ್ಯತ್ಯಾಸವಿದೆ? ಆದ್ದರಿಂದ ಸ್ತ್ರೀಯನ್ನೂ ಸ್ತ್ರೀಸಂಬಂಧಿಗಳಾದ ವಸ್ತುಗಳನ್ನೂ ನೋಡುವುದು ಕೇಳುವುದು ಮುಂತಾದ ವಿಷಯದಲ್ಲಿ ವಿವೇಕಿಯಾದವನು ಆಸಕ್ತಿಯನ್ನು ವಹಿಸಬಾರದು. ವಿಷಯಕ್ಕೂ ಇಂದ್ರಿಯಕ್ಕೂ ಸಂಯೋಗವಾದರೆ

ಅಥಾಪಿ ನೋಪಸಜ್ಜೇತ ಸ್ತ್ರೀಷು ಸ್ತ್ರೈಣೇಷು ಚಾರ್ಥವಿತ್ ।
ವಿಷಯೇಂದ್ರಿಯಸಂಯೋಗಾನ್ಮನಃ ಕ್ಷುಭ್ಯತಿ ನಾನ್ಯಥಾ ॥ ೨೨

ಅದೃಷ್ಟಾದಶ್ರುತಾದ್ ಭಾವಾನ್ನ ಭಾವ ಉಪಜಾಯತೇ ।
ಅಸಂಪ್ರಯುಂಜತಃ ಪ್ರಾಣಾನ್ ಶಾಮ್ಯತಿ ಸ್ತಿಮಿತಂ ಮನಃ ॥ ೨೩

ತಸ್ಮಾತ್ ಸಂಗೋ ನ ಕರ್ತವ್ಯಃ ಸ್ತ್ರೀಷು ಸ್ತ್ರೈಣೇಷು ಚೇಂದ್ರಿಯೈಃ ।
ವಿದುಷಾಂ ಚಾಪ್ಯವಿಶ್ರಬ್ಧಃ ಷಡ್ವರ್ಗಃ ಕಿಮು ಮಾದೃಶಾಮ್ ॥ ೨೪

ಶ್ರೀಭಗವಾನುವಾಚ—

ಏವಂ ಪ್ರಗಾಯನ್ ನೃಪದೇವದೇವಃ
ಸ ಉರ್ವಶೀಲೋಕಮಥೋ ವಿಹಾಯ ।
ಆತ್ಮಾನಮಾತ್ಮನ್ಯವಗಮ್ಯ ಮಾಂ ವೈ
ಉಪಾರಮಜ್ಜ್ಞಾನವಿಧೂತಮೋಹಃ ॥ ೨೫

ತತೋ ದುಸ್ಸಂಗಮುತ್ಸೃಜ್ಯ ಸತ್ಸು ಸಜ್ಜೇತ ಬುದ್ಧಿಮಾನ್ ।
ಸಂತ ಏತಸ್ಯ ಛಿಂದಂತಿ ಮನೋವ್ಯಾಸಂಗಮುಕ್ತಿಭಿಃ ॥ ೨೬

---

ಮಾತ್ರ ಮನಸ್ಸು ಕ್ಷೋಭೆಗೊಳ್ಳುತ್ತದೆ. ಇಲ್ಲದಿದ್ದರೆ ಇಲ್ಲ (೨೧–೨೨). ನಾವು ನೋಡದೆ ಇದ್ದ ಮತ್ತು ಕೇಳದೆ ಇದ್ದ ಪದಾರ್ಥದಿಂದ ಮನಸ್ಸಿಗೆ ಕ್ಷೋಭೆಯಾಗುವುದಿಲ್ಲ. ಆಗ ಮನಸ್ಸಿಗೆ ಯಾವ ಪ್ರೇರಣೆಯೂ ಇಲ್ಲದೆ ಹೋಗುವುದರಿಂದ ಆತನ ಮನಸ್ಸು ನಿಶ್ಚಲವಾಗಿ ಶಾಂತವಾಗುತ್ತದೆ ಆದ್ದರಿಂದ ಸ್ತ್ರೀಯರಲ್ಲಾಗಲಿ ಸ್ತ್ರೀ ಸಂಬಂಧಿ ವಿಚಾರಗಳಲ್ಲಾಗಲಿ ಇಂದ್ರಿಯಗಳು ಆಸಕ್ತವಾಗಬಾರದು. ಪಂಚೇಂದ್ರಿಯಗಳು, ಮನಸ್ಸು—ಎಂಬ ಷಡ್ವರ್ಗವೇನುಂಟು, ಇದು ವಿದ್ವಾಂಸರಿಗೂ ನಂಬಲು ಯೋಗ್ಯವಲ್ಲ. ಇನ್ನು ನನ್ನಂತವರ ಪಾಡೇನು ?" ಎಂದುಕೊಂಡನು (೨೩–೨೪). ಉದ್ಧವ, ನೃಪಾಲರಲ್ಲಿಯೂ ದೇವತೆಗಳಲ್ಲಿಯೂ ವಿಖ್ಯಾತನಾಗಿದ್ದ ಪುರೂರವನು ಈ ರೀತಿಯಲ್ಲಿ ಗಾಥೆಯನ್ನು ಹೇಳಿಕೊಂಡು, ಉರ್ವಶೀಲೋಕವನ್ನು ತ್ಯಜಿಸಿ, ಆತ್ಮನಾದ ನನ್ನನ್ನು ತನ್ನ ಹೃದಯದಲ್ಲಿ ಅವಧರಿಸಿ, ವಿವೇಕದಿಂದ ಮೋಹವನ್ನು ಹೋಗಲಾಡಿಸಿಕೊಂಡನು (೨೫). ಆದ್ದರಿಂದ ಬುದ್ಧಿವಂತನು ದುಃಸಂಗವನ್ನು ಪರಿತ್ಯಜಿಸಿ ಸಜ್ಜನರೊಡನೆ ಸಂಗವನ್ನು ಬೆಳೆಸಿಕೊಳ್ಳ

ಸತೋಽನಪೇಕ್ಷಾ ಮಚ್ಚಿತ್ತಾಃ ಪ್ರಶಾಂತಾಃ ಸಮದರ್ಶಿನಃ ।
ನಿರ್ಮಮಾ ನಿರಹಂಕಾರಾ ನಿರ್ದ್ವಂದ್ವಾ ನಿಷ್ಪರಿಗ್ರಹಾಃ ॥ ೨೭

ತೇಷು ನಿತ್ಯಂ ಮಹಾಭಾಗ ಮಹಾಭಾಗೇಷು ಮತ್ಕಥಾಃ ।
ಸಂಭವಂತಿ ಹಿತಾ ನೄಣಾಂ ಜುಷತಾಂ ಪ್ರಪುನಂತ್ಯಘಮ್ ॥ ೨೮

ತಾ ಯೇ ಶೃಣ್ವಂತಿ ಗಾಯಂತಿ ಹ್ಯನುಮೋದಂತಿ ಚಾದೃತಾಃ ।
ಮತ್ಪರಾಃ ಶ್ರದ್ದಧಾನಾಶ್ಚ ಭಕ್ತಿಂ ವಿಂದಂತಿ ತೇ ಮಯಿ ॥ ೨೯

ಭಕ್ತಿಂ ಲಬ್ಧವತಃ ಸಾಧೋಃ ಕಿಮನ್ಯದವಶಿಷ್ಯತೇ ।
ಮಯ್ಯನಂತಗುಣೇ ಬ್ರಹ್ಮಣ್ಯಾನಂದಾನುಭವಾತ್ಮನಿ ॥ ೩೦

ಯಥೋಪಶ್ರಯಮಾಣಸ್ಯ ಭಗವಂತಂ ವಿಭಾವಸುಮ್ ।
ಶೀತಂ ಭಯಂ ತಮೋಽಪ್ಯೇತಿ ಸಾಧೂನ್ ಸಂಸೇವತಸ್ತಥಾ ॥ ೩೧

---

ಬೇಕು. ಸಜ್ಜನರು ಈತನ ಬುದ್ಧಿವ್ಯಾಮೋಹವನ್ನು ಸದುಕ್ತಿಗಳಿಂದ ನೀಗಿಸುತ್ತಾರೆ. ಯಾರು ಫಲಾಪೇಕ್ಷೆಯನ್ನು ತ್ಯಜಿಸಿ ನನ್ನನ್ನು ಚಿತ್ತದಲ್ಲಿ ನೆನೆಯುತ್ತ ಪ್ರಶಾಂತರೂ ಸಮದರ್ಶಿಗಳೂ ಆಗಿರುತ್ತಾರೋ, ಮಮತೆಯನ್ನೂ ಅಹಂಕಾರವನ್ನೂ ವರ್ಜಿಸಿ ದ್ವಂದ್ವಾತೀತರೂ ಪರಿಗ್ರಹದೂರರೂ ಆಗಿರುತ್ತಾರೋ ಅವರೇ ಸಂತರು (೨೬–೨೭) ಆ ಮಹಾಭಾಗರಲ್ಲಿ ಮಂಗಳಕರವಾದ ನನ್ನ ಕಥನಗಳು ಸದಾ ನಡೆಯುತ್ತಲೇ ಇರುತ್ತವೆ. ಸತ್ಸಂಗವನ್ನು ಮಾಡತಕ್ಕ ಜನರ ಪಾಪಗಳನ್ನು ಅವು ಪರಿಹರಿಸುತ್ತವೆ. ನನ್ನನ್ನು ಭಜಿಸುತ್ತ ಶ್ರದ್ಧಾಳುಗಳಾಗಿರುವ ಯಾವ ಜನರು ಆದರದಿಂದ ನನ್ನ ಆ ಕಥೆಗಳನ್ನು ಕೇಳುತ್ತಾರೋ, ಹಾಡುತ್ತಾರೋ, ಮೆಚ್ಚಿಕೊಳ್ಳುತ್ತಾರೋ ಅವರು ನನ್ನಲ್ಲಿ ಭಕ್ತಿಯನ್ನು ತಳೆಯುತ್ತಾರೆ (೨೮–೨೯). ಅನಂತಗುಣನೂ ಬ್ರಹ್ಮವೂ ಆನಂದಸ್ವರೂಪನೂ ಅನುಭವಾತ್ಮಕನೂ ಆದ ನನ್ನಲ್ಲಿ ಭಕ್ತಿಯನ್ನು ಪಡೆದಮೇಲೆ ಆ ಸಾಧುಪುರುಷನಿಗೆ ಬೇಕಾದದ್ದು ಇನ್ನೇನು ಉಳಿದಿರುತ್ತದೆ? ಭಗವಂತನಾದ ಅಗ್ನಿಯನ್ನು ಸೇವಿಸುತ್ತ ಬಳಿಯಲ್ಲಿರತಕ್ಕವನಿಗೆ ಚಳಿಯೂ ಸರ್ಪಾದಿಗಳಿಂದ ಭಯವೂ ಕತ್ತಲೆಯೂ ಒಟ್ಟಿಗೆ ಹೇಗೆ ನಶಿಸಿಹೋಗುವುದೋ ಹಾಗೆ ಸತ್ಸಂಗವನ್ನು ಮಾಡತಕ್ಕವನಿಗೆ (ಕರ್ಮಜಾಡ್ಯವೆಂಬ) ಚಳಿಯೂ (ಸಂಸಾರದ) ಭಯವೂ (ಅಜ್ಞಾನವೆಂಬ) ಕತ್ತಲೆಯೂ ನಶಿಸಿಹೋಗುತ್ತವೆ (೩೦–೩೧).

ನಿಮಜ್ಜ್ಯೋನ್ಮಜ್ಜತಾಂ ಘೋರೇ ಭವಾಬ್ಧೌ ಪರಮಾಯನಮ್ ।
ಸಂತೋ ಬ್ರಹ್ಮವಿದಃ ಶಾಂತಾ ನೌರ್ದೃಢೇವಾಪ್ಸು ಮಜ್ಜತಾಮ್ ॥ ೩೨

ಅನ್ನಂ ಹಿ ಪ್ರಾಣಿನಾಂ ಪ್ರಾಣ ಆರ್ತಾನಾಂ ಶರಣಂ ತ್ವಹಮ್ ।
ಧರ್ಮೋ ವಿತ್ತಂ ನೃಣಾಂ ಪ್ರೇತ್ಯ ಸಂತೋಽರ್ವಾಗ್ ಬಿಭ್ಯತೋಽರಣಮ್ ॥

ಸಂತೋ ದಿಶಂತಿ ಚಕ್ಷೂಂಷಿ ಬಹಿರರ್ಕಃ ಸಮುತ್ಥಿತಃ ।
ದೇವತಾಃ ಬಾಂಧವಾಃ ಸಂತಃ ಸಂತ ಆತ್ಮಾಹಮೇವ ಚ ॥ ೩೪

ವೈತಸೇನಸ್ತತೋಽಪ್ಯೇವಮುರ್ವಶ್ಯಾ ಲೋಕನಿಃಸ್ಪೃಹಃ ।
ಮುಕ್ತಸಂಗೋ ಮಹೀಮೇತಾಮಾತ್ಮಾರಾಮಶ್ಚಚಾರ ಹ ॥ ೩೫

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಷಡ್ವಿಂಶಾಧ್ಯಾಯಃ

ಘೋರವಾದ ಸಂಸಾರಸಾಗರದಲ್ಲಿ ಮುಳುಗಿ ಏಳುತ್ತ ಮುಳುಗುತ್ತ ಇರತಕ್ಕವರಿಗೆ ಬ್ರಹ್ಮವಿದರೂ ಶಾಂತರೂ ಆದ ಸಂತರು, ನೀರಲ್ಲಿ ಮುಳುಗತಕ್ಕವರಿಗೆ ಪ್ರಬಲವಾದ ನೌಕೆಯಿದ್ದಂತೆ, ಪರಮತಾರಕರಾಗಿರುತ್ತಾರೆ (೩೨). ಪ್ರಾಣಿಗಳಿಗೆ ಅನ್ನವೇ ಹೇಗೆ ಪ್ರಾಣಧಾರಕವೋ, ಆರ್ತರಿಗೆ ನಾನೇ ಹೇಗೆ ರಕ್ಷಕನಾದ ಶರಣ್ಯನೋ ಪರಲೋಕದಲ್ಲಿ ಜನರಿಗೆ ಧರ್ಮವೇ ಹೇಗೆ ಧನವಾಗುತ್ತದೆಯೋ, ಹಾಗೆ ಸಂಸಾರದಲ್ಲಿ ಬಿದ್ದೇವೆಂದು ಹೆದರತಕ್ಕವರಿಗೆ ಸಂತರೇ ತಾರಕರು (೩೩). ಉದಿತನಾದ ಸೂರ್ಯನು ಹೊರಗಡೆಯ ಕಣ್ಣನ್ನು ಕೊಡುತ್ತಾನೆ. ಸಜ್ಜನರಾದರೋ (ಅಂತರಂಗದ) ಹಲವಾರು ಕಣ್ಣುಗಳನ್ನು ನೀಡುತ್ತಾರೆ. ಸಂತರೇ ದೇವತೆಗಳು. ಸಂತರೇ ಬಾಂಧವರು. ಅವರೇ ಆತ್ಮ. ಉದ್ಧವ, ಸಂತರೆಂದರೆ ನಾನೇ ಸರಿ (೩೪). [1]ವೈತಸೇನನಾದ ಪುರೂರವನು ಅಂತೆಯೇ ಉರ್ವಶೀಲೋಕದಲ್ಲಿ ನಿಸ್ಪೃಹನಾಗಿ ಅಲ್ಲಿಂದ ಹೊರಟು ಮುಕ್ತಸಂಗನೂ ಆತ್ಮಾರಾಮನೂ ಆಗಿ ಯಥೇಷ್ಟವಾಗಿ ಲೋಕದಲ್ಲಿ ಸಂಚರಿಸುತ್ತಿದ್ದನು" ಎಂದನು (೩೫).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಇಪ್ಪತ್ತಾರನೆಯ ಅಧ್ಯಾಯ

1. ಅನುಬಂಧವನ್ನು ನೋಡಿ–ಅ

# ಸಪ್ತವಿಂಶಾಧ್ಯಾಯಃ

ಉದ್ಧವ ಉವಾಚ—

ಕ್ರಿಯಾಯೋಗಂ ಸಮಾಚಕ್ಷ್ವ ಭವದಾರಾಧನಂ ಪ್ರಭೋ ।
ಯಸ್ಮಾತ್ತ್ವಾಂ ಯೇ ಯಥಾರ್ಚಂತಿ ಸಾತ್ವತಾಃ ಸಾತ್ವತರ್ಷಭ ॥ ೧

ಏತದ್ ವದಂತಿ ಮುನಯೋ ಮುಹುರ್ನಿಃಶ್ರೇಯಸಂ ನೃಣಾಮ್ ।
ನಾರದೋ ಭಗವಾನ್ ವ್ಯಾಸ ಆಚಾರ್ಯೋಽಂಗಿರಸಃ ಸುತಃ ॥ ೨

ನಿಸ್ಸೃತಂ ತೇ ಮುಖಾಂಭೋಜಾದ್ ಯದಾಹ ಭಗವಾನಜಃ ।
ಪುತ್ರೇಭ್ಯೋ ಭೃಗುಮುಖ್ಯೇಭ್ಯೋ ದೇವ್ಯೈ ಚ ಭಗವಾನ್ ಭವಃ ॥ ೩

ಏತದ್ ವೈ ಸರ್ವವರ್ಣಾನಾಮಾಶ್ರಮಾಣಾಂ ಚ ಸಮ್ಮತಮ್ ।
ಶ್ರೇಯಸಾಮುತ್ತಮಂ ಮನ್ಯೇ ಸ್ತ್ರೀಶೂದ್ರಾಣಾಂ ಚ ಮಾನದ ॥ ೪

## ಅಧ್ಯಾಯ ೨೭

ಭಗವದಾರಾಧನಾರೂಪವಾದ ಕರ್ಮಯೋಗದಿಂದ ಚಿತ್ತಶುದ್ಧಿ. ಪ್ರತೀಕಗಳ ಪೂಜಾ ವಿವರಣೆ. ಮಾನಸಪೂಜೆ. ನಿಷ್ಕಾಮಕರ್ಮದ ಫಲ

ಆಗ ಉದ್ಧವನು "ಹೇ ಪ್ರಭು, ನಿನ್ನ ಆರಾಧನಾರೂಪವಾದ ಕರ್ಮಯೋಗವನ್ನು ವಿವರಿಸಿ ಹೇಳು. ಅಧಿಕಾರಿಗಳಾದ ನಿನ್ನ ಭಕ್ತರು ಯಾವ ಅಧಿಷ್ಠಾನದಲ್ಲಿ ಯಾವ ಪ್ರಕಾರವಾಗಿ ನಿನ್ನನ್ನು ಅರ್ಚಿಸುತ್ತಾರೆ? ನಿನ್ನ ಅರ್ಚನೆಯು ಜನರಿಗೆ ನಿಃಶ್ರೇಯಸಕರವೆಂದು ಮುನಿಗಳಾದ ನಾರದರೂ ಭಗವಾನ್ ವೇದವ್ಯಾಸರೂ ಅಂಗಿರಸ್ಸಿನ ಪುತ್ರರಾದ ಬೃಹಸ್ಪತ್ಯಾಚಾರ್ಯರೂ ಹೇಳುತ್ತಿದ್ದಾರೆ (೧–೨). ನಿನ್ನ ಮುಖಕಮಲದಿಂದಲೇ ಹೊರಟುಬಂದ ವಿವರಣೆಯನ್ನು ಭಗವಾನ್ ಬ್ರಹ್ಮದೇವನು ಭೃಗುವೇ ಮುಂತಾದ ತನ್ನ ಮಾನಸಪುತ್ರರಿಗೆ ಹೇಳಿದ್ದಾನಂತೆ. ಭಗವಾನ್ ಶಂಕರನು ಉಮಾದೇವಿಗೆ ಉಪದೇಶಿಸಿದ್ದಾನಂತೆ (೩). ನಿನ್ನ ಆರಾಧನೆಯು ಸರ್ವವರ್ಣದವರಿಗೂ ಸರ್ವಾಶ್ರಮದವರಿಗೂ ಅನುಮತವಾದದ್ದು, ಸ್ತ್ರೀ ಶೂದ್ರರಿಗೂ ಶ್ರೇಯಸ್ಕರವಾದದ್ದು—ಎಂದು ತಿಳಿದಿದ್ದೇನೆ.

ಏತತ್ ಕಮಲಪತ್ರಾಕ್ಷ ಕರ್ಮಬಂಧವಿಮೋಚನಮ್ ।
ಭಕ್ತಾಯ ಚಾನುರಕ್ತಾಯ ಬ್ರೂಹಿ ವಿಶ್ವೇಶ್ವರೇಶ್ವರ ॥ ೫

ಶ್ರೀಭಗವಾನುವಾಚ—

ನ ಹ್ಯಂತೋಽನಂತಪಾರಸ್ಯ ಕರ್ಮಕಾಂಡಸ್ಯ ಚೋದ್ಧವ ।
ಸಂಕ್ಷಿಪ್ತಂ ವರ್ಣಯಿಷ್ಯಾಮಿ ಯಥಾವದನುಪೂರ್ವಶಃ ॥ ೬

ವೈದಿಕಸ್ತಾಂತ್ರಿಕೋ ಮಿಶ್ರ ಇತಿ ಮೇ ತ್ರಿವಿಧೋ ಮಖಃ ।
ತ್ರಯಾಣಾಮೀಪ್ಸಿತೇನೈವ ವಿಧಿನಾ ಮಾಂ ಸಮರ್ಚಯೇತ್ ॥ ೭

ಯದಾ ಸ್ವನಿಗಮೇನೋಕ್ತಂ ದ್ವಿಜತ್ವಂ ಪ್ರಾಪ್ಯ ಪೂರುಷಃ ।
ಯಥಾ ಯಜೇತ ಮಾಂ ಭಕ್ತ್ಯಾ ಶ್ರದ್ಧಯಾ ತನ್ನಿಬೋಧ ಮೇ ॥ ೮

ಅರ್ಚಾಯಾಂ ಸ್ಥಂಡಿಲೇಽಗ್ನೌ ವಾ ಸೂರ್ಯೇ ವಾಪ್ಸು ಹೃದಿ ದ್ವಿಜೇ ।
ದ್ರವ್ಯೇಣ ಭಕ್ತಿಯುಕ್ತೋಽರ್ಚೇತ್ ಸ್ವಗುರುಂ ಮಾಮಮಾಯಯಾ ॥ ೯

ಪೂರ್ವಂ ಸ್ನಾನಂ ಪ್ರಕುರ್ವೀತ ಧೌತದಂತೋಽಂಗಶುದ್ಧಯೇ ।
ಉಭಯೈರಪಿ ಚ ಸ್ನಾನಂ ಮಂತ್ರೈರ್ಮೃದ್ಗ್ರಹಣಾದಿನಾ ॥ ೧೦

---

ಹೇ ಕಮಲಪತ್ರಾಕ್ಷ, ವಿಶ್ವೇಶ್ವರ, ಕರ್ಮಬಂಧವಿಮೋಚಕವಾದ ಈ ಕರ್ಮಯೋಗ ವಿಧಿಯನ್ನು ಭಕ್ತನೂ ಅನುರಕ್ತನೂ ಆದ ನನಗೆ ತಿಳಿಸು" ಎಂದನು (೪-೫). ಆಗ ಭಗವಂತನು ಹೇಳಿದ್ದೇನೆಂದರೆ: "ಉದ್ಧವ, ಅಪಾರವಾದ ಕರ್ಮಕಾಂಡಕ್ಕೆ ಅಂತ್ಯವೇ ಇಲ್ಲವಷ್ಟೆ. ಆದ್ದರಿಂದ ಸಂಕ್ಷಿಪ್ತವಾಗಿ ಯಥಾವತ್ತಾದ ಅರ್ಚನಾಕ್ರಮವನ್ನು ಬಿಡಿಸಿ ಹೇಳುವೆನು. ನನ್ನ ಪೂಜೆಯು ವೈದಿಕ, ತಾಂತ್ರಿಕ, ಮಿಶ್ರ—ಎಂದು ಮೂರು ವಿಧ. ಇವುಗಳಲ್ಲಿ ಇಷ್ಟವಾದ ಯಾವ ವಿಧಿಯಿಂದಲಾದರೂ ನನ್ನನ್ನು ಪೂಜಿಸಬಹುದು (೬-೭). ತಮ್ಮ ತಮ್ಮ ವರ್ಣಕ್ಕೆ ವಿಹಿತವಾದ ಶಾಸ್ತ್ರವಿಧಿಯಿಂದ ದ್ವಿಜತ್ವವನ್ನು (ಉಪನಯನವನ್ನು) ಪಡೆದಮೇಲೆ ಶ್ರದ್ಧಾಭಕ್ತಿಗಳಿಂದ ನನ್ನನ್ನು ಹೇಗೆ ಅರ್ಚಿಸಬೇಕೆಂಬುದನ್ನು ಹೇಳುತ್ತೇನೆ, ಕೇಳು. ಪ್ರತಿಮಾದಿಪ್ರತೀಕ, ಸ್ಥಂಡಿಲ, ಅಗ್ನಿ, ಸೂರ್ಯ, ಜಲ, ಹೃದಯ ಅಥವಾ ಒಬ್ಬ ಬ್ರಾಹ್ಮಣ—ಇವರಲ್ಲೊಂದು ಅಧಿಷ್ಠಾನದಲ್ಲಿ ಆತ್ಮಗುರುವಾದ ನನ್ನನ್ನು ಭಕ್ತಿಯುಕ್ತನಾಗಿ ಯಥೋಕ್ತದ್ರವ್ಯದಿಂದ ವಂಚನೆಯಿಲ್ಲದೆ ಅರ್ಚಿಸತಕ್ಕದ್ದು (೮-೯). ಮೊದಲು ಹಲ್ಲುಜ್ಜಿಕೊಂಡು ದೇಹಶುದ್ಧಿಗಾಗಿ ಸ್ನಾನವನ್ನು ಮಾಡಬೇಕು. ಮೃತ್ತಿಕೆ

ಸಂಧ್ಯೋಪಾಸ್ತ್ಯಾದಿ ಕರ್ಮಾಣಿ ವೇದೇನಾಽಽಚೋದಿತಾನಿ ಮೇ ।
ಪೂಜಾಂ ತೈಃ ಕಲ್ಪಯೇತ್ ಸಮ್ಯಕ್ಸಂಕಲ್ಪಃ ಕರ್ಮಪಾವನೀಮ್ ॥ ೧೧
ಶೈಲೀ ದಾರುಮಯೀ ಲೌಹೀ ಲೇಪ್ಯಾ ಲೇಖ್ಯಾ ಚ ಸೈಕತೀ ।
ಮನೋಮಯೀ ಮಣಿಮಯೀ ಪ್ರತಿಮಾಷ್ಟವಿಧಾ ಸ್ಮೃತಾ ॥ ೧೨
ಚಲಾಚಲೇತಿ ದ್ವಿವಿಧಾ ಪ್ರತಿಷ್ಠಾ ಜೀವಮಂದಿರಮ್ ।
ಉದ್ವಾಸಾವಾಹನೇ ನ ಸ್ತಃ ಸ್ಥಿರಾಯಾಮುದ್ಧವಾರ್ಚನೇ ॥ ೧೩
ಅಸ್ಥಿರಾಯಾಂ ವಿಕಲ್ಪಃ ಸ್ಯಾತ್ ಸ್ಥಂಡಿಲೇ ತು ಭವೇದ್ ದ್ವಯಮ್ ।
ಸ್ನಪನಂ ತ್ವವಿಲೇಪ್ಯಾಯಾಮನ್ಯತ್ರ ಪರಿಮಾರ್ಜನಮ್ ॥ ೧೪
ದ್ರವ್ಯೈಃ ಪ್ರಸಿದ್ಧೈರ್ಮದ್ಯಾಗಃ ಪ್ರತಿಮಾದಿಷ್ವಮಾಯಿನಃ ।
ಭಕ್ತಸ್ಯ ಚ ಯಥಾಲಬ್ಧೈರ್ಹೃದಿ ಭಾವೇನ ಚೈವ ಹಿ ॥ ೧೫

---

ಮೊದಲಾದ್ದನ್ನು ಉಪಯೋಗಿಸಿ ವೈದಿಕ-ತಾಂತ್ರಿಕ ಮಂತ್ರಗಳಿಂದ ಸ್ನಾನವನ್ನಾಚರಿಸಬೇಕು. ವೇದವಿಹಿತವಾದ ಸಂಧ್ಯಾವಂದನೆ—ಮೊದಲಾದ ಸಕಲ ಕರ್ಮಗಳನ್ನೂ ಆಚರಿಸಿ, ದೃಢಸಂಕಲ್ಪನಾಗಿ, ಕರ್ಮಶೋಧಕವಾದ ನನ್ನ ಪೂಜೆಯನ್ನು ಮಾಡತಕ್ಕದ್ದು (೧೦–೧೧). ನನ್ನ ಪ್ರತಿಮೆಯು ಶಿಲಾಮಯ, ದಾರುಮಯ, ಲೋಹನಿರ್ಮಿತ, ಮೃತ್ತಿಕಾಚಂದನಾದಿನಿರ್ಮಿತ, ಲಿಖಿತ, ಸಿಕತಾಮಯ, ಮನೋಮಯ, ಮಣಿಮಯ—ಎಂದು [1]ಎಂಟು ವಿಧ. ಜೀವ-ಎಂದರೆ-ಜೀವಕನಾದ ಈಶ್ವರನ ಮಂದಿರವಾದ ಪ್ರತಿಮೆಯು ಸ್ಥಿರ, ಚಲ—ಎಂದು ಎರಡು ಬಗೆ. ಸ್ಥಿರಪ್ರತಿಮೆಯಲ್ಲಿ ಆವಾಹನ-ಉದ್ವಾಸನೆಗಳಿಲ್ಲ (೧೨–೧೩). ಚಲಪ್ರತಿಮೆಯಲ್ಲಿ ಇವುಗಳಿಗೆ [2]ವಿಕಲ್ಪ ಉಂಟು. ಸ್ಥಂಡಿಲದಲ್ಲಿ ಆವಾಹನ ವಿಸರ್ಜನೆಗಳೆರಡೂ ಉಂಟು. ಮೃನ್ಮಯ, ಲೇಖ್ಯಗಳೆರಡನ್ನು ಬಿಟ್ಟು ಉಳಿದೆಡೆಗಳಲ್ಲಿ ಅಭಿಷೇಕವಿದೆ. ಇವೆರಡರಲ್ಲಿ ಅಭಿಷೇಕಕ್ಕೆ ಬದಲಾಗಿ ಪರಿಮಾರ್ಜನವನ್ನು ಮಾತ್ರ ಮಾಡತಕ್ಕದ್ದು (೧೪). ಉತ್ತಮವಾದ ಪೂಜಾದ್ರವ್ಯಗಳಿಂದ ಪ್ರತಿಮಾದಿಗಳಲ್ಲಿ ನನ್ನ ಪೂಜೆ

---

1. ದಾರುಮಯ = ಮರದಿಂದ ಮಾಡಿದ್ದು, ಸಿಕತಾಮಯ = ಮರಳಿನಿಂದ ಆದದ್ದು ; ಹೃದಯದಲ್ಲಿ ಪೂಜೆ ಮಾಡುವಾಗ ಮನೋಮಯ ಮೂರ್ತಿ.

2. ಸಾಲಗ್ರಾಮದಲ್ಲಿ ಆವಾಹನ ವಿಸರ್ಜನೆಗಳಿಲ್ಲ, ಸಿಕತಾಮಯದಲ್ಲಿ ಉಂಟು ; ಉಳಿದ ಚಲಪ್ರತಿಮೆಗಳಲ್ಲಿ ಮಾಡಬಹುದು ಅಥವಾ ಬಿಡಬಹುದು. ಅದು ವ್ಯವಸ್ಥಿತ ವಿಕಲ್ಪ.

ಸ್ನಾನಾಲಂಕರಣಂ ಪ್ರೇಷ್ಠಮರ್ಚಾಯಾಮೇವ ತೂದ್ಧವ ।
ಸ್ಥಂಡಿಲೇ ತತ್ತ್ವವಿನ್ಯಾಸೋ ವಹ್ನಾವಾಜ್ಯಪ್ಲುತಂ ಹವಿಃ ॥ ೧೬

ಸೂರ್ಯೇ ಚಾಭ್ಯರ್ಹಣಂ ಪ್ರೇಷ್ಠಂ ಸಲಿಲೇ ಸಲಿಲಾದಿಭಿಃ ।
ಶ್ರದ್ಧಯೋಪಾಹೃತಂ ಪ್ರೇಷ್ಠಂ ಭಕ್ತೇನ ಮಮ ವಾರ್ಯಪಿ ॥ ೧೭

ಭೂರ್ಯಪ್ಯಭಕ್ತೋಪಹೃತಂ ನ ಮೇ ತೋಷಾಯ ಕಲ್ಪತೇ ।
ಗಂಧೋ ಧೂಪಃ ಸುಮನಸೋ ದೀಪೋಽನ್ನಾದ್ಯಂ ಚ ಕಿಂ ಪುನಃ ॥ ೧೮

ಶುಚಿಃ ಸಂಭೃತಸಂಭಾರಃ ಪ್ರಾಗ್ದರ್ಭೈಃ ಕಲ್ಪಿತಾಸನಃ ।
ಆಸೀನಃ ಪ್ರಾಗುದಗ್ ವಾರ್ಚೇದರ್ಚಾಯಾಮಥ ಸಮ್ಮುಖಃ ॥ ೧೯

ಕೃತನ್ಯಾಸಃ ಕೃತನ್ಯಾಸಾಂ ಮದರ್ಚಾಂ ಪಾಣಿನಾಽಽಮೃಜೇತ್ ।
ಕಲಶಂ ಪ್ರೋಕ್ಷಣೀಯಂ ಚ ಯಥಾವದುಪಸಾಧಯೇತ್ ॥ ೨೦

---

ಯನ್ನು ನಡೆಸತಕ್ಕದ್ದು. ನಿಷ್ಕಾಮನಾದ ಭಕ್ತನು ತನಗೆ ದೊರಕಿದಷ್ಟು ದ್ರವ್ಯಗಳಿಂದ ಅರ್ಚಿಸಬಹುದು. ಹೃದಯದ ಮಾನಸಪೂಜೆಯಲ್ಲಿ ಮನೋಮಯ ದ್ರವ್ಯಗಳೇ ಪೂಜಾಸಾಧನಗಳು (೧೫). ಉದ್ಧವ, ಸ್ನಾನ ಮತ್ತು ಅಲಂಕಾರಗಳು ಅರ್ಚಾವಿಗ್ರಹದಲ್ಲಿಯೇ ಶ್ರೇಷ್ಠವಾದವು. ಸ್ಥಂಡಿಲದಲ್ಲಿ ಅಂಗದೇವತಾ ಪ್ರಧಾನ ದೇವತೆಗಳನ್ನು ಮಂತ್ರಗಳಿಂದ ಯಥಾಸ್ಥಾನದಲ್ಲಿ ಸ್ಥಾಪಿಸಬೇಕು. ಅಗ್ನಿಯಲ್ಲಿ ಆಜ್ಯಸಿಕ್ತವಾದ ಹವಿಸ್ಸು ಆವಶ್ಯಕ. ಸೂರ್ಯನಲ್ಲಿ ಉಪಸ್ಥಾನವೂ ಜಲದಲ್ಲಿ ಜಲಾದಿಗಳಿಂದ ತರ್ಪಣವೂ ಉತ್ತಮವಾದ ಪೂಜಾವಿಧಾನವಾಗಿದೆ. ಭಕ್ತನು ಶ್ರದ್ಧೆಯಿಂದ ಕೇವಲ ಜಲವನ್ನರ್ಪಿಸಿದರೂ ನನಗೆ ಅತ್ಯಂತ ಪ್ರಿಯವಾಗುತ್ತದೆ (೧೬–೧೭). ಭಕ್ತಿಯಿಲ್ಲದವನು ಪ್ರಭೂತದ್ರವ್ಯಗಳನ್ನರ್ಪಿಸಿದರೂ ನನಗೆ ಸಂತೋಷವಾಗುವುದಿಲ್ಲ. ಗಂಧ, ಧೂಪ, ಪುಷ್ಪ, ದೀಪ, ಅನ್ನಾದಿ ನೈವೇದ್ಯಗಳನ್ನು ಮಾತ್ರ ಅರ್ಪಿಸಿಬಿಟ್ಟರೆ ಏನಾದೀತು ? ಮೊದಲೇ ಎಲ್ಲ ಸಂಭಾರ ದ್ರವ್ಯಗಳನ್ನೂ ತಂದಿಟ್ಟುಕೊಂಡು ಶುಚಿಯಾಗಿ ಪೂರ್ವಾಗ್ರಗಳಿರುವ ದರ್ಭಾಸನದಲ್ಲಿ ಪ್ರಾಙ್ಮುಖನಾಗಿ ಅಥವಾ ಉತ್ತರಾಭಿಮುಖನಾಗಿ ಕುಳಿತುಕೊಂಡು ಪೂಜಿಸಬೇಕು. ಸ್ಥಿರವಾದ ಅರ್ಚಾವಿಗ್ರಹವಾದರೆ ಸಂಮುಖನಾಗಿ ಕುಳಿತುಕೊಳ್ಳಬೇಕು (೧೮–೧೯). ಅನಂತರ (ಗುರ್ವಾದಿ ನಮಸ್ಕಾರಪೂರ್ವಕವಾಗಿ) ತನ್ನಲ್ಲಿ ಅಂಗನ್ಯಾಸವನ್ನು ಮಾಡಿಕೊಂಡು ನನ್ನ ವಿಗ್ರಹಕ್ಕೂ ಮೂಲಮಂತ್ರದಿಂದ ನ್ಯಾಸವನ್ನು ಮಾಡಿ ಕೈಯಿಂದ ನಿರ್ಮಾಲ್ಯ

ತದದ್ಭಿರ್ದೇವಯಜನಂ ದ್ರವ್ಯಾಣ್ಯಾತ್ಮಾನಮೇವ ಚ ।
ಪ್ರೋಕ್ಷ್ಯ ಪಾತ್ರಾಣಿ ತ್ರೀಣ್ಯದ್ಭಿಸ್ತೈಸ್ತೈರ್ದ್ರವ್ಯೈಶ್ಚ ಸಾಧಯೇತ್ ॥ ೨೧

ಪಾದ್ಯಾರ್ಘ್ಯಾಚಮನೀಯಾರ್ಥಂ ತ್ರೀಣಿ ಪಾತ್ರಾಣಿ ದೇಶಿಕಃ ।
ಹೃದಾ ಶೀರ್ಷ್ಣಾಥ ಶಿಖಯಾ ಗಾಯತ್ರ್ಯಾ ಚಾಽಭಿಮಂತ್ರಯೇತ್ ॥ ೨೨

ಪಿಂಡೇ ವಾಯ್ವಗ್ನಿ ಸಂಶುದ್ಧೇ ಹೃತ್ಪದ್ಮಸ್ಥಾಂ ಪರಾಂ ಮಮ ।
ಅಣ್ವೀಂ ಜೀವಕಲಾಂ ಧ್ಯಾಯೇನ್ನಾದಾಂತೇ ಸಿದ್ಧಭಾವಿತಾಮ್ ॥ ೨೩

ತಯಾಽಽತ್ಮಭೂತಯಾ ಪಿಂಡೇ ವ್ಯಾಪ್ತೇ ಸಂಪೂಜ್ಯ ತನ್ಮಯಃ ।
ಆವಾಹ್ಯಾರ್ಚಾದಿಷು ಸ್ಥಾಪ್ಯ ನ್ಯಸ್ತಾಂಗಂ ಮಾಂ ಪ್ರಪೂಜಯೇತ್ ॥ ೨೪

ವನ್ನು ತೆಗೆದು ಮೂರ್ತಿಯನ್ನು ಸ್ವಚ್ಛಮಾಡಬೇಕು. ಪೂರ್ಣಕುಂಭವನ್ನೂ ಪ್ರೋಕ್ಷಣಾರ್ಥವಾದ ಉದಕಪಾತ್ರೆಯನ್ನೂ ಚಂದನಪುಷ್ಪಾದಿಗಳಿಂದ ಅಲಂಕರಿಸಬೇಕು (೨೦). ಆಮೇಲೆ ಉದಕಪಾತ್ರೆಯ ಜಲದಿಂದ ಪೂಜಾಸ್ಥಳವನ್ನೂ ಪೂಜಾದ್ರವ್ಯಗಳನ್ನೂ ತನ್ನನ್ನೂ ಪ್ರೋಕ್ಷಿಸಬೇಕು. ಪಾದ್ಯ, ಅರ್ಘ್ಯ, ಆಚಮನೀಯಗಳಿಗೋಸ್ಕರ ಮೂರು ಪಾತ್ರೆಗಳನ್ನು ಆ ಕಲಶ ಜಲದಿಂದ ತುಂಬಿ ಪಾದ್ಯಾದಿಗಳಿಗೆ ವಿಹಿತವಾದ [1]ದ್ರವ್ಯಗಳನ್ನು, ಅವುಗಳಿಗೆ ಸೇರಿಸಬೇಕು (೨೧). ಅನಂತರ ಪೂಜಕನು ಆ ಮೂರು ಪಾತ್ರೆಗಳನ್ನು ಕ್ರಮವಾಗಿ ಹೃದಯ, ಶಿರಸ್ಸು, ಶಿಖಾ ಮಂತ್ರಗಳಿಂದಲೂ ಗಾಯತ್ರಿಯಿಂದಲೂ ಅಭಿಮಂತ್ರಿಸತಕ್ಕದ್ದು. ದೇಹವನ್ನು ಕೋಶಗತ ವಾಯುವಿನಿಂದ ಶೋಷಿಸಿ, ಆಧಾರಗತವಹ್ನಿಯಿಂದ ದಹಿಸಿ, (ಲಲಾಟಗತಚಂದ್ರನ ಅಮೃತಕಲೆಯಿಂದ ಆಪ್ಯಾಯನಗೊಳಿಸಿ) ಶುದ್ಧಿಗೊಳಿಸಬೇಕು. ಅನಂತರ ಹೃದಯ ಪದ್ಮಸ್ಥವೂ ಶ್ರೇಷ್ಠವೂ ಅಣು ಪ್ರಮಾಣವುಳ್ಳದ್ದೂ ಜೀವಕಲೆಯೂ ಆದ ನನ್ನ ಶ್ರೀಮನ್ನಾರಾಯಣಮೂರ್ತಿಯನ್ನು ಧ್ಯಾನಿಸಬೇಕು. ಆ ಮೂರ್ತಿಯು ನಾದದ [2]ಕಡೆಯಲ್ಲಿ ಸಿದ್ಧಪುರುಷರಿಂದ ಧ್ಯಾನಿಸಲ್ಪಡತಕ್ಕದ್ದಾಗಿದೆ (೨೨–೨೩). ಆ ಜೀವಕಲೆಯಿಂದ ತನ್ನ ದೇಹವು (ದೀಪಪ್ರಭೆಯಿಂದ ಮನೆಯು ವ್ಯಾಪ್ತವಾದಂತೆ) ವ್ಯಾಪ್ತವಾಗಲಾಗಿ, ಅಲ್ಲಿಯೇ ನನ್ನನ್ನು ಮಾನಸೋಪಚಾರಗಳಿಂದ ಪೂಜಿಸಿ

1. ಗಂಧ, ಪುಷ್ಪ, ದೂರ್ವೆ, ವಿಷ್ಣುಕ್ರಾಂತ—ಮೊದಲಾದವು.

2. ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ ।
ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸ ಮಹೇಶ್ವರಃ ॥ —ನಾರಾ. ೧೨–೩.

ಪಾದ್ಯೋಪಸ್ಪರ್ಶಾರ್ಹಣಾದೀನುಪಚಾರಾನ್ ಪ್ರಕಲ್ಪಯೇತ್ ।
ಧರ್ಮಾದಿಭಿಶ್ಚ ನವಭಿಃ ಕಲ್ಪಯಿತ್ವಾಽಽಸನಂ ಮಮ ॥ ೨೫

ಪದ್ಮಮಷ್ಟದಲಂ ತತ್ರ ಕರ್ಣಿಕಾಕೇಸರೋಜ್ಜ್ವಲಮ್ ।
ಉಭಾಭ್ಯಾಂ ವೇದತಂತ್ರಾಭ್ಯಾಂ ಮಹ್ಯಂ ತೂಭಯಸಿದ್ಧಯೇ ॥ ೨೬

ಸುದರ್ಶನಂ ಪಾಂಚಜನ್ಯಂ ಗದಾಸೀಷುಧನುರ್ಹಲಾನ್ ।
ಮುಸಲಂ ಕೌಸ್ತುಭಂ ಮಾಲಾಂ ಶ್ರೀವತ್ಸಂ ಚಾನುಪೂಜಯೇತ್ ॥ ೨೭

ನಂದಂ ಸುನಂದಂ ಗರುಡಂ ಪ್ರಚಂಡಂ ಚಂಡಮೇವ ಚ ।
ಮಹಾಬಲಂ ಬಲಂ ಚೈವ ಕುಮುದಂ ಕುಮುದೇಕ್ಷಣಮ್ ॥ ೨೮

ದುರ್ಗಾಂ ವಿನಾಯಕಂ ವ್ಯಾಸಂ ವಿಷ್ವಕ್ಸೇನಂ ಗುರೂನ್ ಸುರಾನ್ ।
ಸ್ವೇ ಸ್ವೇ ಸ್ಥಾನೇ ತ್ವಭಿಮುಖಾನ್ ಪೂಜಯೇತ್ ಪ್ರೋಕ್ಷಣಾದಿಭಿಃ ॥ ೨೯

---

ತನ್ಮಯನಾಗಿ ಪ್ರತಿಮಾದಿಗಳಲ್ಲಿ ಆವಾಹಿಸಿ, ಸ್ಥಾಪನಮುದ್ರೆಯಿಂದ ಸ್ಥಾಪಿಸಿ, ಮಂತ್ರದೇವತೆಗಳನ್ನು ಹೃದಯಾದ್ಯಂಗಗಳಲ್ಲಿ ನ್ಯಾಸಗೊಳಿಸಿ, ನನ್ನನ್ನು ಅರ್ಚಿಸಬೇಕು (೨೪). ಧರ್ಮಾದಿಗಳಿಂದಲೂ ನವಶಕ್ತಿಗಳಿಂದಲೂ ನನಗೆ ಆಸನವನ್ನು ಕಲ್ಪಿಸಿ, ಅದರ ನಡುವೆ ಕರ್ಣಿಕಾಕೇಸರಗಳಿಂದ ಉಜ್ಜ್ವಲವಾದ ಅಷ್ಟದಳ ಪದ್ಮವನ್ನು ಸ್ಥಾಪಿಸಬೇಕು. ಅನಂತರ ಭುಕ್ತಿಮುಕ್ತಿಗಳೆಂಬ ಫಲದ್ವಯಪ್ರಾಪ್ತಿಗಾಗಿ ವೈದಿಕವಿಧಿಯಿಂದಲೂ ತಾಂತ್ರಿಕವಿಧಿಯಿಂದಲೂ ಪಾದ್ಯ, ಆಚಮನ, ಅರ್ಘ್ಯ ಮುಂತಾದ ಉಪಚಾರಗಳನ್ನು ನನಗೆ ಮಾಡಬೇಕು (೨೫-೨೬). ಸುದರ್ಶನ ಚಕ್ರ, ಪಾಂಚಜನ್ಯ, ಗದೆ, ಖಡ್ಗ, ಬಾಣ, ಧನುಸ್ಸು, ಹಲ, ಮುಸಲ—ಎಂಬ ಆಯುಧಗಳನ್ನೂ ಕೌಸ್ತುಭ, ವನಮಾಲೆ, ಶ್ರೀವತ್ಸಗಳನ್ನೂ ಕ್ರಮವಾಗಿ ಪೂಜಿಸತಕ್ಕದ್ದು. ನಂದ, ಸುನಂದ, ಪ್ರಚಂಡ, ಚಂಡ, ಮಹಾಬಲ, ಬಲ, ಕುಮುದ, ಕುಮುದೇಕ್ಷಣರನ್ನು ಅಷ್ಟದಿಕ್ಕುಗಳಲ್ಲಿಯೂ ಗರುಡನನ್ನು ಎದುರುಗಡೆಯಲ್ಲಿಯೂ ಪೂಜಿಸಬೇಕು (೨೭-೨೮). ಆಮೇಲೆ ದುರ್ಗಾ, ವಿನಾಯಕ, ವ್ಯಾಸ, ವಿಷ್ವಕ್ಸೇನರನ್ನು ನಾಲ್ಕು ಮೂಲೆಗಳಲ್ಲಿಯೂ ಗುರುಗಳನ್ನು ವಾಮಪಾರ್ಶ್ವದಲ್ಲಿಯೂ ಇಂದ್ರಾದಿ ಲೋಕಪಾಲದೇವತೆಗಳನ್ನು ಪೂರ್ವಾದಿದಿಕ್ಕುಗಳಲ್ಲಿಯೂ ಅವರವರ ಸ್ಥಾನಗಳಲ್ಲಿ ದೇವತಾಭಿಮುಖವಾಗಿ ಸ್ಥಾಪಿಸಿ ಪ್ರೋಕ್ಷಣಾದಿಗಳಿಂದ ಅರ್ಚಿಸಬೇಕು (೨೯).

ಚಂದನೋಶೀರಕರ್ಪೂರಕುಂಕುಮಾಗುರುವಾಸಿತೈಃ ।
ಸಲಿಲೈಃ ಸ್ನಾಪಯೇನ್ಮಂತ್ರೈರ್ನಿತ್ಯದಾ ವಿಭವೇ ಸತಿ ॥ ೩೦

ಸ್ವರ್ಣಘರ್ಮಾನುವಾಕೇನ ಮಹಾಪುರುಷವಿದ್ಯಯಾ ।
ಪೌರುಷೇಣಾಪಿ ಸೂಕ್ತೇನ ಸಾಮಭೀ ರಾಜನಾದಿಭಿಃ ॥ ೩೧

ವಸ್ತ್ರೋಪವೀತಾಭರಣಪತ್ರಸ್ರಗ್ಗಂಧಲೇಪನೈಃ ।
ಅಲಂಕುರ್ವೀತ ಸಪ್ರೇಮ ಮದ್ಭಕ್ತೋ ಮಾಂ ಯಥೋಚಿತಮ್ ॥ ೩೨

ಪಾದ್ಯಮಾಚಮನೀಯಂ ಚ ಗಂಧಂ ಸುಮನಸೋಽಕ್ಷತಾನ್ ।
ಧೂಪದೀಪೋಪಹಾರ್ಯಾಣಿ ದದ್ಯಾನ್ಮೇ ಶ್ರದ್ಧಯಾರ್ಚಕಃ ॥ ೩೩

ಗುಡಪಾಯಸಸರ್ಪೀಂಷಿ ಶಷ್ಕುಲ್ಯಾಪೂಪಮೋದಕಾನ್ ।
ಸಂಯಾವದಧಿಸೂಪಾಂಶ್ಚ ನೈವೇದ್ಯಂ ಸತಿ ಕಲ್ಪಯೇತ್ ॥ ೩೪

---

ಅಭಿಷೇಕ ಮಾಡುವಾಗ ಧನಾದಿ ಸೌಕರ್ಯವಿದ್ದಲ್ಲಿ ಪ್ರತಿದಿನವೂ ಚಂದನ, ಉಶೀರ, ಕರ್ಪೂರ, ಕೇಸರಿ, ಅಗುರುಗಳಿಂದ ಸುವಾಸಿತವಾದ ಜಲವನ್ನು ಬಳಸಿ ಮಂತ್ರಪೂರ್ವಕವಾಗಿ ಸ್ನಾನಮಾಡಿಸಬೇಕು (೩೦). 'ಸುವರ್ಣಂ ಘರ್ಮಂ ಪರಿವೇಧವೇನಂ' ಇತ್ಯಾದಿ ಸ್ವರ್ಣ ಘರ್ಮಾನುವಾಕದಿಂದಲೂ, 'ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ। ಸುಬ್ರಹ್ಮಣ್ಯ ನಮಸ್ತೇಽಸ್ತು ಮಹಾಪುರುಷ ಪೂರ್ವಜ' ಎಂಬ ಮಹಾಪುರುಷವಿದ್ಯೆಯಿಂದಲೂ, ಪುರುಷಸೂಕ್ತದಿಂದಲೂ ರಾಜನಾದಿ ಸಾಮಗಳಿಂದಲೂ ಅಭಿಷೇಕವಿಧಿಯನ್ನು ನಡೆಸಬೇಕು (೩೧). ವಸ್ತ್ರ, ಉಪವೀತ, ಆಭರಣ, (ಕಪೋಲಾದಿಗಳಲ್ಲಿ ಲಿಖಿತವಾದ) ಪತ್ರಭಂಗ, ಪುಷ್ಪಮಾಲೆ, ಗಂಧಲೇಪನಾದಿಗಳಿಂದ ನನ್ನ ಭಕ್ತನು ಪ್ರೇಮಪೂರ್ವಕವಾಗಿ ಉಚಿತ ರೀತಿಯಲ್ಲಿ ನನ್ನ ಮೂರ್ತಿಯನ್ನು ಅಲಂಕರಿಸತಕ್ಕದ್ದು (೩೨). ಅರ್ಚಕನು ಪಾದ್ಯ, ಆಚಮನೀಯ, ಗಂಧ, ಪುಷ್ಪ, ಅಕ್ಷತೆ, ಧೂಪ, ದೀಪ, ನೈವೇದ್ಯಗಳನ್ನು ನನಗೆ ಶ್ರದ್ಧೆಯಿಂದಲೇ ಅರ್ಪಿಸತಕ್ಕದ್ದು. ಸೌಕರ್ಯವನ್ನನುಸರಿಸಿ ಬೆಲ್ಲ, ಪಾಯಸ, ತುಪ್ಪ, ಚಕ್ಕುಲಿ, ಅಪೂಪ, ಮೋದಕ, [1]ಸಂಯಾವ, ಮೊಸರು, ತೊವ್ವೆ— ಇವುಗಳನ್ನು ನೈವೇದ್ಯವನ್ನಾಗಿ ಅರ್ಪಿಸಬೇಕು (೩೩-೩೪).

---

1. ಸಂಯಾವ—ಗೋಧಿಹಿಟ್ಟಿಗೆ ಹಾಲು, ಸಕ್ಕರೆಗಳನ್ನು ಮಿಶ್ರಮಾಡಿ ತುಪ್ಪದಲ್ಲಿ ಕರಿದ ಭಕ್ಷ್ಯವಿಶೇಷ.

ಅಭ್ಯಂಗೋನ್ಮರ್ದನಾದರ್ಶದಂತಧಾವಾಭಿಷೇಚನಮ್ ।
ಅನ್ನಾದ್ಯಗೀತನೃತ್ಯಾದಿ ಪರ್ವಣಿ ಸ್ಯುರುತಾನ್ವಹಮ್ ॥ ೩೪

ವಿಧಿನಾ ವಿಹಿತೇ ಕುಂಡೇ ಮೇಖಲಾಗರ್ತವೇದಿಭಿಃ ।
ಅಗ್ನಿಮಾಧಾಯ ಪರಿತಃ ಸಮೂಹೇತ್ ಪಾಣಿನೋದಿತಮ್ ॥ ೩೬

ಪರಿಸ್ತೀರ್ಯಾಥ ಪರ್ಯುಕ್ಷೇದನ್ವಾಧಾಯ ಯಥಾವಿಧಿ ।
ಪ್ರೋಕ್ಷಣ್ಯಾಽಽಸಾದ್ಯ ದ್ರವ್ಯಾಣಿ ಪ್ರೋಕ್ಷ್ಯಾಗ್ನೌ ಭಾವಯೇತ ಮಾಮ್ ॥

ತಪ್ತಜಾಂಬೂನದಪ್ರಖ್ಯಂ ಶಂಖಚಕ್ರಗದಾಂಬುಜೈಃ ।
ಲಸಚ್ಚತುರ್ಭುಜಂ ಶಾಂತಂ ಪದ್ಮಕಿಂಜಲ್ಕವಾಸಸಮ್ ॥ ೩೮

ಸ್ಫುರತ್ಕಿರೀಟಕಟಕಕಟಿಸೂತ್ರವರಾಂಗದಮ್ ।
ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭಂ ವನಮಾಲಿನಮ್ ॥ ೩೯

---

ಅಭ್ಯಂಜನ, ಅಂಗಮರ್ದನ, ಕನ್ನಡಿಸೇವೆ, ದಂತಧಾವನ, ಪಂಚಾಮೃತಾಭಿಷೇಕ, ಅನ್ನ, ಭಕ್ಷ್ಯ, ಗೀತ, ನೃತ್ಯ—ಮೊದಲಾದ ಸೇವಾಸಮರ್ಪಣೆಯನ್ನು ಪರ್ವದಿನಗಳಲ್ಲಿ ಅಥವಾ ಅನುಕೂಲವಿದ್ದರೆ ಪ್ರತಿದಿನವೂ ನಡೆಸಬಹುದು (೩೪). (ಫಲವಿಶೇಷಾಪೇಕ್ಷೆಯಿದ್ದರೆ ಅಗ್ನಿಯಲ್ಲಿಯೂ ನನ್ನನ್ನು ಪೂಜಿಸಬೇಕು) ಮೇಖಲಾ, ಗರ್ತ, ವೇದಿಗಳಿಂದ ಉಪಲಕ್ಷಿತವಾದ ಹೋಮಕುಂಡವನ್ನು ಗೃಹ್ಯವಿಧಿಯಿಂದ ನಿರ್ಮಿಸಿ, ಅಗ್ನಿಯನ್ನು ಆಧಾನಮಾಡಿ, ಪ್ರಜ್ವಲಿಸುವ ಅಗ್ನಿಯನ್ನು ಕೈಯಿಂದ ಒಂದೆಡೆಗೆ ಸೇರಿಸಬೇಕು (೩೬). ಅನಂತರ ದರ್ಭೆಗಳಿಂದ ಪರಿಸ್ತರಣಮಾಡಿ ಸುತ್ತಲೂ ಪ್ರೋಕ್ಷಿಸಿ, ಯಥಾವಿಧಿಯಾಗಿ ಅನ್ವಾಧಾನವನ್ನು ಮಾಡಿಕೊಂಡು, (ಅಗ್ನಿಯ ಉತ್ತರಭಾಗದಲ್ಲಿ) ಹೋಮೋಪಯೋಗಿ ದ್ರವ್ಯಗಳನ್ನು ತಂದಿರಿಸಿಕೊಂಡು ಅವನ್ನು ಪ್ರೋಕ್ಷಣೀಯಪಾತ್ರೋದಕದಿಂದ ಪ್ರೋಕ್ಷಿಸಿ, ಅಗ್ನಿಯಲ್ಲಿ ನನ್ನನ್ನು ಧ್ಯಾನಿಸಬೇಕು (೩೭). ಕಾಯಿಸಿದ ಚಿನ್ನದಂತೆ ಹೊಂಬಣ್ಣದವನೂ ಶಂಖ, ಚಕ್ರ, ಗದೆ, ಕಮಲಗಳಿಂದ ಭೂಷಿತವಾದ ಚತುರ್ಭುಜವುಳ್ಳವನೂ ಶಾಂತನೂ ತಾವರೆಯ ಕೇಸರದಂತೆ ಪೀತವಾದ ವಸ್ತ್ರವನ್ನು ಧರಿಸಿದವನೂ ಕಿರೀಟ, ಕಂಕಣ, ಕಟಿಸೂತ್ರ, ಭುಜಕೀರ್ತಿಗಳಿಂದ ಶೋಭಿತನೂ ವಕ್ಷಃಸ್ಥಳದಲ್ಲಿ ಶ್ರೀವತ್ಸಚಿಹ್ನಾಂಕಿತನೂ ಕೌಸ್ತುಭಧಾರಿಯೂ ವನಮಾಲಿಯೂ ಆದ ನನ್ನ ರೂಪವನ್ನು ಧ್ಯಾನಿಸಬೇಕು (೩೮–೩೯).

ಧ್ಯಾಯನ್ನಭ್ಯರ್ಚ್ಯ ದಾರೂಣಿ ಹವಿಷಾಭಿಘೃತಾನಿ ಚ ।
ಪ್ರಾಸ್ಯಾಜ್ಯಭಾಗಾವಾಘಾರೌ ದತ್ತ್ವಾ ಚಾಜ್ಯಪ್ಲುತಂ ಹವಿಃ ॥ ೪೦

ಜುಹುಯಾನ್ಮೂಲಮಂತ್ರೇಣ ಷೋಡಶರ್ಚಾವದಾನತಃ ।
ಧರ್ಮಾದಿಭ್ಯೋ ಯಥಾನ್ಯಾಯಂ ಮಂತ್ರೈಃ ಸ್ವಿಷ್ಟಕೃತಂ ಬುಧಃ ॥ ೪೧

ಅಭ್ಯರ್ಚ್ಯಾಥ ನಮಸ್ಕೃತ್ಯ ಪಾರ್ಷದೇಭ್ಯೋ ಬಲಿಂ ಹರೇತ್ ।
ಮೂಲಮಂತ್ರಂ ಜಪೇದ್ ಬ್ರಹ್ಮ ಸ್ಮರನ್ನಾರಾಯಣಾತ್ಮಕಮ್ ॥ ೪೨

ದತ್ತ್ವಾಽಽಚಮನಮುಚ್ಛೇಷಂ ವಿಷ್ವಕ್ಸೇನಾಯ ಕಲ್ಪಯೇತ್ ।
ಮುಖವಾಸಂ ಸುರಭಿಮತ್ ತಾಂಬೂಲಾದ್ಯಮಥಾರ್ಹಯೇತ್ ॥ ೪೩

---

ಹಾಗೆಯೇ ನನ್ನನ್ನು ಅರ್ಚಿಸಿ ತುಪ್ಪದಿಂದ ಸಿಕ್ತವಾದ ಸಮಿತ್ತುಗಳನ್ನು ಅಗ್ನಿಯಲ್ಲಿ ಹಾಕಬೇಕು. ಅನಂತರ ಆಘಾರಗಳೆಂಬ ಎರಡು ಹವನಗಳನ್ನು ಮಾಡಿ ಆಜ್ಯ ಭಾಗಗಳನ್ನರ್ಪಿಸಬೇಕು. ಅಷ್ಟಾಕ್ಷರೀ ಮೂಲಮಂತ್ರದಿಂದಲೂ ಷೋಡಶ ಋಕ್ಕುಗಳುಳ್ಳ ಪುರುಷಸೂಕ್ತದಿಂದಲೂ ಅವದಾನಕ್ರಮದಿಂದ-ಎಂದರೆ-ಒಂದೊಂದು ಋಕ್ಕಿಗೂ ಆಹುತಿ ಎಂಬ ಕ್ರಮದಿಂದ ಘೃತಸಿಕ್ತವಾದ ಹವಿಸ್ಸನ್ನು ಅರ್ಪಿಸಬೇಕು. ಸ್ವಾಹಾಂತವಾದ ನಾಮಮಂತ್ರಗಳಿಂದ ಧರ್ಮಾದಿದೇವತೆಗಳಿಗೆ ಹವಿಸ್ಸನ್ನರ್ಪಿಸಿ 'ಅಗ್ನಯೇ ಸ್ವಿಷ್ಟಕೃತೇ ಸ್ವಾಹಾ' ಎಂದು ಸ್ವಿಷ್ಟಕೃತ್ ಹವನವನ್ನು ಮಾಡ ತಕ್ಕದ್ದು (೪೦-೪೧). ಆಮೇಲೆ ವಹ್ನಿಯಲ್ಲಿ ಅಂತರ್ಯಾಮಿಯಾಗಿರುವ ಭಗವಂತನನ್ನು ಪೂಜಿಸಿ ನಮಸ್ಕರಿಸಿ ನಂದಾದಿಪಾರ್ಷದರಿಗೆ ಬಲಿಹರಣವನ್ನು ಮಾಡತಕ್ಕದ್ದು. ಅನಂತರ ಪೂಜಾಸ್ಥಾನಕ್ಕೆ ಆಗಮಿಸಿ ನಾರಾಯಣಾತ್ಮಕವಾದ ಬ್ರಹ್ಮವನ್ನು ಸ್ಮರಿಸುತ್ತ ಯಥಾಶಕ್ತಿ ಮೂಲಮಂತ್ರವನ್ನು ಜಪಿಸಬೇಕು (೪೨). ಆಮೇಲೆ ಭಗವಂತನಿಗೆ ಭೋಜನಸಮಾಪ್ತಿಯಾಯಿತೆಂದು ಧ್ಯಾನಿಸಿ ಆಚಮನ ವನ್ನಿತ್ತು ಉಚ್ಛಿಷ್ಟವನ್ನು ವಿಷ್ವಕ್‌ಸೇನನಿಗೆ ಅರ್ಪಿಸತಕ್ಕದ್ದು. ಅನಂತರ [1]ವಿಷ್ವಕ್ ಸೇನನ ಅನುಜ್ಞೆಯಿಂದ ತಾನೂ ಭೋಜನಮಾಡಬೇಕು. ಆಮೇಲೆ ಸುಗಂಧ

---

1. ಈ ಪ್ರಕರಣದಲ್ಲಿ ಶ್ರೀಧರೀಯ ವ್ಯಾಖ್ಯಾನವನ್ನನುಸರಿಸಿ ಅಧ್ಯಾಹೃತವಾದ ಭಾಗವನ್ನೂ ಅನುವಾದದಲ್ಲಿ ಸೇರಿಸಿಕೊಳ್ಳಲಾಗಿದೆ. ಅನುವಾದದಲ್ಲಿರುವ ಈ ಕೆಲವು ವಿಷಯಗಳು ಮೂಲದಲ್ಲಿಲ್ಲ.

ಉಪಗಾಯನ್ ಗೃಣನ್ ನೃತ್ಯನ್ ಕರ್ಮಾಣ್ಯಭಿನಯನ್ ಮಮ ।
ಮತ್ಕಥಾಃ ಶ್ರಾವಯನ್ ಶೃಣ್ವನ್ ಮುಹೂರ್ತಂ ಕ್ಷಣಿಕೋ ಭವೇತ್ ॥ ೪೪

ಸ್ತವೈರುಚ್ಚಾವಚೈಃ ಸ್ತೋತ್ರೈಃ ಪೌರಾಣೈಃ ಪ್ರಾಕೃತೈರಪಿ ।
ಸ್ತುತ್ವಾ ಪ್ರಸೀದ ಭಗವನ್ನಿತಿ ವಂದೇತ ದಂಡವತ್ ॥ ೪೫

ಶಿರೋ ಮತ್ಪಾದಯೋಃ ಕೃತ್ವಾ ಬಾಹುಭ್ಯಾಂ ಚ ಪರಸ್ಪರಮ್ ।
ಪ್ರಪನ್ನಂ ಪಾಹಿ ಮಾಮೀಶ ಭೀತಂ ಮೃತ್ಯುಗ್ರಹಾರ್ಣವಾತ್ ॥ ೪೬

ಇತಿ ಶೇಷಾಂ ಮಯಾ ದತ್ತಾಂ ಶಿರಸ್ಯಾಧಾಯ ಸಾದರಮ್ ।
ಉದ್ವಾಸಯೇಚ್ಚೇದುದ್ವಾಸ್ಯಂ ಜ್ಯೋತಿರ್ಜ್ಯೋತಿಷಿ ತತ್ ಪುನಃ ॥ ೪೭

ಅರ್ಚಾದಿಷು ಯದಾ ಯತ್ರ ಶ್ರದ್ಧಾ ಮಾಂ ತತ್ರ ಚಾರ್ಚಯೇತ್ ।
ಸರ್ವಭೂತೇಷ್ವಾತ್ಮನಿ ಚ ಸರ್ವಾತ್ಮಾಹಮವಸ್ಥಿತಃ ॥ ೪೮

---

ಯುಕ್ತವಾದ ತಾಂಬೂಲಾದಿಗಳನ್ನು ಸ್ವಾಮಿಗೆ ಅರ್ಪಿಸಿ, ಪುಷ್ಪಾಂಜಲಿಯಿಂದ ಮತ್ತೆ ಪೂಜಿಸಬೇಕು (೪೩). ಆಮೇಲೆ ನನ್ನ ಮಹಿಮೆಯನ್ನು ಕುರಿತು ಹಾಡುತ್ತ ಹೊಗಳುತ್ತ ಕುಣಿಯುತ್ತ ನನ್ನ ಕಥಾವೃತ್ತಾಂತವನ್ನು ಅಭಿನಯಿಸುತ್ತ ನನ್ನ ಕಥೆಗಳನ್ನು ಹೇಳುತ್ತ ಕೇಳುತ್ತ ಸ್ವಲ್ಪಕಾಲ ಉತ್ಸವಪ್ರಿಯನಾಗಿರಬೇಕು (೪೪). ನಾನಾಬಗೆಯ ಪ್ರಾಚೀನ ಸ್ತೋತ್ರಗಳಿಂದಲೂ ಲೋಕಭಾಷಾರಚಿತ ಪ್ರಾಕೃತ ಸ್ತೋತ್ರಗಳಿಂದಲೂ ಸ್ತುತಿಸಿ ' ಓ ಭಗವಂತ, ಪ್ರಸನ್ನನಾಗು ' ಎಂದು ಹೇಳಿ ಉದ್ದಂಡ ನಮಸ್ಕಾರ ಮಾಡತಕ್ಕದ್ದು (೪೫). ತನ್ನ ಶಿರಸ್ಸನ್ನು ನನ್ನ ಪಾದಗಳ ಮೇಲಿಟ್ಟು ಎರಡು ಕೈಗಳಿಂದ ನನ್ನ ಪಾದಗಳನ್ನು ಮುಟ್ಟಿ ಅಥವಾ ಎರಡು ಕೈಗಳನ್ನೂ ಬೆನ್ನಹಿಂದೆ ಅನ್ಯೋನ್ಯವಾಗಿ ಹಿಡಿದುಕೊಂಡು ನಮಸ್ಕರಿಸತಕ್ಕದ್ದು. ಆ ಸಮಯದಲ್ಲಿ ' ಮೃತ್ಯುಗ್ರಸ್ತವಾದ ಸಂಸಾರಸಮುದ್ರದಿಂದ ಭೀತನಾಗಿ ನಿನಗೆ ಶರಣಾಗಿರುವ ನನ್ನನ್ನು, ಹೇ ಸ್ವಾಮಿ, ಪಾಲಿಸು ' ಎಂದು ವಿಜ್ಞಾಪಿಸಿಕೊಳ್ಳಬೇಕು (೪೬). ಅನಂತರ ನಾನು ಕೊಟ್ಟದ್ದೆಂದು ತಿಳಿದು ನಿರ್ಮಾಲ್ಯವನ್ನು ಭಕ್ತಿಯಿಂದ ಶಿರಸ್ಸಿನಲ್ಲಿ ಧರಿಸಿ, ಹಿಂದೆ ಹೇಳಿದಂತೆ ಉದ್ವಾಸನಾಯೋಗ್ಯವಾಗಿದ್ದಲ್ಲಿ, ಜ್ಯೋತಿಯನ್ನು ತನ್ನ ಹೃದಯಪದ್ಮಸ್ಥವಾದ ಜ್ಯೋತಿಯಲ್ಲಿ ಉದ್ವಾಸನೆ ಮಾಡತಕ್ಕದ್ದು (೪೭). ಉದ್ಧವ, ನನ್ನ ಅರ್ಚನೆಗೆ ಹೇಳಿದ ಅಧಿಷ್ಠಾನಗಳ ನಡುವೆ ಯಾವುದರಲ್ಲಿ ಯಾವಾಗ ಶ್ರದ್ಧೆ ಹುಟ್ಟುತ್ತದೆಯೋ ಆಗ ಅದರಲ್ಲಿ ನನ್ನನ್ನು ಅರ್ಚಿಸ

ಏವಂ ಕ್ರಿಯಾಯೋಗಪಥೈಃ ಪುಮಾನ್ ವೈದಿಕತಾಂತ್ರಿಕೈಃ ।
ಅರ್ಚನ್ನುಭಯತಃ ಸಿದ್ಧಿಂ ಮತ್ತೋ ವಿಂದತ್ಯಭೀಪ್ಸಿತಾಮ್ ॥ ೪೯

ಮದರ್ಚಾಂ ಸಂಪ್ರತಿಷ್ಠಾಪ್ಯ ಮಂದಿರಂ ಕಾರಯೇದ್ ದೃಢಮ್ ।
ಪುಷ್ಪೋದ್ಯಾನಾನಿ ರಮ್ಯಾಣಿ ಪೂಜಾಯಾತ್ರೋತ್ಸವಾಶ್ರಿತಾನ್ ॥ ೫೦

ಪೂಜಾದೀನಾಂ ಪ್ರವಾಹಾರ್ಥಂ ಮಹಾಪರ್ವಸ್ವಥಾನ್ವಹಮ್ ।
ಕ್ಷೇತ್ರಾಪಣಪುರಗ್ರಾಮಾನ್ ದತ್ತ್ವಾ ಮತ್ಸಾರ್ಷ್ಟಿತಾಮಿಯಾತ್ ॥ ೫೧

ಪ್ರತಿಷ್ಠಯಾ ಸಾರ್ವಭೌಮಂ ಸದ್ಮನಾ ಭುವನತ್ರಯಮ್ ।
ಪೂಜಾದಿನಾ ಬ್ರಹ್ಮಲೋಕಂ ತ್ರಿಭಿರ್ಮತ್ಸಾಮ್ಯತಾಮಿಯಾತ್ ॥ ೫೨

ಮಾಮೇವ ನೈರಪೇಕ್ಷ್ಯೇಣ ಭಕ್ತಿಯೋಗೇನ ವಿಂದತಿ ।
ಭಕ್ತಿಯೋಗಂ ಸ ಲಭತೇ ಏವಂ ಯಃ ಪೂಜಯೇತ ಮಾಮ್ ॥ ೫೩

---

ಬೇಕು. (ಅವುಗಳಲ್ಲಿ ತಾರತಮ್ಯವೇನೂ ಇಲ್ಲ) ಏಕೆಂದರೆ, ಸರ್ವಾತ್ಮನಾದ ನಾನು ಸರ್ವಭೂತಗಳಲ್ಲಿಯೂ ಸರ್ವಹೃದಯದಲ್ಲಿಯೂ ಸದಾ ನೆಲೆಸಿರುತ್ತೇನೆ (೪೮). ಈ ಪ್ರಕಾರವಾಗಿ ಮನುಷ್ಯನು ವೈದಿಕ ಮತ್ತು ತಾಂತ್ರಿಕವಾದ ಕ್ರಿಯಾ ಮಾರ್ಗಗಳಿಂದ ನನ್ನನ್ನು ಅರ್ಚಿಸುತ್ತ, ನನ್ನಿಂದ ಅಪೇಕ್ಷಿತವಾದ ಸಿದ್ಧಿಯನ್ನು ಇಹಪರಗಳೆರಡರಲ್ಲಿಯೂ ಪಡೆಯುತ್ತಾನೆ (೪೯). (ಭಕ್ತನು ಸಮರ್ಥನಾಗಿದ್ದರೆ) ನನ್ನ ವಿಗ್ರಹವನ್ನು ಪ್ರತಿಷ್ಠಾಪಿಸಿ ದೃಢವಾದ ದೇವಸ್ಥಾನವನ್ನು ಕಟ್ಟಿಸಬಹುದು. ಸುತ್ತಲೂ ರಮ್ಯವಾದ ಪುಷ್ಪೋದ್ಯಾನಗಳನ್ನು ನಿರ್ಮಿಸಿ, ನಿತ್ಯಪೂಜೆ ರಥಯಾತ್ರೆ ಮಹೋತ್ಸವಗಳಿಗೆ ಬೇಕಾದ ಸೌಕರ್ಯಗಳನ್ನು ಕಲ್ಪಿಸಬಹುದು (೫೦). ಪ್ರತಿ ದಿನದಲ್ಲಿಯೂ ಪರ್ವದಿನಗಳಲ್ಲಿಯೂ ಪೂಜಾದಿಗಳು ಅವಿಚ್ಛಿನ್ನವಾಗಿ ನಡೆಯುತ್ತ ಹೋಗುವಂತೆ ಹೊಲ, ಅಂಗಡಿ, ನಗರ, ಹಳ್ಳಿಗಳನ್ನು ಯಥಾಶಕ್ತಿಯಾಗಿ ಮೀಸಲಾಗಿಟ್ಟು ನನಗೆ ಸಮಾನವಾದ ಸಂಸಿದ್ಧಿಯನ್ನು ಪಡೆದುಕೊಳ್ಳಲಿ (೫೧). ನನ್ನ ವಿಗ್ರಹದ ಪ್ರತಿಷ್ಠೆಯಿಂದ ಸಾರ್ವಭೌಮ ಪದವಿಯನ್ನೂ ಕ್ಷೇತ್ರಾದಿಗಳ ದಾನದಿಂದ ಭುವನತ್ರಯಾಧಿಪತ್ಯವನ್ನೂ ಪೂಜಾದಿಸೇವೆಗಳಿಂದ ಬ್ರಹ್ಮಲೋಕವನ್ನೂ ಒಟ್ಟು ಈ ಮೂರು ಪುಣ್ಯಕಾರ್ಯಗಳಿಂದ ನನಗೆ ಸಮಾನವಾದ ಸ್ಥಿತಿಯನ್ನೂ ಸಕಾಮ ಭಕ್ತನು ಪಡೆಯುವನು (೫೨). ಆದರೆ ಯಾವಾತನು ಫಲಾಪೇಕ್ಷೆಯಿಲ್ಲದೆ ಭಕ್ತಿಯೋಗದಿಂದ ನನ್ನನ್ನು ಸೇವಿಸುತ್ತಾನೋ ಅವನು ನನ್ನನ್ನೇ ಪಡೆದುಕೊಳ್ಳು

ಯಃ ಸ್ವದತ್ತಾಂ ಪರೈರ್ದತ್ತಾಂ ಹರೇತ ಸುರವಿಪ್ರಯೋಃ ।
ವೃತ್ತಿಂ ಸ ಜಾಯತೇ ವಿಡ್ಭುಗ್ ವರ್ಷಾಣಾಮಯುತಾಯುತಮ್ ॥೫೪

ಕರ್ತುಶ್ಚ ಸಾರಥೇರ್ಹೇತೋರನುಮೋದಿತುರೇವ ಚ ।
ಕರ್ಮಣಾಂ ಭಾಗಿನಃ ಪ್ರೇತ್ಯ ಭೂಯೋ ಭೂಯಸಿ ತತ್ಫಲಮ್ ॥ ೫೫

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಸಪ್ತವಿಂಶಾಧ್ಯಾಯಃ



ವನು—ನನ್ನಲ್ಲಿ ಸೇರಿಹೋಗುವನು. ಪೂರ್ವೋಕ್ತಕ್ರಮದಿಂದ ಪೂಜಿಸತಕ್ಕವನಿಗೆ ಅಹೈತುಕವಾದ ಭಕ್ತಿಯೋಗವು ಲಭಿಸುವುದು (೫೩). ದೇವಬ್ರಾಹ್ಮಣರಿಗೆ ತಾನೇ ಕೊಟ್ಟದ್ದಾಗಲಿ ಪರರು ಕೊಟ್ಟದ್ದಾಗಲಿ ಯಾವ [1]ವೃತ್ತಿಯುಂಟೋ ಅದನ್ನು ಅಪಹರಿಸತಕ್ಕವನು ಸಾವಿರಾರು ವರ್ಷಗಳವರೆಗೆ ಅಮೇಧ್ಯವನ್ನು ತಿನ್ನುವ ಕ್ರಿಮಿಯಾಗಿ ಹುಟ್ಟುವನು (೫೪). ಅಪಹರಿಸತಕ್ಕ ಕರ್ತೃವಿಗೆ ಮಾತ್ರವಲ್ಲದೆ ಅವನಿಗೆ ಸಹಕಾರವನ್ನು ನೀಡತಕ್ಕ ಸಾರಥಿಗೂ ಪ್ರೇರಕನಿಗೂ ಒಪ್ಪಿಗೆಯನ್ನು ನೀಡತಕ್ಕವನಿಗೂ ಸಹ ಅದೇ ಫಲವಾಗುತ್ತದೆ. ಏಕೆಂದರೆ, ಇವರೆಲ್ಲರೂ ದುಷ್ಟ ಕಾರ್ಯಸಾಧನೆಯಲ್ಲಿ ಭಾಗಿಗಳು. ಈ ಕಾರ್ಯಸಾಧನೆಗೆ ಹೆಚ್ಚು ಸಹಾಯ ಮಾಡಿದವರಿಗೆ ತಕ್ಕಂತೆ ಹೆಚ್ಚಿನ ಕೆಟ್ಟ ಫಲ ದೊರೆಯುತ್ತದೆ" ಎಂದನು (೫೫).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಇಪ್ಪತ್ತೇಳನೆಯ ಅಧ್ಯಾಯ



1. ವೃತ್ತಿ – ಹೊಲ ಮೊದಲಾದವುಗಳ ಕಾಣಿಕೆ–ದೇವಸ್ವ ಮತ್ತು ಬ್ರಹ್ಮಸ್ವ.

# ಅಷ್ಟಾವಿಂಶಾಧ್ಯಾಯಃ

ಶ್ರೀಭಗವಾನುವಾಚ—

ಪರಸ್ವಭಾವಕರ್ಮಾಣಿ ನ ಪ್ರಶಂಸೇನ್ನ ಗರ್ಹಯೇತ್ ।
ವಿಶ್ವಮೇಕಾತ್ಮಕಂ ಪಶ್ಯನ್ ಪ್ರಕೃತ್ಯಾ ಪುರುಷೇಣ ಚ ॥ ೧

ಪರಸ್ವಭಾವಕರ್ಮಾಣಿ ಯಃ ಪ್ರಶಂಸತಿ ನಿಂದತಿ ।
ಸ ಆಶು ಭ್ರಶ್ಯತೇ ಸ್ವಾರ್ಥಾದಸತ್ಯಭಿನಿವೇಶತಃ ॥ ೨

ತೈಜಸೇ ನಿದ್ರಯಾಽಽಪನ್ನೇ ಪಿಂಡಸ್ಥೋ ನಷ್ಟಚೇತನಃ ।
ಮಾಯಾಂ ಪ್ರಾಪ್ನೋತಿ ಮೃತ್ಯುಂ ವಾ ತದ್ವನ್ನಾನಾರ್ಥದೃಕ್ ಪುಮಾನ್ ॥

## ಅಧ್ಯಾಯ ೨೮

ಸಂಸಾರವು ಯಾರಿಗೆ?-ಎಂದು ಉದ್ಧವನ ಪ್ರಶ್ನೆ. ಸಂಸಾರವು ಮಿಥ್ಯೆಯಾದರೂ ಭ್ರಾಂತಿಯಿಂದ ತೋರುತ್ತದೆ—ಎಂದು ಜ್ಞಾನಯೋಗವನ್ನಾಶ್ರಯಿಸಿ ಶ್ರೀಕೃಷ್ಣನ ಉತ್ತರ.

ಭಗವಂತನು ಹೀಗೆಂದನು: "ಉದ್ಧವ, ವಿಶ್ವವು ಪ್ರಕೃತಿ ಪುರುಷರಿಂದ ಏಕಾತ್ಮಕವಾಗಿದೆ ಎಂದು ತಿಳಿದವನು ಅನ್ಯರ ಸ್ವಭಾವವನ್ನೂ ಅವರು ಮಾಡುವ ಕಾರ್ಯಗಳನ್ನೂ ಹೊಗಳಲೂ ಬಾರದು, ನಿಂದಿಸಲೂ ಬಾರದು. ಅನ್ಯರ ಸ್ವಭಾವವನ್ನೂ ಕಾರ್ಯಗಳನ್ನೂ ಯಾವನು ಹೊಗಳುತ್ತಾನೋ ಅಥವಾ ನಿಂದಿಸುತ್ತಾನೋ ಅತನು [1]ಅಸತ್ತಾದ ದ್ವೈತದಲ್ಲಿ ಅಭಿನಿವೇಶವಿಟ್ಟಿರತಕ್ಕವನಾದ್ದರಿಂದ, ಜ್ಞಾನನಿಷ್ಠೆಯಿಂದ ಬೇಗನೆ ಭ್ರಷ್ಟನಾಗಿಬಿಡುತ್ತಾನೆ (೧–೨). ತೈಜಸವಾದ—ಎಂದರೆ ರಾಜಸಾಹಂಕಾರ ಕಾರ್ಯವಾದ ಇಂದ್ರಿಯವರ್ಗವು ನಿದ್ರೆಯಿಂದ ಆಕ್ರಾಂತವಾದಾಗ, ದೇಹದಲ್ಲಿರತಕ್ಕ ಜೀವನು (ಕೇವಲ ಮನಸ್ಸಿನಿಂದ) ಮಾಯೆಯೆಂಬ ಸ್ವಪ್ನವನ್ನನುಭವಿಸುವನು. ಅಥವಾ ಚೇತನಭ್ರಂಶವನ್ನು ಹೊಂದಿ ಮೃತ್ಯುಸಮಾನವಾದ

1. ಸ್ತುತಿನಿಂದೆಗಳು ದ್ವೈತಭಾವನೆಯಿದ್ದಾಗಲೇ ಬರತಕ್ಕವು. ಸರ್ವವೂ ಏಕಾತ್ಮಕವೆಂಬ ಅದ್ವೈತನಿಷ್ಠೆಯಲ್ಲಿ ಸ್ತುತಿನಿಂದೆಗಳಿಗೆ ಅವಕಾಶವಿಲ್ಲ. ಸಾಧಕನು ಈ ನಿಷ್ಠೆಯನ್ನು ಅಭ್ಯಾಸಮಾಡಬೇಕು—ಎಂದು ಅಭಿಪ್ರಾಯ.

ಕಿಂ ಭದ್ರಂ ಕಿಮಭದ್ರಂ ವಾ ದ್ವೈತಸ್ಯಾವಸ್ತುನಃ ಕಿಯತ್ ।
ವಾಚೋದಿತಂ ತದನೃತಂ ಮನಸಾ ಧ್ಯಾತಮೇವ ಚ ॥ ೪

ಛಾಯಾಪ್ರತ್ಯಾಹ್ವಯಾಭಾಸಾ ಹ್ಯಸಂತೋಽಪ್ಯರ್ಥಕಾರಿಣಃ ।
ಏವಂ ದೇಹಾದಯೋ ಭಾವಾ ಯಚ್ಛಂತ್ಯಾಮೃತ್ಯುತೋ ಭಯಮ್ ॥ ೫

ಆತ್ಮೈವ ತದಿದಂ ವಿಶ್ವಂ ಸೃಜ್ಯತೇ ಸೃಜತಿ ಪ್ರಭುಃ ।
ತ್ರಾಯತೇ ತ್ರಾತಿ ವಿಶ್ವಾತ್ಮಾ ಹ್ರಿಯತೇ ಹರತೀಶ್ವರಃ ॥ ೬

ತಸ್ಮಾನ್ನಹ್ಯಾತ್ಮನೋಽನ್ಯಸ್ಮಾದನ್ಯೋ ಭಾವೋ ನಿರೂಪಿತಃ ।
ನಿರೂಪಿತೇಯಂ ತ್ರಿವಿಧಾ ನಿರ್ಮೂಲಾ ಭಾತಿರಾತ್ಮನಿ ।
ಇದಂ ಗುಣಮಯಂ ವಿದ್ಧಿ ತ್ರಿವಿಧಂ ಮಾಯಯಾ ಕೃತಮ್ ॥ ೭

---

ಸುಷುಪ್ತಿಯನ್ನಪ್ಪುವನು. ಅಂತೆಯೇ ನಾನಾರ್ಥವಾದ ದ್ವೈತದಲ್ಲಿ ಅಭಿನಿವೇಶವುಳ್ಳ ಮನುಷ್ಯನು ಮನೋವಿಕ್ಷೇಪವನ್ನೋ ಮನೋಭ್ರಂಶವನ್ನೋ [1]ಪಡೆಯುವನು (೩). ವಸ್ತುತಃ ಇಲ್ಲದೇ ಇರುವ ದ್ವೈತಪದಾರ್ಥಗಳಲ್ಲಿ ಹೊಗಳತಕ್ಕ ಒಳ್ಳೆಯದು ಯಾವುದು! ನಿಂದಿಸತಕ್ಕ ಕೆಟ್ಟದು ಯಾವುದು! ಯಾವುದು ವಾಕ್ಕಿಗೆ ವಿಷಯವಾಗುತ್ತದೆಯೋ ಯಾವುದು ಮನಸ್ಸಿಗೆ ಗೋಚರವಾಗುತ್ತದೆಯೋ ಅದೆಲ್ಲವೂ ಮಿಥ್ಯೆಯೇ ಸರಿ (೪). ಪ್ರತಿಬಿಂಬ, ಪ್ರತಿಧ್ವನಿ, ರಜ್ಜುಸರ್ಪ— ಇತ್ಯಾದಿ ಪದಾರ್ಥಗಳು ಪರಮಾರ್ಥದಲ್ಲಿ ಇಲ್ಲದಿದ್ದರೂ ಹೇಗೆ ವ್ಯವಹಾರದಲ್ಲಿ ಕಾರ್ಯಕಾರಿಗಳಾಗಿಬಿಡುತ್ತವೆಯೋ ಹಾಗೆಯೇ ಮಿಥ್ಯೆಯಾದ ದೇಹಾದಿಪದಾರ್ಥಗಳು ಸಾಯುವವರೆಗೋ ಭಯಾದಿಗಳನ್ನು ಉಂಟುಮಾಡುತ್ತಲೇ ಇರುತ್ತವೆ (೫). ಈ ವಿಶ್ವವು ಕೇವಲ ಆತ್ಮವೇ ಆಗಿದೆ ಪರಮಾತ್ಮನೇ ಸೃಜಿಸುತ್ತಾನೆ; ಸೃಜಿಸಲ್ಪಡುತ್ತಾನೆ. ಪಾಲಿಸುತ್ತಾನೆ; ಪಾಲಿಸಲ್ಪಡುತ್ತಾನೆ. ವಿಶ್ವಾತ್ಮನಾದ ಈಶ್ವರನೇ ಪ್ರಳಯಮಾಡುತ್ತಾನೆ; ಪ್ರಳಯಕ್ಕೆ ಈಡಾಗುತ್ತಾನೆ (೬). ಆದ್ದರಿಂದ ಸೃಜ್ಯವೂ ಪಾಲ್ಯವೂ ನಾಶ್ಯವೂ ಆದ ಆತ್ಮವಸ್ತುವಿಗಿಂತ ಇನ್ನೊಂದು ಭಾವಪದಾರ್ಥವು ಕಂಡುಬಂದಿಲ್ಲ. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂದು ತ್ರಿವಿಧವಾಗಿ ಕಂಡುಬರುವ ವಿಶ್ವವು ನಿರ್ಮೂಲವಾಗಿದ್ದರೂ ಆತ್ಮನಲ್ಲಿ ಪ್ರತೀತವಾಗುತ್ತದೆ. ಉದ್ಧವ, ಈ ರೀತಿ ತ್ರಿವಿಧವೂ ಗುಣಮಯವೂ ಆದ ವಿಶ್ವವು

1. ಅನಾತ್ಮಸಂಪರ್ಕದಿಂದ ಆತ್ಮನಿಗೆ ಸ್ವರೂಪಭ್ರಂಶವೆಂದು ಅಭಿಪ್ರಾಯ.

ಏತದ್ ವಿದ್ವಾನ್ ಮದುದಿತಂ ಜ್ಞಾನವಿಜ್ಞಾನನೈಪುಣಮ್ ।
ನ ನಿಂದತಿ ನ ಚ ಸ್ತೌತಿ ಲೋಕೇ ಚರತಿ ಸೂರ್ಯವತ್ ॥ ೮

ಪ್ರತ್ಯಕ್ಷೇಣಾನುಮಾನೇನ ನಿಗಮೇನಾತ್ಮಸಂವಿದಾ ।
ಆದ್ಯಂತವದಸಜ್ಜ್ಞಾತ್ವಾ ನಿಸ್ಸಂಗೋ ವಿಚರೇದಿಹ ॥ ೯

ಉದ್ಧವ ಉವಾಚ—

ನೈವಾತ್ಮನೋ ನ ದೇಹಸ್ಯ ಸಂಸೃತಿರ್ದ್ರಷ್ಟೃದೃಶ್ಯಯೋಃ ।
ಅನಾತ್ಮಸ್ವದೃಶೋರೀಶ ಕಸ್ಯ ಸ್ಯಾದುಪಲಭ್ಯತೇ ॥ ೧೦

ಆತ್ಮಾವ್ಯಯೋಽಗುಣಃ ಶುದ್ಧಃ ಸ್ವಯಂಜ್ಯೋತಿರನಾವೃತಃ ।
ಅಗ್ನಿವದ್ದಾರುವದಚಿದ್ದೇಹಃ ಕಸ್ಯೇಹ ಸಂಸೃತಿಃ ॥ ೧೧

---

ಮಾಯಾನಿರ್ಮಿತವೆಂದು ತಿಳಿ (೭). ನಾನು ಬೋಧಿಸಿದ ಈ ಜ್ಞಾನವಿಜ್ಞಾನ ನಿಷ್ಠೆಯನ್ನು ಬಲ್ಲವನು ಯಾರನ್ನೂ ನಿಂದಿಸುವುದೂ ಇಲ್ಲ, ಹೊಗಳುವುದೂ ಇಲ್ಲ. ಸೂರ್ಯನಂತೆ ಸರ್ವಸಮನಾಗಿ ಲೋಕದಲ್ಲಿ ಸಂಚರಿಸುತ್ತಿರುವನು. [1]ಪ್ರತ್ಯಕ್ಷ ಅನುಮಾನ, ವೇದರೂಪವಾದ ಶಬ್ದ ಮತ್ತು ಸ್ವಾನುಭವ—ಇಷ್ಟು ಪ್ರಮಾಣಗಳಿಂದ ಆದ್ಯಂತವುಳ್ಳ ಈ ದ್ವೈತವು ಅಸತ್ಯವೆಂದು ನಿಶ್ಚಯಿಸಿ ಇದರಲ್ಲಿ ಆಸಕ್ತಿ ರಹಿತನಾಗಿರಬೇಕು" ಎಂದನು (೮–೯). ಆಗ ಉದ್ಧವನು "ಹೇ ಸ್ವಾಮಿ, ದ್ರಷ್ಟೃವೂ ಸ್ವದೃಕ್ ಆದ ಚೇತನನೂ ಆಗಿರುವ ಆತ್ಮನಿಗೆ ಸಂಸಾರವಿಲ್ಲ. ದೃಶ್ಯವೂ ಅನಾತ್ಮವಾದ್ದರಿಂದ ಜಡವೂ ಆಗಿರುವ ದೇಹಕ್ಕೂ ಸಂಸಾರವಿಲ್ಲ! ಹಾಗಾದರೆ ಈ ಸಂಸಾರ ಯಾರಿಗೆ? ಸಂಸಾರವಿಲ್ಲವೆನ್ನುವಂತೆಯೂ ಇಲ್ಲ. ಸಂಸಾರವು ನಮಗೆ ಉಪಲಬ್ಧವಾಗುತ್ತಿದೆ (೧೦). ಆತ್ಮನಾದರೋ ಅವ್ಯಯನೂ

---

1. ಪ್ರತ್ಯಕ್ಷ=ಆದ್ಯಂತವುಳ್ಳ ಘಟವು ಅಸತ್ಯ, ನಶ್ವರ.
2. ಅನುಮಾನ=ದೃಶ್ಯವಾದ ಪೃಥಿವ್ಯಾದಿಗಳು ಆದ್ಯಂತವಿರುವುದರಿಂದ ಅಸತ್ಯ, ಘಟದಂತೆ.
3. ವೇದ=ನೇಹ ನಾನಾಸ್ತಿ ಕಿಂಚನ (ಬೃಹ. ೪–೪–೧೯),
   ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್ ।
   (ಛಾಂ. ೬–೪)
4. ಈ ಮೂರು ಪ್ರಮಾಣಗಳಿಂದ ಪರಿಪಕ್ವವಾದ ಬುದ್ಧಿಯೇ ಸ್ವಾನುಭವ.

ಶ್ರೀಭಗವಾನುವಾಚ—

**ಯಾವದ್ದೇಹೇಂದ್ರಿಯ ಪ್ರಾಣೈರಾತ್ಮನಃ ಸಂನಿಕರ್ಷಣಮ್ ।**
**ಸಂಸಾರಃ ಫಲವಾಂಸ್ತಾವದಪಾರ್ಥೋಽಪ್ಯವಿವೇಕಿನಃ ॥ ೧೨**

**ಅರ್ಥೇ ಹ್ಯವಿದ್ಯಮಾನೇಽಪಿ ಸಂಸೃತಿರ್ನ ನಿವರ್ತತೇ ।**
**ಧ್ಯಾಯತೋ ವಿಷಯಾನಸ್ಯ ಸ್ವಪ್ನೇಽನರ್ಥಾಗಮೋ ಯಥಾ ॥ ೧೩**

**ಯಥಾ ಹ್ಯಪ್ರತಿಬುದ್ಧಸ್ಯ ಪ್ರಸ್ವಾಪೋ ಬಹ್ವನರ್ಥಭೃತ್ ।**
**ಸ ಏವ ಪ್ರತಿಬುದ್ಧಸ್ಯ ನ ವೈ ಮೋಹಾಯ ಕಲ್ಪತೇ ॥ ೧೪**

---

ನಿರ್ಗುಣನೂ ಶುದ್ಧನೂ ಸ್ವಯಂಜ್ಯೋತಿಯೂ ಅಪರಿಚ್ಛಿನ್ನನೂ ಆಗಿದ್ದಾನೆ. ಅಗ್ನಿಯಂತೆ ಪ್ರಕಾಶಕನಾಗಿದ್ದಾನೆ. ದೇಹವಾದರೋ ಮರದ ತುಂಡಿನಂತೆ ಪ್ರಕಾಶ್ಯವೂ ಜಡವೂ ಆಗಿದೆ. ಹೀಗಿರುವಾಗ ಯಾರಿಗೆ ಸಂಸಾರವಿದೆ ಎನ್ನಬೇಕು ?" ಎಂದು ಕೇಳಿದನು (೧೧). ಅದಕ್ಕೆ ಭಗವಂತನು ಹೀಗೆಂದನು : "ಸರಿಯೇ ; ಆದರೆ ದೇಹೇಂದ್ರಿಯ ಪ್ರಾಣಗಳೊಡನೆ ಆತ್ಮನಿಗೆ ಸಂಬಂಧವಿರುವವರೆಗೆ ಸಂಸಾರವು ಫಲತಃ ತೋರಿಬರುತ್ತದೆ. ಮನುಷ್ಯನು ಅವಿವೇಕಿಯಾದ್ದರಿಂದ ದೇಹಾದಿಗಳೊಡನೆ ಸಂಬಂಧವು ಕಾಣುತ್ತದೆ (ಈ ಸಂಬಂಧವು ಅಜ್ಞಾನಜನ್ಯವಾದದ್ದು). ಸಂಸಾರವು ಮಿಥ್ಯಾಭೂತವಾದರೂ (ಅಜ್ಞಾನದಿಂದ) ತೋರುತ್ತದೆ (೧೨). ಪದಾರ್ಥವು ವಸ್ತುತಃ ಇಲ್ಲದಿದ್ದರೂ ಶಬ್ದಾದಿವಿಷಯಗಳನ್ನು ಕಲ್ಪಿಸಿಕೊಂಡು ಧ್ಯಾನಿಸುತ್ತಿರುವ ಜೀವನಿಗೆ ಸಂಸಾರವು ತಪ್ಪುವುದಿಲ್ಲ. ಕನಸಿನಲ್ಲಿ ಭಯ ಕಂಪಾದ್ಯನರ್ಥವು ಹೇಗೆ ತಪ್ಪುವುದಿಲ್ಲವೋ ಹಾಗೆ (೧೩). ಎಚ್ಚರವಾಗದೆ ಮಲಗಿರತಕ್ಕವನಿಗೆ ಸ್ವಪ್ನವು ಹೇಗೆ ಬಹುವಿಧ ಅನರ್ಥಗಳನ್ನೊಡ್ಡುತ್ತಿದೆಯೋ ಹಾಗೆ ಎಚ್ಚೆತ್ತವನಿಗೆ ಅದು ಯಾವ [1]ಮೋಹವನ್ನೂ ಉಂಟುಮಾಡಲಾರದು. ಶೋಕ, ಹರ್ಷ, ಭಯ, ಕ್ರೋಧ, ಲೋಭ, ಚಿತ್ತವೈಕಲ್ಯ, ಆಸೆ ಮುಂತಾದ ಗುಣಗಳೂ ಜನನ ಮರಣ ಗಳೂ ದೇಹಾದಿಸಂನಿಕರ್ಷದಿಂದಾದ ಅಹಂಕಾರಕ್ಕೇ [2]ಇರುತ್ತವೆ, ಆತ್ಮನಿಗಲ್ಲ

---

1. ಜೀವನ್ಮುಕ್ತನಿಗೆ ವಿಷಯವು ಗೋಚರಿಸಿದರೂ ಬಂಧಕವಾಗದು.

2. ಜಾಗ್ರತ್‌ಸ್ವಪ್ನಗಳಲ್ಲಿ ದೇಹಾಭಿಮಾನವಿರುತ್ತದೆ. ಆಗಲೇ ಇವು ಕಂಡು ಬರುತ್ತವೆ. ಸುಷುಪ್ತಿಯಲ್ಲಿ ಕಂಡುಬರುವುದಿಲ್ಲ. ಅನ್ವಯವ್ಯತಿರೇಕಗಳಿಂದ ಇವು ಆತ್ಮನಿಗಿಲ್ಲವೆಂದು ಗೊತ್ತಾಗುತ್ತದೆ.

ಶೋಕಹರ್ಷಭಯಕ್ರೋಧಲೋಭಮೋಹ ಸ್ಪೃಹಾದಯಃ ।
ಅಹಂಕಾರಸ್ಯ ದೃಶ್ಯಂತೇ ಜನ್ಮ ಮೃತ್ಯುಶ್ಚ ನಾತ್ಮನಃ ॥ ೧೫

ದೇಹೇಂದ್ರಿಯಪ್ರಾಣಮನೋಽಭಿಮಾನೋ
ಜೀವೋಽಂತರಾತ್ಮಾ ಗುಣಕರ್ಮಮೂರ್ತಿಃ ।
ಸೂತ್ರಂ ಮಹಾನಿತ್ಯುರುಧೇವ ಗೀತಃ
ಸಂಸಾರ ಆಧಾವತಿ ಕಾಲತಂತ್ರಃ ॥ ೧೬

ಅಮೂಲಮೇತದ್ ಬಹುರೂಪರೂಪಿತಂ
ಮನೋ ವಚಃ ಪ್ರಾಣಶರೀರಕರ್ಮ ।
ಜ್ಞಾನಾಸಿನೋಪಾಸನಯಾ ಶಿತೇನ-
ಚ್ಛಿತ್ತ್ವಾ ಮುನಿರ್ಗಾಂ ವಿಚರತ್ಯತೃಷ್ಣಃ ॥ ೧೭

ಜ್ಞಾನಂ ವಿವೇಕೋ ನಿಗಮಸ್ತಪಶ್ಚ
ಪ್ರತ್ಯಕ್ಷಮೈತಿಹ್ಯಮಥಾನುಮಾನಮ್ ।

---

(೧೪–೧೫). ದೇಹ, ಇಂದ್ರಿಯ, ಪ್ರಾಣ, ಮನಸ್ಸು—ಇತ್ಯಾದಿಗಳಲ್ಲಿ 'ನಾನು ನನ್ನದು' ಎಂದು ಅಭಿಮಾನವಹಿಸಿ ಅಂತರ್ಗತನಾಗಿರುವ ಆತ್ಮನೇ ಜೀವನೆನಿಸಿದ್ದಾನೆ. ಈತನು ಗುಣಕರ್ಮಮಯವಾದ ಮೂರ್ತಿಯುಳ್ಳವನು. ಸೂಕ್ಷ್ಮವಾದ ಉಪಾಧಿಗಳಿಂದ ಸೂತ್ರ, ಮಹಾನ್—ಈ ರೀತಿ ಬಹುವಿಧವಾಗಿ [1]ಉಕ್ತನಾಗಿರುತ್ತಾನೆ. ಈತನು ಕಾಲನೆಂಬ ಪರಮೇಶ್ವರನಿಗೆ ಅಧೀನನಾಗಿ ಸಂಸಾರದಲ್ಲಿ ಸುತ್ತಾಡುತ್ತಿದ್ದಾನೆ (೧೬). ಅಹಂಕಾರಕೃತವಾದ ಈ ಸಂಸಾರಬಂಧನವು ಬಹು ಪ್ರಕಾರದ ರೂಪಗಳಿಂದ ಇಂದ್ರಜಾಲದಂತೆ ಕಲ್ಪಿತವಾಗಿದೆ. ಇದು ಮನಸ್ಸು, ವಾಕ್ಕು, ಪ್ರಾಣ, ಶರೀರ, ಕರ್ಮ—ಇವುಗಳ ಸಮುದಾಯರೂಪವಾಗಿದೆ. ಮುನಿಯಾದವನು ಗುರೂಪಾಸನೆಯಿಂದ ಸಂಪಾದಿಸಿದ ಜ್ಞಾನವೆಂಬ ಹರಿತವಾದ ಖಡ್ಗದಿಂದ ಈ ಬಂಧನವನ್ನು ಕತ್ತರಿಸಿ ಎಸೆದು ನಿಷ್ಕಾಮನಾಗಿ ಲೋಕದಲ್ಲಿ ಸಂಚರಿಸಿಕೊಂಡಿರುತ್ತಾನೆ (೧೭). ಅಂತಹ ಜ್ಞಾನವೆಂದರೆ ವಿವೇಕವೇ. ಅದಕ್ಕೆ ಇವು

---

1. ಅಹಂಕಾರಕ್ಕೆ ಸಂಸಾರವೆಂದರೆ, ಅಹಂಕಾರೋಪಾಧಿಯಾದ ಜೀವನಿಗೆ ಸಂಸಾರವೆಂದರ್ಥ. ಅಹಂಕಾರವು ನಶಿಸಿದರೆ ಸಂಸಾರವೂ ನಶಿಸುವುದು—ಎಂದು ಅಭಿಪ್ರಾಯ.

ಆದ್ಯಂತಯೋರಸ್ಯ ಯದೇವ ಕೇವಲಂ
ಕಾಲಶ್ಚ ಹೇತುಶ್ಚ ತದೇವ ಮಧ್ಯೇ ॥ ೧೮

ಯಥಾ ಹಿರಣ್ಯಂ ಸ್ವಕೃತಂ ಪುರಸ್ತಾತ್
ಪಶ್ಚಾಚ್ಚ ಸರ್ವಸ್ಯ ಹಿರಣ್ಮಯಸ್ಯ ।
ತದೇವ ಮಧ್ಯೇ ವ್ಯವಹಾರ್ಯಮಾಣಂ
ನಾನಾಪದೇಶೈರಹಮಸ್ಯ ತದ್ವತ್ ॥ ೧೯

ವಿಜ್ಞಾನಮೇತತ್ತ್ರಿಯವಸ್ಥಮಂಗ
ಗುಣತ್ರಯಂ ಕಾರಣಕಾರ್ಯಕರ್ತೃ ।
ಸಮನ್ವಯೇನ ವ್ಯತಿರೇಕತಶ್ಚ
ಯೇನೈವ ತುರ್ಯೇಣ ತದೇವ ಸತ್ಯಮ್ ॥ ೨೦

---

ಸಾಧನಗಳು—ವೇದ, ಸ್ವಧರ್ಮ, ಸ್ವಾನುಭವ, ಗುರೂಪದೇಶ ಮತ್ತು ತರ್ಕ. ಈ ಸಾಧನಗಳಿಂದಾಗುವ ಸಾಧ್ಯಫಲವು ಯಾವುದೆಂದರೆ—ಈ ಜಗತ್ತಿನ ಆದ್ಯಂತಗಳಲ್ಲಿ ಯಾವುದಿರುತ್ತದೆಯೋ ಅದೊಂದೇ ಮಧ್ಯದಲ್ಲಿಯೂ ಇರುತ್ತದೆ. ಅದು ಯಾವುದೆಂದರೆ, ಈ ಜಗತ್ತಿಗೆ ಕಾಲರೂಪಪ್ರಕಾಶಕವೂ ಕಾರಣವೂ ಆದ ಬ್ರಹ್ಮ ಒಂದೇ ಸತ್ಯ, ಜಗತ್ತಲ್ಲ—ಎಂಬ ಜ್ಞಾನ (೧೮). ಚಿನ್ನವು ಕಟಕಕುಂಡಲಾದಿ ರೂಪದಿಂದ ನಿರ್ಮಿಸಲ್ಪಡುತ್ತದೆಯಷ್ಟೆ. ಆಗ ಮಧ್ಯದಲ್ಲಿ ಕಟಕ, ಕುಂಡಲ—ಇತ್ಯಾದಿಯಾಗಿ ನಾನಾ ನಾಮಗಳಿಂದ ಕೇವಲ ವ್ಯವಹರಿಸಲ್ಪಡುತ್ತದೆ. ಆದರೂ ಸಹ ಕಟಕಾದಿಗಳ ಉತ್ಪತ್ತಿಗೆ ಪೂರ್ವದಲ್ಲಿಯೂ ಅವುಗಳ ಅಂತ್ಯದಲ್ಲಿಯೂ ಮಧ್ಯದಲ್ಲಿಯೂ ಚಿನ್ನವೇ ಇರುತ್ತದೆ. ಹಾಗೆಯೇ ಈ ವಿಶ್ವದ ಉತ್ಪತ್ತಿಗೆ ಮೊದಲು, ಕಡೆಯಲ್ಲಿ, ನಡುವೆ ಸಹ ನಾನೊಬ್ಬನೇ ಇರತಕ್ಕವನು (ಮಧ್ಯದಲ್ಲಿ ವ್ಯವಹಾರಕ್ಕಾಗಿ ನಾನಾ ನಾಮರೂಪಗಳು ಬಂದಿರುತ್ತವೆ) (೧೯) ಎಲೋ-ಉದ್ಧವ, ಜಾಗ್ರತ್ ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳನ್ನೈದುವ ಯಾವ ವಿಜ್ಞಾನವು-ಎಂದರೆ-ಅಂತಃಕರಣವುಂಟೋ, ಈ ಅವಸ್ಥೆಗಳಿಗೆ ಕಾರಣವಾದ ಯಾವ ಸತ್ತ್ವಾದಿಗುಣತ್ರಯ ಉಂಟೋ, ಅಲ್ಲದೆ ಗುಣತ್ರಯ ಕಾರ್ಯಗಳಾದ ಯಾವ ಕಾರಣ-ಅಧ್ಯಾತ್ಮ, ಕಾರ್ಯ-ಅಧಿಭೂತ, ಕರ್ತೃ-ಅಧಿದೈವಗಳುಂಟೋ

*

ನ ಯತ್ ಪುರಸ್ತಾದುತ ಯನ್ನ ಪಶ್ಚಾ-
ನ್ಮಧ್ಯೇ ಚ ತನ್ನ ವ್ಯಪದೇಶಮಾತ್ರಮ್ ।
ಭೂತಂ ಪ್ರಸಿದ್ಧಂ ಚ ಪರೇಣ ಯದ್ ಯತ್
ತದೇವ ತತ್ ಸ್ಯಾದಿತಿ ಮೇ ಮನೀಷಾ ॥ ೨೧

ಅವಿದ್ಯಮಾನೋಽಪ್ಯವಭಾಸತೇ ಯೋ
ವೈಕಾರಿಕೋ ರಾಜಸಸರ್ಗ ಏಷಃ ।
ಬ್ರಹ್ಮ ಸ್ವಯಂಜ್ಯೋತಿರತೋ ವಿಭಾತಿ
ಬ್ರಹ್ಮೇಂದ್ರಿಯಾರ್ಥಾತ್ಮ ವಿಕಾರಚಿತ್ರಮ್ ॥ ೨೨

---

ಇವೆಲ್ಲವುಗಳಲ್ಲಿ ಅನ್ವಯ ವ್ಯತಿರೇಕಗಳಿಂದ ಯಾವುದು [1]ಉಳಿದುಕೊಳ್ಳುತ್ತದೆಯೋ ಅದೊಂದೇ ಸತ್ಯವೆನಿಸುತ್ತದೆ (೨೦). ಯಾವುದು ಮೊದಲು ಇರುವುದಿಲ್ಲವೋ ಮತ್ತು ಕಡೆಯಲ್ಲಿಯೂ ಇರುವುದಿಲ್ಲವೋ ಅದು ಮಧ್ಯದಲ್ಲಿಯೂ ಇರುವುದಿಲ್ಲವೆಂದು ತಿಳಿಯಬೇಕು. ಮಧ್ಯದಲ್ಲಿ (ಕಟಕಕುಂಡಲಗಳಂತೆ) ನಾಮಧಾರಿಯಾಗಿ ವ್ಯವಹಾರಕ್ಕೆ ಮಾತ್ರ ಇನ್ನೊಂದು ಗೋಚರಿಸುತ್ತದೆ. ಹಾಗೆ ಗೋಚರಿಸತಕ್ಕದ್ದು ಯಾವ ಕಾರಣದಿಂದ ಹುಟ್ಟಿತೋ ಯಾವುದರಿಂದ ಪ್ರಕಾಶಕ್ಕೆ ಬಂದಿತೋ [2]ಅದೇ ವಸ್ತು ಮಧ್ಯದಲ್ಲಿರತಕ್ಕದ್ದೂ ಆಗಿದೆ ಎಂದು ನನ್ನ ನಿಶ್ಚಯ (೨೧). ವಸ್ತುತಃ ಇಲ್ಲದಿದ್ದರೂ ಯಾವ ಪ್ರಪಂಚವು ತೋರುತ್ತದೆಯೋ ಅದು ರಜೋಗುಣ ನಿರ್ಮಿತವಾದ ವೈಕಾರಿಕ ಸೃಷ್ಟಿ. ಬ್ರಹ್ಮವಾದರೋ ಸ್ವಯಂಪ್ರಕಾಶವಾದ ಜ್ಯೋತಿಯಾಗಿಯೇ ಇರುತ್ತದೆ. ಆದ್ದರಿಂದ ಇಂದ್ರಿಯ, ವಿಷಯ, ಮನಸ್ಸು, ಪಂಚಭೂತಗಳ ರೂಪದಲ್ಲಿ ಬ್ರಹ್ಮವೇ ವಿಚಿತ್ರವಾಗಿ ಭಾಸವಾಗುತ್ತದೆ (೨೨).

---

1. ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ—ಇತ್ಯಾದಿ ಪ್ರಮಾಣಗಳಿಂದ ಸಮಸ್ತ ಪದಾರ್ಥದಲ್ಲಿಯೂ ಅನ್ವಯದಿಂದ ತೋರತಕ್ಕದ್ದು ಬ್ರಹ್ಮ. ಸಮಾಧಿ ಸ್ಥಿತಿಯಲ್ಲಿ ವಿಶ್ವವು ನಷ್ಟವಾದರೂ ವ್ಯತಿರೇಕದಿಂದ ತೋರತಕ್ಕದ್ದು ಬ್ರಹ್ಮವೇ. ತ್ರಿ+ಅವಸ್ಥಂ=ತ್ರಿಯವಸ್ಥಂ.

2. ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್।

—ಛಾಂ. ೬-೪

ಏವಂ ಸ್ಫುಟಂ ಬ್ರಹ್ಮವಿವೇಕಹೇತುಭಿಃ
ಪರಾಪವಾದೇನ ವಿಶಾರದೇನ ।
ಛಿತ್ತ್ವಾಽಽತ್ಮಸಂದೇಹಮುಪಾರಮೇತ
ಸ್ವಾನಂದತುಷ್ಟೋಽಖಿಲಕಾಮುಕೇಭ್ಯಃ ॥ ೨೩

ನಾತ್ಮಾ ವಪುಃ ಪಾರ್ಥಿವಮಿಂದ್ರಿಯಾಣಿ
ದೇವಾ ಹ್ಯಸುರ್ವಾಯುರ್ಜಲಂ ಹುತಾಶಃ ।
ಮನೋಽನ್ನಮಾತ್ರಂ ಧಿಷಣಾ ಚ ಸತ್ತ್ವ-
ಮಹಂಕೃತಿಃ ಖಂ ಕ್ಷಿತಿರರ್ಥಸಾಮ್ಯಮ್ ॥ ೨೪

ಸಮಾಹಿತೈಃ ಕಃ ಕರಣೈರ್ಗುಣಾತ್ಮಭಿ-
ರ್ಗುಣೋ ಭವೇನ್ಮತ್ಸುವಿವಿಕ್ತಧಾಮ್ನಃ ।
ವಿಕ್ಷಿಪ್ಯಮಾಣೈರುತ ಕಿಂ ನು ದೂಷಣಂ
ಘನೈರುಪೇತೈರ್ವಿಗತೈ ರವೇಃ ಕಿಮ್ ॥ ೨೫

---

ಈ ರೀತಿಯಲ್ಲಿ ಆತ್ಮವಿವೇಚನೆಗೆ ಸಾಧನಗಳಾದ ವೇದ, ತಪಸ್ಸು, ಪ್ರತ್ಯಕ್ಷ, ಉಪದೇಶ, ಅನುಮಾನಗಳಿಂದಲೂ ದೇಹಾದಿಗಳು ಆತ್ಮವಲ್ಲವೆಂದು ಸಮರ್ಥವಾಗಿ ನಿರಾಸಮಾಡುವುದರಿಂದಲೂ ಆತ್ಮವಿಷಯಕ ಸಂದೇಹವನ್ನು ಕತ್ತರಿಸಿಹಾಕಬೇಕು. ಕಾಮನೆಗಳಲ್ಲಿಯೇ ತೊಡಗುವ ಇಂದ್ರಿಯ ಮನಸ್ಸುಗಳ ಸಂಗವನ್ನು ತೊರೆದು ಸ್ವಾತ್ಮಾನಂದದಲ್ಲಿಯೇ ತೃಪ್ತನಾಗಿ ಇದ್ದುಬಿಡಬೇಕು (೨೩). ದೇಹವು ಪಾರ್ಥಿವವಾಗಿದೆ, ಅದು ಆತ್ಮವಲ್ಲ. ಇಂದ್ರಿಯಗಳು, ಅಧಿಷ್ಠಾತೃದೇವತೆಗಳು, ಪ್ರಾಣ, ವಾಯು, ಜಲ, ಅಗ್ನಿ, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ, ಆಕಾಶ, ಪೃಥ್ವಿ, ಶಬ್ದಾದ್ಯರ್ಥಗಳು ಮತ್ತು ಪ್ರಕೃತಿ—ಇವೂ ಆತ್ಮವಲ್ಲ, ಅನ್ನಮಯವಾದ್ದರಿಂದ ಮತ್ತು ಜಡವಾದ್ದರಿಂದ (ಎಂಬುದಾಗಿ ದೇಹಾದಿಗಳು ಆತ್ಮವಲ್ಲವೆಂದು ಸಮರ್ಥವಾಗಿ ನಿರಾಸಮಾಡಬೇಕು) (೨೪). ಹೀಗೆ ನನ್ನ ಸ್ವರೂಪವನ್ನು ವಿವಿಕ್ತವಾಗಿ ಯಾವಾತನು ತಿಳಿದು ನಿಶ್ಚಯಿಸಿಕೊಂಡಿರುವನೋ ಅವನಿಗೆ ಗುಣತ್ರಯಾತ್ಮಕಗಳಾದ ಇಂದ್ರಿಯಾದಿ ಸಾಧನಗಳು ಒಟ್ಟಾಗಿ ಸೇರಿಕೊಂಡಿದ್ದರೂ ಏನು ಮಾಡಿಯಾವು? ಮೋಡಗಳು ಒಟ್ಟಾಗಿ ಸೇರಿರಲಿ, ಬಿಡಿಯಾಗಿರಲಿ, ಅವುಗಳಿಂದ

ಯಥಾ ನಭೋ ವಾಯ್ವನಲಾಂಬು ಭೂಗುಣೈ-
ರ್ಗತಾಗತೈರ್ವರ್ತುಗುಣೈರ್ನ ಸಜ್ಜತೇ ।
ತಥಾಕ್ಷರಂ ಸತ್ತ್ವರಜಸ್ತಮೋಮಲೈ-
ರಹಂಮತೇಃ ಸಂಸೃತಿಹೇತುಭಿಃ ಪರಮ್ ॥ ೨೬

ತಥಾಪಿ ಸಂಗಃ ಪರಿವರ್ಜನೀಯೋ
ಗುಣೇಷು ಮಾಯಾರಚಿತೇಷು ತಾವತ್ ।
ಮದ್ಭಕ್ತಿಯೋಗೇನ ದೃಢೇನ ಯಾವದ್
ರಜೋ ನಿರಸ್ಯೇತ ಮನಃಕಷಾಯಃ ॥ ೨೭

ಯಥಾಽಽಮಯೋಽಸಾಧುಚಿಕಿತ್ಸಿತೋ ನೃಣಾಂ
ಪುನಃ ಪುನಃ ಸಂತುದತಿ ಪ್ರರೋಹನ್ ।
ಏವಂ ಮನೋಽಪಕ್ವಕಷಾಯಕರ್ಮ
ಕುಯೋಗಿನಂ ವಿಧ್ಯತಿ ಸರ್ವಸಂಗಮ್ ॥ ೨೮

---

ಸೂರ್ಯನಿಗೆ ಆಗುವುದಾದರೂ ಏನು? (೨೫). ವಾಯು, ಅಗ್ನಿ, ಜಲ, ಭೂಮಿಗಳ ಸ್ಪರ್ಶಾದಿಗುಣಗಳಿಂದಾಗಲಿ ಆಗಮಾಪಾಯಿಗಳಾದ ಶೀತೋಷ್ಣಾದಿ ಋತುಗುಣಗಳಿಂದಾಗಲಿ ಆಕಾಶವು ಯಾವ ರೀತಿಯಲ್ಲಿಯೂ ಸಂಬಂಧಗೊಳ್ಳುವುದಿಲ್ಲ—ತನ್ನಲ್ಲಿ ಪರಿಣಾಮವನ್ನುಂಟುಮಾಡಿಕೊಳ್ಳುವುದಿಲ್ಲ. ಹಾಗೆಯೇ ಅಹಂಕಾರದ ಸಂಸಾರಕ್ಕೆ ಕಾರಣಗಳಾದ ಸತ್ತ್ವರಜಸ್ತಮೋಗುಣಗಳ ದೋಷಗಳಿಂದ ಅಕ್ಷರವಾದ ಪರಬ್ರಹ್ಮವು ಯಾವ ರೀತಿಯಲ್ಲಿಯೂ ಸಂಬಂಧಗೊಳ್ಳುವುದಿಲ್ಲ (೨೬). ಆದರೂ ಸಹ ಮನಸ್ಸಿಗೆ ಅಂಟಿಕೊಂಡಿರುವ ರಜೋಗುಣವೆಂಬ ಕಷಾಯವು ನನ್ನ ಭಕ್ತಿಯೋಗದ ಬಲದಿಂದ ಸಂಪೂರ್ಣವಾಗಿ ತೊಡೆದುಹೋಗುವವರೆಗೂ (ಸಮ್ಯಗ್ ಜ್ಞಾನವನ್ನು ಪಡೆದು ಮುಕ್ತನಾಗದೆ ಇರತಕ್ಕ) ಮನುಷ್ಯನು ಮಾಯಾಕಲ್ಪಿತಗಳಾದ ಶಬ್ದಾದಿ ವಿಷಯಗಳಲ್ಲಿ ಸಂಬಂಧವನ್ನು ಸಂಪೂರ್ಣವಾಗಿ ತ್ಯಜಿಸಬೇಕು (೨೭). ಏಕೆಂದರೆ, ಸರಿಯಾದ ಚಿಕಿತ್ಸೆಯನ್ನು ಪಡೆಯದೆ ಪೂರ್ಣವಾಗಿ ಗುಣವಾಗದೆ ಇರುವ ರೋಗವು ಮತ್ತೆ ಮತ್ತೆ ಉಲ್ಬಣಿಸಿ ತೊಂದರೆಕೊಡುತ್ತದೆ. ಹಾಗೆಯೇ ರಾಗಾದಿಕಷಾಯಗಳಿಂದ ಕೂಡಿದ ಕರ್ಮಸಂಸ್ಕಾರಗಳು ಪೂರ್ತಿಯಾಗಿ ತೊಲಗದೆ ಇದ್ದಾಗ, ಅಂತಹ ಮನಸ್ಸು ಸಮ್ಯಗ್ಜ್ಞಾನವನ್ನು ಪಡೆಯದಿರುವ

ಕುಯೋಗಿನೋ ಯೇ ವಿಹತಾಂತರಾಯೈ-
ರ್ಮನುಷ್ಯಭೂತೈಸ್ತ್ರಿದಶೋಪಸೃಷ್ಟೈಃ ।
ತೇ ಪ್ರಾಕ್ತನಾಭ್ಯಾಸಬಲೇನ ಭೂಯೋ
ಯುಂಜಂತಿ ಯೋಗಂ ನ ತು ಕರ್ಮತಂತ್ರಮ್ ॥ ೨೯

ಕರೋತಿ ಕರ್ಮ ಕ್ರಿಯತೇ ಚ ಜಂತುಃ
ಕೇನಾಪ್ಯಸೌ ಚೋದಿತ ಆನಿಪಾತಾತ್ ।
ನ ತತ್ರ ವಿದ್ವಾನ್ ಪ್ರಕೃತೌ ಸ್ಥಿತೋಽಪಿ
ನಿವೃತ್ತತೃಷ್ಣಃ ಸ್ವಸುಖಾನುಭೂತ್ಯಾ ॥ ೩೦

ತಿಷ್ಠಂತಮಾಸೀನಮುತ ವ್ರಜಂತಂ
ಶಯಾನಮುಕ್ಷಂತಮದಂತಮನ್ನಮ್ ।
ಸ್ವಭಾವಮನ್ಯತ್ ಕಿಮಪೀಹಮಾನ-
ಮಾತ್ಮಾನಮಾತ್ಮಸ್ಥಮತಿರ್ನ ವೇದ ॥ ೩೧

---

ಕುಯೋಗಿಗೆ ತೊಂದರೆಕೊಡುತ್ತದೆ (೨೮). ಪತ್ನೀಪುತ್ರಾದಿ ಮನುಷ್ಯರಾಗಲಿ, ದೇವತೆಗಳಿಂದ ಪ್ರೇರಿತರಾದ ಅಪ್ಸರಃಸ್ತ್ರೀ ಮೊದಲಾದವರಾಗಲಿ, ಯೋಗಮಾರ್ಗದಲ್ಲಿ ಹೋಗತಕ್ಕವನಿಗೆ ವಿಘ್ನಗಳನ್ನು ಮಾಡಬಹುದು (ಅವನು ಯೋಗಭ್ರಷ್ಟನಾಗಬಹುದು). ಆದರೆ ಜನ್ಮಾಂತರದಲ್ಲಿ ಆತನು ಯೋಗಮಾರ್ಗದಲ್ಲಿ ಮುಂದುವರಿಯುತ್ತಾನೇ ಹೊರತು [1]ಕರ್ಮವಿಸ್ತಾರದಲ್ಲಿ ಸಿಕ್ಕಿಕೊಳ್ಳುವುದಿಲ್ಲ (೨೯). ಅಜ್ಞಾನಿಯಾದ ಪ್ರಾಣಿಯು ಈ ದೇಹದಲ್ಲಿ ಯಾವುದೋ ಸಂಸ್ಕಾರದಿಂದ ಪ್ರೇರಿತನಾಗಿ ಸಾಯುವವರೆಗೂ ಕರ್ಮವನ್ನು ಮಾಡುತ್ತಾನೆ ಮತ್ತು ವೃದ್ಧಿಪರಿಣಾಮಾದಿ ವಿಕಾರಕ್ಕೆ ಈಡಾಗುತ್ತಾನೆ. ಜ್ಞಾನಿಯಾದರೋ ಪ್ರಕೃತಿಭೂತವಾದ ದೇಹದಲ್ಲಿದ್ದರೂ (ಅಹಂಕಾರರಹಿತನಾದ್ದರಿಂದ) ಮಾಡುವುದೂ ಇಲ್ಲ, ವಿಕಾರವನ್ನು ಹೊಂದುವುದೂ ಇಲ್ಲ. ಜ್ಞಾನಿಯು ಆತ್ಮಸುಖವನ್ನನುಭವಿಸುತ್ತ ಎಲ್ಲ ಕಾಮನೆಯನ್ನೂ ತ್ಯಜಿಸಿರುತ್ತಾನೆ (೩೦). ಈ ದೇಹವು ನಿಂತಿರಬಹುದು, ಕುಳಿತಿರಬಹುದು. ಹೋಗುತ್ತಿರಬಹುದು, ಮಲಗಿರಬಹುದು, ಮೂತ್ರವನ್ನು ವಿಸರ್ಜಿಸು

---

1. "ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ"

—ಗೀತಾ ೬-೪೦

ಯದಿ ಸ್ಮ ಪಶ್ಯತ್ಯಸದಿಂದ್ರಿಯಾರ್ಥಂ
ನಾನಾನುಮಾನೇನ ವಿರುದ್ಧಮನ್ಯತ್ ।
ನ ಮನ್ಯತೇ ವಸ್ತುತಯಾ ಮನೀಷೀ
ಸ್ವಾಪ್ನಂ ಯಥೋತ್ಥಾಯ ತಿರೋದಧಾನಮ್ ॥ ೩೨

ಪೂರ್ವಂ ಗೃಹೀತಂ ಗುಣಕರ್ಮಚಿತ್ರ-
ಮಜ್ಞಾನಮಾತ್ಮನ್ಯವಿವಿಕ್ತಮಂಗ ।
ನಿವರ್ತತೇ ತತ್ ಪುನರೀಕ್ಷಯೈವ
ನ ಗೃಹ್ಯತೇ ನಾಪಿ ವಿಸೃಜ್ಯ ಆತ್ಮಾ ॥ ೩೩

ಯಥಾ ಹಿ ಭಾನೋರುದಯೋ ನೃಚಕ್ಷುಷಾಂ
ತಮೋ ನಿಹನ್ಯಾನ್ನ ತು ಸದ್ ವಿಧತ್ತೇ ।
ಏವಂ ಸಮೀಕ್ಷಾ ನಿಪುಣಾ ಸತೀ ಮೇ
ಹನ್ಯಾತ್ತಮಿಸ್ರಂ ಪುರುಷಸ್ಯ ಬುದ್ಧೇಃ ॥ ೩೪

---

ತ್ತಿರಬಹುದು ಅಥವಾ ಅನ್ನವನ್ನು ತಿನ್ನುತ್ತಿರಬಹುದು, ಇಲ್ಲವೆ ಸ್ವಾಭಾವಿಕವಾದ ದರ್ಶನಾದಿಕ್ರಿಯೆಯನ್ನು ಮಾಡುತ್ತಿರಬಹುದು. ಅದನ್ನೂ ಸಹ ಆತ್ಮನಿಷ್ಠನಾದ ಜ್ಞಾನಿಯು ಗಮನಿಸುವುದಿಲ್ಲ (೩೧). ಅಸತ್ತಾದ-ಎಂದರೆ-ಬಹಿರ್ಮುಖವಾದ ಇಂದ್ರಿಯಗಳ ಕ್ರಿಯೆಯನ್ನು ಒಂದುವೇಳೆ ಜ್ಞಾನಿಯು ಗಮನಿಸಿದರೂ 'ಇದು ನಾನಾ ಆದ್ದರಿಂದ—ದ್ವೈತವಾದ್ದರಿಂದ ಮಿಥ್ಯೆ' ಎಂದು ನಿಶ್ಚಯಿಸುತ್ತಾನೆ. ಆತ್ಮವ್ಯತಿರಿಕ್ತವಾದದ್ದು ಬಾಧಿತವೆಂದು ಗೊತ್ತುಮಾಡುತ್ತಾನೆ. ಕನಸನ್ನು ಕಂಡು ಎಚ್ಚತ್ತವನು ಮರೆಯಾಗುವ ಕನಸನ್ನು ಹೇಗೆ ಮಿಥ್ಯೆಯೆಂದೂ ಬಾಧಿತವೆಂದೂ ತಿಳಿಯುತ್ತಾನೋ ಹಾಗೆಯೇ ಇದು (೩೨). ಮೊದಲು ಬದ್ಧಾವಸ್ಥೆಯಲ್ಲಿ ಗುಣಕರ್ಮಗಳಿಂದ ವಿಚಿತ್ರವಾದ ಅಜ್ಞಾನಮಯ ದೇಹೇಂದ್ರಿಯಾದಿ ವರ್ಗವು ಗೃಹೀತವಾಗಿತ್ತು. ಅದು ಆತ್ಮನಿಗಿದೆಯೆಂದು ಆತ್ಮನಿಗಿಂತ ಅವಿವಿಕ್ತವಾಗಿ ಗೃಹೀತ ವಾಗಿತ್ತು. ಅದಾದರೋ ಈಗ ಮುಕ್ತಾವಸ್ಥೆಯಲ್ಲಿ ಸಮ್ಯಗ್ ಜ್ಞಾನದಿಂದ ನಿವೃತ್ತವಾಗಿ ಬಿಡುತ್ತದೆ. ಆತ್ಮನನ್ನು ಗ್ರಹಿಸಲೂ ಇಲ್ಲ. ತ್ಯಜಿಸಲೂ ಇಲ್ಲ. (ಆರೋಪಿತವಾದ ಅಜ್ಞಾನದ ನಿವೃತ್ತಿಯೇ ಮೋಕ್ಷ. ಆತ್ಮನಲ್ಲಿ ಯಾವ ವಿಕಾರವೂ ಆಗಲಿಲ್ಲ) (೩೩). ಜನರ ಕಣ್ಣುಗಳಿಗೆ ಅಮರಿಕೊಂಡಿದ್ದ ಕತ್ತಲೆಯನ್ನು

ಏಷ ಸ್ವಯಂಜ್ಯೋತಿರಜೋಽಪ್ರಮೇಯೋ
ಮಹಾನುಭೂತಿಃ ಸಕಲಾನುಭೂತಿಃ ।
ಏಕೋಽದ್ವಿತೀಯೋ ವಚಸಾಂ ವಿರಾಮೇ
ಯೇನೇಷಿತಾ ವಾಗಸವಶ್ಚರಂತಿ ॥ ೩೫

ಏತಾವಾನಾತ್ಮಸಂಮೋಹೋ ಯದ್ ವಿಕಲ್ಪಸ್ತು ಕೇವಲೇ ।
ಆತ್ಮನ್ನೃತೇ ಸ್ವಮಾತ್ಮಾನಮವಲಂಬೋ ನ ಯಸ್ಯ ಹಿ ॥ ೩೬

ಯನ್ನಾಮಾಕೃತಿಭಿರ್ಗ್ರಾಹ್ಯಂ ಪಂಚವರ್ಣಮಬಾಧಿತಮ್ ।
ವ್ಯರ್ಥೇನಾಪ್ಯರ್ಥವಾದೋಽಯಂ ದ್ವಯಂ ಪಂಡಿತಮಾನಿನಾಮ್ ॥ ೩೭

ಸೂರ್ಯೋದಯವು ಹೋಗಲಾಡಿಸುತ್ತದೆಯೇ ಹೊರತು, ಆಗ ಕಾಣುವ ಘಟಪಟಾದಿ ವಿದ್ಯಮಾನವೇ ಆದ ವಸ್ತುವನ್ನು ಹೊಸದಾಗಿ ಸೂರ್ಯೋದಯವು ನಿರ್ಮಿಸುವುದಿಲ್ಲ. ಹಾಗೆಯೇ ನನ್ನ ಸಮ್ಯಗ್‌ಜ್ಞಾನವೆನಿಸುವ ಆತ್ಮವಿದ್ಯೆಯು ಮನುಷ್ಯನ ಬುದ್ಧಿಗೆ ಕವಿದುಕೊಂಡಿರುವ ಅಜ್ಞಾನವನ್ನು ಹೋಗಲಾಡಿಸುತ್ತದೆ (ಅಜ್ಞಾನವು ಹೋದೊಡನೆ ಸತ್ಯವಾದ ಆತ್ಮಜ್ಞಾನವು ಸ್ವಯಂ ಸ್ಫುರಿಸುತ್ತದೆ) (೩೪). ಈ ಆತ್ಮನು ಸ್ವಯಂಜ್ಯೋತಿಯೂ ಅಜನೂ ಇಂದ್ರಿಯಗಳಿಗೆ ಅಗೋಚರನೂ ದೇಶಕಾಲಗಳಿಂದ ಅಪರಿಚ್ಛಿನ್ನವಾದ ಮಹಾನುಭವಸ್ವರೂಪನೂ ಸಕಲ ಜೀವಿಗಳ ಚೈತನ್ಯನೂ ಆಗಿದ್ದಾನೆ. ದ್ವಿತೀಯ ವಸ್ತುವಿಲ್ಲದ ಕೇವಲನೂ ಆಗಿದ್ದಾನೆ. ಆತನಿಂದ ಪ್ರೇರಿತವಾಗಿಯೇ ವಾಕ್ಕು ಮತ್ತು [1]ಪ್ರಾಣಗಳು ಪ್ರವೃತ್ತವಾಗುತ್ತವೆ (೩೫). ಅದ್ವಿತೀಯನಾದ ಆತ್ಮನಲ್ಲಿ ನಾನಾ ದ್ವೈತವಿಕಲ್ಪವೆಂಬುದೇನುಂಟು, ಇದೆಲ್ಲವೂ ಮನಸ್ಸಿನ ಭ್ರಮೆಯೇ ಸರಿ. ತನ್ನ ಆತ್ಮನನ್ನು ಬಿಟ್ಟು ಈ ವಿಕಲ್ಪಕ್ಕೆ ಬೇರೆ [2]ಆಶ್ರಯವೇ ಇಲ್ಲ (೩೬). "ನಾಮರೂಪಗಳಿಂದ ಕೂಡಿರುವ ಪಂಚಭೂತಾತ್ಮಕವಾದ ದ್ವೈತವು ಇಂದ್ರಿಯಗ್ರಾಹ್ಯವಾಗಿ ಅಬಾಧಿತವಾಗಿದೆ. ಅದ್ವೈತಾತ್ಮವಾದವು ಅರ್ಥವಾದವೇ ಸರಿ" ಎಂಬ ಹೇಳಿಕೆಯೇನುಂಟು, ಅದು

1. ಕೇನೇಷಿತಂ ಪತತಿ ಪ್ರೇಷಿತಂ ಮನಃ
ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ । (ಕೇನ. ೧–೧)
2. ರಜತಭ್ರಮೆಗೆ ಶುಕ್ತಿಯೇ ಆಶ್ರಯವಾದಂತೆ ಪ್ರಪಂಚಭ್ರಮೆಗೆ ಆತ್ಮನೇ ಆಶ್ರಯ.

**ಯೋಗಿನೋಽಪಕ್ವಯೋಗಸ್ಯ ಯುಂಜತಃ ಕಾಯ ಉತ್ಥಿತೈಃ ।**
**ಉಪಸರ್ಗೈರ್ವಿಹನ್ಯೇತ ತತ್ರಾಯಂ ವಿಹಿತೋ ವಿಧಿಃ ॥ ೩೮**

**ಯೋಗಧಾರಣಯಾ ಕಾಂಶ್ಚಿದಾಸನೈರ್ಧಾರಣಾನ್ವಿತೈಃ ।**
**ತಪೋಮಂತ್ರೌಷಧೈಃ ಕಾಂಶ್ಚಿದುಪಸರ್ಗಾನ್ ವಿನಿರ್ದಹೇತ್ ॥ ೩೯**

**ಕಾಂಶ್ಚಿನ್ಮಮಾನುಧ್ಯಾನೇನ ನಾಮಸಂಕೀರ್ತನಾದಿಭಿಃ ।**
**ಯೋಗೇಶ್ವರಾನುವೃತ್ತ್ಯಾ ವಾ ಹನ್ಯಾದಶುಭದಾನ್ ಶನೈಃ ॥ ೪೦**

**ಕೇಚಿದ್ ದೇಹಮಿಮಂ ಧೀರಾಃ ಸುಕಲ್ಪಂ ವಯಸಿ ಸ್ಥಿರಮ್ ।**
**ವಿಧಾಯ ವಿವಿಧೋಪಾಯೈರಥ ಯುಂಜಂತಿ ಸಿದ್ಧಯೇ ॥ ೪೧**

**ನ ಹಿ ತತ್ ಕುಶಲಾದೃತ್ಯಂ ತದಾಯಾಸೋ ಹ್ಯಪಾರ್ಥಕಃ ।**
**ಅಂತವತ್ತ್ವಾಚ್ಛರೀರಸ್ಯ ಫಲಸ್ಯೇವ ವನಸ್ಪತೇಃ ॥ ೪೨**

---

ನಾವೇ ಪಂಡಿತರೆಂದು ತಿಳಿದುಕೊಂಡಿರುವ ಅವಿವೇಕಿಗಳ ಹೇಳಿಕೆ. ನಾನಾ ಪದಾರ್ಥವಿಲ್ಲದಿದ್ದರೂ[1] (ಭ್ರಮೆಯಿಂದ) ಅದು ಗ್ರಾಹ್ಯವಾಗಬಹುದು (೩೭). ಯಾವಾತನು ಯೋಗಾಭ್ಯಾಸವನ್ನು ಮಾಡುತ್ತಿರುವನೋ, ಯೋಗವು ಇನ್ನೂ ಪಕ್ವವಾಗಿಲ್ಲವೋ, ಆತನ ದೇಹಕ್ಕೆ ನಡುವೆ ಹುಟ್ಟಿದ ರೋಗಾದ್ಯುಪದ್ರವಗಳು ಬಾಧೆಯನ್ನುಂಟುಮಾಡಬಹುದು. ಅದಕ್ಕೆ ಪ್ರತೀಕಾರವನ್ನು ಮಾಡಿಕೊಳ್ಳಬೇಕು (೩೮). ಹೇಗೆಂದರೆ, ಯೋಗಧಾರಣೆಯಿಂದ ಕೆಲವು ಉಪದ್ರವಗಳನ್ನೂ ಪ್ರಾಣಾಯಾಮಪೂರ್ವಕವಾದ ಯೋಗಾಸನಗಳಿಂದ ಕೆಲವನ್ನೂ ತಪೋಮಂತ್ರೌಷಧಗಳಿಂದ ಕೆಲವನ್ನೂ ಹೋಗಲಾಡಿಸಿಕೊಳ್ಳಬೇಕು (೩೯). ಇನ್ನು ಕೆಲವನ್ನು ನನ್ನ ಧ್ಯಾನದಿಂದಲೂ ನಾಮಸಂಕೀರ್ತನಾದಿಗಳಿಂದಲೂ ಪರಿಹರಿಸಿಕೊಳ್ಳಬೇಕು. ಅಶುಭಕಾರಿಗಳಾದ ಈ ಯೋಗವಿಘ್ನಗಳನ್ನು ಯೋಗೇಶ್ವರನಾದ ನನ್ನ ಸೇವೆಯಿಂದ ನಿವಾರಿಸಿಕೊಳ್ಳಬೇಕು (೪೦). ಕೆಲವು ಜಾಣರಾದರೋ ಯೋಗಮಾರ್ಗದಿಂದ ಈ ದೇಹವನ್ನು ಆರೋಗ್ಯಪೂರ್ಣವಾಗಿ ಯೌವನದಲ್ಲಿ ಸ್ಥಿರವಾಗಿ ನಿಲ್ಲುವಂತೆ ಮಾಡಿಕೊಂಡು ಕ್ಷುದ್ರಫಲಗಳ ಸಿದ್ಧಿಗಾಗಿ ವಿವಿಧೋಪಾಯಗಳಿಂದ ಯೋಗಮಾರ್ಗದಲ್ಲಿ ಪ್ರವೃತ್ತರಾಗುತ್ತಾರೆ (೪೧). ಆದರೆ ಈ ಪ್ರವೃತ್ತಿಯು ಪ್ರಾಜ್ಞರಿಗೆ

---

1. ಇಂದ್ರಿಯ ಗ್ರಾಹ್ಯವಾದ ಮಾತ್ರದಿಂದ ಸತ್ಯವಾಗುವುದಿಲ್ಲ. ಆತ್ಮಜ್ಞಾನದಿಂದ ಪ್ರಪಂಚವು ಬಾಧಿತವಾಗುತ್ತದೆ. ವಾಚಾರಂಭಣಾದಿ ಶ್ರುತಿಗಳೂ ದ್ವೈತವನ್ನು ಬಾಧಿಸುತ್ತವೆ.

ಯೋಗಂ ನಿಷೇವತೋ ನಿತ್ಯಂ ಕಾಯಶ್ಚೇತ್ ಕಲ್ಪತಾಮಿಯಾತ್ ।
ತಚ್ಛ್ರದ್ದಧ್ಯಾನ್ನ ಮತಿಮಾನ್ ಯೋಗಮುತ್ಸೃಜ್ಯ ಮತ್ಪರಃ ॥ ೪೩

ಯೋಗಚರ್ಯಾಮಿಮಾಂ ಯೋಗೀ ವಿಚರನ್ ಮದಪಾಶ್ರಯಃ ।
ನಾಂತರಾಯೈರ್ವಿಹನ್ಯೇತ ನಿಃಸ್ಪೃಹಃ ಸ್ವಸುಖಾನುಭೂಃ ॥ ೪೪

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಅಷ್ಟಾವಿಂಶಾಧ್ಯಾಯಃ



ಆದರಣೀಯವಲ್ಲ. ಕ್ಷುದ್ರಫಲಕ್ಕಾಗಿ ಈ ಜನರು ಪಡುವ ಆಯಾಸವು ವ್ಯರ್ಥವಾದದ್ದು. ಒಂದು ಮರದ ಹಣ್ಣು ಇದ್ದಂತೆ ಈ ಶರೀರವು ಹೇಗಿದ್ದರೂ ಬಿದ್ದು ನಾಶವಾಗತಕ್ಕದ್ದು (೪೨). ನಿತ್ಯವೂ ಯೋಗಾಭ್ಯಾಸಮಾಡತಕ್ಕವನಿಗೆ ರೋಗಾದಿಗಳಿಲ್ಲದೆ ಕಾಯವು ಕಲ್ಪವಾಗಿ (ಸಮರ್ಥವಾಗಿ) ಕಾಯಸಿದ್ಧಿಯಾದರೂ, ಬುದ್ಧಿಶಾಲಿಯಾದ ನನ್ನ ಭಕ್ತನು ಯೋಗಾನುಷ್ಠಾನವನ್ನು ತ್ಯಜಿಸಬಾರದು. ಕಾಯಕಲ್ಪವನ್ನು ನಂಬಬಾರದು (೪೩). ಆದರೆ ಯಾವ ಯೋಗಿಯು ನಿಸ್ಪೃಹತೆಯಿಂದ ನನಗೆ ಶರಣಾಗಿ ಯೋಗಚರ್ಯೆಯಲ್ಲಿ ನಿರತನಾಗಿರುತ್ತಾನೋ ಆತನ ಯೋಗಾಚರಣೆಗೆ ವಿಘ್ನಗಳೇ ಒದಗುವುದಿಲ್ಲ! ಆತನು ಆತ್ಮಾನಂದವನ್ನು ಅನುಭವಿಸುತ್ತಿರುವನು" (೪೪).

ಇಲ್ಲಿಗೆ ಶ್ರೀಮದ್ಭಾಗವತಮಹಾಪುರಾಣದ ಏಕಾದಶಸ್ಕಂಧದಲ್ಲಿ
ಇಪ್ಪತ್ತೆಂಟನೆಯ ಆಧ್ಯಾಯ



# ಏಕೋನತ್ರಿಂಶಾಧ್ಯಾಯಃ

ಉದ್ಧವ ಉವಾಚ—

ಸುದುಶ್ಚರಾಮಿಮಾಂ ಮನ್ಯೇ ಯೋಗಚರ್ಯಾಮನಾತ್ಮನಃ ।
ಯಥಾಂಜಸಾ ಪುಮಾನ್ ಸಿದ್ಧ್ಯೇತ್ ತನ್ಮೇ ಬ್ರೂಹ್ಯಂಜಸಾಚ್ಯುತ ॥ ೧

ಪ್ರಾಯಶಃ ಪುಂಡರೀಕಾಕ್ಷ ಯುಂಜಂತೋ ಯೋಗಿನೋ ಮನಃ ।
ವಿಷೀದಂತ್ಯಸಮಾಧಾನಾನ್ಮನೋನಿಗ್ರಹಕರ್ಶಿತಾಃ ॥ ೨

ಅಥಾತ ಆನಂದದುಘಂ ಪದಾಂಬುಜಂ
ಹಂಸಾಃ ಶ್ರಯೇರನ್ನರವಿಂದಲೋಚನ ।
ಸುಖಂ ನು ವಿಶ್ವೇಶ್ವರ ಯೋಗಕರ್ಮಭಿ-
ಸ್ತ್ವನ್ಮಾಯಯಾಮೀ ವಿಹತಾ ನ ಮಾನಿನಃ ॥ ೩

## ಅಧ್ಯಾಯ ೨೯

ಸಮದರ್ಶನದ ವಿವರಣೆ. ಆತ್ಮನಿವೇದನೆ. ಜ್ಞಾನವಿಜ್ಞಾನ ತತ್ಪರತೆ.
ಉದ್ಧವಗೀತೆಯ ಸಮಾಪ್ತಿ.

ಆಗ ಉದ್ಧವನು ಹೀಗೆಂದನು: "ಹೇ ಅಚ್ಯುತ, ಯಾರಿಗೆ ಮನಸ್ಸು ವಶವಾಗಿಲ್ಲವೋ ಆತನಿಗೆ ಈ ಯೋಗಾಭ್ಯಾಸವು ತುಂಬ ಕಠಿಣವೆಂದು ನನಗೆ ಅನ್ನಿಸುತ್ತದೆ. ಆದ್ದರಿಂದ ಸಾಮಾನ್ಯ ಮನುಷ್ಯನು ಅನಾಯಾಸವಾಗಿ ಸಿದ್ಧಿಯನ್ನು ಪಡೆಯುವುದು ಹೇಗೆಂಬುದನ್ನು ಸುಲಭರೀತಿಯಲ್ಲಿ ನನಗೆ ತಿಳಿಸಿಕೊಡು (೧). ಪ್ರಾಯಶಃ ಮನೋನಿಗ್ರಹಕ್ಕಾಗಿ ಯತ್ನಿಸುವ ಯೋಗಿಗಳು ಅದು ವಶಕ್ಕೆ ಬರಲಿಲ್ಲವೆಂದು ವಿಷಾದಿಸುತ್ತಾರೆ. ಮನಸ್ಸಿನ ನಿಗ್ರಹಕ್ಕಾಗಿ ಹೆಣಗಿ ಬಳಲಿ ಹೋಗುತ್ತಾರೆ. ಆದರೆ ಹಂಸಪಕ್ಷಿಗಳಂತೆ ಸಾರಾಸಾರ ವಿವೇಕ ಚತುರರಾದ ನಿನ್ನ ಭಕ್ತರು, (ಯೋಗಾಭ್ಯಾಸಕ್ಕೆ ಯತ್ನಿಸದೆ) ಆನಂದಜನಕವಾದ ನಿನ್ನ ಪಾದಪದ್ಮವನ್ನು ಆಶ್ರಯಿಸಿಬಿಡುತ್ತಾರೆ. "ನಾವು ಯೋಗಿಗಳು, ನಾವು ಕರ್ಮನಿಷ್ಠರು" ಎಂದು ಅಹಂಕಾರಿಗಳಾಗಿ ನಿನ್ನ ಮಾಯೆಯಿಂದ ಈ ಭಕ್ತರು ಮರುಳಾಗಿರುವುದಿಲ್ಲ (೨–೩).

ಕಿಂ ಚಿತ್ರಮಚ್ಯುತ ತವೈತದಶೇಷಬಂಧೋ
ದಾಸೇಷ್ವನನ್ಯಶರಣೇಷು ಯದಾತ್ಮಸಾತ್ತ್ವಮ್ ।
ಯೋಽರೋಚಯತ್ ಸಹ ಮೃಗೈಃ ಸ್ವಯಮೀಶ್ವರಾಣಾಂ
ಶ್ರೀಮತ್ಕಿರೀಟತಟಪೀಡಿತ ಪಾದಪೀಠಃ ॥ ೪

ತಂ ತ್ವಾಖಿಲಾತ್ಮದಯಿತೇಶ್ವರಮಾಶ್ರಿತಾನಾಂ
ಸರ್ವಾರ್ಥದಂ ಸ್ವಕೃತವಿದ್ ವಿಸೃಜೇತ ಕೋ ನು ।
ಕೋ ವಾ ಭಜೇತ್ ಕಿಮಪಿ ವಿಸ್ಮೃತಯೇಽನುಭೂತ್ಯೈ
ಕಿಂ ವಾ ಭವೇನ್ನ ತವ ಪಾದರಜೋಜುಷಾಂ ನಃ ॥ ೫

ನೈವೋಪಯಂತ್ಯಪಚಿತಿಂ ಕವಯಸ್ತವೇಶ
ಬ್ರಹ್ಮಾಯುಷಾಪಿ ಕೃತಮೃದ್ಧಮುದಃ ಸ್ಮರಂತಃ ।
ಯೋಽಂತರ್ಬಹಿಸ್ತನುಭೃತಾಮಶುಭಂ ವಿಧುನ್ವ-
ನ್ನಾಚಾರ್ಯ ಚೈತ್ಯವಪುಷಾ ಸ್ವಗತಿಂ ವ್ಯನಕ್ತಿ ॥ ೬

---

ಓ ಅಚ್ಯುತ, ವಿಶ್ವೇಶ್ವರ, ಲೋಕಪಾಲರಾದ ಬ್ರಹ್ಮಾದಿದೇವತೆಗಳ ತೇಜೋಮಯ ಕಿರೀಟಾಗ್ರಗಳು ನಿನ್ನ ಪಾದಪೀಠವನ್ನು ಪೀಡುತ್ತವೆ! ಇಂತಹ ಮಾಯಾಮಯನಾದ ನೀನು (ಶ್ರೀರಾಮಾವತಾರದಲ್ಲಿ) ಮೃಗಜಾತಿಯ ವಾನರ ರೊಡನೆ ಸ್ನೇಹವನ್ನು ಬೆಳೆಸಿದೆಯಲ್ಲವೆ? ಓ ವಿಶ್ವಬಂಧು, ಅನನ್ಯಶರಣರಾದ ನಿನ್ನ ದಾಸರಿಗೆ ನೀನು ಅಧೀನನಾಗಿರುವುದರಲ್ಲಿ ಅಚ್ಚರಿಯೇನು? (೪). ನೀನು ಅಖಿಲ ಜನರಿಗೆ ಆತ್ಮನೂ ಪ್ರಿಯನೂ ಈಶ್ವರನೂ ಆಗಿದ್ದೀಯೆ. ಆಶ್ರಿತರಿಗೆ ಸರ್ವೇಷ್ಟ ಗಳನ್ನೂ ಕರುಣಿಸುತ್ತೀಯೆ. ಅಂತರ್ಯಾಮಿಯಾಗಿದ್ದು ನೀನು ಮಾಡುವ ಉಪಕಾರವನ್ನು ಬಲ್ಲ ಯಾವನು ತಾನೇ ನಿನ್ನನ್ನು ಬಿಟ್ಟು ಇನ್ನೊಂದನ್ನು ಭಜಿಸಿ ಯಾನು? ನಿನ್ನನ್ನು ಮರೆಯುವುದಕ್ಕಾಗಿ ಇನ್ನೊಂದನ್ನು ಭಜಿಸಬೇಕೆ! ಅಥವಾ ಇಂದ್ರಿಯಭೋಗಕ್ಕಾಗಿ ಮತ್ತೊಂದನ್ನು ಭಜಿಸಬೇಕೊ! ನಿನ್ನ ಪಾದಧೂಳಿಯನ್ನು ಪಡೆದ ನಮಗೆ ಯಾವುದು ತಾನೇ ದುರ್ಲಭವಾಗಿದೆ? (೫). ಹೇ ಈಶ್ವರ, ನೀನು ಭಕ್ತರ ಹೃದಯದಲ್ಲಿ ಅಂತರ್ಯಾಮಿಯಾಗಿ ಅವರ ವಿಷಯಭೋಗವಾಸನೆಯನ್ನು ದೂರೀಕರಿಸುತ್ತೀಯೆ. ಹೊರಗಡೆ ಗುರುವಿನ ರೂಪದಲ್ಲಿದ್ದು ಶಿಷ್ಯರಿಗೆ ಹಿತೋಪದೇಶ ವನ್ನು ಮಾಡಿ, ಅಶುಭವನ್ನು ನೀಗಿಸಿ, ನಿಜಸ್ವರೂಪವನ್ನು ಪ್ರಕಟಿಸಿ ಉಪಕರಿ

ಶ್ರೀಶುಕ ಉವಾಚ—

ಇತ್ಯುದ್ಧವೇನಾತ್ಯನುರಕ್ತಚೇತಸಾ
ಪೃಷ್ಟೋ ಜಗತ್ಕ್ರೀಡನಕಃ ಸ್ವಶಕ್ತಿಭಿಃ ।
ಗೃಹೀತಮೂರ್ತಿತ್ರಯ ಈಶ್ವರೇಶ್ವರೋ
ಜಗಾದ ಸ ಪ್ರೇಮಮನೋಹರಸ್ಮಿತಃ ॥ ೭

ಶ್ರೀಭಗವಾನುವಾಚ—

ಹಂತ ತೇ ಕಥಯಿಷ್ಯಾಮಿ ಮಮ ಧರ್ಮಾನ್ ಸುಮಂಗಲಾನ್ ।
ಯಾನ್ ಶ್ರದ್ಧಯಾಽಽಚರನ್ ಮರ್ತ್ಯೋ ಮೃತ್ಯುಂ ಜಯತಿ
ದುರ್ಜಯಮ್ ॥ ೮
ಕುರ್ಯಾತ್ ಸರ್ವಾಣಿ ಕರ್ಮಾಣಿ ಮದರ್ಥಂ ಶನಕೈಃ ಸ್ಮರನ್ ।
ಮಯ್ಯರ್ಪಿತಮನಶ್ಚಿತ್ತೋ ಮದ್ಧರ್ಮಾತ್ಮಮನೋರತಿಃ ॥ ೯

---

ಸುತ್ತೀಯೆ. ಹೀಗೆ ಅಂತರದಲ್ಲಿಯೂ ಬಾಹ್ಯದಲ್ಲಿಯೂ ಉಪಕಾರಮಾಡುತ್ತಿರುವ ನಿನ್ನನ್ನು ಬ್ರಹ್ಮವಿದರೂ ಸಹ ಪರಮಾನಂದದಿಂದ ಸ್ಮರಿಸಿಕೊಳ್ಳುತ್ತಿರುವರು. ಬ್ರಹ್ಮನ ಆಯುಸ್ಸು ದೊರೆತರೂ ನಿನ್ನ ಉಪಕಾರವನ್ನು ತೀರಿಸಿ ಋಣಮುಕ್ತರಾಗಲು ಇವರಿಗೆ ಸಾಧ್ಯವಿಲ್ಲ" ಎಂದನು (೬). ಹೀಗೆ ನುಡಿದು ಶುಕಮಹರ್ಷಿಗಳು "ಪರೀಕ್ಷಿತರಾಜ, ಶ್ರೀಕೃಷ್ಣನಲ್ಲಿ ಅನುರಕ್ತಚಿತ್ತನಾದ ಉದ್ಧವನು ಈ ಪ್ರಕಾರ ಹೇಳಲಾಗಿ, ತನ್ನ ಗುಣತ್ರಯಶಕ್ತಿಗಳಿಂದ ತ್ರಿಮೂರ್ತಿಗಳ ರೂಪವನ್ನು ಧರಿಸಿ ಜಗತ್ತನ್ನು ಕ್ರೀಡೋಪಕರಣವಾಗಿ ಮಾಡಿಕೊಂಡಿರುವ ಈಶ್ವರೇಶ್ವರನು ಮನೋಹರವಾಗಿ ಮುಗುಳ್ನಗೆ ಬೀರುತ್ತ ಪ್ರೇಮದಿಂದ ಇಂತೆಂದನು (೭). ಭಗವಂತನು ಹೇಳಿದ್ದೇನೆಂದರೆ: "ಆಹಾ! ಮಂಗಳಕರವಾದ ನನ್ನ ಸೇವಾವಿಧಾನಗಳನ್ನು ನಿನಗೆ ಹೇಳುವೆನು. ಮನುಷ್ಯನು ಶ್ರದ್ಧೆಯಿಂದ ಇವನ್ನು ಆಚರಿಸಿದರೆ ದುರ್ಜಯವಾದ ಸಂಸಾರ ಮೃತ್ಯುವನ್ನು ದಾಟಬಲ್ಲನು (೮). ಸಂಕಲ್ಪ ವಿಕಲ್ಪಾತ್ಮಕವಾದ ಮನಸ್ಸನ್ನೂ ಅನುಸಂಧಾನಾತ್ಮಕವಾದ ಚಿತ್ತವನ್ನೂ ನನ್ನಲ್ಲಿಟ್ಟು ನನ್ನ ಧರ್ಮಗಳಲ್ಲಿ ಚಿತ್ತಮನಸ್ಸುಗಳ ಆಸಕ್ತಿಯನ್ನಿರಿಸಿ, ನನ್ನನ್ನು ಸ್ಮರಿಸುತ್ತ, ನನ್ನ ಪ್ರೀತ್ಯರ್ಥವಾಗಿ ಸರ್ವ ಕರ್ಮಗಳನ್ನೂ ತ್ವರೆಪಡದೆ ಆಚರಿಸಬೇಕು (೯).

ದೇಶಾನ್ ಪುಣ್ಯಾನಾಶ್ರಯೇತ ಮದ್ಭಕ್ತೈಃ ಸಾಧುಭಿಃ ಶ್ರಿತಾನ್ ।
ದೇವಾಸುರಮನುಷ್ಯೇಷು ಮದ್ಭಕ್ತಾಚರಿತಾನಿ ಚ ॥ ೧೦

ಪೃಥಕ್ ಸತ್ರೇಣ ವಾ ಮಹ್ಯಂ ಪರ್ವಯಾತ್ರಾಮಹೋತ್ಸವಾನ್ ।
ಕಾರಯೇದ್ ಗೀತನೃತ್ಯಾದ್ಯೈರ್ಮಹಾರಾಜವಿಭೂತಿಭಿಃ ॥ ೧೧

ಮಾಮೇವ ಸರ್ವಭೂತೇಷು ಬಹಿರಂತರಪಾವೃತಮ್ ।
ಈಕ್ಷೇತಾತ್ಮನಿ ಚಾತ್ಮಾನಂ ಯಥಾ ಖಮಮಲಾಶಯಃ ॥ ೧೨

ಇತಿ ಸರ್ವಾಣಿ ಭೂತಾನಿ ಮದ್ಭಾವೇನ ಮಹಾದ್ಯುತೇ ।
ಸಭಾಜಯನ್ ಮನ್ಯಮಾನೋ ಜ್ಞಾನಂ ಕೇವಲಮಾಶ್ರಿತಃ ॥ ೧೩

ಬ್ರಾಹ್ಮಣೇ ಪುಲ್ಕಸೇ ಸ್ತೇನೇ ಬ್ರಹ್ಮಣ್ಯೇಽರ್ಕೇ ಸ್ಫುಲಿಂಗಕೇ ।
ಅಕ್ರೂರೇ ಕ್ರೂರಕೇ ಚೈವ ಸಮದೃಕ್ ಪಂಡಿತೋ ಮತಃ ॥ ೧೪

---

ನನ್ನ ಭಕ್ತರಾದ ಸಾಧುಜನರು ವಾಸವಾಗಿರುವ ಪುಣ್ಯದೇಶದಲ್ಲಿ ವಾಸಮಾಡಬೇಕು. ದೇವಾಸುರ ಮನುಷ್ಯರಲ್ಲಿ ಯಾವ ನನ್ನ ಭಕ್ತರು ಹೇಗೆ ತಮ್ಮ ಆಚರಣೆಗಳನ್ನಿಟ್ಟು ಕೊಂಡಿದ್ದರೋ ಅಂತಹ ಆಚರಣೆಗಳನ್ನು ಅನುಸರಿಸಬೇಕು (೧೦). ಮಹಾರಾಜ ಯೋಗ್ಯವಾದ ಗೀತನೃತ್ಯಾದಿ ವೈಭವಗಳಿಂದ ಹಬ್ಬ, ಯಾತ್ರೆ, ಮಹೋತ್ಸವಾದಿ ಗಳನ್ನು ತಾನೊಬ್ಬನೇ ಆಗಿಯೋ ಹಲವುಜನ ಸಂಘದೊಡನೆ ಸೇರಿಯೋ ನಡೆಸ ತಕ್ಕದ್ದು. ಯಾವ ಆವರಣವೂ ಇಲ್ಲದೆ ಆಕಾಶದಂತಿರುವ ನಾನೊಬ್ಬನೇ ಸಕಲ ಭೂತಗಳಲ್ಲಿಯೂ ತನ್ನಲ್ಲಿಯೂ ಆತ್ಮನಾಗಿ ನೆಲೆಸಿದ್ದೇನೆಂದು ಶುದ್ಧಚಿತ್ತನಾದ ಭಕ್ತನು ತಿಳಿದುಕೊಂಡಿರತಕ್ಕದ್ದು (೧೧–೧೨). ಓ ಪ್ರಾಜ್ಞ-ಉದ್ಧವ, ಈ ಪ್ರಕಾರವಾಗಿ ಕೇವಲ ಜ್ಞಾನದೃಷ್ಟಿಯನ್ನವಲಂಬಿಸಿ ಸಕಲ ಭೂತಗಳೂ ಭಗವತ್ ಸ್ವರೂಪವೇ ಎಂದು ತಿಳಿದು ಆದರಿಸತಕ್ಕವನು ಪಂಡಿತನೆಂದು ನನ್ನ ಅಭಿಮತ ವಾಗಿದೆ (೧೩). ಬ್ರಾಹ್ಮಣ-ಅಂತ್ಯಜ, ಕಳ್ಳ-ಬ್ರಾಹ್ಮಣನಿಗೆ ಹಿತಕಾರಿ, ಸೂರ್ಯ-ಬೆಂಕಿಯ ಕಿಡಿ, ಅಕ್ರೂರ-ಕ್ರೂರ ಇವರಲ್ಲಿ ಸಮದರ್ಶಿಯಾದವನು ಪಂಡಿತನೆಂದು ನನ್ನ ಅಭಿಮತವಾಗಿದೆ. ಎಲ್ಲ ಮಾನವರಲ್ಲಿಯೂ ನನ್ನ ಭಗವದ್ಭಾವವನ್ನೇ ವಿಶೇಷವಾಗಿ ಧ್ಯಾನಿಸತಕ್ಕ ಪುರುಷನಿಗೆ ಸ್ಪರ್ಧೆ, ಅಸೂಯೆ, ತಿರಸ್ಕಾರ, ಅಹಂಕಾರ

ನರೇಷ್ವಭೀಕ್ಷ್ಣಂ ಮದ್ಭಾವಂ ಪುಂಸೋ ಭಾವಯತೋಽಚಿರಾತ್ ।
ಸ್ಪರ್ಧಾಸೂಯಾತಿರಸ್ಕಾರಾಃ ಸಾಹಂಕಾರಾ ವಿಯಂತಿ ಹಿ ॥ ೧೫

ವಿಸೃಜ್ಯ ಸ್ಮಯಮಾನಾನ್ ಸ್ವಾನ್ ದೃಶಂ ವ್ರೀಡಾಂ ಚ ದೈಹಿಕೀಮ್ ।
ಪ್ರಣಮೇದ್ ದಂಡವದ್ ಭೂಮಾವಾಶ್ವಚಾಂಡಾಲಗೋಖರಮ್ ॥ ೧೬

ಯಾವತ್ ಸರ್ವೇಷು ಭೂತೇಷು ಮದ್ಭಾವೋ ನೋಪಜಾಯತೇ ।
ತಾವದೇವಮುಪಾಸೀತ ವಾಙ್ಮನಃಕಾಯವೃತ್ತಿಭಿಃ ॥ ೧೭

ಸರ್ವಂ ಬ್ರಹ್ಮಾತ್ಮಕಂ ತಸ್ಯ ವಿದ್ಯಯಾಽಽತ್ಮಮನೀಷಯಾ ।
ಪರಿಪಶ್ಯನ್ನುಪರಮೇತ್ ಸರ್ವತೋ ಮುಕ್ತಸಂಶಯಃ ॥ ೧೮

ಅಯಂ ಹಿ ಸರ್ವಕಲ್ಪಾನಾಂ ಸಧ್ರೀಚೀನೋ ಮತೋ ಮಮ ।
ಮದ್ಭಾವಃ ಸರ್ವಭೂತೇಷು ಮನೋವಾಕ್ಕಾಯವೃತ್ತಿಭಿಃ ॥ ೧೯

---

ಗಳು ಶೀಘ್ರದಲ್ಲಿಯೇ ನಶಿಸಿಹೋಗುತ್ತವೆ (೧೪–೧೫). 'ನಾನು ಉತ್ತಮ-ಅವನು ಕೀಳು' ಎಂಬ ದೇಹದೃಷ್ಟಿಯನ್ನೂ ಲಜ್ಜೆಯನ್ನೂ ತೊರೆದು, ತನ್ನ ಬಂಧುಮಿತ್ರರು ನಗುತ್ತಿದ್ದರೂ ಲಕ್ಷಿಸದೆ, ಕುದುರೆ ಚಂಡಾಲ ಗೋವು ಕತ್ತೆಗಳಿಗೂ ಸಹ ಭೂಮಿಯಲ್ಲಡ್ಡಬಿದ್ದು ದಂಡಪ್ರಣಾಮವನ್ನು ಮಾಡಬೇಕು (೧೬). ಎಲ್ಲಿಯವರೆಗೆ ಸಕಲಭೂತಗಳಲ್ಲಿಯೂ ಭಗವದ್ಭಾವನೆಯು ಉದಿಸಿ ಸಮದೃಷ್ಟಿಯುಂಟಾಗುವುದಿಲ್ಲವೋ ಅಲ್ಲಿಯವರೆಗೆ ವಾಙ್ಮನಃಕಾಯಗಳ ಕ್ರಿಯೆಗಳಿಂದ ಈ ರೀತಿ ಉಪಾಸನೆಯನ್ನು ಮಾಡುತ್ತಿರಬೇಕು. ಸರ್ವತ್ರ ಈಶ್ವರ ದೃಷ್ಟಿಯನ್ನಿಡುವುದರಿಂದಾದ ಪರಿಪಕ್ವಜ್ಞಾನದಿಂದ ಆತನಿಗೆ ಸರ್ವವೂ ಬ್ರಹ್ಮಾತ್ಮಕವೇ ಆಗಿಬಿಡುತ್ತದೆ. ಎಲ್ಲ ಬಗೆಯ ಸಂಶಯಗಳನ್ನೂ ಕಳೆದುಕೊಂಡು ಸರ್ವವೂ ಬ್ರಹ್ಮವೆಂದರಿತ ಮೇಲೆ ಆತನು ಸಮಸ್ತಕ್ರಿಯೆಗಳಿಂದಲೂ ವಿರತನಾಗಿ ಬಿಡಬೇಕು (೧೭–೧೮). ಮನೋವಾಕ್ಕಾಯವೃತ್ತಿಗಳಿಂದ ಸರ್ವಭೂತಗಳಲ್ಲಿಯೂ ನನ್ನ ಬ್ರಹ್ಮಭಾವನೆಯನ್ನು ತಂದುಕೊಳ್ಳುವುದೇನುಂಟು, ಇದು ಸರ್ವೋಪಾಯಗಳಲ್ಲಿಯೂ ಸಮೀಚೀನವಾದದ್ದೆಂದು ನನ್ನ ಮತವಾಗಿದೆ. ಎಲೈ ಉದ್ಧವ, ನಿಷ್ಕಾಮವಾಗಿ ಈ ಪ್ರಕಾರ ನನ್ನ ಭಗವದ್ಧರ್ಮವನ್ನು ಪಾಲಿಸತಕ್ಕವನಿಗೆ ಆರಂಭದಲ್ಲಿ ಸಹ ಅತ್ಯಲ್ಪ ವಿಘ್ನವೂ ಸಂಭವಿಸುವುದಿಲ್ಲ ಏಕೆಂದರೆ, ನಿರ್ಗುಣೋಪಾಸನೆಯಲ್ಲಿ ಪರ್ಯವಸಾನ

ನ ಹ್ಯಂಗೋಪಕ್ರಮೇ ಧ್ವಂಸೋ ಮದ್ಧರ್ಮಸ್ಯೋದ್ಧವಾಣ್ವಪಿ ।
ಮಯಾ ವ್ಯವಸಿತಃ ಸಮ್ಯಙ್ನಿರ್ಗುಣತ್ವಾದನಾಶಿಷಃ ॥ ೨೦

ಯೋ ಯೋ ಮಯಿ ಪರೇ ಧರ್ಮಃ ಕಲ್ಪ್ಯತೇ ನಿಷ್ಫಲಾಯ ಚೇತ್ ।
ತದಾಯಾಸೋ ನಿರರ್ಥಃ ಸ್ಯಾದ್ ಭಯಾದೇರಿವ ಸತ್ತಮ ॥ ೨೧

ಏಷಾ ಬುದ್ಧಿಮತಾಂ ಬುದ್ಧಿರ್ಮನೀಷಾ ಚ ಮನೀಷಿಣಾಮ್ ।
ಯತ್ ಸತ್ಯಮನೃತೇನೇಹ ಮರ್ತ್ಯೇನಾಪ್ನೋತಿ ಮಾಮೃತಮ್ ॥ ೨೨

ಏಷ ತೇಽಭಿಹಿತಃ ಕೃತ್ಸ್ನೋ ಬ್ರಹ್ಮವಾದಸ್ಯ ಸಂಗ್ರಹಃ ।
ಸಮಾಸವ್ಯಾಸವಿಧಿನಾ ದೇವಾನಾಮಪಿ ದುರ್ಗಮಃ ॥ ೨೩

ಅಭೀಕ್ಷ್ಣಶಸ್ತೇ ಗದಿತಂ ಜ್ಞಾನಂ ವಿಸ್ಪಷ್ಟಯುಕ್ತಿಮತ್ ।
ಏತದ್ ವಿಜ್ಞಾಯ ಮುಚ್ಯೇತ ಪುರುಷೋ ನಷ್ಟಸಂಶಯಃ ॥ ೨೪

---

ವಾಗುವ ಈ ಧರ್ಮಮಾರ್ಗವು ನನ್ನಿಂದಲೇ ಸರಿಯಾಗಿ ನಿರ್ಣೀತವಾದದ್ದು, (ಬೇರೆ ಮನ್ವಾದಿಗಳಿಂದ ಗೊತ್ತಾದದ್ದಲ್ಲ) (೧೯–೨೦). ಭಯಾದಿಗಳಿಂದ ಓಡಿಹೋಗುವ ಅಥವಾ ಅಳುವ ಆಯಾಸವು ನಿರರ್ಥಕವಷ್ಟೆ. ಹೀಗೆ ನಿರರ್ಥಕವಾದ ಕ್ರಿಯೆಯೂ ಸಹ ಪರಬ್ರಹ್ಮನಾದ ನನ್ನಲ್ಲಿ ಫಲಾಪೇಕ್ಷೆ ಇಲ್ಲದೆ ಅರ್ಪಿತವಾದರೆ, ಧರ್ಮವೇ ಆಗಿ ಬಿಡುತ್ತದೆ! (೨೧). ಅಸತ್ಯವೂ ವಿನಾಶಿಯೂ ಆದ ಮನುಷ್ಯದೇಹದಿಂದ ಸತ್ಯಸ್ವರೂಪನೂ ಅಮೃತನೂ ಆದ ನನ್ನನ್ನು ಈ ಜನ್ಮದಲ್ಲಿಯೇ ಮನುಷ್ಯನು ಪಡೆಯುತ್ತಾನೆಂಬುದೇನುಂಟೋ ಇದೇ ಬುದ್ಧಿಶಾಲಿಗಳಲ್ಲಿರುವ ವಿವೇಕ, ಜಾಣರಲ್ಲಿರುವ [1]ಚಾತುರ್ಯ (೨೨). ಉದ್ಧವ, ಪರಬ್ರಹ್ಮವಿಷಯದಲ್ಲಿ ಹೇಳಬೇಕಾದ ಉಪದೇಶದ ಸಮಸ್ತ ಸಾರವನ್ನೂ ಹೇಳಿದ್ದಾಯಿತು . ಸಮಾಸ-ಸಂಕ್ಷೇಪ, ವ್ಯಾಸ-ವಿಸ್ತಾರ ಈ ಎರಡು ಪ್ರಕಾರಗಳಿಂದಲೂ ನಿನಗೆ ಹೇಳಿದ್ದೇನೆ. ಇದು ದೇವತೆಗಳಿಗೂ ದುರ್ಜ್ಞೇಯವಾದದ್ದು (೨೩). ಸ್ಪಷ್ಟವಾಗಿ ತಿಳಿಯುವಂತೆ ಯುಕ್ತಿಯುಕ್ತವಾಗಿ ಈ ಜ್ಞಾನಪ್ರಕರಣವನ್ನು ಮತ್ತೆ ಮತ್ತೆ ಪ್ರಸ್ತಾವಿಸಿದ್ದೇನೆ. ಇದನ್ನರಿತ ಮನುಷ್ಯನು ತನ್ನ ಸಂದೇಹಗಳನ್ನು ತೊಡೆದುಹಾಕಿ ಮುಕ್ತನಾಗುವನು. ನಿನ್ನ

1. ಭಗವಂತನ ಭಜನೆಯೇ ವಿವೇಕ ಮತ್ತು ಚಾತುರ್ಯಗಳ ಫಲವೆಂಬ ಅಭಿಪ್ರಾಯ. ಭಜನೆಯಿಂದ ಭಗವಂತನ ಪ್ರಾಪ್ತಿ.

ಸುವಿವಿಕ್ತಂ ತವ ಪ್ರಶ್ನಂ ಮಯ್ಯೈತದಪಿ ಧಾರಯೇತ್ ।
ಸನಾತನಂ ಬ್ರಹ್ಮಗುಹ್ಯಂ ಪರಂ ಬ್ರಹ್ಮಾಧಿಗಚ್ಛತಿ ॥ ೨೫

ಯ ಏತನ್ಮಮ ಭಕ್ತೇಷು ಸಂಪ್ರದದ್ಯಾತ್ ಸುಪುಷ್ಕಲಮ್ ।
ತಸ್ಯಾಹಂ ಬ್ರಹ್ಮದಾಯಸ್ಯ ದದಾಮ್ಯಾತ್ಮಾನಮಾತ್ಮನಾ ॥ ೨೬

ಯ ಏತತ್ ಸಮಧೀಯೀತ ಪವಿತ್ರಂ ಪರಮಂ ಶುಚಿ ।
ಸ ಪೂಯೇತಾಹರಹರ್ಮಾಂ ಜ್ಞಾನದೀಪೇನ ದರ್ಶಯನ್ ॥ ೨೭

ಯ ಏತಚ್ಛ್ರದ್ಧಯಾ ನಿತ್ಯಮವ್ಯಗ್ರಃ ಶೃಣುಯಾನ್ನರಃ ।
ಮಯಿ ಭಕ್ತಿಂ ಪರಾಂ ಕುರ್ವನ್ ಕರ್ಮಭಿರ್ನ ಸ ಬಧ್ಯತೇ ॥ ೨೮

ಅಪ್ಯುದ್ಧವ ತ್ವಯಾ ಬ್ರಹ್ಮ ಸಖೇ ಸಮವಧಾರಿತಮ್ ।
ಅಪಿ ತೇ ವಿಗತೋ ಮೋಹಃ ಶೋಕಶ್ಚಾಸೌ ಮನೋಭವಃ ॥ ೨೯

---

ಪ್ರಶ್ನೆಗಳಿಗೆ ನಾನು ಸ್ಫುಟವಾಗಿ ಉತ್ತರಗಳನ್ನು ನೀಡಿರುವ ಈ ಜ್ಞಾನಪ್ರಕರಣವನ್ನು ಯಾವಾತನು ಅನುಸಂಧಾನಮಾಡುವನೋ ಅವನು ಸನಾತನವೂ ವೇದರಹಸ್ಯವೂ ಆದ ಪರಬ್ರಹ್ಮವನ್ನೈದುವನು (೨೪–೨೫). ಯಾವಾತನು ಈ ಬ್ರಹ್ಮವಿದ್ಯೆಯನ್ನು ನನ್ನ ಭಕ್ತರಿಗೆ ಪುಷ್ಕಳವಾಗಿ ಸಂಪ್ರದಾಯಕ್ರಮದಿಂದ ಉಪದೇಶಿಸುವನೋ ಆತನಿಗೆ ನನ್ನನ್ನು ನಾನೇ ಅರ್ಪಿಸಿಕೊಂಡುಬಿಡುತ್ತೇನೆ! ಪರಮಪವಿತ್ರವೂ ಶ್ರೋತೃಗಳಿಗೆ ಸಹ ಚಿತ್ತಶೋಧಕವೂ ಆದ ಈ ಪ್ರಕರಣವನ್ನು ಪ್ರತಿದಿನವೂ ಯಾವಾತನು ಪಾರಾಯಣ ಮಾಡುವನೋ ಆತನು ಜ್ಞಾನದೀಪದಿಂದ ನನ್ನನ್ನು ಪ್ರಕಾಶಪಡಿಸುವುದರಿಂದ ಪವಿತ್ರನಾಗುವನು (೨೬–೨೭). ಯಾರು ಆಸಕ್ತಿಯನ್ನಿಟ್ಟು ಇದನ್ನು ನಿತ್ಯವೂ ಶ್ರದ್ಧೆಯಿಂದ ಶ್ರವಣ ಮಾಡುತ್ತಾರೋ ಅವರಿಗೆ ನನ್ನಲ್ಲಿ ಪರಾಭಕ್ತಿ ಉದಿಸುವುದು. ಮತ್ತೆ ಕರ್ಮಬಂಧನಗಳಿಗೆ ಅವರು ಸಿಗುವುದಿಲ್ಲ (೨೮). ಅಯ್ಯಾ-ಮಿತ್ರ ಉದ್ಧವ, ಬ್ರಹ್ಮವೆಂದರೇನೆಂಬುದು ನಿನಗೆ ತಿಳಿಯಿತೆ? ನಿನ್ನ ಮೋಹವು ತೊಲಗಿತೆ? ಮನಸ್ಸಿನಲ್ಲಿ ನೆಲೆಸಿದ್ದ ಶೋಕವು ಕಳಚಿತೆ? ಈ ಬ್ರಹ್ಮವಿಷಯವನ್ನು ನೀನು ದಾಂಭಿಕನಿಗೂ ನಾಸ್ತಿಕನಿಗೂ ವಂಚಕನಿಗೂ ಹೇಳಬಾರದು. ಕೇಳಲು ಇಚ್ಛೆಯಿಲ್ಲದವನಿಗೂ ಭಕ್ತಿಯಿಲ್ಲದವನಿಗೂ

ನೈತತ್ತ್ವಯಾ ದಾಂಭಿಕಾಯ ನಾಸ್ತಿಕಾಯ ಶಠಾಯ ಚ ।
ಅಶುಶ್ರೂಷೋರಭಕ್ತಾಯ ದುರ್ವಿನೀತಾಯ ದೀಯತಾಮ್ ॥ ೩೦

ಏತೈರ್ದೋಷೈರ್ವಿಹೀನಾಯ ಬ್ರಹ್ಮಣ್ಯಾಯ ಪ್ರಿಯಾಯ ಚ ।
ಸಾಧವೇ ಶುಚಯೇ ಬ್ರೂಯಾದ್ ಭಕ್ತಿಃಸ್ಯಾಚ್ಛೂದ್ರಯೋಷಿತಾಮ್ ॥ ೩೧

ನೈತದ್ ವಿಜ್ಞಾಯ ಜಿಜ್ಞಾಸೋರ್ಜ್ಞಾತವ್ಯಮವಶಿಷ್ಯತೇ ।
ಪೀತ್ವಾ ಪೀಯೂಷಮಮೃತಂ ಪಾತವ್ಯಂ ನಾವಶಿಷ್ಯತೇ ॥ ೩೨

ಜ್ಞಾನೇ ಕರ್ಮಣಿ ಯೋಗೇ ಚ ವಾರ್ತಾಯಾಂ ದಂಡಧಾರಣೇ ।
ಯಾವಾನರ್ಥೋ ನೃಣಾಂ ತಾತ ತಾವಾಂಸ್ತೇಽಹಂ ಚತುರ್ವಿಧಃ ॥ ೩೩

ಮರ್ತ್ಯೋ ಯದಾ ತ್ಯಕ್ತಸಮಸ್ತಕರ್ಮಾ
ನಿವೇದಿತಾತ್ಮಾ ವಿಚಿಕೀರ್ಷಿತೋ ಮೇ ।
ತದಾಮೃತತ್ವಂ ಪ್ರತಿಪದ್ಯಮಾನೋ
ಮಯಾಽಽತ್ಮಭೂಯಾಯ ಚ ಕಲ್ಪತೇ ವೈ ॥ ೩೪

---

ಉದ್ಧತನಿಗೂ ಇದನ್ನು ನೀಡಬಾರದು (೨೯–೩೦). ಈ ದೋಷಗಳೊಂದೂ ಇಲ್ಲದವನಿಗೆ ಇದನ್ನು ಉಪದೇಶಿಸಬೇಕು. ವೇದದಲ್ಲಿ ನಂಬಿಕೆ ಇರತಕ್ಕವನೂ ಪ್ರಿಯನೂ ಸಾಧುವೂ ಶುಚಿಯೂ ಆದವನಿಗೆ ಹೇಳಬೇಕು. ನನ್ನಲ್ಲಿ ಭಕ್ತಿಯಿರತಕ್ಕ ಸ್ತ್ರೀಯರಿಗೂ ಶೂದ್ರರಿಗೂ ಸಹ ಬೋಧಿಸಬೇಕು (೩೧). ಜಿಜ್ಞಾಸುವಾದವನಿಗೆ ಈ ಪ್ರಕರಣವನ್ನರಿತಮೇಲೆ ಇನ್ನು ತಿಳಿಯಬೇಕಾದದ್ದೇನೂ ಉಳಿಯುವುದಿಲ್ಲ. ರುಚಿಕರವಾದ ಅಮೃತವನ್ನು, ಕುಡಿದಮೇಲೆ, ಕುಡಿಯಬೇಕಾದದ್ದೇನೂ ಉಳಿಯುವುದಿಲ್ಲ ! (೩೨). ಅಪ್ಪಾ-ಉದ್ಧವ, ಜ್ಞಾನ-ಕರ್ಮ-ಯೋಗ-ಕೃಷ್ಯಾದಿ ವೃತ್ತಿ-ದಂಡನೀತಿಗಳಲ್ಲಿ ಜನರಿಗೆ ಯಾವ ಯಾವ ಪ್ರಯೋಜನವಾಗುತ್ತದೆಯೋ ಆ [1]ಚತುರ್ವಿಧ ಪ್ರಯೋಜನವೂ (ಭಕ್ತನಾದ) ನಿನಗೆ ನಾನೇ ಆಗಿದ್ದೇನೆ (೩೩). ಮನುಷ್ಯನು ಯಾವಾಗ ಸಮಸ್ತ ಕರ್ಮಗಳನ್ನೂ ತ್ಯಜಿಸಿ ನನ್ನಲ್ಲಿ ಆತ್ಮನಿವೇದನೆ

1. ಧರ್ಮ, ಅರ್ಥ, ಕಾಮ, ಮೋಕ್ಷ—ಇವು ನಾಲ್ಕೇ ಮನುಷ್ಯರು ಮುಖ್ಯವಾಗಿ ಬಯಸುವ ಪ್ರಯೋಜನಗಳು. ಜ್ಞಾನದಿಂದ ಮೋಕ್ಷ, ಕರ್ಮದಿಂದ ಧರ್ಮ ಮತ್ತು ಕಾಮ, ಯೋಗದಿಂದ ಅಣಿಮಾದಿಸಿದ್ಧಿ (ಅರ್ಥ), ಕೃಷ್ಯಾದಿಗಳಿಂದ ಮತ್ತು ದಂಡನೀತಿಯಿಂದಾಗುವ ಪ್ರಯೋಜನ ಅರ್ಥವೇ.

*

ಶ್ರೀಶುಕ ಉವಾಚ—

ಸ ಏವಮಾದರ್ಶಿತಯೋಗಮಾರ್ಗ-
ಸ್ತದೋತ್ತಮಶ್ಲೋಕವಚೋ ನಿಶಮ್ಯ ।
ಬದ್ಧಾಂಜಲಿಃ ಪ್ರೀತ್ಯುಪರುದ್ಧಕಂಠೋ
ನ ಕಿಂಚಿದೂಚೇSಶ್ರುಪರಿಪ್ಲುತಾಕ್ಷಃ ॥ ೩೫

ವಿಷ್ಟಭ್ಯ ಚಿತ್ತಂ ಪ್ರಣಯಾವಘೂರ್ಣಂ
ಧೈರ್ಯೇಣ ರಾಜನ್ ಬಹು ಮನ್ಯಮಾನಃ ।
ಕೃತಾಂಜಲಿಃ ಪ್ರಾಹ ಯದುಪ್ರವೀರಂ
ಶೀರ್ಷ್ಣಾ ಸ್ಪೃಶಂಸ್ತಚ್ಚರಣಾರವಿಂದಮ್ ॥ ೩೬

ಉದ್ಧವ ಉವಾಚ—

ವಿದ್ರಾವಿತೋ ಮೋಹಮಹಾಂಧಕಾರೋ
ಯ ಆಶ್ರಿತೋ ಮೇ ತವ ಸಂನಿಧಾನಾತ್ ।
ವಿಭಾವಸೋಃ ಕಿಂ ನು ಸಮೀಪಗಸ್ಯ
ಶೀತಂ ತಮೋ ಭೀಃ ಪ್ರಭವಂತ್ಯಜಾದ್ಯ ॥ ೩೭

---

ಮಾಡಿಕೊಳ್ಳುತ್ತಾನೋ, ಆಗ ಆತನನ್ನು ವಿಶಿಷ್ಟರೀತಿಯಲ್ಲಿ ಮಾರ್ಪಡಿಸಬೇಕೆಂದು ನನಗೆ ಇಚ್ಛೆಯಾಗುತ್ತದೆ. ಅವನು ಅಮೃತನಾಗಲು (ಮೋಕ್ಷವನ್ನು ಪಡೆಯಲು) ಅರ್ಹನಾಗುತ್ತಾನೆ. ನನಗೆ ಸಮಾನವಾದ ಐಶ್ವರ್ಯವನ್ನು ಪಡೆದು ಆತ್ಮೈಕ್ಯವನ್ನೈದಲು ಸಮರ್ಥನಾಗುವನು" ಎಂದನು (೩೪). ಹೀಗೆ ನುಡಿದು ಶುಕಮುನಿಗಳು ಹೇಳುತ್ತಾರೆ: "ಪರೀಕ್ಷಿತರಾಜ, ಈ ಪ್ರಕಾರವಾಗಿ ಶ್ರೀಕೃಷ್ಣನು ಯೋಗಮಾರ್ಗವನ್ನು ಬೋಧಿಸಲಾಗಿ, ಆತನ ಉಪದೇಶವನ್ನು ಶ್ರದ್ಧೆಯಿಂದ ಆಲಿಸಿದ ಉದ್ಧವನಿಗೆ ಆನಂದಾತಿಶಯದಿಂದ ಗಂಟಲು ಕಟ್ಟಿಕೊಂಡಿತು. ಕಣ್ಣಲ್ಲಿ ನೀರು ಉಕ್ಕಿತು. ಬಾಯಿಂದ ಯಾವ ಮಾತೂ ಹೊರಡಲಿಲ್ಲ. ಸುಮ್ಮನೆ ಕೈಮುಗಿದುಕೊಂಡಿದ್ದನು (೩೫). ಅನಂತರ ಪ್ರೀತಿಯಿಂದ ಕ್ಷುಭಿತವಾದ ಚಿತ್ತವನ್ನು ಧೈರ್ಯದಿಂದ ಬಿಗಿಹಿಡಿದು, ತಾನು ಕೃತಾರ್ಥನಾದೆನೆಂದು ತಿಳಿದುಕೊಂಡು, ಯದುವೀರನಾದ ಶ್ರೀಕೃಷ್ಣನ ಚರಣಾರವಿಂದಕ್ಕೆ ತಲೆಬಾಗಿ ಮುಟ್ಟಿ ನಮಸ್ಕರಿಸಿ, ಕೈಮುಗಿದುಕೊಂಡು ಇಂತೆಂದನು (೩೬): "ಇಷ್ಟು ದಿನದವರೆಗೆ ನನ್ನನ್ನು

ಪ್ರತ್ಯರ್ಪಿತೋ ಮೇ ಭವತಾನುಕಂಪಿನಾ
ಭೃತ್ಯಾಯ ವಿಜ್ಞಾನಮಯಃ ಪ್ರದೀಪಃ ।
ಹಿತ್ವಾ ಕೃತಜ್ಞಸ್ತವ ಪಾದಮೂಲಂ
ಕೋಽನ್ಯತ್ ಸಮೀಯಾಚ್ಛರಣಂ ತ್ವದೀಯಮ್ ॥ ೩೮

ವೃಕ್ಣಶ್ಚ ಮೇ ಸುದೃಢಃ ಸ್ನೇಹಪಾಶೋ
ದಾಶಾರ್ಹವೃಷ್ಣ್ಯಂಧಕಸಾತ್ತ್ವತೇಷು ।
ಪ್ರಸಾರಿತಃ ಸೃಷ್ಟಿವಿವೃದ್ಧಯೇ ತ್ವಯಾ
ಸ್ವಮಾಯಯಾ ಹ್ಯಾತ್ಮಸುಬೋಧಹೇತಿನಾ ॥ ೩೯

ನಮೋಽಸ್ತು ತೇ ಮಹಾಯೋಗಿನ್ ಪ್ರಪನ್ನಮನುಶಾಧಿ ಮಾಮ್ ।
ಯಥಾ ತ್ವಚ್ಚರಣಾಂಭೋಜೇ ರತಿಃ ಸ್ಯಾದನಪಾಯಿನೀ ॥ ೪೦

ಶ್ರೀಭಗವಾನುವಾಚ—
ಗಚ್ಛೋದ್ಧವ ಮಯಾಽಽದಿಷ್ಟೋ ಬದರ್ಯಾಖ್ಯಂ ಮಮಾಶ್ರಮಮ್ ।
ತತ್ರ ಮತ್ಪಾದತೀರ್ಥೋದೇ ಸ್ನಾನೋಪಸ್ಪರ್ಶನೈಃ ಶುಚಿಃ ॥ ೪೧

---

ಆವರಿಸಿಕೊಂಡಿದ್ದ ಅಜ್ಞಾನವೆಂಬ ಕಾರ್ಗತ್ತಲೆಯು ನಿನ್ನ ಉಪದೇಶದಿಂದ ದೂರ ಓಡಿಹೋಯಿತು! ಓ ಬ್ರಹ್ಮನಿಗೂ ತಂದೆಯಾದ ಮಹಾತ್ಮನೆ, ಬೆಂಕಿಯ ಬಳಿ ಇರತಕ್ಕವನಿಗೆ ಚಳಿಯಾದೀತೆ? ಕತ್ತಲೆ ಇದ್ದೀತೆ? ಕ್ರಿಮಿಕೀಟಗಳ ಭಯವಿದ್ದೀತೆ? (೩೭). ನಿನ್ನ ಭೃತ್ಯನಾದ ನನಗೆ ಕೃಪಾಳುವಾದ ನೀನು ಜ್ಞಾನಮಯದೀಪವನ್ನು [1]ಹಿಂದಿರಿಗಿಸಿಕೊಟ್ಟಿದ್ದೀಯೆ. ನಿನಗೆ ಕೃತಜ್ಞನಾದ ಯಾವನು ನಿನ್ನ ಪಾದ ಮೂಲವನ್ನು ಬಿಟ್ಟು ಇನ್ನೊಂದಕ್ಕೆ ಶರಣಾಗುವನು? (೩೮). ದಾಶಾರ್ಹ-ವೃಷ್ಣಿ-ಅಂಧಕ-ಸಾತ್ತ್ವತರೆಂಬ ಯಾದವರ ವಿಷಯದಲ್ಲಿ ನನಗಿದ್ದ ಒಂದು ಸ್ನೇಹ ಪಾಶವನ್ನು ನನ್ನ ಮೇಲೆ ನೀನೇ ಬೀರಿದ್ದೆ! ಸೃಷ್ಟಿಕಾರ್ಯದ ವೃದ್ಧಿಗಾಗಿ ನಿನ್ನ ಮಾಯೆಯು ಹರಡಿದ್ದ ದೃಢವಾದ ಪಾಶ ಅದು! ಈಗ ಅದನ್ನು ಆತ್ಮಬೋಧವೆಂಬ ಆಯುಧದಿಂದ ನೀನೇ ಕತ್ತರಿಸಿಹಾಕಿದೆ! (೩೯). ಓ ಮಹಾಯೋಗಿಯೆ, ನಿನಗೆ ನಮಸ್ಕಾರ ಮಾಡುತ್ತೇನೆ. ಶರಣಾದ ನನ್ನನ್ನು ಅನುಗ್ರಹಿಸು. ನಿನ್ನ ಅಡಿದಾವರೆಯಲ್ಲಿ ಪ್ರೀತಿಯು ಎಂದೆಂದಿಗೂ ಕದಲದಂತೆ ಆಜ್ಞಾಪಿಸು" ಎಂದನು (೪೦).

---

1. ಜೀವಾತ್ಮನ ಜ್ಞಾನವು ಮಾಯೆಯಿಂದ ಅಪಹೃತವಾಗಿತ್ತು ಎಂಬುದನ್ನು 'ಪ್ರತ್ಯರ್ಪಿತಃ' ಎಂಬ ಶಬ್ದವು ಸೂಚಿಸುತ್ತದೆ.

ಈಕ್ಷಯಾಲಕನಂದಾಯಾ ವಿಧೂತಾಶೇಷಕಲ್ಮಷಃ ।
ವಸಾನೋ ವಲ್ಕಲಾನ್ಯಂಗ ವನ್ಯಭುಕ್ ಸುಖನಿಃಸ್ಪೃಹಃ ॥ ೪೨

ತಿತಿಕ್ಷುರ್ದ್ವಂದ್ವಮಾತ್ರಾಣಾಂ ಸುಶೀಲಃ ಸಂಯತೇಂದ್ರಿಯಃ ।
ಶಾಂತಃ ಸಮಾಹಿತಧಿಯಾ ಜ್ಞಾನವಿಜ್ಞಾನಸಂಯುತಃ ॥ ೪೩

ಮತ್ತೋಽನುಶಿಕ್ಷಿತಂ ಯತ್ತೇ ವಿವಿಕ್ತಮನುಭಾವಯನ್ ।
ಮಯ್ಯಾವೇಶಿತವಾಕ್ಚಿತ್ತೋ ಮದ್ಧರ್ಮನಿರತೋ ಭವ ।
ಅತಿವ್ರಜ್ಯ ಗತೀಸ್ತಿಸ್ರೋ ಮಾಮೇಷ್ಯಸಿ ತತಃ ಪರಮ್ ॥ ೪೪

ಶ್ರೀಶುಕ ಉವಾಚ—

ಸ ಏವಮುಕ್ತೋ ಹರಿಮೇಧಸೋದ್ಧವಃ
ಪ್ರದಕ್ಷಿಣಂ ತಂ ಪರಿಸೃತ್ಯ ಪಾದಯೋಃ ।
ಶಿರೋ ನಿಧಾಯಾಶ್ರುಕಲಾಭಿರಾರ್ದ್ರಧೀ-
ರ್ನ್ಯಷಿಂಚದದ್ವಂದ್ವಪರೋಽಪ್ಯಪಕ್ರಮೇ ॥ ೪೫

---

ಆಗ ಭಗವಂತನು ಹೀಗೆಂದನು : “ಉದ್ಧವ, ನನ್ನ ಆದೇಶದಂತೆ ನನ್ನ ಬದರ್ಯಾಶ್ರಮಕ್ಕೆ ಹೋಗು. ಅಲ್ಲಿ ನನ್ನ ಪಾದತೀರ್ಥೋದಕವೆನಿಸಿದ ಅಲಕನಂದಾನದಿಯ ದರ್ಶನಮಾತ್ರದಿಂದ ನಿನ್ನ ಸಮಸ್ತ ಕಲ್ಮಷಗಳೂ ತೊಡೆದು ಹೋಗುತ್ತವೆ. ಅದರ ಜಲದಲ್ಲಿ ಸ್ನಾನಾಚಮನಾದಿಗಳಿಂದ ಶುಚಿಯಾಗಿ, ವಲ್ಕಲಗಳನ್ನುಟ್ಟು, ವನ್ಯಾಹಾರದಿಂದ ಜೀವಿಸುತ್ತ, ನಿಸ್ಪೃಹನಾಗಿ ಸುಖದಿಂದಿರು (೪೧–೪೨). ಶೀತೋಷ್ಣಾದಿ ದ್ವಂದ್ವಗಳನ್ನು ತಾಳ್ಮೆಯಿಂದ ಸಹಿಸಿಕೊಂಡು, ಶೀಲವಂತನೂ ಜಿತೇಂದ್ರಿಯನೂ ಶಾಂತನೂ ಆಗಿ, ನನ್ನಲ್ಲಿ ಅಚಲವಾದ ಬುದ್ಧಿಯನ್ನಿಟ್ಟು ಜ್ಞಾನವಿಜ್ಞಾನ ತತ್ಪರನಾಗಿರು. ನನ್ನಿಂದ ನೀನು ಏನನ್ನು ಕಲಿತೆಯೋ ಅದನ್ನು ಏಕಾಂತದಲ್ಲಿ ಚಿಂತಿಸಿ ಅನುಭವಿಸುತ್ತ, ವಾಙ್ಮನಸ್ಸುಗಳನ್ನು ನನ್ನಲ್ಲಿ ನೆಲೆನಿಲ್ಲಿಸಿ, ಭಾಗವತಧರ್ಮದಲ್ಲಿ ನಿರತನಾಗಿರು. ಅನಂತರ ಗುಣತ್ರಯಾತ್ಮಕವಾದ ಗತಿಗಳನ್ನು ದಾಟಿ ಪರಬ್ರಹ್ಮನಾದ ನನ್ನನ್ನು ಸೇರುತ್ತೀಯೆ” ಎಂದನು (೪೩–೪೪). ಹೀಗೆ ನುಡಿದು ಶುಕಮಹರ್ಷಿಗಳು ಮತ್ತೆ ಹೇಳಿದರು : “ರಾಜ-ಪರೀಕ್ಷಿತ, ಸಂಸಾರಹಾರಿಯಾದ ಶ್ರೀಕೃಷ್ಣನು ಹೀಗೆ ನುಡಿಯಲಾಗಿ ಉದ್ಧವನು

ಸುದುಸ್ತ್ಯಜಸ್ನೇಹವಿಯೋಗಕಾತರೋ
ನ ಶಕ್ನುವಂಸ್ತಂ ಪರಿಹಾತುಮಾತುರಃ ।
ಕೃಚ್ಛ್ರಂ ಯಯೌ ಮೂರ್ಧನಿ ಭರ್ತೃಪಾದುಕೇ
ಬಿಭ್ರನ್ನಮಸ್ಕೃತ್ಯ ಯಯೌ ಪುನಃ ಪುನಃ ॥ ೪೬

ತತಸ್ತಮಂತರ್ಹೃದಿ ಸಂನಿವೇಶ್ಯ
ಗತೋ ಮಹಾಭಾಗವತೋ ವಿಶಾಲಾಮ್ ।
ಯಥೋಪದಿಷ್ಟಾಂ ಜಗದೇಕಬಂಧುನಾ
ತಪಃ ಸಮಾಸ್ಥಾಯ ಹರೇರಗಾದ್ ಗತಿಮ್ ॥ ೪೭

ಯ ಏತದಾನಂದಸಮುದ್ರಸಂಭೃತಂ
ಜ್ಞಾನಾಮೃತಂ ಭಾಗವತಾಯ ಭಾಷಿತಮ್ ।
ಕೃಷ್ಣೇನ ಯೋಗೇಶ್ವರಸೇವಿತಾಂಘ್ರಿಣಾ
ಸಚ್ಛ್ರದ್ಧಯಾಽಽಸೇವ್ಯ ಜಗದ್ ವಿಮುಚ್ಯತೇ ॥ ೪೮

---

ಶ್ರೀಕೃಷ್ಣನಿಗೆ ಪ್ರದಕ್ಷಿಣೆಮಾಡಿ ಅವನ ಪಾದಗಳಲ್ಲಿ ತಲೆಯಿಟ್ಟು ವಂದಿಸಿದನು. ಅವನು ಸುಖದುಃಖಗಳೆಂಬ ದ್ವಂದ್ವಗಳನ್ನು ದಾಟಿದ್ದರೂ ನಿರ್ಗಮನ ಸಮಯದಲ್ಲಿ ಅವನ ಮನಸ್ಸು ಕರಗಿತು. ಶ್ರೀಕೃಷ್ಣನ ಪಾದಗಳನ್ನು ಕಣ್ಣೀರಿಂದ ನೆನೆಸಿದನು (೪೫). ಆತನಿಗೆ ಶ್ರೀಕೃಷ್ಣನಲ್ಲಿ ತ್ಯಜಿಸಲಶಕ್ಯವಾದ ಸ್ನೇಹವಿದ್ದುದರಿಂದ, ಇನ್ನು ವಿರಹವಾಗುತ್ತದೆಯೆಂದು ಭೀತನಾಗಿ, ಶ್ರೀಕೃಷ್ಣನನ್ನು ಬಿಟ್ಟುಹೋಗಲಾರದೆ ಕಳವಳಿಸಿದನು. ಅನಂತರ ಶ್ರೀಕೃಷ್ಣನು ಕೊಟ್ಟ ಪ್ರಭುಪಾದುಕೆಗಳನ್ನು ತಲೆಯ ಮೇಲಿಟ್ಟುಕೊಂಡು ಮತ್ತೆ ಮತ್ತೆ ನಮಸ್ಕರಿಸುತ್ತ, ಕಷ್ಟಪಡುತ್ತ, ಹೇಗೋ ಅಲ್ಲಿಂದ ಹೊರಟನು (೪೬). ಮಹಾಭಗವದ್ಭಕ್ತನಾದ ಆ ಉದ್ಧವನು ಭಗವಂತನನ್ನು ಹೃದಯದಲ್ಲಿ ಸ್ಮರಿಸುತ್ತ ವಿಶಾಲವಾದ ಬದರಿಕಾಶ್ರಮಕ್ಕೆ [1]ತೆರಳಿದನು. ಅನಂತರ ಜಗದೇಕಬಂಧುವಾದ ಶ್ರೀಕೃಷ್ಣನು ಉಪದೇಶಿಸಿದಂತೆ ಶ್ರೀಹರಿಗೆ ಸೇರಿದ ಅಮೃತಗತಿಯನ್ನೈದಿದನು (೪೭). ಯೋಗೇಶ್ವರಸೇವಿತಚರಣಯುಗಳನಾದ ಶ್ರೀಕೃಷ್ಣನು ತನ್ನ ಭಕ್ತನಿಗೆ ಉಪದೇಶಿಸಿದ ಜ್ಞಾನಾಮೃತವಿದು. [2]ಭಗವದ್ಭಕ್ತಿ

---

1. ಅನುಬಂಧವನ್ನು ನೋಡಿ–೯

2. ಇದು ಶ್ರೀಕೃಷ್ಣನಿಂದ ಗೀತವಾಗಿದ್ದರೂ ಉದ್ಧವಗೀತೆಯೆಂದು ಪ್ರಸಿದ್ಧವಾಗಿದೆ. ಉದ್ಧವನಿಗೋಸ್ಕರ ಗೀತವಾದದ್ದು—ಎಂದು ಅರ್ಥಮಾಡಿಕೊಳ್ಳಬೇಕು.

ಭವಭಯಮಪಹಂತುಂ ಜ್ಞಾನವಿಜ್ಞಾನಸಾರಂ
ನಿಗಮಕೃದುಪಜಹ್ರೇ ಭೃಂಗವದ್ ವೇದಸಾರಮ್ ।
ಅಮೃತಮುದಧಿತಶ್ಚಾಪಾಯಯದ್ ಭೃತ್ಯವರ್ಗಾನ್
ಪುರುಷಮೃಷಭಮಾದ್ಯಂ ಕೃಷ್ಣಸಂಜ್ಞಂ ನತೋಽಸ್ಮಿ ॥ ೪೯

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಏಕೋನತ್ರಿಂಶಾಧ್ಯಾಯಃ



---

ಮಾರ್ಗವೆಂಬ ಆನಂದ ಸಮುದ್ರದಿಂದ ಕಡೆದು ತಂದದ್ದು. ಇದನ್ನು ಯಾರು ಸೇವಿಸುತ್ತಾರೋ ಅವರು ಮುಕ್ತರಾಗುತ್ತಾರೆ. ಅಂತಹವರ ಸತ್ಸಂಗದ ಮಹಿಮೆಯಿಂದ ಜಗತ್ತೇ ಮುಕ್ತವಾಗಬಲ್ಲದು (೪೮). ಸಂಸಾರ ಮತ್ತು ಜರಾರೋಗಾದಿ ಭಯಗಳನ್ನು ನೀಗಿಸುವುದಕ್ಕಾಗಿ, ಪ್ರವೃತ್ತಿಮಾರ್ಗ ಮತ್ತು ನಿವೃತ್ತಿಮಾರ್ಗದವರ ಉಪಯೋಗಕ್ಕೋಸ್ಕರ ವೇದಕರ್ತನಾದ ಭಗವಂತನು ವೇದಸಾಗರದಿಂದ ಕಡೆದು ತಂದ ಅಮೃತವಿದು. ಇದು ಜ್ಞಾನವಿಜ್ಞಾನಗಳ ಸಾರವಾಗಿದೆ. ವೇದಸಾರವನ್ನು ದುಂಬಿಯಂತೆ ಹೀರಿ ತಂದು ತನ್ನ ಭಕ್ತರಿಗೆ ಈ ಅಮೃತವನ್ನು ಕುಡಿಸಿದ ಪುರುಷೋತ್ತಮನಾದ ಶ್ರೀಕೃಷ್ಣನಿಗೆ ಪ್ರಣಾಮಗಳನ್ನರ್ಪಿಸುತ್ತೇನೆ" ಎಂದು ಶುಕಮುನಿಗಳು ಹೇಳಿದರು (೪೯).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಇಪ್ಪತ್ತೊಂಬತ್ತನೆಯ ಅಧ್ಯಾಯ



# ತ್ರಿಂಶಾಧ್ಯಾಯಃ

ರಾಜೋವಾಚ—

ತತೋ ಮಹಾಭಾಗವತ ಉದ್ಧವೇ ನಿರ್ಗತೇ ವನಮ್ ।
ದ್ವಾರವತ್ಯಾಂ ಕಿಮಕರೋದ್ ಭಗವಾನ್ ಭೂತಭಾವನಃ ॥ ೧

ಬ್ರಹ್ಮಶಾಪೋಪಸಂಸೃಷ್ಟೇ ಸ್ವಕುಲೇ ಯಾದವರ್ಷಭಃ ।
ಪ್ರೇಯಸೀಂ ಸರ್ವನೇತ್ರಾಣಾಂ ತನುಂ ಸ ಕಥಮತ್ಯಜತ್ ॥ ೨

ಪ್ರತ್ಯಾಕ್ರಷ್ಟುಂ ನಯನಮಬಲಾ ಯತ್ರ ಲಗ್ನಂ ನ ಶೇಕುಃ
ಕರ್ಣಾವಿಷ್ಟಂ ನ ಸರತಿ ತತೋ ಯತ್ ಸತಾಮಾತ್ಮಲಗ್ನಮ್ ॥
ಯಚ್ಛ್ರೀರ್ವಾಚಾಂ ಜನಯತಿ ರತಿಂ ಕಿಂ ನು ಮಾನಂ ಕವೀನಾಂ
ದೃಷ್ಟ್ವಾ ಜಿಷ್ಣೋರ್ಯುಧಿ ರಥಗತಂ ಯಚ್ಚ ತತ್ಸಾಮ್ಯಮೀಯುಃ ॥ ೩

## ಅಧ್ಯಾಯ ೩೦

ಶ್ರೀಕೃಷ್ಣನ ಪ್ರೇರಣೆಯಂತೆ ಪ್ರಭಾಸಕ್ಷೇತ್ರಕ್ಕೆ ಯಾದವರ ಪ್ರಯಾಣ. ಮದ್ಯಪಾನಮಾಡಿ ಯಾದವರ ಬಡಿದಾಟ; ಸಾವು. ಬಲರಾಮನ ದೇಹತ್ಯಾಗ. ಜರಾವ್ಯಾಧ ಪ್ರಸಂಗ. ದಾರುಕನಿಗೆ ಶ್ರೀಕೃಷ್ಣನ ಸಂದೇಶ.

ಪರೀಕ್ಷಿತರಾಜನು ಶುಕಮುನಿಗಳನ್ನು ಕುರಿತು ಕೇಳಿದನು : "ಮಹರ್ಷಿಗಳೆ, ಮಹಾಭಾಗವತನಾದ ಉದ್ಧವನು ವನಕ್ಕೆ ಹೊರಟುಹೋದಮೇಲೆ, ಭೂತಭಾವನನಾದ ಭಗವಾನ್ ಶ್ರೀಕೃಷ್ಣನು ದ್ವಾರಕೆಯಲ್ಲಿ ಏನು ಮಾಡಿದನು? ಆ ಯಾದವೋತ್ತಮನು, ತನ್ನ ವಂಶಕ್ಕೆ ಬ್ರಹ್ಮಶಾಪವು ತಗುಲಿದಮೇಲೆ, ಸರ್ವನೇತ್ರಗಳಿಗೂ ಪ್ರಿಯತಮವಾಗಿದ್ದ ತನ್ನ ಲೀಲಾಶರೀರವನ್ನು ಹೇಗೆ ಪರಿತ್ಯಜಿಸಿದನು? (೧–೨). ಯಾವ ಭವ್ಯರೂಪದಲ್ಲಿ ನೆಟ್ಟುಹೋದ ತಮ್ಮ ನೇತ್ರವನ್ನು ಕಿತ್ತುಕೊಳ್ಳಲು ಅಂಗನೆಯರಿಗೆ ಶಕ್ಯವಾಗುತ್ತಿರಲಿಲ್ಲವೋ, ಯಾವ ದಿವ್ಯರೂಪವು ಕಿವಿಯ ಮೂಲಕ ಒಳಗೆ ಪ್ರವೇಶಿಸಿ ಸಜ್ಜನರ ಹೃದಯದಲ್ಲಿ ಲಿಖಿತವಾದಂತೆ ನಿಂತುಬಿಡುತ್ತಿತ್ತೋ—ಹೊರಗೆ ಬರುತ್ತಲೇ ಇರಲಿಲ್ಲವೋ, ಯಾವ ರೂಪವು ಕವಿಗಳ ವಾಣಿಗಳಿಗೆ ಒಂದು ಶೋಭೆಯನ್ನು ಕೊಡುತ್ತಿತ್ತೋ—ಇನ್ನು ಕವಿಗಳಿಗೇ ಪೂಜ್ಯತೆಯನ್ನು ತಂದುಕೊಡುತ್ತಿತ್ತೆಂದು ಹೇಳುವುದೇನು?—ಅರ್ಜುನನ ರಥದಲ್ಲಿ ಮಂಡಿಸಿದ್ದ ಯಾವ ರೂಪವನ್ನು ನೋಡುತ್ತ ಸಂಗ್ರಾಮಭೂಮಿಯಲ್ಲಿ ಮೃತ

ಋಷಿರುವಾಚ—

ದಿವಿ ಭುವ್ಯಂತರಿಕ್ಷೇ ಚ ಮಹೋತ್ಪಾತಾನ್ ಸಮುತ್ಥಿತಾನ್ ।
ದೃಷ್ಟ್ವಾಽಽಸೀನಾನ್ ಸುಧರ್ಮಾಯಾಂ ಕೃಷ್ಣಃ ಪ್ರಾಹ ಯದೂನಿದಮ್॥

ಏತೇ ಘೋರಾ ಮಹೋತ್ಪಾತಾ ದ್ವಾರ್ವತ್ಯಾಂ ಯಮಕೇತವಃ ।
ಮುಹೂರ್ತಮಪಿ ನ ಸ್ಥೇಯಮತ್ರ ನೋ ಯದುಪುಂಗವಾಃ ॥ ೫

ಸ್ತ್ರಿಯೋ ಬಾಲಾಶ್ಚ ವೃದ್ಧಾಶ್ಚ ಶಂಖೋದ್ಧಾರಂ ವ್ರಜಂತ್ವಿತಃ ।
ವಯಂ ಪ್ರಭಾಸಂ ಯಾಸ್ಯಾಮೋ ಯತ್ರ ಪ್ರತ್ಯಕ್ ಸರಸ್ವತೀ ॥ ೬

ತತ್ರಾಭಿಷಿಚ್ಯ ಶುಚಯ ಉಪೋಷ್ಯ ಸುಸಮಾಹಿತಾಃ ।
ದೇವತಾಃ ಪೂಜಯಿಷ್ಯಾಮಃ ಸ್ನಪನಾಲೇಪನಾರ್ಹಣೈಃ ॥ ೭

ಬ್ರಾಹ್ಮಣಾಂಸ್ತು ಮಹಾಭಾಗಾನ್ ಕೃತಸ್ವಸ್ತ್ಯಯನಾ ವಯಮ್ ।
ಗೋಭೂಹಿರಣ್ಯವಾಸೋಭಿರ್ಗಜಾಶ್ವರಥವೇಶ್ಮಭಿಃ ॥ ೮

---

ರಾದವರು ಆದರ ಸಾರೂಪ್ಯ ಮುಕ್ತಿಯನ್ನು ಪಡೆದರೋ, ಅಂತಹ ಲೋಕೋತ್ತರ ರೂಪಯುಕ್ತವಾದ ದೇಹವನ್ನು ಶ್ರೀಕೃಷ್ಣನು ಪರಿತ್ಯಜಿಸಿದ ಬಗೆ ಯಾವುದು ?" ಎಂದು ಕೇಳಿದನು (೩). ಆಗ ಶುಕಮುನಿಗಳು ಹೇಳಿದರು : "ದೇವಲೋಕ ಭೂಲೋಕ ಅಂತರಿಕ್ಷಗಳಲ್ಲಿ ತೋರಿದ ಮಹೋತ್ಪಾತಗಳನ್ನು ಕಂಡ ಶ್ರೀಕೃಷ್ಣನು ಸುಧರ್ಮಸಭೆಯಲ್ಲಿ ಕುಳಿತಿದ್ದ ಯಾದವರಿಗೆ ಈ ಪ್ರಕಾರ ಹೇಳಿದನು (೪): "ಯದುಕುಲೋತ್ತಮರೆ, ಘೋರವಾದ ಈ ಮಹೋತ್ಪಾತಗಳು ದ್ವಾರಕೆಯಲ್ಲಿ ಯಮಧ್ವಜಗಳಂತೆ ಕಂಡುಬರುತ್ತವೆ! ಒಂದು ಮುಹೂರ್ತಕಾಲವೂ ನಾವು ಇಲ್ಲಿರಕೂಡದು, ಸ್ತ್ರೀಯರೂ ಬಾಲಕರೂ ವೃದ್ಧರೂ (ಸಮೀಪದಲ್ಲಿರುವ) ಶಂಖೋದ್ಧಾರಕ್ಷೇತ್ರಕ್ಕೆ ಹೋಗಲಿ. ಸರಸ್ವತೀನದಿಯು ಪಶ್ಚಿಮಗಾಮಿನಿಯಾಗಿರುವ ಪ್ರಭಾಸಕ್ಷೇತ್ರಕ್ಕೆ ನಾವು ಹೋಗೋಣ (೫–೬). ಅಲ್ಲಿ ನಾವು ಸ್ನಾನ ಮಾಡಿ ಶುಚೀಭೂತರಾಗಿ ಉಪವಾಸವಿರೋಣ. ಅಭಿಷೇಕ, ಲೇಪನಾದಿ ಪೂಜಾ ವಿಧಾನ ಗಳಿಂದ ಶಾಂತರಾಗಿ ದೇವತೆಗಳನ್ನು ಅರ್ಚಿಸೋಣ. ಮಹಾತ್ಮರಾದ ಬ್ರಾಹ್ಮಣ ರಿಂದ ಶಾಂತಿಕರ್ಮಗಳನ್ನು ಮಾಡಿಸಿ ಗೋವು, ಭೂಮಿ, ಹಿರಣ್ಯ, ವಸ್ತ್ರಗಳಿಂದಲೂ ಗಜ, ಅಶ್ವ, ರಥ, ಗೃಹ ದಾನಗಳಿಂದಲೂ ಅವರನ್ನು ಪೂಜಿಸೋಣ (೭–೮)

ವಿಧಿರೇಷ ಹ್ಯರಿಷ್ಟಘ್ನೋ ಮಂಗಲಾಯನಮುತ್ತಮಮ್ ।
ದೇವದ್ವಿಜಗವಾಂ ಪೂಜಾ ಭೂತೇಷು ಪರಮೋ ಭವಃ ॥ ೯

ಇತಿ ಸರ್ವೇ ಸಮಾಕರ್ಣ್ಯ ಯದುವೃದ್ಧಾ ಮಧುದ್ವಿಷಃ ।
ತಥೇತಿ ನೌಭಿರುತ್ತೀರ್ಯ ಪ್ರಭಾಸಂ ಪ್ರಯಯೌ ರಥೈಃ ॥ ೧೦

ತಸ್ಮಿನ್ ಭಗವತಾಽಽದಿಷ್ಟಂ ಯದುದೇವೇನ ಯಾದವಾಃ ।
ಚಕ್ರುಃ ಪರಮಯಾ ಭಕ್ತ್ಯಾ ಸರ್ವಶ್ರೇಯೋಽಪಬೃಂಹಿತಮ್ ॥ ೧೧

ತತಸ್ತಸ್ಮಿನ್ ಮಹಾಪಾನಂ ಪಪುರ್ಮೈರೇಯಕಂ ಮಧು ।
ದಿಷ್ಟವಿಭ್ರಂಶಿತಧಿಯೋ ಯದ್ದ್ರವೈರ್ಭ್ರಶ್ಯತೇ ಮತಿಃ ॥ ೧೨

ಮಹಾಪಾನಾಭಿಮತ್ತಾನಾಂ ವೀರಾಣಾಂ ದೃಪ್ತಚೇತಸಾಮ್ ।
ಕೃಷ್ಣಮಾಯಾವಿಮೂಢಾನಾಂ ಸಂಘರ್ಷಃ ಸುಮಹಾನಭೂತ್ ॥ ೧೩

ಯುಯುಧುಃ ಕ್ರೋಧಸಂರಬ್ಧಾ ವೇಲಾಯಾಮಾತತಾಯಿನಃ ।
ಧನುರ್ಭಿರಸಿಭಿರ್ಭಲ್ಲೈರ್ಗದಾಭಿಸ್ತೋಮರರ್ಷ್ಟಿಭಿಃ ॥ ೧೪

---

ಇದು ಅರಿಷ್ಟವನ್ನು ಪರಿಹರಿಸತಕ್ಕ ವಿಧಾನ ಮತ್ತು ಮಂಗಳಾಯತನವಾಗಿದೆ. ದೇವಬ್ರಾಹ್ಮಣಪೂಜೆಯೂ ಗೋಪೂಜೆಯೂ ಜನರ ಶ್ರೇಯಸ್ಸಿಗೆ ಕಾರಣವಾಗುತ್ತದೆ" ಎಂದನು (೯). ಮಧುವೈರಿಯ ಈ ಮಾತುಗಳನ್ನು ಕೇಳಿ ಎಲ್ಲ ಯದುವೃದ್ಧರೂ ಹಾಗೆಯೇ ಆಗಲೆಂದು ಒಪ್ಪಿಕೊಂಡರು. ಸರ್ವರೂ ಹಡಗುಗಳಲ್ಲಿ ಸಮುದ್ರವನ್ನು ದಾಟಿ ರಥಗಳನ್ನೇರಿ ಪ್ರಭಾಸಕ್ಷೇತ್ರಕ್ಕೆ ಪ್ರಯಾಣ ಮಾಡಿದರು (೧೦). ಆ ಪ್ರಭಾಸಕ್ಷೇತ್ರದಲ್ಲಿ ಶ್ರೀಕೃಷ್ಣನು ಆದೇಶಿಸಿದಂತೆ ಸಮಸ್ತ ಯಾದವರೂ ಪರಮಭಕ್ತಿಯಿಂದ ಸಕಲಶ್ರೇಯೋವಿಧಾನಗಳನ್ನು ಆಚರಿಸಿದರು. ಅನಂತರ ಆ ಯಾದವರು ಮಹಾಪಾನೀಯವಾದ ಮೈರೇಯಕವೆಂಬ ಮದ್ಯವನ್ನು ಕುಡಿದರು. ಮದ್ಯದ್ರವದ ಪಾನದಿಂದ ಬುದ್ಧಿಯು ಕೆಟ್ಟುಹೋಗುತ್ತದೆಯಲ್ಲವೆ? ಒಟ್ಟಿನಲ್ಲಿ ದೈವವೇ ಅವರಿಗೆ ಬುದ್ಧಿಭ್ರಂಶವನ್ನು ಮಾಡಿದ್ದರಿಂದ (ಪುಣ್ಯಕ್ಷೇತ್ರದಲ್ಲಿ) ಮದ್ಯಪಾನ ಮಾಡಿದರು (೧೧–೧೨). ಆ ಯದುವೀರರು ಮೊದಲೇ ಉದ್ಧತಸ್ವಭಾವದವರಾಗಿದ್ದರು. ಮಹಾಪಾನದಿಂದ ಮತ್ತೆ ಮತ್ತರಾದರು. ಶ್ರೀಕೃಷ್ಣನ ಮಾಯೆಯಿಂದ ವಿಮೂಢರಾದರು. ಸರಿ; ಅವರಲ್ಲಿ ಭಾರಿ ಜಗಳವು ಪ್ರಾರಂಭವಾಯಿತು! (೧೩). ರೋಷಾವಿಷ್ಟರಾಗಿ ಒಬ್ಬರನ್ನೊಬ್ಬರು ಕೊಲ್ಲುವುದಕ್ಕೆ

ಪತತ್ಪತಾಕೈ ರಥಕುಂಜರಾದಿಭಿಃ
ಖರೋಷ್ಟ್ರಗೋಭಿರ್ಮಹಿಷೈರ್ನರೈರಪಿ ।
ಮಿಥಃ ಸಮೇತ್ಯಾಶ್ವತರೈಃ ಸುದುರ್ಮದಾ
ನ್ಯಹನ್ ಶರೈರ್ದದ್ಭಿರಿವ ದ್ವಿಪಾ ವನೇ ॥ ೧೫

ಪ್ರದ್ಯುಮ್ನಸಾಂಬೌ ಯುಧಿ ರೂಢಮತ್ಸರಾ-
ವಕ್ರೂರಭೋಜಾವನಿರುದ್ಧಸಾತ್ಯಕೀ ।
ಸುಭದ್ರಸಂಗ್ರಾಮಜಿತೌ ಸುದಾರುಣೌ
ಗದೌ ಸುಮಿತ್ರಾಸುರಥೌ ಸಮೀಯತುಃ ॥ ೧೬

ಅನ್ಯೇ ಚ ಯೇ ವೈ ನಿಶಠೋಲ್ಮುಕಾದಯಃ
ಸಹಸ್ರಜಿಚ್ಛತಜಿದ್ಭಾನುಮುಖ್ಯಾಃ ।
ಅನ್ಯೋನ್ಯಮಾಸಾದ್ಯ ಮದಾಂಧಕಾರಿತಾ
ಜಘ್ನುರ್ಮುಕುಂದೇನ ವಿಮೋಹಿತಾ ಭೃಶಮ್ ॥ ೧೭

---

ಹವಣಿಸಿ ಸಮುದ್ರತೀರದಲ್ಲಿ ಹೋರಾಡಿದರು. ಹೋರಾಟಕ್ಕೆ ಧನುಸ್ಸು, ಖಡ್ಗ, ಭಲ್ಲೆ, ಗದೆ, ತೋಮರ, ದೊಣ್ಣೆ—ಮೊದಲಾದವನ್ನು ಬಳಸಿದರು. ಮದಾಂಧರಾದ ಯಾದವರು ಅನ್ಯೋನ್ಯವಾಗಿ ಹೊಡೆದಾಡುವಾಗ ರಥ ಗಜಾದಿಗಳೊಡನೆ ಪದಾತಿಗಳು ಧ್ವಜಪಟಗಳನ್ನಾಡಿಸುತ್ತ ರಭಸದಿಂದ ಸಂಚರಿಸಿದರು. ಕತ್ತೆ, ಒಂಟೆ, ಹೋರಿ, ಕೋಣ, ಹೇಸರಗತ್ತೆಗಳೊಡನೆ ಸುಳಿದಾಡುತ್ತ ಯಾದವರು ಶರಗಳನ್ನು ಹೂಡಿ, ಮದ್ದಾನೆಗಳು ಅರಣ್ಯದಲ್ಲಿ ಕೋರೆದಾಡೆಗಳಿಂದ ಹೋರಾಡುವಂತೆ ಹೋರಾಡಿದರು (೧೪–೧೫). ಪರಸ್ಪರ ಮಾತ್ಸರ್ಯವನ್ನು ಬೆಳೆಸಿಕೊಂಡವರೂ ಭೀಕರರೂ ಆದ ಪ್ರದ್ಯುಮ್ನ-ಸಾಂಬ, ಅಕ್ರೂರ-ಭೋಜ, ಅನಿರುದ್ಧ-ಸಾತ್ಯಕಿ, ಸುಭದ್ರ-ಸಂಗ್ರಾಮಜಿತ್, (ಶ್ರೀಕೃಷ್ಣನ ಸೋದರನಾದ) ಗದ-(ಶ್ರೀಕೃಷ್ಣನ ಪುತ್ರನಾದ) ಗದ, ಸುಮಿತ್ರ-ಅಸುರಥ ಮುಂತಾದವರು ಪರಸ್ಪರ ಹೋರಾಡಿದರು (೧೬). ಹೀಗೆಯೇ ನಿಶಠ, ಉಲ್ಮುಕ, ಸಹಸ್ರಜಿತ್, ಶತಜಿತ್, ಭಾನು—ಮುಂತಾದ ಯಾದವರು ಮದವೆಂಬ ಕುರುಡಿನಿಂದ ಪ್ರೇರಿತರಾಗಿ ಒಬ್ಬರ ಮೇಲೊಬ್ಬರು ಕೈಮಾಡಿ ಹೊಡೆದಾಡಿ ಕೊಂದುಹಾಕಿದರು. ಮುಖ್ಯವಾಗಿ

ದಾಶಾರ್ಹವೃಷ್ಣ್ಯಂಧಕಭೋಜಸಾತ್ವತಾ
ಮಧ್ವರ್ಬುದಾ ಮಾಥುರಶೂರಸೇನಾಃ ।
ವಿಸರ್ಜನಾಃ ಕುಕುರಾಃ ಕುಂತಯಶ್ಚ
ಮಿಥಸ್ತತಸ್ತೇಽಥ ವಿಸೃಜ್ಯ ಸೌಹೃದಮ್ ॥ ೧೮

ಪುತ್ರಾ ಅಯುಧ್ಯನ್ ಪಿತೃಭಿರ್ಭ್ರಾತೃಭಿಶ್ಚ
ಸ್ವಸ್ರೀಯದೌಹಿತ್ರ ಪಿತೃವ್ಯಮಾತುಲೈಃ ।
ಮಿತ್ರಾಣಿ ಮಿತ್ರೈಃ ಸುಹೃದಃ ಸುಹೃದ್ಭಿ-
ರ್ಜ್ಞಾತೀಂಸ್ತ್ವಹನ್ ಜ್ಞಾತಯ ಏವ ಮೂಢಾಃ ॥ ೧೯

ಶರೇಷು ಕ್ಷೀಯಮಾಣೇಷು ಭಜ್ಯಮಾನೇಷು ಧನ್ವಸು ।
ಶಸ್ತ್ರೇಷು ಕ್ಷೀಯಮಾಣೇಷು ಮುಷ್ಟಿಭಿರ್ಜಹ್ರುರೇರಕಾಃ ॥ ೨೦

ತಾ ವಜ್ರಕಲ್ಪಾ ಹ್ಯಭವನ್ ಪರಿಘಾ ಮುಷ್ಟಿನಾ ಭೃತಾಃ ।
ಜಘ್ನುರ್ದ್ವಿಷಸ್ತೈಃ ಕೃಷ್ಣೇನ ವಾರ್ಯಮಾಣಾಸ್ತು ತಂ ಚ ತೇ ॥ ೨೧

---

ಮುಕುಂದನಿಂದ ಎಲ್ಲರೂ ಮೂಢರಾಗಿದ್ದರು (೧೭). (ಯಾದವರಲ್ಲಿಯೇ ಒಳಪಂಗಡಗಳಾದ) ದಾಶಾರ್ಹ, ವೃಷ್ಣಿ, ಅಂಧಕ, ಭೋಜ, ಸಾತ್ವತ, ಮಧು ವಂಶೀಯರೂ, ಅರ್ಬುದ, ಮಾಥುರ, ಶೂರಸೇನದೇಶದವರೂ ವಿಸರ್ಜನ, ಕುಕುರ, ಕುಂತಿ ಕುಲದವರೂ ತಮ್ಮಲ್ಲಿದ್ದ ಸ್ನೇಹವನ್ನೇ ಮರೆತು ಬಡಿದಾಡಿದರು (೧೮). ಮಕ್ಕಳು ತಂದೆಯರೊಡನೆ, ಸೋದರರು ಸೋದರರೊಡನೆ, ಪರಸ್ಪರ ಹೊಡೆದಾಡಿ ಕೊಂದುಹಾಕಿದರು. ಹೀಗೆಯೇ ಅಕ್ಕತಂಗಿಯರ ಮಕ್ಕಳೊಡನೆ, ದೌಹಿತ್ರ ರೊಡನೆ, ಚಿಕ್ಕಪ್ಪ ದೊಡ್ಡಪ್ಪಂದಿರೊಡನೆ, ಸೋದರಮಾವಂದಿರೊಡನೆ, ಮಿತ್ರರು ಮಿತ್ರರೊಡನೆ, ಆಪ್ತರು ಆಪ್ತರೊಡನೆ, ದಾಯಾದಿಗಳು ದಾಯಾದಿಗಳೊಡನೆ ಬುದ್ಧಿಗೆಟ್ಟು ಯುದ್ಧಮಾಡಿ ಎದುರಾಳಿಗಳನ್ನು ಘಾತಿಸಿದರು, ತಾವೂ ಹತರಾದರು (೧೯). ಬಾಣಗಳು ಕ್ಷೀಣವಾದವು, ಬಿಲ್ಲುಗಳು ಮುರಿದುಹೋದವು, ಶಸ್ತ್ರಗಳು ಭಗ್ನವಾದವು. ಆಗ (ಸಮುದ್ರತೀರದಲ್ಲಿ ಬೆಳೆದಿದ್ದ) ಏರಕಗಳೆಂಬ ಹುಲ್ಲುಗಳನ್ನು ಮುಷ್ಟಿಗಳಿಂದ ಹಿಡಿದು ಹೊಡೆದಾಡಿದರು (೨೦). ಕೈಪಿಡಿಯಾಗಿ ಹಿಡಿದಾಗ ಏರಕಗಳು ವಜ್ರಾಯುಧ ಸಮಾನಗಳಾದ ಪರಿಘಗಳಾದವು! ಅವುಗಳಿಂದ ಬಡಿದಾ ಡುತ್ತಿದ್ದಾಗ ಶ್ರೀಕೃಷ್ಣನು ಅವರನ್ನು ತಡೆಯಲು ಯತ್ನಿಸಿದನು. ಪರೀಕ್ಷಿತ,

ಪ್ರತ್ಯನೀಕಂ ಮನ್ಯಮಾನಾ ಬಲಭದ್ರಂ ಚ ಮೋಹಿತಾಃ ।
ಹಂತುಂ ಕೃತಧಿಯೋ ರಾಜನ್ನಾಪನ್ನಾ ಆತತಾಯಿನಃ ॥ ೨೨

ಅಥ ತಾವಪಿ ಸಂಕ್ರುದ್ಧಾವುದ್ಯಮ್ಯ ಕುರುನಂದನ ।
ಏರಕಾಮುಷ್ಟಿಪರಿಘೌ ಚರಂತೌ ಜಘ್ನತುರ್ಯುಧಿ ॥ ೨೩

ಬ್ರಹ್ಮಶಾಪೋಪಸೃಷ್ಟಾನಾಂ ಕೃಷ್ಣಮಾಯಾವೃತಾತ್ಮನಾಮ್ ।
ಸ್ಪರ್ಧಾಕ್ರೋಧಃ ಕ್ಷಯಂ ನಿನ್ಯೇ ವೈಣವೋಽಗ್ನಿರ್ಯಥಾ ವನಮ್ ॥ ೨೪

ಏವಂ ನಷ್ಟೇಷು ಸರ್ವೇಷು ಕುಲೇಷು ಸ್ವೇಷು ಕೇಶವಃ ।
ಅವತಾರಿತೋ ಭುವೋ ಭಾರ ಇತಿ ಮೇನೇಽವಶೇಷಿತಃ ॥ ೨೫

ರಾಮಃ ಸಮುದ್ರವೇಲಾಯಾಂ ಯೋಗಮಾಸ್ಥಾಯ ಪೌರುಷಮ್ ।
ತತ್ಯಾಜ ಲೋಕಂ ಮಾನುಷ್ಯಂ ಸಂಯೋಜ್ಯಾತ್ಮಾನಮಾತ್ಮನಿ ॥ ೨೬

ರಾಮನಿರ್ಯಾಣಮಾಲೋಕ್ಯ ಭಗವಾನ್ ದೇವಕೀಸುತಃ ।
ನಿಷಸಾದ ಧರೋಪಸ್ಥೇ ತೂಷ್ಣೀಮಾಸಾದ್ಯ ಪಿಪ್ಪಲಮ್ ॥ ೨೭

---

ಬುದ್ಧಿಗೇಡಿಗಳಾದ ಯಾದವರು ಶ್ರೀಕೃಷ್ಣನನ್ನು ಪ್ರತಿಪಕ್ಷದವನೆಂದು ಬಗೆದು ಅವನನ್ನೂ ಬಲಭದ್ರನನ್ನೂ ಸಹ ಏರಕಮುಷ್ಟಿಗಳಿಂದ ಹೊಡೆದರು ! ಸ್ವಯಂ ಸಾವಿಗೆ ಒಳಗಾಗಿದ್ದ ಆ ಕೊಲೆಗಡುಕರು ಎದುರಾಳಿಗಳನ್ನೆಲ್ಲ ಮುಗಿಸಿಬಿಡಬೇಕೆಂದು ಸಂಕಲ್ಪಿಸಿದ್ದರು (೨೧–೨೨). ಕುರುನಂದನ-ಪರೀಕ್ಷಿತ, ಆಗ ಶ್ರೀಕೃಷ್ಣನೂ ಬಲಭದ್ರನೂ ಕ್ರುದ್ಧರಾದರು. ಅವರೂ ಸಹ ಏರಕಾಮುಷ್ಟಿಗಳೆಂಬ ಪರಿಘ ಗಳನ್ನುಹಿಡಿದೆತ್ತಿ ಯಾದವರನ್ನು ಸದೆಬಡಿಯಲಾರಂಭಿಸಿದರು (೨೩). ಯಾದವ ರೆಲ್ಲರೂ ಬ್ರಹ್ಮಶಾಪಕ್ಕೆ ಒಳಗಾಗಿ ಶ್ರೀಕೃಷ್ಣನ ಮಾಯೆಯಲ್ಲಿ ಸಿಕ್ಕಿಕೊಂಡಿದ್ದರು. ಬಿದಿರಿನಲ್ಲಿ ಹುಟ್ಟಿದ ಬೆಂಕಿಯು ಬಿದಿರಿನ ವನವನ್ನೇ ಸುಡುವಂತೆ, ಯಾದವರಲ್ಲಿ ಸ್ಪರ್ಧೆಯಿಂದ ಹುಟ್ಟಿದ ಕ್ರೋಧವು ಯಾದವಕುಲವನ್ನೇ ನಾಶಮಾಡಿತು (೨೪). ತನ್ನ ಬಂಧುಗಳಾಗಿದ್ದ ಯದುವಂಶದ ಸರ್ವರೂ ಸಾಯಲಾಗಿ, ಆ ಯುದ್ಧದಲ್ಲಿ ಉಳಿದುಕೊಂಡಿದ್ದ ಶ್ರೀಕೃಷ್ಣನು 'ಭೂಭಾರವು ಇಳಿಯಿತು !' ಎಂದುಕೊಂಡನು (೨೫). ಅನಂತರ ಬಲರಾಮನು ಸಮುದ್ರತೀರದಲ್ಲಿ ಪರಮಪುರುಷಧ್ಯಾನ ರೂಪವಾದ ಯೋಗವನ್ನವಲಂಬಿಸಿ, ತನ್ನ ಚಿತ್ತವನ್ನು ಪರಮಾತ್ಮನಲ್ಲಿ ನೆಲೆಗೊಳಿಸಿ ಮನುಷ್ಯಾವತಾರವನ್ನು ತ್ಯಜಿಸಿದನು (೨೬). ಬಲರಾಮನ ನಿರ್ಯಾಣವನ್ನವ

ಬಿಭ್ರಚ್ಚತುರ್ಭುಜಂ ರೂಪಂ ಭ್ರಾಜಿಷ್ಣು ಪ್ರಭಯಾ ಸ್ವಯಾ ।
ದಿಶೋ ವಿತಿಮಿರಾಃ ಕುರ್ವನ್ ವಿಧೂಮ ಇವ ಪಾವಕಃ ॥ ೨೮

ಶ್ರೀವತ್ಸಾಂಕಂ ಘನಶ್ಯಾಮಂ ತಪ್ತಹಾಟಕವರ್ಚಸಮ್ ।
ಕೌಶೇಯಾಂಬರಯುಗ್ಮೇನ ಪರಿವೀತಂ ಸುಮಂಗಲಮ್ ॥ ೨೯

ಸುಂದರಸ್ಮಿತವಕ್ತ್ರಾಬ್ಜಂ ನೀಲಕುಂತಲಮಂಡಿತಮ್ ।
ಪುಂಡರೀಕಾಭಿರಾಮಾಕ್ಷಂ ಸ್ಫುರನ್ಮಕರಕುಂಡಲಮ್ ॥ ೩೦

ಕಟಿಸೂತ್ರಬ್ರಹ್ಮಸೂತ್ರಕಿರೀಟಕಟಕಾಂಗದೈಃ ।
ಹಾರನೂಪುರಮುದ್ರಾಭಿಃ ಕೌಸ್ತುಭೇನ ವಿರಾಜಿತಮ್ ॥ ೩೧

ವನಮಾಲಾಪರೀತಾಂಗಂ ಮೂರ್ತಿಮದ್ಭಿರ್ನಿಜಾಯುಧೈಃ ।
ಕೃತ್ವೋರೌ ದಕ್ಷಿಣೇ ಪಾದಮಾಸೀನಂ ಪಂಕಜಾರುಣಮ್ ॥ ೩೨

---

ಲೋಕಿಸಿದ ದೇವಕೀಪುತ್ರನಾದ ಭಗವಾನ್ ವಾಸುದೇವನು, ಒಂದು ಅರಳಿಮರದ ಬುಡಕ್ಕೆ ಹೋಗಿ ನೆಲದಮೇಲೆ ಮೌನವಾಗಿ ಕುಳಿತನು. ನಾಲ್ಕು ಭುಜಗಳಿದ್ದ ಅವನ ದಿವ್ಯರೂಪವು ಪ್ರಭೆಯಿಂದ ಜಗಜಗಿಸಿತು. ದಿಕ್ಕುಗಳು ಬೆಳಗಿದವು. ಹೊಗೆಯಿಲ್ಲದ ಅಗ್ನಿಯಂತೆ ಶ್ರೀಕೃಷ್ಣನು ಪ್ರಜ್ವಲಿಸಿದನು (೨೭–೨೮). ಆ ಮೇಘಶ್ಯಾಮಲನು ಶ್ರೀವತ್ಸಚಿಹ್ನೆಯಿಂದ ಅಂಕಿತನಾಗಿದ್ದನು. ರೇಶ್ಮೆಯ ವಸ್ತ್ರಯುಗಳದಿಂದ ಭೂಷಿತವಾದ ಆತನ ಮಂಗಳಮೂರ್ತಿಯು ಕಾಯ್ದ ಬಂಗಾರದಂತೆ ಹೊಳೆಯುತ್ತಿತ್ತು (೨೯). ಚೆಲುವಿನ ಮುಗುಳ್ನಗೆಯಿಂದ ಚೆಂದವಾದ ಮೊಗದಾವರೆಯಲ್ಲಿ ಕರಿಯ ಕುರುಳ್ಗೂದಲು ಹರಡಿತ್ತು. ತಾವರೆಯ ಎಸಳಿನಂತೆ ಹೊಳೆವ ಕಣ್ಣುಗಳಿಂದ ಕಂಗೊಳಿಸುವ ಮುಖವು ಕಿವಿಯೊಡವೆಗಳಾದ ಮಕರಕುಂಡಲಗಳಿಂದ ಮಂಡಿತವಾಗಿತ್ತು (೩೦). ಉಡಿದಾರ, ಜನಿವಾರ, ಕಿರೀಟ, ಕೈಬಳೆ, ಕೇಯೂರಗಳಿಂದಲೂ ನೂಪುರ, ಮುದ್ರೆಯುಂಗುರಗಳಿಂದಲೂ ಭೂಷಿತನಾಗಿ, ಕೌಸ್ತುಭಮಣಿಯಿಂದ ವಿರಾಜಿತನಾಗಿ, ವನಮಾಲೆಯಿಂದ ಅಲಂಕೃತನಾಗಿ, ಮೂರ್ತಿಮತ್ತಾದ ನಿಜಾಯುಧಗಳಿಂದ ಸಮೇತನಾಗಿ, ಬಲದೊಡೆಯಮೇಲೆ ಪದ್ಮದಂತೆ ಕೆಂಪಾದ ವಾಮಚರಣವನ್ನಿಟ್ಟು ಶ್ರೀಕೃಷ್ಣನು ಕುಳಿತಿದ್ದನು (೩೧–೩೨)

ಮುಸಲಾವಶೇಷಾಯಃಖಂಡಕೃತೇಷುರ್ಲುಬ್ಧಕೋ ಜರಾ ।
ಮೃಗಾಸ್ಯಾಕಾರಂ ತಚ್ಚರಣಂ ವಿವ್ಯಾಧ ಮೃಗಶಂಕಯಾ ॥ ೩೩

ಚತುರ್ಭುಜಂ ತಂ ಪುರುಷಂ ದೃಷ್ಟ್ವಾ ಸ ಕೃತಕಿಲ್ಬಿಷಃ ।
ಭೀತಃ ಪಪಾತ ಶಿರಸಾ ಪಾದಯೋರಸುರದ್ವಿಷಃ ॥ ೩೪

ಅಜಾನತಾ ಕೃತಮಿದಂ ಪಾಪೇನ ಮಧುಸೂದನ ।
ಕ್ಷಂತುಮರ್ಹಸಿ ಪಾಪಸ್ಯ ಉತ್ತಮಶ್ಲೋಕ ಮೇಽನಘ ॥ ೩೫

ಯಸ್ಯಾನುಸ್ಮರಣಂ ನೃಣಾಮಜ್ಞಾನಧ್ವಾಂತನಾಶನಮ್ ।
ವದಂತಿ ತಸ್ಯ ತೇ ವಿಷ್ಣೋ ಮಯಾಽಸಾಧು ಕೃತಂ ಪ್ರಭೋ ॥ ೩೬

ತನ್ಮಾಽಽಶು ಜಹಿ ವೈಕುಂಠ ಪಾಪ್ಮಾನಂ ಮೃಗಲುಬ್ಧಕಮ್ ।
ಯಥಾ ಪುನರಹಂ ತ್ವೇವಂ ನ ಕುರ್ಯಾಂ ಸದತಿಕ್ರಮಮ್ ॥ ೩೭

---

(ಹಿಂದೆ ಹೇಳಿದ ಋಷಿಶಾಪಕ್ಕೆ ಸಂಬಂಧಿಸಿದಂತೆ) ಮುಸಲದಲ್ಲಿ ಅವಶಿಷ್ಟವಾದ ಕಬ್ಬಿಣದ ತುಂಡಿನಿಂದ ಜರಾವ್ಯಾಧನೆಂಬವನು ಬಾಣದ ಅಲಗನ್ನು ಮಾಡಿಕೊಂಡಿದ್ದ ನಷ್ಟೆ. ಆ ಜರಾವ್ಯಾಧನು ಮೃಗದಂತೆ ಕಾಣುತ್ತಿದ್ದ ಶ್ರೀಕೃಷ್ಣಚರಣವನ್ನು ನೋಡಿ ಮೃಗವೆಂದು ಭ್ರಾಂತನಾಗಿ ಬಾಣದಿಂದ ಹೊಡೆದುಬಿಟ್ಟನು (೩೩). ಆಮೇಲೆ ನೋಡಿದಾಗ ಆತನು ಚತುರ್ಭುಜನಾದ ಪುರುಷೋತ್ತಮನಾಗಿದ್ದನು! ತಾನು ತಪ್ಪು ಮಾಡಿದೆನೆಂದು ಹೆದರಿ ಕಂಗಾಲಾದ ವ್ಯಾಧನು ಶ್ರೀಕೃಷ್ಣನ ಪಾದಗಳಿಗೆ ತಲೆಬಾಗಿ ಅಡ್ಡಬಿದ್ದು "ಓ ಮಧುಸೂದನ-ಕೀರ್ತಿಶಾಲಿ, ಪಾಪಿಯಾದ ನಾನು ತಿಳಿಯದೆ ತಪ್ಪುಮಾಡಿದೆನು. ಈ ಪಾಪಿಯನ್ನು ಮನ್ನಿಸಬೇಕು. ಓ ಸ್ವಾಮಿ, ನಿನ್ನ ಸ್ಮರಣೆಯು ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡುವುದೆಂದು ಬಲ್ಲವರು ಹೇಳುತ್ತಾರೆ. ಮಹಾತ್ಮನಾದ ನಿನಗೆ ತುಂಬ ಅಸಾಧುವಾಗಿ ನಡೆದುಕೊಂಡೆನು (೩೪–೩೬). ಪ್ರಭುವೆ, ಈಗಲೇ ಪಾಪಿಯೂ ವ್ಯಾಧನೂ ಆದ ನನ್ನನ್ನು ಕೊಂದುಬಿಡು! ಸಜ್ಜನರಿಗೆ ಇಂತಹ ಕೆಟ್ಟದ್ದನ್ನು ಮತ್ತೊಮ್ಮೆ ನಾನು ಮಾಡ ದಂತಾಗಲಿ! ಹೇ ವೈಕುಂಠ-ವಿಷ್ಣೋ, ನಿನ್ನ ಮಾಯಾಯೋಗದಿಂದ ರಚಿತವಾದ ಈ ವಿಶ್ವದ ರಹಸ್ಯವನ್ನು ಬ್ರಹ್ಮನಾಗಲಿ, ಅವನ ಪುತ್ರರಾದ ರುದ್ರಾದಿಗಳಾಗಲಿ, ವಾಕ್‌ಪತಿಗಳಾದ ವೇದದ್ರಷ್ಟಾರರಾಗಲಿ ಅರಿಯದೆ ಹೋಗಿದ್ದಾರೆ. ನಿನ್ನ ಮಾಯೆ ಯಿಂದ ಅವರ ದೃಷ್ಟಿಯೇ ಮಾಸಿಹೋಗಿದೆ! ಹೀಗಿರುವಾಗ ಪಾಪಯೋನಿಗಳಾದ

ಯಸ್ಯಾತ್ಮಯೋಗರಚಿತಂ ನ ವಿದುರ್ವಿರಿಂಚೋ
ರುದ್ರಾದಯೋಽಸ್ಯ ತನಯಾಃ ಪತಯೋ ಗಿರಾಂ ಯೇ ।
ತ್ವನ್ಮಾಯಯಾ ಪಿಹಿತದೃಷ್ಟಯ ಏತದಂಜಃ
ಕಿಂ ತಸ್ಯ ತೇ ವಯಮಸದ್ಗತಯೋ ಗೃಣೀಮಃ ॥ ೩೮

ಶ್ರೀಭಗವಾನುವಾಚ—

ಮಾ ಭೈರ್ಜರೇ ತ್ವಮುತ್ತಿಷ್ಠ ಕಾಮ ಏಷ ಕೃತೋ ಹಿ ಮೇ ।
ಯಾಹಿ ತ್ವಂ ಮದನುಜ್ಞಾತಃ ಸ್ವರ್ಗಂ ಸುಕೃತಿನಾಂ ಪದಮ್ ॥ ೩೯

ಇತ್ಯಾದಿಷ್ಟೋ ಭಗವತಾ ಕೃಷ್ಣೇನೇಚ್ಛಾಶರೀರಿಣಾ ।
ತ್ರಿಃ ಪರಿಕ್ರಮ್ಯ ತಂ ನತ್ವಾ ವಿಮಾನೇನ ದಿವಂ ಯಯೌ ॥ ೪೦

ದಾರುಕಃ ಕೃಷ್ಣಪದವೀಮನ್ವಿಚ್ಛನ್ನಧಿಗಮ್ಯ ತಾಮ್ ।
ವಾಯುಂ ತುಲಸಿಕಾಮೋದಮಾಘ್ರಾಯಾಭಿಮುಖಂ ಯಯೌ ॥ ೪೧

ತಂ ತತ್ರ ತಿಗ್ಮದ್ಯುಭಿರಾಯುಧೈರ್ವೃತಂ
ಹ್ಯಶ್ವತ್ಥಮೂಲೇ ಕೃತಕೇತನಂ ಪತಿಮ್ ।
ಸ್ನೇಹಪ್ಲುತಾತ್ಮಾ ನಿಪಪಾತ ಪಾದಯೋಃ
ರಥಾದವಪ್ಲುತ್ಯ ಸ ಬಾಷ್ಪಲೋಚನಃ ॥ ೪೨

---

ನಾವು ನಿನ್ನ ಲೀಲಾರಚನೆಯನ್ನು ವರ್ಣಿಸಬಲ್ಲೆವೆ ?" ಎಂದನು (೩೭–೩೮). ಆಗ ಶ್ರೀಕೃಷ್ಣನು "ಜರಾವ್ಯಾಧ, ಹೆದರಬೇಡ, ಮೇಲೇಳು. ನನ್ನ ಬಯಕೆಯನ್ನೇ ನೀನು ಈಡೇರಿಸಿದ್ದೀಯೆ! ಇದೊ, ನಿನಗೆ ಅನುಮತಿಯನ್ನು ಕೊಟ್ಟಿದ್ದೇನೆ. ಪುಣ್ಯಶಾಲಿಗಳು ಪಡೆಯುವ ಸ್ವರ್ಗಕ್ಕೆ ಹೋಗು" ಎಂದನು (೩೯). ಇಚ್ಛಾಶರೀರ ಧಾರಿಯಾದ ಭಗವಂತನ ಆಜ್ಞೆಯಂತೆ ದಿವ್ಯವಿಮಾನವು ಉಪಸ್ಥಿತವಾಯಿತು. ಜರಾವ್ಯಾಧನು ಶ್ರೀಕೃಷ್ಣನಿಗೆ ಮೂರುಸಲ ಪ್ರದಕ್ಷಿಣೆಮಾಡಿ ನಮಸ್ಕರಿಸಿ ವಿಮಾನ ವನ್ನೇರಿ ಸ್ವರ್ಗವನ್ನು ಸೇರಿದನು! (೪೦). ಅಷ್ಟರಲ್ಲಿ ದಾರುಕನು ಶ್ರೀಕೃಷ್ಣನಿರುವ ಸ್ಥಳವನ್ನು ಹುಡುಕುತ್ತ, (ಶ್ರೀಕೃಷ್ಣನು ಧರಿಸಿದ್ದ) ತುಲಸೀಮಾಲೆಯ ಸುಗಂಧವನ್ನು ಆಘ್ರಾಣಿಸುತ್ತ, ಆ ಸ್ಥಳವನ್ನು ಗೊತ್ತುಹಚ್ಚಿ ರಥದಲ್ಲಿ ಎದುರಾಗಿ ಬಂದನು (೪೧). ಸೂರ್ಯನಂತೆ ಪ್ರಜ್ವಲಿಸುತ್ತಿದ್ದ ಚಕ್ರಾದ್ಯಾಯುಧಗಳಿಂದ ಪರಿವೃತನಾಗಿ, ಅಶ್ವತ್ಥ ವೃಕ್ಷದ ಕೆಳಗೆ ಕುಳಿತಿದ್ದ ತನ್ನ ಸ್ವಾಮಿಯನ್ನು ಕಂಡೊಡನೆ, ಸ್ನೇಹಾರ್ದ್ರನಾದ

ಅಪಶ್ಯತಸ್ತ್ವಚ್ಚರಣಾಂಬುಜಂ ಪ್ರಭೋ
ದೃಷ್ಟಿಃ ಪ್ರಣಷ್ಟಾ ತಮಸಿ ಪ್ರವಿಷ್ಟಾ ।
ದಿಶೋ ನ ಜಾನೇ ನ ಲಭೇ ಚ ಶಾಂತಿಂ
ಯಥಾ ನಿಶಾಯಾಮುಡುಪೇ ಪ್ರಣಷ್ಟೇ ॥ ೪೩

ಇತಿ ಬ್ರುವತಿ ಸೂತೇ ವೈ ರಥೋ ಗರುಡಲಾಂಛನಃ ।
ಖಮುತ್ಪಪಾತ ರಾಜೇಂದ್ರ ಸಾಶ್ವಧ್ವಜ ಉದೀಕ್ಷತಃ ॥ ೪೪

ತಮನ್ವಗಚ್ಛನ್ ದಿವ್ಯಾನಿ ವಿಷ್ಣುಪ್ರಹರಣಾನಿ ಚ ।
ತೇನಾತಿವಿಸ್ಮಿತಾತ್ಮಾನಂ ಸೂತಮಾಹ ಜನಾರ್ದನಃ ॥ ೪೫

ಗಚ್ಛ ದ್ವಾರವತೀಂ ಸೂತ ಜ್ಞಾತೀನಾಂ ನಿಧನಂ ಮಿಥಃ ।
ಸಂಕರ್ಷಣಸ್ಯ ನಿರ್ಯಾಣಂ ಬಂಧುಭ್ಯೋ ಬ್ರೂಹಿ ಮದ್ದಶಾಮ್ ॥ ೪೬

ದ್ವಾರಕಾಯಾಂ ಚ ನ ಸ್ಥೇಯಂ ಭವದ್ಭಿಶ್ಚ ಸ್ವಬಂಧುಭಿಃ ।
ಮಯಾ ತ್ಯಕ್ತಾಂ ಯದುಪುರೀಂ ಸಮುದ್ರಃ ಪ್ಲಾವಯಿಷ್ಯತಿ ॥ ೪೭

---

ದಾರುಕನು ರಥದಿಂದ ಕೆಳಗೆ ಧುಮುಕಿ ಕಣ್ಣೀರು ಸುರಿಸುತ್ತ ಶ್ರೀಕೃಷ್ಣನ ಚರಣಗಳಿಗೆ ಎರಗಿದನು (೪೨). "ಹೇ ಸ್ವಾಮಿ, ಇಷ್ಟು ಹೊತ್ತು ನಿನ್ನ ಚರಣಾರವಿಂದವನ್ನು ಕಾಣದಿದ್ದ ನನ್ನ ಕಣ್ಣು ಹಾಳಾಯಿತು! ಕತ್ತಲೆ ಕವಿಯಿತು! ನನಗೆ ದಿಗ್ಭ್ರಮೆಯಾಗಿದೆ! ನೆಮ್ಮದಿ ಹೋಗಿದೆ! ಚಂದ್ರನಿಲ್ಲದ ಕಗ್ಗತ್ತಲೆಯ ರಾತ್ರಿಯಲ್ಲಿ ಇದ್ದೇನೋ ಎಂಬಂತಾಗಿದೆ!" ಎಂದನು (೪೩). ಸೂತನಾದ ದಾರುಕನು ಹೀಗೆ ನುಡಿಯುತ್ತಿರುವಾಗಲೇ ಗರುಡಲಾಂಛಿತವಾಗಿದ್ದ ಶ್ರೀಕೃಷ್ಣನ ರಥವು, ಪರೀಕ್ಷಿತರಾಜ, ದಾರುಕನ ಕಣ್ಣೆದುರಿಗೇ ಅಶ್ವಧ್ವಜಸಹಿತವಾಗಿ ಆಕಾಶಕ್ಕೆ ಹಾರಿ ಹೊರಟು ಹೋಯಿತು (೪೪). ಅದನ್ನು ಹಿಂಬಾಲಿಸಿ ಶ್ರೀಕೃಷ್ಣನ ಸುದರ್ಶನಾದಿ ದಿವ್ಯಾಯುಧಗಳೂ ಹೊರಟು ಹೋದವು! ಅದೆಲ್ಲವನ್ನು ಕಂಡು ಬೆಕ್ಕಸಬೆರಗಾಗಿ ಹೋದ ಸಾರಥಿಯನ್ನು ನೋಡಿ ಜನಾರ್ದನನು "ಸಾರಥಿ, ನೀನೀಗ ದ್ವಾರಕೆಗೆ ಹೋಗು. ಈ ಜ್ಞಾತಿಗಳು ಅನ್ಯೋನ್ಯವಾಗಿ ಕಾದಾಡಿ ಸತ್ತು ಹೋದುದನ್ನೂ ಬಲಭದ್ರನು ಯೋಗಮಾರ್ಗದಿಂದ ನಿರ್ಗಮಿಸಿದನೆಂಬುದನ್ನೂ ನನ್ನ ಈ ಪರಿಸ್ಥಿತಿಯನ್ನೂ ಬಂಧುಗಳಿಗೆ ತಿಳಿಸು (೪೫–೪೬). "ನೀವೂ ನಿಮ್ಮ ಬಂಧುಗಳೂ ಸಹ ಇನ್ನು ಮೇಲೆ ದ್ವಾರಕೆಯಲ್ಲಿ ಇರಕೂಡದು. ನಾನು ತ್ಯಜಿಸಿ

ಸ್ವಂ ಸ್ವಂ ಪರಿಗ್ರಹಂ ಸರ್ವೇ ಆದಾಯ ಪಿತರೌ ಚ ನಃ ।
ಅರ್ಜುನೇನಾವಿತಾಃ ಸರ್ವೇ ಇಂದ್ರಪ್ರಸ್ಥಂ ಗಮಿಷ್ಯಥ ॥ ೪೮

ತ್ವಂ ತು ಮದ್ಧರ್ಮಮಾಸ್ಥಾಯ ಜ್ಞಾನನಿಷ್ಠ ಉಪೇಕ್ಷಕಃ ।
ಮನ್ಮಾಯಾರಚನಾಮೇತಾಂ ವಿಜ್ಞಾಯೋಪಶಮಂ ವ್ರಜ ॥ ೪೯

ಇತ್ಯುಕ್ತಸ್ತಂ ಪರಿಕ್ರಮ್ಯ ನಮಸ್ಕೃತ್ಯ ಪುನಃ ಪುನಃ ।
ತತ್ಪಾದೌ ಶೀರ್ಷ್ಣ್ಯುಪಾಧಾಯ ದುರ್ಮನಾಃ ಪ್ರಯಯೌ ಪುರೀಮ್ ॥ ೫೦

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ತ್ರಿಂಶಾಧ್ಯಾಯಃ



---

ಹೋದೊಡನೆ ಆ ಯದುರಾಜಧಾನಿಯನ್ನು ಸಮುದ್ರವು ಮುಳುಗಿಸಿಬಿಡುವುದು(೪೭) ನಿಮ್ಮ ನಿಮ್ಮ ಪರಿವಾರವನ್ನೂ ನಮ್ಮ ತಾಯಿತಂದೆಗಳಿಬ್ಬರನ್ನೂ ಕರೆದುಕೊಂಡು ಇಂದ್ರಪ್ರಸ್ಥನಗರಕ್ಕೆ ಹೋಗಿರಿ. ಅರ್ಜುನನು ನಿಮ್ಮನ್ನು ರಕ್ಷಿಸುತ್ತ ಕರೆದೊಯ್ಯುವನು " ಎಂದೂ ಅವರಿಗೆ ಹೇಳು (೪೮). ದಾರುಕ, ನೀನು ಭಾಗವತಧರ್ಮವನ್ನು ಪಾಲಿಸುತ್ತ ಜ್ಞಾನನಿಷ್ಠನಾಗಿ ಯಾವ ವಿಷಯದಲ್ಲಿಯೂ ಆಸಕ್ತಿಯನ್ನಿಡದೆ ತಟಸ್ಥನಾಗಿರು. ಇದೆಲ್ಲವೂ ನನ್ನ ಮಾಯಾವಿಲಾಸವೆಂದರಿತು ಶಾಂತನಾಗು " ಎಂದನು (೪೯). ಆಗ ದಾರುಕನು ದುಗುಡದಿಂದ ಶ್ರೀಕೃಷ್ಣನಿಗೆ ಪ್ರದಕ್ಷಿಣೆಮಾಡಿ ಮತ್ತೆ ಮತ್ತೆ ನಮಸ್ಕರಿಸಿ, ಆತನ ಪಾದಗಳನ್ನು ತನ್ನ ತಲೆಯಮೇಲಿಟ್ಟುಕೊಂಡು ವಂದಿಸಿ, ಅತ್ಯಂತವಿಷಣ್ಣನಾಗಿ ದ್ವಾರಕಾಪುರಿಗೆ ಹೋದನು " (೫೦).

ಇಲ್ಲಿಗೆ ಶ್ರೀಮದ್ಭಾಗವತಮಹಾಪುರಾಣದ ಏಕಾದಶಸ್ಕಂಧದಲ್ಲಿ
ಮೂವತ್ತನೆಯ ಅಧ್ಯಾಯ



*

# ಏಕತ್ರಿಂಶಾಧ್ಯಾಯಃ

ಶ್ರೀಶುಕ ಉವಾಚ—

ಅಥ ತತ್ರಾಗಮದ್ ಬ್ರಹ್ಮಾ ಭವಾನ್ಯಾ ಚ ಸಮಂ ಭವಃ ।
ಮಹೇಂದ್ರಪ್ರಮುಖಾ ದೇವಾ ಮುನಯಃ ಸಪ್ರಜೇಶ್ವರಾಃ ॥ ೧

ಪಿತರಃ ಸಿದ್ಧಗಂಧರ್ವಾ ವಿದ್ಯಾಧರಮಹೋರಗಾಃ ।
ಚಾರಣಾ ಯಕ್ಷರಕ್ಷಾಂಸಿ ಕಿನ್ನರಾಪ್ಸರಸೋ ದ್ವಿಜಾಃ ॥ ೨

ದ್ರಷ್ಟುಕಾಮಾ ಭಗವತೋ ನಿರ್ಯಾಣಂ ಪರಮೋತ್ಸುಕಾಃ ।
ಗಾಯಂತಶ್ಚ ಗೃಣಂತಶ್ಚ ಶೌರೇಃ ಕರ್ಮಾಣಿ ಜನ್ಮ ಚ ॥ ೩

ವವೃಷುಃ ಪುಷ್ಪವರ್ಷಾಣಿ ವಿಮಾನಾವಲಿಭಿರ್ನಭಃ ।
ಕುರ್ವಂತಃ ಸಂಕುಲಂ ರಾಜನ್ ಭಕ್ತ್ಯಾ ಪರಮಯಾ ಯುತಾಃ ॥ ೪

## ಅಧ್ಯಾಯ ೩೧

ಶ್ರೀಕೃಷ್ಣನು ನಿಜಧಾಮಕ್ಕೆ ನಿರ್ಗಮಿಸುವುದು. ಯಾದವ ಸ್ತ್ರೀಯರ ಅಗ್ನಿಪ್ರವೇಶ. ಅರ್ಜುನನಿಂದ ಉತ್ತರಕ್ರಿಯೆ. ಶ್ರೀಕೃಷ್ಣಚರಿತೆಯ ಉಪಸಂಹಾರ

ಶುಕಮಹರ್ಷಿಗಳು ಹೇಳಿದರು : "ಪರೀಕ್ಷಿತರಾಜ, ಅನಂತರ ಬ್ರಹ್ಮನೂ ಪಾರ್ವತಿಯೊಡನೆ ಶಿವನೂ ಇಂದ್ರಾದಿದೇವತೆಗಳೂ ಸನಕಾದಿಮುನಿಗಳೂ ಮರೀಚಿಯೇ ಮೊದಲಾದ ಪ್ರಜಾಪತಿಗಳೂ ಶ್ರೀಕೃಷ್ಣನಿದ್ದೆಡೆಗೆ ಆಗಮಿಸಿದರು (೧). ಪಿತೃದೇವತೆಗಳೂ ಸಿದ್ಧಗಂಧರ್ವರೂ ವಿದ್ಯಾಧರಮಹೋರಗರೂ ಚಾರಣರೂ ಯಕ್ಷರಾಕ್ಷಸರೂ ಕಿಂನರರೂ ಅಪ್ಸರೆಯರೂ ಮೈತ್ರೇಯನೇ ಮೊದಲಾದ ದ್ವಿಜರೂ ಅಲ್ಲಿಗೆ ಆಗಮಿಸಿದರು (೨). ಭಗವಂತನು ತನ್ನ ಧಾಮಕ್ಕೆ ನಿರ್ಯಾಣಮಾಡುವುದನ್ನು ವೀಕ್ಷಿಸುವುದಕ್ಕಾಗಿ ಅವರು ಬಂದಿದ್ದರು! ಅವರು ಶ್ರೀಕೃಷ್ಣನು ಮಾಡಿದ ಮಹಾಕಾರ್ಯಗಳನ್ನೂ ಅವನ ಜನ್ಮವೃತ್ತಾಂತವನ್ನೂ ಪರಮೋತ್ಸಾಹದಿಂದ ಹಾಡುತ್ತ ಹೊಗಳುತ್ತ ಇದ್ದರು (೩). ಆಕಾಶವು ಕಿಕ್ಕಿರಿದು ತುಂಬಿಹೋಗುವಂತೆ ವಿಮಾನಪಂಕ್ತಿಗಳಲ್ಲಿ ಬಂದು ಪರಮಭಕ್ತಿಯಿಂದ ಹೂಮಳೆಗರೆದರು. ಆಗ ಶ್ರೀಕೃಷ್ಣನು ಬ್ರಹ್ಮನನ್ನೂ ತನ್ನ ವಿಭೂತಿಗಳಾದ ದೇವೇಂದ್ರಾದಿಗಳನ್ನೂ ವೀಕ್ಷಿಸಿ, ತನ್ನ ಚಿತ್ತ

ಭಗವಾನ್ ಪಿತಾಮಹಂ ವೀಕ್ಷ್ಯ ವಿಭೂತೀರಾತ್ಮನೋ ವಿಭುಃ ।
ಸಂಯೋಜ್ಯಾತ್ಮನಿ ಚಾತ್ಮಾನಂ ಪದ್ಮನೇತ್ರೇ ನ್ಯಮೀಲಯತ್ ॥ ೫

ಲೋಕಾಭಿರಾಮಾಂ ಸ್ವತನುಂ ಧಾರಣಾಧ್ಯಾನಮಂಗಲಮ್ ।
ಯೋಗಧಾರಣಯಾಽಽಗ್ನೇಯ್ಯಾಽದಗ್ಧ್ವಾ ಧಾಮಾವಿಶತ್ ಸ್ವಕಮ್ ॥ ೬

ದಿವಿ ದುಂದುಭಯೋ ನೇದುಃ ಪೇತುಃ ಸುಮನಸಶ್ಚ ಖಾತ್ ।
ಸತ್ಯಂ ಧರ್ಮೋ ಧೃತಿರ್ಭೂಮೇಃ ಕೀರ್ತಿಃ ಶ್ರೀಶ್ಚಾನು ತಂ ಯಯುಃ ॥ ೭

ದೇವಾದಯೋ ಬ್ರಹ್ಮಮುಖ್ಯಾ ನ ವಿಶಂತಂ ಸ್ವಧಾಮನಿ ।
ಅವಿಜ್ಞಾತಗತಿಂ ಕೃಷ್ಣಂ ದದೃಶುಶ್ಚಾತಿವಿಸ್ಮಿತಾಃ ॥ ೮

ಸೌದಾಮನ್ಯಾ ಯಥಾಽಽಕಾಶೇ ಯಾಂತ್ಯಾ ಹಿತ್ವಾಭ್ರಮಂಡಲಮ್ ।
ಗತಿರ್ನ ಲಕ್ಷ್ಯತೇ ಮರ್ತ್ಯೈಸ್ತಥಾ ಕೃಷ್ಣಸ್ಯ ದೈವತೈಃ ॥ ೯

---

ವನ್ನು ಆತ್ಮನಲ್ಲಿ ನೆಲೆಗೊಳಿಸಿ, ಅರವಿಂದದಳಗಳಂತಿದ್ದ ಕಣ್ಣುಗಳನ್ನು ಮುಚ್ಚಿಕೊಂಡನು (೪–೫). ವಿಶ್ವಮನೋಹರವೂ ಯೋಗಿಗಳ ಧಾರಣಾಧ್ಯಾನಗಳಿಗೆ ಮಂಗಳಕರವಾದ ವಿಷಯವೂ ಆಗಿದ್ದ ತನ್ನ ಶರೀರವನ್ನು, ಆಗ್ನೇಯವಾದ ಯೋಗಧಾರಣೆಯಿಂದ [1]ದಹಿಸದೆಯೇ (ಸಶರೀರನಾಗಿ) ಭಗವಂತನು ತನ್ನ ದಿವ್ಯ-ಧಾಮಕ್ಕೆ ತೆರಳಿದನು (೬). ದೇವಲೋಕದಲ್ಲಿ ದುಂದುಭಿಗಳು ಮೊಳಗಿದವು. ಗಗನದಿಂದ ಹೂಗಳು ಸುರಿದವು. ಪರೀಕ್ಷಿತರಾಜ, (ಶ್ರೀಕೃಷ್ಣನು ಈ ಲೋಕವನ್ನು ತ್ಯಜಿಸಿದೊಡನೆ) ಸತ್ಯ, ಧರ್ಮ, ಧೃತಿ (ಸಂತೋಷ), ಕೀರ್ತಿ, ಶ್ರೀ— ಇವುಗಳು ಭೂಲೋಕದಿಂದ ಅವನ ಹಿಂದೆ ಹೊರಟುಹೋದವು! (೭). ನಿಜಧಾಮವನ್ನು ಪ್ರವೇಶಿಸುತ್ತಿದ್ದ ಶ್ರೀಕೃಷ್ಣನನ್ನು ಬ್ರಹ್ಮನಾಗಲಿ ಇತರ ದೇವಾದಿಗಳಾಗಲಿ ಕಾಣಲಿಲ್ಲ. ಕೆಲವರು ಮಾತ್ರ ಅವನ ಗಮನ ಪ್ರಕಾರವನ್ನು ಸ್ವಲ್ಪ ಸ್ವಲ್ಪ ನೋಡಿ ಅತ್ಯಂತ ವಿಸ್ಮಿತರಾದರು! (೮). ಮೇಘಮಂಡಲದಿಂದ ಆಕಾಶದಲ್ಲಿ

---

1. ಯೋಗಿಗಳು ತಮ್ಮ ಶರೀರವನ್ನು ಯೋಗಧಾರಣಾಮಹಿಮೆಯಿಂದ ಸುಟ್ಟು ಹಾಕಿ, ಲೋಕಾಂತರಕ್ಕೆ ತೆರಳುವರೆಂದು ಶಾಸ್ತ್ರವಚನವಿದೆ. ಶ್ರೀಕೃಷ್ಣನು ಹಾಗೆ ತನ್ನ ದೇಹವನ್ನು ದಹಿಸಿಕೊಳ್ಳಲಿಲ್ಲ. ಏಕೆಂದರೆ, ಆಗ ಭಕ್ತರು ಯಾವ ಆಕೃತಿಯನ್ನು ಹೃದಯದಲ್ಲಿ ಧಾರಣೆ ಮಾಡಬೇಕು? ಧ್ಯಾನಮಾಡಬೇಕು? ಧಾರಣಾಧ್ಯಾನಗಳು ನಿರ್ವಿಷಯವಾಗಿಬಿಟ್ಟಾವು—ಎಂದು ಅಭಿಪ್ರಾಯ.

ಬ್ರಹ್ಮರುದ್ರಾದಯಸ್ತೇ ತು ದೃಷ್ಟ್ವಾ ಯೋಗಗತಿಂ ಹರೇಃ ।
ವಿಸ್ಮಿತಾಸ್ತಾಂ ಪ್ರಶಂಸಂತಃ ಸ್ವಂ ಸ್ವಂ ಲೋಕಂ ಯಯುಸ್ತದಾ ॥ ೧೦

ರಾಜನ್ ಪರಸ್ಯ ತನುಭೃಜ್ಜನನಾಪ್ಯಯೇಹಾ
ಮಾಯಾವಿಡಂಬನಮವೇಹಿ ಯಥಾ ನಟಸ್ಯ ।
ಸೃಷ್ಟ್ವಾಽಽತ್ಮನೇದಮನುವಿಶ್ಯ ವಿಹೃತ್ಯ ಚಾಂತೇ
ಸಂಹೃತ್ಯ ಚಾತ್ಮಮಹಿನೋಪರತಃ ಸ ಆಸ್ತೇ ॥ ೧೧

ಮರ್ತ್ಯೇನ ಯೋ ಗುರುಸುತಂ ಯಮಲೋಕನೀತಂ
ತ್ವಾಂ ಚಾನಯಚ್ಛರಣದಃ ಪರಮಾಸ್ತ್ರದಗ್ಧಮ್ ।
ಜಿಗ್ಯೇಽಂತಕಾಂತಕಮಪೀಶಮಸಾವನೀಶಃ
ಕಿಂ ಸ್ವಾವನೇ ಸ್ವರನಯನ್ಮೃಗಯುಂ ಸದೇಹಮ್ ॥ ೧೨

---

ಚಲಿಸುವ ವಿದ್ಯುತ್ತಿನ ಗತಿಯು ಹೇಗೆ ಮಾನವರಿಗೆ ಗೋಚರವಾಗುವುದಿಲ್ಲವೋ ಹಾಗೆ ಶ್ರೀಕೃಷ್ಣನ ಗತಿಯು ದೇವತೆಗಳಿಗೆ ಗೋಚರಿಸಲಿಲ್ಲ. [1]ಬ್ರಹ್ಮರುದ್ರಾದಿಗಳು ಶ್ರೀಹರಿಯ ಗಮನಪ್ರಕಾರವನ್ನು ತಿಳಿದು ವಿಸ್ಮಿತರಾಗಿ ಅದನ್ನು ಹೊಗಳುತ್ತ ತಮ್ಮ ತಮ್ಮ ಲೋಕಗಳಿಗೆ ಪ್ರಯಾಣ ಮಾಡಿದರು (೯–೧೦). ರಾಜ-ಪರೀಕ್ಷಿತ, ಮಾನವರಾದ ಯಾದವರ ನಡುವೆ ಪರಮಾತ್ಮನ ಜನನ ತಿರೋಧಾನ ಗಳೆಂಬ ಕೃತ್ಯಗಳು, ನಟನ ಅನುಕರಣೆಗಳಂತೆ ಮಾಯಾಕಲ್ಪಿತ ವಿಲಾಸಗಳೆಂದು ತಿಳಿದುಕೊ. ಈ ವಿಶ್ವವನ್ನೇ ಆತನು ತನ್ನ ಮಹಿಮೆಯಿಂದ ಸೃಜಿಸಿ, ಪ್ರವೇಶಿಸಿ, ವಿಹರಿಸಿ, ಕಡೆಯಲ್ಲಿ ಸಂಹರಿಸಿ ತನ್ನ ಪಾಡಿಗೆ ಅವಿಕೃತನಾಗಿ ಹಾಗೆಯೇ ಇರುತ್ತಾನೆ! (೧೧). ಯಮನು ತನ್ನ ಲೋಕಕ್ಕೆ ಒಯ್ದಿದ್ದ ಗುರುಪುತ್ರನನ್ನು ಯಾವಾತನು ಈ ಮನುಷ್ಯದೇಹದಿಂದಲೇ ಹೋಗಿ ಬದುಕಿಸಿ ಕರೆತಂದನೋ, ಶರಣಾಗತರಕ್ಷಕನಾದ ಯಾವಾತನು ಬ್ರಹ್ಮಾಸ್ತ್ರದಗ್ಧನಾಗಿದ್ದ ನಿನ್ನನ್ನು ಕಾಪಾಡಿ ದನೋ, ಯಾವಾತನು (ಬಾಣಾಸುರಸಂಗ್ರಾಮ ಪ್ರಸಂಗದಲ್ಲಿ) ಯಮನಿಗೂ ಯಮನಾಗಿದ್ದ ರುದ್ರನನ್ನು ಜಯಿಸಿದನೋ, ಜರಾವ್ಯಾಧನಿಗೆ ಸಶರೀರಸ್ವರ್ಗವನ್ನೇ ಕರುಣಿಸಿದನೋ ಅವನು ತನ್ನನ್ನು ರಕ್ಷಿಸಿಕೊಳ್ಳಲು ಸಮರ್ಥನಾಗಿರಲಿಲ್ಲವೆ ? (೧೨)

---

1. ವಿಷ್ಣುಪಾರ್ಷದರಿಗೆ ಮಾತ್ರ ಗೋಚರಿಸಿತು—ಎಂದು ತಾತ್ಪರ್ಯ.

ತಥಾಪ್ಯಶೇಷಸ್ಥಿತಿಸಂಭವಾಪ್ಯಯೇ-
ಷ್ವನನ್ಯಹೇತುರ್ಯದಶೇಷಶಕ್ತಿಧೃಕ್ ।
ನೈಚ್ಛತ್ ಪ್ರಣೇತುಂ ವಪುರತ್ರ ಶೇಷಿತಂ
ಮರ್ತ್ಯೇನ ಕಿಂ ಸ್ವಸ್ಥಗತಿಂ ಪ್ರದರ್ಶಯನ್ ॥ ೧೩

ಯ ಏತಾಂ ಪ್ರಾತರುತ್ಥಾಯ ಕೃಷ್ಣಸ್ಯ ಪದವೀಂ ಪರಾಮ್ ।
ಪ್ರಯತಃ ಕೀರ್ತಯೇದ್ ಭಕ್ತ್ಯಾ ತಾಮೇವಾಪ್ನೋತ್ಯನುತ್ತಮಾಮ್ ॥ ೧೪

ದಾರುಕೋ ದ್ವಾರಕಾಮೇತ್ಯ ವಸುದೇವೋಗ್ರಸೇನಯೋಃ ।
ಪತಿತ್ವಾ ಚರಣಾವಸ್ರೈರ್ನ್ಯಷಿಂಚತ್ ಕೃಷ್ಣವಿಚ್ಯುತಃ ॥ ೧೫

ಕಥಯಾಮಾಸ ನಿಧನಂ ವೃಷ್ಣೀನಾಂ ಕೃತ್ಸ್ನಶೋ ನೃಪ ।
ತಚ್ಛ್ರುತ್ವೋದ್ವಿಗ್ನಹೃದಯಾ ಜನಾಃ ಶೋಕವಿಮೂರ್ಛಿತಾಃ ॥ ೧೬

---

ಈ ರೀತಿಯಲ್ಲಿ ಚರಾಚರ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಅನನ್ಯ ಕಾರಣನೂ ಸಮಸ್ತಶಕ್ತಿಗಳಿಗೆ ಆಶ್ರಯನೂ ಆದ ಭಗವಂತನು ಆ ಮಾನುಷ ದೇಹವನ್ನು ಈ ಲೋಕದಲ್ಲಿಯೇ ಉಳಿಸಿಕೊಳ್ಳಲು ಇಚ್ಛಿಸಲಿಲ್ಲ (ತನ್ನ ವೈಕುಂಠಕ್ಕೆ ಆ ದೇಹವನ್ನು ಒಯ್ದನು). ಏಕೆಂದರೆ, ಆತ್ಮನಿಷ್ಠರಿಗೆ ಈ ಮಾನವಶರೀರದಿಂದೇನಾಗಬೇಕು ?—ಎಂದು ತೋರಿಸಿಕೊಡುವುದೇ[1] ಅವನ ಉದ್ದೇಶವಾಗಿತ್ತು (೧೩). ಯಾವಾತನು ಪ್ರಾತಃಕಾಲದಲ್ಲೆದ್ದು ಶುಚಿಯಾಗಿ ಶ್ರೀಕೃಷ್ಣನ ಈ ಶ್ರೇಷ್ಠವಾದ ಗತಿಯನ್ನು ಭಕ್ತಿಯಿಂದ ಕೀರ್ತಿಸುವನೋ ಅವನು ಅದೇ ಪ್ರಶಸ್ತವಾದ ಗತಿಯನ್ನು ಪಡೆಯುವನು. ಇತ್ತಲಾಗಿ ದಾರುಕನು ದ್ವಾರಕೆಗೆ ಹೋಗಿ ವಸುದೇವ-ಉಗ್ರಸೇನರ ಪಾದಗಳಮೇಲೆ ತಲೆಯಿಟ್ಟು ಶ್ರೀಕೃಷ್ಣವಿರಹಶೋಕದಿಂದ ಕಣ್ಣೀರ್ಗರೆದು ತೋಯಿಸಿಬಿಟ್ಟನು. ಯಾದವರೆಲ್ಲರ ನಿಧನವಾರ್ತೆಯನ್ನೂ ಪೂರ್ತಿಯಾಗಿ ತಿಳಿಸಿದನು. ಅದೆಲ್ಲವನ್ನೂ ಕೇಳಿ ಉದ್ವಿಗ್ನರಾದ ಜನರು ಶೋಕದಿಂದ ಮೂರ್ಛಿತರಾದರು (೧೪–೧೬).

---

1. ಶ್ರೀಕೃಷ್ಣನು ಸಶರೀರನಾಗಿ ವೈಕುಂಠಕ್ಕೆ ತೆರಳಿದನು. ಶರೀರಕ್ಕೆ ಪ್ರಾಶಸ್ತ್ಯ ಬೇಡ—ಎಂದು ತೋರಿಸುವುದಕ್ಕಾಗಿ ಅದನ್ನು ಇಲ್ಲಿ ಉಳಿಸಲಿಲ್ಲ—ಎಂದು ಅಭಿಪ್ರಾಯ.

ತತ್ರ ಸ್ಮ ತ್ವರಿತಾ ಜಗ್ಮುಃ ಕೃಷ್ಣವಿಶ್ಲೇಷವಿಹ್ವಲಾಃ ।
ವ್ಯಸವಃ ಶೇರತೇ ಯತ್ರ ಜ್ಞಾತಯೋ ಘ್ನಂತ ಆನನಮ್ ॥ ೧೭

ದೇವಕೀ ರೋಹಿಣೀ ಚೈವ ವಸುದೇವಸ್ತಥಾ ಸುತೌ ।
ಕೃಷ್ಣರಾಮಾವಪಶ್ಯಂತಃ ಶೋಕಾರ್ತಾ ವಿಜಹುಃ ಸ್ಮೃತಿಮ್ ॥ ೧೮

ಪ್ರಾಣಾಂಶ್ಚ ವಿಜಹುಸ್ತತ್ರ ಭಗವದ್ವಿರಹಾತುರಾಃ ।
ಉಪಗುಹ್ಯ ಪತೀಂಸ್ತಾತ ಚಿತಾಮಾರುರುಹುಃ ಸ್ತ್ರಿಯಃ ॥ ೧೯

ರಾಮಪತ್ನ್ಯಶ್ಚ ತದ್ದೇಹಮುಪಗುಹ್ಯಾಗ್ನಿಮಾವಿಶನ್ ।
ವಸುದೇವಪತ್ನ್ಯಸ್ತದ್ಗಾತ್ರಂ ಪ್ರದ್ಯುಮ್ನಾದೀನ್ ಹರೇಃ ಸ್ನುಷಾಃ ।
ಕೃಷ್ಣಪತ್ನ್ಯೋಽವಿಶನ್ನಗ್ನಿಂ ರುಕ್ಮಿಣ್ಯಾದ್ಯಾಸ್ತದಾತ್ಮಿಕಾಃ ॥ ೨೦

ಅರ್ಜುನಃ ಪ್ರೇಯಸಃ ಸಖ್ಯುಃ ಕೃಷ್ಣಸ್ಯ ವಿರಹಾತುರಃ ।
ಆತ್ಮಾನಂ ಸಾಂತ್ವಯಾಮಾಸ ಕೃಷ್ಣಗೀತೈಃ ಸದುಕ್ತಿಭಿಃ ॥ ೨೧

---

ಮುಖ್ಯವಾಗಿ ಶ್ರೀಕೃಷ್ಣನ ವಿಯೋಗದಿಂದ ತಳಮಳಿಸಿದ ಆ ಜನರೆಲ್ಲರೂ, ಆ ಯಾದವಬಂಧುಗಳು ಎದುರುಬದರಾಗಿ ಹೊಡೆದಾಡಿ ಸತ್ತುಬಿದ್ದಿದ್ದ ಸ್ಥಳಕ್ಕೆ ತ್ವರೆಯಿಂದ ಧಾವಿಸಿದರು (೧೭). ವಸುದೇವನೂ ದೇವಕೀರೋಹಿಣಿಯರೂ ತಮ್ಮ ಪುತ್ರರಾದ ಶ್ರೀಕೃಷ್ಣನನ್ನೂ ಬಲರಾಮನನ್ನೂ ಕಾಣದೆ ಶೋಕಾರ್ತರಾಗಿ ಎಚ್ಚರವಪ್ಪಿದರು. ಭಗವದ್ವಿರಹದಿಂದ ವಿಷಣ್ಣರಾದ ಅವರು ಪ್ರಾಣವನ್ನು ಬಿಟ್ಟರು. ಅಪ್ಪಾ-ಪರೀಕ್ಷಿತ, ಸ್ತ್ರೀಯರು ತಮ್ಮ ಪತಿಗಳ ದೇಹವನ್ನಪ್ಪಿ ಕೊಂಡು ಚಿತೆಯನ್ನು ಪ್ರವೇಶಿಸಿದರು (೧೮–೧೯). ಬಲರಾಮನ ಪತ್ನಿಯರು ಆತನ ದೇಹವನ್ನೂ ವಸುದೇವನ ಪತ್ನಿಯರು ಅವನ ದೇಹವನ್ನೂ ಶ್ರೀಕೃಷ್ಣನ ಸೊಸೆಯರು ಪ್ರದ್ಯುಮ್ನನೇ ಮೊದಲಾದ ತಮ್ಮ ತಮ್ಮ ಪತಿಗಳ ದೇಹ ಗಳನ್ನೂ ಅಪ್ಪಿಕೊಂಡು ಅಗ್ನಿಪ್ರವೇಶ ಮಾಡಿದರು. ಶ್ರೀಕೃಷ್ಣನ ಪತ್ನಿಯರಾದ ರುಕ್ಮಿಣೀ ಮೊದಲಾದವರು ಶ್ರೀಕೃಷ್ಣನನ್ನು ಸ್ಮರಿಸುತ್ತ ಅವನೊಡನೆ ತನ್ಮಯರಾಗಿ ಅಗ್ನಿಯಲ್ಲಿ ಧುಮುಕಿದರು (೨೦). (ದಾರುಕನ ಕರೆಯಂತೆ ಅಲ್ಲಿಗೆ ಬಂದ) ಅರ್ಜುನನಾದರೋ ಪ್ರಿಯಮಿತ್ರನಾದ ಶ್ರೀಕೃಷ್ಣನ ವಿಯೋಗದಿಂದ ವ್ಯಥೆಗೊಂಡು, ಆತನೇ ಬೋಧಿಸಿದ್ದ ಗೀತೋಕ್ತಿಗಳಿಂದ ತನ್ನನ್ನು ಸಂತೈಸಿಕೊಂಡನು (೨೧).

ಬಂಧೂನಾಂ ನಷ್ಟಗೋತ್ರಾಣಾಮರ್ಜುನಃ ಸಾಂಪರಾಯಿಕಮ್ ।
ಹತಾನಾಂ ಕಾರಯಾಮಾಸ ಯಥಾವದನುಪೂರ್ವಶಃ ॥ ೨೨

ದ್ವಾರಕಾಂ ಹರಿಣಾ ತ್ಯಕ್ತಾಂ ಸಮುದ್ರೋಽಪ್ಲಾವಯತ್ ಕ್ಷಣಾತ್ ।
ವರ್ಜಯಿತ್ವಾ ಮಹಾರಾಜ ಶ್ರೀಮದ್ಭಗವದಾಲಯಮ್ ॥ ೨೩

ನಿತ್ಯಂ ಸಂನಿಹಿತಸ್ತತ್ರ ಭಗವಾನ್ ಮಧುಸೂದನಃ ।
ಸ್ಮೃತ್ಯಾಶೇಷಾಶುಭಹರಂ ಸರ್ವಮಂಗಲಮಂಗಲಮ್ ॥ ೨೪

ಸ್ತ್ರೀ ಬಾಲವೃದ್ಧಾನಾದಾಯ ಹತಶೇಷಾನ್ ಧನಂಜಯಃ ।
ಇಂದ್ರಪ್ರಸ್ಥಂ ಸಮಾವೇಶ್ಯ ವಜ್ರಂ ತತ್ರಾಭ್ಯಷೇಚಯತ್ ॥ ೨೫

ಶ್ರುತ್ವಾ ಸುಹೃದ್ವಧಂ ರಾಜನ್ನರ್ಜುನಾತ್ತೇ ಪಿತಾಮಹಾಃ ।
ತ್ವಾಂ ತು ವಂಶಧರಂ ಕೃತ್ವಾ ಜಗ್ಮುಃ ಸರ್ವೇ ಮಹಾಪಥಮ್ ॥ ೨೬

ಯ ಏತದ್ ದೇವದೇವಸ್ಯ ವಿಷ್ಣೋಃ ಕರ್ಮಾಣಿ ಜನ್ಮ ಚ ।
ಕೀರ್ತಯೇಚ್ಛ್ರದ್ಧಯಾ ಮರ್ತ್ಯಃ ಸರ್ವಪಾಪೈಃ ಪ್ರಮುಚ್ಯತೇ ॥ ೨೭

---

ಯಾದವಬಂಧುಗಳಲ್ಲಿ ಯಾರಿಗೆ ಸಂತತಿ ಉಳಿದಿರಲಿಲ್ಲವೋ ಅವರ ಉತ್ತರ ಕ್ರಿಯಾದಿಗಳನ್ನು ತಾನೇ ಯಥಾವಿಧಿಯಂತೆ ಕ್ರಮವಾಗಿ ಮಾಡಿಸಿದನು. ಮಹಾರಾಜ, ಅನಂತರ ಶ್ರೀಹರಿಯು ಪರಿತ್ಯಜಿಸಿದ ದ್ವಾರಕೆಯನ್ನು ಮಹಾಸಾಗರವು ಒಂದು ಕ್ಷಣದಲ್ಲಿ ಮುಳುಗಿಸಿಬಿಟ್ಟಿತು! ಆದರೆ ಭಗವಂತನ ದೇವಾಲಯವನ್ನು ಮಾತ್ರ ಮುಟ್ಟಲಿಲ್ಲ! (೨೨-೨೩). ಆ ದೇವಾಲಯದಲ್ಲಿ ಭಗವಾನ್ ಮಧುಸೂದನನು ನಿತ್ಯಸಂನಿಹಿತನಾಗಿರುತ್ತಾನೆ. ಸಮಸ್ತ ಅಶುಭಗಳನ್ನೂ ಪರಿಹರಿಸತಕ್ಕವನೂ ಸರ್ವಮಂಗಳಗಳಿಗೆ ಮಂಗಳಪ್ರದಾಯಕನೂ ಆದ ಅಧಿದೇವತೆ ಅವನು (೨೪). ಅನಂತರ ಹತಶೇಷರಾಗಿದ್ದ ಸ್ತ್ರೀಬಾಲವೃದ್ಧರನ್ನು ಕರೆದುಕೊಂಡು ಅರ್ಜುನನು ಇಂದ್ರಪ್ರಸ್ಥಕ್ಕೆ ಬಂದು ಅಲ್ಲಿ ವಜ್ರನಿಗೆ ಪಟ್ಟಾಭಿಷೇಕ ಮಾಡಿದನು. ಪರೀಕ್ಷಿತ, ಅರ್ಜುನನಿಂದ ಮಿತ್ರಮರಣವೃತ್ತಾಂತವನ್ನು ಕೇಳಿದ ನಿನ್ನ ಅಜ್ಜಂದಿರು, ವಂಶರಕ್ಷಕನನ್ನಾಗಿ ರಾಜ್ಯದಲ್ಲಿ ನಿನ್ನನ್ನು ಸ್ಥಾಪಿಸಿ ಮಹಾಪ್ರಸ್ಥಾನಕ್ಕೆ ಹೊರಟುಹೋದರು (೨೫-೨೬). ದೇವದೇವನಾದ ಮಹಾವಿಷ್ಣುವಿನ ಈ ಲೀಲಾಕಾರ್ಯಗಳನ್ನೂ ಜನ್ಮವೃತ್ತಾಂತವನ್ನೂ ಶ್ರದ್ಧೆಯಿಂದ ಕೇಳತಕ್ಕವನು

ಇತ್ಥಂ ಹರೇರ್ಭಗವತೋ ರುಚಿರಾವತಾರ-
ವೀರ್ಯಾಣಿ ಬಾಲಚರಿತಾನಿ ಚ ಶಂತಮಾನಿ ।
ಅನ್ಯತ್ರ ಚೇಹ ಚ ಶ್ರುತಾನಿ ಗೃಣನ್ ಮನುಷ್ಯೋ
ಭಕ್ತಿಂ ಪರಾಂ ಪರಮಹಂಸಗತೌ ಲಭೇತ ॥ ೨೮

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಏಕಾದಶಸ್ಕಂಧೇ
ಏಕತ್ರಿಂಶಾಧ್ಯಾಯಃ

---

ಏಕಾದಶಃ ಸ್ಕಂಧಃ ಸಮಾಪ್ತಃ

॥ ಹರಿಃ ಓಂ ತತ್‌ಸತ್ ॥

---

ಸರ್ವಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಈ ಪ್ರಕಾರವಾಗಿ ಭಗವಾನ್ ಶ್ರೀಹರಿಯ ಮನೋಹರವೂ ಮಂಗಳಕರವೂ ಆದ ಅವತಾರಮಹಿಮೆಗಳನ್ನೂ ಬಾಲಚರಿತೆಗಳನ್ನೂ ಇಲ್ಲಿ ವರ್ಣಿಸಲಾಯಿತು. ಉಳಿದ ಗ್ರಂಥಗಳಲ್ಲಿಯೂ ಈ ಪುಣ್ಯಚರಿತೆಗಳಿವೆ. ಇವನ್ನು ಕೀರ್ತಿಸುವ ಮನುಷ್ಯನು ಪರಮಹಂಸರಿಗೆ ಗತಿಯಾದ ಶ್ರೀಕೃಷ್ಣನಲ್ಲಿ ಪರಾಭಕ್ತಿಯನ್ನು ಪಡೆಯುವನು" ಎಂದರು (೨೭–೨೮).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ಏಕಾದಶಸ್ಕಂಧದಲ್ಲಿ
ಮೂವತ್ತೊಂದನೆಯ ಅಧ್ಯಾಯ

---

ಏಕಾದಶಸ್ಕಂಧವು ಸಮಾಪ್ತವಾಯಿತು

॥ ಓಂ ನಮೋ ಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮ್

## ದ್ವಾದಶಸ್ಕಂಧಃ

## ಪ್ರಥಮೋಧ್ಯಾಯಃ

ರಾಜೋವಾಚ—

**ಸ್ವಧಾಮಾನುಗತೇ ಕೃಷ್ಣೇ ಯದುವಂಶವಿಭೂಷಣೇ ।**
**ಕಸ್ಯ ವಂಶೋಽಭವತ್ ಪೃಥ್ವ್ಯಾಮೇತದಾಚಕ್ಷ್ವ ಮೇ ಮುನೇ ॥ ೧**

ಶ್ರೀಶುಕ ಉವಾಚ—

**ಯೋಽಂತ್ಯಃ ಪುರಂಜಯೋ ನಾಮ ಭಾವ್ಯೋ ಬಾರ್ಹದ್ರಥೋ ನೃಪಃ ।**
**ತಸ್ಯಾಮಾತ್ಯಸ್ತು ಶುನಕೋ ಹತ್ವಾ ಸ್ವಾಮಿನಮಾತ್ಮಜಮ್ ॥ ೨**

### ಅಧ್ಯಾಯ ೧

ಕಲಿಯುಗದಲ್ಲಿ ರಾಜ್ಯವನ್ನಾಳತಕ್ಕ ವಿವಿಧ ರಾಜರ ಪ್ರಸ್ತಾವ

ಅನಂತರ ಪರೀಕ್ಷಿತರಾಜನು ಶುಕಮುನಿಗಳನ್ನು ಕುರಿತು "ಮಹರ್ಷಿಗಳೆ, ಯದುಕುಲವಿಭೂಷಣನಾದ ಶ್ರೀಕೃಷ್ಣನು ತನ್ನ ನಿಜಧಾಮಕ್ಕೆ ತೆರಳಿದಮೇಲೆ, ಈ ಭೂಮಿಯಲ್ಲಿ ಯಾರ ವಂಶವು ನಡೆಯಿತು? ಈ ವಿಷಯವನ್ನು ನನಗೆ ಹೇಳಬೇಕು" ಎಂದನು (೧). ಆಗ ಶುಕಮುನಿಗಳು ಇಂತೆಂದರು: "ಬೃಹದ್ರಥನ ವಂಶದಲ್ಲಿ ಕಡೆಯವನಾಗಿ ಪುರಂಜಯನೆಂಬ ರಾಜನು ಜನಿಸುವನೆಂದು ಹಿಂದೆ [1]ಹೇಳಲಾಯಿತಷ್ಟೆ, ಅವನ ಅಮಾತ್ಯನಾದ ಶುನಕನೆಂಬವನು ತನ್ನ ಒಡೆಯನಾದ ಪುರಂಜಯನನ್ನು ವಧಿಸಿ ಪ್ರದ್ಯೋತನೆಂಬ ತನ್ನ ಮಗನನ್ನು ರಾಜಪದವಿಗೇರಿಸುವನು. ಪ್ರದ್ಯೋತನ ಮಗ ಪಾಲಕ. ಅವನ ಮಗನಾದ ವಿಶಾಖಯೂಪ

---

1. ನವಮಸ್ಕಂಧದಲ್ಲಿ (ಅಧ್ಯಾಯ ೨೨) ಈ ವೃತ್ತಾಂತವು ಬಂದಿದೆ. ಅಲ್ಲಿ ಹೇಳಿದ ರಿಪುಂಜಯನೇ ಈ ಅಧ್ಯಾಯದಲ್ಲಿ ಪುರಂಜಯನೆಂದು ಉಕ್ತನಾಗಿದ್ದಾನೆ. ಇದು ಪುರುವಂಶದಲ್ಲಿ ಬಂದ ಮಗಧ ರಾಜರ ವರ್ಣನೆ.

ಪ್ರದ್ಯೋತಸಂಜ್ಞಂ ರಾಜಾನಂ ಕರ್ತಾ ಯತ್ಪಾಲಕಃ ಸುತಃ ।
ವಿಶಾಖಯೂಪಸ್ತತ್ಪುತ್ರೋ ಭವಿತಾ ರಾಜಕಸ್ತತಃ ॥ ೩

ನಂದಿವರ್ಧನಸ್ತತ್ಪುತ್ರಃ ಪಂಚ ಪ್ರದ್ಯೋತನಾ ಇಮೇ ।
ಅಷ್ಟತ್ರಿಂಶೋತ್ತರಶತಂ ಭೋಕ್ಷ್ಯಂತಿ ಪೃಥಿವೀಂ ನೃಪಾಃ ॥ ೪

ಶಿಶುನಾಗಸ್ತತೋ ಭಾವ್ಯಃ ಕಾಕವರ್ಣಸ್ತು ತತ್ಸುತಃ ।
ಕ್ಷೇಮಧರ್ಮಾ ತಸ್ಯ ಸುತಃ ಕ್ಷೇತ್ರಜ್ಞಃ ಕ್ಷೇಮಧರ್ಮಜಃ ॥ ೫

ವಿಧಿಸಾರಃ ಸುತಸ್ತಸ್ಯಾಜಾತಶತ್ರುರ್ಭವಿಷ್ಯತಿ ।
ದರ್ಭಕಸ್ತತ್ಸುತೋ ಭಾವೀ ದರ್ಭಕಸ್ಯಾಜಯಃ ಸ್ಮೃತಃ ॥ ೬

ನಂದಿವರ್ಧನ ಆಜೇಯೋ ಮಹಾನಂದಿಃ ಸುತಸ್ತತಃ ।
ಶಿಶುನಾಗಾ ದಶೈವೈತೇ ಷಷ್ಟ್ಯುತ್ತರಶತತ್ರಯಮ್ ॥ ೭

ಸಮಾ ಭೋಕ್ಷ್ಯಂತಿ ಪೃಥಿವೀಂ ಕುರುಶ್ರೇಷ್ಠ ಕಲೌ ನೃಪಾಃ ।
ಮಹಾನಂದಿಸುತೋ ರಾಜನ್ ಶೂದ್ರೀಗರ್ಭೋದ್ಭವೋ ಬಲೀ ॥ ೮

---

ನೆಂಬವನು ಆಮೇಲೆ ರಾಜನಾಗುವನು (೨–೩). ವಿಶಾಖಯೂಪನ ಮಗ ರಾಜಕ. ಆತನ ಮಗ ನಂದಿವರ್ಧನ. ಪ್ರದ್ಯೋತನಿಂದ ಹಿಡಿದು ಈ ಐವರಿಗೆ ಪ್ರದ್ಯೋತನರೆಂದು ಹೆಸರಾಗುವುದು. ಈ ರಾಜರು ನೂರಮೂವತ್ತೆಂಟು ವರ್ಷಗಳವರೆಗೆ ಪೃಥ್ವಿಯನ್ನಾಳುವರು. ಅನಂತರ ಶಿಶುನಾಗನೆಂಬವನು ಭೂಪತಿಯಾಗುವನು. ಅವನ ಪುತ್ರ ಕಾಕವರ್ಣ. ಆತನ ಪುತ್ರ ಕ್ಷೇಮಧರ್ಮ. ಅವನ ಪುತ್ರನು ಕ್ಷೇತ್ರಜ್ಞ (೪–೫). ಕ್ಷೇತ್ರಜ್ಞನ ಆತ್ಮಜನು ವಿಧಿಸಾರ. ಅವನ ಆತ್ಮಜನು ಅಜಾತಶತ್ರು. ಅವನಿಗೆ ದರ್ಭಕನೆಂಬವನು ಸುತನಾಗಿ ಜನಿಸುವನು. ಅಜಯು ಎಂಬವನು ದರ್ಭಕನ ಸುತ. ಅಜಯನ ಮಗ ನಂದಿವರ್ಧನ. ಅವನ ಮಗ ಮಹಾನಂದಿ. ಈ ಹತ್ತು ಜನರು ಶಿಶುನಾಗರೆಂದು ವಿಖ್ಯಾತರಾಗಿ ಮುನ್ನೂರ ಅರುವತ್ತು ವರ್ಷಗಳವರೆಗೆ ರಾಜ್ಯಭಾರವನ್ನು ನಡೆಸುವರು (೬–೭). ಕುರುಶ್ರೇಷ್ಠ-ಪರೀಕ್ಷಿತ, ಕಲಿಯುಗದಲ್ಲಿ ಈ ಹತ್ತುಮಂದಿ ಶಿಶುನಾಗರು ರಾಜ್ಯವನ್ನಾಳುವರು. ಅನಂತರ ಮಹಾನಂದಿಗೆ ಶೂದ್ರೀಗರ್ಭದಲ್ಲಿ ನಂದನೆಂಬ ಬಲಿಷ್ಠನಾದ ಪುತ್ರನು

ಮಹಾಪದ್ಮಪತಿಃ ಕಶ್ಚಿನ್ನಂದಃ ಕ್ಷತ್ರವಿನಾಶಕೃತ್ ।
ತತೋ ನೃಪಾ ಭವಿಷ್ಯಂತಿ ಶೂದ್ರಪ್ರಾಯಾಸ್ತ್ವಧಾರ್ಮಿಕಾಃ ॥ ೯

ಸ ಏಕಚ್ಛತ್ರಾಂ ಪೃಥಿವೀಮನುಲ್ಲಂಘಿತಶಾಸನಃ ।
ಶಾಸಿಷ್ಯತಿ ಮಹಾಪದ್ಮೋ ದ್ವಿತೀಯ ಇವ ಭಾರ್ಗವಃ ॥ ೧೦

ತಸ್ಯ ಚಾಷ್ಟೌ ಭವಿಷ್ಯಂತಿ ಸುಮಾಲ್ಯಪ್ರಮುಖಾಃ ಸುತಾಃ ।
ಯ ಇಮಾಂ ಭೋಕ್ಷ್ಯಂತಿ ಮಹೀಂ ರಾಜಾನಃ ಸ್ಮ ಶತಂ ಸಮಾಃ ॥ ೧೧

ನವನಂದಾನ್ ದ್ವಿಜಃ ಕಶ್ಚಿತ್ ಪ್ರಪನ್ನಾನುದ್ಧರಿಷ್ಯತಿ ।
ತೇಷಾಮಭಾವೇ ಜಗತೀಂ ಮೌರ್ಯಾ ಭೋಕ್ಷ್ಯಂತಿ ವೈ ಕಲೌ ॥ ೧೨

ಸ ಏವ ಚಂದ್ರಗುಪ್ತಂ ವೈ ದ್ವಿಜೋ ರಾಜ್ಯೇಽಭಿಷೇಕ್ಷ್ಯತಿ ।
ತತ್ಸುತೋ ವಾರಿಸಾರಸ್ತು ತತಶ್ಚಾಶೋಕವರ್ಧನಃ ॥ ೧೩

---

ಜನಿಸುವನು (೮). ಈ ನಂದನು [1]ಮಹಾಪದ್ಮಕ್ಕೆ ಅಧಿಪತಿಯಾಗಿ ಕ್ಷತ್ರಿಯರ ವಿನಾಶಕ್ಕೆ ಕಾರಣನಾಗುವನು. ಅಲ್ಲಿಂದ ಮುಂದೆ ಶೂದ್ರರೂ ಅಧಾರ್ಮಿಕರೂ ಆದ ಭೂಪಾಲರು ಪೃಥ್ವಿಯನ್ನಾಳುವರು (೯). ಮಹಾಪದ್ಮನೆಂದು ವಿಖ್ಯಾತನಾದ ನಂದನು, ಎರಡನೆಯ ಪರಶುರಾಮನೋ ಎಂಬಂತೆ ಕ್ಷತ್ರಿಯ ವಿನಾಶಕಾರಿಯಾಗಿ ತನ್ನ ಆಜ್ಞೆಯನ್ನು ಯಾರೂ ಮೀರದಂತೆ ಏಕಚ್ಛತ್ರಾಧಿಪತಿಯಾಗಿ ರಾಜ್ಯಭಾರವನ್ನು ನಡೆಸುವನು (೧೦). ಅವನಿಗೆ ಸುಮಾಲ್ಯ ಮುಂತಾದ ಹೆಸರಿರುವ ಎಂಟುಜನ ಮಕ್ಕಳಾಗುವರು. ಅವರು ಈ ಭೂಮಿಯನ್ನು ಒಂದುನೂರು ವರ್ಷಗಳವರೆಗೆ ರಾಜರಾಗಿ ಆಳುವರು. (ನಂದ ಮತ್ತು ಅವನ ಮಕ್ಕಳೂ ಸೇರಿ) ನವನಂದರೆಂದು ವಿಖ್ಯಾತರಾದ ಇವರನ್ನು (ಚಾಣಕ್ಯನೆಂಬ) ಬ್ರಾಹ್ಮಣನೊಬ್ಬನು ನಿರ್ಮೂಲಗೊಳಿಸುವನು. ಹೀಗೆ ಈ ರಾಜರ ವಿನಾಶವಾದಮೇಲೆ ಮೌರ್ಯರೆಂಬವರು ಈ ಭೂಮಿಯನ್ನು ಕಲಿಯುಗದಲ್ಲಿ ಭೋಗಿಸುವರು (೧೧–೧೨). ಹೇಗೆಂದರೆ, ನವನಂದರನ್ನು ಉನ್ಮೂಲನಗೊಳಿಸಿದ (ಚಾಣಕ್ಯನೆಂಬ) ಬ್ರಾಹ್ಮಣನೇ ಮೌರ್ಯರಲ್ಲಿ ಪ್ರಥಮನಾದ ಚಂದ್ರಗುಪ್ತನನ್ನು ದೊರೆಯನ್ನಾಗಿ ಮಾಡಿ ರಾಜ್ಯದಲ್ಲಿ ಪಟ್ಟಗಟ್ಟಿ

1. ಮಹಾಪದ್ಮವೆಂದರೆ ಒಂದು ದೊಡ್ಡ ಸಂಖ್ಯೆ. ಅಷ್ಟು ಸಂಖ್ಯೆಯುಳ್ಳ ಸೈನ್ಯಕ್ಕೆ ಅಥವಾ ಧನಕ್ಕೆ ಅಧಿಪತಿಯಾದ್ದರಿಂದ ನಂದನಿಗೆ ಮಹಾಪದ್ಮನೆಂದೂ ಹೆಸರಿತ್ತು.

ಸುಯಶಾ ಭವಿತಾ ತಸ್ಯ ಸಂಗತಃ ಸುಯಶಃಸುತಃ ।
ಶಾಲಿಶೂಕಸ್ತತಸ್ತಸ್ಯ ಸೋಮಶರ್ಮಾ ಭವಿಷ್ಯತಿ ॥ ೧೪

ಶತಧನ್ವಾ ತತಸ್ತಸ್ಯ ಭವಿತಾ ತದ್ ಬೃಹದ್ರಥಃ ।
ಮೌರ್ಯಾ ಹ್ಯೇತೇ ದಶ ನೃಪಾಃ ಸಪ್ತತ್ರಿಂಶಚ್ಛತೋತ್ತರಮ್ ।
ಸಮಾ ಭೋಕ್ಷ್ಯಂತಿ ಪೃಥಿವೀಂ ಕಲೌ ಕುರುಕುಲೋದ್ವಹ ॥ ೧೫

ಹತ್ವಾ ಬೃಹದ್ರಥಂ ಮೌರ್ಯಂ ತಸ್ಯ ಸೇನಾಪತಿಃ ಕಲೌ ।
ಪುಷ್ಯಮಿತ್ರಸ್ತು ಶುಂಗಾಹ್ವಃ ಸ್ವಯಂ ರಾಜ್ಯಂ ಕರಿಷ್ಯತಿ ।
ಅಗ್ನಿಮಿತ್ರಸ್ತತಸ್ತಸ್ಮಾತ್ ಸುಜ್ಯೇಷ್ಠೋಽಥ ಭವಿಷ್ಯತಿ ॥ ೧೬

ವಸುಮಿತ್ರೋ ಭದ್ರಕಶ್ಚ ಪುಲಿಂದೋ ಭವಿತಾ ತತಃ ।
ತತೋ ಘೋಷಃ ಸುತಸ್ತಸ್ಮಾದ್ ವಜ್ರಮಿತ್ರೋ ಭವಿಷ್ಯತಿ ॥ ೧೭

---

ವನು. ಚಂದ್ರಗುಪ್ತನ ಮಗ [1]ವಾರಿಸಾರ. ಅವನ ಮಗ ಅಶೋಕವರ್ಧನ. ಆತನ ಪುತ್ರ ಸುಯಶ. ಸುಯಶನ ಪುತ್ರನು ಸಂಗತ. ಶಾಲಿಶೂಕನು ಸಂಗತನ ತನಯ. ಆತನಿಗೆ ಸೋಮಶರ್ಮನೆಂಬ ತನಯನು ಹುಟ್ಟುವನು (೧೩–೧೪). ಅವನ ಪುತ್ರ ಶತಧನ್ವ. ಅವನ ಪುತ್ರ ಬೃಹದ್ರಥ. ಈ [2]ಹತ್ತುಮಂದಿ ಮೌರ್ಯ ವಂಶದ ರಾಜರು. ನೂರಮೂವತ್ತೇಳು ವರ್ಷಗಳವರೆಗೆ ರಾಜ್ಯವನ್ನಾಳುವರು. ಬಳಿಕ ಪುಷ್ಯಮಿತ್ರನೆಂಬ ಶುಂಗವಂಶೀಯನಾದ ಸೇನಾಪತಿಯು ಬೃಹದ್ರಥ ಮೌರ್ಯನನ್ನು ಕೊಂದು ತಾನೇ ರಾಜ್ಯವನ್ನಾಳುವನು. ಈ ಪುಷ್ಯಮಿತ್ರನ ಮಗ ಅಗ್ನಿಮಿತ್ರ. ಅವನಿಗೆ ಸುಜ್ಯೇಷ್ಠನೆಂಬ ಪುತ್ರನು ಹುಟ್ಟುವನು (೧೫–೧೬). ತರುವಾಯ ಸುಜ್ಯೇಷ್ಠನಿಗೆ ವಸುಮಿತ್ರನೂ ಅವನಿಗೆ ಭದ್ರಕನೂ ಆತನಿಗೆ ಪುಲಿಂದನೂ ಆತನಿಗೆ ಘೋಷನೂ ಘೋಷನಿಗೆ ವಜ್ರಮಿತ್ರನೂ ಪುತ್ರರಾಗಿ ಜನಿಸುವರು. ವಜ್ರಮಿತ್ರನ ಮಗ ಭಾಗವತನೆಂಬವನು. ಭಾಗವತನ ಮಗ ದೇವಭೂತಿ. ಪುಷ್ಯಮಿತ್ರನಿಂದ ಹಿಡಿದು ಈ ಹತ್ತುಮಂದಿ ಶುಂಗರು ನೂರುವರ್ಷಗಳಿಗೂ ಹೆಚ್ಚುಕಾಲದವರೆಗೆ

---

1. ಬಿಂದುಸಾರನೆಂದು ವಿಷ್ಣುಪುರಾಣದಲ್ಲಿದೆ. ಇದೇ ರೀತಿಯಲ್ಲಿ ರಾಜರ ಹೆಸರುಗಳೂ ಅನುಕ್ರಮವೂ ವಿಷ್ಣುಪುರಾಣಕ್ಕಿಂತ ಹಲವಾರು ಕಡೆ ವಿಭಿನ್ನವಾಗಿವೆ. (ವಿ.ಪು. ೪–೨೪)

2. ಮೌರ್ಯರಲ್ಲಿ ಸುಯಶನ ಮಗ ದಶರಥನೆಂದು ವಿಷ್ಣುಪುರಾಣದಲ್ಲಿದೆ. ಅವನನ್ನು ಸೇರಿಸಿಕೊಂಡರೆ ಮಾತ್ರ ಮೌರ್ಯರು ಹತ್ತುಮಂದಿಯಾಗುತ್ತಾರೆ.

ತತೋ ಭಾಗವತಸ್ತಸ್ಮಾದ್ ದೇವಭೂತಿರಿತಿ ಶ್ರುತಃ ।
ಶುಂಗಾ ದಶೈತೇ ಭೋಕ್ಷ್ಯಂತಿ ಭೂಮಿಂ ವರ್ಷಶತಾಧಿಕಮ್ ॥ ೧೮

ತತಃ ಕಣ್ವಾನಿಯಂ ಭೂಮಿರ್ಯಾಸ್ಯತ್ಯಲ್ಪಗುಣಾನ್ ನೃಪ ।
ಶುಂಗಂ ಹತ್ವಾ ದೇವಭೂತಿಂ ಕಣ್ವೋಽಮಾತ್ಯಸ್ತು ಕಾಮಿನಮ್ ॥ ೧೯

ಸ್ವಯಂ ಕರಿಷ್ಯತೇ ರಾಜ್ಯಂ ವಸುದೇವೋ ಮಹಾಮತಿಃ ।
ತಸ್ಯ ಪುತ್ರಸ್ತು ಭೂಮಿತ್ರಸ್ತಸ್ಯ ನಾರಾಯಣಃ ಸುತಃ ।
ನಾರಾಯಣಸ್ಯ ಭವಿತಾ ಸುಶರ್ಮಾ ನಾಮ ವಿಶ್ರುತಃ ॥ ೨೦

ಕಾಣ್ವಾಯನಾ ಇಮೇ ಭೂಮಿಂ ಚತ್ವಾರಿಂಶಚ್ಚ ಪಂಚ ಚ ।
ಶತಾನಿ ತ್ರೀಣಿ ಭೋಕ್ಷ್ಯಂತಿ ವರ್ಷಾಣಾಂ ಚ ಕಲೌ ಯುಗೇ ॥ ೨೧

ಹತ್ವಾ ಕಾಣ್ವಂ ಸುಶರ್ಮಾಣಂ ತದ್‌ಭೃತ್ಯೋ ವೃಷಲೋ ಬಲೀ ।
ಗಾಂ ಭೋಕ್ಷ್ಯತ್ಯಂಧ್ರಜಾತೀಯಃ ಕಂಚಿತ್ ಕಾಲಮಸತ್ತಮಃ ॥ ೨೨

ಕೃಷ್ಣನಾಮಾಥ ತದ್ ಭ್ರಾತಾ ಭವಿತಾ ಪೃಥಿವೀಪತಿಃ ।
ಶ್ರೀಶಾಂತಕರ್ಣಸ್ತತ್ಪುತ್ರಃ ಪೌರ್ಣಮಾಸಸ್ತು ತತ್ಸುತಃ ॥ ೨೩

---

ಭೂಮಿಯನ್ನು ಪಾಲಿಸುವರು (೧೭–೧೮). ಪರೀಕ್ಷಿತರಾಜ, ಅನಂತರ ಈ ಪೃಥ್ವಿಯು ಗುಣಹೀನರಾದ ಕಣ್ವರೆಂಬವರ ವಶಕ್ಕೆ ಬರುವುದು. ಶುಂಗವಂಶದವನೂ ಕಾಮುಕನೂ ಆದ ಆ ದೇವಭೂತಿಯನ್ನು ಅವನ ಮಂತ್ರಿಯೂ ಬುದ್ಧಿಶಾಲಿಯೂ ಆದ (ಕಣ್ವವಂಶದ) ವಸುದೇವನೆಂಬವನು ವಧಿಸಿ, ತಾನೇ ರಾಜ್ಯಾಧಿಕಾರವನ್ನು ವಹಿಸಿಕೊಳ್ಳುವನು. ವಸುದೇವನ ಮಗ ಭೂಮಿತ್ರ. ಭೂಮಿತ್ರನ ಮಗ [1] ನಾರಾಯಣ (೧೯–೨೦). ಕಣ್ವವಂಶದವರಾದ ಈ ಕಾಣ್ವಾಯನರು ಮುನ್ನೂರ ನಲವತ್ತೈದು ವರ್ಷಗಳವರೆಗೆ ಕಲಿಯುಗದಲ್ಲಿ ಭೂಮಿಯನ್ನಾಳುವರು. ಸುಶರ್ಮನೆಂಬ ಕಾಣ್ವನನ್ನು ಅವನ ಭೃತ್ಯನಾದ ಬಲಿಯೆಂಬ ಹೆಸರಿನ ಶೂದ್ರನೊಬ್ಬನು ಕೊಂದು ಸ್ವಲ್ಪಕಾಲದವರೆಗೆ ರಾಜ್ಯವನ್ನಾಳುವನು. ಆತನು ಆಂಧ್ರದೇಶೀಯನೂ ದುಷ್ಟನೂ ಆಗಿರುತ್ತಾನೆ (೨೧–೨೨). ಅನಂತರ ಅವನ ತಮ್ಮನಾದ ಕೃಷ್ಣ ಎಂಬವನು ರಾಜನಾಗುವನು. ಕೃಷ್ಣನ ಮಗ ಶಾಂತಕರ್ಣ. ಅವನ ಮಗ

1. ನಾರಾಯಣನ ಮಗ ಸುಶರ್ಮ (ವಿ. ಪುರಾಣ). 345 ವರ್ಷಗಳವರೆಗೆ ಕಾಣ್ವರು ರಾಜ್ಯವಾಳಬೇಕಾದರೆ ಈ ವಂಶದ ಇನ್ನೂ ಹಲವರು ರಾಜರಿದ್ದಿರಬೇಕು.

ಲಂಬೋದರಸ್ತು ತತ್ಪುತ್ರಸ್ತಸ್ಮಾಚ್ಚ ವಿಕಲೋ ನೃಪಃ ।
ಮೇಘಸ್ವಾತಿಶ್ಚ ವಿಕಲಾದಟಮಾನಸ್ತು ತಸ್ಯ ಚ ॥ ೨೪

ಅನಿಷ್ಟಕರ್ಮಾ ಹಾಲೇಯಸ್ತಲಕಸ್ತಸ್ಯ ಚಾತ್ಮಜಃ ।
ಪುರೀಷಭೀರುಸ್ತತ್ಪುತ್ರಸ್ತತೋ ರಾಜಾ ಸುನಂದನಃ ॥ ೨೫

ಚಕೋರೋ ನವನೋ ಯತ್ರ ಶಿವಸ್ವಾತಿರರಿಂದಮ ।
ತಸ್ಯಾಪಿ ಗೋಮತೀಪುತ್ರಃ ಪುರೀಮಾನ್ ಭವಿತಾ ತತಃ ॥ ೨೬

ಮೇದಃಶಿರಾಃ ಶಿವಸ್ಕಂದೋ ಯಜ್ಞಶ್ರೀಸ್ತತ್ಸುತಸ್ತತಃ ।
ವಿಜಯಸ್ತತ್ಸುತೋ ಭಾವ್ಯಶ್ಚಂದ್ರವಿಜ್ಞಃ ಸಲೋಮಧಿಃ ॥ ೨೭

ಏತೇ ತ್ರಿಂಶನ್ನೃಪತಯಶ್ಚತ್ವಾರ್ಯಬ್ದಶತಾನಿ ಚ ।
ಷಟ್‌ಪಂಚಾಶಚ್ಚ ಪೃಥಿವೀಂ ಭೋಕ್ಷ್ಯಂತಿ ಕುರುನಂದನ ॥ ೨೮

ಸಪ್ತಾಭೀರಾ ಆವಭೃತ್ಯಾ ದಶಗರ್ದಭಿನೋ ನೃಪಾಃ ।
ಕಂಕಾಃ ಷೋಡಶ ಭೂಪಾಲಾ ಭವಿಷ್ಯಂತ್ಯತಿಲೋಲುಪಾಃ ॥ ೨೯

---

ಪೌರ್ಣಮಾಸ. ಆತನ ಮಗ ಲಂಬೋದರ. ಅನಂತರ ವಿಕಲನು ರಾಜನಾಗುವನು. ವಿಕಲನಾದಮೇಲೆ ಮೇಘಸ್ವಾತಿ. ಆತನ ಮಗ ಅಟಮಾನ (೨೩–೨೪). ಅನಂತರ ಅನಿಷ್ಟಕರ್ಮ, ಹಾಲೇಯ, ತಲಕ, ಪುರೀಷಭೀರು (ಪುರುಷಭಾನು), ಸುನಂದನ, ಚಕೋರ—ಎಂಬವರು ಕ್ರಮವಾಗಿ ರಾಜರಾಗುವರು. ಅರಿಂದಮ-ಪರೀಕ್ಷಿತರಾಜ, ಈ ಚಕೋರನ ವಂಶದವರಲ್ಲಿ ಶಿವಸ್ವಾತಿ ಎಂಬವನು ಒಂಬತ್ತನೆಯವನು. ಅವನ ಮಗ ಗೋಮತೀಪುತ್ರ. ಅವನಿಗೆ ಪುರೀಮಾನ್ ಎಂಬವನು ಪುತ್ರನಾಗಿ ಜನಿಸುವನು (೨೫–೨೬). ಆಮೇಲೆ ಕ್ರಮವಾಗಿ ಮೇದಃಶಿರ (ವೇದಶರ), ಶಿವಸ್ಕಂದ, ಯಜಶ್ರೀ, ವಿಜಯ, ಭಾವ್ಯ, ಚಂದ್ರವಿಜ್ಞ, ಸಲೋಮಧಿ—ಎಂಬವರು ರಾಜರಾಗುವರು. ಈ ಪ್ರಕಾರವಾಗಿ [1]ಮೂವತ್ತುಮಂದಿ ಆಂಧ್ರವಂಶೀಯರು ರಾಜರಾಗಿ ನಾನೂರು ಐವತ್ತಾರು ವರ್ಷಗಳವರೆಗೆ ಈ ಪೃಥ್ವಿಯನ್ನು ಭೋಗಿಸುವರು (೨೭–೨೮). ಅನಂತರ ಏಳುಮಂದಿ ಆಭೀರರು ಅವಭೃತಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುವರು. ಆಮೇಲೆ ಹತ್ತುಮಂದಿ ಗರ್ದಭಿಗಳೂ

1. ಪಾಠದೋಷವಿರುವುದರಿಂದ ಸಂಖ್ಯೆಯು ತಾಳೆಯಾಗುವುದಿಲ್ಲ.

ತತೋಽಷ್ಟೌ ಯವನಾ ಭಾವ್ಯಾಶ್ಚತುರ್ದಶ ತುರುಷ್ಕಕಾಃ ।
ಭೂಯೋ ದಶ ಗುರುಂಡಾಶ್ಚ ಮೌನಾ ಏಕಾದಶೈವ ತು ॥ ೩೦
ಏತೇ ಭೋಕ್ಷ್ಯಂತಿ ಪೃಥಿವೀಂ ದಶವರ್ಷಶತಾನಿ ಚ ।
ನವಾಧಿಕಾಂ ಚ ನವತಿಂ ಮೌನಾ ಏಕಾದಶ ಕ್ಷಿತಿಮ್ ॥ ೩೧
ಭೋಕ್ಷ್ಯಂತ್ಯಬ್ದಶತಾನ್ಯಂಗ ತ್ರೀಣಿ ತೈಃ ಸಂಸ್ಥಿತೇ ತತಃ ।
ಕಿಲಕಿಲಾಯಾಂ ನೃಪತಯೋ ಭೂತನಂದೋಽಥ ವಂಗಿರಿಃ ॥ ೩೨
ಶಿಶುನಂದಿಶ್ಚ ತದ್ ಭ್ರಾತಾ ಯಶೋನಂದಿಃ ಪ್ರವೀರಕಃ ।
ಇತ್ಯೇತೇ ವೈ ವರ್ಷಶತಂ ಭವಿಷ್ಯಂತ್ಯಧಿಕಾನಿ ಷಟ್ ॥ ೩೩
ತೇಷಾಂ ತ್ರಯೋದಶ ಸುತಾ ಭವಿತಾರಶ್ಚ ಬಾಹ್ಲಿಕಾಃ ।
ಪುಷ್ಯಮಿತ್ರೋಽಥ ರಾಜನ್ಯೋ ದುರ್ಮಿತ್ರೋಽಸ್ಯ ತಥೈವ ಚ ॥ ೩೪
ಏಕಕಾಲಾ ಇಮೇ ಭೂಪಾಃ ಸಪ್ತಾಂಧ್ರಾಃ ಸಪ್ತ ಕೋಸಲಾಃ ।
ವಿದೂರಪತಯೋ ಭಾವ್ಯಾ ನಿಷಧಾಸ್ತತ ಏವ ಹಿ ॥ ೩೫

---

ಹದಿನಾರು ಮಂದಿ ಲೋಭಿಗಳಾದ [1]ಕಂಕರೂ ಕ್ರಮವಾಗಿ ಭೂಪತಿಗಳಾಗುವರು. ಆಮೇಲೆ ಕ್ರಮವಾಗಿ ಎಂಟು ಜನ ಯವನರೂ ಹದಿನಾಲ್ಕು ಜನ ತುರುಷ್ಕರೂ ಗುರುಂಡರು ಹತ್ತು ಜನ, ಮೌನರು ಹನ್ನೊಂದು ಜನ ಕ್ರಮವಾಗಿ ರಾಜರಾಗುವರು (೨೯–೩೦). (ಆಭೀರರಿಂದ ಹಿಡಿದು ಗುರುಂಡರವರೆಗೆ ಅರುವತ್ತೈದು ಮಂದಿ) ರಾಜರು ೧೦೯೯ ವರ್ಷಗಳವರೆಗೆ ಕ್ರಮವಾಗಿ ಈ ಪೃಥ್ವಿಯನ್ನು ಭೋಗಿಸುವರು. ಹನ್ನೊಂದು ಮಂದಿ ಮೌನರಾದರೋ ಮುನ್ನೂರು ವರ್ಷಗಳವರೆಗೆ ಇದನ್ನು ಭೋಗಿಸುವರು. ಇವರೆಲ್ಲರೂ ಗತಿಸಿದಮೇಲೆ ಕಿಲಕಿಲಾನಗರದಲ್ಲಿ ಮುಂದೆ ಹೇಳುವ ಪೃಥ್ವೀಪಾಲರಾಗುವರು. ಭೂತನಂದ, ಅನಂತರದಲ್ಲಿ ವಂಗಿರಿ (೩೧–೩೨). ಆಮೇಲೆ ಶಿಶುನಂದಿ, ಅವನ ಸೋದರ ಯಶೋನಂದಿ, ಪ್ರವೀರಕ. ಈ ರಾಜರು ಒಂದುನೂರ ಆರು ವರ್ಷಗಳವರೆಗೆ ರಾಜ್ಯವಾಳುವರು. ಆಮೇಲೆ ಇವರಿಗೆ ಬಾಹ್ಲಿಕರೆಂಬ [2]ಹೆಸರಿನ ಹದಿಮೂರು ಮಂದಿ ಪುತ್ರರಾಗಿ ರಾಜ್ಯವನ್ನು ಪಾಲಿಸುವರು. ಅನಂತರ ಪುಷ್ಯಮಿತ್ರನೆಂಬ ರಾಜನ್ಯನೂ ಅವನ ಮಗ ದುರ್ಮಿತ್ರನೂ ರಾಜ್ಯಭಾರವನ್ನು ನಡೆಸುವರು (೩೩–೩೪). ಏಳು ಮಂದಿ

---

1. ವಿ.ಪು. ಪ್ರಕಾರ ಇವರು ಶಕರು, ಕಂಕರಲ್ಲ.

2. ವಿ.ಪು. ಪ್ರಕಾರ ಇವರೆಲ್ಲರೂ ಯವನರು. ಬಾಹ್ಲಿಕರು ಬೇರೆಯವರು.

ಮಾಗಧಾನಾಂ ತು ಭವಿತಾ ವಿಶ್ವಸ್ಫೂರ್ಜಿಃ ಪುರಂಜಯಃ ।
ಕರಿಷ್ಯತ್ಯಪರೋ ವರ್ಣಾನ್ ಪುಲಿಂದಯದುಮದ್ರಕಾನ್ ॥ ೩೬

ಪ್ರಜಾಶ್ಚಾಬ್ರಹ್ಮಭೂಯಿಷ್ಠಾಃ ಸ್ಥಾಪಯಿಷ್ಯತಿ ದುರ್ಮತಿಃ ।
ವೀರ್ಯವಾನ್ ಕ್ಷತ್ರಮುತ್ಸಾದ್ಯ ಪದ್ಮಾವತ್ಯಾಂ ಸ ವೈ ಪುರಿ ।
ಅನುಗಂಗಾಮಾಪ್ರಯಾಗಂ ಗುಪ್ತಾಂ ಭೋಕ್ಷ್ಯತಿ ಮೇದಿನೀಮ್ ॥ ೩೭

ಸೌರಾಷ್ಟ್ರಾವಂತ್ಯಾಭೀರಾಶ್ಚ ಶೂರಾ ಅರ್ಬುದಮಾಲವಾಃ ।
ವ್ರಾತ್ಯಾ ದ್ವಿಜಾ ಭವಿಷ್ಯಂತಿ ಶೂದ್ರಪ್ರಾಯಾ ಜನಾಧಿಪಾಃ ॥ ೩೮

ಸಿಂಧೋಸ್ತಟಂ ಚಂದ್ರಭಾಗಾಂ ಕೌಂತೀಂ ಕಾಶ್ಮೀರಮಂಡಲಮ್ ।
ಭೋಕ್ಷ್ಯಂತಿ ಶೂದ್ರಾ ವ್ರಾತ್ಯಾದ್ಯಾ ಮ್ಲೇಚ್ಛಾಶ್ಚಾಬ್ರಹ್ಮವರ್ಚಸಃ ॥ ೩೯

ತುಲ್ಯಕಾಲಾ ಇಮೇ ರಾಜನ್ ಮ್ಲೇಚ್ಛಪ್ರಾಯಾಶ್ಚ ಭೂಭೃತಃ ।
ಏತೇಽಧರ್ಮಾನೃತಪರಾಃ ಫಲ್ಗುದಾಸ್ತೀವ್ರಮನ್ಯವಃ ॥ ೪೦

---

ಆಂಧ್ರರೂ ಏಳು ಮಂದಿ ಕೋಸಲರೂ ವೈದೂರರೂ ನಿಷಧರೂ ಆಯಾ ಹೆಸರಿನ ರಾಜ್ಯಗಳಲ್ಲಿ ಮಂಡಲಾಧಿಪತಿಗಳಾಗಿ ಒಂದೇ ಕಾಲದಲ್ಲಿ ಬೇರೆ ಬೇರೆ ಕಡೆ ರಾಜರಾಗಿರುವರು. ಮಗಧರಾಜರಲ್ಲಿ ಪುರಂಜಯನೆಂದು ಖ್ಯಾತನಾದ ವಿಶ್ವಸ್ಫೂರ್ಜಿಯು ವರ್ಣಸಾಂಕರ್ಯವನ್ನು ಮಾಡಿ ಪುಲಿಂದ, ಯದು, ಮದ್ರಕರೆಂಬ (ಮ್ಲೇಚ್ಛಸದೃಶ) ಪ್ರಜೆಗಳ ನಿರ್ಮಾಣಕ್ಕೆ ಕಾರಣನಾಗುವನು (೩೫–೩೬). ಈ ದುರ್ಬುದ್ಧಿಯುಳ್ಳ ದೊರೆಯು ಬ್ರಾಹ್ಮಣಾದಿ ವರ್ಣಗಳನ್ನು ಕೆಡಿಸಿ ಪುಲಿಂದಾದಿಗಳ ಸ್ಥಾಪಕನಾಗುವನು. ಈತನು ವೀರನಾಗಿದ್ದು ಕ್ಷತ್ರಿಯ ವಂಶವನ್ನು ನಿರ್ಮೂಲಗೊಳಿಸಿ, ಗಂಗಾತೀರದಲ್ಲಿ ಪ್ರಯಾಗದ ವರೆಗಿನ ಭೂಮಿಯನ್ನು ಪಾಲಿಸುತ್ತ, ಪದ್ಮಾವತಿಯೆಂಬ ರಾಜಧಾನಿಯಲ್ಲಿ ನೆಲೆಸುವನು (೩೭). ಆಗ ಸೌರಾಷ್ಟ್ರ, ಅವಂತಿ, ಆಭೀರ, ಶೂರ, ಅರ್ಬುದ, ಮಾಲವ ರಾಜ್ಯಗಳಲ್ಲಿರುವ ದ್ವಿಜರು ಉಪನಯನವನ್ನು ತ್ಯಜಿಸಿ ವ್ರಾತ್ಯರಾಗುವರು. ರಾಜರೆಲ್ಲರೂ ಶೂದ್ರರೇ ಆಗಿರುವರು. ವೈದಿಕಾಚಾರ ಶೂನ್ಯರಾದ ಶೂದ್ರರೂ ವ್ರಾತ್ಯರೂ ಮ್ಲೇಚ್ಛರೂ ಸಹ ಸಿಂಧೂನದೀತೀರ, ಚಂದ್ರಭಾಗಾನದೀಪ್ರಾಂತ, ಕುಂತೀದೇಶ, ಕಾಶ್ಮೀರಮಂಡಲಗಳನ್ನು ಆಳುವರು (೩೮–೩೯). ಪರೀಕ್ಷಿತರಾಜ, ಮ್ಲೇಚ್ಛಪ್ರಾಯರಾದ ಈ ಭೂಪತಿಗಳು ಸಮಕಾಲದಲ್ಲಿಯೇ ಬೇರೆಬೇರೆ ದೇಶಗಳನ್ನು ಆಳುತ್ತಿರುವರು. ಇವರು ಅಧರ್ಮ

ಸ್ತ್ರೀಬಾಲಗೋದ್ವಿಜಘ್ನಾಶ್ಚ ಪರದಾರಧನಾದೃತಾಃ ।
ಉದಿತಾಸ್ತಮಿತಪ್ರಾಯಾ ಅಲ್ಪಸತ್ತ್ವಾಲ್ಪಕಾಯುಷಃ ॥ ೪೧

ಅಸಂಸ್ಕೃತಾಃ ಕ್ರಿಯಾಹೀನಾ ರಜಸಾ ತಮಸಾಽಽವೃತಾಃ ।
ಪ್ರಜಾಸ್ತೇ ಭಕ್ಷಯಿಷ್ಯಂತಿ ಮ್ಲೇಚ್ಛಾ ರಾಜನ್ಯರೂಪಿಣಃ ॥ ೪೨

ತನ್ನಾಥಾಸ್ತೇ ಜನಪದಾಸ್ತಚ್ಛೀಲಾಚಾರವಾದಿನಃ ।
ಅನ್ಯೋನ್ಯತೋ ರಾಜಭಿಶ್ಚ ಕ್ಷಯಂ ಯಾಸ್ಯಂತಿ ಪೀಡಿತಾಃ ॥ ೪೩

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ಪ್ರಥಮಾಧ್ಯಾಯಃ



ನಿರತರೂ ಸುಳ್ಳು ಹೇಳತಕ್ಕವರೂ ಆಗಿರುತ್ತಾರೆ. ಇವರು ದಾನಮಾಡುವುದು ಅತ್ಯಲ್ಪ. ಇವರಿಗೆ ಕೋಪವು ಮಾತ್ರ ಅಧಿಕವಾಗಿರುತ್ತದೆ (೪೦). ಸ್ತ್ರೀ-ಬಾಲ-ಗೋ-ದ್ವಿಜರನ್ನು ಕೊಲ್ಲುವುದಕ್ಕೆ ಇವರು ಹೇಸುವುದಿಲ್ಲ. ಪರಸ್ತ್ರೀಕಾಮುಕರೂ ಧನಲೋಭಿಗಳೂ ಆಗಿರುತ್ತಾರೆ. ಅಲ್ಪಸತ್ತ್ವರೂ ಅಲ್ಪಾಯುಷ್ಕರೂ ಆದ ಈ ಭೂಪರು ಹುಟ್ಟುತ್ತ ಸಾಯುತ್ತ ಇರುವರು. ಸಂಸ್ಕೃತಿಹೀನರೂ ಆಚಾರಶೂನ್ಯರೂ ರಜೋಗುಣತಮೋಗುಣಗಳಿಂದ ತುಂಬಿದವರೂ ಆಗಿರುತ್ತಾರೆ. ರಾಜರೂಪದಲ್ಲಿರುವ ಈ ಮ್ಲೇಚ್ಛರು ಪ್ರಜೆಗಳನ್ನು ತಿಂದುಬಿಡುತ್ತಾರೆ! ಆ ರಾಜರಿಗೆ ತಕ್ಕಂತೆ ಆ ದೇಶಗಳಲ್ಲಿರುವ ಪ್ರಜೆಗಳ ಶೀಲ, ಆಚಾರ, ಮಾತುಗಳು ಇರುತ್ತವೆ. ಈ ಪ್ರಜೆಗಳು ಅನ್ಯೋನ್ಯವಾಗಿ ಹೊಡೆದಾಡುತ್ತ ರಾಜರ ಪೀಡೆಗೂ ಸಿಕ್ಕಿ ನಶಿಸಿಹೋಗುವರು (೪೧–೪೩).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ದ್ವಾದಶಸ್ಕಂಧದಲ್ಲಿ
ಒಂದನೆಯ ಅಧ್ಯಾಯ



*

# ದ್ವಿತೀಯೋಧ್ಯಾಯಃ

ಶ್ರೀಶುಕ ಉವಾಚ—

ತತಶ್ಚಾನುದಿನಂ ಧರ್ಮಃ ಸತ್ಯಂ ಶೌಚಂ ಕ್ಷಮಾ ದಯಾ ।
ಕಾಲೇನ ಬಲಿನಾ ರಾಜನ್ ನಂಕ್ಷ್ಯತ್ಯಾಯುರ್ಬಲಂ ಸ್ಮೃತಿಃ ॥ ೧

ವಿತ್ತಮೇವ ಕಲೌ ನೄಣಾಂ ಜನ್ಮಾಚಾರಗುಣೋದಯಃ ।
ಧರ್ಮನ್ಯಾಯವ್ಯವಸ್ಥಾಯಾಂ ಕಾರಣಂ ಬಲಮೇವ ಹಿ ॥ ೨

ದಾಂಪತ್ಯೇಽಭಿರುಚಿರ್ಹೇತುರ್ಮಾಯೈವ ವ್ಯಾವಹಾರಿಕೇ ।
ಸ್ತ್ರೀತ್ವೇ ಪುಂಸ್ತ್ವೇ ಚ ಹಿ ರತಿರ್ವಿಪ್ರತ್ವೇ ಸೂತ್ರಮೇವ ಹಿ ॥ ೩

ಲಿಂಗಮೇವಾಶ್ರಮಖ್ಯಾತಾವನ್ಯೋನ್ಯಾಪತ್ತಿಕಾರಣಮ್ ।
ಅವೃತ್ತ್ಯಾ ನ್ಯಾಯದೌರ್ಬಲ್ಯಂ ಪಾಂಡಿತ್ಯೇ ಚಾಪಲಂ ವಚಃ ॥ ೪

## ಅಧ್ಯಾಯ ೨

ಕಲಿಯುಗದ ಲಕ್ಷಣ. ಕಡೆಯಲ್ಲಿ ಕಲ್ಕಿಯ ಅವತಾರ. ಕೃತಯುಗದ ಆರಂಭ.
ಸೂರ್ಯವಂಶ-ಚಂದ್ರವಂಶಗಳ ಪುನರುತ್ಥಾನ

ಶುಕಮಹರ್ಷಿಗಳು ಹೇಳಿದರು : " ರಾಜ, ಅನಂತರ ಬಲಶಾಲಿಯಾದ ಕಲಿಗಾಲದ ನಿಮಿತ್ತದಿಂದ ಧರ್ಮ, ಸತ್ಯ, ಶೌಚ, ಕ್ಷಮೆ, ದಯೆ, ಬಲ, ಸ್ಮೃತಿಗಳು ಅನುದಿನವೂ ನಶಿಸುತ್ತಹೋಗುತ್ತವೆ. ಕಲಿಯುಗದಲ್ಲಿ ಜನರಿಗೆ ಹಣ ಒಂದೇ ಜನ್ಮ, ಆಚಾರ, ಗುಣಗಳನ್ನು ಸಂಪಾದಿಸಿಕೊಡುತ್ತದೆ. ಧರ್ಮ-ನ್ಯಾಯಗಳ ವ್ಯವಸ್ಥೆಗೆ ಬಲವೇ ಕಾರಣವಾಗುತ್ತದೆ (೧-೨). ಗಂಡಹೆಂಡಿರಾಗಲು ಅಭಿರುಚಿಯೊಂದೇ ಸಾಕು, ಕುಲಗೋತ್ರಾದಿಗಳ ವಿಚಾರ ಬೇಕಿಲ್ಲ. ಕ್ರಯವಿಕ್ರಯಾದಿ ವ್ಯವಹಾರದಲ್ಲಿ ವಂಚನಾಕೌಶಲವೇ ಪ್ರಬಲವಾಗಿರುತ್ತದೆ. ಸ್ತ್ರೀಪುರುಷರಲ್ಲಿ ಒಬ್ಬೊಬ್ಬರ ಶ್ರೇಷ್ಠತೆಯನ್ನು ಗೊತ್ತುಮಾಡಲು ರಸಿಕತೆಯೊಂದೇ ಕಾರಣವಾಗಿರುತ್ತದೆ (ಕುಲಶೀಲಾದಿಗಳಲ್ಲ). ಬ್ರಾಹ್ಮಣನಾಗಲು ಜನಿವಾರ ಒಂದೇ ಸಾಕು (೩). ಸಂನ್ಯಾಸವೇ ಮುಂತಾದ ಆಶ್ರಮಗಳಿಗೆ ಕಷಾಯವಸ್ತ್ರಾದಿ ಚಿಹ್ನೆಯೊಂದೇ ಸಾಕಾಗುತ್ತದೆ. ಒಂದು ಆಶ್ರಮದಿಂದ ಇನ್ನೊಂದು ಆಶ್ರಮವನ್ನು ಸ್ವೀಕರಿಸಲು ಆಶ್ರಮ ಚಿಹ್ನೆಯನ್ನು ಮಾರ್ಪಡಿಸಿಕೊಂಡರೆ ಸಾಕಾಗುತ್ತದೆ. ಹಣವನ್ನು ಕೊಡಲು

ಅನಾಢ್ಯತೈವಾಸಾಧುತ್ವೇ ಸಾಧುತ್ವೇ ದಂಭ ಏವ ತು ।
ಸ್ವೀಕಾರ ಏವ ಚೋದ್ವಾಹೇ ಸ್ನಾನಮೇವ ಪ್ರಸಾಧನಮ್ ॥ ೫

ದೂರೇ ವಾರ್ಯಯನಂ ತೀರ್ಥಂ ಲಾವಣ್ಯಂ ಕೇಶಧಾರಣಮ್ ।
ಉದರಂಭರತಾ ಸ್ವಾರ್ಥಃ ಸತ್ಯತ್ವೇ ಧಾರ್ಷ್ಟ್ಯಮೇವ ಹಿ ॥ ೬

ದಾಕ್ಷ್ಯಂ ಕುಟುಂಬಭರಣಂ ಯಶೋಽರ್ಥೇ ಧರ್ಮಸೇವನಮ್ ।
ಏವಂ ಪ್ರಜಾಭಿರ್ದುಷ್ಟಾಭಿರಾಕೀರ್ಣೇ ಕ್ಷಿತಿಮಂಡಲೇ ॥ ೭

ಬ್ರಹ್ಮವಿಟ್‌ಕ್ಷತ್ರಶೂದ್ರಾಣಾಂ ಯೋ ಬಲೀ ಭವಿತಾ ನೃಪಃ ।
ಪ್ರಜಾ ಹಿ ಲುಬ್ಧೈ ರಾಜನ್ಯೈರ್ನಿರ್ಘೃಣೈರ್ದಸ್ಯುಧರ್ಮಭಿಃ ॥ ೮

ಆಚ್ಛಿನ್ನದಾರದ್ರವಿಣಾ ಯಾಸ್ಯಂತಿ ಗಿರಿಕಾನನಮ್ ।
ಶಾಕಮೂಲಾಮಿಷಕ್ಷೌದ್ರಫಲಪುಷ್ಪಾಷ್ಟಿಭೋಜನಾಃ ॥ ೯

---

ಯಾರಿಗೆ ಶಕ್ತಿ ಇಲ್ಲವೋ ಅವರ ಪಕ್ಷದಲ್ಲಿ ನ್ಯಾಯವು ದುರ್ಬಲವಾಗಿಬಿಡುತ್ತದೆ. ಪಂಡಿತನೆನಿಸಲು ಹೆಚ್ಚು ಮಾತಾಡುವುದು ಅರ್ಹತೆಯಾಗುವುದು (೪). ಕೆಟ್ಟವನೆನಿಸಲು ಬಡತನವೇ ನಿಮಿತ್ತವಾಗುವುದು. ಒಳ್ಳೆಯವನೆನಿಸಲು ಡಂಭಾಚಾರವೇ ನಿಮಿತ್ತವಾಗುವುದು. ಹೆಣ್ಣನ್ನು ಸ್ವೀಕರಿಸಿದರೆ ಸಾಕು, ಮದುವೆಯೆನಿಸಿಬಿಡುವುದು. ಶುಚಿತ್ವಕ್ಕೆ ಸ್ನಾನವೊಂದೇ ಸಾಕು (೫). ಕಲಿಯುಗದಲ್ಲಿ ದೂರದಲ್ಲಿ ಹರಿಯುವ ನೀರು ತೀರ್ಥವೆನಿಸುವುದು. ಕೇಶವನ್ನು ಬೆಳೆಸುವುದೊಂದೇ ಸೌಂದರ್ಯ ಸಾಧನ. ಹೊಟ್ಟೆ ತುಂಬಿಕೊಳ್ಳುವುದೇ ಪುರುಷಾರ್ಥವೆನಿಸುವುದು. ಎದೆಗಾರಿಕೆಯ ಮೊಂಡುತನವೇ ಅವನಲ್ಲಿ ಸತ್ಯವಿದೆಯೆಂಬುದಕ್ಕೆ ಆಧಾರವಾಗುವುದು (೬). ಕುಟುಂಬದವರನ್ನು ಹೊಟ್ಟೆಹೊರೆಯುವುದೇ ದಕ್ಷತೆಗೆ ಕುರುಹು. ಕಲಿಯುಗದಲ್ಲಿ ಕೀರ್ತಿಗಾಗಿಯೇ ಧರ್ಮವನ್ನಾಚರಿಸುತ್ತಾರೆ. ಹೀಗೆ ದುಷ್ಟರಾದ ಪ್ರಜೆಗಳಿಂದ ದೇಶವು ಆಕ್ರಾಂತವಾಗಲಾಗಿ, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಲ್ಲಿ ಯಾವನು ಪ್ರಬಲನೋ ಅವನು ನೃಪತಿಯಾಗುವನು. ಆಸೆಬುರುಕರೂ ನಿರ್ಘೃಣರೂ ದಸ್ಯುಗಳೂ ಆದ ಈ ರಾಜರು ಪ್ರಜೆಗಳನ್ನು ಪೀಡಿಸುತ್ತಾರೆ (೭–೮). ಇವರು ಪ್ರಜೆಗಳ ಮಡದಿಯರನ್ನೂ ಆಸ್ತಿಯನ್ನೂ ಕಿತ್ತುಕೊಂಡಾಗ ಬೇರೆ ಗತಿಯಿಲ್ಲದೆ ಜನರು ಗಿರಿಕಾನನಗಳನ್ನು ಆಶ್ರಯಿಸಿ, ಶಾಕ ಮೂಲ ಮಾಂಸ ಜೇನು ಹಣ್ಣು ಹೂ ಕಾಳು—ಮುಂತಾದವನ್ನು ತಿನ್ನುತ್ತ ಕಾಲಯಾಪನೆ ಮಾಡುವರು.

ಅನಾವೃಷ್ಟ್ಯಾ ವಿನಂಕ್ಷ್ಯಂತಿ ದುರ್ಭಿಕ್ಷಕರಪೀಡಿತಾಃ ।
ಶೀತವಾತಾತಪಪ್ರಾವೃಡ್ ಹಿಮೈರನ್ಯೋನ್ಯತಃ ಪ್ರಜಾಃ ॥ ೧೦

ಕ್ಷುತ್ತೃಡ್ಭ್ಯಾಂ ವ್ಯಾಧಿಭಿಶ್ಚೈವ ಸಂತಪ್ಸ್ಯಂತೇ ಚ ಚಿಂತಯಾ ।
ತ್ರಿಂಶದ್ವಿಂಶತಿವರ್ಷಾಣಿ ಪರಮಾಯುಃ ಕಲೌ ನೃಣಾಮ್ ॥ ೧೧

ಕ್ಷೀಯಮಾಣೇಷು ದೇಹೇಷು ದೇಹಿನಾಂ ಕಲಿದೋಷತಃ ।
ವರ್ಣಾಶ್ರಮವತಾಂ ಧರ್ಮೇ ನಷ್ಟೇ ವೇದಪಥೇ ನೃಣಾಮ್ ॥ ೧೨

ಪಾಖಂಡಪ್ರಚುರೇ ಧರ್ಮೇ ದಸ್ಯುಪ್ರಾಯೇಷು ರಾಜಸು ।
ಚೌರ್ಯಾನೃತವೃಥಾಹಿಂಸಾ ನಾನಾವೃತ್ತಿಷು ವೈ ನೃಷು ॥ ೧೩

ಶೂದ್ರಪ್ರಾಯೇಷು ವರ್ಣೇಷು ಚ್ಛಾಗಪ್ರಾಯಾಸು ಧೇನುಷು ।
ಗೃಹಪ್ರಾಯೇಷ್ವಾಶ್ರಮೇಷು ಯೌನಪ್ರಾಯೇಷು ಬಂಧುಷು ॥ ೧೪

ಅಣುಪ್ರಾಯಾಸ್ವೋಷಧೀಷು ಶಮೀಪ್ರಾಯೇಷು ಸ್ಥಾಸ್ನುಷು ।
ವಿದ್ಯುತ್ಪ್ರಾಯೇಷು ಮೇಘೇಷು ಶೂನ್ಯಪ್ರಾಯೇಷು ಸದ್ಮಸು ॥ ೧೫

---

ಅನಾವೃಷ್ಟಿಯಿಂದ ದುರ್ಭಿಕ್ಷವಾಗುತ್ತದೆ. ಸರ್ಕಾರದ ಕರಭಾರದಿಂದಲೂ ಶೀತ ವಾತ ಬಿಸಿಲು ಮಳೆ ಹಿಮಗಳಿಂದಲೂ ಪ್ರಜೆಗಳು ಕಷ್ಟಕ್ಕೆ ಒಳಗಾಗುವರು (೯–೧೦). ಹಸಿವು ಬಾಯಾರಿಕೆಗಳಿಂದಲೂ ರೋಗಗಳಿಂದಲೂ ದೈಹಿಕ ಸಂತಾಪ ದಿಂದಲೂ ಮಾನಸಿಕ ಚಿಂತೆಯಿಂದಲೂ ಜನರು ನೊಂದು ಬೆಂಡಾಗುತ್ತಾರೆ. ಕಲಿಯುಗದಲ್ಲಿ ಜನರಿಗೆ ಇಪ್ಪತ್ತು-ಮೂವತ್ತು ವರ್ಷಗಳೇ ಪರಮಾವಧಿಯ ಆಯುಸ್ಸು (೧೧). ಕಲಿದೋಷದಿಂದ ಜನರ ದೇಹಗಳು ಕ್ಷೀಣವಾಗಿ ಚಿಕ್ಕದಾಗುತ್ತ ಹೋಗುವುವು. ವೇದಮಾರ್ಗವಾದ ವರ್ಣಾಶ್ರಮಧರ್ಮವು ನಷ್ಟವಾಗುವುದು. ಆಚಾರವು ಪಾಖಂಡಮಯವಾಗಲು, ರಾಜರು ಕೊಳ್ಳೆಹೊಡೆಯತಕ್ಕವರಾಗಲು, ಜನರಲ್ಲಿ ಕಳ್ಳತನ, ಸುಳ್ಳು, ವ್ಯರ್ಥವಾದ ಹಿಂಸೆ—ಮುಂತಾದ ಕೆಟ್ಟತನಗಳು ಬೆಳೆಯುತ್ತವೆ (೧೨–೧೩). ವರ್ಣಗಳು ಶೂದ್ರಮಯವಾಗುತ್ತವೆ. ಹಸುಗಳು ಸ್ವಲ್ಪ ಹಾಲನ್ನು ಕೊಡುತ್ತ ಮೇಕೆಗಳಂತಾಗುತ್ತವೆ. ಪುಣ್ಯಾಶ್ರಮಗಳು ಸಾಮಾನ್ಯ ವ್ಯವಹಾರದ ಮನೆಗಳಿಗೆ ಸಮಾನವಾಗುತ್ತವೆ. ಯೋನಿಸಂಬಂಧದಿಂದ ಮಾತ್ರ ಬಂಧುಗಳೆನಿಸುತ್ತಾರೆ, ಉಳಿದ ಆಪ್ತವ್ಯವಹಾರಗಳಿಂದಲ್ಲ—ಎಂಬಂತೆ ಆಗಿಬಿಡು ವುದು (೧೪). ಕಲಿಯುಗದಲ್ಲಿ ಸಸ್ಯಗಳು ಸಾಮೆಧಾನ್ಯಕ್ಕೆ ಸಮಾನವಾದ ಚಿಕ್ಕ

ಇತ್ಥಂ ಕಲೌ ಗತಪ್ರಾಯೇ ಜನೇ ತು ಖರಧರ್ಮಿಣಿ ।
ಧರ್ಮತ್ರಾಣಾಯ ಸತ್ತ್ವೇನ ಭಗವಾನವತರಿಷ್ಯತಿ ॥ ೧೬

ಚರಾಚರಗುರೋರ್ವಿಷ್ಣೋರೀಶ್ವರಸ್ಯಾಖಿಲಾತ್ಮನಃ ।
ಧರ್ಮತ್ರಾಣಾಯ ಸಾಧೂನಾಂ ಜನ್ಮ ಕರ್ಮಾಪನುತ್ತಯೇ ॥ ೧೭

ಶಂಭಲಗ್ರಾಮಮುಖ್ಯಸ್ಯ ಬ್ರಾಹ್ಮಣಸ್ಯ ಮಹಾತ್ಮನಃ ।
ಭವನೇ ವಿಷ್ಣುಯಶಸಃ ಕಲ್ಕಿಃ ಪ್ರಾದುರ್ಭವಿಷ್ಯತಿ ॥ ೧೮

ಅಶ್ವಮಾಶುಗಮಾರುಹ್ಯ ದೇವದತ್ತಂ ಜಗತ್ಪತಿಃ ।
ಅಸಿನಾಸಾಧುದಮನಮಷ್ಟೈಶ್ವರ್ಯಗುಣಾನ್ವಿತಃ ॥ ೧೯

ವಿಚರನ್ನಾಶುನಾ ಕ್ಷೋಣ್ಯಾಂ ಹಯೇನಾಪ್ರತಿಮದ್ಯುತಿಃ ।
ನೃಪಲಿಂಗಚ್ಛದೋ ದಸ್ಯೂನ್ ಕೋಟಿಶೋ ನಿಹನಿಷ್ಯತಿ ॥ ೨೦

ಅಥ ತೇಷಾಂ ಭವಿಷ್ಯಂತಿ ಮನಾಂಸಿ ವಿಶದಾನಿ ವೈ ।
ವಾಸುದೇವಾಂಗರಾಗಾತಿಪುಣ್ಯಗಂಧಾನಿಲಸ್ಪೃಶಾಮ್ ।
ಪೌರಜಾನಪದಾನಾಂ ವೈ ಹತೇಷ್ವಖಿಲದಸ್ಯುಷು ॥ ೨೧

---

ಚಿಕ್ಕ ಕಾಳುಗಳನ್ನು ಬಿಡುತ್ತವೆ. ಮರಗಳು ಶಮೀವೃಕ್ಷಗಳಂತಾಗುತ್ತವೆ. ಮೇಘಗಳಲ್ಲಿ ಮಿಂಚುಗಳು ಮಾತ್ರ ಇರುತ್ತವೆ, ಮಳೆ ಇರುವುದಿಲ್ಲ. ಧರ್ಮಕಾರ್ಯಗಳಿಲ್ಲದೆ ಮನೆಗಳು ಶೂನ್ಯವಾಗಿಬಿಡುತ್ತವೆ (೧೫). ಈ ಪ್ರಕಾರ ಜನರೆಲ್ಲರೂ ಕತ್ತೆಗಳಂತೆ ವರ್ತಿಸತೊಡಗಿದಾಗ, ಕಲಿಯುಗವು ಮುಗಿಯುತ್ತ ಬರಲಾಗಿ, ಭಗವಂತನು ಧರ್ಮಪಾಲನೆಗೋಸ್ಕರ ಸತ್ತ್ವಗುಣವನ್ನಾಶ್ರಯಿಸಿ ಭೂಲೋಕದಲ್ಲಿ ಅವತರಿಸುವನು (೧೬). ಚರಾಚರಗುರುವೂ ಈಶ್ವರನೂ ವಿಶ್ವಾತ್ಮನೂ ಆದ ವಿಷ್ಣುವಿನ ಅವತಾರವು ಧರ್ಮರಕ್ಷಣೆಗಾಗಿಯೂ ಸಜ್ಜನರ ಜನ್ಮಕರ್ಮಗಳನ್ನು ನೀಗಿಸಿ ಅವರಿಗೆ ಮೋಕ್ಷವನ್ನು ಅನುಗ್ರಹಿಸುವುದಕ್ಕಾಗಿಯೂ ಆಗುವುದು (೧೭). ಶಂಭಲಗ್ರಾಮದಲ್ಲಿ ಮುಖ್ಯನೂ ಮಹಾತ್ಮನೂ ಆದ ವಿಷ್ಣುಕೀರ್ತಿಯೆಂಬ ಬ್ರಾಹ್ಮಣನ ಗೃಹದಲ್ಲಿ ಕಲ್ಕಿಯು ಅವತರಿಸುವನು. ಜಗದೀಶ್ವರನಾದ ಕಲ್ಕಿಯು ಶೀಘ್ರಗಾಮಿಯಾದ ದೇವದತ್ತವೆಂಬ ಅಶ್ವವನ್ನೇರಿ, ಖಡ್ಗದಿಂದ ದುರ್ಜನರನ್ನು ಸಂಹರಿಸುವನು (೧೮–೧೯). ಅಷ್ಟೈಶ್ವರ್ಯಸಂಪನ್ನನೂ ಅಸದೃಶತೇಜಸ್ವಿಯೂ ಆದ ಕಲ್ಕಿಯು ವೇಗಶಾಲಿಯಾದ ಕುದುರೆಯನ್ನೇರಿ ಸಂಚರಿಸುತ್ತ ರಾಜರೆಂಬ ಹೆಸರನ್ನು ಧರಿಸಿರುವ ಕೋಟಿಕೋಟಿ ದಸ್ಯುಗಳನ್ನು ಕೊಂದುಹಾಕುವನು (೨೦). ಪೌರಜಾನಪದರ

ತೇಷಾಂ ಪ್ರಜಾವಿಸರ್ಗಶ್ಚ ಸ್ಥವಿಷ್ಠಃ ಸಂಭವಿಷ್ಯತಿ ।
ವಾಸುದೇವೇ ಭಗವತಿ ಸತ್ತ್ವಮೂರ್ತೌ ಹೃದಿ ಸ್ಥಿತೇ ॥ ೨೨

ಯದಾವತೀರ್ಣೋ ಭಗವಾನ್ ಕಲ್ಕಿರ್ಧರ್ಮಪತಿರ್ಹರಿಃ ।
ಕೃತಂ ಭವಿಷ್ಯತಿ ತದಾ ಪ್ರಜಾಸೂತಿಶ್ಚ ಸಾತ್ತ್ವಿಕೀ ॥ ೨೩

ಯದಾ ಚಂದ್ರಶ್ಚ ಸೂರ್ಯಶ್ಚ ತಥಾ ತಿಷ್ಯಬೃಹಸ್ಪತೀ ।
ಏಕರಾಶೌ ಸಮೇಷ್ಯಂತಿ ತದಾ ಭವತಿ ತತ್ ಕೃತಮ್ ॥ ೨೪

ಯೇಽತೀತಾ ವರ್ತಮಾನಾ ಯೇ ಭವಿಷ್ಯಂತಿ ಚ ಪಾರ್ಥಿವಾಃ ।
ತೇ ತ ಉದ್ದೇಶತಃ ಪ್ರೋಕ್ತಾ ವಂಶೀಯಾಃ ಸೋಮಸೂರ್ಯಯೋಃ ॥ ೨೫

ಆರಭ್ಯ ಭವತೋ ಜನ್ಮ ಯಾವನ್ನಂದಾಭಿಷೇಚನಮ್ ।
ಏತದ್ ವರ್ಷಸಹಸ್ರಂ ತು ಶತಂ ಪಂಚದಶೋತ್ತರಮ್ ॥ ೨೬

---

ನಡುವೆ ಇದ್ದ ಸಮಸ್ತ ದಸ್ಯುಗಳೂ ಹತರಾದಮೇಲೆ, ವಾಸುದೇವನಾದ ಕಲ್ಕಿಯ ಅಂಗಲೇಪನದ ಪುಣ್ಯಕರ ಸುಗಂಧವನ್ನು ಹೊತ್ತು ಬೀಸುವ ಗಾಳಿಯ ಸಂಸ್ಪರ್ಶದಿಂದ ಪ್ರಜೆಗಳ ಮನಸ್ಸು ಸ್ವಚ್ಛವಾಗುವುದು ! (೨೧). ಸತ್ತ್ವಮೂರ್ತಿಯಾದ ಭಗವಾನ್ ವಾಸುದೇವನು ಪ್ರಜೆಗಳ ಹೃದಯದಲ್ಲಿ ನೆಲೆಸಲಾಗಿ, ಅವರ ಮುಂದಿನ ಸಂತತಿಯ ದೇಹಾಕೃತಿಯೂ ದೊಡ್ಡದಾಗುತ್ತ ಹೋಗುವುದು. ಧರ್ಮಪಾಲಕನಾದ ಭಗವಾನ್ ಶ್ರೀಹರಿಯು ಕಲ್ಕಿಯಾಗಿ ಅವತರಿಸಿದಮೇಲೆ ಕೃತಯುಗವು ಪ್ರಾರಂಭವಾಗುವುದು. ಪ್ರಜಾವರ್ಗವು ಸಾತ್ವಿಕಗುಣಯುಕ್ತವಾಗುವುದು (೨೨ ೨೩). ಚಂದ್ರ, ಸೂರ್ಯ, ಬೃಹಸ್ಪತಿಗಳು (ಕರ್ಕಾಟಕ ರಾಶಿಯ) ಪುಷ್ಯನಕ್ಷತ್ರವನ್ನು ಯಾವಾಗ ಏಕಕಾಲದಲ್ಲಿ ಜೊತೆಯಾಗಿ ಪ್ರವೇಶಿಸುತ್ತಾರೋ ಆಗ ಕೃತಯುಗವು ಪ್ರಾರಂಭವಾಗುವುದು (೨೪). ಪರೀಕ್ಷಿತರಾಜ, ಚಂದ್ರವಂಶದಲ್ಲಿಯೂ ಸೂರ್ಯವಂಶದಲ್ಲಿಯೂ ಯಾವ ಯಾವ ರಾಜರು ಹಿಂದೆ ಗತಿಸಿದರೋ, ಈಗ ಇದ್ದಾರೋ ಮತ್ತು ಮುಂದೆ ಹುಟ್ಟುವರೋ ಅವರ ವಿಷಯವನ್ನು ಸಂಕ್ಷೇಪವಾಗಿ ತಿಳಿಸಿದ್ದಾಯಿತು (೨೫). ನಿನ್ನ ಜನನದಿಂದ ಹಿಡಿದು ನಂದನ ಪಟ್ಟಾಭಿಷೇಕದವರೆಗೆ

ಸಪ್ತರ್ಷೀಣಾಂ ತು ಯೌ ಪೂರ್ವೌ ದೃಶ್ಯೇತೇ ಉದಿತೌ ದಿವಿ ।
ತಯೋಸ್ತು ಮಧ್ಯೇ ನಕ್ಷತ್ರಂ ದೃಶ್ಯತೇ ಯತ್ಸಮಂ ನಿಶಿ ॥ ೨೭

ತೇನೈತ ಋಷಯೋ ಯುಕ್ತಾಸ್ತಿಷ್ಠಂತ್ಯಬ್ದಶತಂ ನೃಣಾಮ್ ।
ತೇ ತ್ವದೀಯೇ ದ್ವಿಜಾಃ ಕಾಲೇ ಅಧುನಾ ಚಾಶ್ರಿತಾ ಮಘಾಃ ॥ ೨೮

ವಿಷ್ಣೋರ್ಭಗವತೋ ಭಾನುಃ ಕೃಷ್ಣಾಖ್ಯೋಽಸೌ ದಿವಂ ಗತಃ ।
ತದಾವಿಶತ್ ಕಲಿರ್ಲೋಕಂ ಪಾಪೇ ಯದ್ ರಮತೇ ಜನಃ ॥ ೨೯

ಯಾವತ್ ಸ ಪಾದಪದ್ಮಾಭ್ಯಾಂ ಸ್ಪೃಶನ್ನಾಸ್ತೇ ರಮಾಪತಿಃ ।
ತಾವತ್ ಕಲಿರ್ವೈ ಪೃಥಿವೀಂ ಪರಾಕ್ರಾಂತುಂ ನ ಚಾಶಕತ್ ॥ ೩೦

---

ಒಂದು ಸಾವಿರದ ನೂರಹದಿನೈದು [1]ವರ್ಷಗಳು ಕಳೆಯುತ್ತವೆಯೆಂದು ತಿಳಿಯಬೇಕು (೨೬). ಆಕಾಶವಲ್ಲಿ ಸಪ್ತರ್ಷಿಮಂಡಲ ಉಂಟಷ್ಟೆ. ಅದರ ಉದಯ ಸಮಯದಲ್ಲಿ ಮೊದಲು ಯಾವ (ಪುಲಹ, ಕ್ರತು-ಎಂಬ) ಇಬ್ಬರು ಋಷಿಗಳು ಕಾಣುತ್ತಾರೋ ಅವರ ನಡುವೆ (ದಕ್ಷಿಣೋತ್ತರರೇಖೆಯಲ್ಲಿ) ಅಶ್ವಿನ್ಯಾದಿ ನಕ್ಷತ್ರಗಳಲ್ಲೊಂದು ನಕ್ಷತ್ರವು ಉದಿತವಾಗಿ ಕಾಣುತ್ತದೆ. ಈ ನಕ್ಷತ್ರದಿಂದ ಯುಕ್ತರಾದ ಸಪ್ತರ್ಷಿಗಳು ಒಂದುನೂರು ವರ್ಷದವರೆಗೆ ಹಾಗೆಯೇ ಆ ನಕ್ಷತ್ರದಿಂದ ಸಹಿತರಾಗಿರುತ್ತಾರೆ. ನಿನ್ನ ಸಮಯವಾದ ಈ ಕಾಲದಲ್ಲಿ ಸಪ್ತರ್ಷಿಗಳು ಮಘಾನಕ್ಷತ್ರದಿಂದ ಸಹಿತರಾಗಿದ್ದಾರೆ (೨೭-೨೮). ಆದ್ದರಿಂದ ಸಪ್ತರ್ಷಿಗಳು ಮಘಾಸಹಿತರಾಗಿದ್ದಾಗ ಭಗವಾನ್ ವಿಷ್ಣುವಿನ ' ಕೃಷ್ಣ ' ಎಂಬ ಹೆಸರಿನ ಈ ಒಂದು ತೇಜಸ್ಸು ವೈಕುಂಠ ಲೋಕವನ್ನು ಸೇರಿತು. ಜನರು ಪಾಪಕರ್ಮದಲ್ಲಿ ನಿರತರಾಗತಕ್ಕ ಕಲಿಯುಗವು ಆಗ ಲೋಕವನ್ನು ಪ್ರವೇಶಿಸಿತು (೨೯). ಆ ಲಕ್ಷ್ಮೀಪತಿಯು ತನ್ನ ಪಾದಪದ್ಮಗಳಿಂದ ಈ ಭೂಮಿಯನ್ನು ಸ್ಪರ್ಶಿಸುತ್ತ ಎಲ್ಲಿಯವರೆಗೆ ಇದ್ದನೋ ಅಲ್ಲಿಯವರೆಗೆ ತನ್ನ ಪರಾಕ್ರಮವನ್ನು ಮೆರೆಸಲು ಕಲಿಗೆ ಸಾಧ್ಯವಾಗಲಿಲ್ಲ. ಸಪ್ತ ದೇವರ್ಷಿಗಳು ಮಘಾನಕ್ಷತ್ರದಿಂದ ಯುಕ್ತರಾಗಿದ್ದಾಗ ಸಂಧ್ಯಾಸಂಧ್ಯಾಂಶಗಳಿಂದ (ದೇವಮಾನದ) ಹನ್ನೆರಡುನೂರು ವರ್ಷ ಪ್ರಮಾಣವಿರುವ ಕಲಿಯು ಸಂಧ್ಯೆಯನ್ನತಿಕ್ರಮಿಸಿ

---

1. ಹಿಂದೆ ಹೇಳಿದ ಪ್ರಕಾರ ೧೪೫೮ ವರ್ಷಗಳಾಗುತ್ತವೆ. ಇನ್ನೊಂದು ಪಾಠದ ಪ್ರಕಾರ ೧೪೯೮ ವರ್ಷಗಳು. ವಿಷ್ಣುಪುರಾಣದಲ್ಲಿ ೧೫೦೦ ವರ್ಷಗಳಾಗುತ್ತವೆಂದು ಹೇಳಿದೆ. ನೋಡಿ ವಿ.ಪು. ೪-೨೪-೧೦೪. ಪಾಠದೋಷವೇ ಇದಕ್ಕೆ ಕಾರಣ.

ಯದಾ ದೇವರ್ಷಯಃ ಸಪ್ತ ಮಘಾಸು ವಿಚರಂತಿ ಹಿ ।
ತದಾ ಪ್ರವೃತ್ತಸ್ತು ಕಲಿರ್ದ್ವಾದಶಾಬ್ದಶತಾತ್ಮಕಃ ॥ ೩೧

ಯದಾ ಮಘಾಭ್ಯೋ ಯಾಸ್ಯಂತಿ ಪೂರ್ವಾಷಾಢಾಂ ಮಹರ್ಷಯಃ ।
ತದಾ ನಂದಾತ್ ಪ್ರಭೃತ್ಯೇಷ ಕಲಿರ್ವೃದ್ಧಿಂ ಗಮಿಷ್ಯತಿ ॥ ೩೨

ಯಸ್ಮಿನ್ ಕೃಷ್ಣೋ ದಿವಂ ಯಾತಸ್ತಸ್ಮಿನ್ನೇವ ತದಾಹನಿ ।
ಪ್ರತಿಪನ್ನಂ ಕಲಿಯುಗಮಿತಿ ಪ್ರಾಹುಃ ಪುರಾವಿದಃ ॥ ೩೩

ದಿವ್ಯಾಬ್ದಾನಾಂ ಸಹಸ್ರಾಂತೇ ಚತುರ್ಥೇ ತು ಪುನಃ ಕೃತಮ್ ।
ಭವಿಷ್ಯತಿ ಯದಾ ನೃಣಾಂ ಮನ ಆತ್ಮಪ್ರಕಾಶಕಮ್ ॥ ೩೪

ಇತ್ಯೇಷ ಮಾನವೋ ವಂಶೋ ಯಥಾ ಸಂಖ್ಯಾಯತೇ ಭುವಿ ।
ತಥಾ ವಿಟ್‌ಶೂದ್ರವಿಪ್ರಾಣಾಂ ತಾಸ್ತಾ ಜ್ಞೇಯಾ ಯುಗೇ ಯುಗೇ ॥ ೩೫

---

ಪ್ರವೇಶಿಸಿತು (೩೦-೩೧). ಮುಂದೆ ಮಘಾನಕ್ಷತ್ರವನ್ನು ಬಿಟ್ಟು ಯಾವಾಗ ಪೂರ್ವಾಷಾಢಾ ನಕ್ಷತ್ರವನ್ನು ಸಪ್ತರ್ಷಿಗಳು ಸೇರುವರೋ ಆಗ ನಂದನಿಂದ [1]ಹಿಡಿದು ಕಲಿಯು ವೃದ್ಧಿಗೊಳ್ಳುವುದು. ಶ್ರೀಕೃಷ್ಣನು ಯಾವ ದಿನ ಈ ಲೋಕವನ್ನು ಬಿಟ್ಟು ವೈಕುಂಠಕ್ಕೆ ನಿರ್ಗಮಿಸಿದನೋ ಆ ದಿನವೇ ಕಲಿಪ್ರವೇಶವಾದದ್ದು [2]ತಿಳಿಯಿತೆಂದು ಪುರಾವಿದರು ಹೇಳುತ್ತಾರೆ (೩೨-೩೩). ನಾಲ್ಕನೆಯದಾದ ಈ ಕಲಿಯುಗದಲ್ಲಿ [3]ಒಂದುಸಾವಿರ ದಿವ್ಯವರ್ಷಗಳು ಕಳೆದಮೇಲೆ ಪುನಃ ಕೃತಯುಗವು ನಡೆಯುವುದು. ಆಗ ಜನರಿಗೆ ಆತ್ಮಪ್ರಕಾಶಕವಾದ ಮನಸ್ಸು ಇರುವುದು (೩೪). ರಾಜ, ಹೀಗೆ ಮನುಸಂಬಂಧಿಯಾದ ಕ್ಷತ್ರಿಯವಂಶವು ಯಾವ ಯಾವ ಸ್ಥಿತಿಗಳನ್ನನುಭವಿಸಿ ನಡೆದುಕೊಂಡು ಬಂದಿತೋ ಹಾಗೆಯೇ ಬ್ರಾಹ್ಮಣ, ವೈಶ್ಯ, ಶೂದ್ರ ಜಾತಿಯವರ ವಂಶಗಳೂ ನಡೆದುಕೊಂಡು ಬಂದಿವೆಯೆಂದು ತಿಳಿಯಬೇಕು (೩೫).

---

1. ಪ್ರದ್ಯೋತನ ಕಾಲದಿಂದಲೇ ವೃದ್ಧಿ, ನಂದನ ಕಾಲದಿಂದ ಅತಿವೃದ್ಧಿಯೆಂದು ತಿಳಿಯಬೇಕು.

2. ಶ್ರೀಕೃಷ್ಣನಿದ್ದ ಕಾಲದಲ್ಲಿಯೇ ಕಲಿ ಪ್ರವೇಶವಾಗಿತ್ತು, ಆದರೆ ಶ್ರೀಕೃಷ್ಣನ ಮಹಿಮೆಯಿಂದ ಕಲಿ ಪ್ರಭಾವವು ತಿಳಿದುಬರಲಿಲ್ಲ—ಎಂದು ಅಭಿಪ್ರಾಯ.

3. ಸಂಧ್ಯಾಸಂಧ್ಯಾಂಶಗಳೂ ಸೇರಿ ಹನ್ನೆರಡುನೂರು (೧೨೦೦) ದಿವ್ಯವರ್ಷಗಳು.

ಏತೇಷಾಂ ನಾಮಲಿಂಗಾನಾಂ ಪುರುಷಾಣಾಂ ಮಹಾತ್ಮನಾಮ್ ।
ಕಥಾಮಾತ್ರಾವಶಿಷ್ಟಾನಾಂ ಕೀರ್ತಿರೇವ ಸ್ಥಿತಾ ಭುವಿ ॥ ೩೬

ದೇವಾಪಿಃ ಶಂತನೋರ್ಭ್ರಾತಾ ಮರುಶ್ಚೇಕ್ಷ್ವಾಕುವಂಶಜಃ ।
ಕಲಾಪಗ್ರಾಮ ಆಸಾತೇ ಮಹಾಯೋಗಬಲಾನ್ವಿತೌ ॥ ೩೭

ತಾವಿಹೈತ್ಯ ಕಲೇರಂತೇ ವಾಸುದೇವಾನುಶಿಕ್ಷಿತೌ ।
ವರ್ಣಾಶ್ರಮಯುತಂ ಧರ್ಮಂ ಪೂರ್ವವತ್ ಪ್ರಥಯಿಷ್ಯತಃ ॥ ೩೮

ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುರ್ಯುಗಮ್ ।
ಅನೇನ ಕ್ರಮಯೋಗೇನ ಭುವಿ ಪ್ರಾಣಿಷು ವರ್ತತೇ ॥ ೩೯

ರಾಜನ್ನೇತೇ ಮಯಾ ಪ್ರೋಕ್ತಾ ನರದೇವಾಸ್ತಥಾಪರೇ ।
ಭೂಮೌ ಮಮತ್ವಂ ಕೃತ್ವಾಂತೇ ಹಿತ್ವೇಮಾಂ ನಿಧನಂ ಗತಾಃ ॥ ೪೦

ಕೃಮಿವಿಡ್ಭಸ್ಮಸಂಜ್ಞಾಂತೇ ರಾಜನಾಮ್ನೋಽಪಿ ಯಸ್ಯ ಚ ।
ಭೂತಧ್ರುಕ್ ತತ್ಕೃತೇ ಸ್ವಾರ್ಥಂ ಕಿಂ ವೇದ ನಿರಯೋ ಯತಃ ॥ ೪೧

---

ರಾಜವಂಶದಲ್ಲಿ ಮಹಾತ್ಮರಾದ ಪುರುಷರೂ ಸಹ ನಾಮಮಾತ್ರದಿಂದ ಅವಶಿಷ್ಟರಾಗಿ ಕಥೆಯಲ್ಲಿ ಮಾತ್ರ ಉಳಿದುಕೊಂಡಿದ್ದಾರೆ. ಜಗತ್ತಿನಲ್ಲಿ ಉಳಿದಿರುವುದು ಇವರ ಕೀರ್ತಿ ಮಾತ್ರ (ಇವರ ರಾಜ್ಯವೂ ಉಳಿಯಲಿಲ್ಲ, ಪುತ್ರಾದಿಗಳೂ ಉಳಿಯಲಿಲ್ಲ) (೩೬) ಶಂತನು ಚಕ್ರವರ್ತಿಯ ಸೋದರನಾದ (ಚಂದ್ರವಂಶದ) ದೇವಾಪಿಯೂ ಇಕ್ಷ್ವಾಕುವಂಶದವನಾದ (ಸೂರ್ಯವಂಶದ) ಮರು ಎಂಬವನೂ ಮಹತ್ತರವಾದ ಯೋಗಬಲದಿಂದ ಸಮೇತರಾಗಿ ಈಗಲೂ ಕಲಾಪಗ್ರಾಮದಲ್ಲಿ ನೆಲೆಸಿದ್ದಾರೆ. ಕಲಿಯುಗವು ಕಳೆದಮೇಲೆ ವಾಸುದೇವನ ಆಜ್ಞೆಯಂತೆ ಅವರು ಈ ಭರತಖಂಡಕ್ಕೆ ಬಂದು ಪೂರ್ವದಂತೆ ವರ್ಣಾಶ್ರಮಾಚಾರಸಹಿತವಾದ ಧರ್ಮವನ್ನು ಸ್ಥಾಪಿಸುವರು (೩೭–೩೮). ಕೃತ, ತ್ರೇತಾ, ದ್ವಾಪರ, ಕಲಿ—ಎಂಬ ಚತುರ್ಯುಗಗಳು ಈ ಕ್ರಮವನ್ನನುಸರಿಸಿ ಜಗತ್ತಿನಲ್ಲಿ ಪ್ರಾಣಿಗಳ (ಗುಣದೋಷಗಳ) ವಿಷಯವಾಗಿ ಪ್ರವರ್ತಿಸುತ್ತವೆ. ಪರೀಕ್ಷಿತರಾಜ, ನಾನು ಇದುವರೆಗೆ ವರ್ಣಿಸಿದ ಭೂಪತಿಗಳೂ ಇತರ ಸಾಮಾನ್ಯ ಜನರೂ ಈ ಲೋಕದಲ್ಲಿ 'ನನ್ನದು-ನನ್ನದು' ಎಂದು ಮಮತೆಯನ್ನು ಪ್ರದರ್ಶಿಸಿ, ಕಡೆಗೆ ಎಲ್ಲವನ್ನೂ ಇಲ್ಲಿಯೇ ಬಿಟ್ಟು ಸತ್ತುಹೋದರು! (೩೯-೪೦). 'ರಾಜ' ಎಂಬ ದೊಡ್ಡ ಹೆಸರನ್ನು ಪಡೆದಿರುವ ಈ ದೇಹಕ್ಕೂ

ಕಥಂ ಸೇಯಮಖಂಡಾ ಭೂಃ ಪೂರ್ವೈರ್ಮೇ ಪುರುಷೈರ್ಧೃತಾ ।
ಮತ್ಪುತ್ರಸ್ಯ ಚ ಪೌತ್ರಸ್ಯ ಮತ್ಪೂರ್ವಾ ವಂಶಜಸ್ಯ ವಾ ॥ ೪೨

ತೇಜೋಽಬನ್ನಮಯಂ ಕಾಯಂ ಗೃಹೀತ್ವಾಽಽತ್ಮತಯಾ ಬುಧಾಃ ।
ಮಹೀಂ ಮಮತಯಾ ಚೋಭೌ ಹಿತ್ವಾಂತೇಽದರ್ಶನಂ ಗತಾಃ ॥ ೪೩

ಯೇ ಯೇ ಭೂಪತಯೋ ರಾಜನ್ ಭುಂಜಂತಿ ಭುವಮೋಜಸಾ ।
ಕಾಲೇನ ತೇ ಕೃತಾಃ ಸರ್ವೇ ಕಥಾಮಾತ್ರಾಃ ಕಥಾಸು ಚ ॥ ೪೪

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ದ್ವಿತೀಯಾಧ್ಯಾಯಃ

---

ಸಹ ಕಡೆಯಲ್ಲಿ ಕ್ರಿಮಿಯೆಂದೋ, ಅಮೇಧ್ಯವೆಂದೋ, ಬೂದಿಯೆಂದೋ ಹೆಸರು ಬರುತ್ತದೆ! ಇಂತಹ ದೇಹಕ್ಕಾಗಿ ಪ್ರಾಣಿದ್ರೋಹವನ್ನು ಮಾಡತಕ್ಕ ಮನುಷ್ಯನಿಗೆ ಆತ್ಮಹಿತವೆಂದರೇನೆಂಬುದು ತಿಳಿದಿದೆಯೆ? ಇವರು ಪ್ರಾಣಿದ್ರೋಹವನ್ನು ಮಾಡಿ ನರಕವನ್ನು ಪಡೆಯುತ್ತಾರಲ್ಲವೆ? (೪೧). "ಈ ಅಖಂಡಪೃಥ್ವಿಗೆ ನನ್ನ ಪೂರ್ವಜರು ಒಡೆಯರಾಗಿ ಇದನ್ನು ಪಾಲಿಸುತ್ತಿದ್ದರು. ಈಗ ನನ್ನ ವಶಕ್ಕೆ ಬಂದಿದೆ. ಇದು ನನ್ನ ಪುತ್ರನ ವಶಕ್ಕೆ ಮುಂದೆ ಸೇರಬೇಕು. ಆಮೇಲೆ ನನ್ನ ಪೌತ್ರನಿಗೆ ಸೇರಬೇಕು! ಇದು ನನ್ನ ವಂಶಪರಂಪರೆಯಾಗಿ ಉಳಿಯಬೇಕು. ಅದು ಹೇಗೆ?" ಎಂದು ಈ ಜನರು ಮಮತೆಯಿಂದ ಸದಾ ಚಿಂತಿಸುತ್ತಾರೆ! (೪೨). ಈ ಅವಿವೇಕಿಗಳು ಬೆಂಕಿ-ನೀರು-ಮಣ್ಣಿನಿಂದಾದ ಈ ದೇಹವನ್ನು ಆತ್ಮವೆಂದೂ ಈ ಭೂಮಿಯನ್ನು ನನ್ನದೆಂದೂ ಭಾವಿಸಿ, ಕಡೆಗೆ ಇವೆರಡನ್ನೂ ಇಲ್ಲಿಯೇ ಬಿಟ್ಟು ಕಣ್ಣಿಗೆ ಕಾಣದಂತೆ ಹೊರಟುಹೋದರು! (೪೩). ಪರೀಕ್ಷಿತರಾಜ, ಯಾವ ಯಾವ ಭೂಪತಿಗಳು ಈ ಭೂಮಿಯನ್ನು ದರ್ಪದಿಂದ ಭೋಗಿಸಿದರೋ ಅವರೆಲ್ಲರೂ ಕಾಲವಶರಾಗಿ ಕಥೆಗಳಲ್ಲಿ ಕಥೆಯಾಗಿ ಮಾತ್ರ ಉಳಿದಿದ್ದಾರೆ!" ಎಂದರು (೪೪).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ದ್ವಾದಶಸ್ಕಂಧದಲ್ಲಿ
ಎರಡನೆಯ ಅಧ್ಯಾಯ



# ತೃತೀಯೋಽಧ್ಯಾಯಃ

**ಶ್ರೀಶುಕ ಉವಾಚ—**

**ದೃಷ್ಟ್ವಾಽಽತ್ಮನಿ ಜಯೇ ವ್ಯಗ್ರಾನ್ ನೃಪಾನ್ ಹಸತಿ ಭೂರಿಯಮ್ ।**
**ಅಹೋ ಮಾ ವಿಜಿಗೀಷಂತಿ ಮೃತ್ಯೋಃ ಕ್ರೀಡನಕಾ ನೃಪಾಃ ॥** ೧

**ಕಾಮ ಏಷ ನರೇಂದ್ರಾಣಾಂ ಮೋಘಃ ಸ್ಯಾದ್ ವಿದುಷಾಮಪಿ ।**
**ಯೇನ ಫೇನೋಪಮೇ ಪಿಂಡೇ ಯೇಽತಿವಿಸ್ರಂಭಿತಾ ನೃಪಾಃ ॥** ೨

**ಪೂರ್ವಂ ನಿರ್ಜಿತ್ಯ ಷಡ್ವರ್ಗಂ ಜೇಷ್ಯಾಮೋ ರಾಜಮಂತ್ರಿಣಃ ।**
**ತತಃ ಸಚಿವಪೌರಾಪ್ತಕರೀಂದ್ರಾನಸ್ಯ ಕಂಟಕಾನ್ ॥** ೩

**ಏವಂ ಕ್ರಮೇಣ ಜೇಷ್ಯಾಮಃ ಪೃಥ್ವೀಂ ಸಾಗರಮೇಖಲಾಮ್ ।**
**ಇತ್ಯಾಶಾಬದ್ಧಹೃದಯಾ ನ ಪಶ್ಯಂತ್ಯಂತಿಕೇಽಂತಕಮ್ ॥** ೪

## ಅಧ್ಯಾಯ ೩

ಪೃಥ್ವೀಗೀತ–ರಾಜರ ದುರಾಸೆ. ರಾಜ್ಯವು ಯಾರಿಗೂ ಶಾಶ್ವತವಲ್ಲ. ಚತುರ್ಯುಗಗಳ ಸಾಮಾನ್ಯ ಲಕ್ಷಣ. ಭಗವಂತನ ಕೀರ್ತನೆಯೇ ಕಲಿಯುಗದಲ್ಲಿ ತಾರಕ.

ಶುಕಮಹರ್ಷಿಗಳು ಹೇಳಿದರು : "ಪರೀಕ್ಷಿತ್‌ರಾಜ, ಈ ಪೃಥ್ವಿಯು ತನ್ನನ್ನು ಜಯಿಸಲು ಉದ್ಯುಕ್ತರಾದ ರಾಜರನ್ನು ನೋಡಿ ಹೀಗೆ ಹೇಳಿಕೊಂಡು ನಗುತ್ತಾಳೆ : ಏನೆಂದರೆ, "ಓಹೋ ! ಮೃತ್ಯುವಿನ ಆಟದ ಬೊಂಬೆಗಳಾದ ಈ ರಾಜರು ನನ್ನನ್ನು ಜಯಿಸುವುದಕ್ಕೆ ಬಯಸುತ್ತಾರೆ ! (೧). ತಿಳಿದವರಾದರೂ ಸಹ ಈ ನೃಪಾಲರು ನೀರಿನ ನೊರೆಯಂತೆ ಕ್ಷಣಿಕವಾದ ದೇಹದಲ್ಲಿ ಬಹಳ ವಿಶ್ವಾಸವನ್ನಿಟ್ಟು ವ್ಯರ್ಥವಾಗಿ ಪ್ರಯತ್ನಿಸುತ್ತಾರಲ್ಲ ! "ಮೊದಲು ಪಂಚೇಂದ್ರಿಯಗಳು, ಮನಸ್ಸು—ಎಂಬ ಷಡ್ವರ್ಗವನ್ನು ಜಯಿಸಿ ರಾಜನ ಮಂತ್ರಿಗಳನ್ನು ನಾವು ವಶಪಡಿಸಿಕೊಳ್ಳಬೇಕು. ಅನಂತರ ಕಂಟಕಪ್ರಾಯರಾದ ಅಮಾತ್ಯರನ್ನೂ ಪೌರರನ್ನೂ ಈ ರಾಜನ ಆಪ್ತರನ್ನೂ ಗಜಾದಿ ಸೇನೆಗಳನ್ನೂ ಸ್ವಾಧೀನಪಡಿಸಿಕೊಳ್ಳುವೆವು ! (೨–೩). ಈ ಕ್ರಮದಲ್ಲಿ ಸಮುದ್ರ ಪರ್ಯಂತವಾದ ಪೃಥ್ವಿಯನ್ನೇ ಜಯಿಸುವೆವು !" ಎಂದು ಆಶಾಬದ್ಧ ಹೃದಯರಾದ ಈ ಜನರು ಬಳಿಯಲ್ಲಿಯೇ ಕುಳಿತಿರುವ ಯಮನನ್ನು

ಸಮುದ್ರಾವರಣಾಂ ಜಿತ್ವಾ ಮಾಂ ವಿಶಂತ್ಯಬ್ಧಿಮೋಜಸಾ ।
ಕಿಯದಾತ್ಮಜಯಸ್ಯೈತನ್ಮುಕ್ತಿರಾತ್ಮಜಯೇ ಫಲಮ್ ॥ ೫

ಯಾಂ ವಿಸೃಜ್ಯೈವ ಮನವಸ್ತತ್ಸುತಾಶ್ಚ ಕುರೂದ್ವಹ ।
ಗತಾ ಯಥಾಗತಂ ಯುದ್ಧೇ ತಾಂ ಮಾಂ ಜೇಷ್ಯಂತ್ಯಬುದ್ಧಯಃ ॥ ೬

ಮತ್ಕೃತೇ ಪಿತೃಪುತ್ರಾಣಾಂ ಭ್ರಾತೃಣಾಂ ಚಾಪಿ ವಿಗ್ರಹಃ ।
ಜಾಯತೇ ಹ್ಯಸತಾಂ ರಾಜ್ಯೇ ಮಮತಾಬದ್ಧಚೇತಸಾಮ್ ॥ ೭

ಮಮೈವೇಯಂ ಮಹೀ ಕೃತ್ಸ್ನಾ ನ ತೇ ಮೂಢೇತಿ ವಾದಿನಃ ।
ಸ್ಪರ್ಧಮಾನಾ ಮಿಥೋ ಘ್ನಂತಿ ಮ್ರಿಯಂತೇ ಮತ್ಕೃತೇ ನೃಪಾಃ ॥ ೮

ಪೃಥುಃ ಪುರೂರವಾ ಗಾಧಿರ್ನಹುಷೋ ಭರತೋಽರ್ಜುನಃ ।
ಮಾಂಧಾತಾ ಸಗರೋ ರಾಮಃ ಖಟ್ವಾಂಗೋ ಧುಂಧುಹಾ ರಘುಃ ॥ ೯

---

ಕಾಣದೆ ಹೋಗಿದ್ದಾರೆ! ಸಮುದ್ರದವರೆಗೆ ನನ್ನನ್ನು ವಶಪಡಿಸಿಕೊಂಡಮೇಲೆ, ಪರಾಕ್ರಮವನ್ನು ಮೆರೆಸುತ್ತ ಸಮುದ್ರದೊಳಗೆ (ದ್ವೀಪಾಂತರಗಳನ್ನು ಜಯಿಸುವುದಕ್ಕಾಗಿ) ನುಗ್ಗುವರು! ಇಂದ್ರಿಯಜಯಕ್ಕೆ ಈ ಅಲ್ಪವಿಷಯವು ಯಾವ ದೊಡ್ಡ ಫಲ? ಇಂದ್ರಿಯಜಯಕ್ಕೆ ಫಲವಾಗಿ ಮೋಕ್ಷವೇ ದೊರೆಯುತ್ತದೆ (೪–೫). ಎಷ್ಟೋ ಮಂದಿ ಮನುಗಳೂ ವಂಶೋದ್ಧಾರಕರೆನಿಸಿದ ಅವರ ಪುತ್ರರೂ ನನ್ನನ್ನು ಇಲ್ಲಿಯೇ ಪರಿತ್ಯಜಿಸಿ, ತಾವು ಹೇಗೆ ಬಂದರೋ ಹಾಗೆ ಹೊರಟು ಹೋದರು! ಅಂತಹ ನನ್ನನ್ನು ಈ ಬುದ್ಧಿಹೀನರು ಯುದ್ಧಮಾಡಿ ಗೆದ್ದುಕೊಳ್ಳುವರಂತೆ! (೬). ರಾಜ್ಯವು 'ನನ್ನದು-ನನ್ನದು' ಎಂದು ಮಮತ್ವವು ಯಾರ ನೆತ್ತಿಗೇರಿದೆಯೋ ಅಂತಹ ದುರ್ಜನರ ನಡುವೆ ನನಗೋಸ್ಕರ ತಂದೆ ಮಕ್ಕಳಿಗೂ ಅಣ್ಣತಮ್ಮಂದಿರಿಗೂ ಯುದ್ಧವೇ ನಡೆಯುವುದು. 'ಎಲೈ ಮೂಢ, ಈ ಭೂಮಿಯೆಲ್ಲವೂ ನನ್ನದು, ನಿನ್ನದಲ್ಲ'—ಎಂದು ವಾದಿಸುತ್ತ, ಸ್ಪರ್ಧಿಸುತ್ತ, ತಮ್ಮತಮ್ಮರಲ್ಲಿಯೇ ಎದುರಾಳಿಗಳನ್ನು ಕೊಲ್ಲುವರು; ಸ್ವತಃ ಸಾಯುವರು (೭–೮). ಪೃಥು, ಪುರೂರವ, ಗಾಧಿ, ನಹುಷ, ಭರತಚಕ್ರವರ್ತಿ, ಕಾರ್ತವೀರ್ಯಾರ್ಜುನ, ಮಾಂಧಾತ, ಸಗರ, [1]ರಾಮ, ಖಟ್ವಾಂಗ, ಧುಂಧುಹಾ, ರಘು, ತೃಣಬಿಂದು,

---

1. ಈ ಹೆಸರಿನ ಒಬ್ಬಾನೊಬ್ಬ ರಾಜ ಅಥವಾ ಲೋಕದೃಷ್ಟಿಯಿಂದ ಶ್ರೀರಾಮನೆಂದಾದರೂ ತಿಳಿಯಬಹುದು.

ತೃಣಬಿಂದುರ್ಯಯಾತಿಶ್ಚ ಶರ್ಯಾತಿಃ ಶಂತನುರ್ಗಯಃ ।
ಭಗೀರಥಃ ಕುವಲಯಾಶ್ವಃ ಕಕುತ್ಸ್ಥೋ ನೈಷಧೋ ನೃಗಃ ॥ ೧೦

ಹಿರಣ್ಯಕಶಿಪುರ್ವೃತ್ರೋ ರಾವಣೋ ಲೋಕರಾವಣಃ ।
ನಮುಚಿಃ ಶಂಬರೋ ಭೌಮೋ ಹಿರಣ್ಯಾಕ್ಷೋಽಥ ತಾರಕಃ ॥ ೧೧

ಅನ್ಯೇ ಚ ಬಹವೋ ದೈತ್ಯಾ ರಾಜಾನೋ ಯೇ ಮಹೇಶ್ವರಾಃ ।
ಸರ್ವೇ ಸರ್ವವಿದಃ ಶೂರಾಃ ಸರ್ವೇ ಸರ್ವಜಿತೋಽಜಿತಾಃ ॥ ೧೨

ಮಮತಾಂ ಮಯ್ಯವರ್ತಂತ ಕೃತ್ವೋಚ್ಚೈರ್ಮರ್ತ್ಯಧರ್ಮಿಣಃ ।
ಕಥಾವಶೇಷಾಃ ಕಾಲೇನ ಹ್ಯಕೃತಾರ್ಥಾಃ ಕೃತಾ ವಿಭೋ ॥ ೧೩

ಕಥಾ ಇಮಾಸ್ತೇ ಕಥಿತಾ ಮಹೀಯಸಾಂ
ವಿತಾಯ ಲೋಕೇಷು ಯಶಃ ಪರೇಯುಷಾಮ್ ।
ವಿಜ್ಞಾನವೈರಾಗ್ಯವಿವಕ್ಷಯಾ ವಿಭೋ
ವಚೋವಿಭೂತೀರ್ನ ತು ಪಾರಮಾರ್ಥ್ಯಮ್ ॥ ೧೪

---

ಯಯಾತಿ, ಶರ್ಯಾತಿ, ಶಂತನು, ಗಯ, ಭಗೀರಥ, ಕುವಲಯಾಶ್ವ, ಕಕುತ್ಸ್ಥ, ನೈಷಧ, ನೃಗ—ಮುಂತಾದ ಬಹುಮಂದಿ ಕ್ಷತ್ರಿಯರಾಜರು ಗತಿಸಿಹೋಗಿದ್ದಾರೆ (೯–೧೦). ಹಾಗೆಯೇ ಹಿರಣ್ಯಕಶಿಪು, ವೃತ್ರ, ಲೋಕರಾವಣನೆನಿಸಿದ ರಾವಣ, ನಮುಚಿ, ಶಂಬರ, ನರಕಾಸುರ, ಹಿರಣ್ಯಾಕ್ಷ, ತಾರಕ—ಮುಂತಾದ ದೈತ್ಯೇಶ್ವರರೂ ಗತಿಸಿ ಹೋಗಿದ್ದಾರೆ. ಇವರೆಲ್ಲರೂ ಸರ್ವವನ್ನು ಬಲ್ಲವರೂ ಶೂರರೂ ಆಗಿದ್ದರು. ಸರ್ವರನ್ನು ಜಯಿಸಿದವರೂ ಅಪರಾಜಿತರೂ ಆಗಿದ್ದರು (೧೧–೧೨). ಮರಣ ಧರ್ಮಿಗಳಾದ ಈ ಜನರು ಪೃಥ್ವಿಯಾದ ನನ್ನ ವಿಷಯದಲ್ಲಿ 'ಇದು ನನ್ನದು-ಇದು ನನ್ನದು' ಎಂದು ಅತಿಶಯವಾದ ಮಮತ್ವವನ್ನಿಟ್ಟುಕೊಂಡಿದ್ದರು. ಒಬ್ಬರೂ ತಮ್ಮ ಉದ್ದೇಶಸಾಧನೆಯಲ್ಲಿ ಕೃತಾರ್ಥರಾಗದೆ ಕಥಾಶೇಷವಾಗಿ ನಶಿಸಿಹೋದರು !" ಪ್ರಭು-ಪರೀಕ್ಷಿತ, ಈ ರೀತಿಯಲ್ಲಿ ಪೃಥ್ವಿಯು ಹೇಳಿಕೊಂಡು ನಗುತ್ತಾಳೆ (೧೩). ರಾಜ, ಲೋಕವಿಖ್ಯಾತರಾಗಿದ್ದು ಮೃತರಾಗಿಹೋದ ಈ ಭೂಪತಿಗಳ ವೈಭವದ ಕಥೆಯನ್ನು ನಿನಗೆ ಹೇಳಿರುವುದೇಕೆಂದರೆ—ವಿಷಯಭೋಗವು ನಿಃಸಾರವೆಂಬ ಜ್ಞಾನವು ನಿನಗೆ ಹುಟ್ಟಲಿ, ವೈರಾಗ್ಯ ಉದಿಸಲಿ—ಎಂದು. ಇವರ ಕಥೆಯೇ

ಯಸ್ತೂತ್ತಮಶ್ಲೋಕಗುಣಾನುವಾದಃ
ಸಂಗೀಯತೇऽಭೀಕ್ಷ್ಣಮಮಂಗಲಘ್ನಃ ।
ತಮೇವ ನಿತ್ಯಂ ಶೃಣುಯಾದಭೀಕ್ಷ್ಣಂ
ಕೃಷ್ಣೇऽಮಲಾಂ ಭಕ್ತಿಮಭೀಪ್ಸಮಾನಃ ॥ ೧೫

ರಾಜೋವಾಚ—

ಕೇನೋಪಾಯೇನ ಭಗವನ್ ಕಲೇರ್ದೋಷಾನ್ ಕಲೌ ಜನಾಃ ।
ವಿಧಮಿಷ್ಯಂತ್ಯುಪಚಿತಾಂಸ್ತನ್ಮೇ ಬ್ರೂಹಿ ಯಥಾ ಮುನೇ ॥ ೧೬

ಯುಗಾನಿ ಯುಗಧರ್ಮಾಂಶ್ಚ ಮಾನಂ ಪ್ರಲಯಕಲ್ಪಯೋಃ ।
ಕಾಲಸ್ಯೇಶ್ವರರೂಪಸ್ಯ ಗತಿಂ ವಿಷ್ಣೋರ್ಮಹಾತ್ಮನಃ ॥ ೧೭

ಶ್ರೀಶುಕ ಉವಾಚ—

ಕೃತೇ ಪ್ರವರ್ತತೇ ಧರ್ಮಶ್ಚತುಷ್ಪಾತ್ತಜ್ಜನೈರ್ಧೃತಃ ।
ಸತ್ಯಂ ದಯಾ ತಪೋ ದಾನಮಿತಿ ಪಾದಾ ವಿಭೋರ್ನೃಪ ॥ ೧೮

---

ಪರಮಾರ್ಥವಲ್ಲ (೧೪). ಸಜ್ಜನರಿಂದ ಮತ್ತೆ ಮತ್ತೆ ಹಾಡಲ್ಪಡುವ ಭಗವಂತನ ಕಥೆಯೇ ಪರಮಾರ್ಥವಾದದ್ದು. ಅದು ಶ್ರೀಕೃಷ್ಣನ ಗುಣಗಳನ್ನು ವರ್ಣಿಸುತ್ತದೆ. ಅಮಂಗಲವನ್ನು ಪರಿಹರಿಸುತ್ತದೆ. ಭಕ್ತಿಯನ್ನು ಬೆಳೆಸುತ್ತದೆ. ಅದನ್ನು ವಿಶೇಷವಾಗಿ ಕೇಳುತ್ತಿರಬೇಕು" ಎಂದರು (೧೫). ಆಗ ಪರೀಕ್ಷಿತನು "ಮುನಿಗಳೆ, ಕಲಿಯುಗದಲ್ಲಿ ಉಪಚಿತವಾಗುವ ದೋಷಗಳನ್ನು ಜನರು ಯಾವ ಉಪಾಯದಿಂದ ಪರಿಹರಿಸಿಕೊಳ್ಳಬಹುದು? ಯುಗಗಳ ಮತ್ತು ಯುಗಧರ್ಮಗಳ ವಿಷಯವನ್ನು ತಿಳಿಸೋಣವಾಗಲಿ. ಅಲ್ಲದೆ ಪ್ರಳಯಕಾಲ ಮತ್ತು ಸ್ಥಿತಿಕಾಲಗಳ ಗತಿ ಪ್ರಮಾಣವೆಷ್ಟು? ಈ ಕಾಲವು ಮಹಾತ್ಮನಾದ ವಿಷ್ಣುವಿನ ಈಶ್ವರರೂಪವೇ ಸರಿಯಷ್ಟೆ?—ಈ ವಿಚಾರವನ್ನು ಹೇಳಿರಿ" ಎಂದನು (೧೬–೧೭). ಶುಕಮಹರ್ಷಿಗಳು ಇಂತೆಂದರು: "ಕೃತಯುಗದಲ್ಲಿ ಧರ್ಮವು ನಾಲ್ಕು ಪಾದಗಳಿಂದ ಕೂಡಿರುತ್ತದೆ. ಸತ್ಯ, ದಯೆ, ತಪಸ್ಸು, [1]ದಾನ—ಎಂಬಿವೇ ಧರ್ಮದ ನಾಲ್ಕು ಪಾದಗಳು. ಆ ಕಾಲದ ಜನರು

1. ದಾನ – ರಾಗದ್ವೇಷರಹಿತವಾದ ಅಭಯದಾನ. ಪ್ರಥಮಸ್ಕಂಧದಲ್ಲಿ ಇದನ್ನೇ ಶೌಚವೆಂದು ಹೆಸರಿಸಲಾಗಿದೆ (೧–೬–೨೬).

ಸಂತುಷ್ಟಾಃ ಕರುಣಾ ಮೈತ್ರಾಃ ಶಾಂತಾ ದಾಂತಾಸ್ತಿತಿಕ್ಷವಃ ।
ಆತ್ಮಾರಾಮಾಃ ಸಮದೃಶಃ ಪ್ರಾಯಶಃ ಶ್ರಮಣಾ ಜನಾಃ ॥ ೧೯

ತ್ರೇತಾಯಾಂ ಧರ್ಮಪಾದಾನಾಂ ತುರ್ಯಾಂಶೋ ಹೀಯತೇ ಶನೈಃ ।
ಅಧರ್ಮಪಾದೈರನೃತಹಿಂಸಾಸಂತೋಷವಿಗ್ರಹೈಃ ॥ ೨೦

ತದಾ ಕ್ರಿಯಾತಪೋನಿಷ್ಠಾ ನಾತಿಹಿಂಸ್ರಾ ನ ಲಂಪಟಾಃ ।
ತ್ರೈವರ್ಗಿಕಾಸ್ತ್ರಯೀವೃದ್ಧಾ ವರ್ಣಾ ಬ್ರಹ್ಮೋತ್ತರಾ ನೃಪ ॥ ೨೧

ತಪಸ್ಸತ್ಯದಯಾದಾನೇಷ್ವರ್ಧಂ ಹ್ರಸತಿ ದ್ವಾಪರೇ ।
ಹಿಂಸಾತುಷ್ಟ್ಯನೃತದ್ವೇಷೈರ್ಧರ್ಮಸ್ಯಾಧರ್ಮಲಕ್ಷಣೈಃ ॥ ೨೨

ಯಶಸ್ವಿನೋ ಮಹಾಶಾಲಾಃ ಸ್ವಾಧ್ಯಾಯಾಧ್ಯಯನೇ ರತಾಃ ।
ಆಢ್ಯಾಃ ಕುಟುಂಬಿನೋ ಹೃಷ್ಟಾ ವರ್ಣಾಃ ಕ್ಷತ್ರದ್ವಿಜೋತ್ತರಾಃ ॥ ೨೩

---

ಈ ಬಗೆಯಲ್ಲಿ ಧರ್ಮವನ್ನು ಪಾಲಿಸುತ್ತಾರೆ (೧೮). ಕೃತಯುಗದ ಜನರು ಪ್ರಾಯೇಣ ಸಂತೃಪ್ತರೂ, ಕಾರುಣ್ಯಶೀಲರೂ, ಪ್ರಾಣಿಗಳಲ್ಲಿ ಸ್ನೇಹಪರರೂ, ಶಾಂತರೂ, ದಾಂತರೂ, ತಿತಿಕ್ಷುಗಳೂ, ಆತ್ಮಾರಾಮರೂ, ಸಮದೃಷ್ಟಿಯುಳ್ಳವರೂ, ಆತ್ಮಚಿಂತನಶೀಲರೂ ಆಗಿರುತ್ತಾರೆ (೧೯). ತ್ರೇತಾಯುಗದಲ್ಲಿ ಸುಳ್ಳು, ಹಿಂಸೆ, ಅತೃಪ್ತಿ, ಕಲಹ—ಎಂಬ ಅಧರ್ಮಾಂಶಗಳು ಕ್ರಮವಾಗಿ ಧರ್ಮಪಾದಗಳಲ್ಲಿ ಸೇರಿಕೊಂಡು ಸತ್ಯ, ದಯೆ, ತಪಸ್ಸು, ದಾನಗಳಲ್ಲಿ ನಾಲ್ಕನೆಯ ಒಂದಂಶವು ಹ್ರಾಸಗೊಳ್ಳುತ್ತದೆ (೨೦). ಆಗ ಪ್ರಜೆಗಳು ಕರ್ಮಠರೂ ತಪೋನಿರತರೂ ಆಗಿರುತ್ತಾರೆ. ಜನರು ಹೆಚ್ಚು ಕ್ರೂರಿಗಳೂ ಅಲ್ಲ, ಕಾಮಲಂಪಟರೂ ಅಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಚೆನ್ನಾಗಿ ವೇದಾಭ್ಯಾಸವನ್ನು ಮಾಡಿರುತ್ತಾರೆ. ವರ್ಣಗಳಲ್ಲಿ ಬ್ರಾಹ್ಮಣರ ಸಂಖ್ಯೆ ಅಧಿಕವಾಗಿದ್ದು ಅವರಿಗೆ ಪ್ರಾಧಾನ್ಯವಿರುತ್ತದೆ (೨೧). ಆಮೇಲೆ ದ್ವಾಪರಯುಗದಲ್ಲಿ ಅಧರ್ಮಗಳಾದ ಹಿಂಸೆ, ಅತೃಪ್ತಿ, ಅಸತ್ಯ, ದ್ವೇಷ—ಎಂಬಿವು ಸೇರಿಕೊಂಡು ಹಿಂದೆ ಹೇಳಿದ ತಪಸ್ಸು, ಸತ್ಯ, ದಯೆ, ದಾನಗಳೆಂಬ ಧರ್ಮಪಾದಗಳು ಅರ್ಧಭಾಗ ಕ್ಷೀಣಿಸುತ್ತವೆ. ಪ್ರಜೆಗಳು ಕೀರ್ತಿಪ್ರಿಯರೂ ಶೀಲವಂತರೂ ವೇದಾಧ್ಯಯನದಲ್ಲಿ ಆಸಕ್ತರೂ ಆಗಿರುತ್ತಾರೆ. ಸಂಸಾರಿಗಳಾದ ಗೃಹಸ್ಥರು ಶ್ರೀಮಂತರಾಗಿರುತ್ತಾರೆ. ವರ್ಣಗಳಲ್ಲಿ ಕ್ಷತ್ರಿಯರಿಗೂ ಬ್ರಾಹ್ಮಣರಿಗೂ

ಕಲೌ ತು ಧರ್ಮಹೇತೂನಾಂ ತುರ್ಯಾಂಶೋಽಧರ್ಮಹೇತುಭಿಃ ।
ಏಧಮಾನೈಃ ಕ್ಷೀಯಮಾಣೋ ಹ್ಯಂತೇ ಸೋಽಪಿ ವಿನಂಕ್ಷ್ಯತಿ ॥ ೨೪

ತಸ್ಮಿಂಲ್ಲುಬ್ಧಾ ದುರಾಚಾರಾ ನಿರ್ದಯಾಃ ಶುಷ್ಕವೈರಿಣಃ ।
ದುರ್ಭಗಾ ಭೂರಿತರ್ಷಾಶ್ಚ ಶೂದ್ರದಾಶೋತ್ತರಾಃ ಪ್ರಜಾಃ ॥ ೨೫

ಸತ್ತ್ವಂ ರಜಸ್ತಮ ಇತಿ ದೃಶ್ಯಂತೇ ಪುರುಷೇ ಗುಣಾಃ ।
ಕಾಲಸಂಚೋದಿತಾಸ್ತೇ ವೈ ಪರಿವರ್ತಂತ ಆತ್ಮನಿ ॥ ೨೬

ಪ್ರಭವಂತಿ ಯದಾ ಸತ್ತ್ವೇ ಮನೋಬುದ್ಧೀಂದ್ರಿಯಾಣಿ ಚ ।
ತದಾ ಕೃತಯುಗಂ ವಿದ್ಯಾಜ್ಞಾನೇ ತಪಸಿ ಯದ್‌ರುಚಿಃ ॥ ೨೭

ಯದಾ ಧರ್ಮಾರ್ಥಕಾಮೇಷು ಭಕ್ತಿರ್ಭವತಿ ದೇಹಿನಾಮ್ ।
ತದಾ ತ್ರೇತಾ ರಜೋವೃತ್ತಿರಿತಿ ಜಾನೀಹಿ ಬುದ್ಧಿಮನ್ ॥ ೨೮

---

ಪ್ರಾಧಾನ್ಯವಿರುವುದು (೨೨–೨೩). ಆನಂತರ ಕಲಿಯುಗದಲ್ಲಾದರೋ ತಪಸ್ಸು, ಸತ್ಯ, ದಯಾ, ದಾನಗಳೆಂಬ ಧರ್ಮಪಾದಗಳು ಹಿಂಸೆ, ಸುಳ್ಳು, ಅತೃಪ್ತಿ, ಕಲಹಗಳೆಂಬ ಅಧರ್ಮಗಳ ಆಕ್ರಮಣದಿಂದ ಕ್ಷಯಿಸುತ್ತ ಹೋಗುತ್ತವೆ. ಕಡೆಗೆ ಧರ್ಮವು ನಶಿಸಿಯೇ ಹೋಗುವುದು (೨೪). ಕಲಿಯುಗದಲ್ಲಿ ಜನರು ಲೋಭಿಗಳೂ ದುರಾಚಾರರೂ ನಿರ್ದಯರೂ ಜಗಳಗಂಟರೂ ಆಗಿರುವರು ಭಾಗ್ಯಹೀನರೂ ಆಸೆಬುರುಕರೂ ಆಗಿರುವರು. ಶೂದ್ರರಿಗೂ ಸಂಕರ ಜಾತಿಯವರಿಗೂ ಪ್ರಾಧಾನ್ಯ ವಿರುತ್ತದೆ (೨೫) ಪರೀಕ್ಷಿತ, ಮನುಷ್ಯರಲ್ಲಿ ಸತ್ತ್ವ, ರಜಸ್ಸು, ತಮಸ್ಸು — ಎಂಬ ಮೂರು ಗುಣಗಳು ಕಂಡುಬರುತ್ತವೆ. ಅವು ಕಾಲದಿಂದ ಪ್ರೇರಿತವಾಗಿ ತಮ್ಮ ತಮ್ಮಲ್ಲಿ ಪರಿವರ್ತನೆ ಹೊಂದುತ್ತವೆ. ಮನೋಬುದ್ಧಿಗಳೂ ಇಂದ್ರಿಯಗಳೂ ಸತ್ತ್ವಗುಣದಲ್ಲಿ ವಿಶೇಷವಾಗಿ ನೆಲೆಸಿದಾಗ ಕೃತಯುಗವು ನಡೆಯುತ್ತಿದೆಯೆಂದು ತಿಳಿಯಬೇಕು. ಆಗ ಜ್ಞಾನತಪಸ್ಸುಗಳಲ್ಲಿ ಜನರಿಗೆ ಅಭಿರುಚಿಯು ಅಧಿಕವಾಗಿರುತ್ತದೆ (೨೬–೨೭). ಶಾಸ್ತ್ರೀಯ ಕರ್ಮಗಳಲ್ಲಿಯೂ ವಿವಿಧ ಕಾಮನೆಗಳಲ್ಲಿಯೂ ಜನರಿಗೆ ಪ್ರೀತಿಯು ಅಧಿಕವಾದಾಗ ರಜೋಗುಣಪ್ರಧಾನವಾದ ತ್ರೇತಾಯುಗವೆಂದು ಭಾವಿಸು. ಇನ್ನು ಜನರಿಗೆ ಲೋಭ, ಅಸಂತೋಷ, ಅಭಿಮಾನ, ದಂಭ, ಮತ್ಸರಗಳೂ ಕಾಮ್ಯಕರ್ಮಗಳಲ್ಲಿ ಅಭಿರುಚಿಯೂ ಹೆಚ್ಚಿದಾಗ ರಜಸ್ತಮೋಗುಣ

ಯದಾ ಲೋಭಸ್ತ್ವಸಂತೋಷೋ ಮಾನೋ ದಂಭೋಽಥ ಮತ್ಸರಃ |
ಕರ್ಮಣಾಂ ಚಾಪಿ ಕಾಮ್ಯಾನಾಂ ದ್ವಾಪರಂ ತದ್ ರಜಸ್ತಮಃ || ೨೯

ಯದಾ ಮಾಯಾನೃತಂ ತಂದ್ರಾ ನಿದ್ರಾ ಹಿಂಸಾ ವಿಷಾದನಮ್ |
ಶೋಕೋ ಮೋಹೋ ಭಯಂ ದೈನ್ಯಂ ಸ ಕಲಿಸ್ತಾಮಸಃ ಸ್ಮೃತಃ || ೩೦

ಯಸ್ಮಾತ್ ಕ್ಷುದ್ರದೃಶೋ ಮರ್ತ್ಯಾಃ ಕ್ಷುದ್ರಭಾಗ್ಯಾ ಮಹಾಶನಾಃ |
ಕಾಮಿನೋ ವಿತ್ತಹೀನಾಶ್ಚ ಸ್ವೈರಿಣ್ಯಶ್ಚ ಸ್ತ್ರಿಯೋಽಸತೀಃ || ೩೧

ದಸ್ಯೂತ್ಕೃಷ್ಟಾ ಜನಪದಾ ವೇದಾಃ ಪಾಖಂಡದೂಷಿತಾಃ |
ರಾಜಾನಶ್ಚ ಪ್ರಜಾಭಕ್ಷಾಃ ಶಿಶ್ನೋದರಪರಾ ದ್ವಿಜಾಃ || ೩೨

ಅವ್ರತಾ ವಟವೋಽಶೌಚಾ ಭಿಕ್ಷವಶ್ಚ ಕುಟುಂಬಿನಃ |
ತಪಸ್ವಿನೋ ಗ್ರಾಮವಾಸಾ ನ್ಯಾಸಿನೋಽತ್ಯರ್ಥಲೋಲುಪಾಃ || ೩೩

ಹ್ರಸ್ವಕಾಯಾ ಮಹಾಹಾರಾ ಭೂರ್ಯಪತ್ಯಾ ಗತಹ್ರಿಯಃ |
ಶಶ್ವತ್ಕಟುಕಭಾಷಿಣ್ಯಶ್ಚೌರ್ಯಮಾಯೋರುಸಾಹಸಾಃ || ೩೪

---

ಗಳೆಡೂ ಪ್ರಧಾನವಾದ ದ್ವಾಪರವೆಂದು ತಿಳಿ (೨೮–೨೯). ಯಾವಾಗ ಮೋಸ, ಸುಳ್ಳು, ನಿದ್ರೆ, ಆಲಸ್ಯ, ಹಿಂಸೆ, ದುಃಖ, ವ್ಯಥೆ, ಅಜ್ಞಾನ, ಭಯ, ದೈನ್ಯಗಳು ಅಧಿಕವಾಗುತ್ತವೋ ಆಗ ತಮೋಗುಣಪ್ರಧಾನವಾದ ಕಲಿಯುಗವು ನಡೆಯುತ್ತದೆಯೆಂದು ತಿಳಿಯತಕ್ಕದ್ದು (೩೦). ಕಲಿಯ ಪ್ರಾಬಲ್ಯದಿಂದ ಮನುಷ್ಯರು ಮಂದಮತಿಗಳೂ ಅಲ್ಪಭಾಗ್ಯರೂ ಹೊಟ್ಟೆಬಾಕರೂ ದರಿದ್ರರಾದರೂ ಕಾಮಿಗಳೂ ಆಗಿರುತ್ತಾರೆ. ಸ್ತ್ರೀಯರು ಜಾರಿಣಿಯರೂ ದುಷ್ಟರೂ ಆಗಿರುತ್ತಾರೆ. ರಾಜ್ಯಗಳಲ್ಲಿ ದಸ್ಯುಗಳು ಹೆಚ್ಚುತ್ತಾರೆ. ಪಾಖಂಡರು ವೇದಾಭ್ಯಾಸದಲ್ಲಿ ತೊಡಗಿ ಅದನ್ನು ಕೆಡಿಸುತ್ತಾರೆ. ಆಗ ರಾಜರೆಂದರೆ ಪ್ರಜೆಗಳನ್ನು ತಿನ್ನತಕ್ಕವರೇ ಸರಿ. ಬ್ರಾಹ್ಮಣರು ಶಿಶ್ನೋದರಪರಾಯಣರಾಗುವರು (೩೧–೩೨). ವಟುಗಳು ಬ್ರಹ್ಮಚರ್ಯವ್ರತವನ್ನು ಪಾಲಿಸುವುದಿಲ್ಲ. ಶೌಚವರ್ಜಿತರಾಗುವರು. (ಭಿಕ್ಷೆಯನ್ನು ನೀಡಬೇಕಾದ) ಗೃಹಸ್ಥರೇ ಬೇಡುವುದಕ್ಕೆ ಹೊರಡುವರು. ವಾನಪ್ರಸ್ಥರಾಗಬೇಕಾದವರು ಗ್ರಾಮಗಳಲ್ಲಿಯೇ ನೆಲೆಸುವರು. ಸಂನ್ಯಾಸಿಗಳು ಧನಲೋಲುಪರಾಗುವರು (೩೩). ಕಲಿಯುಗದಲ್ಲಿ ಸ್ತ್ರೀಯರ ದೇಹವು ಕುಳ್ಳಾಗಿರುತ್ತದೆ. ಆಹಾರವನ್ನು ಮಾತ್ರ ವಿಪುಲವಾಗಿ ತಿನ್ನುತ್ತಾರೆ. ಅವರಿಗೆ ಮಕ್ಕಳು ಬಹಳ. ಈ ಹೆಂಗಸರಿಗೆ ನಾಚಿಕೆ

*

ಪಣಯಿಷ್ಯಂತಿ ವೈ ಕ್ಷುದ್ರಾಃ ಕಿರಾಟಾಃ ಕೂಟಕಾರಿಣಃ ।
ಅನಾಪದ್ಯಪಿ ಮಂಸ್ಯಂತೇ ವಾರ್ತಾಂ ಸಾಧುಜುಗುಪ್ಸಿತಾಮ್ ॥ ೩೫

ಪತಿಂ ತ್ಯಕ್ಷ್ಯಂತಿ ನಿರ್ದ್ರವ್ಯಂ ಭೃತ್ಯಾ ಅಪ್ಯಖಿಲೋತ್ತಮಮ್ ।
ಭೃತ್ಯಂ ವಿಪನ್ನಂ ಪತಯಃ ಕೌಲಂ ಗಾಶ್ಚಾಪಯಸ್ವಿನೀಃ ॥ ೩೬

ಪಿತೃಭ್ರಾತೃಸುಹೃಜ್ಜ್ಞಾತೀನ್ ಹಿತ್ವಾ ಸೌರತಸೌಹೃದಾಃ ।
ನನಾಂದೃಶ್ಯಾಲಸಂವಾದಾ ದೀನಾಃ ಸ್ತ್ರೈಣಾಃ ಕಲೌ ನರಾಃ ॥ ೩೭

ಶೂದ್ರಾಃ ಪ್ರತಿಗ್ರಹೀಷ್ಯಂತಿ ತಪೋವೇಷೋಪಜೀವಿನಃ ।
ಧರ್ಮಂ ವಕ್ಷ್ಯಂತ್ಯಧರ್ಮಜ್ಞಾ ಅಧಿರುಹ್ಯೋತ್ತಮಾಸನಮ್ ॥ ೩೮

---

ಇರುವುದಿಲ್ಲ. ಸದಾ ಕಠೋರವಾಗಿ ಮಾತಾಡತಕ್ಕವರೂ ಕಳ್ಳತನ, ವಂಚನೆ, ಸಾಹಸ ಪ್ರವೃತ್ತಿಗಳಲ್ಲಿ ನಿರತರೂ ಆಗಿರುವರು (೩೪). ವ್ಯಾಪಾರಿಗಳು ಕ್ಷುದ್ರ ಸ್ವಭಾವದವರೂ ಮೋಸಗಾರರೂ ಆಗಿದ್ದು ವಾಣಿಜ್ಯವೃತ್ತಿಯಲ್ಲಿ ತೊಡಗುತ್ತಾರೆ. ಅಲ್ಲದೆ ಸಜ್ಜನರಿಗೆ ನಿಂದ್ಯವೂ ಕಪಟಪ್ರಧಾನವೂ ಆದ ವ್ಯಾಪಾರವೃತ್ತಿಯಲ್ಲಿ, ಆಪತ್ಕಾಲ ಬರದಿದ್ದರೂ ಸಹ, ಸರ್ವವರ್ಣದವರೂ ಪ್ರವರ್ತಿಸುತ್ತಾರೆ (೩೫). ಒಡೆಯನು ಸರ್ವೋತ್ತಮಗುಣಶಾಲಿಯಾಗಿದ್ದರೂ ಅವನಲ್ಲಿ ಹಣವಿಲ್ಲವೆಂದೊಡನೆ ಸೇವಕರು ತ್ಯಜಿಸಿಬಿಡುತ್ತಾರೆ. ಒಬ್ಬನು ಕುಲಪರಂಪರೆಯಿಂದ ಸೇವಕನಾಗಿದ್ದರೂ ಅವನು ರೋಗಾದಿಗಳಿಂದ ಕಷ್ಟಕ್ಕೆ ಸಿಕ್ಕಿದಾಗ ಆತನನ್ನು ಒಡೆಯರಾದವರೂ ತ್ಯಜಿಸಿಬಿಡುತ್ತಾರೆ! ಹಾಲು ಕೊಡುವುದಿಲ್ಲವೆಂದು ಹಸುಗಳನ್ನು ಪರಿತ್ಯಜಿಸುವರು (೩೬). ಕಲಿಯುಗದಲ್ಲಿ ಜನರು ಮೈಥುನಪ್ರಿಯರೂ ಸ್ತ್ರೀಲಂಪಟರೂ ಆಗಿರುವುದ ರಿಂದ ತಮಗೆ ಕಷ್ಟಬಂದಾಗ, ತಂದೆ ಸೋದರ-ಮಿತ್ರ-ಬಾಂಧವರನ್ನು ಉಪೇಕ್ಷಿಸಿ, ಹೆಂಡತಿಯರ ಅಕ್ಕ ತಂಗಿಯರೊಡನೆಯೂ ಹೆಂಡತಿಯರ ಅಣ್ಣ ತಮ್ಮಂದಿರೊಡನೆಯೂ ಮಂತ್ರಾಲೋಚನೆಯನ್ನು ನಡೆಸುವರು! (೩೭). ಶೂದ್ರರು ಉಪಜೀವನಕ್ಕಾಗಿ ತಪಸ್ವಿಗಳ ವೇಷವನ್ನು ಧರಿಸಿ ಪ್ರತಿಗ್ರಹವನ್ನು ಸ್ವೀಕರಿಸುವರು. ಧರ್ಮವನ್ನರಿಯದವರು ಉತ್ತಮ ಪೀಠದಲ್ಲಿ ಕುಳಿತು ಧರ್ಮದ ವಿಷಯದಲ್ಲಿ ಪ್ರವಚನ ಮಾಡುವರು! ಪರೀಕ್ಷಿತರಾಜ, ಕಲಿಯುಗದಲ್ಲಿ ಜನರು ಸರ್ವದಾ ಅಶಾಂತಿಯಿಂದ ತಳಮಳಿಸುತ್ತಾರೆ. ದುರ್ಭಿಕ್ಷದಿಂದಲೂ ಸರ್ಕಾರಕ್ಕೆ ಸಲ್ಲಿಸ ಬೇಕಾದ ಕರದಿಂದಲೂ ಪೀಡಿತರಾಗಿರುತ್ತಾರೆ. ಭೂತಳದಲ್ಲಿ ಅನ್ನವೇ ಶೂನ್ಯ

ನಿತ್ಯಮುದ್ವಿಗ್ನಮನಸೋ ದುರ್ಭಿಕ್ಷಕರಕರ್ಶಿತಾಃ ।
ನಿರನ್ನೇ ಭೂತಲೇ ರಾಜನ್ನನಾವೃಷ್ಟಿಭಯಾತುರಾಃ ॥ ೩೯

ವಾಸೋಽನ್ನಪಾನಶಯನವ್ಯವಾಯಸ್ನಾನ ಭೂಷಣೈಃ ।
ಹೀನಾಃ ಪಿಶಾಚಸಂದರ್ಶಾ ಭವಿಷ್ಯಂತಿ ಕಲೌ ಪ್ರಜಾಃ ॥ ೪೦

ಕಲೌ ಕಾಕಿಣಿಕೇಽಪ್ಯರ್ಥೇ ವಿಗೃಹ್ಯ ತ್ಯಕ್ತಸೌಹೃದಾಃ ।
ತ್ಯಕ್ಷ್ಯಂತಿ ಚ ಪ್ರಿಯಾನ್ ಪ್ರಾಣಾನ್ ಹನಿಷ್ಯಂತಿ ಸ್ವಕಾನಪಿ ॥ ೪೧

ನ ರಕ್ಷಿಷ್ಯಂತಿ ಮನುಜಾಃ ಸ್ಥವಿರೌ ಪಿತರಾವಪಿ ।
ಪುತ್ರಾನ್ ಸರ್ವಾರ್ಥಕುಶಲಾನ್ ಕ್ಷುದ್ರಾಃ ಶಿಶ್ನೋದರಂಭರಾಃ ॥ ೪೨

ಕಲೌ ನ ರಾಜನ್ ಜಗತಾಂ ಪರಂ ಗುರುಂ
ತ್ರಿಲೋಕನಾಥಾನತಪಾದಪಂಕಜಮ್ ।
ಪ್ರಾಯೇಣ ಮರ್ತ್ಯಾ ಭಗವಂತಮಚ್ಯುತಂ
ಯಕ್ಷ್ಯಂತಿ ಪಾಖಂಡವಿಭಿನ್ನಚೇತಸಃ ॥ ೪೩

ಯನ್ನಾಮಧೇಯಂ ಮ್ರಿಯಮಾಣ ಆತುರಃ
ಪತನ್ ಸ್ಖಲನ್ ವಾ ವಿವಶೋ ಗೃಣನ್ ಪುಮಾನ್ ।

---

ವಾಗಲು, ಅನಾವೃಷ್ಟಿ ಭಯದಿಂದ ಕಂಗೆಡುತ್ತಾರೆ (೩೮–೩೯). ಕಲಿಯುಗದಲ್ಲಿ ಪ್ರಜೆಗಳು ವಸ್ತ್ರ, ಅನ್ನ, ಪಾನ, ಶಯನ, ಶಾಸ್ತ್ರೋಕ್ತವಾದ ಕಾಮ, ಸ್ನಾನ, ಭೂಷಣಗಳಿಂದ ರಹಿತರಾಗಿ ಪಿಶಾಚಗಳಂತೆ ಕಾಣಿಸುತ್ತಾರೆ. ಕಲಿಯುಗದಲ್ಲಿ ಜನರು ಒಂದು ಬಿಡಿಗಾಸಿಗೋಸ್ಕರ ಸ್ನೇಹವನ್ನು ದೂರಮಾಡಿ ಜಗಳವಾಡುವರು. ಬಿಡಿಗಾಸಿಗೋಸ್ಕರ ಪ್ರಾಣವನ್ನು ಬಿಡುವರು. ಪ್ರಿಯರಾದ ಬಂಧುಗಳನ್ನೂ ಕೊಲ್ಲುವರು (೪೦–೪೧). ಶಿಶ್ನೋದರಪರಾಯಣರಾದ ಈ ಕ್ಷುದ್ರಜನರು ಮುದುಕರಾದ ತಂದೆ ತಾಯಿಗಳನ್ನೂ ಕಾಪಾಡುವುದಿಲ್ಲ, ಸರ್ವಾರ್ಥಕುಶಲರಾದ ತಮ್ಮ ಮಕ್ಕಳ ಯೋಗಕ್ಷೇಮವನ್ನೂ ನೋಡಿಕೊಳ್ಳುವುದಿಲ್ಲ. ರಾಜ, ಕಲಿಯುಗದಲ್ಲಿ ಪಾಖಂಡರು ಜನರ ಬುದ್ಧಿಯನ್ನು ಕೆಡಿಸಿಬಿಡುತ್ತಾರೆ. ಆದ್ದರಿಂದ ಜಗದ್ಗುರುವೂ ತ್ರಿಲೋಕೇಶ್ವರರಿಂದ ವಂದಿತಚರಣಕಮಲನೂ ಆದ ಭಗವಾನ್ ಶ್ರೀಮನ್ನಾ-ರಾಯಣನನ್ನು ಈ ಜನರು ಪ್ರಾಯಶಃ ಅರ್ಚಿಸುವುದಿಲ್ಲ (೪೨–೪೩). ಒಬ್ಬ ಮನುಷ್ಯನು ಸಾಯುತ್ತಿರಲಿ, ರೋಗಿಯಾಗಿರಲಿ, ಪತಿತನಾಗಲಿ, ಕಾರ್ಯದಲ್ಲಿ

ವಿಮುಕ್ತಕರ್ಮಾರ್ಗಲ ಉತ್ತಮಾಂ ಗತಿಂ
ಪ್ರಾಪ್ನೋತಿ ಯಕ್ಷ್ಯಂತಿ ನ ತಂ ಕಲೌ ಜನಾಃ ॥ ೪೪

ಪುಂಸಾಂ ಕಲಿಕೃತಾನ್ ದೋಷಾನ್ ದ್ರವ್ಯದೇಶಾತ್ಮಸಂಭವಾನ್ ।
ಸರ್ವಾನ್ ಹರತಿ ಚಿತ್ತಸ್ಥೋ ಭಗವಾನ್ ಪುರುಷೋತ್ತಮಃ ॥ ೪೫

ಶ್ರುತಃ ಸಂಕೀರ್ತಿತೋ ಧ್ಯಾತಃ ಪೂಜಿತಶ್ಚಾದೃತೋಽಪಿ ವಾ ।
ನೃಣಾಂ ಧುನೋತಿ ಭಗವಾನ್ ಹೃತ್ಸ್ಥೋ ಜನ್ಮಾಯುತಾಶುಭಮ್ ॥ ೪೬

ಯಥಾ ಹೇಮ್ನಿ ಸ್ಥಿತೋ ವಹ್ನಿರ್ದುರ್ವರ್ಣಂ ಹಂತಿ ಧಾತುಜಮ್ ।
ಏವಮಾತ್ಮಗತೋ ವಿಷ್ಣುರ್ಯೋಗಿನಾಮಶುಭಾಶಯಮ್ ॥ ೪೭

ವಿದ್ಯಾತಪಃ ಪ್ರಾಣನಿರೋಧಮೈತ್ರೀ-
ತೀರ್ಥಾಭಿಷೇಕವ್ರತದಾನಜಪ್ಯೈಃ ।
ನಾತ್ಯಂತಶುದ್ಧಿಂ ಲಭತೇಽಂತರಾತ್ಮಾ
ಯಥಾ ಹೃದಿಸ್ಥೇ ಭಗವತ್ಯನಂತೇ ॥ ೪೮

---

ಎಡವಿರಲಿ—ಯಾವ ಪರಿಸ್ಥಿತಿಯಲ್ಲಿದ್ದರೂ ವಿವಶನಾಗಿ—ಯಾವಾತನ ಪುಣ್ಯನಾಮಧೇಯವನ್ನು ಉಚ್ಚರಿಸಿದ ಮಾತ್ರದಿಂದ ಪ್ರಾಚೀನಕರ್ಮಗಳ ಸಂಕೋಲೆಗಳನ್ನು ಬಿಡಿಸಿಕೊಂಡು ಉತ್ತಮಗತಿಯನ್ನೈದುವನೋ ಅಂತಹ ಭಗವಂತನನ್ನು ಕಲಿಯುಗದಲ್ಲಿ ಅರ್ಚಿಸುವುದಿಲ್ಲ! (೪೪). ಭಗವಾನ್ ಪುರುಷೋತ್ತಮನಾದರೋ ಅಂತಃಕರಣದಲ್ಲಿ ಸ್ಫುರಿತನಾದರೆ, ದ್ರವ್ಯದೇಶದೇಹಗಳಿಂದ ಸಂಭವಿಸುವ ಕಲಿದೋಷಗಳನ್ನು ಪರಿಹರಿಸಬಲ್ಲನು (೪೫). ಆ ಭಗವಂತನ ವಿಷಯವನ್ನು ಕೇಳಿದರೆ ಸಾಕು, ಕೀರ್ತಿಸಿದರೆ ಸಾಕು, ಧ್ಯಾನಿಸಿದರೆ ಸಾಕು, ಪೂಜಿಸಿದರೆ ಸಾಕು, ಗೌರವಿಸಿದರೆ ಸಾಕು, ಮಾನವರು ಹತ್ತು ಸಾವಿರ ಜನ್ಮಗಳಲ್ಲಿ ಮಾಡಿದ ಪಾಪವನ್ನೂ, ಅವರ ಅಂತಃಕರಣದಲ್ಲಿ ಭಗವಂತನು ನೆಲೆಸಿ, ಪರಿಹರಿಸುವನು (೪೬). ಚಿನ್ನದಲ್ಲಿ ಹೊಕ್ಕ ಬೆಂಕಿಯು ಅದರಲ್ಲಿರುವ ಲೋಹಸಂಬಂಧಿಯಾದ ದೋಷವನ್ನು ಹೇಗೆ ಸುಟ್ಟುಹಾಕುವುದೋ ಹಾಗೆ ವಿಷ್ಣುವು ಭಕ್ತರ ಅಂತಃಕರಣವನ್ನು ಪ್ರವೇಶಿಸಿ ಅದರಲ್ಲಿರುವ ದೋಷಸಂಘಾತವನ್ನು ನಾಶಪಡಿಸುವನು (೪೭). ಭಗವಂತನಾದ ಅನಂತನು ಹೃದಯದಲ್ಲಿ ನೆಲೆಸಿದಾಗ ಮಾನವನ ಅಂತಃಕರಣವು ಎಷ್ಟರಮಟ್ಟಿಗೆ ಪರಿಶುದ್ಧವಾಗುವುದೋ ಅಷ್ಟರಮಟ್ಟಿಗೆ ಉಪಾಸನೆ, ತಪಸ್ಸು, ಪ್ರಾಣಾಯಾಮ,

ತಸ್ಮಾತ್ ಸರ್ವಾತ್ಮನಾ ರಾಜನ್ ಹೃದಿಸ್ಥಂ ಕುರು ಕೇಶವಮ್ |
ಮ್ರಿಯಮಾಣೋ ಹ್ಯವಹಿತಸ್ತತೋ ಯಾಸಿ ಪರಾಂ ಗತಿಮ್ || ೪೯
ಮ್ರಿಯಮಾಣೈರಭಿಧ್ಯೇಯೋ ಭಗವಾನ್ ಪರಮೇಶ್ವರಃ |
ಆತ್ಮಭಾವಂ ನಯತ್ಯಂಗ ಸರ್ವಾತ್ಮಾ ಸರ್ವಸಂಶ್ರಯಃ || ೫೦
ಕಲೇರ್ದೋಷನಿಧೇ ರಾಜನ್ನಸ್ತಿ ಹ್ಯೇಕೋ ಮಹಾನ್ ಗುಣಃ |
ಕೀರ್ತನಾದೇವ ಕೃಷ್ಣಸ್ಯ ಮುಕ್ತಸಂಗಃ ಪರಂ ವ್ರಜೇತ್ || ೫೧
ಕೃತೇ ಯದ್ ಧ್ಯಾಯತೋ ವಿಷ್ಣುಂ ತ್ರೇತಾಯಾಂ ಯಜತೋ ಮಖೈಃ |
ದ್ವಾಪರೇ ಪರಿಚರ್ಯಾಯಾಂ ಕಲೌ ತದ್ಧರಿಕೀರ್ತನಾತ್ || ೫೨

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ತೃತೀಯಾಧ್ಯಾಯಃ

---

ಮೈತ್ರೀ, ತೀರ್ಥಸ್ನಾನ, ವ್ರತ, ದಾನ, ಜಪಗಳಿಂದ ಪರಿಶುದ್ಧವಾಗುವುದಿಲ್ಲ (೪೮) ಆದ್ದರಿಂದ, ಪರೀಕ್ಷಿತರಾಜ, ನಿನಗೆ ಮರಣಾವಸ್ಥೆಯು ಪ್ರಾಪ್ತವಾದಾಗ ಬಹಳ ಎಚ್ಚರಿಕೆಯಿಂದಿರು. ಶ್ರೀ ಕೇಶವನು ಸರ್ವವಿಧದಿಂದಲೂ ಹೃದಯದಲ್ಲಿಯೇ ನೆಲೆಸಿರುವಂತೆ ನೋಡಿಕೊ. ಆದರಿಂದ ಪರಮಗತಿಯನ್ನೈದುವೆ (೪೯). ಒಂದು ದಿನ ಸಾಯತಕ್ಕ ಮಾನವನು ಭಗವಾನ್ ಪರಮೇಶ್ವರನನ್ನು ಸದಾ ಧ್ಯಾನಿಸುತ್ತಿರಬೇಕು. ಸರ್ವಾತ್ಮನೂ ಸರ್ವಾಶ್ರಯನೂ ಆದ ಸ್ವಾಮಿಯು ಭಕ್ತರಿಗೆ ಸ್ವಸ್ವರೂಪವನ್ನು ಕರುಣಿಸುವನು (೫೦). ರಾಜ, ಕಲಿಯುಗವು ಸಕಲದೋಷಗಳ ಗಣಿಯಾಗಿದ್ದರೂ ಇದರಲ್ಲಿ ಒಂದು ಮಹತ್ತರವಾದ ಗುಣ ಉಂಟು. ಏನೆಂದರೆ, ಶ್ರೀಕೃಷ್ಣನ ನಾಮಕೀರ್ತನಮಾತ್ರದಿಂದಲೇ ಮಾನವನು ಸಂಸಾರಬಂಧನದಿಂದ ಬಿಡುಗಡೆ ಹೊಂದಿ ಮುಕ್ತನಾಗಬಹುದು (೫೧). ಕೃತಯುಗದಲ್ಲಿ ತಪಸ್ಸು ಮಾಡುವುದರಿಂದಲೂ ತ್ರೇತಾಯುಗದಲ್ಲಿ ನಾನಾ ಯಾಗಗಳಿಂದ ವಿಷ್ಣುವನ್ನು ಅರ್ಚಿಸುವುದರಿಂದಲೂ ದ್ವಾಪರಯುಗದಲ್ಲಿ ಸೇವಾವಿಧಿಗಳಿಂದಲೂ ಯಾವ ಫಲವು ಲಭಿಸುವುದೋ ಅದು ಕಲಿಯುಗದಲ್ಲಿ ಹರಿಕೀರ್ತನೆಯಿಂದ ಲಭಿಸುವುದು" (೫೨).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ದ್ವಾದಶಸ್ಕಂಧದಲ್ಲಿ
ಮೂರನೆಯ ಅಧ್ಯಾಯ

# ಚತುರ್ಥೋಽಧ್ಯಾಯಃ

ಶ್ರೀಶುಕ ಉವಾಚ—

ಕಾಲಸ್ತೇ ಪರಮಾಣ್ವಾದಿರ್ದ್ವಿಪರಾರ್ಧಾವಧಿರ್ನೃಪ ।
ಕಥಿತೋ ಯುಗಮಾನಂ ಚ ಶೃಣು ಕಲ್ಪಲಯಾವಪಿ ॥ ೧

ಚತುರ್ಯುಗಸಹಸ್ರಂ ಚ ಬ್ರಹ್ಮಣೋ ದಿನಮುಚ್ಯತೇ ।
ಸ ಕಲ್ಪೋ ಯತ್ರ ಮನವಶ್ಚತುರ್ದಶ ವಿಶಾಂಪತೇ ॥ ೨

ತದಂತೇ ಪ್ರಲಯಸ್ತಾವಾನ್ ಬ್ರಾಹ್ಮೀ ರಾತ್ರಿರುದಾಹೃತಾ ।
ತ್ರಯೋ ಲೋಕಾ ಇಮೇ ತತ್ರ ಕಲ್ಪಂತೇ ಪ್ರಲಯಾಯ ಹಿ ॥ ೩

ಏಷ ನೈಮಿತ್ತಿಕಃ ಪ್ರೋಕ್ತಃ ಪ್ರಲಯೋ ಯತ್ರ ವಿಶ್ವಸೃಕ್ ।
ಶೇತೇಽನಂತಾಸನೋ ವಿಶ್ವಮಾತ್ಮಸಾತ್ಕೃತ್ಯ ಚಾತ್ಮಭೂಃ ॥ ೪

## ಅಧ್ಯಾಯ ೪

### ನಾಲ್ಕು ಬಗೆಯ ಪ್ರಳಯಗಳ ವರ್ಣನೆ. ಹರಿಕೀರ್ತನೆಯಿಂದಲೇ ಸಂಸಾರ ಬಂಧನದ ನಿವೃತ್ತಿ.

ಶುಕಮುನಿಗಳು ಹೇಳಿದರು : “ರಾಜ, ಪರಮಾಣುವಿನಿಂದ ಹಿಡಿದು ದ್ವಿಪರಾರ್ಧ ಪರ್ಯಂತವಾಗಿ ಕಾಲದ ವಿಚಾರವನ್ನೂ ನಾಲ್ಕು ಯುಗಗಳ ಪ್ರಮಾಣವನ್ನೂ ಹಿಂದೆ [1]ಹೇಳಿದ್ದಾಗಿದೆ. ಈಗ ಕಲ್ಪವೆಂಬ ಸ್ಥಿತಿಕಾಲ ಮತ್ತು ಪ್ರಳಯಕಾಲ ಇವುಗಳ ವಿಷಯವನ್ನು ಕೇಳು (೧): ನಾಲ್ಕು ಯುಗಗಳ ಒಂದು ಸಾವಿರಕ್ಕೆ (ನಾಲ್ಕು ಯುಗಗಳು ಒಂದು ಸಾವಿರಸಲ ಸುತ್ತಿದಾಗ) ಬ್ರಹ್ಮನಿಗೆ ಒಂದು ಹಗಲಾಗುತ್ತದೆ. ಇದರಲ್ಲಿ ಹದಿನಾಲ್ಕು ಮನುಗಳು ಕ್ರಮವಾಗಿ ಕಳೆದು ಹೋಗುತ್ತಾರೆ. ಈ ಕಾಲಾವಧಿಗೆ ಕಲ್ಪವೆಂದು ಹೆಸರು. ಬ್ರಹ್ಮನ ಹಗಲು ಕಳೆದಮೇಲೆ ಅಷ್ಟೇಕಾಲ ಪ್ರಮಾಣವುಳ್ಳ ಬ್ರಹ್ಮನ ರಾತ್ರಿಯು ನಡೆಯುತ್ತದೆ. ಇದಕ್ಕೆ ಪ್ರಳಯಕಾಲವೆಂದು ಹೆಸರು. ಆ ಸಮಯದಲ್ಲಿ ಈ ಮೂರು ಲೋಕಗಳಿಗೂ ಪ್ರಳಯವಾಗುತ್ತದೆ (೨–೩). ಇದಕ್ಕೆ ನೈಮಿತ್ತಿಕ ಪ್ರಳಯವೆಂದು ಹೆಸರು. ಏಕೆಂದರೆ, ಈ ಸಮಯದಲ್ಲಿ ವಿಶ್ವದ ಸೃಷ್ಟಿಕರ್ತನಾದ ಸ್ವಯಂಭೂ

1. ಸ್ಕಂಧ ೩—ಅಧ್ಯಾಯ ೧೧.

ದ್ವಿಪರಾರ್ಧೇ ತ್ವತಿಕ್ರಾಂತೇ ಬ್ರಹ್ಮಣಃ ಪರಮೇಷ್ಠಿನಃ ।
ತದಾ ಪ್ರಕೃತಯಃ ಸಪ್ತ ಕಲ್ಪಂತೇ ಪ್ರಲಯಾಯ ವೈ ॥ ೫

ಏಷ ಪ್ರಾಕೃತಿಕೋ ರಾಜನ್ ಪ್ರಲಯೋ ಯತ್ರ ಲೀಯತೇ ।
ಅಂಡಕೋಶಸ್ತು ಸಂಘಾತೋ ವಿಘಾತ ಉಪಸಾದಿತೇ ॥ ೬

ಪರ್ಜನ್ಯಃ ಶತವರ್ಷಾಣಿ ಭೂಮೌ ರಾಜನ್ ನ ವರ್ಷತಿ ।
ತದಾ ನಿರನ್ನೇ ಹ್ಯನ್ಯೋನ್ಯಂ ಭಕ್ಷಮಾಣಾಃ ಕ್ಷುಧಾರ್ದಿತಾಃ ॥ ೭

ಕ್ಷಯಂ ಯಾಸ್ಯಂತಿ ಶನಕೈಃ ಕಾಲೇನೋಪದ್ರುತಾಃ ಪ್ರಜಾಃ ।
ಸಾಮುದ್ರಂ ದೈಹಿಕಂ ಭೌಮಂ ರಸಂ ಸಾಂವರ್ತಕೋ ರವಿಃ ॥ ೮

---

ಪರಮಾತ್ಮನು ವಿಶ್ವವನ್ನು ತನ್ನಲ್ಲಿ ಉಪಸಂಹರಿಸಿಕೊಂಡು [1]ಅನಂತಶಯನನಾಗಿ ನಿದ್ರಿಸುತ್ತಾನೆ (೪). ಪರಮೇಷ್ಠಿಯಾದ ಬ್ರಹ್ಮನಿಗೆ [2]ದ್ವಿಪರಾರ್ಧಕಾಲವು ಕಳೆದಮೇಲೆ ಸಪ್ತಪ್ರಕೃತಿಗಳಿಗೂ ಲಯವಾಗುತ್ತದೆ. ಇದಕ್ಕೆ ಪ್ರಾಕೃತಿಕ ಪ್ರಳಯವೆಂದು ಹೆಸರು. ಏಕೆಂದರೆ, ವಿನಾಶಕಾರಣವು ಒದಗಿದೊಡನೆ ಮಹದಾದಿ ಪ್ರಕೃತಿಗಳೂ ಅವುಗಳ ಸಂಘಾತಕಾರ್ಯವಾದ ಬ್ರಹ್ಮಾಂಡವೂ ನಶಿಸಿಹೋಗುತ್ತವೆ (೫-೬). ಹೇಗೆಂದರೆ, ಈ ಭೂಮಿಯ ಮೇಲೆ ಮೇಘವು ನೂರು ವರ್ಷಗಳವರೆಗೆ ಮಳೆಗರೆಯುವುದಿಲ್ಲ. ಅದರಿಂದ ಆಹಾರವೇ ಇಲ್ಲವಾಗಲು ಪ್ರಾಣಿಗಳು ಹಸಿವಿನಿಂದ ಒಬ್ಬರನ್ನೊಬ್ಬರು ತಿನ್ನುವುದಕ್ಕೆ ಆರಂಭಿಸುತ್ತಾರೆ (೭). ಹೀಗೆ ಪ್ರಳಯಕಾಲದಿಂದ ಬಾಧಿತರಾದ ಪ್ರಜೆಗಳು ಕ್ರಮೇಣ ನಾಶಹೊಂದುವರು. ಆಗ ಸಾಂವರ್ತಕವೆಂದು ಹೆಸರು ಪಡೆಯುವ ಸೂರ್ಯನು ತನ್ನ ಘೋರಕಿರಣಗಳಿಂದ ಸಮುದ್ರ, ದೇಹ, ಭೂಮಿ—ಇವುಗಳಲ್ಲಿರತಕ್ಕ ರಸದ್ರವ್ಯವನ್ನು ಪೂರ್ತಿಯಾಗಿ ಹೀರಿಬಿಡುತ್ತಾನೆ.

---

1. ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕ, ನಿತ್ಯ—ಎಂದು ಪ್ರಳಯವು ನಾಲ್ಕು ವಿಧ. ಬ್ರಹ್ಮನ ನಿದ್ರೆಯ ನಿಮಿತ್ತದಿಂದ ಆಗುವ ಪ್ರಳಯವು ನೈಮಿತ್ತಿಕ ಪ್ರಳಯ. ಅನಂತಶಯನ=ಶೇಷಶಾಯಿ. ಇಲ್ಲಿ ವಿಷ್ಣುವಿಗೂ ಬ್ರಹ್ಮನಿಗೂ ಅಭೇದವನ್ನಿಟ್ಟು ಕೊಳ್ಳಲಾಗಿದೆ.

2. ದ್ವಿಪರಾರ್ಧಕಾಲ – ಬ್ರಹ್ಮನ ನೂರು ವರ್ಷದ ಆಯುಸ್ಸು. ಸಪ್ತಪ್ರಕೃತಿಗಳು – ಮಹತ್, ಅಹಂಕಾರ ಮತ್ತು ಪಂಚತನ್ಮಾತ್ರೆಗಳು.

ರಶ್ಮಿಭಿಃ ಪಿಬತೇ ಘೋರೈಃ ಸರ್ವಂ ನೈವ ವಿಮುಂಚತಿ ।
ತತಃ ಸಂವರ್ತಕೋ ವಹ್ನಿಃ ಸಂಕರ್ಷಣಮುಖೋತ್ಥಿತಃ ॥ ೯

ದಹತ್ಯನಿಲವೇಗೋತ್ಥಃ ಶೂನ್ಯಾನ್ ಭೂವಿವರಾನಥ ।
ಉಪರ್ಯಧಃ ಸಮಂತಾಚ್ಚ ಶಿಖಾಭಿರ್ವಹ್ನಿಸೂರ್ಯಯೋಃ ॥ ೧೦

ದಹ್ಯಮಾನಂ ವಿಭಾತ್ಯಂಡಂ ದಗ್ಧಗೋಮಯಪಿಂಡವತ್ ।
ತತಃ ಪ್ರಚಂಡಪವನೋ ವರ್ಷಾಣಾಮಧಿಕಂ ಶತಮ್ ॥ ೧೧

ಪರಃ ಸಾಂವರ್ತಕೋ ವಾತಿ ಧೂಮ್ರಂ ಖಂ ರಜಸಾಽಽವೃತಮ್ ।
ತತೋ ಮೇಘಕುಲಾನ್ಯಂಗ ಚಿತ್ರವರ್ಣಾನ್ಯನೇಕಶಃ ॥ ೧೨

ಶತಂ ವರ್ಷಾಣಿ ವರ್ಷಂತಿ ನದಂತಿ ರಭಸಸ್ವನೈಃ ।
ತತ ಏಕೋದಕಂ ವಿಶ್ವಂ ಬ್ರಹ್ಮಾಂಡವಿವರಾಂತರಮ್ ॥ ೧೩

ತದಾ ಭೂಮೇರ್ಗಂಧಗುಣಂ ಗ್ರಸಂತ್ಯಾಪ ಉದಪ್ಲವೇ ।
ಗ್ರಸ್ತಗಂಧಾ ತು ಪೃಥಿವೀ ಪ್ರಲಯತ್ವಾಯ ಕಲ್ಪತೇ ॥ ೧೪

---

ಸ್ವಲ್ಪವನ್ನೂ ಹೊರಗೆ ಸುರಿಸುವುದಿಲ್ಲ (೮) ಸಂಕರ್ಷಣನ ಮುಖದಿಂದ ಉದ್ಭವಿಸುವ ಸಾಂವರ್ತಕವಹ್ನಿಯು ವಾಯುವಿನ ರಭಸದಿಂದ ಮೇಲೆದ್ದು, ಪ್ರಾಣಿಗಳಿಲ್ಲದೆ ಶೂನ್ಯವಾದ ಪಾತಾಳಾದಿ ಪ್ರದೇಶಗಳನ್ನು ಸುಟ್ಟುಹಾಕುತ್ತದೆ. ಹೀಗೆ ಸೂರ್ಯಾಗ್ನಿಗಳ ಜ್ವಾಲೆಗಳಿಂದ ಮೇಲೆ ಕೆಳಗೆ ಸುತ್ತಲೂ ಸುಟ್ಟುಹೋಗುತ್ತಿರುವ ಈ ಬ್ರಹ್ಮಾಂಡವು ಗೋಮಯಪಿಂಡವಾದ ಬೆರಣಿಯಂತೆ ಕಾಣಿಸುವುದು ! (೯–೧೦). ಅನಂತರ ಪ್ರಚಂಡವಾದ ಸಾಂವರ್ತಕವೆಂಬ ಬಿರುಗಾಳಿಯು ಒಂದು ನೂರು ವರ್ಷಗಳಿಗಿಂತ ಹೆಚ್ಚುಕಾಲ ರಭಸದಿಂದ ಬೀಸತೊಡಗುತ್ತದೆ. ಧೂಳಿಯಿಂದ ತುಂಬಿಹೋದ ಆಕಾಶವು ಧೂಮ್ರವರ್ಣವಾಗುವುದು. ರಾಜ, ತರುವಾಯ ನಾನಾವರ್ಣದ ಮೇಘಪಂಕ್ತಿಗಳು ಕಠೋರವಾಗಿ ಗುಡುಗುತ್ತ ನೂರು ವರ್ಷಗಳವರೆಗೆ ಒಂದೇ ಸಮವಾಗಿ ಮಳೆ ಸುರಿಸುತ್ತವೆ. ಆಗ ಬ್ರಹ್ಮಾಂಡವಿವರದ ಮಧ್ಯದಲ್ಲಿರುವ ಈ ವಿಶ್ವವು ಸರ್ವವೂ ಜಲಮಯವಾಗಿ ಬಿಡುವುದು (೧೧–೧೩). ಹೀಗೆ ಜಲಮಯವಾದಾಗ ಜಲವು ಭೂಮಿಯ ಗಂಧಗುಣವನ್ನು ನುಂಗುವುದು. ಗಂಧಗುಣವು ಹೋದೊಡನೆ ಭೂಮಿಯು ಲಯಿಸುವುದು. ಆಮೇಲೆ ಜಲದ

ಅಪಾಂ ರಸಮಥೋ ತೇಜಸ್ತಾ ಲೀಯಂತೇಽಥ ನೀರಸಾಃ ।
ಗ್ರಸತೇ ತೇಜಸೋ ರೂಪಂ ವಾಯುಸ್ತದ್ರಹಿತಂ ತದಾ ॥ ೧೫

ಲೀಯತೇ ಚಾನಿಲೇ ತೇಜೋ ವಾಯೋಃ ಖಂ ಗ್ರಸತೇ ಗುಣಮ್ ।
ಸ ವೈ ವಿಶತಿ ಖಂ ರಾಜಂಸ್ತತಶ್ಚ ನಭಸೋ ಗುಣಮ್ ॥ ೧೬

ಶಬ್ದಂ ಗ್ರಸತಿ ಭೂತಾದಿರ್ನಭಸ್ತಮನು ಲೀಯತೇ ।
ತೈಜಸಶ್ಚೇಂದ್ರಿಯಾಣ್ಯಂಗ ದೇವಾನ್ ವೈಕಾರಿಕೋ ಗುಣೈಃ ॥ ೧೭

ಮಹಾನ್ ಗ್ರಸತ್ಯಹಂಕಾರಂ ಗುಣಾಃ ಸತ್ತ್ವಾದಯಶ್ಚ ತಮ್ ।
ಗ್ರಸತೇಽವ್ಯಾಕೃತಂ ರಾಜನ್ ಗುಣಾನ್ ಕಾಲೇನ ಚೋದಿತಮ್ ॥ ೧೮

---

ರಸಗುಣವನ್ನು ಅಗ್ನಿಯು ಹೀರಲಾಗಿ, ಜಲವು ರಸಶೂನ್ಯವಾಗಿ ಅಗ್ನಿಯಲ್ಲಿ ಲಯಿಸುವುದು. ಆಗ ವಾಯುವು ಅಗ್ನಿಯ ರೂಪಗುಣವನ್ನು ನುಂಗುವುದು (೧೪–೧೫). ರೂಪಗುಣರಹಿತವಾದೊಡನೆ ಅಗ್ನಿಯು ವಾಯುವಿನಲ್ಲಿ ಲೀನವಾಗುವುದು. ಅನಂತರ ವಾಯುವಿನ ಗುಣವಾದ ಸ್ಪರ್ಶವನ್ನು ಆಕಾಶವು ಹೀರಿಕೊಳ್ಳಲಾಗಿ, ವಾಯುವು ಆಕಾಶದಲ್ಲಿ ಸೇರಿಹೋಗುವುದು. ಆಕಾಶಗುಣವಾದ ಶಬ್ದವನ್ನು ತಾಮಸಾಹಂಕಾರವು ಹೀರಿಕೊಳ್ಳಲು, ಶಬ್ದವು ತಾಮಸಾಹಂಕಾರದಲ್ಲಿ ಲಯಿಸುವುದು. ಪರೀಕ್ಷಿತರಾಜ, ಇಂದ್ರಿಯಗಳನ್ನು ರಾಜಸಾಹಂಕಾರವೂ ಮನಸ್ಸು ಮತ್ತು ಅಧಿಷ್ಠಾತೃದೇವತೆಗಳನ್ನು ಸಾತ್ತ್ವಿಕಾಹಂಕಾರವೂ ಆಯಾ ಇಂದ್ರಿಯ ವೃತ್ತಿಗಳಿಂದ ಸಹಿತವಾಗಿ ಹೀರಿಕೊಳ್ಳುತ್ತವೆ (೧೬, ೧೭). ಮಹತ್ತತ್ತ್ವವು ತ್ರಿವಿಧಾಹಂಕಾರಗಳನ್ನೂ ಮಹತ್ತತ್ತ್ವವನ್ನು ಸತ್ತ್ವಾದಿಗುಣಗಳೂ ಹೀರಿಕೊಳ್ಳುತ್ತವೆ. ಅನಂತರ ಕಾಲಚೋದಿತವಾದ [1]ಅವ್ಯಾಕೃತವು ಸತ್ತ್ವಾದಿ ಗುಣತ್ರಯವನ್ನು ನುಂಗುವುದು. ಈ ಅವ್ಯಾಕೃತಕ್ಕೆ ಕಾಲಾವಯವಗಳಾದ ಹಗಲು ರಾತ್ರಿಗಳಿಂದ ವಿಪರಿಣಾಮವೇ ಮೊದಲಾದ ಯಾವ ಭಾವವಿಕಾರಗಳೂ ಸಂಭವಿಸುವುದಿಲ್ಲ. ಆದ್ದರಿಂದ ಈ ಪ್ರಧಾನವು ಅನಾದಿಯೂ ಅನಂತವೂ

---

1. ಅವ್ಯಾಕೃತ = ಪ್ರಧಾನ; ಇದರಿಂದ ಗುಣತ್ರಯವೂ ಗುಣತ್ರಯದಿಂದ ಮಹತ್ತತ್ತ್ವವೂ ಹುಟ್ಟುತ್ತದೆ ಎಂಬ ಪಕ್ಷವನ್ನು ಇಲ್ಲಿ ಆಶ್ರಯಿಸಿದೆ. ಮಧ್ಯದಲ್ಲಿ ಗುಣತ್ರಯದ ಉತ್ಪತ್ತಿಯನ್ನು ಹೇಳದೆ, ಅದನ್ನು ಅಹಂಕಾರದಲ್ಲಿ ಸೇರಿಸತಕ್ಕ ಇನ್ನೊಂದು ಪಕ್ಷವೂ ಉಂಟು.

ನ ತಸ್ಯ ಕಾಲಾವಯವೈಃ ಪರಿಣಾಮಾದಯೋ ಗುಣಾಃ ।
ಅನಾದ್ಯನಂತಮವ್ಯಕ್ತಂ ನಿತ್ಯಂ ಕಾರಣಮವ್ಯಯವತ್ ॥ ೧೯

ನ ಯತ್ರ ವಾಚೋ ನ ಮನೋ ನ ಸತ್ತ್ವಂ
ತಮೋ ರಜೋ ವಾ ಮಹದಾದಯೋಽಮೀ ।
ನ ಪ್ರಾಣಬುದ್ಧೀಂದ್ರಿಯದೇವತಾ ವಾ
ನ ಸಂನಿವೇಶಃ ಖಲು ಲೋಕಕಲ್ಪಃ ॥ ೨೦

ನ ಸ್ವಪ್ನಜಾಗ್ರನ್ನ ಚ ತತ್ ಸುಷುಪ್ತಂ
ನ ಖಂ ಜಲಂ ಭೂರನಿಲೋಽಗ್ನಿರರ್ಕಃ ।
ಸಂಸುಪ್ತವಚ್ಛೂನ್ಯವದಪ್ರತರ್ಕ್ಯಂ
ತನ್ಮೂಲಭೂತಂ ಪದಮಾಮನಂತಿ ॥ ೨೧

ಲಯಃ ಪ್ರಾಕೃತಿಕೋ ಹ್ಯೇಷ ಪುರುಷಾವ್ಯಕ್ತಯೋರ್ಯದಾ ।
ಶಕ್ತಯಃ ಸಂಪ್ರಲೀಯಂತೇ ವಿವಶಾಃ ಕಾಲವಿದ್ರುತಾಃ ॥ ೨೨

---

ಅಸ್ತಿತ್ವವಿಕಾರಶೂನ್ಯವೂ ಹ್ರಾಸವೃದ್ಧಿರಹಿತವಾಗಿ ನಿತ್ಯವೂ ಕ್ಷಯರಹಿತವೂ ಆಗಿದೆ ಏಕೆಂದರೆ, ಇದು ಎಲ್ಲ ವಿಕೃತಿಗಳಿಗೂ ಕಾರಣವಾಗಿದೆ (೧೮–೧೯). ಈ ಅವ್ಯಾಕೃತವೆಂಬ ಪ್ರಧಾನವು ಲೋಕಸದೃಶವಾದ ರಚನಾವಿಶೇಷವಲ್ಲ. ಇದು ಮಾತಿಗಾಗಲಿ ಮನಸ್ಸಿಗಾಗಲಿ ಗೋಚರವಲ್ಲ. ಸತ್ತ್ವರಜಸ್ತಮೋಗುಣಗಳಾಗಲಿ ಮಹದಾದಿವಿಕಾರಗಳಾಗಲಿ ಅದರಲ್ಲಿಲ್ಲ. ಪ್ರಾಣ, ಬುದ್ಧಿ, ಇಂದ್ರಿಯಗಳೂ ಅಧಿಷ್ಠಾತೃದೇವತೆಗಳೂ ಅದರಲ್ಲಿಲ್ಲ. (ಆದ್ದರಿಂದ ಇದಕ್ಕೆ ವಿಕಾರವಿಲ್ಲ) (೨೦). ಈ ಪ್ರಧಾನಕ್ಕೆ ಸ್ವಪ್ನ, ಜಾಗ್ರತ್, ಸುಷುಪ್ತಿಗಳೆಂಬ ಅವಸ್ಥೆಗಳಿಲ್ಲ. ಆಕಾಶ, ವಾಯು, ಅಗ್ನಿ, ಜಲ, ಭೂಮಿಗಳಾಗಲಿ, ಸೂರ್ಯನಾಗಲಿ ಇದರಲ್ಲಿಲ್ಲ. ಇದು ಸುಪ್ತವೋ ಶೂನ್ಯವೋ ಎಂಬಂತೆ ಇರುತ್ತದೆ. ತರ್ಕಕ್ಕೆ ಗೋಚರವಾಗತಕ್ಕದ್ದಲ್ಲ ಇದು. ಇದು ಸರ್ವ ವಿಕಾರಮಯಪ್ರಪಂಚಕ್ಕೆ ಮೂಲಭೂತವಾದ ವಸ್ತುವೆಂದು ಜ್ಞಾನಿಗಳು ಹೇಳುತ್ತಾರೆ (೨೧). ಜೀವ ಮತ್ತು ಪ್ರಕೃತಿಗಳಿಗೆ ಸಂಬಂಧಿಸಿದ ಸತ್ತ್ವಾದಿ ಶಕ್ತಿಗಳು ಕಾಲಪ್ರೇರಿತವಾದ್ದರಿಂದ ಸ್ವಾತಂತ್ರ್ಯವಿಲ್ಲದೆ ಯಾವಾಗ

ಬುದ್ಧೀಂದ್ರಿಯಾರ್ಥರೂಪೇಣ ಜ್ಞಾನಂ ಭಾತಿ ತದಾಶ್ರಯಮ್ ।
ದೃಶ್ಯತ್ವಾವ್ಯತಿರೇಕಾಭ್ಯಾಮಾದ್ಯಂತವದವಸ್ತು ಯತ್ ॥ ೨೩

ದೀಪಶ್ಚಕ್ಷುಶ್ಚ ರೂಪಂ ಚ ಜ್ಯೋತಿಷೋ ನ ಪೃಥಗ್ ಭವೇತ್ ।
ಏವಂ ಧೀಃ ಖಾನಿ ಮಾತ್ರಾಶ್ಚ ನ ಸ್ಯುರನ್ಯತಮಾದೃತಾತ್ ॥ ೨೪

ಬುದ್ಧೇರ್ಜಾಗರಣಂ ಸ್ವಪ್ನಃ ಸುಷುಪ್ತಿರಿತಿ ಚೋಚ್ಯತೇ ।
ಮಾಯಾಮಾತ್ರಮಿದಂ ರಾಜನ್ ನಾನಾತ್ವಂ ಪ್ರತ್ಯಗಾತ್ಮನಿ ॥ ೨೫

---

ಅಡಗಿಹೋಗುತ್ತವೋ ಆಗ [1]ಪ್ರಾಕೃತಿಕ ಪ್ರಲಯವೆಂದು ತಿಳಿಯಬೇಕು (೨೨). ಬುದ್ಧಿ (ಅಂತಃಕರಣ), ಇಂದ್ರಿಯ, ವಿಷಯರೂಪವಾದ ಅರ್ಥ—ಇವುಗಳಿಗೆ ಆಶ್ರಯವಾದ ಜ್ಞಾನವೆಂಬ ಬ್ರಹ್ಮವೇ ಬುದ್ಧಿ, ಇಂದ್ರಿಯ ಮತ್ತು ವಿಷಯಗಳ ರೂಪದಿಂದ ಪ್ರಕಾಶಿಸುತ್ತಿದೆ. ಹೇಗೆಂದರೆ, ಬುದ್ಧಿ, ಇಂದ್ರಿಯ ಮತ್ತು ಇವುಗಳಿಗೆ ವಿಷಯಗಳಾದ ಪದಾರ್ಥಗಳು ಪರಮಾರ್ಥವಾಗಿ ಇರತಕ್ಕ ವಸ್ತುಗಳಲ್ಲ. ಇವು ದೃಶ್ಯವೂ ಜ್ಞಾನಕ್ಕೆ ಅವ್ಯತಿರಿಕ್ತವೂ ಆಗಿರುವುದರಿಂದ ಇವುಗಳಿಗೆ [2]ಆದ್ಯಂತಗಳುಂಟು (೨೩). ದೀಪ, ಚಕ್ಷುರಿಂದ್ರಿಯ, ರೂಪ—ಈ ಮೂರು ತೇಜೋವಿಶೇಷಗಳು ತೇಜಸ್ಸಿಗಿಂತ ಹೇಗೆ ಪೃಥಕ್ ಅಲ್ಲವೋ ಹಾಗೆ ಬುದ್ಧಿ, ಇಂದ್ರಿಯ, ಶಬ್ದಾದಿವಿಷಯಗಳು. ಇವು ಮೂರೂ ಇವುಗಳಿಗೆ ವ್ಯತಿರಿಕ್ತವಾದ [3]ಸತ್ಯವಾದ ಬ್ರಹ್ಮಕ್ಕಿಂತ ಪೃಥಕ್ ಆಗಿ ಇಲ್ಲ (೨೪). ಜಾಗ್ರತ್, ಸ್ವಪ್ನ, ಸುಷುಪ್ತಿಗಳು ಬುದ್ಧಿಗೆ ಸೇರಿದ ಅವಸ್ಥೆಗಳು. ಈ ನಾನಾತ್ವವು ಪ್ರತ್ಯಗಾತ್ಮನಲ್ಲಿ ಮಾಯಾಮಾತ್ರ

---

1. ಇಲ್ಲಿ ಮಹದಾದಿಗಳನ್ನು ಮಾತ್ರ ಪ್ರಕೃತಿಯೆಂದು ವ್ಯವಹರಿಸಲಾಗಿದೆ. ಪ್ರಧಾನವನ್ನು ಪ್ರಕೃತಿಯೆಂದು ಗಣಿಸಿಲ್ಲ ಅಥವಾ ಮಹದಾದಿ ವಿಕೃತಿಗಳೆಲ್ಲವೂ ಪ್ರಕೃತಿಯಾದ ಪ್ರಧಾನದಲ್ಲಿ ಅಡಗಿಹೋಗುವುದರಿಂದ ಪ್ರಾಕೃತಿಕ ಪ್ರಲಯವೆಂದು ಹೆಸರಾಗಿರಬಹುದು. ಮಹತ್ತು ಪ್ರಕೃತಿಯೂ ಹೌದು, ವಿಕೃತಿಯೂ ಹೌದು

2. ರಜ್ಜುಸರ್ಪಸ್ಥಳದಲ್ಲಿ ಸರ್ಪವು ದೃಶ್ಯವೂ ಮೂಲವಸ್ತುವಾದ ರಜ್ಜುವಿಗೆ ಅವ್ಯತಿರಿಕ್ತವೂ ಆಗಿದೆ. ಅದು ಆದ್ಯಂತವುಳ್ಳದ್ದು. ಆದ್ದರಿಂದ ಸರ್ಪವು ಪರಮಾರ್ಥವಾಗಿ ಇರತಕ್ಕ ಸತ್ಯವಲ್ಲ. ಅಂತೆಯೇ ಬುದ್ಧಿ-ಇಂದ್ರಿಯ-ಪದಾರ್ಥಗಳು ಸತ್ಯವಲ್ಲ.

3. ಭ್ರಾಂತಿಯಿಂದ ಬ್ರಹ್ಮವೇ ಜಗತ್ತಾಗಿ ತೋರುತ್ತದೆ. ಆದ್ದರಿಂದ ಬ್ರಹ್ಮವು ಜಗತ್ತಿಗೆ ವ್ಯತಿರಿಕ್ತವಾದದ್ದು. ಜಗತ್ತು ಬ್ರಹ್ಮಕ್ಕಿಂತ ಪೃಥಕ್ಕಾಗಿ ಇಲ್ಲವೂ ಇಲ್ಲ. ಬ್ರಹ್ಮವೇ ಜಗತ್ತಾಗಿ ತೋರುವುದರಿಂದ ಬ್ರಹ್ಮವು ಜಗತ್ತಿಗೆ ಅವ್ಯತಿರಿಕ್ತವೆಂದೂ ಹೇಳಬಹುದು.

ಯಥಾ ಜಲಧರಾ ವ್ಯೋಮ್ನಿ ಭವಂತಿ ನ ಭವಂತಿ ಚ ।
ಬ್ರಹ್ಮಣೀದಂ ತಥಾ ವಿಶ್ವಮವಯವ್ಯುದಯಾಪ್ಯಯಾತ್॥ ೨೬

ಸತ್ಯಂ ಹ್ಯವಯವಃ ಪ್ರೋಕ್ತಃ ಸರ್ವಾವಯವಿನಾಮಿಹ ।
ವಿನಾರ್ಥೇನ ಪ್ರತೀಯೇರನ್ ಪಟಸ್ಯೇವಾಂಗ ತಂತವಃ ॥ ೨೭

ಯತ್ ಸಾಮಾನ್ಯವಿಶೇಷಾಭ್ಯಾಮುಪಲಭ್ಯೇತ ಸ ಭ್ರಮಃ ।
ಅನ್ಯೋನ್ಯಾಪಾಶ್ರಯಾತ್ ಸರ್ವಮಾದ್ಯಂತವದವಸ್ತು ಯತ್ ॥ ೨೮

ವಿಕಾರಃ ಖ್ಯಾಯಮಾನೋಽಪಿ ಪ್ರತ್ಯಗಾತ್ಮಾನಮಂತರಾ ।
ನ ನಿರೂಪ್ಯೋಽಸ್ತ್ಯಣುರಪಿ ಸ್ಯಾಚ್ಚೇಚ್ಚಿತ್ಸಮ ಆತ್ಮವತ್ ॥ ೨೯

---

ವಾಗಿ ಕಂಡುಬರುತ್ತಿದೆ ಆದ್ಯಂತಗಳಿರುವುದರಿಂದ ಈ ವಿಶ್ವವು, ಮೋಡಗಳು ಆಕಾಶದಲ್ಲಿ ಹೇಗೋ ಹಾಗೆ, ಬ್ರಹ್ಮದಲ್ಲಿ ಕಾಣಿಸಿಕೊಳ್ಳುತ್ತದೆ. ಮತ್ತೆ ಅಡಗುತ್ತದೆ. ವಿಶ್ವವು ಸಾವಯವವಾದ್ದರಿಂದ ಇದಕ್ಕೆ ಆದ್ಯಂತಗಳುಂಟು (೨೫–೨೬). ಕಾರ್ಯಗಳಾದ ಸಮಸ್ತ ಅವಯವಿಗಳಲ್ಲಿ ಕಾರಣವಾದ ಅವಯವವು ಸತ್ಯವೆಂದು ಉಕ್ತವಾಗಿದೆ (ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್) ಹೇಗೆಂದರೆ, ಹೇ ನೃಪಾಲ, ಕಾರ್ಯವಾದ ವಸ್ತ್ರವಿಲ್ಲದಿದ್ದರೂ ಕಾರಣವಾದ ತಂತುಗಳು ಇರುವಂತೆ, ಕಾರ್ಯವಿಲ್ಲದಿದ್ದರೂ ಕಾರಣವು ಪ್ರತೀತವಾಗಿ ಉಳಿದಿರುತ್ತದೆ (೨೭). [1]ಸಾಮಾನ್ಯವಿಶೇಷಭಾವದಿಂದ ತೋರತಕ್ಕದ್ದೆಲ್ಲವೂ ಅನ್ಯೋನ್ಯಾಶ್ರಯವಾಗಿರುವುದರಿಂದ ಭ್ರಮೆಯೇ ಸರಿ. ಕಾರಣತ್ವ, ವ್ಯಾಪಕತ್ವ ಅವಧಿತ್ವ—ಮುಂತಾದ ಸಾಪೇಕ್ಷವೆಲ್ಲವೂ ಅನ್ಯನಿಮಿತ್ತದಿಂದ ಜನ್ಯವಾದ ಕಾರಣ ಆದ್ಯಂತವುಳ್ಳದ್ದು. ಆದ್ದರಿಂದ ಇದೆಲ್ಲವೂ ಅಸತ್ಯ (೨೮). ಪ್ರಪಂಚವೆಂಬ ವಿಕಾರವು ನಮಗೆ ಗೋಚರಿಸುತ್ತಿದ್ದರೂ ಪ್ರತ್ಯಗಾತ್ಮನ ಪ್ರಕಾಶವಿಲ್ಲದೆ ಅಣುಮಾತ್ರವೂ ಗೋಚರಿಸಲಾರದು ಗೋಚರಿಸಿದರೆ ಆತ್ಮನಂತೆ ಚಿತ್ ಎನಿಸಿ ಸ್ವಪ್ರಕಾಶವಾಗಿಬಿಟ್ಟೀತು. ಸತ್ಯವಸ್ತುವಿಗೆ ನಾನಾತ್ವವಿಲ್ಲ—ಅದು ಒಂದೇ. ನಾನಾತ್ವವಿದೆಯೆಂದು ಯಾವನಾದರೂ ಭಾವಿಸಿದರೆ ಅವನು ಅಜ್ಞಾನಿ. ತೋರತಕ್ಕ

---

1. ಸಾಮಾನ್ಯವಿಶೇಷಭಾವ = ಕಾರ್ಯಕಾರಣಭಾವ, ಗುಣಗುಣಿಭಾವ, ವಿಶೇಷಣವಿಶೇಷ್ಯಭಾವ ಇತ್ಯಾದಿ ಕಾರ್ಯವಿಲ್ಲದೆ ಕಾರಣವೆನಿಸದು. ಕಾರಣವಿಲ್ಲದೆ ಕಾರ್ಯವೆನಿಸದು. ಹೀಗೆಯೇ ಉಳಿದವೂ ಸಾಪೇಕ್ಷಗಳು

ನ ಹಿ ಸತ್ಯಸ್ಯ ನಾನಾತ್ವಮವಿದ್ವಾನ್ ಯದಿ ಮನ್ಯತೇ ।
ನಾನಾತ್ವಂ ಛಿದ್ರಯೋರ್ಯದ್ವಜ್ಜ್ಯೋತಿಷೋರ್ವಾತಯೋರಿವ ॥ ೩೦

ಯಥಾ ಹಿರಣ್ಯಂ ಬಹುಧಾ ಸಮೀಯತೇ
ನೃಭಿಃ ಕ್ರಿಯಾಭಿರ್ವ್ಯವಹಾರವರ್ತ್ಮಸು ।
ಏವಂ ವಚೋಭಿರ್ಭಗವಾನಧೋಕ್ಷಜೋ
ವ್ಯಾಖ್ಯಾಯತೇ ಲೌಕಿಕವೈದಿಕೈರ್ಜನೈಃ ॥ ೩೧

ಯಥಾ ಘನೋಽರ್ಕಪ್ರಭವೋಽರ್ಕದರ್ಶಿತೋ
ಹ್ಯರ್ಕಾಂಶಭೂತಸ್ಯ ಚ ಚಕ್ಷುಷಸ್ತಮಃ ।
ಏವಂ ತ್ವಹಂ ಬ್ರಹ್ಮಗುಣಸ್ತದೀಕ್ಷಿತೋ
ಬ್ರಹ್ಮಾಂಶಕಸ್ಯಾತ್ಮನ ಆತ್ಮಬಂಧನಃ ॥ ೩೨

ಘನೋ ಯದಾರ್ಕಪ್ರಭವೋ ವಿದೀರ್ಯತೇ
ಚಕ್ಷುಃ ಸ್ವರೂಪಂ ರವಿಮೀಕ್ಷತೇ ತದಾ ।

---

ನಾನಾತ್ವವಾದರೋ ಘಟಾಕಾಶಕ್ಕೂ ಮಹಾಕಾಶಕ್ಕೂ ಇರುವಂತೆ, ಜಲಸ್ಥ ಸೂರ್ಯನಿಗೂ ಆಕಾಶಸ್ಥ ಸೂರ್ಯನಿಗೂ ಇರುವಂತೆ ಶರೀರಸ್ಥ ವಾಯುವಿಗೂ ಬಾಹ್ಯವಾಯುವಿಗೂ ಇರುವಂತೆ ಉಪಾಧಿಕೃತವಾದದ್ದು (೨೯-೩೦). ಒಂದೇ ಸುವರ್ಣವು ರಚನಾಭೇದದಿಂದ ಕಟಕ, ಕುಂಡಲ, ಉಂಗುರ ಮುಂತಾದ ವಿಭಿನ್ನ ನಾಮಗಳನ್ನು, ಧರಿಸಿ ವ್ಯವಹಾರಗೋಚರವಾಗುತ್ತದೆ. ಹಾಗೆಯೇ ಒಬ್ಬನೇ ಆದ ಭಗವಾನ್ ಮಹಾವಿಷ್ಣುವು (ಅಹಂಕಾರೋಪಾಧಿಯುಳ್ಳ) ಜನರಿಂದ ವ್ಯವಹಾರದಲ್ಲಿ ಲೌಕಿಕ ವಾಕ್ಯಗಳಿಂದಲೂ ಮತ್ತು ವೈದಿಕ ವಾಕ್ಯಗಳಿಂದಲೂ ಬಹುಪ್ರಕಾರವಾಗಿ ವ್ಯವಹೃತವಾಗುತ್ತಾನೆ (೩೧). ಸೂರ್ಯನಿಂದ ಹುಟ್ಟುವ ಮೋಡವು ಸೂರ್ಯನಿಂದಲೇ ಪ್ರಕಾಶಿತವಾಗಿ, ಸೂರ್ಯಾಂಶವಾದ ಚಕ್ಷುಸ್ಸಿಗೆ ಸೂರ್ಯನನ್ನು ನೋಡಲು ಪ್ರತಿಬಂಧಕವಾದ ಕತ್ತಲೆಯಾಗಿಬಿಡುತ್ತದಲ್ಲವೆ? ಅಂತೆಯೇ ಬ್ರಹ್ಮವಸ್ತುವಿನ ಗುಣವಾದ-ಎಂದರೆ-ಬ್ರಹ್ಮವಸ್ತುವಿನಿಂದ ಹುಟ್ಟಿದ ಅಹಂಕಾರವು ಬ್ರಹ್ಮದಿಂದಲೇ ಪ್ರಕಾಶಿತವಾಗಿ, ಬ್ರಹ್ಮಾಂಶವಾದ ಜೀವನಿಗೆ ಬ್ರಹ್ಮವನ್ನರಿಯಲು ಪ್ರತಿಬಂಧಕವಾಗಿಬಿಡುತ್ತದೆ! (೩೨). ಸೂರ್ಯನಿಂದ ಹುಟ್ಟಿದ ಮೋಡವು ಕರಗಿಹೋದಾಗ ಚಕ್ಷುರಿಂದ್ರಿಯವು ತನ್ನ ಸ್ವರೂಪವೇ ಆದ ಸೂರ್ಯನನ್ನು

ಯದಾ ಹ್ಯಹಂಕಾರ ಉಪಾಧಿರಾತ್ಮನೋ
ಜಿಜ್ಞಾಸಯಾ ನಶ್ಯತಿ ತರ್ಹ್ಯನುಸ್ಮರೇತ್ ॥ ೩೩

ಯದ್ಯೈವಮೇತೇನ ವಿವೇಕಹೇತಿನಾ
ಮಾಯಾಮಯಾಹಂಕರಣಾತ್ಮಬಂಧನಮ್ ।
ಛಿತ್ತ್ವಾಚ್ಯುತಾತ್ಮಾನುಭವೋಽವತಿಷ್ಠತೇ
ತಮಾಹುರಾತ್ಯಂತಿಕಮಂಗ ಸಂಪ್ಲವಮ್ ॥ ೩೪

ನಿತ್ಯದಾ ಸರ್ವಭೂತಾನಾಂ ಬ್ರಹ್ಮಾದೀನಾಂ ಪರಂತಪ ।
ಉತ್ಪತ್ತಿಪ್ರಲಯಾವೇಕೇ ಸೂಕ್ಷ್ಮಜ್ಞಾಃ ಸಂಪ್ರಚಕ್ಷತೇ ॥ ೩೫

ಕಾಲಸ್ರೋತೋಜವೇನಾಶು ಹ್ರಿಯಮಾಣಸ್ಯ ನಿತ್ಯದಾ ।
ಪರಿಣಾಮಿನಾಮವಸ್ಥಾಸ್ತಾ ಜನ್ಮಪ್ರಲಯಹೇತವಃ ॥ ೩೬

---

ನೋಡಬಲ್ಲುದು. ಅಂತೆಯೇ ಜೀವಾತ್ಮನ ಉಪಾಧಿಯಾಗಿರುವ ಅಹಂಕಾರವು ವಿಚಾರಬಲದಿಂದ ನಶಿಸಿದಾಗ, ಜೀವಾತ್ಮನು ತನ್ನ ಸ್ವರೂಪವೇ ಆದ ಪರಬ್ರಹ್ಮವು ತಾನೆಂಬುದನ್ನು ಸ್ಮರಿಸಿಕೊಳ್ಳುತ್ತಾನೆ (ಅಹಂ ಬ್ರಹ್ಮಾಸ್ಮಿ ಎಂದು ತಿಳಿದುಕೊಳ್ಳುತ್ತಾನೆ) (೩೩). ಪರೀಕ್ಷಿತರಾಜ, ಮಾಯಾಮಯವಾದ ಅಹಂಕಾರವೆಂಬ ಯಾವ ಆತ್ಮಬಂಧನಪಾಶ ಉಂಟೋ ಅದನ್ನು ಜ್ಞಾನಖಡ್ಗದಿಂದ ಕತ್ತರಿಸಿಹಾಕಿದರೆ ಪೂರ್ಣಾತ್ಮಾನುಭವವಾಗುತ್ತದೆ. ಅದನ್ನು ಆತ್ಯಂತಿಕ ಪ್ರಲಯವೆನ್ನುತ್ತಾರೆ (೩೪). (ಚತುರ್ಮುಖ) ಬ್ರಹ್ಮನೇ ಮೊದಲಾದ ಸಕಲಭೂತವರ್ಗಗಳಿಗೂ ಉತ್ಪತ್ತಿಪ್ರಳಯಗಳು ಸದಾ ಆಗುತ್ತಲೇ ಇರುತ್ತವೆಯೆಂದು ಸೂಕ್ಷ್ಮಜ್ಞರಾದ ವಿದ್ವಾಂಸರು ಹೇಳುತ್ತಾರೆ. ಕಾಲಪ್ರವಾಹದ ವೇಗಕ್ಕೆ ಸಿಕ್ಕಿ ಬಹುಬೇಗನೆ ಎಳೆಯಲ್ಪಟ್ಟು ಪ್ರತಿಕ್ಷಣದಲ್ಲಿಯೂ ಪರಿಣಾಮಗೊಳ್ಳುತ್ತಿರುವ ಈ ಭೂತವರ್ಗಗಳ ಯಾವ ಉಚ್ಚ ನೀಚ ಅವಸ್ಥೆಗಳುಂಟೋ ಅವು ಈ ಭೂತವರ್ಗಗಳ ಉತ್ಪತ್ತಿ ವಿನಾಶಗಳಿಗೆ [1]ನಿಮಿತ್ತಗಳಾಗಿವೆ (೩೫-೩೬).

---

1. ಜಗತ್ತಿನ ಎಲ್ಲ ವಸ್ತುವೂ ಪರಿಣಾಮಿಯಾದ್ದರಿಂದ ಪ್ರತಿಕ್ಷಣದಲ್ಲಿಯೂ ಒಂದೊಂದು ವಸ್ತುವಿನ ಕಣವು ನಾಶವಾಗುತ್ತ ಹೊಸದು ಹುಟ್ಟುತ್ತ ಇರುತ್ತದೆ. ಈ ನಾಶವೇ ನಿತ್ಯಪ್ರಳಯ.

ಅನಾದ್ಯಂತವತಾನೇನ ಕಾಲೇನೇಶ್ವರಮೂರ್ತಿನಾ ।
ಅವಸ್ಥಾ ನೈವ ದೃಶ್ಯಂತೇ ವಿಯತಿ ಜ್ಯೋತಿಷಾಮಿವ ॥ ೩೭

ನಿತ್ಯೋ ನೈಮಿತ್ತಿಕಶ್ಚೈವ ತಥಾ ಪ್ರಾಕೃತಿಕೋ ಲಯಃ ।
ಆತ್ಯಂತಿಕಶ್ಚ ಕಥಿತಃ ಕಾಲಸ್ಯ ಗತಿರೀದೃಶೀ ॥ ೩೮

ಏತಾಃ ಕುರುಶ್ರೇಷ್ಠ ಜಗದ್ವಿಧಾತು-
ರ್ನಾರಾಯಣಸ್ಯಾಖಿಲಸತ್ತ್ವಧಾಮ್ನಃ ।
ಲೀಲಾಕಥಾಸ್ತೇ ಕಥಿತಾಃ ಸಮಾಸತಃ
ಕಾರ್ತ್ಸ್ನ್ಯೇನ ನಾಜೋಽಪ್ಯಭಿಧಾತುಮೀಶಃ ॥ ೩೯

ಸಂಸಾರಸಿಂಧುಮತಿದುಸ್ತರಮುತ್ತಿತೀರ್ಷೋರ್-
ನಾನ್ಯಃ ಪ್ಲವೋ ಭಗವತಃ ಪುರುಷೋತ್ತಮಸ್ಯ ।
ಲೀಲಾಕಥಾರಸನಿಷೇವಣಮಂತರೇಣ
ಪುಂಸೋ ಭವೇದ್ ವಿವಿಧದುಃಖದವಾರ್ದಿತಸ್ಯ ॥ ೪೦

ಪುರಾಣಸಂಹಿತಾಮೇತಾಮೃಷಿರ್ನಾರಾಯಣೋಽವ್ಯಯಃ ।
ನಾರದಾಯ ಪುರಾ ಪ್ರಾಹ ಕೃಷ್ಣದ್ವೈಪಾಯನಾಯ ಸಃ ॥ ೪೧

---

ಆದ್ಯಂತರಹಿತವೂ ಈಶ್ವರಮೂರ್ತಿಯೂ ಆದ ಕಾಲದಿಂದ ಉಂಟಾಗುವ ಭೂತವರ್ಗಗಳ ವಿಭಿನ್ನಾವಸ್ಥೆಗಳು ಆಕಾಶದಲ್ಲಿ ಸಂಚರಿಸುವ ಗ್ರಹನಕ್ಷತ್ರಾದಿ ಜ್ಯೋತಿಗಳ ಗತಿಯಂತೆ ನಮಗೆ ಗೋಚರಿಸುವುದಿಲ್ಲ (೩೭). ಈ ಪ್ರಕಾರ ವಾಗಿ ನಿತ್ಯ, ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕ—ಎಂಬ ಪ್ರಳಯಭೇದಗಳನ್ನು ಹೇಳಿದ್ದೇನೆ. ಕಾಲದ ಗತಿ ಈ ರೀತಿಯಾಗಿದೆ. ಓ ಪರೀಕ್ಷಿತರಾಜ, ವಿಶ್ವಕರ್ತನೂ ಅಖಿಲಶಕ್ತಿಧಾಮನೂ ಆದ ಶ್ರೀಮನ್ನಾರಾಯಣನ ಲೀಲಾಕಥೆಗಳನ್ನು ಸಂಕ್ಷೇಪ ವಾಗಿ ಹೇಳಿದ್ದೇನೆ. ಇವುಗಳನ್ನು ಪೂರ್ಣವಾಗಿ ವಿವರಿಸುವುದಕ್ಕೆ ಬ್ರಹ್ಮನೂ ಶಕ್ತನಲ್ಲ! (೩೮–೩೯). ನಾನಾ ದುಃಖಗಳೆಂಬ ಕಾಳ್ಗಿಚ್ಚಿಗೆ ಸಿಕ್ಕಿ ಬಳಲಿ ಬೆಂಡಾಗಿ ದುಸ್ತರವಾದ ಸಂಸಾರಸಾಗರವನ್ನು ದಾಟಬೇಕೆಂದಿರುವ ಮನುಷ್ಯನಿಗೆ, ಭಗವಾನ್ ಪುರುಷೋತ್ತಮನ ಲೀಲಾಕಥಾರಸವನ್ನು ಪಾನಮಾಡುವುದರ ಹೊರ ತಾಗಿ ಇನ್ನೊಂದು ಹಡಗು ಇಲ್ಲ (೪೦). ಅವ್ಯಯನಾದ ನಾರಾಯಣಋಷಿಯು

ಸ ವೈ ಮಹ್ಯಂ ಮಹಾರಾಜ ಭಗವಾನ್ ಬಾದರಾಯಣಃ ।
ಇಮಾಂ ಭಾಗವತೀಂ ಪ್ರೀತಃ ಸಂಹಿತಾಂ ವೇದಸಮ್ಮಿತಾಮ್ ॥ ೪೨

ಏತಾಂ ವಕ್ಷ್ಯತ್ಯಸೌ ಸೂತ ಋಷಿಭ್ಯೋ ನೈಮಿಷಾಲಯೇ ।
ದೀರ್ಘಸತ್ರೇ ಕುರುಶ್ರೇಷ್ಠ ಸಂಪೃಷ್ಟಃ ಶೌನಕಾದಿಭಿಃ ॥ ೪೩

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ಚತುರ್ಥೋಽಧ್ಯಾಯಃ



ಈ ಪುರಾಣಸಂಹಿತೆಯನ್ನು ಪೂರ್ವದಲ್ಲಿ ನಾರದರಿಗೆ ಬೋಧಿಸಿದನು. ನಾರದರು ಕೃಷ್ಣದ್ವೈಪಾಯನರಿಗೆ ಇದನ್ನು ಹೇಳಿದರು. ಮಹಾರಾಜ, ಆ ಭಗವಾನ್ [1]ಬಾದರಾಯಣರು ಸಂಪ್ರೀತರಾಗಿ ವೇದಸಮಾನವಾದ ಈ ಭಾಗವತ ಪುರಾಣ ಸಂಹಿತೆಯನ್ನು ನನಗೆ ಉಪದೇಶಿಸಿದರು (೪೧-೪೨). ಹೇ ಕುರುಶ್ರೇಷ್ಠ, ಮುಂದೆ ನೈಮಿಷಾರಣ್ಯದಲ್ಲಿ ನಡೆಯುವ ದೀರ್ಘಸತ್ರದ ಸಮಯದಲ್ಲಿ ಶೌನಕಾದಿ ಋಷಿಗಳು ಪ್ರಶ್ನೆಮಾಡುತ್ತಾರೆ. ಆಗ ಅದೋ ಅಲ್ಲಿ ಕುಳಿತಿರುವ ಸೂತಪೌರಾಣಿಕನು ಆ ಋಷಿಗಳಿಗೆ ಇದೇ ಭಾಗವತಪುರಾಣವನ್ನು ಹೇಳುವನು " ಎಂದರು (೪೩).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ದ್ವಾದಶಸ್ಕಂಧದಲ್ಲಿ
ನಾಲ್ಕನೆಯ ಅಧ್ಯಾಯ



1. ಕೃಷ್ಣದ್ವೈಪಾಯನರೆಂದರೆ ವೇದವ್ಯಾಸರು. ಅವರನ್ನೇ ಇಲ್ಲಿ ಬಾದರಾಯಣ ರೆಂದು ಕರೆಯಲಾಗಿದೆ. ಇದನ್ನು ಗಮನಿಸಬೇಕು.

# ಪಂಚಮೋಧ್ಯಾಯಃ

ಶ್ರೀಶುಕ ಉವಾಚ—

ಅತ್ರಾನುವರ್ಣ್ಯತೇಽಭೀಕ್ಷ್ಣಂ ವಿಶ್ವಾತ್ಮಾ ಭಗವಾನ್ ಹರಿಃ ।
ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಃ ಕ್ರೋಧಸಮುದ್ಭವಃ ॥ ೧

ತ್ವಂ ತು ರಾಜನ್ ಮರಿಷ್ಯೇತಿ ಪಶುಬುದ್ಧಿಮಿಮಾಂ ಜಹಿ ।
ನ ಜಾತಃ ಪ್ರಾಗಭೂತೋಽದ್ಯ ದೇಹವತ್ತ್ವಂ ನ ನಂಕ್ಷ್ಯಸಿ ॥ ೨

ನ ಭವಿಷ್ಯಸಿ ಭೂತ್ವಾ ತ್ವಂ ಪುತ್ರಪೌತ್ರಾದಿರೂಪವಾನ್ ।
ಬೀಜಾಂಕುರವದ್ ದೇಹಾದೇರ್ವ್ಯತಿರಿಕ್ತೋ ಯಥಾನಲಃ ॥ ೩

## ಅಧ್ಯಾಯ ೫

ದೇಹಾತಿರಿಕ್ತನಾದವನು ಆತ್ಮ—ಎಂಬ ಬೋಧನೆಯಿಂದ ಶುಕಮುನಿಗಳು
ಪರೀಕ್ಷಿತನ ಮೃತ್ಯುಭಯವನ್ನು ನಿವಾರಿಸುವುದು.

ಮತ್ತೆ ಶುಕಮಹರ್ಷಿಗಳು ಇಂತೆಂದರು : “ಯಾರ ಹರ್ಷದಿಂದ ಬ್ರಹ್ಮನೂ ಕ್ರೋಧದಿಂದ ರುದ್ರನೂ ಉದ್ಭವಿಸಿದರೋ ಅಂತಹ ವಿಶ್ವಾತ್ಮನಾದ ಭಗವಾನ್ ಶ್ರೀಹರಿಯು ಈ ಭಾಗವತ ಮಹಾಪುರಾಣದಲ್ಲಿ ವಿಶೇಷವಾಗಿ ವರ್ಣಿಸಲ್ಪಟ್ಟಿದ್ದಾನೆ (೧). ಓ ರಾಜ, ಈಗ ನೀನು ‘ನಾನು ಸಾಯುವೆನು’ ಎಂಬ ಈ ಪಶುಬುದ್ಧಿಯನ್ನು ತ್ಯಜಿಸು! ಈ ದೇಹವು ಸಾಯುವ ಹಾಗೆ ನೀನು ಸಾಯತಕ್ಕವನಲ್ಲ! ನೀನು ಹೊಸದಾಗಿ ಹುಟ್ಟಿದವನೂ ಅಲ್ಲ, ಹಿಂದೆ ಇಲ್ಲದವನೂ ಅಲ್ಲ (೨). (ಮುಂದೆ ಇಲ್ಲದೆ ಹೋಗತಕ್ಕವನೂ ಅಲ್ಲ) ಪುತ್ರಪೌತ್ರಾದಿ ದೇಹವನ್ನು ಧರಿಸಿ ಬೀಜಾಂಕುರ ನ್ಯಾಯದಂತೆ ಮುಂದೆ [1]ಇರತಕ್ಕವನಲ್ಲ (ಆದರೆ ಸ್ವಸ್ವರೂಪದಿಂದಲೇ ಮುಂದೆ ಇರತಕ್ಕವನಾಗಿದ್ದೀಯೆ). ಏಕೆಂದರೆ, ಕಟ್ಟಿಗೆಗಿಂತ ಅದರಲ್ಲಿರತಕ್ಕ

---

1. ‘ಆತ್ಮಾ ವೈ ಪುತ್ರನಾಮಾಸಿ’ ಇತ್ಯಾದಿ ವಚನಗಳಿಂದ ‘ಮನುಷ್ಯನು ಪುತ್ರಾದಿ ರೂಪದಲ್ಲಿ ಇರುವನು, ಸ್ವಸ್ವರೂಪದಿಂದಲ್ಲ. ಏವಂ ಚ ಸಾವು ಇದೆ’ ಎಂಬ ಶಂಕೆಗೆ ಇದು ಉತ್ತರ. ದೇಹದಿಂದ ದೇಹ ಹುಟ್ಟುತ್ತದೆಯೇ ಹೊರತು, ಆತ್ಮವಲ್ಲ—ಎಂದು ಸಮಾಧಾನ.

ಸ್ವಪ್ನೇ ಯಥಾ ಶಿರಶ್ಛೇದಂ ಪಂಚತ್ವಾದ್ಯಾತ್ಮನಃ ಸ್ವಯಮ್ ।
ಯಸ್ಮಾತ್ ಪಶ್ಯತಿ ದೇಹಸ್ಯ ತತ ಆತ್ಮ ಹ್ಯಜೋಽಮರಃ ॥ ೪

ಘಟೇ ಭಿನ್ನೇ ಯಥಾಽಽಕಾಶ ಆಕಾಶಃ ಸ್ಯಾದ್ ಯಥಾ ಪುರಾ ।
ಏವಂ ದೇಹೇ ಮೃತೇ ಜೀವೋ ಬ್ರಹ್ಮ ಸಂಪದ್ಯತೇ ಪುನಃ ॥ ೫

ಮನಃ ಸೃಜತಿ ವೈ ದೇಹಾನ್ ಗುಣಾನ್ ಕರ್ಮಾಣಿ ಚಾತ್ಮನಃ ।
ತನ್ಮನಃ ಸೃಜತೇ ಮಾಯಾ ತತೋ ಜೀವಸ್ಯ ಸಂಸೃತಿಃ ॥ ೬

ಸ್ನೇಹಾಧಿಷ್ಠಾನವರ್ತ್ಯಗ್ನಿಸಂಯೋಗೋ ಯಾವದೀಯತೇ ।
ತತೋ ದೀಪಸ್ಯ ದೀಪತ್ವಮೇವಂ ದೇಹಕೃತೋ ಭವಃ ।
ರಜಸ್ಸತ್ತ್ವತಮೋವೃತ್ತ್ಯಾ ಜಾಯತೇಽಥ ವಿನಶ್ಯತಿ ॥ ೭

---

ಅಗ್ನಿಯು ಹೇಗೆ ಬೇರೆಯೋ ಹಾಗೆ ಈ ದೇಹದಿಂದ ನೀನು ಬೇರೆಯಾಗಿದ್ದೀಯೆ (೩). ಒಬ್ಬನು ಕನಸಿನಲ್ಲಿ ತನ್ನ ಶಿರಶ್ಛೇದನವಾಗುವುದನ್ನು ತಾನೇ ನೋಡ ಬಹುದು. ತನ್ನ ದೇಹಕ್ಕೆ ಮರಣವಾಗುತ್ತಿರುವುದನ್ನು ಅವನು ನೋಡುತ್ತಿರು ತ್ತಾನೆ. ಆದ್ದರಿಂದ ಆತ್ಮನು ದೇಹಕ್ಕೆ ಅತಿರಿಕ್ತನಾಗಿ ಅಜನೂ ಅಮರನೂ ಆಗಿರು ತ್ತಾನೆ (೪). ಘಟವನ್ನು ಒಡೆದಾಗ ಘಟೋಪಾಧಿಕವಾಗಿದ್ದ ಆಕಾಶವು ಮೊದಲಿ ನಂತೆ ಹೇಗೆ ಮಹಾಕಾಶವೇ ಆಗಿಬಿಡುತ್ತದೆಯೋ ಹಾಗೆ ತತ್ತ್ವಜ್ಞಾನದಿಂದ ದೇಹವು [1]ನಷ್ಟವಾದಾಗ ಜೀವವು ಮತ್ತೆ ಬ್ರಹ್ಮವೇ ಆಗಿಬಿಡುತ್ತದೆ (೫). ಜೀವಾತ್ಮನ ದೇಹ ಗುಣ ಕರ್ಮಗಳನ್ನು ಮನಸ್ಸು ಸೃಜಿಸುತ್ತದೆ. ಮನಸ್ಸನ್ನು ಮಾಯೆ ಸೃಜಿಸುತ್ತದೆ. ಹೀಗೆ ಮಾಯಾದ್ಯುಪಾಧಿಸಂಸರ್ಗದಿಂದ ಜೀವನಿಗೆ ಸಂಸಾರವು ಪ್ರಾಪ್ತವಾಗುವುದು (೬). ಎಣ್ಣೆ, ಹಣತೆ, ಬತ್ತಿ, ಅಗ್ನಿಸಂಯೋಗ —ಇವಿಷ್ಟು ಇರುವವರೆಗೆ ದೀಪಕ್ಕೆ ದೀಪತ್ವ ಬರುವುದು. ಎಂದರೆ, ಜ್ಯೋತಿಯು ಜ್ವಾಲೆಯಾಗಿ ಪರಿಣಮಿಸುವುದು. ಇದೇ ಪ್ರಕಾರವಾಗಿ ದೇಹದಿಂದ ಮನಸ್ಸಿಗೆ ಸಂಸಾರವು [2]ಏರ್ಪಡುತ್ತದೆ. ಸತ್ತ್ವರಜಸ್ತಮೋಗುಣಗಳ ವ್ಯಾಪಾರದಿಂದ ಈ

---

1. ತತ್ತ್ವಜ್ಞಾನವಾಗದೆ ಸತ್ತಾಗ ಲಿಂಗಶರೀರವು ಜೀವನಿಗೆ ಅಂಟಿಕೊಂಡೇ ಇರುತ್ತದೆ. ಇದ್ದರಿಂದ ಮೋಕ್ಷವಾಗದು.

2. ದೀಪಕ್ಕೆ ಎಣ್ಣೆಯಿದ್ದಂತೆ ಸಂಸಾರಕ್ಕೆ ಕರ್ಮ. ಹಣತೆಯಿದ್ದಂತೆ ಮನಸ್ಸು. ಬತ್ತಿಯಿದ್ದಂತೆ ದೇಹ. ಅಗ್ನಿಸಂಯೋಗವಿದ್ದಂತೆ ಚೈತನ್ಯಾಧ್ಯಾಸ. ದೀಪವಿದ್ದಂತೆ ಸಂಸಾರ.. ಗಾಳಿಯಿದ್ದಂತೆ ಸತ್ತ್ವಾದಿ ಗುಣತ್ರಯ—ಎಂದು ತಿಳಿಯಬೇಕು.

ನ ತತ್ರಾತ್ಮಾ ಸ್ವಯಂಜ್ಯೋತಿರ್ಯೋ ವ್ಯಕ್ತಾವ್ಯಕ್ತಯೋಃ ಪರಃ ।
ಆಕಾಶ ಇವ ಚಾಧಾರೋ ಧ್ರುವೋಽನಂತೋಪಮಸ್ತತಃ ॥ ೮

ಏವಮಾತ್ಮಾನಮಾತ್ಮಸ್ಥಮಾತ್ಮನೈವಾಮೃಶ ಪ್ರಭೋ ।
ಬುದ್ಧ್ಯಾನುಮಾನಗರ್ಭಿಣ್ಯಾ ವಾಸುದೇವಾನುಚಿಂತಯಾ ॥ ೯

ಚೋದಿತೋ ವಿಪ್ರವಾಕ್ಯೇನ ನ ತ್ವಾಂ ಧಕ್ಷ್ಯತಿ ತಕ್ಷಕಃ ।
ಮೃತ್ಯವೋ ನೋಪಧಕ್ಷ್ಯಂತಿ ಮೃತ್ಯೂನಾಂ ಮೃತ್ಯುಮೀಶ್ವರಮ್ ॥ ೧೦

ಅಹಂ ಬ್ರಹ್ಮ ಪರಂ ಧಾಮ ಬ್ರಹ್ಮಾಹಂ ಪರಮಂ ಪದಮ್ ।
ಏವಂ ಸಮೀಕ್ಷನ್ನಾತ್ಮಾನಮಾತ್ಮನ್ಯಾಧಾಯ ನಿಷ್ಕಲೇ ॥ ೧೧

---

ಸಂಸಾರವು ಹುಟ್ಟುವುದು. ಇವು ಯಾವವೂ ಇಲ್ಲದಿದ್ದರೆ ಸಂಸಾರವು ನಾಶವಾಗುವುದು (೭). ಹೀಗಿರುವಾಗ ನಾಶವಾಗತಕ್ಕದ್ದು (ದೀಪದಂತಿರುವ) ಸಂಸಾರವೇ ಹೊರತು (ಜ್ಯೋತಿಯಂತಿರುವ) ಆತ್ಮವಲ್ಲ. ಏಕೆಂದರೆ, ಆತ್ಮನು ಸ್ವಯಂಜ್ಯೋತಿಯೂ ಸ್ಥೂಲಸೂಕ್ಷ್ಮದೇಹಗಳಿಗೆ ಪರನೂ ಆಕಾಶದಂತೆ ದೇಹಕ್ಕೆ ಆಧಾರನೂ ನಿರ್ವಿಕಾರನೂ ಆಗಿದ್ದಾನೆ. ಆತ್ಮನಿಗೆ ಅಂತ್ಯವಿಲ್ಲ, ಉಪಮೆಯಿಲ್ಲ. ಅವನು ಸರ್ವತ್ರ ವ್ಯಾಪಿಸಿರುವ ವಿಭು (೮). ಹೇ ಮಹಾರಾಜ, ನಿನ್ನ ದೇಹದಲ್ಲಿರುವ ಆತ್ಮನ ಸ್ವರೂಪವನ್ನು ನೀನೇ ವಿಮರ್ಶಿಸಿ ನೋಡು. (ದೃಗ್‌ದೃಶ್ಯಗಳ ಸಮಾಲೋಚನೆ, ಅನ್ವಯ ವ್ಯತಿರೇಕ ಯುಕ್ತಿ) ಇವುಗಳಿಂದ ಯುಕ್ತವಾದ ಬುದ್ಧಿಯಿಂದ, ವಾಸುದೇವನನ್ನು ಸ್ಮರಿಸುತ್ತ, ವಿಮರ್ಶಿಸಿ ನೋಡು (೯). ಬ್ರಾಹ್ಮಣವಾಕ್ಯದಿಂದ ಪ್ರೇರಿತನಾದ ತಕ್ಷಕನು ನಿನ್ನನ್ನು ಎಂದಿಗೂ ಸುಡಲಾರನು. ಮೃತ್ಯುಗಳಿಗೂ ಮೃತ್ಯುವಾದ [1]ಈಶ್ವರನನ್ನು ಮೃತ್ಯುಗಳು ಬಂದು ಸುಡಲಾರವು! (೧೦). "ನಾನು ಪರಂಧಾಮವಾದ ಬ್ರಹ್ಮವೇ ಆಗಿದ್ದೇನೆ, ಪರಮಪದವಾದ ಬ್ರಹ್ಮವು ನಾನೇ ಆಗಿದ್ದೇನೆ" ಎಂದು ಸಮೀಕ್ಷಿಸುತ್ತ, ನಿರುಪಾಧಿಕವಾದ ನಿಷ್ಕಲಪರಬ್ರಹ್ಮದಲ್ಲಿ ಚಿತ್ತವನ್ನು ನಿಲ್ಲಿಸಿದಾಗ, ಪರೀಕ್ಷಿತರಾಜ, ವಿಷಯುಕ್ತಮುಖಗಳಿಂದ ಫೂತ್ಕರಿಸುತ್ತ ನಿನ್ನ ಕಾಲನ್ನು ಕಚ್ಚುವ ಸರ್ಪವನ್ನಾಗಲಿ—ನಿನ್ನ ಶರೀರವನ್ನಾಗಲಿ—ಈ

---

1. ಮೃತ್ಯುಂಜಯನಾದ ಈಶ್ವರನೇ ನೀನು—ಎಂದು ಅಭಿಪ್ರಾಯ.

ದಶಂತಂ ತಕ್ಷಕಂ ಪಾದೇ ಲೇಲಿಹಾನಂ ವಿಷಾನನೈಃ ।
ನ ದ್ರಕ್ಷ್ಯಸಿ ಶರೀರಂ ಚ ವಿಶ್ವಂ ಚ ಪೃಥಗಾತ್ಮನಃ ॥ ೧೨

ಏತತ್ತೇ ಕಥಿತಂ ತಾತ ಯಥಾತ್ಮಾ ಪೃಷ್ಟವಾನ್ ನೃಪ ।
ಹರೇರ್ವಿಶ್ವಾತ್ಮನಶ್ಚೇಷ್ಟಾಂ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೧೩

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ಬ್ರಹ್ಮೋಪದೇಶೋ ನಾಮ ಪಂಚಮೋಧ್ಯಾಯಃ



---

ವಿಶ್ವವನ್ನೇ ಆಗಲಿ, ಆತ್ಮನಿಗಿಂತ ಬೇರೆಯಾಗಿ ನೀನು ಕಾಣುವುದೇ ಇಲ್ಲ! (೧೧–೧೨). ಅಪ್ಪಾ—ಮಹಾರಾಜ, ವಿಶ್ವಾತ್ಮನಾದ ಶ್ರೀಹರಿಯ ಲೀಲಾ ಕೃತ್ಯವನ್ನು ಕುರಿತು ನೀನು ಪ್ರಶ್ನೆ ಮಾಡಿದ್ದರಿಂದ ಇಷ್ಟನ್ನು ಹೇಳಿದ್ದಾಯಿತು. ಇನ್ನೇನನ್ನು ಕೇಳಲು ಇಚ್ಛೆಯುಂಟು ? " ಎಂದು ಹೇಳಿದರು (೧೩).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ದ್ವಾದಶಸ್ಕಂಧದಲ್ಲಿ
ಐದನೆಯ ಅಧ್ಯಾಯ



# ಷಷ್ಠೋಧ್ಯಾಯಃ

**ಸೂತ ಉವಾಚ—**

ಏತನ್ನಿಶಮ್ಯ ಮುನಿನಾಭಿಹಿತಂ ಪರೀಕ್ಷಿದ್
ವ್ಯಾಸಾತ್ಮಜೇನ ನಿಖಿಲಾತ್ಮದೃಶಾ ಸಮೇನ ।
ತತ್ಪಾದಮೂಲಮುಪಸೃತ್ಯ ನತೇನ ಮೂರ್ಧ್ನಾ
ಬದ್ಧಾಂಜಲಿಸ್ತಮಿದಮಾಹ ಸ ವಿಷ್ಣುರಾತಃ ॥ ೧

**ರಾಜೋವಾಚ—**

ಸಿದ್ಧೋಽಸ್ಮ್ಯನುಗೃಹೀತೋಽಸ್ಮಿ ಭವತಾ ಕರುಣಾತ್ಮನಾ ।
ಶ್ರಾವಿತೋ ಯಚ್ಚ ಮೇ ಸಾಕ್ಷಾದನಾದಿನಿಧನೋ ಹರಿಃ ॥ ೨

ನಾತ್ಯದ್ಭುತಮಹಂ ಮನ್ಯೇ ಮಹತಾಮಚ್ಯುತಾತ್ಮನಾಮ್ ।
ಅಜ್ಞೇಷು ತಾಪತಪ್ತೇಷು ಭೂತೇಷು ಯದನುಗ್ರಹಃ ॥ ೩

## ಅಧ್ಯಾಯ ೬

ಪರೀಕ್ಷಿತನನ್ನು ಬೀಳ್ಕೊಂಡು ಶುಕಮುನಿಗಳ ಪ್ರಯಾಣ. ಪರೀಕ್ಷಿತನ ಮೋಕ್ಷ. ಜನಮೇಜಯನಿಂದ ಸರ್ಪಯಾಗ. ವೇದವಿಭಾಗವನ್ನು ಕುರಿತು ಸೂತರ ವಿವರಣೆ.

ಸೂತಪೌರಾಣಿಕರು ಶೌನಕಾದಿಮುನಿಗಳನ್ನು ಕುರಿತು ಹೇಳಿದರು : "ನಿಖಿಲವೂ ಆತ್ಮವೆಂದು ತಿಳಿದವರೂ ಸಮದೃಷ್ಟಿಯುಳ್ಳವರೂ ಶ್ರೀವ್ಯಾಸಪುತ್ರರೂ ಆದ ಶುಕಮುನಿಗಳು ಹೇಳಿದ ಈ ನುಡಿಯನ್ನು ಕೇಳಿ, ವಿಷ್ಣುರಾತನಾದ ಪರೀಕ್ಷಿತನು ಬಾಗಿದ ತಲೆಯಿಂದ ಅವರ ಪಾದಪದ್ಮವನ್ನು ಮುಟ್ಟಿ ನಮಸ್ಕರಿಸಿ ಕೈಮುಗಿದು ಕೊಂಡು ಇಂತೆಂದನು (೧). ಅವನು ಹೇಳಿದ್ದೇನೆಂದರೆ : "ಮಹಾತ್ಮರೆ, ಕರುಣಾಳುಗಳಾದ ನೀವು ಅನಾದಿನಿಧನನಾದ ಶ್ರೀಹರಿಯ ಲೀಲೆಯನ್ನು ಶ್ರವಣ ಮಾಡಿಸಿದಿರಿ. (ಆತನ ಪ್ರಾಪ್ತಿಸಾಧನವನ್ನೂ ತಿಳಿಸಿದಿರಿ) ಇದರಿಂದ ನಾನು ಅನುಗೃಹೀತನಾದೆನು. ಕೃತಾರ್ಥನಾದೆನು (೨). ಅಚ್ಯುತಭಕ್ತರಾದ ಮಹಾತ್ಮರಿಗೆ ಅಜ್ಞಾನಿಗಳೂ ಸಂಸಾರ ತಾಪತಪ್ತರೂ ಆದ ನನ್ನಂತಹ ಪ್ರಾಣಿಗಳಲ್ಲಿ ಅನುಗ್ರಹ ಬುದ್ಧಿ ಇರುವುದು ಅಚ್ಚರಿಯಲ್ಲ. ಉತ್ತಮಶ್ಲೋಕನಾದ ಭಗವಂತನನ್ನು ವರ್ಣಿಸತಕ್ಕ ಈ ಪುರಾಣಸಂಹಿತೆಯನ್ನು ನಿಮ್ಮಿಂದ ನಾವು ಕೇಳಿದೆವು (೩–೪).

ಪುರಾಣಸಂಹಿತಾಮೇತಾಮಶ್ರೌಷ್ಮ ಭವತೋ ವಯಮ್ ।
ಯಸ್ಯಾಂ ಖಲೂತ್ತಮಶ್ಲೋಕೋ ಭಗವಾನನುವರ್ಣ್ಯತೇ ॥ ೪

ಭಗವಂಸ್ತಕ್ಷಕಾದಿಭ್ಯೋ ಮೃತ್ಯುಭ್ಯೋ ನ ಬಿಭೇಮ್ಯಹಮ್ ।
ಪ್ರವಿಷ್ಟೋ ಬ್ರಹ್ಮ ನಿರ್ವಾಣಮಭಯಂ ದರ್ಶಿತಂ ತ್ವಯಾ ॥ ೫

ಅನುಜಾನೀಹಿ ಮಾಂ ಬ್ರಹ್ಮನ್ ವಾಚಂ ಯಚ್ಛಾಮ್ಯಧೋಕ್ಷಜೇ ।
ಮುಕ್ತಕಾಮಾಶಯಂ ಚೇತಃ ಪ್ರವೇಶ್ಯ ವಿಸೃಜಾಮ್ಯಸೂನ್ ॥ ೬

ಅಜ್ಞಾನಂ ಚ ನಿರಸ್ತಂ ಮೇ ಜ್ಞಾನವಿಜ್ಞಾನನಿಷ್ಠಯಾ ।
ಭವತಾ ದರ್ಶಿತಂ ಕ್ಷೇಮಂ ಪರಂ ಭಗವತಃ ಪದಮ್ ॥ ೭

ಸೂತ ಉವಾಚ—

ಇತ್ಯುಕ್ತಸ್ತಮನುಜ್ಞಾಪ್ಯ ಭಗವಾನ್ ಬಾದರಾಯಣಿಃ ।
ಜಗಾಮ ಭಿಕ್ಷುಭಿಃ ಸಾಕಂ ನರದೇವೇನ ಪೂಜಿತಃ ॥ ೮

ಪರೀಕ್ಷಿದಪಿ ರಾಜರ್ಷಿರಾತ್ಮನ್ಯಾತ್ಮಾನಮಾತ್ಮನಾ ।
ಸಮಾಧಾಯ ಪರಂ ದಧ್ಯಾವಸ್ಪಂದಾಸುರ್ಯಥಾ ತರುಃ ॥ ೯

---

ಭಗವನ್, ಇನ್ನು ನಾನು ತಕ್ಷಕನೇ ಮೊದಲಾದ ಯಾವ ಮೃತ್ಯುಗಳು ಬಂದರೂ ಹೆದರತಕ್ಕವನಲ್ಲ ! ನೀವು ತೋರಿಸಿಕೊಟ್ಟ ನಿರ್ಭಯವೂ ಕೈವಲ್ಯರೂಪವೂ ಆದ ಬ್ರಹ್ಮಾನಂದದೊಳಗೆ ಪ್ರವೇಶಿಸಿದ್ದೇನೆ ! (೫). ಓ ಬ್ರಹ್ಮರ್ಷಿಗಳೆ, ನನಗೀಗ ಅನುಜ್ಞೆಯನ್ನು ನೀಡಿರಿ. ಮಾತನಾಡುವುದನ್ನು ನಿಲ್ಲಿಸುವೆನು. ಸರ್ವಕಾಮನೆಗಳನ್ನೂ ತೊರೆದಿರುವ ಚಿತ್ತವನ್ನು ಭಗವಂತನಲ್ಲಿ ನಿಲ್ಲಿಸಿ ಪ್ರಾಣಗಳನ್ನು ತೊರೆಯುವೆನು (೬). ಜ್ಞಾನವಿಜ್ಞಾನ ನಿಷ್ಠೆಯಿಂದ ನನ್ನ ಅಜ್ಞಾನವನ್ನು ತೊಡೆದು ಹಾಕಿದ್ದೀರಿ. ಕ್ಷೇಮಂಕರವೂ ಶ್ರೇಷ್ಠವೂ ಆದ ಭಗವಂತನ ಪಾದವನ್ನು ತೋರಿಸಿದ್ದೀರಿ" ಎಂದನು (೭). ಓ ಶೌನಕಾದಿಮುನಿಗಳೆ, ಈ ರೀತಿಯಾಗಿ ಪರೀಕ್ಷಿತರಾಜನು ನುಡಿದು ಪೂಜಿಸಲಾಗಿ ಭಗವಾನ್ ಶುಕಮಹರ್ಷಿಗಳು ರಾಜನಿಗೆ ಅನುಮತಿಯನ್ನಿತ್ತು ಬೀಳ್ಕೊಂಡು, ಭಿಕ್ಷುಗಳೊಡನೆ ಹೊರಟುಹೋದರು (೮). ಇತ್ತಲಾಗಿ ಪರೀಕ್ಷಿತನಾದರೋ ಗಂಗಾತೀರದಲ್ಲಿ ಪೂರ್ವಾಭಿಮುಖವಾಗಿ ದರ್ಭೆಗಳನ್ನು ಹರಡಿ, ಆ ದರ್ಭಾಸನದಲ್ಲಿ ಉತ್ತರಾಭಿಮುಖವಾಗಿ ಕುಳಿತನು. ಛಿನ್ನಸಂಶಯನೂ ನಿಃಸಂಗನೂ ಮಹಾಯೋಗಿಯೂ ಆದ ಆ ರಾಜರ್ಷಿಯು ನಿಶ್ಚಿತ

ಪ್ರಾಕ್ಕೂಲೇ ಬರ್ಹಿಷ್ಯಾಸೀನೋ ಗಂಗಾಕೂಲ ಉದಙ್ಮುಖಃ ।
ಬ್ರಹ್ಮಭೂತೋ ಮಹಾಯೋಗೀ ನಿಸ್ಸಂಗಶ್ಛಿನ್ನಸಂಶಯಃ ॥ ೧೦

ತಕ್ಷಕಃ ಪ್ರಹಿತೋ ವಿಪ್ರಾಃ ಕ್ರುದ್ಧೇನ ದ್ವಿಜಸೂನುನಾ ।
ಹಂತುಕಾಮೋ ನೃಪಂ ಗಚ್ಛನ್ ದದರ್ಶ ಪಥಿ ಕಶ್ಯಪಮ್ ॥ ೧೧

ತಂ ತರ್ಪಯಿತ್ವಾ ದ್ರವಿಣೈರ್ನಿವರ್ತ್ಯ ವಿಷಹಾರಿಣಮ್ ।
ದ್ವಿಜರೂಪಪ್ರತಿಚ್ಛನ್ನಃ ಕಾಮರೂಪೋಽದಶನ್ನೃಪಮ್ ॥ ೧೨

ಬ್ರಹ್ಮಭೂತಸ್ಯ ರಾಜರ್ಷೇರ್ದೇಹೋಽಹಿಗರಲಾಗ್ನಿನಾ ।
ಬಭೂವ ಭಸ್ಮಸಾತ್ ಸದ್ಯಃ ಪಶ್ಯತಾಂ ಸರ್ವದೇಹಿನಾಮ್ ॥ ೧೩

ಹಾಹಾಕಾರೋ ಮಹಾನಾಸೀದ್ ಭುವಿ ಖೇ ದಿಕ್ಷು ಸರ್ವತಃ ।
ವಿಸ್ಮಿತಾ ಹ್ಯಭವನ್ ಸರ್ವೇ ದೇವಾಸುರನರಾದಯಃ ॥ ೧೪

ದೇವದುಂದುಭಯೋ ನೇದುರ್ಗಂಧರ್ವಾಪ್ಸರಸೋ ಜಗುಃ ।
ವವೃಷುಃ ಪುಷ್ಪವರ್ಷಾಣಿ ವಿಬುಧಾಃ ಸಾಧುವಾದಿನಃ ॥ ೧೫

---

ಬುದ್ಧಿಯಿಂದ ಮನಸ್ಸನ್ನು ಆತ್ಮನಲ್ಲಿ ನೆಲೆಗೊಳಿಸಿ ಪ್ರಾಣಾಯಾಮದಿಂದ ಉಸಿರನ್ನು ತಡೆಹಿಡಿದು ಮರದ ಕೊರಡಿನಂತೆ ನಿಶ್ಚಲನಾದನು. ಸ್ವಯಂ ಬ್ರಹ್ಮ-ಭೂತನಾಗಿ ಪರಬ್ರಹ್ಮದ ಧ್ಯಾನದಲ್ಲಿ ನಿಮಗ್ನನಾದನು (೯–೧೦). ಎಲೈ ವಿಪ್ರರೆ, ಅತ್ತಲಾಗಿ ಕ್ರುದ್ಧನಾದ ದ್ವಿಜಪುತ್ರನಿಂದ ಪ್ರೇರಿತನಾದ ತಕ್ಷಕನು ರಾಜನನ್ನು ಕಚ್ಚಿ ಸಾಯಿಸಬೇಕೆಂದು ಬರುತ್ತಿರುವಾಗ ದಾರಿಯಲ್ಲಿ ಕಶ್ಯಪನೆಂಬ ಒಬ್ಬ ವಿಷವೈದ್ಯನನ್ನು ಕಂಡನು. (ಅವನು ಔಷಧವನ್ನು ಕೊಟ್ಟು ರಾಜನನ್ನು ಬದುಕಿಸಬೇಕೆಂದು ಬರುತ್ತಿದ್ದನು) ತಕ್ಷಕನು ಆತನಿಗೆ ಬಯಸಿದಷ್ಟು ಹಣವನ್ನಿತ್ತು ತೃಪ್ತಿಪಡಿಸಿ ಆ ವಿಷವೈದ್ಯನನ್ನು ಹಿಂದಕ್ಕೆ ಕಳಿಸಿದನು. ತಕ್ಷಕನು ಕಾಮರೂಪಿಯಾದ್ದರಿಂದ ಒಬ್ಬ ಬ್ರಾಹ್ಮಣನ ವೇಷವನ್ನು ಧರಿಸಿ ತಾನು ಯಾರೆಂಬುದನ್ನು ತೋರಿಸಿಕೊಳ್ಳದೆ, ಪರೀಕ್ಷಿತ ರಾಜನ ಬಳಿಗೆ ಹೋಗಿ ಆತನನ್ನು ಕಚ್ಚಿದನು (೧೧–೧೨). ಬ್ರಹ್ಮಭೂತನಾಗಿದ್ದ ರಾಜರ್ಷಿಯ ದೇಹವು ಒಡನೆಯೇ ಸರ್ಪದ ವಿಷಾಗ್ನಿಯಿಂದ, ಎಲ್ಲರೂ ನೋಡುತ್ತಿರುವಾಗಲೇ, ಸುಟ್ಟು ಬೂದಿಯಾಯಿತು! ಭೂಮಿಯಲ್ಲಿ - ಆಕಾಶದಲ್ಲಿ - ಸರ್ವದಿಕ್ಕುಗಳಲ್ಲಿ ದೊಡ್ಡ ಹಾಹಾಕಾರವೆದ್ದಿತು. ದೇವಾಸುರಮಾನವಾದಿಗಳೆಲ್ಲರೂ ಬೆರಗಾದರು! (೧೩–೧೪). ದೇವದುಂದುಭಿಗಳು

ಜನಮೇಜಯಃ ಸ್ವಪಿತರಂ ಶ್ರುತ್ವಾ ತಕ್ಷಕಭಕ್ಷಿತಮ್ ।
ಯಥಾ ಜುಹಾವ ಸಂಕ್ರುದ್ಧೋ ನಾಗಾನ್ ಸತ್ರೇ ಸಹ ದ್ವಿಜೈಃ ॥ ೧೬

ಸರ್ಪಸತ್ರೇ ಸಮಿದ್ಧಾಗ್ನೌ ದಹ್ಯಮಾನಾನ್ ಮಹೋರಗಾನ್ ।
ದೃಷ್ಟ್ವೇಂದ್ರಂ ಭಯಸಂವಿಗ್ನಸ್ತಕ್ಷಕಃ ಶರಣಂ ಯಯೌ ॥ ೧೭

ಅಪಶ್ಯಂಸ್ತಕ್ಷಕಂ ತತ್ರ ರಾಜಾ ಪಾರಿಕ್ಷಿತೋ ದ್ವಿಜಾನ್ ।
ಉವಾಚ ತಕ್ಷಕಃ ಕಸ್ಮಾನ್ನ ದಹ್ಯೇತೋರಗಾಧಮಃ ॥ ೧೮

ತಂ ಗೋಪಾಯತಿ ರಾಜೇಂದ್ರ ಶಕ್ರಃ ಶರಣಮಾಗತಮ್ ।
ತೇನ ಸಂಸ್ತಂಭಿತಃ ಸರ್ಪಸ್ತಸ್ಮಾನ್ನಾಗ್ನೌ ಪತತ್ಯಸೌ ॥ ೧೯

ಪಾರಿಕ್ಷಿತ ಇತಿ ಶ್ರುತ್ವಾ ಪ್ರಾಹರ್ತ್ವಿಜ ಉದಾರಧೀಃ ।
ಸಹೇಂದ್ರಸ್ತಕ್ಷಕೋ ವಿಪ್ರಾ ನಾಗ್ನೌ ಕಿಮಿತಿ ಪಾತ್ಯತೇ ॥ ೨೦

---

ಮೊಳಗಿದವು. ಗಂಧರ್ವಾಪ್ಸರೆಯರು ಹಾಡಿದರು. ಸಾಧು, ಭಲಾ, ಭೇಷ್—ಎನ್ನುತ್ತ ದೇವತೆಗಳು [1]ಹೂ ಮ ಳೆ ಗ ರೆ ದ ರು (೧೫). (ಕಾಲಾಂತರದಲ್ಲಿ) ಜನಮೇಜಯನಿಗೆ ತನ್ನ ತಂದೆಯಾದ ಪರೀಕ್ಷಿತನನ್ನು ತಕ್ಷಕನು ಕಚ್ಚಿಹೋದ ನೆಂಬುದು ಗೊತ್ತಾಯಿತು. ಅವನು ಅತ್ಯಂತ ಕ್ರುದ್ಧನಾಗಿ ಬ್ರಾಹ್ಮಣರೊಡನೆ ಸೇರಿ ಸರ್ಪಯಾಗವನ್ನಾರಂಭಿಸಿ, ಮಂತ್ರಗಳಿಂದ ಸರ್ಪಗಳನ್ನು ಕರೆಕರೆದು ಅಗ್ನಿ ಯಲ್ಲಿ ಆಹುತಿಯಾಗಿ ಬೀಳಿಸತೊಡಗಿದನು. ಉರಿಯುವ ಅಗ್ನಿಯಲ್ಲಿ ಬಿದ್ದು ಸುಟ್ಟು ಬೂದಿಯಾಗುತ್ತಿದ್ದ ಮಹೋರಗಗಳನ್ನು ಕಂಡು ಭಯಗ್ರಸ್ತನಾದ ತಕ್ಷಕನು ಇಂದ್ರನಿಗೆ ಶರಣಾದನು (೧೬–೧೭). ಆಹುತಿಯಾಗಿ ಬೀಳುತ್ತಿದ್ದ ಸರ್ಪಗಳ ನಡುವೆ ತಕ್ಷಕನನ್ನು ಕಾಣದೆಹೋದ ಜನಮೇಜಯರಾಜನು ದ್ವಿಜರನ್ನು ಕುರಿತು "ಉರಗಾಧಮನಾದ ತಕ್ಷಕನು ಅಗ್ನಿಯಲ್ಲಿ ಬಿದ್ದು ಏಕೆ ಸುಟ್ಟುಹೋಗುತ್ತಿಲ್ಲ ?" ಎಂದು ಕೇಳಿದನು. ಅದಕ್ಕೆ ಆ ಋತ್ವಿಜರು "ಮಹಾರಾಜ, ಶರಣಾಗತನಾದ ತಕ್ಷಕನನ್ನು ದೇವೇಂದ್ರನು ರಕ್ಷಿಸುತ್ತಿದ್ದಾನೆ. ಅವನು ತಡೆದು ನಿಲ್ಲಿಸಿರುವುದರಿಂದ ತಕ್ಷಕನು ಅಗ್ನಿಗೆ ಬೀಳುತ್ತಿಲ್ಲ" ಎಂದರು (೧೮–೧೯). ಅವರ ಮಾತನ್ನು ಕೇಳಿ ಬುದ್ಧಿಶಾಲಿಯಾದ ಜನಮೇಜಯನು "ಋತ್ವಿಜರೆ, ಆ ತಕ್ಷಕನನ್ನು ಇಂದ್ರನ

---

1. ಪರೀಕ್ಷಿತನು ಮೃತನಾದನೆಂದು ದುಃಖವೂ ಮುಕ್ತನಾದನೆಂದು ಸಂತೋಷವೂ ಇಲ್ಲಿ ವರ್ಣಿತವಾಗಿದೆ.

ತಚ್ಛ್ರುತ್ವಾಽಽಜುಹುವುರ್ವಿಪ್ರಾಃ ಸಹೇಂದ್ರಂ ತಕ್ಷಕಂ ಮಖೇ ।
ತಕ್ಷಕಾಶು ಪತಸ್ವೇಹ ಸಹೇಂದ್ರೇಣ ಮರುತ್ವತಾ ॥ ೨೧

ಇತಿ ಬ್ರಹ್ಮೋದಿತಾಕ್ಷೇಪೈಃ ಸ್ಥಾನಾದಿಂದ್ರಃ ಪ್ರಚಾಲಿತಃ ।
ಬಭೂವ ಸಂಭ್ರಾಂತಮತಿಃ ಸವಿಮಾನಃ ಸತಕ್ಷಕಃ ॥ ೨೨

ತಂ ಪತಂತಂ ವಿಮಾನೇನ ಸಹತಕ್ಷಕಮಂಬರಾತ್ ।
ವಿಲೋಕ್ಯಾಂಗಿರಸಃ ಪ್ರಾಹ ರಾಜಾನಂ ತಂ ಬೃಹಸ್ಪತಿಃ ॥ ೨೩

ನೈಷ ತ್ವಯಾ ಮನುಷ್ಯೇಂದ್ರ ವಧಮರ್ಹತಿ ಸರ್ಪರಾಟ್ ।
ಅನೇನ ಪೀತಮಮೃತಮಥ ವಾ ಅಜರಾಮರಃ ॥ ೨೪

ಜೀವಿತಂ ಮರಣಂ ಜಂತೋರ್ಗತಿಃ ಸ್ವೇನೈವ ಕರ್ಮಣಾ ।
ರಾಜಂಸ್ತತೋಽನ್ಯೋ ನಾನ್ಯಸ್ಯ ಪ್ರದಾತಾ ಸುಖದುಃಖಯೋಃ ॥ ೨೫

---

ಜೊತೆಗೇ ಅಗ್ನಿಯಲ್ಲೇಕೆ ಬೀಳಿಸಬಾರದು ?" ಎಂದು ಕೇಳಿದನು ! ಅವನ ಮಾತನ್ನು ಕೇಳಿದ ವಿಪ್ರರು ತಕ್ಷಕನನ್ನು ಇಂದ್ರಸಹಿತನಾಗಿ ಯಜ್ಞದಲ್ಲಿ ಆಹುತಿಯಾಗುವಂತೆ ಆಹ್ವಾನಿಸಿದರು. "ತಕ್ಷಕ, ಮರುದ್ಗಣಸಹಿತನಾದ ಇಂದ್ರನೊಡನೆ ಕೂಡಲೇ ಈ ಅಗ್ನಿಕುಂಡದಲ್ಲಿ ಬೀಳು !" ಎಂದು ಮಂತ್ರಪೂರ್ವಕವಾಗಿ ಕರೆದರು (೨೦–೨೧). ಈ ರೀತಿಯಾಗಿ ಬ್ರಾಹ್ಮಣರ ಕಠೋರವಚನಗಳಿಂದ ಆಹೂತನಾದೊಡನೆ, ತಕ್ಷಕನೊಡನೆ ವಿಮಾನದಲ್ಲಿದ್ದ ದೇವೇಂದ್ರನು ದಿಗ್ಭ್ರಾಂತನಾಗಿ ಅಲ್ಲಾಡಿಹೋದನು. ವಿಮಾನಸಹಿತವಾಗಿ ತಕ್ಷಕನೊಡನೆ ಆಕಾಶದಿಂದ ಕೆಳಗೆ ಬೀಳುತ್ತಿದ್ದ ದೇವೇಂದ್ರನನ್ನು ನೋಡಿ ಬೃಹಸ್ಪತಿಯು ಒಡನೆಯೇ ಬಂದು ಜನಮೇಜಯನನ್ನು ಕುರಿತು "ನರೇಂದ್ರ, ಸರ್ಪರಾಜನಾದ ತಕ್ಷಕನನ್ನು ನೀನು ಕೊಲ್ಲಲು ಪ್ರಯತ್ನಿಸುವುದು ಸರಿಯಲ್ಲ. ಅಲ್ಲದೆ ಇವನು ಅಮೃತವನ್ನು ಕುಡಿದಿದ್ದಾನೆ. ಈತನಿಗೆ ಮುಪ್ಪಾಗಲಿ ಮರಣವಾಗಲಿ ಇಲ್ಲ (೨೨–೨೪). ಮಹಾರಾಜ, ಒಂದು ಪ್ರಾಣಿಯ ಬದುಕು ಸಾವುಗಳು ಅದರ ಕರ್ಮಾನುಸಾರವಾಗಿಯೇ ನಡೆಯುತ್ತವೆ. ಆದ್ದರಿಂದ ಒಬ್ಬನಿಗೆ ಸುಖದುಃಖಗಳನ್ನು ಇನ್ನೊಬ್ಬನು ಕೊಡುವುದಿಲ್ಲ. ಸರ್ಪ, ಕಳ್ಳ, ಬೆಂಕಿ, ವಿದ್ಯುತ್ತುಗಳಿಂದಲೂ ಹಸಿವು, ಬಾಯಾರಿಕೆ, ರೋಗಾದಿಗಳಿಂದಲೂ ಒಬ್ಬನು ಸಾಯುತ್ತಾನೆಂದರೆ, ತನ್ನ ಪ್ರಾರಬ್ಧ

ಸರ್ಪಚೌರಾಗ್ನಿವಿದ್ಯುದ್ಭ್ಯಃ ಕ್ಷುತ್ತೃಡ್ವ್ಯಾಧ್ಯಾದಿಭಿರ್ನೃಪ ।
ಪಂಚತ್ವಮೃಚ್ಛತೇ ಜಂತುರ್ಭುಂಕ್ತ ಆರಬ್ಧಕರ್ಮ ತತ್ ॥ ೨೬

ತಸ್ಮಾತ್ ಸತ್ರಮಿದಂ ರಾಜನ್ ಸಂಸ್ಥೀಯೇತಾಭಿಚಾರಿಕಮ್ ।
ಸರ್ಪಾ ಅನಾಗಸೋ ದಗ್ಧಾ ಜನೈರ್ದಿಷ್ಟಂ ಹಿ ಭುಜ್ಯತೇ ॥ ೨೭

ಸೂತ ಉವಾಚ—

ಇತ್ಯುಕ್ತಃ ಸ ತಥೇತ್ಯಾಹ ಮಹರ್ಷೇರ್ಮಾನಯನ್ ವಚಃ ।
ಸರ್ಪಸತ್ರಾದುಪರತಃ ಪೂಜಯಾಮಾಸ ವಾಕ್ಪತಿಮ್ ॥ ೨೮

ಸೈಷಾ ವಿಷ್ಣೋರ್ಮಹಾಮಾಯಾಽಬಾಧ್ಯಯಾಽಲಕ್ಷಣಾ ಯಯಾ ।
ಮುಹ್ಯಂತ್ಯಸ್ಯೈವಾತ್ಮಭೂತಾ ಭೂತೇಷು ಗುಣವೃತ್ತಿಭಿಃ ॥ ೨೯

ನ ಯತ್ರ ದಂಭೀತ್ಯಭಯಾ ವಿರಾಜಿತಾ
ಮಾಯಾಽಽತ್ಮವಾದೇಽಸಕೃದಾತ್ಮವಾದಿಭಿಃ ।
ನ ಯದ್ವಿವಾದೋ ವಿವಿಧಸ್ತದಾಶ್ರಯೋ
ಮನಶ್ಚ ಸಂಕಲ್ಪವಿಕಲ್ಪವೃತ್ತಿ ಯತ್ ॥ ೩೦

---

ಕರ್ಮವನ್ನು ತಾನು ಅನುಭವಿಸುತ್ತಾನೆ—ಎಂದರ್ಥ (೨೫-೨೬). ಆದ್ದರಿಂದ ಜನಮೇಜಯ, ಹಿಂಸಾಫಲಕವಾದ ಈ ಅಭಿಚಾರ ಯಾಗವನ್ನು ಸಮಾಪ್ತಿಗೊಳಿಸು. ಏನೂ ತಪ್ಪುಮಾಡದ ಎಷ್ಟೋ ಸರ್ಪಗಳು ಈಗಾಗಲೇ ದಗ್ಧವಾಗಿ ಹೋದವು. ಜನರು ತಾವು ಮಾಡಿದ್ದನ್ನು ತಾವು [1]ಉಣ್ಣಬೇಕು" ಎಂದನು (೨೭). ಹೀಗೆ ಹೇಳಲಾಗಿ ಮಹರ್ಷಿಗಳಾದ ಬೃಹಸ್ಪತ್ಯಾಚಾರ್ಯರ ಮಾತನ್ನು ಮನ್ನಿಸಿ, ಜನಮೇಜಯನು ಸರ್ಪಯಾಗವನ್ನು ನಿಲ್ಲಿಸಿದನಲ್ಲದೆ, ಬೃಹಸ್ಪತಿಯನ್ನು ಪೂಜಿಸಿ ಗೌರವಿಸಿದನು (೨೮). ಶೌನಕಾದಿಮುನಿಗಳೆ, (ಪರೀಕ್ಷಿತನಿಗೆ ಶಾಪ, ಜನಮೇಜಯನ ಕೋಪ) ಇದೆಲ್ಲವೂ ವಿಷ್ಣುವಿನ ಊಹಾತೀತವಾದ ಮಹಾಮಾಯೆ. ಆತನ ಆತ್ಮಾಂಶಗಳೇ ಆದ ಪ್ರಾಣಿಗಳು ಅಬಾಧ್ಯವಾದ ಈ ಮಾಯೆಗೆ ಸಿಲುಕಿ ಮೋಹಗೊಳ್ಳುತ್ತಾರೆ. ಗುಣವೃತ್ತಿಗಳಾದ ಕ್ರೋಧಾದಿಗಳನ್ನು ದೇಹಗಳ ಮೇಲೆ ಪ್ರದರ್ಶಿಸುತ್ತಾರೆ (೨೯). 'ಈತನು ಕಪಟಿ' ಎಂದು ಹೇಳುವಾಗ

---

1. ಪರೀಕ್ಷಿತನ ಪ್ರಾರಬ್ಧಕರ್ಮವು ಅವನನ್ನು ತಕ್ಷಕನು ಕಚ್ಚುವಂತೆ ಪ್ರೇರಿಸಿತು—ಎಂದು ಅಭಿಪ್ರಾಯ.

ನ ಯತ್ರ ಸೃಜ್ಯಂ ಸೃಜತೋಭಯೋಃ ಪರಂ
ಶ್ರೇಯಶ್ಚ ಜೀವಸ್ತ್ರಿಭಿರನ್ವಿತಸ್ತ್ವಹಮ್
ತದೇತದುತ್ಸಾದಿತಬಾಧ್ಯಬಾಧಕಂ
ನಿಷಿಧ್ಯ ಚೋರ್ಮೀನ್ ವಿರಮೇತ್ ಸ್ವಯಂ ಮುನಿಃ ॥ ೩೧

ಪರಂ ಪದಂ ವೈಷ್ಣವಮಾಮನಂತಿ ತದ್
ಯನ್ನೇತಿ ನೇತೀತ್ಯತದುತ್ಸಿಸೃಕ್ಷವಃ ।
ವಿಸೃಜ್ಯ ದೌರಾತ್ಮ್ಯಮನನ್ಯಸೌಹೃದಾ
ಹೃದೋಪಗುಹ್ಯಾವಸಿತಂ ಸಮಾಹಿತೈಃ ॥ ೩೨

ಬುದ್ಧಿಯಲ್ಲಿ ಮತ್ತೆ ಮತ್ತೆ ಹೊಳೆಯುವ ಯಾವ ಮಾಯೆಯುಂಟೋ ಅದು ಪರಮಾತ್ಮನ ವಿಷಯವಾಗಿ ಮಾತನಾಡುವಾಗ ಇರುವುದೇ ಇಲ್ಲ. ನಿರ್ಭಯವಾದ ಮಾಯೆಯು ಆತ್ಮಸ್ವರೂಪವನ್ನು ವಿಚಾರಮಾಡುವಾಗ ಎದುರಿಗೆ ಸುಳಿಯುವುದಿಲ್ಲ. ಪರಮಾತ್ಮನ ವಿಷಯದಲ್ಲಿ ಮಾಯಾಸಂಬಂಧಿಯಾದ ಯಾವ ನುಡಿಯೂ ನಡೆಯುವುದಿಲ್ಲ. ಸಂಕಲ್ಪ ವಿಕಲ್ಪಾತ್ಮಕವಾದ ಮನಸ್ಸೇ ಅಲ್ಲಿ [1]ಪ್ರವರ್ತಿಸುವುದಿಲ್ಲ (೩೦). ಸೃಜ್ಯವಾದ ಕರ್ಮ, ಸೃಜಿಸುವ ಕಾರಕವರ್ಗ, ಇವುಗಳಿಗೆ ಭಿನ್ನವಾಗಿ ಸಾಧ್ಯವಾಗಿರುವ ಶ್ರೇಯಃಫಲ—ಈ ಮೂರರಿಂದ ಸಹಿತವಾದ ಅಹಂಕಾರಾತ್ಮಕ ಜೀವಭಾವವು ಯಾವುದರಲ್ಲಿಲ್ಲವೋ, ಯಾವುದು ಬಾಧ್ಯಬಾಧಕಭಾವದಿಂದ ರಹಿತವಾಗಿದೆಯೋ—ಅದು ಆತ್ಮಸ್ವರೂಪವಾಗಿದೆ. ಮುನಿಯು ಅಹಂಕಾರಾದಿ ತರಂಗಗಳನ್ನು ತಳ್ಳಿಹಾಕಿ ಅಂತಹ ಆತ್ಮಸ್ವರೂಪದಲ್ಲಿ ಕ್ರೀಡಿಸಬೇಕು (೩೧). ಆತ್ಮವ್ಯತಿರಿಕ್ತವಾದ್ದನ್ನು ತ್ಯಜಿಸಬೇಕೆಂದಿರುವ ಧೀರರು ಶ್ರೇಷ್ಠವಾದ ವಿಷ್ಣುಪದವನ್ನು 'ನೇತಿ, ನೇತಿ' ಎಂಬ ಶಬ್ದಗಳಿಂದ ಪ್ರತಿಪಾದಿಸುತ್ತಾರೆ. ಅವರು ದೇಹಾದಿಗಳಲ್ಲಿ ಅಹಂಭಾವವೆನ್ನುವ ದೌರಾತ್ಮ್ಯವನ್ನು ತ್ಯಜಿಸಿರುವುದರಿಂದ ಆತ್ಮಾತಿರಿಕ್ತ ವಸ್ತುವಿನಲ್ಲಿ ಪ್ರೇಮವನ್ನು ತಳೆದಿರುವುದಿಲ್ಲ. ಸಮಾಧಿನಿಷ್ಠರಾದ ಆ ಯೋಗಿಗಳು 'ನೇತಿ ನೇತಿ—ಇದಲ್ಲ ಇದಲ್ಲ' ಎಂಬ ನಿಷೇಧದಿಂದ ಮಾತ್ರ ಗಮ್ಯವಾದ ವಿಷ್ಣುವಿನ ಪರಮಸ್ವರೂಪವನ್ನು ತಮ್ಮ ಹೃದಯದಲ್ಲಿ ನೆಲೆಗೊಳಿಸಿ

1. ಪರಮಾತ್ಮನ ಬಳಿಯಲ್ಲಿ ಮಾಯೆಯು ಭೀತಳಾಗಿ ತನ್ನ ಕಾರ್ಯವನ್ನು ನಡೆಸುವುದಿಲ್ಲ. ನಿರ್ವಿಶೇಷವಾದ ಬ್ರಹ್ಮವಸ್ತುವಿನಲ್ಲಿ ಮಾಯಾಕಲ್ಪಿತವಾದ ವಾಗಿಂದ್ರಿಯವೂ ಮನಸ್ಸೂ ಪ್ರವರ್ತಿಸಲಾರದು—ಎಂದು ಈ ಶ್ಲೋಕದ ತಾತ್ಪರ್ಯ.

ತ ಏತದಧಿಗಚ್ಛಂತಿ ವಿಷ್ಣೋರ್ಯತ್ ಪರಮಂ ಪದಮ್ ।
ಅಹಂ ಮಮೇತಿ ದೌರ್ಜನ್ಯಂ ನ ಯೇಷಾಂ ದೇಹಗೇಹಜಮ್ ॥ ೩೩

ಅತಿವಾದಾಂಸ್ತಿತಿಕ್ಷೇತ ನಾವಮನ್ಯೇತ ಕಂಚನ ।
ನ ಚೇಮಂ ದೇಹಮಾಶ್ರಿತ್ಯ ವೈರಂ ಕುರ್ವೀತ ಕೇನಚಿತ್ ॥ ೩೪

ನಮೋ ಭಗವತೇ ತಸ್ಮೈ ಕೃಷ್ಣಾಯಾಕುಂಠಮೇಧಸೇ ।
ಯತ್ಪಾದಾಂಬುರುಹಧ್ಯಾನಾತ್ ಸಂಹಿತಾಮಧ್ಯಗಾಮಿಮಾಮ್ ॥ ೩೫

ಶೌನಕ ಉವಾಚ—

ಪೈಲಾದಿಭಿರ್ವ್ಯಾಸಶಿಷ್ಯೈರ್ವೇದಾಚಾರ್ಯೈರ್ಮಹಾತ್ಮಭಿಃ ।
ವೇದಾಶ್ಚ ಕತಿಧಾ ವ್ಯಸ್ತಾ ಏತತ್ ಸೌಮ್ಯಾಭಿಧೇಹಿ ನಃ ॥ ೩೬

ಸೂತ ಉವಾಚ—

ಸಮಾಹಿತಾತ್ಮನೋ ಬ್ರಹ್ಮನ್ ಬ್ರಹ್ಮಣಃ ಪರಮೇಷ್ಠಿನಃ ।
ಹೃದ್ಯಾಕಾಶಾದಭೂನ್ನಾದೋ ವೃತ್ತಿರೋಧಾದ್ ವಿಭಾವ್ಯತೇ ॥ ೩೭

---

ಕೊಂಡಿರುತ್ತಾರೆ (೩೨). 'ದೇಹವು ನಾನು, ಗೇಹವು ನನ್ನದು' ಎಂಬ ದೌರ್ಜನ್ಯವು ಯಾರಿಗಿಲ್ಲವೋ ಅವರು ಈ ಪ್ರಕಾರವಾದ ವಿಷ್ಣುವಿನ ಪರಮ ಪದವನ್ನು ಪಡೆಯುತ್ತಾರೆ. ಮುಮುಕ್ಷುವಾದವನು ಅನ್ಯರಾಡುವ ನಿಂದಾವಾಕ್ಯಗಳನ್ನು ಸಹಿಸಿಕೊಳ್ಳಬೇಕು. ಯಾರನ್ನೂ ಕಡೆಗಣಿಸಬಾರದು. ಈ ದೇಹಕ್ಕೋಸ್ಕರ ಯಾರೊಡನೆಯೂ ವೈರವನ್ನು ಬೆಳೆಸಬಾರದು (೩೩–೩೪). ಯಾವ ಗುರುಗಳ ಪಾದಕಮಲದ ಧ್ಯಾನಬಲದಿಂದ ನಾನು ಈ ಪುರಾಣಸಂಹಿತೆಯನ್ನು ಕಲಿತೆನೋ ಯಾರು ಅಪ್ರತಿಹತ ಮೇಧಾಶಕ್ತಿಯುಳ್ಳವರಾಗಿದ್ದಾರೋ ಆ ಭಗವಾನ್ ವೇದವ್ಯಾಸ ಮಹರ್ಷಿಗಳಿಗೆ ನಮೋ ನಮಃ" ಎಂದರು (೩೫). ಆಗ ಶೌನಕರು "ಸೌಮ್ಯರಾದ ಸೂತಪೌರಾಣಿಕರೆ, ವೇದವ್ಯಾಸರ ಶಿಷ್ಯರೂ ವೇದಾಚಾರ್ಯರೂ ಮಹಾತ್ಮರೂ ಆದ ಪೈಲನೇ ಮೊದಲಾದವರು ವೇದಗಳನ್ನು ಎಷ್ಟು ವಿಧದಲ್ಲಿ ವಿಂಗಡಿಸಿದರು ? ಈ ವಿಷಯವನ್ನು ನಮಗೆ ಹೇಳಬೇಕು" ಎಂದರು (೩೬). ಸೂತರು ಇಂತೆಂದರು : "ಓ ಬ್ರಾಹ್ಮಣರೆ, ಪರಮೇಷ್ಠಿಯಾದ ಬ್ರಹ್ಮನು ಸಮಾಧಿನಿಷ್ಠನಾಗಿದ್ದಾಗ ಅವನ ಹೃದಯಾಕಾಶದಿಂದ ಒಂದು ನಾದವು ಆವಿರ್ಭವಿಸಿತು. ನಾವು ಕಿವಿಗಳನ್ನು ಮುಚ್ಚಿಕೊಂಡು ಶ್ರೋತ್ರ ವ್ಯಾಪಾರವನ್ನು ನಿರೋಧಿಸಿದಾಗ ನಮ್ಮ ಊಹೆಗೂ

ಯದುಪಾಸನಯಾ ಬ್ರಹ್ಮನ್ ಯೋಗಿನೋ ಮಲಮಾತ್ಮನಃ ।
ದ್ರವ್ಯಕ್ರಿಯಾಕಾರಕಾಖ್ಯಂ ಧೂತ್ವಾ ಯಾಂತ್ಯಪುನರ್ಭವಮ್ ॥ ೩೮

ತತೋಽಭೂತ್ತ್ರಿವೃದೋಂಕಾರೋ ಯೋಽವ್ಯಕ್ತಪ್ರಭವಃ ಸ್ವರಾಟ್ ।
ಯತ್ತಲ್ಲಿಂಗಂ ಭಗವತೋ ಬ್ರಹ್ಮಣಃ ಪರಮಾತ್ಮನಃ ॥ ೩೯

ಶೃಣೋತಿ ಯ ಇಮಂ ಸ್ಫೋಟಂ ಸುಪ್ತಶ್ರೋತ್ರೇ ಚ ಶೂನ್ಯದೃಕ್ ।
ಯೇನ ವಾಗ್ ವ್ಯಜ್ಯತೇ ಯಸ್ಯ ವ್ಯಕ್ತಿರಾಕಾಶ ಆತ್ಮನಃ ॥ ೪೦

ಸ್ವಧಾಮ್ನೋ ಬ್ರಹ್ಮಣಃ ಸಾಕ್ಷಾದ್ ವಾಚಕಃ ಪರಮಾತ್ಮನಃ ।
ಸ ಸರ್ವಮಂತ್ರೋಪನಿಷದ್ವೇದಬೀಜಂ ಸನಾತನಮ್ ॥ ೪೧

---

[1]ಅದು ಗೋಚರಿಸುತ್ತದೆ (೩೭). ಯೋಗಿಗಳು ಈ ನಾದೋಪಾಸನೆಯಿಂದ [2]ದ್ರವ್ಯಕ್ರಿಯಾಕಾರಕ ಸಂಬಂಧಿಯಾದ ತಮ್ಮ ಕಶ್ಮಲವನ್ನು ತೊಡೆದುಹಾಕಿ ಮೋಕ್ಷವನ್ನೈದುವರು. ಆ ನಾದದಿಂದ ಮೂರು ಮಾತ್ರೆಗಳುಳ್ಳ ಓಂಕಾರವು ಅಭಿವ್ಯಕ್ತವಾಯಿತು. ಈ ಓಂಕಾರದ ಆವಿರ್ಭಾವವೂ ಅವ್ಯಕ್ತವೇ ಆಗಿದ್ದು, ಇದು ಸ್ವತಂತ್ರವಾಗಿ ಹೃದಯದಲ್ಲಿ ಪ್ರಕಾಶಿಸತಕ್ಕದ್ದಾಗಿದೆ. ಈ ಓಂಕಾರವು ತನಗೆ ಕಾರಣನೂ ಪರಮಾತ್ಮನೂ ಆದ ಪರಬ್ರಹ್ಮಕ್ಕೆ ಗಮಕವಾದ ಚಿಹ್ನೆಯಾಗಿದೆ (೩೮–೩೯). ಪರಮಾತ್ಮನಾದರೋ ಶೂನ್ಯದೃಕ್—ಇಂದ್ರಿಯವರ್ಗವು ಶೂನ್ಯವಾಗಿದ್ದರೂ ತಿಳಿಯಬಲ್ಲವನು. ಶ್ರೋತ್ರೇಂದ್ರಿಯವು ಸುಪ್ತವಾಗಿದ್ದಾಗಲೂ ಈ ಸ್ಫೋಟವೆಂಬ ಓಂಕಾರವನ್ನು ಕೇಳುತ್ತಿರುವನು. ಈ ಸ್ಫೋಟದಿಂದ [3]ವೈಖರೀ ವಾಕ್ ಪ್ರಕಟವಾಗುತ್ತದೆ. ಸ್ಫೋಟವಾದರೋ [4]ಹೃದಯಾಕಾಶದಲ್ಲಿ ಅಭಿವ್ಯಕ್ತವಾಗುತ್ತದೆ (೪೦). ಈ ಓಂಕಾರವು ತನಗೆ ಕಾರಣನೂ ಪರಮಾತ್ಮನೂ ಆದ

---

1. ಬೆರಳಿಂದ ಎರಡು ಕಿವಿಗಳನ್ನೂ ನಾವು ಮುಚ್ಚಿಕೊಂಡಾಗ ಒಂದು ಬಗೆಯ ಶಬ್ದವು ಕೇಳಿಸುತ್ತದೆ. ಅದು ಹೃದಯಸ್ಥವಾದ ನಾದಕ್ಕೆ ಗಮಕ. ಕೇಳಿಸುವಶಬ್ದವೇ ನಾದವಲ್ಲ.

2. ದೇಹ, ಇಂದ್ರಿಯ ಮತ್ತು ಮನಸ್ಸುಗಳಿಗೆ ಸಂಬಂಧಿಸಿದ—ಎಂದರ್ಥ.

3. ಉಚ್ಚರಿಸಲ್ಪಟ್ಟು ಕಿವಿಗೆ ಕೇಳಿಸುವ ವರ್ಣಾತ್ಮಕವಾದ ಶಬ್ದವೇ ವೈಖರೀ.

4. ಪ್ರಕೃತದಲ್ಲಿ ಸೂಕ್ಷ್ಮವಾದ ಓಂಕಾರವೇ ಸ್ಫೋಟ. ಇದು ಕಿವಿಗೆ ಕೇಳಿಸುವುದಿಲ್ಲ. ಸ್ಫೋಟವು ಬ್ರಹ್ಮವಾಚಕ. ಬ್ರಹ್ಮವು ವಾಚ್ಯ. ವಾಚ್ಯವಾಚಕಗಳಿಗೆ ಅಭೇದವನ್ನಿಟ್ಟುಕೊಂಡು ಸ್ಫೋಟದಿಂದ ಜಗತ್ತಿನ ಸೃಷ್ಟಿಯಾಗಿದೆ—ಎಂದು ವೈಯಾಕರಣರ ಸಿದ್ಧಾಂತವಿದೆ. ಅದಕ್ಕೆ ಪೋಷಕವಾದ ಮಾತುಗಳನ್ನಿಲ್ಲಿ ಕಾಣಬಹುದು.

ತಸ್ಯ ಹ್ಯಾಸಂಸ್ತ್ರಯೋ ವರ್ಣಾ ಅಕಾರಾದ್ಯಾ ಭೃಗೂದ್ವಹ ।
ಧಾರ್ಯಂತೇ ಯೈಸ್ತ್ರಯೋ ಭಾವಾ ಗುಣನಾಮಾರ್ಥವೃತ್ತಯಃ ॥ ೪೨

ತತೋಽಕ್ಷರಸಮಾಮ್ನಾಯಮಸೃಜದ್ ಭಗವಾನಜಃ ।
ಅಂತಃಸ್ಥೋಷ್ಮಸ್ವರಸ್ಪರ್ಶಹ್ರಸ್ವದೀರ್ಘಾದಿಲಕ್ಷಣಮ್ ॥ ೪೩

ತೇನಾಸೌ ಚತುರೋ ವೇದಾಂಶ್ಚತುರ್ಭಿರ್ವದನೈರ್ವಿಭುಃ ।
ಸವ್ಯಾಹೃತಿಕಾನ್ ಸೋಂಕಾರಾಂಶ್ಚಾತುರ್ಹೋತ್ರವಿವಿಕ್ಷಯಾ ॥ ೪೪

ಪುತ್ರಾನಧ್ಯಾಪಯತ್ತಾಂಸ್ತು ಬ್ರಹ್ಮರ್ಷೀನ್ ಬ್ರಹ್ಮಕೋವಿದಾನ್ ।
ತೇ ತು ಧರ್ಮೋಪದೇಷ್ಟಾರಃ ಸ್ವಪುತ್ರೇಭ್ಯಃ ಸಮಾದಿಶನ್ ॥ ೪೫

---

ಪರಬ್ರಹ್ಮವನ್ನು ಸಾಕ್ಷಾತ್ ಬೋಧಿಸುವ ವಾಚಕಶಬ್ದವಾಗಿದೆ. ಅಲ್ಲದೆ ಅದು ಸರ್ವಮಂತ್ರಗಳ ಸೂಕ್ಷ್ಮರಹಸ್ಯವೂ ಸನಾತನವಾದ ವೇದಬೀಜವೂ ಆಗಿದೆ (೪೧) ಭೃಗುವಂಶಜಾತರಾದ ಶೌನಕರೆ, ಓಂಕಾರದಲ್ಲಿ ಅಕಾರ, ಉಕಾರ, ಮಕಾರಗಳೆಂಬ ಅಕಾರಾದಿಗಳಾದ ಮೂರು ವರ್ಣಗಳುಂಟು. ಈ ವರ್ಣಗಳಿಂದ ಸತ್ತ್ವ, ರಜಸ್ಸು, ತಮಸ್ಸು—ಎಂಬ ಗುಣಗಳೂ ಋಕ್, ಯಜುಸ್, ಸಾಮ—ಎಂಬ ವೇದಗಳೂ (ನಾಮಗಳೂ) ಭೂಃ, ಭುವಃ, ಸುವಃ—ಎಂಬ ಲೋಕಗಳೂ (ಅರ್ಥಗಳೂ) ಜಾಗ್ರತ್, ಸಪ್ನ, ಸುಷುಪ್ತಿ ಎಂಬ ವೃತ್ತಿಗಳೂ—ಹೀಗೆ ಮೂರು ಮೂರು ಪದಾರ್ಥಗಳು ಕ್ರಮವಾಗಿ ಧರಿಸಲ್ಪಟ್ಟಿವೆ (೪೨). ಈ ಅಕಾರಾದಿವರ್ಣಗಳಿಂದ ಭಗವಾನ್ ಬ್ರಹ್ಮದೇವನು ಅಂತಃಸ್ಥ, ಊಷ್ಮ, ಸ್ವರ, ಸ್ಪರ್ಶ, ಹ್ರಸ್ವ, [1]ದೀರ್ಘಾದಿಘಟಿತವಾದ ಅಕ್ಷರಸಮುದಾಯವನ್ನು ನಿರ್ಮಿಸಿದನು. ಅನಂತರ ವಿಭುವಾದ ಬ್ರಹ್ಮದೇವನು, [2]ನಾಲ್ಕುಮಂದಿ ಋತ್ವಿಜರು ಅನುಷ್ಠಾನ ಮಾಡಬೇಕಾದ ಕರ್ಮಕ್ಕೆ ಉಪಯುಕ್ತವಾಗಲೆಂದು, ತನ್ನ ನಾಲ್ಕು ಮುಖಗಳಿಂದ ವ್ಯಾಹೃತಿ ಮತ್ತು ಓಂಕಾರಗಳಿಂದ ಸಹಿತವಾದ ನಾಲ್ಕು ವೇದಗಳನ್ನು ಪ್ರಕಟಿಸಿದನು (೪೩–೪೪). ಆಮೇಲೆ ಬ್ರಹ್ಮನು ವೇದೋಚ್ಚಾರಣಾದಿ ಕೋವಿದರೂ ತನ್ನ ಮಾನಸಪುತ್ರರೂ ಆದ

---

1. ಅಂತಃಸ್ಥ=ಯ, ರ, ಲ, ವ. ಊಷ್ಮ=ಶ, ಷ, ಸ, ಹ. ಸ್ವರ=ಅಕಾರಾದಿಗಳು (ಅಚ್). ಸ್ಪರ್ಶ=ಕಕಾರದಿಂದ ಮಕಾರಪರ್ಯಂತವಾದ ವರ್ಣ. ಆದಿಪದದಿಂದ ಜಿಹ್ವಾಮೂಲೀಯ ಮುಂತಾದವು.

2. ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮ–ಇವರೇ ನಾಲ್ಕು ಋತ್ವಿಜರು.

ತೇ ಪರಂಪರಯಾ ಪ್ರಾಪ್ತಾಸ್ತತ್ತಚ್ಛಿಷ್ಯೈರ್ಧೃತವ್ರತೈಃ ।
ಚತುರ್ಯುಗೇಷ್ವಥ ವ್ಯಸ್ತಾ ದ್ವಾಪರಾದೌ ಮಹರ್ಷಿಭಿಃ ॥ ೪೬

ಕ್ಷೀಣಾಯುಷಃ ಕ್ಷೀಣಸತ್ತ್ವಾನ್ ದುರ್ಮೇಧಾನ್ ವೀಕ್ಷ್ಯ ಕಾಲತಃ ।
ವೇದಾನ್ ಬ್ರಹ್ಮರ್ಷಯೋ ವ್ಯಸ್ಯನ್ ಹೃದಿಸ್ಥಾಚ್ಯುತಚೋದಿತಾಃ ॥ ೪೭

ಅಸ್ಮಿನ್ನಪ್ಯಂತರೇ ಬ್ರಹ್ಮನ್ ಭಗವಾಂಲ್ಲೋಕಭಾವನಃ ।
ಬ್ರಹ್ಮೇಶಾದ್ಯೈರ್ಲೋಕಪಾಲೈರ್ಯಾಚಿತೋ ಧರ್ಮಗುಪ್ತಯೇ ॥ ೪೮

ಪರಾಶರಾತ್ ಸತ್ಯವತ್ಯಾಮಂಶಾಂಶಕಲಯಾ ವಿಭುಃ ।
ಅವತೀರ್ಣೋ ಮಹಾಭಾಗ ವೇದಂ ಚಕ್ರೇ ಚತುರ್ವಿಧಮ್ ॥ ೪೯

ಋಗಥರ್ವಯಜುಸ್ಸಾಮ್ನಾಂ ರಾಶೀನುದ್ಧೃತ್ಯ ವರ್ಗಶಃ ।
ಚತಸ್ರಃ ಸಂಹಿತಾಶ್ಚಕ್ರೇ ಮಂತ್ರೈರ್ಮಣಿಗಣಾ ಇವ ॥ ೫೦

---

ಮರೀಚಿಯೇ ಮೊದಲಾದ ಬ್ರಹ್ಮರ್ಷಿಗಳಿಗೆ ನಾಲ್ಕು ವೇದಗಳನ್ನು ಅಧ್ಯಯನ ಮಾಡಿಸಿದನು. ಧರ್ಮೋಪದೇಶಕರಾದ ಆ ಋಷಿಗಳು ತಮ್ಮ ಮಕ್ಕಳಿಗೆ ಅವನ್ನು ಕಲಿಸಿದರು (೪೫). ಈ ರೀತಿಯಲ್ಲಿ ವ್ರತನಿಷ್ಠರಾದ ಶಿಷ್ಯರು ಪರಂಪರೆಯಿಂದ ಅಭ್ಯಾಸ ಮಾಡುತ್ತ ವೇದಗಳನ್ನು ಕಲಿತರು. ಹೀಗೆ ಚತುರ್ಯುಗಗಳಲ್ಲಿಯೂ ಗುರುಶಿಷ್ಯಪರಂಪರೆಯಿಂದ ಪ್ರಾಪ್ತವಾಗುತ್ತಿದ್ದ ವೇದಗಳು ದ್ವಾಪರಯುಗದ ಆದಿಯಲ್ಲಿ ಮಹರ್ಷಿಗಳಿಂದ ವಿಂಗಡಿಸಲ್ಪಟ್ಟವು (೪೬). ಕಾಲಮಹಿಮೆಯಿಂದ ಜನರು ಅಲ್ಪಾಯುಷ್ಕರೂ ಅಲ್ಪಬಲರೂ ಅಲ್ಪ ಮೇಧಾಶಕ್ತಿಯುಳ್ಳವರೂ ಆಗಿರುವುದನ್ನು ನೋಡಿ, ಹೃದಯಸ್ಥ ಪರಮಾತ್ಮನಿಂದ ಪ್ರೇರಿತರಾಗಿ, ಬ್ರಹ್ಮರ್ಷಿಗಳು ವೇದಗಳನ್ನು ವಿಭಾಗಿಸಿದರು (೪೭). ಶೌನಕರೆ! ಅಂತೆಯೇ ಈ ವೈವಸ್ವತ ಮನ್ವಂತರದಲ್ಲಿಯೂ ಸಹ ಸ್ವಾಮಿಯೂ ಲೋಕನಿಯಾಮಕನೂ ಆದ ಭಗವಾನ್ ಶ್ರೀಹರಿಯನ್ನು ಧರ್ಮರಕ್ಷಣೆಗಾಗಿ ಬ್ರಹ್ಮೇಶ್ವರಾದಿ ಲೋಕಪಾಲರು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯಂತೆ ಶ್ರೀಹರಿಯು ಪರಾಶರಮುನಿಗಳಿಂದ ಸತ್ಯವತಿಯಲ್ಲಿ ತನ್ನ ಮಾಯಾಂಶವಾದ ಸತ್ತ್ವಗುಣದ ಕಲೆಯಿಂದ (ವ್ಯಾಸಮುನಿಗಳಾಗಿ) ಅವತರಿಸಿ, ವೇದವನ್ನು ನಾಲ್ಕು ಸಂಹಿತೆಗಳನ್ನಾಗಿ ವಿಭಾಗ ಮಾಡಿದನು (೪೮–೪೯). ಋಗ್ಯಜುಃಸಾಮಾಥರ್ವರಾಶಿಗಳಾಗಿದ್ದ ವೇದಗಳನ್ನು ಆಯಾ ಪ್ರಕರಣ

ತಾಸಾಂ ಸ ಚತುರಃ ಶಿಷ್ಯಾನುಪಾಹೂಯ ಮಹಾಮತಿಃ ।
ಏಕೈಕಾಂ ಸಂಹಿತಾಂ ಬ್ರಹ್ಮನ್ನೇಕೈಕಸ್ಮೈ ದದೌ ವಿಭುಃ ॥ ೫೧

ಪೈಲಾಯ ಸಂಹಿತಾಮಾದ್ಯಾಂ ಬಹ್ವೃಚಾಖ್ಯಾಮುವಾಚ ಹ ।
ವೈಶಂಪಾಯನಸಂಜ್ಞಾಯ ನಿಗದಾಖ್ಯಂ ಯಜುರ್ಗಣಮ್ ॥ ೫೨

ಸಾಮ್ನಾಂ ಜೈಮಿನಯೇ ಪ್ರಾಹ ತಥಾ ಛಂದೋಗಸಂಹಿತಾಮ್ ।
ಅಥರ್ವಾಂಗಿರಸೀಂ ನಾಮ ಸ್ವಶಿಷ್ಯಾಯ ಸುಮಂತವೇ ॥ ೫೩

ಪೈಲಃ ಸ್ವಸಂಹಿತಾಮೂಚೇ ಇಂದ್ರಪ್ರಮಿತಯೇ ಮುನಿಃ ।
ಬಾಷ್ಕಲಾಯ ಚ ಸೋಽಪ್ಯಾಹ ಶಿಷ್ಯೇಭ್ಯಃ ಸಂಹಿತಾಂ ಸ್ವಕಾಮ್ ॥ ೫೪

ಚತುರ್ಧಾ ವ್ಯಸ್ಯ ಬೋಧ್ಯಾಯ ಯಾಜ್ಞವಲ್ಕ್ಯಾಯ ಭಾರ್ಗವ ।
ಪರಾಶರಾಯಾಗ್ನಿಮಿತ್ರೇ ಇಂದ್ರಪ್ರಮಿತಿರಾತ್ಮವಾನ್ ॥ ೫೫

ಅಧ್ಯಾಪಯತ್ ಸಂಹಿತಾಂ ಸ್ವಾಂ ಮಾಂಡೂಕೇಯಮೃಷಿಂ ಕವಿಮ್ ।
ತಸ್ಯ ಶಿಷ್ಯೋ ದೇವಮಿತ್ರಃ ಸೌಭರ್ಯಾದಿಭ್ಯ ಊಚಿವಾನ್ ॥ ೫೬

---

ಭೇದಗಳಿಗನುಸಾರವಾಗಿ ಉದ್ಧೃತಮಂತ್ರಗಳಿಂದ ನಾಲ್ಕು ಸಂಹಿತೆಗಳನ್ನಾಗಿ ವ್ಯಾಸರು ವಿಂಗಡಿಸಿದರು. ಅನೇಕ ವಿಧದ ಮಣಿರಾಶಿಗಳಿಂದ ಪದ್ಮರಾಗಾದಿ ಮಣಿಗಳನ್ನಾರಿಸಿ ವಿಂಗಡಿಸುವಂತೆ, ಋಗ್ವೇದ - ಯಜುರ್ವೇದ - ಸಾಮವೇದ - ಅಥರ್ವಣವೇದ ಎಂಬ ನಾಲ್ಕು ಸಂಹಿತೆಗಳನ್ನಾಗಿ ವೇದವನ್ನು ವಿಭಾಗಿಸಿದರು (೫೦–೫೧). ಅನಂತರ ಮೇಧಾವಿಗಳಾದ ವ್ಯಾಸಮುನಿಗಳು ತಮ್ಮ ನಾಲ್ವರು ಶಿಷ್ಯರನ್ನು ಕರೆದು ಒಬ್ಬೊಬ್ಬರಿಗೆ ಒಂದೊಂದು ಸಂಹಿತೆಯಂತೆ ಉಪದೇಶಿಸಿದರು. ಅವರಲ್ಲಿ ಪೈಲನಿಗೆ ಮೊದಲನೆಯದಾದ ಋಗ್ವೇದವೆಂಬ ಬಹ್ವೃಚಸಂಹಿತೆಯನ್ನೂ ವೈಶಂಪಾಯನನೆಂಬವನಿಗೆ ಬಿಡಿವಾಕ್ಯಗಳಿರುವ ಯಜುರ್ವೇದವನ್ನೂ ಜೈಮಿನಿಗೆ ಛಂದೋಗಸಂಹಿತೆಯಾದ ಸಾಮವೇದವನ್ನೂ ಸುಮಂತುವೆಂಬ ಶಿಷ್ಯನಿಗೆ ಅಥರ್ವಾಂಗಿರಸಸಂಹಿತೆಯನ್ನೂ ಉಪದೇಶಿಸಿದರು (೫೨–೫೩). ಪೈಲಮುನಿಯು ತನ್ನ ಋಕ್‌ಸಂಹಿತೆಯನ್ನು ಎರಡು ವಿಭಾಗಮಾಡಿ ಇಂದ್ರಪ್ರಮಿತಿಗೂ ಬಾಷ್ಕಲನಿಗೂ ಕಲಿಸಿದನು. ಬಾಷ್ಕಲನು ತನ್ನ ಸಂಹಿತೆಯನ್ನು ನಾಲ್ಕು ವಿಭಾಗಮಾಡಿ ಬೋಧ್ಯ, ಯಾಜ್ಞವಲ್ಕ್ಯ, ಪರಾಶರ, ಅಗ್ನಿಮಿತ್ರ—ಎಂಬ ನಾಲ್ವರು ಶಿಷ್ಯರಿಗೆ ಉಪದೇಶಿಸಿದನು (೫೪–೫೫). ಧೀಮಂತನಾದ ಇಂದ್ರಪ್ರಮಿತಿಯು ತನ್ನ ಸಂಹಿತೆ

ಶಾಕಲ್ಯಸ್ತತ್ಸುತಃ ಸ್ವಾಂ ತು ಪಂಚಧಾ ವ್ಯಸ್ಯ ಸಂಹಿತಾಮ್ ।
ವಾತ್ಸ್ಯಮುದ್ಗಲಶಾಲೀಯಗೋಖಲ್ಯಶಿಶಿರೇಷ್ವಧಾತ್ ॥ ೫೭

ಜಾತೂಕರ್ಣ್ಯಶ್ಚ ತಚ್ಛಿಷ್ಯಃ ಸ ನಿರುಕ್ತಾಂ ಸ್ವಸಂಹಿತಾಮ್ ।
ಬಲಾಕಪೈಜವೈತಾಲವಿರಜೇಭ್ಯೋ ದದೌ ಮುನಿಃ ॥ ೫೮

ಬಾಷ್ಕಲಿಃ ಪ್ರತಿಶಾಖಾಭ್ಯೋ ವಾಲಖಿಲ್ಯಾಖ್ಯಸಂಹಿತಾಮ್ ।
ಚಕ್ರೇ ಬಾಲಾಯನಿರ್ಭಜ್ಯಃ ಕಾಸಾರಶ್ಚೈವ ತಾಂ ದಧುಃ ॥ ೫೯

ಬಹ್ವೃಚಾಃ ಸಂಹಿತಾ ಹ್ಯೇತಾ ಏಭಿರ್ಬ್ರಹ್ಮರ್ಷಿಭಿರ್ಧೃತಾಃ ।
ಶ್ರುತ್ವೈತಚ್ಛಂದಸಾಂ ವ್ಯಾಸಂ ಸರ್ವಪಾಪೈಃ ಪ್ರಮುಚ್ಯತೇ ॥ ೬೦

---

ಯನ್ನು (ತನ್ನ ಪುತ್ರನೂ) ಋಷಿಕವಿಯೂ ಆದ ಮಾಂಡೂಕೇಯನಿಗೆ ಅಧ್ಯಯನ ಮಾಡಿಸಿದನು. ಮಾಂಡೂಕೇಯನ ಶಿಷ್ಯನು ದೇವಮಿತ್ರ. ಅವನು ಅದನ್ನು ಸೌಭರಿ ಮುಂತಾದವರಿಗೆ ಕಲಿಸಿದನು (೫೬). ಶಾಕಲ್ಯನೆಂಬುವನು ಮಾಂಡೂಕೇಯನ ಮಗ. ಆತನು ತಾನು ಕಲಿತ ಋಕ್‌ಸಂಹಿತೆಯನ್ನು ಐದು ವಿಭಾಗಮಾಡಿ, ವಾತ್ಸ್ಯ-ಮುದ್ಗಲ-ಶಾಲೀಯ-ಗೋಖಲ್ಯ-ಶಿಶಿರ ಎಂಬವರಿಗೆ ಕ್ರಮವಾಗಿ ಕಲಿಸಿದನು. ಶಾಕಲ್ಯನ ಶಿಷ್ಯನಾದ ಜಾತೂಕರ್ಣ್ಯನೆಂಬ ಇನ್ನೊಬ್ಬನು ತನ್ನ ಸಂಹಿತೆಯನ್ನು ಮೂರು ವಿಭಾಗ ಮಾಡಿ, ವೈದಿಕಪದಾರ್ಥ ವ್ಯಾಖ್ಯಾನರೂಪವಾದ ನಿರುಕ್ತವೆಂಬ ನಾಲ್ಕನೆಯ ಗ್ರಂಥವೊಂದನ್ನು ರಚಿಸಿ, ಬಲಾಕ-ಪೈಜ-ವೈತಾಲ-ವಿರಜ ಎಂಬ ನಾಲ್ವರಿಗೆ ಬೋಧಿಸಿದನು (೫೭–೫೮). ಹಿಂದೆ ಹೇಳಿದ ಬಾಷ್ಕಲನ ಪುತ್ರನಾದ ಬಾಷ್ಕಲಿಯು ಇದುವರೆಗೆ ಉಕ್ತವಾದ (ಋಗ್ವೇದದ) ಸರ್ವಶಾಖೆಗಳಿಂದಲೂ ಉದ್ಧರಿಸಿ ವಾಲಖಿಲ್ಯಸಂಹಿತೆಯನ್ನು ರಚಿಸಿದನು. ಅದನ್ನು ಬಾಲಾಯನಿ, ಭಜ್ಯ, ಕಾಸಾರ—ಎಂಬವರು ಅಧ್ಯಯನ ಮಾಡಿದರು (೫೯). ಇವೆಲ್ಲವೂ ಈ ಬ್ರಹ್ಮರ್ಷಿಗಳು ಅಧ್ಯಯನಮಾಡಿ ಧಾರಣೆಮಾಡಿದ ಬಹ್ವೃಚ ಸಂಹಿತೆಗಳು. ಛಂದಸ್ಸುಗಳ ಈ ವಿಭಾಗವನ್ನು ಕೇಳಿದವನು ಸರ್ವಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ (೬೦).

*

ವೈಶಂಪಾಯನಶಿಷ್ಯಾ ವೈ ಚರಕಾಧ್ವರ್ಯವೋಽಭವನ್ ।
ಯಚ್ಚೇರುರ್ಬ್ರಹ್ಮಹತ್ಯಾಂಹಃ ಕ್ಷಪಣಂ ಸ್ವಗುರೋರ್ವ್ರತಮ್ ॥ ೬೧

ಯಾಜ್ಞವಲ್ಕ್ಯಶ್ಚ ತಚ್ಛಿಷ್ಯ ಆಹಾಹೋ ಭಗವನ್ ಕಿಯತ್ ।
ಚರಿತೇನಾಲ್ಪಸಾರಾಣಾಂ ಚರಿಷ್ಯೇಽಹಂ ಸುದುಶ್ಚರಮ್ ॥ ೬೨

ಇತ್ಯುಕ್ತೋ ಗುರುರಪ್ಯಾಹ ಕುಪಿತೋ ಯಾಹ್ಯಲಂ ತ್ವಯಾ ।
ವಿಪ್ರಾವಮಂತ್ರಾ ಶಿಷ್ಯೇಣ ಮದಧೀತಂ ತ್ಯಜಾಶ್ವಿತಿ ॥ ೬೩

ದೇವರಾತಸುತಃ ಸೋಽಪಿ ಚ್ಛರ್ದಿತ್ವಾ ಯಜುಷಾಂ ಗಣಮ್ ।
ತತೋ ಗತೋಽಥ ಮುನಯೋ ದದೃಶುಸ್ತಾನ್ ಯಜುರ್ಗಣಾನ್ ॥ ೬೪

---

(ಇನ್ನು ಯಜುರ್ವೇದದಲ್ಲಿ) ಚರಕಾಧ್ವರ್ಯುಗಳೆಂಬ ವರ್ಗದವರು ವೈಶಂಪಾಯನರ ಶಿಷ್ಯರಾಗಿದ್ದರು. ತಮ್ಮ ಗುರುಗಳಾದ ವೈಶಂಪಾಯನರಿಗೆ ಬಂದ [1]ಬ್ರಹ್ಮಹತ್ಯಾದೋಷವನ್ನು ಹೋಗಲಾಡಿಸುವುದಕ್ಕಾಗಿ ವ್ರತವನ್ನು ಆಚರಿಸಿದ್ದರಿಂದ ಅವರಿಗೆ ಚರಕರೆಂದು ಹೆಸರಾಯಿತು (೬೧). ಆ ಸಮಯದಲ್ಲಿ ವೈಶಂಪಾಯನರ ಶಿಷ್ಯನಾಗಿದ್ದ ಯಾಜ್ಞವಲ್ಕ್ಯನು "ಗುರುಗಳೆ, ಅಸಮರ್ಥರಾದ ಈ ಜನರು ವ್ರತವನ್ನಾಚರಿಸಿದರೆ ಏನಾದೀತು? ದುಶ್ಚರವಾದ ಈ ಬ್ರಹ್ಮಹತ್ಯಾ ದೋಷ ನಿವಾರಕವ್ರತವನ್ನು ನಾನು ಆಚರಿಸುತ್ತೇನೆ!" ಎಂದನು (೬೨). ಈ ಮಾತಿನಿಂದ ವೈಶಂಪಾಯನರು ಕುಪಿತರಾಗಿ "ಇತರ ವಿಪ್ರರನ್ನು ಅವಮಾನಗೊಳಿಸಿದ್ದೀಯೆ. ಇಷ್ಟು ಸಾಕು! ಹೊರಡು ಇಲ್ಲಿಂದ! ಶಿಷ್ಯನಾಗಿ ನನ್ನಿಂದ ಕಲಿತಿರುವುದನ್ನು ಕೂಡಲೇ ಕಕ್ಕಿಬಿಡು!" ಎಂದರು (೬೩). ಆಗ ದೇವರಾತಸುತನಾದ ಯಾಜ್ಞವಲ್ಕ್ಯನು ತಾನು ಕಲಿತಿದ್ದ ಯಜುರ್ವೇದವನ್ನು ವಾಂತಿಮಾಡಿ ಅಲ್ಲಿಂದ ನಿರ್ಗಮಿಸಿ

---

1. ಒಂದುಸಲ ಮಹಾಮೇರುವಿನಲ್ಲಿ ಮುನಿಗಳೆಲ್ಲರೂ ಸಭೆ ಸೇರಬೇಕೆಂದು ಗೊತ್ತಾಗಿತ್ತು. ಆ ಸಭೆಗೆ ಏಳು ರಾತ್ರಿಗಳಲ್ಲಿ ಯಾವನು ಬರುವುದಿಲ್ಲವೋ ಆತನಿಗೆ ಬ್ರಹ್ಮಹತ್ಯಾದೋಷವು ಪ್ರಾಪ್ತವಾಗುವುದೆಂದು ಋಷಿಗಳು ನಿಯಮವನ್ನು ಮಾಡಿದ್ದರು. ವೈಶಂಪಾಯನರು ಆಕಸ್ಮಾತ್ತಾಗಿ ತಮ್ಮ ಸೋದರಿಯ ಮಗುವನ್ನು ಗೊತ್ತಾಗದೆ ತುಳಿದದ್ದರಿಂದ ಮಗು ಸತ್ತುಹೋಯಿತು. ಈ ಗೊಂದಲದಲ್ಲಿ ಸಭೆಗೆ ಹೋಗಲು ಅವರಿಂದಾಗಲಿಲ್ಲ (ನೋಡಿ: ವಿಷ್ಣು. ೩–೫).

ಯಜೂಂಷಿ ತಿತ್ತಿರಾ ಭೂತ್ವಾ ತಲ್ಲೋಲುಪತಯಾsದದುಃ ।
ತೈತ್ತಿರೀಯಾ ಇತಿ ಯಜುಃಶಾಖಾ ಆಸನ್ ಸುಪೇಶಲಾಃ ॥ ೬೫

ಯಾಜ್ಞವಲ್ಕ್ಯಸ್ತತೋ ಬ್ರಹ್ಮನ್ ಛಂದಾಂಸ್ಯಧಿಗವೇಷಯನ್ ।
ಗುರೋರವಿದ್ಯಮಾನಾನಿ ಸೂಪತಸ್ಥೇsರ್ಕಮೀಶ್ವರಮ್ ॥ ೬೬

ಯಾಜ್ಞವಲ್ಕ್ಯ ಉವಾಚ—

ಓಂ ನಮೋ ಭಗವತೇ ಆದಿತ್ಯಾಯಾಖಿಲಜಗತಾಮಾತ್ಮಸ್ವರೂಪೇಣ ಕಾಲಸ್ವರೂಪೇಣ ಚತುರ್ವಿಧಭೂತನಿಕಾಯಾನಾಂ ಬ್ರಹ್ಮಾದಿಸ್ತಂಬಪರ್ಯಂತಾನಾಮಂತರ್ಹೃದಯೇಷು ಬಹಿರಪಿ ಚಾಕಾಶ ಇವೋಪಾಧಿನಾ ವ್ಯವಧೀಯಮಾನೋ ಭವಾನೇಕ ಏವ ಕ್ಷಣಲವನಿಮೇಷಾವಯವೋಪಚಿತ ಸಂವತ್ಸರ ಗಣೇನಾಪಾಮಾದಾನವಿಸರ್ಗಾಭ್ಯಾಮಿಮಾಂ ಲೋಕಯಾತ್ರಾಮನುವಹತಿ ॥ ೬೭

---

ದನು. ಅಲ್ಲಿದ್ದ ಮುನಿಗಳು ಆ ಯಜುರ್ವೇದವನ್ನು ಕಂಡು ಲೋಲುಪರಾಗಿ ತಿತ್ತಿರಿಪಕ್ಷಿಗಳ ರೂಪವನ್ನು ಧರಿಸಿ ಸ್ವೀಕರಿಸಿದರು. ಆ ಯಜುರ್ವೇದಭಾಗವೇ ಅತ್ಯಂತ ರಮ್ಯವಾದ ತೈತ್ತಿರೀಯ ಯಜುಃಶಾಖೆಯೆಂದು ಪ್ರಸಿದ್ಧಿಯನ್ನೈದಿತು (೬೪–೬೫). ಅನಂತರ, ಶೌನಕರೆ, ಯಾಜ್ಞವಲ್ಕ್ಯನು ತನ್ನ ಗುರುಗಳಿಗೆ [1]ಗೊತ್ತಿಲ್ಲದ ವೇದಭಾಗಗಳನ್ನು ಕಲಿಯಬೇಕೆಂದು ಉದ್ದೇಶಿಸಿ [2]ವೇದಾಧಿಪತಿಯಾದ ಸೂರ್ಯನನ್ನು ವಿಶೇಷವಾಗಿ ಸ್ತುತಿಸಿದನು (೬೬): "ಓಂ ನಮೋ ಭಗವತೇ ಆದಿತ್ಯಾಯ. ಬ್ರಹ್ಮಾದಿಸ್ತಂಬ ಪರ್ಯಂತವಾಗಿರುವ [3]ಚತುರ್ವಿಧಭೂತ ಸಮುದಾಯಗಳ ಒಳಗೆ ಹೃದಯದಲ್ಲಿ ನೀನು ನಿಖಿಲ ಜಗತ್ತುಗಳ ಆತ್ಮಸ್ವರೂಪ

---

1. ವ್ಯಾಸರು ವೈಶಂಪಾಯನನಿಗೆ ಕಲಿಸಿದ ವೇದಭಾಗಕ್ಕಿಂತ ಅಧಿಕವಾದ್ದನ್ನು—ಎಂದು ಅಭಿಪ್ರಾಯ.

2. ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತೇ ।
ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನಃ ॥
ಸಾಮವೇದೇನಾಸ್ತಮಯೇ ಮಹೀಯತೇ ।
ವೇದೈರಶೂನ್ಯಸ್ತ್ರಿಭಿರೇತಿ ಸೂರ್ಯಃ ॥

3. ದೇವ, ಮನುಷ್ಯ, ತಿರ್ಯಕ್, ಸ್ಥಾವರಗಳು ಅಥವಾ ಜರಾಯುಜ, ಅಂಡಜ ಸ್ವೇದಜ, ಉದ್ಭಿಜ್ಜಗಳು.

ಯದುಹ ವಾವ ವಿಬುಧರ್ಷಭ ಸವಿತರದಸ್ತಪತ್ಯನುಸವನ-
ಮಹರಹರಾಮ್ನಾಯವಿಧಿನೋಪತಿಷ್ಠಮಾನಾನಾಮಖಿಲದುರಿತ
ವೃಜನಬೀಜಾವಭರ್ಜನ, ಭಗವತಃ ಸಮಭಿಧೀಮಹಿ ತಪನ-
ಮಂಡಲಮ್ ॥ ೬೮

ಯ ಇಹ ವಾವ ಸ್ಥಿರಚರನಿಕರಾಣಾಂ ನಿಜನಿಕೇತನಾನಾಂ
ಮನಇಂದ್ರಿಯಾಸುಗಣಾನನಾತ್ಮನಃ ಸ್ವಯಮಾತ್ಮಾಂತರ್ಯಾಮೀ
ಪ್ರಚೋದಯತಿ ॥ ೬೯

ಯ ಏವೇಮಂ ಲೋಕಮತಿಕರಾಲವದನಾಂಧಕಾರಸಂಜ್ಞಾ-
ಜಗರಗ್ರಹಗಿಲಿತಂ ಮೃತಕಮಿವ ವಿಚೇತನಮವಲೋಕ್ಯಾನು-
ಕಂಪಯಾ ಪರಮ ಕಾರುಣಿಕ ಈಕ್ಷಯೈವೋತ್ಥಾಪ್ಯಾಹರಹರನು-
ಸವನಂ ಶ್ರೇಯಸಿ ಸ್ವಧರ್ಮಾಖ್ಯಾತ್ಮಾವಸ್ಥಾನೇ ಪ್ರವರ್ತಯತ್ಯವನಿ-
ಪತಿರಿವಾಸಾಧೂನಾಂ ಭಯಮುದೀರಯನ್ನಟತಿ ॥ ೭೦

---

ದಿಂದಲೂ ಹೊರಗಡೆಯಲ್ಲಿ ಕಾಲಸ್ವರೂಪದಿಂದಲೂ ಸಹ ವ್ಯಾಪಿಸಿರುತ್ತೀಯೆ. ಭಗವಂತನೂ ಅದ್ವಿತೀಯನೂ ಆದ ನೀನು ಆಕಾಶದಂತೆ ಕೇವಲ ಉಪಾಧಿಯಿಂದ ಮಾತ್ರ ವ್ಯವಹಿತನಾಗಿದ್ದೀಯೆ. ಕ್ಷಣ, ಲವ, ನಿಮೇಷ—ಮುಂತಾದ ಕಾಲಾವಯವಗಳಿಂದ ಉಪಚಿತವಾದ ಸಂವತ್ಸರಗಣದ ಮೂಲಕ ಜಲವನ್ನು (ಕಿರಣಗಳಿಂದ) ಹೀರುವುದು, (ಮೋಡಗಳ ಮೂಲಕ) ಮಳೆಯಾಗಿ ಸುರಿಸುವುದು—ಈ ಕ್ರಿಯೆಗಳಿಂದ ಲೋಕದ ಜೀವನಯಾತ್ರೆಯನ್ನು ನಡೆಸಿಕೊಡುತ್ತಿದ್ದೀಯೆ (೬೭). ಅಲ್ಲದೆ, ಹೇ ವಿಬುಧೋತ್ತಮ-ಸವಿತೃದೇವ, ಲೋಕವನ್ನು ತಪಿಸತಕ್ಕ, ಭಗವಂತನಾದ ನಿನ್ನ ಯಾವ ಸೂರ್ಯಮಂಡಲ ಉಂಟೋ, ಅದನ್ನು ನಾವು ಸಮೀಚೀನವಾಗಿ [1]ಧ್ಯಾನಿಸುತ್ತೇವೆ. ಪ್ರತಿದಿನವೂ ತ್ರಿಸಂಧ್ಯೆಯಲ್ಲಿ ವೈದಿಕ ಕರ್ಮಮಾರ್ಗದಿಂದ ನಿನ್ನನ್ನು ಸ್ತುತಿಸುವ ಭಕ್ತರ ನಿಖಿಲಪಾಪಗಳನ್ನೂ ದುಃಖಗಳನ್ನೂ ಇವುಗಳಿಗೆ ಬೀಜವಾದ ಅಜ್ಞಾನವನ್ನೂ ಸುಟ್ಟು ಧ್ವಂಸಮಾಡತಕ್ಕ ಹೇ ಸ್ವಾಮಿ (೬೮). ಅಲ್ಲದೆ ನಿನ್ನನ್ನೇ ಆಶ್ರಯಿಸಿಕೊಂಡಿರತಕ್ಕ ಸ್ಥಾವರ ಜಂಗಮ ಸಮೂಹಗಳೆಂಬ ಜೀವಗಳ ಮನಸ್ಸು, ಇಂದ್ರಿಯ, ಪ್ರಾಣ—ಎಂಬ ಜಡಪದಾರ್ಥಗಳನ್ನು ನೀನೇ ಅಂತರ್ಯಾಮಿಯಾಗಿದ್ದು ಚೋದಿಸುತ್ತ ಇದ್ದೀಯೆ (೬೯). ಹೇ ಭಗವನ್, ಅತ್ಯಂತ ಕರಾಳಮುಖವುಳ್ಳ ಅಂಧಕಾರವೆಂಬ ಹೆಬ್ಬಾವಿನಿಂದ ನುಂಗ

---

1. ಈ ಸ್ತೋತ್ರಗಳಲ್ಲಿ ಗಾಯತ್ರೀ ಮಂತ್ರಾರ್ಥದ ವಿವರಣೆ ಇದೆ.

ಪರಿತ ಆಶಾಪಾಲೈಸ್ತತ್ರ ತತ್ರ ಕಮಲಕೋಶಾಂಜಲಿಭಿ-
ರುಪಹೃತಾರ್ಹಣಃ ॥ ೭೧

ಅಥ ಹ ಭಗವಂಸ್ತವ ಚರಣನಲಿನಯುಗಲಂ ತ್ರಿಭುವನ
ಗುರುಭಿರ್ವಂದಿತಮಹಮಯಾತಯಾಮಯಜುಃಕಾಮ ಉಪ-
ಸರಾಮೀತಿ ॥ ೭೨

ಸೂತ ಉವಾಚ—
ಏವಂ ಸ್ತುತಃ ಸ ಭಗವಾನ್ ವಾಜಿರೂಪಧರೋ ಹರಿಃ ।
ಯಜೂಂಷ್ಯಯಾತಯಾಮಾನಿ ಮುನಯೇಽದಾತ್ ಪ್ರಸಾದಿತಃ ॥ ೭೩

ಯಜುರ್ಭಿರಕರೋಚ್ಛಾಖಾ ದಶಪಂಚ ಶತೈರ್ವಿಭುಃ ।
ಜಗೃಹುರ್ವಾಜಸನ್ಯಸ್ತಾಃ ಕಾಣ್ವಮಾಧ್ಯಂದಿನಾದಯಃ ॥ ೭೪

---

ಲ್ಪಟ್ಟು, ಶವದಂತೆ ಅಚೇತನವಾಗುವ ಈ ಲೋಕವನ್ನು ಪರಮಕಾರುಣಿಕನಾದ ನೀನು ಕಾರುಣ್ಯದಿಂದ ನೋಡಿ ದರ್ಶನಮಾತ್ರದಿಂದಲೇ ಪ್ರತಿದಿನವೂ ಎಬ್ಬಿಸಿ, ಸ್ವಧರ್ಮವಾದ ಆತ್ಮದರ್ಶನವೆಂಬ ಶ್ರೇಯಸ್ಸಿನಲ್ಲಿ ತ್ರಿಸಂಧ್ಯದಲ್ಲಿಯೂ ಅವರನ್ನು ತೊಡಗಿಸುತ್ತೀಯೆ. ದುಷ್ಟರನ್ನು ದಂಡಿಸುತ್ತ ಅವರಿಗೆ ಭಯವನ್ನುಂಟುಮಾಡುವ ರಾಜನಂತೆ ಸಂಚರಿಸುತ್ತೀಯೆ. (೭೦). ನಿನ್ನ ಸುತ್ತಲೂ ನಿಂತು ದಿಕ್ಪಾಲರಾದ ಇಂದ್ರಾದಿಗಳು ತಾವರೆಯ ಮೊಗ್ಗುಗಳಂತಿರುವ ಅಂಜಲಿಗಳಿಂದ ನಿನಗೆ ಅರ್ಘ್ಯವನ್ನಿತ್ತು ಪೂಜಿಸುತ್ತಾರೆ (೭೧). ಹೇ ಭಗವನ್, ತ್ರಿಭುವನ ಗುರುಗಳಿಂದ ವಂದಿತವಾದ ನಿನ್ನ ಚರಣಾರವಿಂದಯುಗಳವನ್ನು ವಂದಿಸುತ್ತೇನೆ. ಇದುವರೆಗೂ ಅನ್ಯರಿಗೆ ಜ್ಞಾತವಾಗದಿರುವ ಯಜುರ್ವೇದವನ್ನು ಕಲಿಯಲಪೇಕ್ಷಿಸಿ ನಿನ್ನನ್ನು ಭಜಿಸುತ್ತಿದ್ದೇನೆ" ಎಂದು ಸ್ತುತಿಸಿದನು (೭೨). ಈ ಪ್ರಕಾರವಾಗಿ ಸ್ತುತಿಸ-ಲ್ಪಟ್ಟ ಭಗವಾನ್ ಸೂರ್ಯದೇವನು ಪ್ರಸನ್ನನಾಗಿ ಅಶ್ವರೂಪದಿಂದ ಬಂದು, ಅಯಾತಯಾಮಗಳಾದ—ಎಂದರೆ ಅನ್ಯರಿಗೆ ಅಜ್ಞಾತವಾಗಿದ್ದ—ಯಜುರ್ವೇದ ಭಾಗವನ್ನು ಯಾಜ್ಞವಲ್ಕ್ಯಮುನಿಗೆ ಉಪದೇಶಿಸಿದನು (೭೩). ಅನಂತರ ಯಾಜ್ಞವಲ್ಕ್ಯಮುನಿಯು ಅಸಂಖ್ಯಾತಗಳಾದ ಆ ಯಜುರ್ಮಂತ್ರಗಳಿಂದ

ಜೈಮಿನೇಃ ಸಾಮಗಸ್ಯಾಸೀತ್ ಸುಮಂತುಸ್ತನಯೋ ಮುನಿಃ ।
ಸುನ್ವಾಂಸ್ತು ತತ್ಸುತಸ್ತಾಭ್ಯಾಮೇಕೈಕಾಂ ಪ್ರಾಹ ಸಂಹಿತಾಮ್ ॥ ೭೫

ಸುಕರ್ಮಾ ಚಾಪಿ ತಚ್ಛಿಷ್ಯಃ ಸಾಮವೇದತರೋರ್ಮಹಾನ್ ।
ಸಹಸ್ರಸಂಹಿತಾಭೇದಂ ಚಕ್ರೇ ಸಾಮ್ನಾಂ ತತೋ ದ್ವಿಜಃ ॥ ೭೬

ಹಿರಣ್ಯನಾಭಃ ಕೌಸಲ್ಯಃ ಪೌಷ್ಯಂಜಿಶ್ಚ ಸುಕರ್ಮಣಃ ।
ಶಿಷ್ಯೌ ಜಗೃಹತುಶ್ಚಾನ್ಯ ಆವಂತ್ಯೋ ಬ್ರಹ್ಮವಿತ್ತಮಃ ॥ ೭೭

ಉದೀಚ್ಯಾಃ ಸಾಮಗಾಃ ಶಿಷ್ಯಾ ಆಸನ್ ಪಂಚಶತಾನಿ ವೈ ।
ಪೌಷ್ಯಂಜ್ಯಾವಂತ್ಯಯೋಶ್ಚಾಪಿ ತಾಂಶ್ಚ ಪ್ರಾಚ್ಯಾನ್ ಪ್ರಚಕ್ಷತೇ ॥ ೭೮

---

ಆ ಯಜುರ್ವೇದವನ್ನು ಹದಿನೈದು [1]ಶಾಖೆಗಳನ್ನಾಗಿ ವಿಂಗಡಿಸಿದನು. ಕಾಣ್ವ, ಮಾಧ್ಯಂದಿನ—ಮೊದಲಾದ ಶಿಷ್ಯರು [2]ವಾಜಸನೀ ಎಂಬ ಆ ಶಾಖೆಗಳನ್ನು ಅಧ್ಯಯನ ಮಾಡಿದರು (೭೪).

ಸಾಮಗನಾದ ಜೈಮಿನಿಗೆ ಸುಮಂತುವೆಂಬ ಪುತ್ರನಿದ್ದನು. ಸುನ್ವಾನ್ ಎಂಬವನು ಸುಮಂತುವಿನ ಮಗ. ಜೈಮಿನಿಯು (ಸಾಮವೇದವನ್ನು ಎರಡಾಗಿ ವಿಭಾಗಿಸಿ) ಈ ಪುತ್ರಪೌತ್ರರಿಗೆ ಒಂದೊಂದು ಸಾಮಸಂಹಿತೆಯನ್ನು ಅಧ್ಯಯನ ಮಾಡಿಸಿದನು (೭೫). ಜೈಮಿನಿಯ ಶಿಷ್ಯನೂ ಅತ್ಯಂತ ಮೇಧಾವಿಯೂ ಆದ ಸುಕರ್ಮನೆಂಬ ವಿಪ್ರನು ಸಾಮವೇದವೆಂಬ ವೃಕ್ಷಕ್ಕೆ ಸಾಮಘಟಿತವಾದ ಒಂದು ಸಾವಿರ ಸಂಹಿತಾಭೇದಗಳನ್ನು ರಚಿಸಿದನು (೭೬). ಸುಮಂತುವಿನ ಶಿಷ್ಯರಾದ ಕೋಸಲದೇಶದ ಹಿರಣ್ಯನಾಭ ಮತ್ತು ಪೌಷ್ಯಂಜಿ ಎಂಬಿಬ್ಬರೂ ಇನ್ನೊಬ್ಬ ಬ್ರಹ್ಮವಿದನಾದ ಆವಂತ್ಯನೆಂಬ ಅವಂತೀದೇಶದ ಶಿಷ್ಯನೂ ಆ ಸಾಮಶಾಖೆಗಳನ್ನು ಅಧ್ಯಯನ ಮಾಡಿದರು (೭೭). ಪೌಷ್ಯಂಜಿ, ಆವಂತ್ಯ, ಹಿರಣ್ಯನಾಭ ಈ

---

1. ಮೂಲದಲ್ಲಿ 'ದಶಪಂಚ ಶತೈರ್ವಿಭುಃ' ಎಂಬ ಪಾಠವಿದೆ. ಶತೈಃ = ಅಸಂಖ್ಯಾತಗಳಾದ, ಯಜುರ್ಭಿಃ = ಯಜುರ್ಮಂತ್ರಗಳಿಂದ—ಎಂದು ವ್ಯಾಖ್ಯಾನಕಾರರು ಅರ್ಥ ಮಾಡಿದ್ದಾರೆ. 'ದಶಪಂಚ ಸ ತ್ಯೈರ್ವಿಭುಃ' ಎಂಬುದೇ ಶುದ್ಧ ಪಾಠವೆಂದು ನಮ್ಮ ಊಹೆ. ಸಃ = ಆ ಯಾಜ್ಞವಲ್ಕ್ಯಮುನಿ.

2. ವಾಜ = (ಸೂರ್ಯನಾದ) ಅಶ್ವದ ರೋಮಗಳಿಂದ ಅಥವಾ ವೇಗದಿಂದ, ಸನೀ = ಪ್ರದತ್ತವಾದ ಪ್ರಯುಕ್ತ ಈ ಹೆಸರು ಬಂದಿತು. ವಾಜಿಸನೀ, ವಾಜಸನೇಯ—ಎಂದೂ ಹೆಸರಿದೆ.

ಲೌಗಾಕ್ಷಿರ್ಮಾಂಗಲಿಃ ಕುಲ್ಯಃ ಕುಸೀದಃ ಕುಕ್ಷಿರೇವ ಚ ।
ಪೌಷ್ಯಂಜಿಶಿಷ್ಯಾ ಜಗೃಹುಃ ಸಂಹಿತಾಸ್ತೇ ಶತಂ ಶತಮ್ ॥ ೭೯

ಕೃತೋ ಹಿರಣ್ಯನಾಭಸ್ಯ ಚತುರ್ವಿಂಶತಿಸಂಹಿತಾಃ ।
ಶಿಷ್ಯ ಊಚೇ ಸ್ವಶಿಷ್ಯೇಭ್ಯಃ ಶೇಷಾ ಆವಂತ್ಯ ಆತ್ಮವಾನ್ ॥ ೮೦

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ವೇದಶಾಖಾಪ್ರಣಯನಂ ನಾಮ ಷಷ್ಠೋಧ್ಯಾಯಃ



---

ಮೂವರಿಗೆ ಒಟ್ಟು ಐದುನೂರು ಮಂದಿ ಸಾಮಗರಾದ ಶಿಷ್ಯರಿದ್ದರು. ಅವರು ಉದೀಚ್ಯರಾಗಿದ್ದರೂ ಕಾಲಾಂತರದಲ್ಲಿ ಕೆಲವರನ್ನು ಪ್ರಾಚ್ಯರೆಂದು ಕರೆಯುತ್ತಿದ್ದದುಂಟು (೭೮). ಇವರಲ್ಲದೆ ಲೌಗಾಕ್ಷಿ, ಮಾಂಗಲಿ, ಕುಲ್ಯ, ಕುಸೀದ, ಕುಕ್ಷಿ—ಎಂಬ ಪೌಷ್ಯಂಜಿ ಶಿಷ್ಯರು ಒಬ್ಬೊಬ್ಬರೂ ನೂರು ನೂರು ಸಾಮಸಂಹಿತೆಗಳನ್ನು ಅಧ್ಯಯನ ಮಾಡಿದರು. ಹಿರಣ್ಯನಾಭನ ಶಿಷ್ಯನಾದ ಕೃತ ಎಂಬವನು ತನ್ನ ಶಿಷ್ಯರಿಗೆ ಇಪ್ಪತ್ತು ನಾಲ್ಕು ಸಂಹಿತೆಗಳನ್ನು ಉಪದೇಶಿಸಿದನು. ಧೀಮಂತನಾದ ಆವಂತ್ಯನು ಉಳಿದ ಪ್ರಸಿದ್ಧ ಸಾಮಶಾಖೆಗಳನ್ನು ತನ್ನ ಶಿಷ್ಯರಿಗೆ ಅಧ್ಯಯನ ಮಾಡಿಸಿದನು" ಎಂದು ಸೂತರು ಶೌನಕಾದಿಗಳಿಗೆ ಹೇಳಿದರು (೭೯–೮೦).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ದ್ವಾದಶಸ್ಕಂಧದಲ್ಲಿ
ಆರನೆಯ ಅಧ್ಯಾಯ



# ಸಪ್ತಮೋಧ್ಯಾಯಃ

**ಸೂತ ಉವಾಚ—**

**ಅಥರ್ವವಿತ್ ಸುಮಂತುಶ್ಚ ಶಿಷ್ಯಮಧ್ಯಾಪಯತ್ ಸ್ವಕಾಮ್ ।**
**ಸಂಹಿತಾಂ ಸೋऽಪಿ ಪಥ್ಯಾಯ ವೇದದರ್ಶಾಯ ಚೋಕ್ತವಾನ್ ॥ ೧**

**ಶೌಕ್ಲಾಯನಿರ್ಬ್ರಹ್ಮಬಲಿರ್ಮೋದೋಷಃ ಪಿಪ್ಪಲಾಯನಿಃ ।**
**ವೇದದರ್ಶಸ್ಯ ಶಿಷ್ಯಾಸ್ತೇ ಪಥ್ಯಶಿಷ್ಯಾನಥೋ ಶೃಣು ।**
**ಕುಮುದಃ ಶುನಕೋ ಬ್ರಹ್ಮನ್ ಜಾಜಲಿಶ್ಚಾಪ್ಯಥರ್ವವಿತ್ ॥ ೨**

**ಬಭ್ರುಃ ಶಿಷ್ಯೋऽಥಾಂಗಿರಸಃ ಸೈಂಧವಾಯನ ಏವ ಚ ।**
**ಅಧೀಯೇತಾಂ ಸಂಹಿತೇ ದ್ವೇ ಸಾವರ್ಣ್ಯಾದ್ಯಾಸ್ತಥಾಪರೇ ॥ ೩**

## ಅಧ್ಯಾಯ ೭

**ಅಥರ್ವವೇದದ ವಿಭಾಗ. ಪುರಾಣಗಳ ವಿಭಾಗ. ಅವುಗಳ ಲಕ್ಷಣ ಮತ್ತು ಅಷ್ಟಾದಶ ಪುರಾಣಗಳು.**

ಸೂತಪೌರಾಣಿಕರು ಇಂತೆಂದರು : " ಶೌನಕರೆ, ಅಥರ್ವವೇದಜ್ಞನಾದ ಸುಮಂತುವು ತನ್ನ ಅಥರ್ವಸಂಹಿತೆಯನ್ನು ಶಿಷ್ಯನಾದ [1]ಕಬಂಧನಿಗೆ ಅಧ್ಯಯನ ಮಾಡಿಸಿದನು. ಕಬಂಧನು ಅದನ್ನು ಎರಡು ವಿಭಾಗಮಾಡಿ ಪಥ್ಯನಿಗೂ ವೇದದರ್ಶ ಎಂಬವನಿಗೂ ಕಲಿಸಿದನು (೧). ವೇದದರ್ಶ—ಎಂಬವನಿಗೆ ಶೌಕ್ಲಾಯನಿ, ಬ್ರಹ್ಮಬಲಿ, ಮೋದೋಷ, ಪಿಪ್ಪಲಾಯನಿ—ಎಂಬ ನಾಲ್ವರು ಶಿಷ್ಯರಿದ್ದರು. ಕುಮುದ, ಶುನಕ, ಜಾಜಲಿ—ಎಂಬ ಮೂವರು [2]ಪಥ್ಯನ ಶಿಷ್ಯರು. ಅಂಗಿರಸ

1. ಕಬಂಧನೆಂಬ ಹೆಸರನ್ನು ವಿಷ್ಣುಪುರಾಣದಿಂದ ತೆಗೆದುಕೊಳ್ಳಲಾಗಿದೆ. ಮೂಲದಲ್ಲಿ ಹೆಸರಿಲ್ಲ.

2. ವೇದದರ್ಶನು ಅಥರ್ವಸಂಹಿತೆಯನ್ನು ನಾಲ್ಕು ವಿಭಾಗಮಾಡಿ ನಾಲ್ವರು ಶಿಷ್ಯರಿಗೂ ಪಥ್ಯನು ಮೂರು ವಿಭಾಗಮಾಡಿ ಮೂವರು ಶಿಷ್ಯರಿಗೂ ಬೋಧಿಸಿದನು—ಎಂದು ಇಲ್ಲಿ ಸೇರಿಸಿಕೊಳ್ಳಬೇಕು.

ನಕ್ಷತ್ರಕಲ್ಪಃ ಶಾಂತಿಶ್ಚ ಕಶ್ಯಪಾಂಗಿರಸಾದಯಃ ।
ಏತೇ ಅಥರ್ವಣಾಚಾರ್ಯಾಃ ಶೃಣು ಪೌರಾಣಿಕಾನ್ ಮುನೇ ॥ ೪

ತ್ರಯ್ಯಾರುಣಿಃ ಕಶ್ಯಪಶ್ಚ ಸಾವರ್ಣಿರಕೃತವ್ರಣಃ ।
ವೈಶಂಪಾಯನಹಾರೀತೌ ಷಡ್ ವೈ ಪೌರಾಣಿಕಾ ಇಮೇ ॥ ೫

ಅಧೀಯಂತ ವ್ಯಾಸಶಿಷ್ಯಾತ್ ಸಂಹಿತಾಂ ಮತ್ಪಿತುರ್ಮುಖಾತ್ ।
ಏಕೈಕಾಮಹಮೇತೇಷಾಂ ಶಿಷ್ಯಃ ಸರ್ವಾಃ ಸಮಧ್ಯಗಾಮ್ ॥ ೬

ಕಶ್ಯಪೋಽಹಂ ಚ ಸಾವರ್ಣೀ ರಾಮಶಿಷ್ಯೋಽಕೃತವ್ರಣಃ ।
ಅಧೀಮಹಿ ವ್ಯಾಸಶಿಷ್ಯಾಚ್ಚತಸ್ರೋ ಮೂಲಸಂಹಿತಾಃ ॥ ೭

---

ಗೋತ್ರದ ಶುನಕನಿಗೆ ಬಭ್ರು, ಸೈಂಧವಾಯನ—ಎಂಬ ಇಬ್ಬರು ಶಿಷ್ಯರಿದ್ದರು. ಶುನಕನಿಂದ ವಿಭಕ್ತವಾದ ಎರಡು ಸಂಹಿತೆಗಳಲ್ಲಿ ಒಂದೊಂದನ್ನು ಅವರು ಅಧ್ಯಯನ ಮಾಡಿದರು. ಈ ಬಭ್ರು, ಸೈಂಧವಾಯನರಿಗೆ ಸಾವರ್ಣ್ಯನೇ ಮೊದಲಾದ ಕೆಲವು ಶಿಷ್ಯರಿದ್ದರು (೨–೩). ಅಲ್ಲದೆ ನಕ್ಷತ್ರಕಲ್ಪ, ಶಾಂತಿಕಲ್ಪ, ಕಶ್ಯಪಕಲ್ಪ, ಆಂಗೀರಸ ಕಲ್ಪ—ಮುಂತಾದ ವಿಭಾಗಗಳನ್ನು ಮಾಡಿದ ಅನೇಕ ಅಥರ್ವಣಾಚಾರ್ಯರು ಆಗಿ ಹೋದರು. ಇನ್ನು ಪೌರಾಣಿಕರ ವಿಚಾರವನ್ನು ಹೇಳುತ್ತೇನೆ, ಕೇಳು (೪). ತ್ರಯ್ಯಾರುಣಿ, ಕಶ್ಯಪ, ಸಾವರ್ಣಿ, ಅಕೃತವ್ರಣ, ವೈಶಂಪಾಯನ, ಹಾರೀತ—ಎಂಬ ಆರು ಜನರು ಪೌರಾಣಿಕರೆಂದು ಖ್ಯಾತರಾಗಿದ್ದಾರೆ. ವ್ಯಾಸಶಿಷ್ಯರೂ ನನ್ನ ಪಿತೃವರ್ಯರೂ ಆದ ರೋಮಹರ್ಷಣರಿಂದ ಈ ಆರು ಜನರು ಒಂದೊಂದು ಪುರಾಣ ಸಂಹಿತೆಯನ್ನು ಅಭ್ಯಾಸಮಾಡಿದ್ದರು. ಇವರೆಲ್ಲರ ಶಿಷ್ಯನಾದ ನಾನು ಸಮಸ್ತ ಪುರಾಣಸಂಹಿತೆಗಳನ್ನು ಅಭ್ಯಾಸಮಾಡಿದೆನು ! (೫–೬). ಕಶ್ಯಪ, ಸಾವರ್ಣಿ, ರಾಮಶಿಷ್ಯನಾದ ಅಕೃತವ್ರಣ ಮತ್ತು ನಾನು—ಈ ನಾಲ್ವರು ವ್ಯಾಸಶಿಷ್ಯರಾದ ರೋಮಹರ್ಷಣರಿಂದ [1]ನಾಲ್ಕು ಮೂಲ ಸಂಹಿತೆಗಳನ್ನು ಅಭ್ಯಾಸಮಾಡಿದೆವು. ಓ ಶೌನಕಮುನಿಗಳೆ, ವೇದಶಾಸ್ತ್ರಾನುಸಾರವಾಗಿ ಬ್ರಹ್ಮರ್ಷಿಗಳು ನಿರೂಪಿಸಿರುವ

---

1. ‘ ರೋಮಹರ್ಷಣರಿಂದ ನಾಲ್ಕು ಸಂಹಿತೆಗಳನ್ನೂ ಉಳಿದ ತ್ರಯ್ಯಾರುಣಿ—ಮೊದಲಾದವರಿಂದ ಉಳಿದ ಸಂಹಿತೆಗಳನ್ನೂ ನಾನು ಅಭ್ಯಾಸಮಾಡಿದೆನು ’ ಎಂದು ತಾತ್ಪರ್ಯ.

ಪುರಾಣಲಕ್ಷಣಂ ಬ್ರಹ್ಮನ್ ಬ್ರಹ್ಮರ್ಷಿಭಿರ್ನಿರೂಪಿತಮ್ ।
ಶೃಣುಷ್ವ ಬುದ್ಧಿಮಾಶ್ರಿತ್ಯ ವೇದಶಾಸ್ತ್ರಾನುಸಾರತಃ ॥ ೮

ಸರ್ಗೋಽಸ್ಯಾಥ ವಿಸರ್ಗಶ್ಚ ವೃತ್ತೀ ರಕ್ಷಾಂತರಾಣಿ ಚ ।
ವಂಶೋ ವಂಶಾನುಚರಿತಂ ಸಂಸ್ಥಾ ಹೇತುರಪಾಶ್ರಯಃ ॥ ೯

ದಶಭಿರ್ಲಕ್ಷಣೈರ್ಯುಕ್ತಂ ಪುರಾಣಂ ತದ್ವಿದೋ ವಿದುಃ ।
ಕೇಚಿತ್ ಪಂಚವಿಧಂ ಬ್ರಹ್ಮನ್ ಮಹದಲ್ಪವ್ಯವಸ್ಥಯಾ ॥ ೧೦

ಅವ್ಯಾಕೃತಗುಣಕ್ಷೋಭಾನ್ಮಹತಸ್ತ್ರಿವೃತೋಽಹಮಃ ।
ಭೂತಮಾತ್ರೇಂದ್ರಿಯಾರ್ಥಾನಾಂ ಸಂಭವಃ ಸರ್ಗ ಉಚ್ಯತೇ ॥ ೧೧

ಪುರುಷಾನುಗೃಹೀತಾನಾಮೇತೇಷಾಂ ವಾಸನಾಮಯಃ ।
ವಿಸರ್ಗೋಽಯಂ ಸಮಾಹಾರೋ ಬೀಜಾದ್ ಬೀಜಂ ಚರಾಚರಮ್ ॥ ೧೨

---

ಪುರಾಣಲಕ್ಷಣವನ್ನು ಸಾವಧಾನವಾಗಿ ಕೇಳಿರಿ (೭-೮). ಈ ವಿಶ್ವಕ್ಕೆ ಸಂಬಂಧಿಸಿದಂತೆ ಸರ್ಗ, ವಿಸರ್ಗ, ವೃತ್ತಿ, ರಕ್ಷಾ, ಮನ್ವಂತರ, ವಂಶ, ವಂಶಾನುಚರಿತ, ಸಂಸ್ಥಾ, ಹೇತು, ಅಪಾಶ್ರಯ ಎಂಬ ಹತ್ತು [1]ಲಕ್ಷಣಗಳಿರುವ ಗ್ರಂಥವನ್ನು ಪುರಾಣವೆಂದು ಬಲ್ಲವರು ಹೇಳುತ್ತಾರೆ. ಆದರೆ ಐದು ಲಕ್ಷಣಗಳಿರುವ ಗ್ರಂಥವು ಪುರಾಣವೆಂದು ಕೆಲವರು ಹೇಳಿದ್ದಾರೆ ದಶಲಕ್ಷಣಗಳಿರುವುದು ಮಹಾಪುರಾಣ, ಪಂಚಲಕ್ಷಣಗಳಿರುವುದು ಉಪಪುರಾಣ—ಎಂಬ ವ್ಯವಸ್ಥೆಯಿಂದ ಇದು ಸರಿಹೋಗುತ್ತದೆ (೯–೧೦). ಅವುಗಳಲ್ಲಿ ಸರ್ಗವೆಂದರೆ—ಪ್ರಧಾನದ ಗುಣಕ್ಷೋಭೆಯಿಂದ ಮಹತ್ತತ್ವವೂ ಅದರಿಂದ ತ್ರಿಗುಣಾತ್ಮಕವಾದ ಅಹಂಕಾರವೂ ಅಹಂಕಾರದಿಂದ ಸೂಕ್ಷ್ಮವಾದ ಭೂತತನ್ಮಾತ್ರೆಗಳೂ ಅವುಗಳಿಂದ ಇಂದ್ರಿಯಗಳ ಮತ್ತು ಸ್ಥೂಲಪಂಚಭೂತಾದಿಗಳ ಉತ್ಪತ್ತಿ–ಇದು ಸರ್ಗವೆನಿಸುತ್ತದೆ (೧೧). ಈ ಮಹದಾದಿಗಳ ಸಮುದಾಯವೇ ಚರಾಚರ ಪ್ರಾಣಿರೂಪವಾದ ಪ್ರಪಂಚ. ಈಶ್ವರಾನುಗ್ರಹದಿಂದ ಪ್ರಾಣಿಗಳ ಪೂರ್ವಕರ್ಮವಾಸನೆಯು ಉದ್ಬುದ್ಧವಾಗಿ, ಬೀಜದಿಂದ ಬೀಜವು ಹುಟ್ಟುವಂತೆ, ಚರಾಚರಗಳು ಪ್ರವಹಿಸುತ್ತ ಹೋಗುವುದು

---

1. ಈ ಸರ್ಗಾದಿಗಳ ಅರ್ಥ ವಿವರಣೆ ಮುಂದೆ ಬಂದಿದೆ.

ವೃತ್ತಿರ್ಭೂತಾನಿ ಭೂತಾನಾಂ ಚರಾಣಾಮಚರಾಣಿ ಚ ।
ಕೃತಾ ಸ್ವೇನ ನೃಣಾಂ ತತ್ರ ಕಾಮಾಚ್ಚೋದನಯಾಪಿ ವಾ ॥ ೧೩

ರಕ್ಷಾಚ್ಯುತಾವತಾರೇಹಾ ವಿಶ್ವಸ್ಯಾನು ಯುಗೇ ಯುಗೇ ।
ತಿರ್ಯಙ್ಮರ್ತ್ಯರ್ಷಿದೇವೇಷು ಹನ್ಯಂತೇ ಯೈಸ್ತ್ರಯೀದ್ವಿಷಃ ॥ ೧೪

ಮನ್ವಂತರಂ ಮನುರ್ದೇವಾ ಮನುಪುತ್ರಾಃ ಸುರೇಶ್ವರಃ ।
ಋಷಯೋಽಂಶಾವತಾರಶ್ಚ ಹರೇಃ ಷಡ್ವಿಧಮುಚ್ಯತೇ ॥ ೧೫

ರಾಜ್ಞಾಂ ಬ್ರಹ್ಮಪ್ರಸೂತಾನಾಂ ವಂಶಸ್ತ್ರೈಕಾಲಿಕೋಽನ್ವಯಃ ।
ವಂಶಾನುಚರಿತಂ ತೇಷಾಂ ವೃತ್ತಂ ವಂಶಧರಾಶ್ಚ ಯೇ ॥ ೧೬

ನೈಮಿತ್ತಿಕಃ ಪ್ರಾಕೃತಿಕೋ ನಿತ್ಯ ಆತ್ಯಂತಿಕೋ ಲಯಃ ।
ಸಂಸ್ಥೇತಿ ಕವಿಭಿಃ ಪ್ರೋಕ್ತಾ ಚತುರ್ಧಾಸ್ಯ ಸ್ವಭಾವತಃ ॥ ೧೭

---

ವಿಸರ್ಗವೆನಿಸುತ್ತದೆ (೧೨). ಸಂಚರಿಸುವ ಪ್ರಾಣಿಗಳಿಗೆ ಸಂಚರಿಸಲಾರದ ಸಸ್ಯಾದಿಗಳು ಸಾಮಾನ್ಯವಾಗಿ ಜೀವನವೃತ್ತಿ (ಆಹಾರ) ಆಗಿರುತ್ತವೆ. ಸಂಚರಿಸಬಲ್ಲ ಪ್ರಾಣಿಗಳೂ ವೃತ್ತಿಯಾಗಿರುವುದುಂಟು. ಮನುಷ್ಯರಿಗಾದರೋ ಸ್ವಭಾವದಿಂದಲೂ ಕಾಮನೆಯಿಂದಲೂ ಶಾಸ್ತ್ರಚೋದನೆಯಿಂದಲೂ ಗೊತ್ತಾದ ಜೀವಿಕೆ ಇರುತ್ತದೆ. ಇದಕ್ಕೆ ವೃತ್ತಿ ಎಂದು ಹೆಸರು (೧೩). ಯುಗಯುಗದಲ್ಲಿಯೂ ತಿರ್ಯಗ್ಜಂತುಗಳು, ಮನುಷ್ಯರು, ಋಷಿಗಳು, ದೇವತೆಗಳು—ಇವರ ನಡುವೆ ಭಗವಂತನ ಅವತಾರಲೀಲೆ ನಡೆಯುತ್ತದೆ. ಈ ಅವತಾರಗಳಿಂದ ವೇದವಿರೋಧಿಗಳಾದ ರಾಕ್ಷಸಾದಿಗಳು ಹತರಾಗುತ್ತಾರೆ. ವಿಶ್ವದ ಪಾಲನೆಗಾಗಿ ನಡೆಯುವ ಈ ಅವತಾರ ಲೀಲೆಗೆ ರಕ್ಷಾ ಎಂದು ಹೆಸರು (೧೪). ಮನು, ಮನುಪುತ್ರರು, ದೇವತೆಗಳು, ದೇವೇಂದ್ರ, ಋಷಿಗಳು, ಶ್ರೀಹರಿಯ ಅವತಾರ—ಹೀಗೆ ಮನ್ವಂತರವು ಆರು ವಿಧ. ಎಂದರೆ ಈ ಮನ್ವಾದಿಗಳು ಯಾವ ಕಾಲದಲ್ಲಿ ತಮ್ಮ ತಮ್ಮ ಅಧಿಕಾರವನ್ನು ನಡೆಸುವರೋ ಆ ಕಾಲಕ್ಕೆ ಮನ್ವಂತರವೆಂದು ಹೆಸರು (೧೫). ಭೂತ-ಭವಿಷತ್-ವರ್ತಮಾನಗಳೆಂಬ ತ್ರಿಕಾಲಗಳಿಗೆ ಸಂಬಂಧಿಸಿದಂತೆ ಬ್ರಹ್ಮಪ್ರಸೂತರಾದ ಪರಿಶುದ್ಧ ರಾಜರ ವಂಶ ಮತ್ತು ಅವರ ಚರಿತೆಗೆ ವಂಶವೆಂದು ಹೆಸರು. ಇಂತಹ ವಂಶದಲ್ಲಿ ಸಂಜಾತರಾದ ವಂಶೋದ್ಧಾರಕರ ವೃತ್ತಾಂತಕ್ಕೆ ವಂಶಾನುಚರಿತವೆಂದು ಹೆಸರು (೧೬). ಈ ವಿಶ್ವಕ್ಕೆ ಸ್ವಭಾವದಿಂದ ಆಗತಕ್ಕ ನೈಮಿತ್ತಿಕ, ಪ್ರಾಕೃತಿಕ, ನಿತ್ಯ,

**ಹೇತುರ್ಜೀವೋಽಸ್ಯ ಸರ್ಗಾದೇರವಿದ್ಯಾಕರ್ಮಕಾರಕಃ ।**
**ಯಂ ಚಾನುಶಯಿನಂ ಪ್ರಾಹುರವ್ಯಾಕೃತಮುತಾಪರೇ ॥ ೧೮**

**ವ್ಯತಿರೇಕಾನ್ವಯೋ ಯಸ್ಯ ಜಾಗ್ರತ್ಸ್ವಪ್ನಸುಷುಪ್ತಿಷು ।**
**ಮಾಯಾಮಯೇಷು ತದ್ ಬ್ರಹ್ಮ ಜೀವವೃತ್ತಿಷ್ವಪಾಶ್ರಯಃ ॥ ೧೯**

**ಪದಾರ್ಥೇಷು ಯಥಾ ದ್ರವ್ಯಂ ಸನ್ಮಾತ್ರಂ ರೂಪನಾಮಸು ।**
**ಬೀಜಾದಿಪಂಚತಾಂತಾಸು ಹ್ಯವಸ್ಥಾಸು ಯುತಾಯುತಮ್ ॥ ೨೦**

---

ಆತ್ಯಂತಿಕ—ಎಂಬ ನಾಲ್ಕು ವಿಧವಾದ ಪ್ರಳಯವನ್ನು ಸಂಸ್ಥೆಯೆಂದು ವಿದ್ವಾಂಸರು ಹೇಳಿದ್ದಾರೆ (೧೭). ಅವಿದ್ಯೆಯಿಂದ ಕರ್ಮವನ್ನು ಮಾಡತಕ್ಕ ಜೀವನು ವಿಶ್ವದ ಸರ್ಗಾದಿಗಳಿಗೆ ನಿಮಿತ್ತವಾಗಿದ್ದಾನೆ. ಕೆಲವರು (ಚೈತನ್ಯವನ್ನು ಪ್ರಧಾನವಾಗಿಟ್ಟು ಕೊಂಡು) ಅನುಶಯಿಯು ನಿಮಿತ್ತವೆಂದೂ ಕೆಲವರು (ಉಪಾಧಿಯನ್ನು ಪ್ರಧಾನ ವಾಗಿಟ್ಟುಕೊಂಡು) ಅವ್ಯಾಕೃತವಾದ ಪ್ರಧಾನವು ನಿಮಿತ್ತವೆಂದೂ ಹೇಳುತ್ತಾರೆ. ಈ [1]ಜೀವಾತ್ಮನೇ ಪ್ರಕೃತದಲ್ಲಿ ಹೇತುವೆನಿಸುತ್ತಾನೆ (೧೮). ಜಾಗ್ರತ್, ಸ್ವಪ್ನ, ಸುಷುಪ್ತಿ—ಎಂಬ ಮಾಯಾಮಯವಾದ ಅವಸ್ಥೆಗಳಲ್ಲಿ ಯಾವ ಜೀವವೃತ್ತಿಗಳಿದ್ದಾರೋ—ಎಂದರೆ—ಜೀವವಾಗಿ ವರ್ತಿಸತಕ್ಕ ವಿಶ್ವತೈಜಸಪ್ರಾಜ್ಞರಿದ್ದಾರೋ ಅವರಿಗೆ ಸಾಕ್ಷಿಯಾಗಿ ಅನುವೃತ್ತಿಯೂ ಸಮಾಧಿಯಲ್ಲಿ ನಿವೃತ್ತಿಯೂ ಯಾವುದಕ್ಕುಂಟೋ ಆ ಬ್ರಹ್ಮವೇ ಅಪಾಶ್ರಯವೆನಿಸುತ್ತದೆ. (ಸಂಸಾರಪ್ರತೀತಿಗೆ ಅಧಿಷ್ಠಾನವೂ ಸಂಸಾರಬಾಧಕ್ಕೆ ಅವಧಿಯೂ ಆದದ್ದು ಅಪಾಶ್ರಯ. ಅದೇ ಬ್ರಹ್ಮವಸ್ತು) (೧೯). ಇದಕ್ಕೆ [2]ದೃಷ್ಟಾಂತ. ಮಣ್ಣು, ಹತ್ತಿ—ಮುಂತಾದ ದ್ರವ್ಯವು ಘಟಪಟಾದಿ ಪದಾರ್ಥಗಳಲ್ಲಿ ಇರುವುದರಿಂದ ಅಯುತವೂ ಹೊರಗಡೆಯೂ ಇರುವುದ

---

1. ಈ ಶ್ಲೋಕದಲ್ಲಿ "ಜೀವತಯಾ ವರ್ತಂತ ಇತಿ ಜೀವವೃತ್ತಯೋ ವಿಶ್ವತೈಜಸ ಪ್ರಾಜ್ಞಾಃ" ಎಂದು ಶ್ರೀಧರಸ್ವಾಮಿಗಳು ಅರ್ಥ ಹೇಳಿದ್ದಾರೆ. "ಜೀವಸ್ಯ ವೃತ್ತಯೋ ವ್ಯಾಪಾರಾಃ" ಎಂದು ಅರ್ಥಮಾಡಿ ಜಾಗ್ರದಾದ್ಯವಸ್ಥೆಗಳನ್ನೇ ಜೀವವೃತ್ತಿಗಳೆಂದು ಹೇಳುವುದು ಸರಳವಾದದ್ದೆಂದು ತೋರುತ್ತದೆ. ಸುಷುಪ್ತಿಯು ವ್ಯಾಪಾರವಲ್ಲವೆಂದು ಭಾವಿಸಿ ಅವರು ಹಾಗೆ ಅರ್ಥ ಮಾಡಿರಬಹುದು.

2. ಆತ್ಮನೇ ವಿಶ್ವದಲ್ಲಿ ಅನುಸ್ಯೂತನಾದ್ದರಿಂದ ಅನುಶಯಿ. ಅವನು ಚೈತನ್ಯ ಸ್ವರೂಪ. ಪ್ರಧಾನವು ಅವನಿಗೆ ಉಪಾಧಿ.

ವಿರಮೇತ ಯದಾ ಚಿತ್ತಂ ಹಿತ್ವಾ ವೃತ್ತಿತ್ರಯಂ ಸ್ವಯಮ್ ।
ಯೋಗೇನ ವಾ ತದಾಽಽತ್ಮಾನಂ ವೇದೇಹಾಯಾ ನಿವರ್ತತೇ ॥ ೨೧

ಏವಂ ಲಕ್ಷಣಲಕ್ಷ್ಯಾಣಿ ಪುರಾಣಾನಿ ಪುರಾವಿದಃ ।
ಮುನಯೋಽಷ್ಟಾದಶ ಪ್ರಾಹುಃ ಕ್ಷುಲ್ಲಕಾನಿ ಮಹಾಂತಿ ಚ ॥ ೨೨

ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಲೈಂಗಂ ಸಗಾರುಡಮ್ ।
ನಾರದೀಯಂ ಭಾಗವತಮಾಗ್ನೇಯಂ ಸ್ಕಾಂದಸಂಜ್ಞಿತಮ್ ॥ ೨೩

---

ರಿಂದ ಅಯುತವೂ ಆಗಿರುತ್ತದೆ. ಹಾಗೆಯೇ ನಾಮ, ರೂಪಗಳಲ್ಲಿ ಸತ್ತಾಮಾತ್ರವಾಗಿರುವ ಬ್ರಹ್ಮವು ಜನ್ಮ ಮರಣಾದಿ (ಒಂಬತ್ತು) ಅವಸ್ಥೆಗಳಲ್ಲಿಯೂ ಯುತವಾಗಿಯೂ ಅಯುತವಾಗಿಯೂ [1]ಇರುತ್ತದೆ (ಅಧಿಷ್ಠಾನವಾಗಿ ಯುತವೂ ಸಾಕ್ಷಿಯಾಗಿ ಅಯುತವೂ ಆಗಿರುತ್ತದೆ). ಈ ಬ್ರಹ್ಮವೇ ಅಪಾಶ್ರಯ (೨೦). (ಈ ಸರ್ಗಾದಿಗಳು ಮಾಯಾಮಯವೆಂಬ ನಿಶ್ಚಯದಿಂದ) ಚಿತ್ತವು ಯಾವಾಗ ಜಾಗ್ರದಾದಿ ವೃತ್ತಿತ್ರಯವೆಂಬ ಆಶ್ರಯವನ್ನು (ವಾಮದೇವಾದಿಗಳ ಚಿತ್ತದಂತೆ) ತಾನಾಗಿಯೇ ಪರಿತ್ಯಜಿಸುವುದೋ ಅಥವಾ (ದೇವಹೂತಿ ಮುಂತಾದವರ ಚಿತ್ತದಂತೆ) ಯೋಗಬಲದಿಂದ ಪರಿತ್ಯಜಿಸುವುದೋ ಆಗ ಆತ್ಮಜ್ಞಾನವಾಗುತ್ತದೆ. ಜೀವನು ಕಾಮಾದಿಮಯವಾದ ಸಂಸಾರದಿಂದ ನಿವೃತ್ತನಾಗುತ್ತಾನೆ (೨೧). ಈ ಪ್ರಕಾರದ ಲಕ್ಷಣಗಳಿಂದ ಲಕ್ಷಿತಗಳಾದ ಪುರಾಣಗಳು ಹದಿನೆಂಟು ಎಂದು ಪುರಾವಿದರಾದ ಮುನಿಗಳು ಹೇಳಿದ್ದಾರೆ. ಈ ಪುರಾಣಗಳಲ್ಲಿ ಮಹಾಪುರಾಣಗಳು, ಉಪಪುರಾಣಗಳು ಎಂಬ ವಿಭಾಗವೂ ಉಂಟು (೨೨). ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಲೈಂಗ, ಗಾರುಡ, ನಾರದೀಯ, ಭಾಗವತ, ಆಗ್ನೇಯ, ಸ್ಕಾಂದ, ಭವಿಷ್ಯ, ಬ್ರಹ್ಮವೈವರ್ತ, ಮಾರ್ಕಂಡೇಯ, ವಾಮನ, ವಾರಾಹ, ಮಾತ್ಸ್ಯ,

---

1. ಯುತ = ಸಂಬದ್ಧ, ಅಯುತ – ಸಂಬಂಧವಿಲ್ಲದ್ದು. ಒಂಬತ್ತು ಅವಸ್ಥೆಗಳು – ಜಾಯತೇ, ಅಸ್ತಿ, ವರ್ಧತೇ, ವಿಪರಿಣಮತೇ, ಅಪಕ್ಷೀಯತೇ, ನಶ್ಯತಿ—ಎಂಬ ಷಡ್ಭಾವ ವಿಕಾರಗಳು ಮತ್ತು ಜಾಗ್ರತ್, ಸ್ವಪ್ನ, ಸುಷುಪ್ತಿಗಳು ಅಥವಾ ಗರ್ಭಪ್ರವೇಶ, ಗರ್ಭದಲ್ಲಿ ವೃದ್ಧಿ, ಜನನ, ಬಾಲ್ಯ, ಕೌಮಾರ್ಯ, ಯೌವನ, ಮಧ್ಯಮಾವಸ್ಥೆ, ಮುಪ್ಪು ಮತ್ತು ಮರಣ.

ಭವಿಷ್ಯಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ಸವಾಮನಮ್ ।
ವಾರಾಹಂ ಮಾತ್ಸ್ಯಂ ಕೌರ್ಮಂ ಚ ಬ್ರಹ್ಮಾಂಡಾಖ್ಯಮಿತಿ ತ್ರಿಷಟ್ ॥ ೨೪

ಬ್ರಹ್ಮನ್ನಿದಂ ಸಮಾಖ್ಯಾತಂ ಶಾಖಾಪ್ರಣಯನಂ ಮುನೇಃ ।
ಶಿಷ್ಯಶಿಷ್ಯಪ್ರಶಿಷ್ಯಾಣಾಂ ಬ್ರಹ್ಮತೇಜೋವಿವರ್ಧನಮ್ ॥ ೨೫

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ಸಪ್ತಮಾಧ್ಯಾಯಃ



---

ಕೌರ್ಮ, ಬ್ರಹ್ಮಾಂಡ—ಎಂದು [1]ಪುರಾಣಗಳು ಹದಿನೆಂಟು (೨೩). ಹೇ ಬ್ರಹ್ಮನ್ ಶೌನಕ, ವ್ಯಾಸಮುನಿಗಳೂ ಅವರ ಶಿಷ್ಯ ಪ್ರಶಿಷ್ಯರೂ ವೇದಪುರಾಣಗಳ ಸಂಹಿತೆಯನ್ನು ಶಾಖೆಗಳನ್ನಾಗಿ ವಿಭಾಗಿಸಿರುವ ಕ್ರಮವು ಈ ಪ್ರಕಾರವಾಗಿ ನಿರೂಪಿತವಾಯಿತು. ಇದನ್ನು ಕೇಳಿ ತಿಳಿದುಕೊಳ್ಳುವ ಶ್ರೋತೃಗಳ ಬ್ರಹ್ಮತೇಜಸ್ಸು ವರ್ಧಿಸುತ್ತದೆ" ಎಂದು ನುಡಿದರು (೨೪).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ದ್ವಾದಶಸ್ಕಂಧದಲ್ಲಿ
ಏಳನೆಯ ಅಧ್ಯಾಯ



---

1. ಅನುಬಂಧವನ್ನು ನೋಡಿ—೧೦.

# ಅಷ್ಟಮೋಽಧ್ಯಾಯಃ

ಶೌನಕ ಉವಾಚ—

ಸೂತ ಜೀವ ಚಿರಂ ಸಾಧೋ ವದ ನೋ ವದತಾಂ ವರ ।
ತಮಸ್ಯಪಾರೇ ಭ್ರಮತಾಂ ನೃಣಾಂ ತ್ವಂ ಪಾರದರ್ಶನಃ ॥ ೧

ಆಹುಶ್ಚಿರಾಯುಷಮೃಷಿಂ ಮೃಕಂಡುತನಯಂ ಜನಾಃ ।
ಯಃ ಕಲ್ಪಾಂತೇ ಉರ್ವರಿತೋ ಯೇನ ಗ್ರಸ್ತಮಿದಂ ಜಗತ್ ॥ ೨

ಸ ವಾ ಅಸ್ಮತ್ಕುಲೋತ್ಪನ್ನಃ ಕಲ್ಪೇಽಸ್ಮಿನ್ ಭಾರ್ಗವರ್ಷಭಃ ।
ನೈವಾಧುನಾಪಿ ಭೂತಾನಾಂ ಸಂಪ್ಲವಃ ಕೋಽಪಿ ಜಾಯತೇ ॥ ೩

ಏಕ ಏವಾರ್ಣವೇ ಭ್ರಾಮ್ಯನ್ ದದರ್ಶ ಪುರುಷಂ ಕಿಲ ।
ವಟಪತ್ರಪುಟೇ ತೋಕಂ ಶಯಾನಂ ತ್ವೇಕಮದ್ಭುತಮ್ ॥ ೪

ಏಷ ನಃ ಸಂಶಯೋ ಭೂಯಾನ್ ಸೂತ ಕೌತೂಹಲಂ ಯತಃ ।
ತಂ ನಶ್ಛಿಂಧಿ ಮಹಾಯೋಗಿನ್ ಪುರಾಣೇಷ್ವಪಿ ಸಮ್ಮತಃ ॥ ೫

## ಅಧ್ಯಾಯ ೮

ಮಾರ್ಕಂಡೇಯಮುನಿಗಳ ಉಪಾಖ್ಯಾನ, ಮಾರ್ಕಂಡೇಯರ ತಪಸ್ಸು, ಇಂದ್ರಿಯನಿಗ್ರಹ. ನರನಾರಾಯಣಋಷಿಗಳ ಸ್ತುತಿ.

ಅನಂತರ ಶೌನಕಮುನಿಗಳು ಹೀಗೆಂದರು : “ ಸೂತಪೌರಾಣಿಕರೆ, ನೀವು ಚಿರಕಾಲದವರೆಗೆ ಬಾಳಬೇಕು. ಸಾಧುಗಳೂ ವಾಗ್ಮಿಗಳೂ ಆಗಿದ್ದೀರಿ. ಅಪಾರವಾದ ಅಜ್ಞಾನಕೂಪದಲ್ಲಿ ಮುಳುಗಿ ಒದ್ದಾಡುತ್ತಿರುವ ಜನರಿಗೆ ಪಾರವನ್ನು ತೋರಿಸ ಬಲ್ಲಿರಿ (೧). ಮೃಕಂಡುಪುತ್ರನಾದ ಮಾರ್ಕಂಡೇಯ ಋಷಿಯು ಚಿರಂಜೀವಿ ಯೆಂದು ಜನರು ಹೇಳುತ್ತಾರೆ. ಸಮಸ್ತಜಗತ್ತನ್ನೇ ನುಂಗಿಹಾಕುವ ಕಲ್ಪಾಂತ ದಲ್ಲಿಯೂ ಆ ಋಷಿಯು ಇರುವನಂತೆ! ಭೃಗುವಂಶೋತ್ತಮನಾದ ಆತನು ನಮ್ಮ ಕುಲದಲ್ಲಿ ಈ ಕಲ್ಪದಲ್ಲಿಯೇ ಜನಿಸಿದವನು. ಇದುವರೆಗೆ ಪ್ರಾಣಿಗಳಿಗೆ ಯಾವ ಪ್ರಳಯವೂ ನಡೆದಿಲ್ಲ. ಆದರೂ ಆ ಮಾರ್ಕಂಡೇಯ ಋಷಿಯು ಸಮುದ್ರದಲ್ಲಿ ಏಕಾಕಿಯಾಗಿ ಸಂಚರಿಸುತ್ತಿರುವಾಗ ವಟಪತ್ರಪುಟದಲ್ಲಿ ಮಲಗಿದ್ದ ಒಬ್ಬ ಅದ್ಭುತ ಬಾಲಕನನ್ನು ನೋಡಿದನಂತೆ! (೨–೪). ಈ ರೀತಿಯಾಗಿ ನಮಗೆ ಒಂದು

ಸೂತ ಉವಾಚ—

ಪ್ರಶ್ನಸ್ತ್ವಯಾ ಮಹರ್ಷೇSಯಂ ಕೃತೋ ಲೋಕಭ್ರಮಾಪಹಃ ।
ನಾರಾಯಣಕಥಾ ಯತ್ರ ಗೀತಾ ಕಲಿಮಲಾಪಹಾ ॥ ೬

ಪ್ರಾಪ್ತದ್ವಿಜಾತಿಸಂಸ್ಕಾರೋ ಮಾರ್ಕಂಡೇಯಃ ಪಿತುಃ ಕ್ರಮಾತ್ ।
ಛಂದಾಂಸ್ಯಧೀತ್ಯ ಧರ್ಮೇಣ ತಪಸ್ಸ್ವಾಧ್ಯಾಯಸಂಯುತಃ ॥ ೭

ಬೃಹದ್ವ್ರತಧರಃ ಶಾಂತೋ ಜಟಿಲೋ ವಲ್ಕಲಾಂಬರಃ ।
ಬಿಭ್ರತ್ ಕಮಂಡಲುಂ ದಂಡಮುಪವೀತಂ ಸಮೇಖಲಮ್ ॥ ೮

ಕೃಷ್ಣಾಜಿನಂ ಸಾಕ್ಷಸೂತ್ರಂ ಕುಶಾಂಶ್ಚ ನಿಯಮರ್ಧ್ಧಯೇ ।
ಅಗ್ನ್ಯರ್ಕಗುರುವಿಪ್ರಾತ್ಮಸ್ವರ್ಚಯನ್ ಸಂಧ್ಯಯೋರ್ಹರಿಮ್ ॥ ೯

ಸಾಯಂ ಪ್ರಾತಃ ಸ ಗುರವೇ ಭೈಕ್ಷ್ಯಮಾಹೃತ್ಯ ವಾಗ್ಯತಃ ।
ಬುಭುಜೇ ಗುರ್ವನುಜ್ಞಾತಃ ಸಕೃನ್ನೋ ಚೇದುಪೋಷಿತಃ ॥ ೧೦

---

ದೊಡ್ಡ ಸಂಶಯ ಉಂಟು. ಇದು ತುಂಬ ಕುತೂಹಲವನ್ನು ಹುಟ್ಟಿಸುತ್ತದೆ. ಈ ಸಂಶಯವನ್ನು ನೀವು ಪರಿಹರಿಸಬೇಕು. ನೀವು ಮಹಾಯೋಗಿಗಳೂ ಪುರಾಣಗಳನ್ನು ಬಲ್ಲವರೂ ಆಗಿದ್ದೀರಿ" ಎಂದರು (೫). ಆಗ ಸೂತರು ಇಂತೆಂದರು : "ಶೌನಕಮಹರ್ಷಿಗಳೆ, ನಿಮ್ಮದು ಲೋಕಭ್ರಮೆಯನ್ನು ಪರಿಹರಿಸತಕ್ಕ ಪ್ರಶ್ನೆಯಾಗಿದೆ. ಏಕೆಂದರೆ, ಈ ಪ್ರಶ್ನೆಯ ಉತ್ತರದಲ್ಲಿ ಕಲಿಮಲಹಾರಿಯಾದ ಶ್ರೀಮನ್ನಾರಾಯಣನ ಕಥೆಯೇ ಪ್ರಸ್ತುತವಾಗುತ್ತದೆ (೬). ಮಾರ್ಕಂಡೇಯನು ತನ್ನ ತಂದೆಯಿಂದ ಬ್ರಾಹ್ಮಣಯೋಗ್ಯವಾದ ಉಪನಯನ ಸಂಸ್ಕಾರವನ್ನು ಪಡೆದು ವೇದಗಳನ್ನು ವಿಧಿಪೂರ್ವಕವಾಗಿ ಅಧ್ಯಯನಮಾಡಿದನು. ತಪಃಸ್ವಾಧ್ಯಾಯಸಂಯುತನೂ ನೈಷ್ಠಿಕ ಬ್ರಹ್ಮಚಾರಿಯೂ ಶಾಂತನೂ ಜಟಿಲನೂ ವಲ್ಕಲಧಾರಿಯೂ ಆಗಿದ್ದನು. ಉಪವೀತವನ್ನು ಧರಿಸಿ ದಂಡಕಮಂಡಲಗಳನ್ನು ಹಿಡಿದು ಮೇಖಲಾಧಾರಿಯಾಗಿದ್ದನು (೭–೮). ಕೃಷ್ಣಾಜಿನ, ಅಕ್ಷಮಾಲೆ, ದರ್ಭೆಗಳನ್ನು ಧರಿಸಿ ಧರ್ಮವೃದ್ಧಿಗಾಗಿ ಎರಡು ಸಂಧ್ಯಾಕಾಲಗಳಲ್ಲಿಯೂ ಅಗ್ನಿ, ಸೂರ್ಯ, ಗುರು, ವಿಪ್ರ, ಹೃದಯ—ಈ ಐದರಲ್ಲಿಯೂ ಅಂತರ್ಯಾಮಿಯಾದ ಶ್ರೀಹರಿಯನ್ನು ಅರ್ಚಿಸುತ್ತಿದ್ದನು (೯). ಆ ಮಾರ್ಕಂಡೇಯನು ಪ್ರಾತಃಕಾಲ ಸಾಯಂಕಾಲಗಳಲ್ಲಿ ಗುರುವಿಗೆ

ಏವಂ ತಪಸ್ಸ್ವಾಧ್ಯಾಯಪರೋ ವರ್ಷಾಣಾಮಯುತಾಯುತಮ್ ।
ಆರಾಧಯನ್ ಹೃಷೀಕೇಶಂ ಜಿಗ್ಯೇ ಮೃತ್ಯುಂ ಸುದುರ್ಜಯಮ್ ॥ ೧೧

ಬ್ರಹ್ಮಾ ಭೃಗುರ್ಭವೋ ದಕ್ಷೋ ಬ್ರಹ್ಮಪುತ್ರಾಶ್ಚ ಯೇಽಪರೇ ।
ನೃದೇವಪಿತೃಭೂತಾನಿ ತೇನಾಸನ್ನತಿವಿಸ್ಮಿತಾಃ ॥ ೧೨

ಇತ್ಥಂ ಬೃಹದ್ವ್ರತಧರಸ್ತಪಸ್ಸ್ವಾಧ್ಯಾಯಸಂಯಮೈಃ ।
ದಧ್ಯಾವಧೋಕ್ಷಜಂ ಯೋಗೀ ಧ್ವಸ್ತಕ್ಲೇಶಾಂತರಾತ್ಮನಾ ॥ ೧೩

ತಸ್ಯೈವಂ ಯುಂಜತಶ್ಚಿತ್ತಂ ಮಹಾಯೋಗೇನ ಯೋಗಿನಃ ।
ವ್ಯತೀಯಾಯ ಮಹಾನ್ ಕಾಲೋ ಮನ್ವಂತರಷಡಾತ್ಮಕಃ ॥ ೧೪

ಏತತ್ ಪುರಂದರೋ ಜ್ಞಾತ್ವಾ ಸಪ್ತಮೇಽಸ್ಮಿನ್ ಕಿಲಾಂತರೇ ।
ತಪೋವಿಶಂಕಿತೋ ಬ್ರಹ್ಮನ್ನಾರೇಭೇ ತದ್ವಿಘಾತನಮ್ ॥ ೧೫

---

ಭಿಕ್ಷಾನ್ನವನ್ನು ತಂದೊಪ್ಪಿಸಿ ಗುರುವಿನ ಅನುಜ್ಞೆಯಾದಮೇಲೆ ಮೌನವಾಗಿ ಊಟ ಮಾಡುತ್ತಿದ್ದನು. ಒಮ್ಮೊಮ್ಮೆ ಅನುಜ್ಞೆಯಾಗದಿದ್ದಾಗ ಉಪವಾಸವಿರುತ್ತಿದ್ದನು (೧೦). ಹೀಗೆ ಮಾರ್ಕಂಡೇಯನು ತಪಃಸ್ವಾಧ್ಯಾಯನಿಷ್ಠನಾಗಿ ಸಾವಿರಾರು ವರ್ಷಗಳವರೆಗೆ ಶ್ರೀಮನ್ನಾರಾಯಣನನ್ನು ಆರಾಧಿಸುತ್ತಲಿದ್ದು ದುರ್ಜಯವಾದ ಮೃತ್ಯುವನ್ನು ಜಯಿಸಿದನು. ಮಾರ್ಕಂಡೇಯನ ಈ ಸಾಧನೆಯನ್ನು ಕಂಡು ಬ್ರಹ್ಮ, ಭೃಗು, ಶಿವ, ದಕ್ಷ ಮತ್ತು ಬ್ರಹ್ಮನ ಮಾನಸಪುತ್ರರೂ ಮನುಷ್ಯ, ದೇವ, ಪಿತೃ, ಭೂತಗಳೂ ಅತ್ಯಂತ ವಿಸ್ಮಿತರಾದರು (೧೧–೧೨). ಈ ಪ್ರಕಾರ ನೈಷ್ಠಿಕ ಬ್ರಹ್ಮಚರ್ಯವ್ರತವನ್ನು ಪಾಲಿಸುತ್ತ ತಪಃಸ್ವಾಧ್ಯಾಯಮನೋನಿಗ್ರಹಗಳಿಂದ ಯೋಗಿಯಾದ ಮಾರ್ಕಂಡೇಯನು ರಾಗಾದಿಕ್ಲೇಶಗಳನ್ನು ಧ್ವಂಸಗೊಳಿಸಿ ಪರಿಶುದ್ಧವಾದ ಅಂತಃಕರಣದಿಂದ ಮಹಾವಿಷ್ಣುವನ್ನು ಧ್ಯಾನಿಸುತ್ತಿದ್ದನು (೧೩). ಹೀಗೆ ಮಹಾಯೋಗಮಾರ್ಗದಿಂದ ಚಿತ್ತವನ್ನು ನಿರೋಧಿಸಿದ್ದ ಆ ಯೋಗಿಗೆ ಆರು ಮನ್ವಂತರಗಳ ದೀರ್ಘಕಾಲವು ಕಳೆದುಹೋಯಿತು! ಶೌನಕರೆ, ಅನಂತರ ಈ ಏಳನೆಯ ಮನ್ವಂತರದಲ್ಲಿ ದೇವೇಂದ್ರನಿಗೆ ಒಂದು ಶಂಕೆ ಹುಟ್ಟಿತು. "ಈತನು ತಪೋಬಲದಿಂದ ನನ್ನ ಇಂದ್ರಪದವಿಯನ್ನು ಹಿಡಿಯಲಿದ್ದಾನೆ!" ಎಂದು ಶಂಕಿಸಿ ಇಂದ್ರನು ಮಾರ್ಕಂಡೇಯನ ತಪಸ್ಸಿಗೆ ಅಡ್ಡಿಯನ್ನು ಮಾಡಲು ಯತ್ನಿಸಿದನು (೧೪–೧೫).

*

ಗಂಧರ್ವಾಪ್ಸರಸಃ ಕಾಮಂ ವಸಂತಮಲಯಾನಿಲೌ ।
ಮುನಯೇ ಪ್ರೇಷಯಾಮಾಸ ರಜಸ್ತೋಕಮದೌ ತಥಾ ॥ ೧೬

ತೇ ವೈ ತದಾಶ್ರಮಂ ಜಗ್ಮುರ್ಹಿಮಾದ್ರೇಃ ಪಾರ್ಶ್ವ ಉತ್ತರೇ ।
ಪುಷ್ಪಭದ್ರಾ ನದೀ ಯತ್ರ ಚಿತ್ರಾಖ್ಯಾ ಚ ಶಿಲಾ ವಿಭೋ ॥ ೧೭

ತದಾಶ್ರಮಪದಂ ಪುಣ್ಯಂ ಪುಣ್ಯದ್ರುಮಲತಾಂಚಿತಮ್ ।
ಪುಣ್ಯದ್ವಿಜಕುಲಾಕೀರ್ಣಂ ಪುಣ್ಯಾಮಲಜಲಾಶಯಮ್ ॥ ೧೮

ಮತ್ತಭ್ರಮರಸಂಗೀತಂ ಮತ್ತಕೋಕಿಲಕೂಜಿತಮ್ ।
ಮತ್ತಬರ್ಹಿನಟಾಟೋಪಂ ಮತ್ತದ್ವಿಜಕುಲಾಕುಲಮ್ ॥ ೧೯

ವಾಯುಃ ಪ್ರವಿಷ್ಟ ಆದಾಯ ಹಿಮನಿರ್ಝರಶೀಕರಾನ್ ।
ಸುಮನೋಭಿಃ ಪರಿಷ್ವಕ್ತೋ ವವಾವುತ್ತಂಭಯನ್ ಸ್ಮರಮ್ ॥ ೨೦

---

ಗಂಧರ್ವರು, ಅಪ್ಸರೆಯರು, ಮನ್ಮಥ, ವಸಂತ, ಮಲಯಾನಿಲ ಮತ್ತು ರಜೋಗುಣದ ಪ್ರಿಯಪುತ್ರನೆನಿಸಿದ ಲೋಭ ಮತ್ತು ಮದ—ಎಂಬುವರನ್ನು ಮುನಿಯ ತಪೋವಿಘ್ನಕ್ಕಾಗಿ ದೇವೇಂದ್ರನು ಕಳಿಸಿದನು. ಅವರು ಹಿಮಾಲಯದ ಉತ್ತರ ಪಾರ್ಶ್ವದಲ್ಲಿದ್ದ ಮಾರ್ಕಂಡೇಯನ ಆಶ್ರಮಕ್ಕೆ ಹೋದರು. ಅಲ್ಲಿ ಪುಷ್ಪಭದ್ರಾನದಿಯು ಹರಿಯುತ್ತದೆ. ಚಿತ್ರಾ ಎಂಬ ಬಣ್ಣಬಣ್ಣದ ಶಿಲಾ ಸಂಚಯವಿದೆ (೧೬–೧೭). ಪುಣ್ಯಕರವಾದ ಮರಬಳ್ಳಿಗಳಿಂದ ತುಂಬಿ, ಪುಣ್ಯಾತ್ಮರಾದ ಋಷಿಗಳಿಂದ ವ್ಯಾಪ್ತವಾಗಿ, ಪುಣ್ಯಕರವೂ ಪರಿಶುದ್ಧವೂ ಆದ ಜಲಾಶಯದಿಂದ ಶೋಭಿಸುತ್ತಿದ್ದ ಆಶ್ರಮವದು. ಅಲ್ಲಿ ಮದಿಸಿದ ದುಂಬಿಗಳು ಹಾಡುತ್ತಿದ್ದವು. ಮದಿಸಿದ ಕೋಗಿಲೆಗಳು ಕೂಗುತ್ತಿದ್ದವು. ಮದಿಸಿದ ನವಿಲುಗಳು ಕುಣಿಯುತ್ತಿದ್ದವು. ಮದಿಸಿದ ಹಕ್ಕಿಗಳು ತುಂಬಿದ್ದವು (೧೮–೧೯). ಅಂತಹ ಆಶ್ರಮವನ್ನು ಮಲಯಾನಿಲನು ಪ್ರವೇಶಿಸಿ ಹಿಮನಿರ್ಝರಗಳ ತುಂತುರು ಹನಿಗಳನ್ನೆತ್ತಿಕೊಂಡು ಹೂಗಳಿಂದ ಆಲಿಂಗಿತನಾಗಿ, ಮನ್ಮಥನನ್ನು ಉದ್ರೇಕಗೊಳಿಸುತ್ತ, ಬೀಸಲಾರಂಭಿಸಿದನು. ಉದಿಸುವ ಚಂದ್ರನೆಂಬ ರಜನೀಮುಖವನ್ನು ತೋರಿಸುತ್ತ, ಚಿಗುರೆಲೆಗಳ ಗೊಂಚಲುಗಳಿಂದಲೂ ದಟ್ಟವಾದ ಮರಬಳ್ಳಿಗಳ ಜಾಲಗಳಿಂದಲೂ ಸಮೇತನಾಗಿ

ಉದ್ಯಚ್ಚಂದ್ರನಿಶಾವಕ್ತ್ರಃ ಪ್ರವಾಲಸ್ತಬಕಾಲಿಭಿಃ ।
ಗೋಪದ್ರುಮಲತಾಜಾಲೈಸ್ತತ್ರಾಸೀತ್ ಕುಸುಮಾಕರಃ ॥ ೨೧

ಅನ್ವೀಯಮಾನೋ ಗಂಧರ್ವೈರ್ಗೀತವಾದಿತ್ರಯೂಥಕೈಃ ।
ಅದೃಶ್ಯತಾತ್ತಚಾಪೇಷುಃ ಸ್ವಃ ಸ್ತ್ರೀಯೂಥಪತಿಃ ಸ್ಮರಃ ॥ ೨೨

ಹುತ್ವಾಗ್ನಿಂ ಸಮುಪಾಸೀನಂ ದದೃಶುಃ ಶಕ್ರಕಿಂಕರಾಃ ।
ಮೀಲಿತಾಕ್ಷಂ ದುರಾಧರ್ಷಂ ಮೂರ್ತಿಮಂತಮಿವಾನಲಮ್ ॥ ೨೩

ನನೃತುಸ್ತಸ್ಯ ಪುರತಃ ಸ್ತ್ರಿಯೋಽಥೋ ಗಾಯಕಾ ಜಗುಃ ।
ಮೃದಂಗವೀಣಾಪಣವೈರ್ವಾದ್ಯಂ ಚಕ್ರುರ್ಮನೋರಮಮ್ ॥ ೨೪

ಸಂದಧೇಽಸ್ತ್ರಂ ಸ್ವಧನುಷಿ ಕಾಮಃ ಪಂಚಮುಖಂ ತದಾ ।
ಮಧುರ್ಮನೋ ರಜಸ್ತೋಕ ಇಂದ್ರಭೃತ್ಯಾ ವ್ಯಕಂಪಯನ್ ॥ ೨೫

ಕ್ರೀಡಂತ್ಯಾಃ ಪುಂಜಿಕಸ್ಥಲ್ಯಾಃ ಕಂದುಕೈಃ ಸ್ತನಗೌರವಾತ್ ।
ಭೃಶಮುದ್ವಿಗ್ನಮಧ್ಯಾಯಾಃ ಕೇಶವಿಸ್ರಂಸಿತಸ್ರಜಃ ॥ ೨೬

---

ವಸಂತನು ಮೈದೋರಿದನು (೨೦–೨೧). ಸಂಗೀತವನ್ನು ಹಾಡುತ್ತ ವಾದ್ಯವನ್ನು ನುಡಿಸುತ್ತಿದ್ದ ಗಂಧರ್ವರ ಹಿಮ್ಮೇಳದೊಡನೆ ಅಪ್ಸರಃಸ್ತ್ರೀಯರ ಅಧಿಪತಿಯಾದ ಮನ್ಮಥನು ಬಿಲ್ಲುಬಾಣಗಳನ್ನು ಧರಿಸಿ ಕಾಣಿಸಿಕೊಂಡನು. ಇತ್ತಲಾಗಿ ಅಗ್ನಿಯಲ್ಲಿ ಹೋಮಮಾಡಿ, ಅದರ ಬಳಿಯಲ್ಲಿ ಮೂರ್ತಿಮಂತನಾದ ಇನ್ನೊಬ್ಬ ಅಗ್ನಿಯೋ ಎಂಬಂತೆ ಕಣ್ಣುಮುಚ್ಚಿ ಕುಳಿತಿದ್ದ ದುರ್ಧರ್ಷನಾದ ಮಾರ್ಕಂಡೇಯನನ್ನು ವಸಂತನೇ ಮೊದಲಾದ ಶಕ್ರಕಿಂಕರರು ಕಂಡರು (೨೨–೨೩). ಮುನಿಯ ಎದುರಿಗೆ ಅಪ್ಸರೆಯರು ನರ್ತನವನ್ನು ಪ್ರಾರಂಭಿಸಿದರು. ಗಂಧರ್ವರು ಹಾಡುತ್ತ ಮೃದಂಗ, ವೀಣೆ, ಪಣವ—ಮೊದಲಾದವುಗಳಿಂದ ಮನೋರಮವಾದ ವಾದ್ಯವನ್ನು ನುಡಿಸತೊಡಗಿದರು. ಮನ್ಮಥನು ತನ್ನ [1]ಪಂಚಮುಖದ ಅಸ್ತ್ರವನ್ನು ಧನುಸ್ಸಿಗೆ ಹೂಡಿದನು. ವಸಂತ, ರಜೋಗುಣದ ಪುತ್ರನಾದ ಲೋಭ—ಮೊದಲಾದ ಶಕ್ರಕಿಂಕರರು ಮುನಿಯ ಮನಸ್ಸನ್ನು ಅಲ್ಲಾಡಿಸಲು ಯತ್ನಿಸಿದರು (೨೪–೨೫). ಆಗ ಪುಂಜಿಕಸ್ಥಲಿಯೆಂಬ ಅಪ್ಸರೆಯು ಚೆಂಡುಗಳನ್ನು ಹಾರಿಸುತ್ತ

---

1. ಶೋಷಣ, ದೀಪನ, ಸಂಮೋಹನ, ತಾಪನ, ಉನ್ಮಾದನ—ಇವು ಪಂಚಮುಖಗಳು ಅಥವಾ ಪಂಚಬಾಣಗಳು.

ಇತಸ್ತತೋ ಭ್ರಮದ್ದೃಷ್ಟೇಶ್ಚಲಂತ್ಯಾ ಅನುಕಂದುಕಮ್ ।
ವಾಯುರ್ಜಹಾರ ತದ್ವಾಸಃ ಸೂಕ್ಷ್ಮಂ ತ್ರುಟಿತಮೇಖಲಮ್ ॥ ೨೭

ವಿಸಸರ್ಜ ತದಾ ಬಾಣಂ ಮತ್ವಾ ತಂ ಸ್ವಜಿತಂ ಸ್ಮರಃ ।
ಸರ್ವಂ ತತ್ರಾಭವನ್ಮೋಘಮನೀಶಸ್ಯ ಯಥೋದ್ಯಮಃ ॥ ೨೮

ತ ಇತ್ಥಮಪಕುರ್ವಂತೋ ಮುನೇಸ್ತತ್ತೇಜಸಾ ಮುನೇ ।
ದಹ್ಯಮಾನಾ ನಿವವೃತುಃ ಪ್ರಬೋಧ್ಯಾಹಿಮಿವಾರ್ಭಕಾಃ ॥ ೨೯

ಇತೀಂದ್ರಾನುಚರೈರ್ಬ್ರಹ್ಮನ್ ಧರ್ಷಿತೋಽಪಿ ಮಹಾಮುನಿಃ ।
ಯನ್ನಾಗಾದಹಮೋ ಭಾವಂ ನ ತಚ್ಚಿತ್ರಂ ಮಹತ್ಸು ಹಿ ॥ ೩೦

ದೃಷ್ಟ್ವಾ ನಿಸ್ತೇಜಸಂ ಕಾಮಂ ಸಗಣಂ ಭಗವಾನ್ ಸ್ವರಾಟ್ ।
ಶ್ರುತ್ವಾನುಭಾವಂ ಬ್ರಹ್ಮರ್ಷೇರ್ವಿಸ್ಮಯಂ ಸಮಗಾತ್ ಪರಮ್ ॥ ೩೧

---

ಆಟವಾಡುತ್ತಿದ್ದಳು. ಸ್ತನಗಳ ಭಾರಕ್ಕೆ ಅವಳ ನಡು ವಿಶೇಷವಾಗಿ ಬಳುಕುತ್ತಿತ್ತು. ತಲೆಯಲ್ಲಿ ಮುಡಿದಿದ್ದ ಹೂಮಾಲೆ ಜಾರಿ ಕೇಶಗಳಲ್ಲಿ ಸಿಕ್ಕಿಕೊಂಡಿತ್ತು. ಕಣ್ಣನ್ನು ಅತ್ತಿತ್ತ ಓಡಿಸುತ್ತ ಚೆಂಡು ಹಾರಿದಂತೆ ಅದರೊಡನೆ ಚಲಿಸುತ್ತಿದ್ದಳು. ಆ ಸಮಯದಲ್ಲಿ ಮಲಯಾನಿಲನು ಆಕೆಯ ತೆಳುಸೀರೆಯನ್ನು ಮೇಖಲೆಯಿಂದ ಕಳಚಿಸಿ ಹಾರಿಸಿಬಿಟ್ಟನು! (೨೬–೨೭). ಆ ಹೊತ್ತಿಗೆ ಸರಿಯಾಗಿ, 'ಮುನಿಯನ್ನು ಗೆದ್ದೆನು!' ಎಂದು ಭಾವಿಸಿ ಮನ್ಮಥನು ತನ್ನ ಅಸ್ತ್ರವನ್ನು ಪ್ರಯೋಗಿಸಿದನು. ಆದರೆ ದುರ್ದೈವಿಯ ಉದ್ಯಮದಂತೆ ಎಲ್ಲವೂ ವ್ಯರ್ಥವಾಯಿತು! ಮಲಗಿದ್ದ ಸರ್ಪವನ್ನು ಮಕ್ಕಳು ಕೆಣಕಿ ಎಬ್ಬಿಸಿದಂತಾಯಿತು! ಮಾರ್ಕಂಡೇಯಮುನಿಯನ್ನು ಕೆಣಕಲು ಹೋದ ಅವರೆಲ್ಲರೂ ಆತನ ತೇಜಸ್ಸನ್ನು ತಡೆಯಲಾರದೆ ತಪ್ತರಾಗಿ ಹಿಂದಿರುಗಿದರು (೨೮–೨೯). ಶೌನಕಮುನಿಗಳೆ, ಇಂದ್ರಾನುಚರರು ಹೀಗೆ ಕೆಣಕಿದರೂ ಆ ಮಹರ್ಷಿಯು ಅಹಂಕಾರದ ಯಾವ ವಿಕಾರವನ್ನೂ ತಳೆಯಲಿಲ್ಲ. ಮಹಾತ್ಮರಲ್ಲಿ ಅದೇನೂ ಅಚ್ಚರಿಯಲ್ಲವಷ್ಟೆ! ತೇಜೋಹೀನನಾಗಿ ಹಿಂದಿರುಗಿ ಬಂದ ಮನ್ಮಥನನ್ನೂ ಅವನ ಪರಿವಾರವನ್ನೂ ನೋಡಿದ ಸ್ವರ್ಗಾಧಿಪತಿಯಾದ ಇಂದ್ರನು ಬ್ರಹ್ಮರ್ಷಿಯ ಪ್ರಭಾವವನ್ನು ಕೇಳಿ ವಿಸ್ಮಿತನಾದನು (೩೦–೩೧).

ತಸ್ಯೈವಂ ಯುಂಜತಶ್ಚಿತ್ತಂ ತಪಸ್ಸ್ವಾಧ್ಯಾಯಸಂಯಮೈಃ ।
ಅನುಗ್ರಹಾಯಾವಿರಾಸೀನ್ನರನಾರಾಯಣೋ ಹರಿಃ ॥ ೩೨

ತೌ ಶುಕ್ಲಕೃಷ್ಣೌ ನವಕಂಜಲೋಚನೌ
ಚತುರ್ಭುಜೌ ರೌರವವಲ್ಕಲಾಂಬರೌ ।
ಪವಿತ್ರಪಾಣೀ ಉಪವೀತಕಂ ತ್ರಿವೃತ್
ಕಮಂಡಲುಂ ದಂಡಮೃಜುಂ ಚ ವೈಣವಮ್ ॥ ೩೩

ಪದ್ಮಾಕ್ಷಮಾಲಾಮುತ ಜಂತುಮಾರ್ಜನಂ
ವೇದಂ ಚ ಸಾಕ್ಷಾತ್ತಪ ಏವ ರೂಪಿಣೌ ।
ತಪತ್ತಡಿದ್ವರ್ಣಪಿಶಂಗರೋಚಿಷಾ
ಪ್ರಾಂಶೂ ದಧಾನೌ ವಿಬುಧರ್ಷಭಾರ್ಚಿತೌ ॥ ೩೪

ತೇ ವೈ ಭಗವತೋ ರೂಪೇ ನರನಾರಾಯಣಾವೃಷೀ ।
ದೃಷ್ಟ್ವೋತ್ಥಾಯಾದರೇಣೋಚ್ಚೈರ್ನನಾಮಾಂಗೇನ ದಂಡವತ್ ॥ ೩೫

---

ಹೀಗೆ ತಪಃಸ್ವಾಧ್ಯಾಯ ಮನೋನಿಗ್ರಹಗಳಿಂದ ಚಿತ್ತವನ್ನು ನಿರೋಧಿಸಿ ಧ್ಯಾನಾಸಕ್ತನಾದ ಮುನಿಯನ್ನು ಅನುಗ್ರಹಿಸುವುದಕ್ಕಾಗಿ ಶ್ರೀಹರಿಯು ನರನಾರಾಯಣ ರೂಪದಿಂದ ಪ್ರಕಟನಾದನು (೩೨). ಆ ನರನಾರಾಯಣಋಷಿಗಳು [1]ಶುಕ್ಲ-ಕೃಷ್ಣ ವರ್ಣದವರೂ ನವಕಮಲನೇತ್ರರೂ ಚತುರ್ಭುಜರೂ ಕೃಷ್ಣಾಜಿನ-ವಲ್ಕಲಗಳನ್ನು ಧರಿಸಿದವರೂ ಪವಿತ್ರಯುಕ್ತಪಾಣಿಗಳೂ ಆಗಿದ್ದರಲ್ಲದೆ ಮೂರೆಳೆಯ ಯಜ್ಞೋಪವೀತವನ್ನೂ ಕಮಂಡಲುವನ್ನೂ ನೆಟ್ಟಗಿದ್ದ ವೇಣುದಂಡವನ್ನೂ ಹಿಡಿದಿದ್ದರು (೩೩). ಅಲ್ಲದೆ ಪದ್ಮಾಕ್ಷಮಾಲೆಯನ್ನೂ ಕ್ರಿಮಿಮಾರ್ಜಕವಾದ ದರ್ಭೆಗಳ ಮುಷ್ಟಿಯನ್ನೂ ಕೈಯಲ್ಲಿ ಹಿಡಿದುಕೊಂಡಿದ್ದರು. ಮಿಂಚುವ ಮಿಂಚಿನ ಕಾಂತಿಯಿಂದ ಯುಕ್ತರಾದ ಅವರಿಬ್ಬರೂ ಮೂರ್ತಿಮತ್ತಾದ ತಪಸ್ಸುಗಳಂತಿದ್ದರು. ದೇವೇಂದ್ರಪೂಜಿತರಾದ ಆ ನರನಾರಾಯಣಋಷಿಗಳಿಗೆ ಎತ್ತರವಾದ ನಿಲುವಿತ್ತು (೩೪). ಭಗವಂತನ ಅವತಾರಗಳಾದ ಆ ನರನಾರಾಯಣಋಷಿಗಳನ್ನು ನೋಡಿ ಮಾರ್ಕಂಡೇಯನು ಅತ್ಯಾದರದಿಂದ ಎದ್ದುನಿಂತು ದಂಡದಂತೆ ದೇಹವನ್ನು ಚಾಚಿ ನಮಸ್ಕರಿಸಿದನು. ಅವರೀರ್ವರ ಸಂದರ್ಶನದಿಂದ ಮುನಿಯ ದೇಹೇಂದ್ರಿಯ

---

1. ನರನು ಶುಕ್ಲವರ್ಣ, ನಾರಾಯಣನು ಕೃಷ್ಣವರ್ಣ.

ಸ ತತ್ಸಂದರ್ಶನಾನಂದನಿರ್ವೃತಾತ್ಮೇಂದ್ರಿಯಾಶಯಃ ।
ಹೃಷ್ಟರೋಮಾಶ್ರುಪೂರ್ಣಾಕ್ಷೋ ನ ಸೇಹೇ ತಾವುದೀಕ್ಷಿತುಮ್ ॥ ೩೬

ಉತ್ಥಾಯ ಪ್ರಾಂಜಲಿಃ ಪ್ರಹ್ವ ಔತ್ಸುಕ್ಯಾದಾಶ್ಲಿಷನ್ನಿವ ।
ನಮೋ ನಮ ಇತೀಶಾನೌ ಬಭಾಷೇ ಗದ್ಗದಾಕ್ಷರಃ ॥ ೩೭

ತಯೋರಾಸನಮಾದಾಯ ಪಾದಯೋರವನಿಜ್ಯ ಚ ।
ಅರ್ಹಣೇನಾನುಲೇಪೇನ ಧೂಪಮಾಲ್ಯೈರಪೂಜಯತ್ ॥ ೩೮

ಸುಖಮಾಸನಮಾಸೀನೌ ಪ್ರಸಾದಾಭಿಮುಖೌ ಮುನೀ ।
ಪುನರಾನಮ್ಯ ಪಾದಾಭ್ಯಾಂ ಗರಿಷ್ಠಾವಿದಮಬ್ರವೀತ್ ॥ ೩೯

ಮಾರ್ಕಂಡೇಯ ಉವಾಚ—

ಕಿಂ ವರ್ಣಯೇ ತವ ವಿಭೋ ಯದುದೀರಿತೋಽಸುಃ
ಸಂಸ್ಪಂದತೇ ತಮನು ವಾಙ್ಮನ ಇಂದ್ರಿಯಾಣಿ ।
ಸ್ಪಂದಂತಿ ವೈ ತನುಭೃತಾಮಜಶರ್ವಯೋಶ್ಚ
ಸ್ವಸ್ಯಾಪ್ಯಥಾಪಿ ಭಜತಾಮಸಿ ಭಾವಬಂಧುಃ ॥ ೪೦

---

ಮನಸ್ಸುಗಳು ಆನಂದದಲ್ಲಿ ಮುಳುಗಿದವು. ರೋಮಾಂಚನವಾಯಿತು. ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕಿದ್ದರಿಂದ ಮಾರ್ಕಂಡೇಯನಿಗೆ ಅವರನ್ನು ದೃಷ್ಟಿಸಿ ನೋಡಲಾಗಲಿಲ್ಲ (೩೫–೩೬). ಅವರಿಗೆ ದಂಡಪ್ರಣಾಮವನ್ನು ಮಾಡಿ ಎದ್ದು ವಿನಯದಿಂದ ಬಗ್ಗಿ ಕೈಮುಗಿದುಕೊಂಡು ಔತ್ಸುಕ್ಯದಿಂದ (ಈಶ್ವರರಾದ) ಅವರನ್ನು ಆಲಿಂಗಿಸಿಕೊಳ್ಳುವನೋ ಎಂಬಂತೆ ಗದ್ಗದಿಸುತ್ತ 'ನಮೋ ನಮಃ' ಎಂದಿಷ್ಟೇ ನುಡಿದನು (೩೭). ಅನಂತರ ಆವರಿಬ್ಬರಿಗೂ ಅವನು ಪೀಠವನ್ನಿತ್ತು ಆ ಋಷಿಗಳ ಪಾದಗಳನ್ನು ತೊಳೆದು ಯೋಗ್ಯವಾದ ಗಂಧಮಾಲ್ಯ ಧೂಪಾದಿಗಳಿಂದ ಪೂಜಿಸಿದನು. ಆಮೇಲೆ ಸುಖಾಸೀನರೂ ಪ್ರಸನ್ನರೂ ಪೂಜ್ಯತಮರೂ ಆದ ಆ ನರನಾರಾಯಣಋಷಿಗಳನ್ನು ಮಾರ್ಕಂಡೇಯನು ಈ ರೀತಿಯಾಗಿ ಸ್ತುತಿಸಿದನು (೩೮–೩೯) : "ಹೇ [1]ಸ್ವಾಮಿ, ನಿನ್ನನ್ನು ಏನೆಂದು ವರ್ಣಿಸಬಲ್ಲೆನು?

---

1. ನರನಾರಾಯಣರಿಬ್ಬರೂ ವಿಷ್ಣುಸ್ವರೂಪರೇ ಆದ್ದರಿಂದ ಇಲ್ಲಿ ಏಕವಚನವನ್ನು ಬಳಸಿದೆ.

ಮೂರ್ತೀ ಇಮೇ ಭಗವತೋ ಭಗವಂಸ್ತ್ರಿಲೋಕ್ಯಾಃ
ಕ್ಷೇಮಾಯ ತಾಪವಿರಮಾಯ ಚ ಮೃತ್ಯುಜಿತ್ಯೈ ।
ನಾನಾ ಬಿಭರ್ಷ್ಯವಿತುಮನ್ಯತನೂರ್ಯಥೇದಂ
ಸೃಷ್ಟ್ವಾ ಪುನರ್ಗ್ರಸಸಿ ಸರ್ವಮಿವೋರ್ಣನಾಭಿಃ ॥ ೪೧

ತಸ್ಮಾವಿತುಃ ಸ್ಥಿರಚರೇಶಿತುರಂಘ್ರಿಮೂಲಂ
ಯತ್ಸ್ಥಂ ನ ಕರ್ಮಗುಣಕಾಲರುಜಃ ಸ್ಪೃಶಂತಿ ।
ಯದ್ ವೈ ಸ್ತುವಂತಿ ನಿನಮಂತಿ ಯಜಂತ್ಯಭೀಕ್ಷ್ಣಂ
ಧ್ಯಾಯಂತಿ ವೇದಹೃದಯಾ ಮುನಯಸ್ತದಾಪ್ತ್ಯೈ ॥ ೪೨

ನಾನ್ಯಂ ತದಾಂಘ್ರ್ಯುಪನಯಾದಪವರ್ಗಮೂರ್ತೇಃ
ಕ್ಷೇಮಂ ಜನಸ್ಯ ಪರಿತೋಭಿಯ ಈಶ ವಿದ್ಮಃ ।
ಬ್ರಹ್ಮಾ ಬಿಭೇತ್ಯಲಮತೋ ದ್ವಿಪರಾರ್ಧಧಿಷ್ಣ್ಯಃ
ಕಾಲಸ್ಯ ತೇ ಕಿಮುತ ತತ್ಕೃತಭೌತಿಕಾನಾಮ್ ॥ ೪೩

---

ಬ್ರಹ್ಮಶಿವಾದಿಗಳ ಪ್ರಾಣವೂ ಅಂತೆಯೇ ನನ್ನ ಪ್ರಾಣವೂ ನಿನ್ನ ಪ್ರೇರಣೆಯಿಂದಲೇ ಕಾರ್ಯೋನ್ಮುಖವಾಗುತ್ತದೆ. ಪ್ರಾಣವನ್ನನುಸರಿಸಿ ವಾಙ್ಮನ ಇಂದ್ರಿಯಗಳು ಸ್ಪಂದಿಸುತ್ತವೆ. ನಿನ್ನನ್ನು ಭಜಿಸತಕ್ಕವರಿಗೆ ಆತ್ಮಬಂಧುವಾಗಿದ್ದೀಯೆ (೪೦). ಹೇ ಭಗವನ್, ನಿನ್ನ ಈ ಎರಡು ಮೂರ್ತಿಗಳು ಲೋಕತ್ರಯದ ಪಾಲನೆಗಾಗಿ, ತಾಪವಿರತಿಗಾಗಿ ಮತ್ತು ದುಃಖಗಳ ಅತ್ಯಂತ ನಿವೃತ್ತಿರೂಪವಾದ ಮೋಕ್ಷಕ್ಕಾಗಿ ಇರುತ್ತವೆ. ಜಗದ್ರಕ್ಷಣೆಗೋಸ್ಕರ ಮತ್ಸ್ಯಾದಿ ನಾನಾರೂಪಗಳನ್ನು ಹೇಗೆ ಧರಿಸುವೆಯೋ ಹಾಗೆಯೇ ಈ ಎರಡು ರೂಪಗಳು. ಜೇಡರಹುಳುವಿನಂತೆ ಜಗತ್ತನ್ನು ಸೃಜಿಸಿ ಮತ್ತೆ ನುಂಗಿಬಿಡುತ್ತೀಯೆ! (೪೧). ಈ ಚರಾಚರ ಜಗತ್ತಿಗೆ ಈಶ್ವರನೂ ಪಾಲಕನೂ ಆದ ನಿನ್ನ ಪಾದಮೂಲವನ್ನು ಭಜಿಸುತ್ತಿದ್ದೇನೆ. ಈ ಪಾದಮೂಲವನ್ನು ಸೇರಿಕೊಂಡವರಿಗೆ ಕರ್ಮ, ಗುಣ, ಕಾಲಗಳ ಯಾವ ಪೀಡೆಗಳೂ ಮುಟ್ಟುವುದೂ ಇಲ್ಲ. ಈ ಪಾದಮೂಲವನ್ನೇ ವೇದಜ್ಞರಾದ ಮುನಿಗಳು ಅದನ್ನು ಪಡೆಯುವುದಕ್ಕಾಗಿ ಸ್ತುತಿಸುತ್ತಾರೆ, ನಮಸ್ಕರಿಸುತ್ತಾರೆ, ಪೂಜಿಸುತ್ತಾರೆ, ಸದಾ ಧ್ಯಾನಿಸುತ್ತಾರೆ (೪೨). ನಿತ್ಯಮುಕ್ತನೂ ಮೋಕ್ಷಕ್ಕೆ ಕಾರಣನೂ ಆದ ನಿನ್ನ ಶ್ರೀಚರಣದ ಪ್ರಾಪ್ತಿಯನ್ನು ಬಿಟ್ಟರೆ, ಸರ್ವತೋಭಯಗ್ರಸ್ತರಾದ ಜನರಿಗೆ

ತದ್ ವೈ ಭಜಾಮ್ಯೃತಧಿಯಸ್ತವ ಪಾದಮೂಲಂ
ಹಿತ್ವೇದಮಾತ್ಮಚ್ಛದಿ ಚಾತ್ಮಗುರೋಃ ಪರಸ್ಯ ।
ದೇಹಾದ್ಯಪಾರ್ಥಮಸದಂತ್ಯಮಭಿಜ್ಞಮಾತ್ರಂ
ವಿಂದೇತ ತೇ ತರ್ಹಿ ಸರ್ವಮನೀಪ್ಸಿತಾರ್ಥಮ್ ॥ ೪೪

ಸತ್ತ್ವಂ ರಜಸ್ತಮ ಇತೀಶ ತವಾತ್ಮಬಂಧೋ
ಮಾಯಾಮಯಾಃ ಸ್ಥಿತಿಲಯೋದಯಹೇತವೋಽಸ್ಯ ।
ಲೀಲಾ ಧೃತಾ ಯದಪಿ ಸತ್ತ್ವಮಯೀ ಪ್ರಶಾಂತ್ಯೈ
ನಾನ್ಯೇ ನೃಣಾಂ ವ್ಯಸನಮೋಹಭಿಯಶ್ಚ ಯಾಭ್ಯಾಮ್ ॥೪೫

---

ಇನ್ನೊಂದು ಕ್ಷೇಮಸ್ಥಳವನ್ನು ನಾವು ಕಾಣೆವು. ಹೇ ಸ್ವಾಮಿ, ಎರಡು ಪರಾರ್ಧಗಳ ಆಯುಸ್ಸನ್ನು ಪಡೆದಿರುವ ಬ್ರಹ್ಮನೂ ಸಹ ನಿನ್ನ (ಭ್ರೂವಿಜೃಂಭಣರೂಪವಾದ) ಕಾಲಕ್ಕೆ ಹೆದರಿ ನಡುಗುತ್ತಾನೆ! ಇನ್ನು ಆತನು ಸೃಷ್ಟಿಸಿರುವ ಭೌತಿಕಪ್ರಾಣಿಗಳ ವಿಷಯವಾಗಿ ಹೇಳತಕ್ಕದ್ದೇನಿದೆ? (೪೩.) ಆದ್ದರಿಂದ ಸತ್ಯಜ್ಞಾನಸ್ವರೂಪನೂ ಜೀವನಿಯಾಮಕನೂ ಶ್ರೇಷ್ಠನೂ ಆದ ನಿನ್ನ ಪಾದಮೂಲವನ್ನೇ ಭಜಿಸುತ್ತೇನೆ. ಸ್ವಾತ್ಮವನ್ನೇ ಆವರಿಸತಕ್ಕದ್ದೂ ನಿಷ್ಫಲವೂ ತುಚ್ಛವೂ ನಶ್ವರವೂ ತೋರಿಕೆಯಲ್ಲಿ ಮಾತ್ರ ಇರತಕ್ಕದ್ದೂ ಆದ ಈ ದೇಹಾದಿಗಳನ್ನು ಎಂದಿಗೂ ಭಜಿಸದೆ ತ್ಯಜಿಸುತ್ತೇನೆ. ಮನುಷ್ಯನು ನಿನ್ನ ಪಾದಮೂಲವನ್ನು ಭಜಿಸಿದರೆ ಅಭೀಪ್ಸಿತವಾದ ಸಕಲವನ್ನೂ ಪಡೆಯುತ್ತಾನಲ್ಲವೆ? (೪೪). ಹೇ ಪ್ರಭುವೆ, ಆತ್ಮಬಂಧುವೆ, ವಿಶ್ವದ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣಗಳಾದ ರಜಃಸತ್ತ್ವತಮೋಗುಣಗಳು ನಿನ್ನ ಮಾಯೆಗಳಾಗಿ ನಿನ್ನ ಲೀಲೆಗಳಾಗಿ ಉಳಿದಿದ್ದರೂ, ಅವುಗಳಲ್ಲಿ ನಿನ್ನ ಸತ್ತ್ವಮಯವಾದ ಮೂರ್ತಿಯು ಜನರಿಗೆ ಪ್ರಕೃಷ್ಟಶಾಂತಿಯನ್ನೀಯುವುದು, ಇತರ [1]ರಜೋಮೂರ್ತಿಯಾಗಲಿ ತಮೋಮೂರ್ತಿಯಾಗಲಿ ಅಲ್ಲ. ಅವುಗಳ ಭಜನೆಯಿಂದ ವ್ಯಸನ

1. ಬ್ರಹ್ಮ, ವಿಷ್ಣು, ರುದ್ರ—ಈ ಮೂವರೂ ಪರಬ್ರಹ್ಮದ ಲೀಲಾಮೂರ್ತಿಗಳೇ ಸರಿ. ಆದರೂ ಸತ್ತ್ವಮೂರ್ತಿಯಾದ ವಿಷ್ಣುವಿನಿಂದಲೇ ಜನರಿಗೆ ಶ್ರೇಯಸ್ಸಾಗುವುದು—ಎಂದು ಅಭಿಪ್ರಾಯ.

ತಸ್ಮಾತ್ತ್ವಮೇಹ ಭಗವನ್ನಥ ತಾವಕಾನಾಂ
ಶುಕ್ಲಾಂ ತನುಂ ಸ್ವದಯಿತಾಂ ಕುಶಲಾ ಭಜಂತಿ ।
ಯತ್ ಸಾತ್ವತಾಃ ಪುರುಷರೂಪಮುಶಂತಿ ಸತ್ತ್ವಂ
ಲೋಕೋ ಯತೋಽಭಯಮುತಾತ್ಮಸುಖಂ ನ
ಚಾನ್ಯತ್ ॥ ೪೬

ತಸ್ಮೈ ನಮೋ ಭಗವತೇ ಪುರುಷಾಯ ಭೂಮ್ನೇ
ವಿಶ್ವಾಯ ವಿಶ್ವಗುರವೇ ಪರದೇವತಾಯೈ ।
ನಾರಾಯಣಾಯ ಋಷಯೇ ಚ ನರೋತ್ತಮಾಯ
ಹಂಸಾಯ ಸಂಯತಗಿರೇ ನಿಗಮೇಶ್ವರಾಯ ॥ ೪೭

ಯಂ ವೈ ನ ವೇದ ವಿತಥಾಕ್ಷಪಥೈರ್ಭ್ರಮದ್ಧೀಃ
ಸಂತಂ ಸ್ವಖೇಷ್ವಸುಷು ಹೃದ್ಯಪಿ ದೃಕ್ಪಥೇಷು ।
ತನ್ಮಾಯಯಾಽಽವೃತಮತಿಃ ಸ ಉ ಏವ ಸಾಕ್ಷಾ-
ದಾದ್ಯಸ್ತವಾಖಿಲಗುರೋರುಪಸಾದ್ಯ ವೇದಮ್ ॥ ೪೮

---

ಮೋಹಭಯಗಳು ಉಂಟಾಗುತ್ತವೆ (೪೫). ಆದ್ದರಿಂದ ಹೇ ಭಗವನ್, ಕುಶಲ ಕಾಮಿಗಳಾದ ಭಕ್ತರು ತಮಗೆ ಪ್ರಿಯವಾಗಿರುವ ಶುಕ್ಲವರ್ಣದ ನಿನ್ನ ನಾರಾಯಣ ಸ್ವರೂಪವನ್ನೂ ನಿನ್ನ ಭಕ್ತರಾದ ನರರಿಗೆ ಪ್ರತಿನಿಧಿಯಾದ ನರಋಷಿಸ್ವರೂಪವನ್ನೂ ಭಜಿಸುತ್ತಾರೆ. ಸಾತ್ತ್ವತರು ಸತ್ತ್ವಗುಣದ ಪುರುಷಮೂರ್ತಿಯನ್ನು ಪ್ರೀತಿಸುತ್ತಾರೆ. ಏಕೆಂದರೆ, ಸತ್ತ್ವಗುಣದಿಂದಲೇ ವೈಕುಂಠಲೋಕವೂ ಅಭಯವೂ ಆತ್ಮ ಸುಖವೂ ದೊರಕುವುದೆಂದು ನಂಬುತ್ತಾರೆ, ಇನ್ನೊಂದನ್ನು ಅವರು ನಂಬುವುದಿಲ್ಲ (೪೬). ಭಗವಂತನೂ ಪುರುಷೋತ್ತಮನೂ ಭೂಮನೂ ವಿಶ್ವನೂ ವಿಶ್ವಗುರುವೂ ಪರದೇವತೆಯೂ ಆದ ನಾರಾಯಣಋಷಿಗೆ ನಮಸ್ಕಾರ. ಹಂಸನೂ ವಾಙ್ನಿಯಮವುಳ್ಳವನೂ ವೇದಮಾರ್ಗಪ್ರವರ್ತಕನೂ ಆದ ನರೋತ್ತಮಋಷಿಗೆ ನಮಸ್ಕಾರ (೪೭). ಕಪಟಗಳಾದ ಇಂದ್ರಿಯವರ್ಗಗಳಿಂದ ಬುದ್ಧಿಯು ಭ್ರಮೆಗೆ ಒಳಗಾಗಿರುವುದರಿಂದ ಮನುಷ್ಯನು ನಿನ್ನನ್ನು ತಿಳಿಯಲಾರದೆ ಹೋಗಿದ್ದಾನೆ. ತನ್ನ ಇಂದ್ರಿಯಗಳಲ್ಲಿ, ಪ್ರಾಣಗಳಲ್ಲಿ, ಹೃದಯದಲ್ಲಿ, ಕಾಣುವ ಎಲ್ಲ ವಸ್ತುಗಳಲ್ಲಿ ನೀನು

ಯದ್ದರ್ಶನಂ ನಿಗಮ ಆತ್ಮರಹಃಪ್ರಕಾಶಂ
ಮುಹ್ಯಂತಿ ಯತ್ರ ಕವಯೋಽಜಪರಾ ಯತಂತಃ ।
ತಂ ಸರ್ವವಾದವಿಷಯಪ್ರತಿರೂಪಶೀಲಂ
ವಂದೇ ಮಹಾಪುರುಷಮಾತ್ಮನಿಗೂಢಬೋಧಮ್ ॥ ೪೯

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ಅಷ್ಟಮಾಧ್ಯಾಯಃ



ನೆಲೆಸಿದ್ದರೂ ಕಾಣುತ್ತಿಲ್ಲ. ಏಕೆಂದರೆ, ನಿನ್ನ ಮಾಯೆಯಿಂದ ಮನುಷ್ಯನ ಬುದ್ಧಿ ಮುಚ್ಚಿಹೋಗಿರುತ್ತದೆ. ಆದರೆ ವಿಶ್ವಗುರುವಾದ ನಿನ್ನಿಂದ ವೇದಾರ್ಥವನ್ನು ತಿಳಿದಾಗ, ಹಿಂದೆ ಭ್ರಾಂತನಾಗಿದ್ದ ಆ ಮನುಷ್ಯನೇ ನಿನ್ನನ್ನು ಸಾಕ್ಷಾತ್ತಾಗಿ ಎಲ್ಲೆಲ್ಲಿಯೂ ನೋಡಲು ಸಮರ್ಥನಾಗಿಬಿಡುತ್ತಾನೆ! (೪೮). ಆತ್ಮನಾದ ನಿನ್ನ ದರ್ಶನವು ವೇದದಿಂದಲೇ ಆಗತಕ್ಕದ್ದು. ವೇದವು ಆತ್ಮರಹಸ್ಯವನ್ನು ಪ್ರಕಾಶಗೊಳಿಸುತ್ತದೆ. ಬ್ರಹ್ಮನೇ ಮೊದಲಾದ ವಿದ್ವಾಂಸರೂ ಸಹ (ಸಾಂಖ್ಯ ಯೋಗಾದ್ಯುಪಾಯಗಳಿಂದ) ಎಷ್ಟು ಪ್ರಯತ್ನಿಸಿದರೂ ಸತ್ಯವನ್ನರಿಯಲಾರದೆ ಮೋಹಗೊಂಡಿದ್ದಾರೆ. ಏಕೆಂದರೆ, ಯಾರು ಹೇಗೆ ವಾದಮಾಡಿದರೂ ಸಹ ಸರ್ವ ವಾದಗಳಿಗೂ ಅನುರೂಪನಾಗಿಯೇ ನೀನು ಗೋಚರಿಸಿಬಿಡುತ್ತೀಯೆ! ದೇಹಾದಿ ಸಂಘಾತದಿಂದ ನಿನ್ನ ಜ್ಞಾನವು ನಿಗೂಢವಾಗಿಬಿಟ್ಟಿದೆ! ಹೇ ಮಹಾಪುರುಷ, ನಿನಗೆ ನಮೋ ನಮಃ" ಎಂದು ಸ್ತುತಿಸಿದನು (೪೯).

ಇಲ್ಲಿಗೆ ಶ್ರೀಮದ್ಭಾಗವತಮಹಾಪುರಾಣದ ದ್ವಾದಶಸ್ಕಂಧದಲ್ಲಿ
ಎಂಟನೆಯ ಅಧ್ಯಾಯ



# ನವಮೋಧ್ಯಾಯಃ

ಸೂತ ಉವಾಚ—

ಸಂಸ್ತುತೋ ಭಗವಾನಿತ್ಥಂ ಮಾರ್ಕಂಡೇಯೇನ ಧೀಮತಾ ।
ನಾರಾಯಣೋ ನರಸಖಃ ಪ್ರೀತ ಆಹ ಭೃಗೂದ್ವಹಮ್ ॥ ೧

ಶ್ರೀಭಗವಾನುವಾಚ—

ಭೋ ಭೋ ಬ್ರಹ್ಮರ್ಷಿವರ್ಯೋಸಿ ಸಿದ್ಧ ಆತ್ಮಸಮಾಧಿನಾ ।
ಮಯಿ ಭಕ್ತ್ಯಾನಪಾಯಿನ್ಯಾ ತಪಃಸ್ವಾಧ್ಯಾಯಸಂಯಮೈಃ ॥ ೨
ವಯಂ ತೇ ಪರಿತುಷ್ಟಾಃ ಸ್ಮ ತ್ವದ್ಬೃಹದ್ವ್ರತಚರ್ಯಯಾ ।
ವರಂ ಪ್ರತೀಚ್ಛ ಭದ್ರಂ ತೇ ವರದೇಶಾದಭೀಪ್ಸಿತಮ್ ॥ ೩

## ಅಧ್ಯಾಯ ೯

ಮಾರ್ಕಂಡೇಯಮುನಿಗಳಿಗೆ ಭಗವನ್ಮಾಯಾಸ್ವರೂಪದ ಪ್ರದರ್ಶನ.
ವಟಪತ್ರಶಾಯಿಯಾದ ಮುಕುಂದನ ಸಂದರ್ಶನ.

ಸೂತಪೌರಾಣಿಕರು ಹೇಳಿದರು : "ಧೀಮಂತನಾದ ಮಾರ್ಕಂಡೇಯನು ಈ ಪ್ರಕಾರದಲ್ಲಿ ಸ್ತುತಿಸಲಾಗಿ ನರಮುನಿಸಹಿತನಾಗಿದ್ದ ಭಗವಾನ್ ನಾರಾಯಣ ಋಷಿಯು ಆ ಭೃಗುಕುಲೋತ್ತಮನನ್ನು ಕುರಿತು "ಎಲೈ ಬ್ರಹ್ಮರ್ಷಿಶ್ರೇಷ್ಠನೆ, ಚಿತ್ತದ ಏಕಾಗ್ರತೆಯಿಂದಲೂ ನನ್ನಲ್ಲಿ ಇಟ್ಟಿರುವ ಅಚಲಭಕ್ತಿಯಿಂದಲೂ ತಪಃಸ್ವಾಧ್ಯಾಯ ಮನೋನಿಗ್ರಹಗಳಿಂದಲೂ ಸಿದ್ಧಪುರುಷನಾಗಿದ್ದೀಯೆ (೧–೨). ನಿನ್ನ ದೃಢವಾದ ಈ ವ್ರತಚರ್ಯೆಯಿಂದ ಸಂತುಷ್ಟರಾಗಿದ್ದೇವೆ. ನಿನಗೆ ಶುಭ ವಾಗಲಿ ! ವರದೇಶನಾದ ನನ್ನಿಂದ ಬೇಕಾದ ವರವನ್ನು ಬೇಡಿಕೋ" ಎಂದನು. ಅದಕ್ಕೆ ಮಾರ್ಕಂಡೇಯಋಷಿಯು "ಹೇ ದೇವದೇವೇಶ್ವರ, ಪ್ರಪನ್ನಾರ್ತಿಹರ, ಅಚ್ಯುತ, ವರವನ್ನು ಕೊಡುತ್ತೇನೆಂದು ಹೇಳಿದುದೇ ಬೇಕಾದಷ್ಟಾಯಿತು ! ನೀನು

ಋಷಿರುವಾಚ—

ಜಿತಂ ತೇ ದೇವದೇವೇಶ ಪ್ರಪನ್ನಾರ್ತಿಹರಾಚ್ಯುತ ।
ವರೇಣೈತಾವತಾಲಂ ನೋ ಯದ್ ಭವಾನ್ ಸಮದೃಶ್ಯತ ॥ ೪

ಗೃಹೀತ್ವಾಜಾದಯೋ ಯಸ್ಯ ಶ್ರೀಮತ್ಪಾದಾಬ್ಜದರ್ಶನಮ್ ।
ಮನಸಾ ಯೋಗಪಕ್ವೇನ ಸ ಭವಾನ್ ಮೇಽಕ್ಷಿಗೋಚರಃ ॥ ೫

ಅಥಾಪ್ಯಂಬುಜಪತ್ರಾಕ್ಷ ಪುಣ್ಯಶ್ಲೋಕಶಿಖಾಮಣೇ ।
ದ್ರಕ್ಷ್ಯೇ ಮಾಯಾಂ ಯಯಾ ಲೋಕಃ ಸಪಾಲೋ ವೇದ
ಸದ್ಭಿದಾಮ್ ॥ ೬

ಸೂತ ಉವಾಚ—

ಇತೀಡಿತೋಽರ್ಚಿತಃ ಕಾಮಮೃಷಿಣಾ ಭಗವಾನ್ ಮುನೇ ।
ತಥೇತಿ ಸ ಸ್ಮಯನ್ ಪ್ರಾಗಾದ್ ಬದರ್ಯಾಶ್ರಮಮೀಶ್ವರಃ ॥ ೭

ತಮೇವ ಚಿಂತಯನ್ನರ್ಥಮೃಷಿಃ ಸ್ವಾಶ್ರಮ ಏವ ಸಃ ।
ವಸನ್ನಗ್ನ್ಯರ್ಕಸೋಮಾಂಬುಭೂವಾಯುವಿಯದಾತ್ಮಸು ॥ ೮

---

ನನಗೆ ಪ್ರತ್ಯಕ್ಷನಾಗಿ ಕಾಣಿಸಿಕೊಂಡೆಯಲ್ಲ, ಅಷ್ಟೇ ಸಾಕು (೩–೪). ಬ್ರಹ್ಮಾದಿಗಳೂ ಸಹ ಯೋಗಪರಿಶುದ್ಧವಾದ ಮನಸ್ಸಿನಿಂದ ಯಾವ ನಿನ್ನ ಶ್ರೀಮಚ್ಚರಣಕಮಲವನ್ನು ಧ್ಯಾನಿಸುವುದರಿಂದಲೇ ಕೃತಾರ್ಥರಾಗುತ್ತಾರೋ, ಅಂತಹ ನೀನು ನನ್ನ ಕಣ್ಣಿಗೆ ಕಾಣಿಸಿಕೊಂಡೆಯಲ್ಲವೆ? (೫). ಆದರೂ ಸಹ, ಹೇ ಕಮಲದಳಾಯತಾಕ್ಷ, ಪುಣ್ಯಶ್ಲೋಕರಲ್ಲಿ ಸರ್ವೋತ್ತಮ, ಲೋಕಪಾಲರಾದ ಬ್ರಹ್ಮಾದಿಗಳೊಡನೆ ಈ ಜಗತ್ತು ಒಂದೇ ಸದ್ವಸ್ತುವಿನಲ್ಲಿ ಯಾವುದರ ಮಹಿಮೆಯಿಂದ ಭೇದವನ್ನು ಕಾಣುತ್ತಿದೆಯೋ ಅಂತಹ ನಿನ್ನ ಮಾಯೆಯನ್ನು ನೋಡಬೇಕೆಂಬ ಒಂದು ಇಚ್ಛೆ ಇದೆ!" ಎಂದನು (೬). ಶೌನಕರೆ, ಮಾರ್ಕಂಡೇಯಋಷಿಯು ಈ ರೀತಿಯಲ್ಲಿ ಯಥೇಷ್ಟವಾಗಿ ಸ್ತುತಿಸಿ ಪೂಜಿಸಲಾಗಿ, ಭಗವಾನ್ ನಾರಾಯಣನು ಮುಗುಳ್ನಗೆಯೊಡನೆ 'ಆಗಲಿ' ಎಂದು ಹೇಳಿ ಬದರಿಕಾಶ್ರಮಕ್ಕೆ ತೆರಳಿದನು! (೭). ಇತ್ತ ಋಷಿಯು ತನ್ನ ಆಶ್ರಮದಲ್ಲಿಯೇ ಇದ್ದು ಮಾಯಾದರ್ಶನದ ವಿಷಯವನ್ನೇ ಚಿಂತಿಸುತ್ತಿದ್ದನು. ಅಗ್ನಿ, ಸೂರ್ಯ, ಚಂದ್ರ, ಜಲ, ಭೂಮಿ,

ಧ್ಯಾಯನ್ ಸರ್ವತ್ರ ಚ ಹರಿಂ ಭಾವದ್ರವ್ಯೈರಪೂಜಯತ್ ।
ಕ್ವಚಿತ್ ಪೂಜಾಂ ವಿಸಸ್ಮಾರ ಪ್ರೇಮಪ್ರಸರಸಂಪ್ಲುತಃ ॥ ೯

ತಸ್ಯೈಕದಾ ಭೃಗುಶ್ರೇಷ್ಠ ಪುಷ್ಪಭದ್ರಾತಟೇ ಮುನೇಃ ।
ಉಪಾಸೀನಸ್ಯ ಸಂಧ್ಯಾಯಾಂ ಬ್ರಹ್ಮನ್ ವಾಯುರಭೂನ್ಮಹಾನ್ ॥ ೧೦

ತಂ ಚಂಡಶಬ್ದಂ ಸಮುದೀರಯಂತಂ
ಬಲಾಹಕಾ ಅನ್ವಭವನ್ ಕರಾಲಾಃ ।
ಅಕ್ಷಸ್ಥವಿಷ್ಠಾ ಮುಮುಚುಸ್ತಡಿದ್ಭಿಃ
ಸ್ವನಂತ ಉಚ್ಚೈರಭಿವರ್ಷಧಾರಾಃ ॥ ೧೧

ತತೋ ವ್ಯದೃಶ್ಯಂತ ಚತುಸ್ಸಮುದ್ರಾಃ
ಸಮಂತತಃ ಕ್ಷ್ಮಾತಲಮಾಗ್ರಸಂತಃ ।
ಸಮೀರವೇಗೋರ್ಮಿಭಿರುಗ್ರನಕ್ರ-
ಮಹಾಭಯಾವರ್ತಗಭೀರಘೋಷಾಃ ॥ ೧೨

---

ವಾಯು, ಆಕಾಶ, ಹೃದಯಗಳಲ್ಲಿ ಸರ್ವತ್ರ ಶ್ರೀಹರಿಯನ್ನು ಧ್ಯಾನಿಸುತ್ತ ಮಾನಸ ದ್ರವ್ಯಗಳಿಂದ ಪೂಜಿಸುತ್ತಿದ್ದನು. ಒಂದೊಂದುವೇಳೆ ಭಗವಂತನ ಪ್ರೇಮಾವೇಶ ದಲ್ಲಿ ಮುಳುಗಿ ಪೂಜೆಯನ್ನೇ ಮರೆತುಬಿಡುತ್ತಿದ್ದನು (೮–೯). ಹೀಗಿರುವಾಗ, ಶೌನಕರೆ, ಒಂದುದಿನ ಪುಣ್ಯಭದ್ರಾನದೀತೀರದಲ್ಲಿ ಆ ಮುನಿಯು ಕುಳಿತಿರುವಾಗ ಸಂಜೆಯ ಹೊತ್ತಿನಲ್ಲಿ ಒಂದು ಬಲವಾದ ಗಾಳಿ ಬೀಸಿತು (೧೦). ಭೋರ್ಗರೆದು ಬೀಸುತ್ತಿದ್ದ ಬಿರುಗಾಳಿಯ ಹಿಂದೆ ಕರಾಳವಾದ ಮೇಘಗಳು ಮೇಲೆದ್ದವು. ಮಿಂಚುಗಳು ಮಿಂಚಿದವು. ಮೇಘಗಳು ಅಬ್ಬರಿಸುತ್ತ ಗಾಡಿಯ ಅಚ್ಚಿನ ಗಾತ್ರದ ಧಾರೆಗಳನ್ನು ಸುರಿಸುತ್ತ ಎಲ್ಲೆಲ್ಲಿಯೂ ಮಳೆಗರೆಯಲಾರಂಭಿಸಿದವು (೧೧). ಅನಂತರ ಚತುಃಸಮುದ್ರಗಳೂ ನಾಲ್ಕು ದಿಕ್ಕುಗಳಿಂದ ಮೇಲೆದ್ದು ನುಗ್ಗಿ ವಾಯು ವೇಗದಿಂದ ಉತ್ಪನ್ನವಾದ ಅಲೆಗಳಿಂದ ಭೂತಳವನ್ನು ನುಂಗುತ್ತಿರುವುದು ಕಂಡು ಬಂದಿತು. ಸಮುದ್ರಗಳಲ್ಲಿ ಭೀಕರವಾದ ಮೊಸಳೆಗಳೂ ಭಯಂಕರವಾದ ಸುಳಿ ಗಳೂ ಕಾಣಿಸಿದವು. ಗಂಭೀರವಾದ ಸಮುದ್ರಘೋಷವು ಕೇಳಿಸಿತು (೧೨).

ಅಂತರ್ಬಹಿಶ್ಚಾದ್ಭಿರತಿದ್ಯುಭಿಃ ಖರೈಃ
ಶತಹ್ರದಾಭೀರುಪತಾಪಿತಂ ಜಗತ್ ।
ಚತುರ್ವಿಧಂ ವೀಕ್ಷ್ಯ ಸಹಾತ್ಮನಾ ಮುನಿ-
ರ್ಜಲಾಪ್ಲುತಾಂ ಕ್ಷ್ಮಾಂ ವಿಮನಾಃ ಸಮತ್ರಸತ್ ॥ ೧೩

ತಸ್ಯೈವಮುದ್ವೀಕ್ಷತ ಊರ್ಮಿಭೀಷಣಃ
ಪ್ರಭಂಜನಾಘೂರ್ಣಿತವಾರ್ಮಹಾರ್ಣವಃ ।
ಆಪೂರ್ಯಮಾಣೋ ವರ್ಷದ್ಭಿರಂಬುದೈಃ
ಕ್ಷ್ಮಾಮಪ್ಯಧಾದ್ ದ್ವೀಪವರ್ಷಾದ್ರಿಭಿಃ ಸಮಮ್ ॥ ೧೪

ಸಕ್ಷ್ಮಾಂತರಿಕ್ಷಂ ಸದಿವಂ ಸಭಾಗಣಂ
ತ್ರೈಲೋಕ್ಯಮಾಸೀತ್ ಸಹ ದಿಗ್ಭಿರಾಪ್ಲುತಮ್ ।
ಸ ಏಕ ಏವೋರ್ವರಿತೋ ಮಹಾಮುನಿ-
ರ್ಬಭ್ರಾಮ ವಿಕ್ಷಿಪ್ಯ ಜಟಾ ಜಡಾಂಧವತ್ ॥ ೧೫

---

ಆಕಾಶವನ್ನುಲ್ಲಂಘಿಸಿ ಚಿಮ್ಮುಬರುತ್ತಿದ್ದ ಜಲರಾಶಿಗಳಿಂದಲೂ ಘೋರವಾದ ಮಿಂಚುಗಳಿಂದಲೂ ಜರಾಯುಜಾದಿ ಚತುರ್ವಿಧ ಜೀವರಾಶಿಗಳಿಂದ ಕೂಡಿದ ಜಗತ್ತು ತನ್ನೊಡನೆ ಒಳಗೂ ಹೊರಗೂ ಪೀಡಿತವಾಯಿತು. ಮಾರ್ಕಂಡೇಯನು ನೀರಿನಿಂದ ಆಕ್ರಾಂತವಾದ ಭೂತಳವನ್ನು ನೋಡಿ ಕಂಗೆಟ್ಟು ಹೆದರಿದನು (೧೩). ಮಹಾ ಸಮುದ್ರವು ಅಲೆಗಳ ರಭಸದಿಂದ ಭೀಷಣವಾಯಿತು. ಬಿರುಗಾಳಿಯ ಹೊಡೆತದಿಂದ ನೀರು ಉಕ್ಕಿತು. ಒಂದೇ ಸಮನಾಗಿ ಮೋಡಗಳು ಬೇರೆ ಮಳೆ ಸುರಿಸಿ ಸಮುದ್ರವನ್ನು ಉಕ್ಕಿಸುತ್ತಿದ್ದವು. ಮುನಿಯು ನೋಡನೋಡುತ್ತಿರುವಾಗ ಎಲ್ಲ ದ್ವೀಪಗಳೂ ವರ್ಷಪರ್ವತಗಳೂ ಭೂಮಿಯೂ ಸಮುದ್ರಜಲದಿಂದ ಆಚ್ಛಾದಿತವಾದವು (೧೪). ಭೂಮ್ಯಾಕಾಶಗಳಲ್ಲಿರುವ ಪ್ರಾಣಿಗಳ ಸಹಿತವಾಗಿ, ದೇವಲೋಕದ ದೇವತೆಗಳ ಸಹಿತವಾಗಿ, ಗ್ರಹನಕ್ಷತ್ರಗಳ ಸಹಿತವಾಗಿ ದಶದಿಕ್ಕುಗಳೊಡನೆ ಮೂರು ಲೋಕಗಳೂ ಜಲಮಯವಾದವು. ಉಳಿದವನು ಮಾರ್ಕಂಡೇಯನೊಬ್ಬನೇ ! ಆ ಮಹಾಮುನಿಯು ಜಟೆಗಳನ್ನು ಹರಡಿಕೊಂಡು ಜಡನಂತೆಯೂ ಕುರುಡ

ಕ್ಷುತ್ತೃಟ್‌ಪರೀತೋ ಮಕರೈಸ್ತಿಮಿಂಗಿಲೈ-
ರುಪದ್ರುತೋ ವೀಚಿನಭಸ್ವತಾ ಹತಃ ।
ತಮಸ್ಯಪಾರೇ ಪತಿತೋ ಭ್ರಮನ್ ದಿಶೋ
ನ ವೇದ ಖಂ ಗಾಂ ಚ ಪರಿಶ್ರಮೇಷಿತಃ ॥ ೧೬

ಕ್ವಚಿದ್ ಗತೋ ಮಹಾವರ್ತೇ ತರಲೈಸ್ತಾಡಿತಃ ಕ್ವಚಿತ್ ।
ಯಾದೋಭಿರ್ಭಕ್ಷ್ಯತೇ ಕ್ವಾಪಿ ಸ್ವಯಮನ್ಯೋನ್ಯಘಾತಿಭಿಃ ॥ ೧೭

ಕ್ವಚಿಚ್ಛೋಕಂ ಕ್ವಚಿನ್ಮೋಹಂ ಕ್ವಚಿದ್ ದುಃಖಂ ಸುಖಂ ಭಯಮ್ ।
ಕ್ವಚಿನ್ಮೃತ್ಯುಮವಾಪ್ನೋತಿ ವ್ಯಾಧ್ಯಾದಿಭಿರುತಾರ್ದಿತಃ ॥ ೧೮

ಅಯುತಾಯುತವರ್ಷಾಣಾಂ ಸಹಸ್ರಾಣಿ ಶತಾನಿ ಚ ।
ವ್ಯತೀಯುರ್ಭ್ರಮತಸ್ತಸ್ಮಿನ್ ವಿಷ್ಣುಮಾಯಾವೃತಾತ್ಮನಃ ॥ ೧೯

ಸ ಕದಾಚಿದ್ ಭ್ರಮಂಸ್ತಸ್ಮಿನ್ ಪೃಥಿವ್ಯಾಃ ಕಕುದಿ ದ್ವಿಜಃ ।
ನ್ಯಗ್ರೋಧಪೋತಂ ದದೃಶೇ ಫಲಪಲ್ಲವಶೋಭಿತಮ್ ॥ ೨೦

---

ನಂತೆಯೂ ಅಲೆದಾಡಲಾರಂಭಿಸಿದನು! (೧೫). ಆ ಋಷಿಯು ಹಸಿವು ಬಾಯಾರಿಕೆಗಳಿಂದ ಬಾಧಿತನಾಗಿ, ಮಕರತಿಮಿಂಗಿಲಗಳಿಂದ ಪೀಡಿತನಾಗಿ, ತರಂಗವಾತಗಳಿಂದ ಆಹತನಾಗಿ, ಅಪಾರವಾದ ಕತ್ತಲೆಯಲ್ಲಿ ಸಿಕ್ಕಿಕೊಂಡು ದಿಕ್ಕುದಿಕ್ಕುಗಳಿಗೆ ಅಲೆದಾಡಿ ಬಳಲಿದನು. ಆಕಾಶ ಯಾವುದು, ಭೂಮಿ ಯಾವುದು ?—ಎಂಬುದು ತಿಳಿಯಲಿಲ್ಲ (೧೬). ಒಂದೊಂದುಕಡೆ ದೊಡ್ಡ ಸುಳಿಯಲ್ಲಿ ಸಿಕ್ಕಿಕೊಳ್ಳುತ್ತಿದ್ದನು. ಇನ್ನೊಂದುಕಡೆ ಅಲೆಗಳು ಬಂದು ಅಪ್ಪಳಿಸುತ್ತಿದ್ದವು. ಮತ್ತೊಂದುಕಡೆ ಈತನನ್ನು ಭಕ್ಷಿಸುವುದಕ್ಕಾಗಿ ತಾವುತಾವೇ ಘಾತಿಸಿಕೊಳ್ಳುತ್ತಿದ್ದ ಜಲಜಂತುಗಳು ತಿನ್ನುವುದಕ್ಕೆ ಬರುತ್ತಿದ್ದವು! (೧೭). ಒಮ್ಮೆ ಶೋಕ, ಇನ್ನೊಮ್ಮೆ ಮೋಹ, ಮತ್ತೊಮ್ಮೆ ದುಃಖ, ಹಾಗೆಯೇ ಸುಖ, ಭಯಗಳೂ ಆತನಿಗೆ ಉಂಟಾಗುತ್ತಿದ್ದವು. ಆಗಾಗ ಸಾವು ಸಹ ಬರುತ್ತಿತ್ತು. ರೋಗಾದಿಗಳು ಪೀಡಿಸುತ್ತಿದ್ದವು. ಈ ಪ್ರಕಾರ ವಿಷ್ಣುಮಾಯೆಗೆ ಒಳಗಾದ ಮಾರ್ಕಂಡೇಯನಿಗೆ ನೂರು, ಸಾವಿರ, ಲಕ್ಷಗಟ್ಟಲೆ ವರ್ಷಗಳು ಕಳೆದುಹೋದಂತೆ ಕಾಣಿಸಿತು! (೧೮–೧೯). ಹೀಗಿರುವಾಗ ಆ ವಿಪ್ರನು ಪೃಥ್ವಿಯ ಒಂದು ಉನ್ನತ ಪ್ರದೇಶದಲ್ಲಿ ತಿರುಗಾಡುತ್ತಿರುವಾಗ ಫಲಪಲ್ಲವ

ಪ್ರಾಗುತ್ತರಸ್ಯಾಂ ಶಾಖಾಯಾಂ ತಸ್ಯಾಪಿ ದದೃಶೇ ಶಿಶುಮ್ ।
ಶಯಾನಂ ಪರ್ಣಪುಟಕೇ ಗ್ರಸಂತಂ ಪ್ರಭಯಾ ತಮಃ ॥ ೨೧

ಮಹಾಮರಕತಶ್ಯಾಮಂ ಶ್ರೀಮದ್ವದನಪಂಕಜಮ್ ।
ಕಂಬುಗ್ರೀವಂ ಮಹೋರಸ್ಕಂ ಸುನಾಸಂ ಸುಂದರಭ್ರುವಮ್ ॥ ೨೨

ಶ್ವಾಸೈಜದಲಕಾಭಾತಂ ಕಂಬುಶ್ರೀಕರ್ಣದಾಡಿಮಮ್ ।
ವಿದ್ರುಮಾಧರಭಾಸೇಷಚ್ಛೋಣಾಯಿತಸುಧಾಸ್ಮಿತಮ್ ॥ ೨೩

ಪದ್ಮಗರ್ಭಾರುಣಾಪಾಂಗಂ ಹೃದ್ಯಹಾಸಾವಲೋಕನಮ್ ।
ಶ್ವಾಸೈಜದ್ವಲಿಸಂವಿಗ್ನನಿಮ್ನನಾಭಿದಲೋದರಮ್ ॥ ೨೪

ಚಾರ್ವಂಗುಲಿಭ್ಯಾಂ ಪಾಣಿಭ್ಯಾಮುನ್ನೀಯ ಚರಣಾಂಬುಜಮ್ ।
ಮುಖೇ ನಿಧಾಯ ವಿಪ್ರೇಂದ್ರೋ ಧಯಂತಂ ವೀಕ್ಷ್ಯ ವಿಸ್ಮಿತಃ ॥ ೨೫

---

ಶೋಭಿತವಾದ ಒಂದು ಆಲದಮರವನ್ನು ಕಂಡನು. ಮರದ ಈಶಾನ್ಯದಿಕ್ಕಿನ ಕೊಂಬೆಯ ಒಂದು ಆಲದ ಎಲೆಯಮೇಲೆ ಮಲಗಿದ್ದ ಒಂದು ಶಿಶುವನ್ನೂ ನೋಡಿದನು! ಶಿಶು ತನ್ನ ದೇಹಪ್ರಭೆಯಿಂದ ಸುತ್ತಲಿನ ಕತ್ತಲೆಯನ್ನು ಹೋಗಲಾಡಿಸಿತ್ತು (೨೦–೨೧). ಇಂದುನೀಲಮಣಿಯಂತೆ ಶ್ಯಾಮಲವರ್ಣವಾಗಿದ್ದ ಆ ಮಗುವಿನ ಮುಖವು ಕಮಲದಂತೆ ಶೋಭಿಸುತ್ತಿತ್ತು. ಶಂಖದಂತಿದ್ದ ಕತ್ತು, ಮಾಟವಾದ ಮೂಗು, ಸುಂದರವಾದ ಹುಬ್ಬು; ಉಸಿರಾಟದಿಂದ ಮಗುವಿನ ಮುಂಗುರುಳು ಚಲಿಸುತ್ತಿತ್ತು. ಶಂಖದಂತೆ ಒಳಸುಳಿಯಿದ್ದ ಕಿವಿಗಳಲ್ಲಿ ದಾಡಿಮ ಪುಷ್ಪವನ್ನು ಮುಡಿದಿತ್ತು. ಮಗುವಿನ ಹವಳದಂತಿದ್ದ ತುಟಿಗಳ ಕಾಂತಿಯಿಂದ ಅಮೃತದಂತಹ ಬಿಳಿಯ ಮುಗುಳ್ನಗೆ ಸ್ವಲ್ಪ ಕೆಂಪಾಗಿತ್ತು! (೨೨–೨೩). ಕಣ್ಣಿನ ಅಪಾಂಗವು ಎಳೆದಾವರೆಯಂತೆ ನಸುಗೆಂಪಾಗಿತ್ತು. ಮನೋಹರವಾಗಿ ಮೃದುನಗೆಯನ್ನು ಬೀರುತ್ತ ಮಗು ನೋಡುತ್ತಿತ್ತು. ಉಸಿರಾಡುವಾಗ ಚಲಿಸುವ ವಲಿರೇಖೆಗಳಿಂದ ಮಗುವಿನ ನಾಭಿಯು ಕಂಪಿಸುತ್ತಿತ್ತು. ಉದರವು ಅಶ್ವತ್ಥ ದಳದಂತೆ ಮನೋಜ್ಞವಾಗಿತ್ತು. ಅಂದವಾದ ಬೆರಳುಗಳಿರುವ ಎರಡು ಕೈಗಳಿಂದ ಕಾಲನ್ನೆಳೆದು ಬಾಯಲ್ಲಿಟ್ಟುಕೊಂಡು ಚೀಪುತ್ತಿದ್ದ ಆ ಶಿಶುವನ್ನು ಕಂಡು

ತದ್ದರ್ಶನಾದ್ ವೀತಪರಿಶ್ರಮೋ ಮುದಾ
ಪ್ರೋತ್ಫುಲ್ಲಹೃತ್ಪದ್ಮವಿಲೋಚನಾಂಬುಜಃ ।
ಪ್ರಹೃಷ್ಟರೋಮಾದ್ಭುತಭಾವಶಂಕಿತಃ
ಪ್ರಷ್ಟುಂ ಪುರಸ್ತಂ ಪ್ರಸಸಾರ ಬಾಲಕಮ್ ॥ ೨೬

ತಾವಚ್ಛಿಶೋರ್ವೈ ಶ್ವಸಿತೇನ ಭಾರ್ಗವಃ
ಸೋಽಂತಶ್ಶರೀರಂ ಮಶಕೋ ಯಥಾವಿಶತ್ ।
ತತ್ರಾಪ್ಯದೋ ನ್ಯಸ್ತಮಚಷ್ಟ ಕೃತ್ಸ್ನಶೋ
ಯಥಾ ಪುರಾ ಮುಹ್ಯದತೀವ ವಿಸ್ಮಿತಃ ॥ ೨೭

ಖಂ ರೋದಸೀ ಭಗಣಾನದ್ರಿಸಾಗರಾನ್
ದ್ವೀಪಾನ್ ಸವರ್ಷಾನ್ ಕಕುಭಃ ಸುರಾಸುರಾನ್ ।
ವನಾನಿ ದೇಶಾನ್ ಸರಿತಃ ಪುರಾಕರಾನ್
ಖೇಟಾನ್ ವ್ರಜಾನಾಶ್ರಮವರ್ಣವೃತ್ತಯಃ ॥ ೨೮

---

ಮಾರ್ಕಂಡೇಯಮುನಿಯು ವಿಸ್ಮಿತನಾದನು (೨೪–೨೫). ಆ ಶಿಶುವನ್ನು ನೋಡಿದೊಡನೆ ಮುನೀಂದ್ರನ ಆಯಾಸವೆಲ್ಲವೂ ನೀಗಿತು! ಅವನ ಹೃದಯ ಪದ್ಮವೂ ನಯನಪದ್ಮಗಳೂ ಹರ್ಷದಿಂದ ಅರಳಿದವು. ರೋಮಾಂಚವಾಯಿತು. ಮಗುವಿನ ಆಶ್ಚರ್ಯಕರವಾದ ರೂಪದಿಂದ ಮನಸ್ಸಿನಲ್ಲಿ ಶಂಕೆಯಾದರೂ ವಿಚಾರಿಸ ಬೇಕೆಂದು ಬಾಲಕನ ಸಮೀಪಕ್ಕೆ ಹೋದನು (೨೬). ಸಮೀಪಕ್ಕೆ ಹೋದೊಡನೆ ಮಾರ್ಕಂಡೇಯನು ಒಂದು ನುಸಿಯೋ ಎಂಬಂತೆ ಬಾಲಕನ ಉಸಿರಿನಿಂದ ಸೆಳೆಯಲ್ಪಟ್ಟು, ಆತನ ಹೊಟ್ಟೆಯೊಳಗೆ ಪ್ರವೇಶಿಸಿದನು! ಅಲ್ಲಿಯೂ ಸಹ ಪ್ರಳಯಕ್ಕೆ ಮೊದಲು ಇದ್ದಂತೆ ವಿಶ್ವವು ಸುತ್ತಲೂ ವಿನ್ಯಸ್ತವಾಗಿರುವುದನ್ನು ವೀಕ್ಷಿಸಿ ಮುನಿಯು ಬೆಕ್ಕಸಬೆರಗಾದನು (೨೭). ಶಿಶುವಿನ ಉದರದಲ್ಲಿ ಆಕಾಶ, ಪೃಥಿವೀದ್ಯುಲೋಕಗಳು, ನಕ್ಷತ್ರಪುಂಜ, ಬೆಟ್ಟ, ಕಡಲು, ದ್ವೀಪ, ವರ್ಷಪರ್ವತಗಳು, ದಿಕ್ಕುಗಳು, ಸುರಾಸುರರು, ವನಗಳು, ದೇಶಗಳು, ನದಿಗಳು, ನಗರ, ಗಣಿ, ಹಳ್ಳಿ, ಗೋಕುಲ, ಆಶ್ರಮ, ಚಾತುರ್ವರ್ಣ್ಯದ ವಿವಿಧ ಜನರು, ಅವರ ಆಚಾರಗಳು—ಇವೆಲ್ಲವನ್ನೂ

*

ಮಹಾಂತಿ ಭೂತಾನ್ಯಥ ಭೌತಿಕಾನ್ಯಸೌ
ಕಾಲಂ ಚ ನಾನಾಯುಗಕಲ್ಪಕಲ್ಪನಮ್ ।
ಯತ್ ಕಿಂಚಿದನ್ಯದ್ ವ್ಯವಹಾರಕಾರಣಂ
ದದರ್ಶ ವಿಶ್ವಂ ಸದಿವಾವಭಾಸಿತಮ್ ॥ ೨೯

ಹಿಮಾಲಯಂ ಪುಷ್ಪವಹಾಂ ಚ ತಾಂ ನದೀಂ
ನಿಜಾಶ್ರಮಂ ತತ್ರ ಋಷೀನಪಶ್ಯತ್ ।
ವಿಶ್ವಂ ವಿಪಶ್ಯನ್ ಶ್ವಸಿತಾಚ್ಛಿಶೋರ್ವೈ
ಬಹಿರ್ನಿರಸ್ತೋ ನ್ಯಪತಲ್ಲಯಾಬ್ಧೌ ॥ ೩೦

ತಸ್ಮಿನ್ ಪೃಥಿವ್ಯಾಃ ಕಕುದಿ ಪ್ರರೂಢಂ
ವಟಂ ಚ ತತ್ಪರ್ಣಪುಟೇ ಶಯಾನಮ್ ।
ತೋಕಂ ಚ ತತ್ಪ್ರೇಮಸುಧಾಸ್ಮಿತೇನ
ನಿರೀಕ್ಷಿತೋಽಪಾಂಗನಿರೀಕ್ಷಣೇನ ॥ ೩೧

---

ಮಾರ್ಕಂಡೇಯನು ಕಂಡನು (೨೮). ಹಾಗೆಯೇ ಪಂಚಮಹಾಭೂತಗಳು, ಭೌತಿಕ ಪದಾರ್ಥಗಳು, ನಾನಾಯುಗಕಲ್ಪಗಳನ್ನು ಕಲ್ಪಿಸುವ ಮಹಾಕಾಲ, ಇನ್ನು ಯಾವ ಯಾವ ವ್ಯವಹಾರ ಕಾರಣವಾದ ವಸ್ತುವಿರುತ್ತದೆಯೋ ಅದೆಲ್ಲವೂ ಸೇರಿ ಸಮಸ್ತವಿಶ್ವವೇ ಪರಮಾರ್ಥವಾದ ಸತ್ಯವಸ್ತುವೋ ಎಂಬಂತೆ ಅಲ್ಲಿ ಪ್ರಸೃತ ವಾಗಿರುವುದನ್ನು ನೋಡಿದನು! (೨೯). ಆ ಶಿಶುವಿನ ಉದರದಲ್ಲಿ ಹಿಮಾಲಯ ವನ್ನು ಕಂಡನು! ಪುಷ್ಪವಹಾನದಿಯನ್ನೂ ಕಂಡನು! ತನ್ನ ಆಶ್ರಮವನ್ನೂ ಅಲ್ಲಿದ್ದ ಋಷಿಗಳನ್ನೂ ಕಂಡನು! ಅನಂತರ ಶಿಶುವಿನ ಇನ್ನೊಂದು ಉಸಿರಿಗೆ ಸಿಕ್ಕಿ ಹೊರಗೆ ತಳ್ಳಲ್ಪಟ್ಟು ಮೊದಲಿನ ಪ್ರಳಯಸಾಗರದಲ್ಲಿ ದೊಪ್ಪನೆ ಬಿದ್ದನು! (೩೦). ಅನಂತರ ಪೃಥಿವಿಯ ಉನ್ನತಪ್ರದೇಶದಲ್ಲಿ ಬೆಳೆದಿದ್ದ ಆಲದಮರವನ್ನೂ ಅದರ ಪರ್ಣಪುಟದಲ್ಲಿ ಮಲಗಿದ್ದ ಶಿಶುವನ್ನೂ ಕಂಡನು! ಪ್ರೇಮಸುಧಾಮಯವಾದ ನಗುವಿನೊಡನೆ ಆ ಶಿಶುವು ಮುನಿಯನ್ನು ಕಟಾಕ್ಷದಿಂದ ವೀಕ್ಷಿಸಿತು. ಅದುವರೆಗೆ ಬಹಳ ಕಷ್ಟಗಳನ್ನನುಭವಿಸುತ್ತಿದ್ದ ಆ ಮುನಿಯು ತನ್ನ ಹೃದಯದಲ್ಲಿ ನೆಟ್ಟು ಹೋಗಿದ್ದ ಮುಕುಂದನೇ ಆದ ಆ ಮಗುವನ್ನು ಎರಡು ಕಣ್ಣುಗಳಿಂದಲೂ ತನ್ಮಯತೆಯಿಂದ ವೀಕ್ಷಿಸುತ್ತ ಅದನ್ನು ಆಲಿಂಗಿಸಿಕೊಳ್ಳಬೇಕೆಂದು ಮುಂದೆ

ಅಥ ತಂ ಬಾಲಕಂ ವೀಕ್ಷ್ಯ ನೇತ್ರಾಭ್ಯಾಂ ಧಿಷ್ಠಿತಂ ಹೃದಿ ।
ಅಭ್ಯಯಾದತಿಸಂಕ್ಲಿಷ್ಟಃ ಪರಿಷ್ವಕ್ತುಮಧೋಕ್ಷಜಮ್ ॥ ೩೨

ತಾವತ್ ಸ ಭಗವಾನ್ ಸಾಕ್ಷಾದ್ ಯೋಗಾಧೀಶೋ ಗುಹಾಶಯಃ ।
ಅಂತರ್ದಧ ಋಷೇಃ ಸದ್ಯೋ ಯಥೇಹಾನೀಶನಿರ್ಮಿತಾ ॥ ೩೩

ತಮನ್ವಥ ವಟೋ ಬ್ರಹ್ಮನ್ ಸಲಿಲಂ ಲೋಕಸಂಪ್ಲವಃ ।
ತಿರೋಧಾಯಿ ಕ್ಷಣಾದಸ್ಯ ಸ್ವಾಶ್ರಮೋ ಪೂರ್ವವತ್ ಸ್ಥಿತಃ ॥ ೩೪

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ಮಾಯಾದರ್ಶನಂ ನಾಮ ನವಮಾಧ್ಯಾಯಃ



ಹೋದನು (೩೦–೩೨). ಅಷ್ಟರಲ್ಲಿ ಸಾಕ್ಷಾತ್ ಯೋಗೇಶ್ವರನೂ ಸರ್ವಹೃದಯ ನಿವಾಸಿಯೂ ಆದ ಭಗವಂತನು ಋಷಿಗೆ ಕಾಣದಂತೆ, ದೈವಹೀನನು ಕಲ್ಪಿಸಿಕೊಂಡ ಆಸೆಯಂತೆ, ಅದೃಶ್ಯನಾದನು! ಶೌನಕರೆ ಒಂದು ಕ್ಷಣದಲ್ಲಿಯೇ ವಟವೃಕ್ಷವೂ ಕಾಣಿಸಲಿಲ್ಲ, ಜಲವೂ ಕಾಣಿಸಲಿಲ್ಲ, ಲೋಕವು ಮುಳುಗಿಹೋದದ್ದೂ ಕಾಣಿಸಲಿಲ್ಲ! ಋಷಿಯು ಎಂದಿನಂತೆ ತನ್ನ ಆಶ್ರಮದಲ್ಲಿ ಕುಳಿತಿದ್ದನು! (೩೩–೩೪).

ಇಲ್ಲಿಗೆ ಶ್ರೀಮದ್ಭಾಗವತಮಹಾಪುರಾಣದ ದ್ವಾದಶಸ್ಕಂಧದಲ್ಲಿ
ಒಂಬತ್ತನೆಯ ಅಧ್ಯಾಯ



# ದಶಮೋಧ್ಯಾಯಃ

ಸೂತ ಉವಾಚ—

ಸ ಏವಮನುಭೂಯೇದಂ ನಾರಾಯಣವಿನಿರ್ಮಿತಮ್ ।
ವೈಭವಂ ಯೋಗಮಾಯಾಯಾಸ್ತಮೇವ ಶರಣಂ ಯಯೌ ॥ ೧

ಮಾರ್ಕಂಡೇಯ ಉವಾಚ—

ಪ್ರಪನ್ನೋಽಸ್ಮ್ಯಂಘ್ರಿಮೂಲಂ ತೇ ಪ್ರಪನ್ನಾಭಯದಂ ಹರೇ ।
ಯನ್ಮಾಯಯಾಪಿ ವಿಬುಧಾ ಮುಹ್ಯಂತಿ ಜ್ಞಾನಕಾಶಯಾ ॥ ೨

ಸೂತ ಉವಾಚ—

ತಮೇವಂ ನಿಭೃತಾತ್ಮಾನಂ ವೃಷೇಣ ದಿವಿ ಪರ್ಯಟನ್ ।
ರುದ್ರಾಣ್ಯಾ ಭಗವಾನ್ ರುದ್ರೋ ದದರ್ಶ ಸ್ವಗಣೈರ್ವೃತಃ ॥ ೩

ಅಥೋಮಾ ತಮೃಷಿಂ ವೀಕ್ಷ್ಯ ಗಿರಿಶಂ ಸಮಭಾಷತ ।
ಪಶ್ಯೇಮಂ ಭಗವನ್ ವಿಪ್ರಂ ನಿಭೃತಾತ್ಮೇಂದ್ರಿಯಾಶಯಮ್ ॥ ೪

## ಅಧ್ಯಾಯ ೧೦

ಮಾರ್ಕಂಡೇಯರಿಗೆ ಪಾರ್ವತೀಪರಮೇಶ್ವರರು ಪ್ರತ್ಯಕ್ಷರಾಗುವುದು.
ಚಿರಂಜೀವಿಯಾಗುವಂತೆ ವರದಾನ.

ಸೂತರು ಹೇಳಿದರು : "ಮಾರ್ಕಂಡೇಯಋಷಿಯು ಈ ಪ್ರಕಾರವಾಗಿ ಶ್ರೀಮನ್ನಾರಾಯಣ ವಿನಿರ್ಮಿತವಾದ ಯೋಗಮಾಯಾವೈಭವವನ್ನು ಸ್ವತಃ ಅನುಭವಿಸಿ, ಆ ಭಗವಂತನಿಗೆ ಶರಣಾಗಿ "ಹೇ ಶ್ರೀಹರಿ, ಶರಣಾಗತರಿಗೆ ಅಭಯವನ್ನೀಯುವ ನಿನ್ನ ಪಾದಮೂಲಕ್ಕೆ ಶರಣಾಗಿದ್ದೇನೆ. ವಿದ್ವಾಂಸರೂ ಸಹ ನಿನ್ನ ಮಾಯೆಗೆ ಒಳಗಾಗಿ ಜ್ಞಾನದಂತೆ ಕಾಣುವ ಜ್ಞಾನಾಭಾಸದಿಂದ ಅಹಂಕಾರಪಡುತ್ತ ಮೂಢರಾಗಿರುವರು" ಎಂದು ಸ್ತುತಿಸಿದನು (೧-೨). ಹೀಗಿರುವಾಗ ಆಕಾಶದಲ್ಲಿ ತನ್ನ ಪ್ರಮಥಗಣಗಳಿಂದ ಪರಿವೃತನಾಗಿ, ಪಾರ್ವತಿಯೊಡನೆ ವೃಷಭವಾಹನದ ಮೇಲೆ ಆಕಾಶದಲ್ಲಿ ಸಂಚರಿಸುತ್ತಲಿದ್ದ ಭಗವಾನ್ ರುದ್ರನು ಸಮಾಹಿತಚಿತ್ತನಾಗಿದ್ದ ಮಾರ್ಕಂಡೇಯನನ್ನು ಕಂಡನು (೩). ಆಗ ಉಮಾದೇವಿಯು ಆ ಋಷಿಯನ್ನು ನೋಡಿ ಶಿವನನ್ನು ಕುರಿತು "ಭಗವನ್, ಈ ವಿಪ್ರನನ್ನು ನೋಡು ; ಆತ್ಮೇಂದ್ರಿಯ

ನಿಭೃತೋದಝಷವ್ರಾತಂ ವಾತಾಪಾಯೇ ಯಥಾರ್ಣವಮ್ |
ಕುರ್ವಸ್ಯ ತಪಸಃ ಸಾಕ್ಷಾತ್ ಸಂಸಿದ್ಧಿಂ ಸಿದ್ಧಿದೋ ಭವಾನ್ || ೫

ಶ್ರೀಭಗವಾನುವಾಚ—

ನೈವೇಚ್ಛತ್ಯಾಶಿಷಃ ಕ್ವಾಪಿ ಬ್ರಹ್ಮರ್ಷಿರ್ಮೋಕ್ಷಮಪ್ಯುತ |
ಭಕ್ತಿಂ ಪರಾಂ ಭಗವತಿ ಲಬ್ಧವಾನ್ ಪುರುಷೇಽವ್ಯಯೇ || ೬

ಅಥಾಪಿ ಸಂವದಿಷ್ಯಾಮೋ ಭವಾನ್ಯೇತೇನ ಸಾಧುನಾ |
ಅಯಂ ಹಿ ಪರಮೋ ಲಾಭೋ ನೃಣಾಂ ಸಾಧುಸಮಾಗಮಃ || ೭

ಸೂತ ಉವಾಚ—

ಇತ್ಯುಕ್ತ್ವಾ ತಮುಪೇಯಾಯ ಭಗವಾನ್ ಸ ಸತಾಂ ಗತಿಃ |
ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವದೇಹಿನಾಮ್ || ೮

ತಯೋರಾಗಮನಂ ಸಾಕ್ಷಾದೀಶಯೋರ್ಜಗದಾತ್ಮನೋಃ |
ನ ವೇದ ರುದ್ಧಧೀವೃತ್ತಿರಾತ್ಮಾನಂ ವಿಶ್ವಮೇವ ಚ || ೯

---

ಮನಸ್ಸುಗಳನ್ನು ಎಷ್ಟು ನಿಶ್ಚಲವಾಗಿ ಇರಿಸಿಕೊಂಡಿದ್ದಾನೆ! ಗಾಳಿಯು ಬೀಸದಿದ್ದಾಗ ನಿಶ್ಚಲವಾದ ನೀರು ಮತ್ತು ಮೀನುಗಳಿರುವ ಜಲಾಶಯದಂತೆ ಕಾಣುತ್ತಾನೆ. ಸಿದ್ಧಿಪ್ರದನಾದ ನೀನು ಈತನ ತಪಃಸಿದ್ಧಿಗೆ ಯೋಗ್ಯವಾದ ಫಲವನ್ನು ಅನುಗ್ರಹಿಸು" ಎಂದಳು (೪–೫). ಆಗ ಭಗವಾನ್ ಶ್ರೀರುದ್ರನು "ದೇವಿ, ಬ್ರಹ್ಮರ್ಷಿಯಾದ ಈತನು ಯಾವ ವರಗಳನ್ನೂ ಬಯಸುವುದಿಲ್ಲ. ಮೋಕ್ಷವೂ ಬೇಡವೆನ್ನುತ್ತಾನೆ! ಅವ್ಯಯನಾದ ಪರಮಪುರುಷನಲ್ಲಿ ಪರಾಭಕ್ತಿಯನ್ನಿರಿಸಿಕೊಂಡಿದ್ದಾನೆ. ಆದರೂ, ಭವಾನಿ, ಈ ಸಾಧುವಿನೊಡನೆ ಸಂಭಾಷಿಸೋಣ. ಸಾಧುಸಂಗವೆಂಬುದು ಜನರಿಗೆ ಪರಮಲಾಭವಲ್ಲವೆ?" ಎಂದನು (೬–೭). ಹೀಗೆ ನುಡಿದು ಸರ್ವವಿದ್ಯೆಗಳಿಗೆ ಈಶಾನನೂ ಸರ್ವಭೂತಗಳಿಗೆ ಈಶ್ವರನೂ ಸಾಧುಗಳಿಗೆ ಗತಿಯೂ ಆದ ಭಗವಂತನು ಮಾರ್ಕಂಡೇಯ ಋಷಿಯ ಬಳಿಗೆ ಹೋದನು. ಅಂತಃಕರಣವೃತ್ತಿಗಳನ್ನು ನಿರೋಧಿಸಿದ್ದ ಮಾರ್ಕಂಡೇಯನಿಗೆ ಈಶ್ವರರೂ ಜಗದಾತ್ಮರೂ ಆದ ಪಾರ್ವತೀ ಪರಮೇಶ್ವರರು ಸಾಕ್ಷಾತ್ ಆಗಮಿಸಿದ್ದಾರೆಂಬುದು ತಿಳಿಯಲಿಲ್ಲ. ಆತನಿಗೆ ತನ್ನ

ಭಗವಾಂಸ್ತದಭಿಜ್ಞಾಯ ಗಿರೀಶೋ ಯೋಗಮಾಯಯಾ ।
ಆವಿಶತ್ತದ್ಗುಹಾಕಾಶಂ ವಾಯುಶ್ಛಿದ್ರಮಿವೇಶ್ವರಃ ॥ ೧೦

ಆತ್ಮನ್ಯಪಿ ಶಿವಂ ಪ್ರಾಪ್ತಂ ತಡಿತ್ಪಿಂಗಜಟಾಧರಮ್ ।
ತ್ರ್ಯಕ್ಷಂ ದಶಭುಜಂ ಪ್ರಾಂಶುಮುದ್ಯಂತಮಿವ ಭಾಸ್ಕರಮ್ ॥ ೧೧

ವ್ಯಾಘ್ರಚರ್ಮಾಂಬರಧರಂ ಶೂಲಧನುರಿಷ್ವಸಿಚರ್ಮಭಿಃ ।
ಅಕ್ಷಮಾಲಾಡಮರುಕಕಪಾಲಪರಶೂನ್ ಸಹ ॥ ೧೨

ಬಿಭ್ರಾಣಂ ಸಹಸಾ ಭಾತಂ ವಿಚಕ್ಷ್ಯ ಹೃದಿ ವಿಸ್ಮಿತಃ ।
ಕಿಮಿದಂ ಕುತ ಏವೇತಿ ಸಮಾಧೇರ್ವಿರತೋ ಮುನಿಃ ॥ ೧೩

ನೇತ್ರೇ ಉನ್ಮೀಲ್ಯ ದದೃಶೇ ಸಗಣಂ ಸೋಮಯಾಽಽಗತಮ್ ।
ರುದ್ರಂ ತ್ರಿಲೋಕೈಕಗುರುಂ ನನಾಮ ಶಿರಸಾ ಮುನಿಃ ॥ ೧೪

---

ಅರಿವೇ ಬರಲಿಲ್ಲ. ವಿಶ್ವವನ್ನೇ ಅವನು ಮರೆತಿದ್ದನು (೮–೯). ಈಶ್ವರನಾದ ಭಗವಾನ್ ಶಂಕರನು ಆ ಪರಿಸ್ಥಿತಿಯನ್ನರಿತುಕೊಂಡು, ಗಾಳಿಯು ರಂಧ್ರಪ್ರದೇಶದೊಳಗೆ ಹೋಗುವಂತೆ ಋಷಿಯ ಹೃದಯದೊಳಗೆ ಯೋಗಮಾಯೆಯಿಂದ ಪ್ರವೇಶಿಸಿದನು (೧೦). ಹೊರಗಡೆ ಮಾತ್ರವಲ್ಲ, ತನ್ನ ಒಳಗಡೆ ಹೃದಯದಲ್ಲಿಯೂ ಥಟ್ಟನೆ ಆವಿರ್ಭೂತನಾದ ಶಿವನನ್ನು ಕಂಡು ಮುನಿಯು ವಿಸ್ಮಿತನಾದನು. ವಿದ್ಯುತ್‌ಪಿಂಗಳ ಜಟಾಧರನೂ ತ್ರಿಯಂಬಕನೂ ದಶಭುಜನೂ ಉನ್ನತಾಕೃತಿಯೂ ಆದ ಶಿವನು ಉದಿಸುವ ಸೂರ್ಯನಂತೆ ಪ್ರಕಾಶಿಸುತ್ತಿದ್ದನು (೧೧). ವ್ಯಾಘ್ರಚರ್ಮಾಂಬರಧಾರಿಯಾಗಿ ತ್ರಿಶೂಲ, ಧನುಸ್ಸು, ಬಾಣ, ಖಡ್ಗ, ಢಾಲು, ಅಕ್ಷಮಾಲೆ, ಡಮರುಗ, ಕಪಾಲ, ಪರಶುಗಳನ್ನು ಕೈಗಳಲ್ಲಿ ಹಿಡಿದಿದ್ದನು. ಇದೇನು ? ಏಕೆ ಹೀಗೆ ?—ಎಂದು ಚಕಿತನಾದ ಮುನಿಯು ಸಮಾಧಿಯಿಂದ ವಿರತನಾಗಿ ಎಚ್ಚರಗೊಂಡನು (೧೨-೧೩). ಕಣ್ತೆರೆದು ನೋಡಿದಾಗ ಎದುರಿಗೆ ಉಮಾದೇವಿಯೊಡನೆ ಪರಿವಾರಸಮೇತನಾಗಿ ಆಗಮಿಸಿದ್ದ ತ್ರಿಲೋಕೈಕಗುರುವಾದ ರುದ್ರನನ್ನು ಕಂಡು ಮುನಿಯು ತಲೆಬಾಗಿ ನಮಸ್ಕರಿಸಿದನು. ಅನಂತರ ಪ್ರಮಥಗಣಗಳಿಂದಲೂ ಪಾರ್ವತಿಯಿಂದಲೂ ಸಹಿತನಾದ ಈಶ್ವರನಿಗೆ ಸ್ವಾಗತ, ಆಸನ, ಪಾದ್ಯ, ಅರ್ಘ್ಯ, ಗಂಧ, ಮಾಲಾ, ಧೂಪ, ದೀಪಾದಿಗಳನ್ನರ್ಪಿಸಿ "ಹೇ ಸ್ವಾಮಿ—ಈಶಾನ,

ತಸ್ಮೈ ಸಪರ್ಯಾಂ ವ್ಯದಧಾತ್ ಸಗಣಾಯ ಸಹೋಮಯಾ ।
ಸ್ವಾಗತಾಸನಪಾದಾರ್ಘ್ಯ ಗಂಧಸ್ರಗ್ಧೂಪದೀಪಕೈಃ ॥ ೧೫

ಆಹ ಚಾತ್ಮಾನುಭಾವೇನ ಪೂರ್ಣಕಾಮಸ್ಯ ತೇ ವಿಭೋ ।
ಕರವಾಮ ಕಿಮೀಶಾನ ಯೇನೇದಂ ನಿರ್ವೃತಂ ಜಗತ್ ॥ ೧೬

ನಮಃ ಶಿವಾಯ ಶಾಂತಾಯ ಸತ್ತ್ವಾಯ ಪ್ರಮೃಡಾಯ ಚ ।
ರಜೋಜುಷೇಽಪ್ಯಘೋರಾಯ ನಮಸ್ತುಭ್ಯಂ ತಮೋಜುಷೇ ॥ ೧೭

ಸೂತ ಉವಾಚ—

ಏವಂ ಸ್ತುತಃ ಸ ಭಗವಾನಾದಿದೇವಃ ಸತಾಂ ಗತಿಃ ।
ಪರಿತುಷ್ಟಃ ಪ್ರಸನ್ನಾತ್ಮಾ ಪ್ರಹಸಂಸ್ತಮಭಾಷತ ॥ ೧೮

ಶ್ರೀಭಗವಾನುವಾಚ —

ವರಂ ವೃಣೀಷ್ವ ನಃ ಕಾಮಂ ವರದೇಶಾ ವಯಂ ತ್ರಯಃ ।
ಅಮೋಘಂ ದರ್ಶನಂ ಯೇಷಾಂ ಮರ್ತ್ಯೋ ಯ-
ದ್ವಿಂದತೇಽಮೃತಮ್ ॥ ೧೯

ಬ್ರಾಹ್ಮಣಾಃ ಸಾಧವಃ ಶಾಂತಾ ನಿಸ್ಸಂಗಾ ಭೂತವತ್ಸಲಾಃ ।
ಏಕಾಂತಭಕ್ತಾ ಅಸ್ಮಾಸು ನಿರ್ವೈರಾಃ ಸಮದರ್ಶಿನಃ ॥ ೨೦

---

ನಿನ್ನಿಂದಲೇ ವಿಶ್ವವು ಸೌಖ್ಯವನ್ನನುಭವಿಸುತ್ತದೆ. ಸ್ವಮಹಿಮೆಯಿಂದಲೇ ಪೂರ್ಣಕಾಮನಾಗಿರುವ ನಿನಗೆ ನಾವು ಏನು ಮಾಡಬಲ್ಲೆವು? (೧೪–೧೬). ನಮಃ ಶಿವಾಯ ಶಾಂತಾಯ ಸತ್ತ್ವಾಯ ಪ್ರಮೃಡಾಯ ಚ। ರಜೋಜುಷೇಽಪ್ಯ-ಘೋರಾಯ ನಮಸ್ತುಭ್ಯಂ ತಮೋಜುಷೇ" ಎಂದು ನುಡಿದು ನಮಸ್ಕರಿಸಿದನು (೧೭). ಹೀಗೆ ಸ್ತುತನಾದ ಆದಿದೇವನೂ ಸಜ್ಜನರಿಗೆ ಗತಿಯೂ ಆದ ಭಗವಂತನು ಪ್ರಸನ್ನನಾಗಿ ಸಂತೋಷದಿಂದ ನಗುತ್ತ "ಸೌಮ್ಯ, ಇಷ್ಟವಾದ ವರವನ್ನು ಕೇಳಿಕೊ. ವರವನ್ನು ಕೊಡತಕ್ಕವರು ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ನಾವು ಮೂವರು. ನಮ್ಮ ದರ್ಶನವು ವ್ಯರ್ಥವಾಗತಕ್ಕದ್ದಲ್ಲ. ಮರ್ತ್ಯನು ನಮ್ಮಿಂದ ಮೋಕ್ಷವನ್ನು ಪಡೆಯಬಲ್ಲನು (೧೯). ಸಾಧುಗಳೂ ಶಾಂತರೂ ನಿಃಸಂಗರೂ ಪ್ರಾಣಿವತ್ಸಲರೂ ನಮ್ಮಲ್ಲಿ ಏಕಾಂತಭಕ್ತರೂ ನಿರ್ವೈರರೂ ಸಮದರ್ಶಿಗಳೂ ಆದ ಯಾವ ಬ್ರಾಹ್ಮಣ-

ಸಲೋಕಾ ಲೋಕಪಾಲಾಸ್ತಾನ್ ವಂದಂತ್ಯರ್ಚಂತ್ಯುಪಾಸತೇ ।
ಅಹಂ ಚ ಭಗವಾನ್ ಬ್ರಹ್ಮಾ ಸ್ವಯಂ ಚ ಹರಿರೀಶ್ವರಃ ॥ ೨೧

ನ ತೇ ಮಯ್ಯಚ್ಯುತೇಽಜೇ ಚ ಭಿದಾಮಣ್ವಪಿ ಚಕ್ಷತೇ ।
ನಾತ್ಮನಶ್ಚ ಜನಸ್ಯಾಪಿ ತದ್ ಯುಷ್ಮಾನ್ ವಯಮೀಮಹಿ ॥ ೨೨

ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾಶ್ಚೇತನೋಜ್ಝಿತಾಃ ।
ತೇ ಪುನಂತ್ಯುರುಕಾಲೇನ ಯೂಯಂ ದರ್ಶನಮಾತ್ರತಃ ॥ ೨೩

ಬ್ರಾಹ್ಮಣೇಭ್ಯೋ ನಮಸ್ಯಾಮೋ ಯೇಽಸ್ಮದ್ರೂಪಂ
ತ್ರಯೀಮಯಮ್ ।
ಬಿಭ್ರತ್ಯಾತ್ಮಸಮಾಧಾನತಪಸ್ಸ್ವಾಧ್ಯಾಯಸಂಯಮೈಃ ॥ ೨೪

ಶ್ರವಣಾದ್ ದರ್ಶನಾದ್ ವಾಪಿ ಮಹಾಪಾತಕಿನೋಽಪಿ ವಃ ।
ಶುಧ್ಯೇರನ್ನಂತ್ಯಜಾಶ್ಚಾಪಿ ಕಿಮು ಸಂಭಾಷಣಾದಿಭಿಃ ॥ ೨೫

---

ರಿರುತ್ತಾರೋ ಅವರನ್ನು ಲೋಕದಲ್ಲಿರುವ ಸರ್ವರೂ ಲೋಕಪಾಲರೂ ಸಹ ವಂದಿಸುತ್ತಾರೆ, ಅರ್ಚಿಸುತ್ತಾರೆ, ಉಪಾಸನೆ ಮಾಡುತ್ತಾರೆ. ನಾನೂ ಭಗವಾನ್ ಬ್ರಹ್ಮದೇವನೂ ಈಶ್ವರನಾದ ಶ್ರೀಹರಿಯೂ ಸಹ ಹಾಗೆಯೇ ಮಾಡತಕ್ಕವರು (೨೦–೨೧). ನನ್ನಲ್ಲಿ-ಅಚ್ಯುತನಲ್ಲಿ-ಬ್ರಹ್ಮನಲ್ಲಿ—ಆ ಬ್ರಾಹ್ಮಣರು ಅಣುಮಾತ್ರ ಭೇದವನ್ನೂ ಕಾಣುವುದಿಲ್ಲ. ಹಾಗೆಯೇ ತಮಗೂ ಇತರ ಜನರಿಗೂ ಸಹ ಯಾವ ಭೇದವನ್ನೂ ಅವರು ಕಾಣರು. ಆದ್ದರಿಂದ ನಿಮ್ಮಂತಹ ವಿಪ್ರರನ್ನು ನಾವು ಭಜಿಸುತ್ತೇವೆ! (೨೨). ಜಲಮಯವಾದ ತೀರ್ಥಗಳೂ ಚೇತನಾರಹಿತವಾದ ದೇವ-ಮೂರ್ತಿಗಳೂ ಸಜ್ಜನರ ಹಾಗೆ ಜನರನ್ನು ಪವಿತ್ರಗೊಳಿಸಲಾರವು. ಅವು ಪವಿತ್ರಗೊಳಿಸುವುದಾದರೂ ಬಹಳಕಾಲ ಹಿಡಿಯುತ್ತದೆ. ಸತ್ಪುರುಷರಾದರೋ ದರ್ಶನ ಮಾತ್ರದಿಂದ ಪವಿತ್ರಗೊಳಿಸುತ್ತಾರೆ (೨೩). ಚಿತ್ತೈಕಾಗ್ರತೆ, ತಪಸ್ಸು, ವಿವೇಚನೆ, ಅಧ್ಯಯನ, ವಾಗಾದಿನಿಯಮ—ಇವುಗಳಿಂದ ಯಾರು ನಮ್ಮ ತ್ರಿಮೂರ್ತಿಗಳ ಸ್ವರೂಪವೇ ಆದ ವೇದತ್ರಯವನ್ನು ಧರಿಸಿರುತ್ತಾರೋ ಅಂತಹ ಬ್ರಾಹ್ಮಣರಿಗೆ ನಾವು ನಮಸ್ಕರಿಸುತ್ತೇವೆ (೨೪). ಇಂತಹ ವಿಪ್ರರ ಶ್ರವಣಮಾತ್ರದಿಂದ ಅಥವಾ ದರ್ಶನಮಾತ್ರದಿಂದ ಮಹಾಪಾತಕಿಗಳೂ ಅಂತ್ಯಜರೂ ಸಹ ಪರಿಶುದ್ಧರಾಗಬಲ್ಲರು.

ಸೂತ ಉವಾಚ—

ಇತಿ ಚಂದ್ರಲಲಾಮಸ್ಯ ಧರ್ಮಗುಹ್ಯೋಪಬೃಂಹಿತಮ್ ।
ವಚೋಽಮೃತಾಯನಮೃಷಿರ್ನಾತೃಪ್ಯತ್ ಕರ್ಣಯೋಃ ಪಿಬನ್ ॥ ೨೬

ಸ ಚಿರಂ ಮಾಯಯಾ ವಿಷ್ಣೋರ್ಭ್ರಾಮಿತಃ ಕರ್ಶಿತೋ ಭೃಶಮ್ ।
ಶಿವವಾಗಮೃತಧ್ವಸ್ತಕ್ಲೇಶಪುಂಜಸ್ತಮಬ್ರವೀತ್ ॥ ೨೭

ಋಷಿರುವಾಚ—

ಅಹೋ ಈಶ್ವರಲೀಲೇಯಂ ದುರ್ವಿಭಾವ್ಯಾ ಶರೀರಿಣಾಮ್ ।
ಯನ್ನಮಂತೀಶಿತವ್ಯಾನಿ ಸ್ತುವಂತಿ ಜಗದೀಶ್ವರಾಃ ॥ ೨೮

ಧರ್ಮಂ ಗ್ರಾಹಯಿತುಂ ಪ್ರಾಯಃ ಪ್ರವಕ್ತಾರಶ್ಚ ದೇಹಿನಾಮ್ ।
ಆಚರಂತ್ಯನುಮೋದಂತೇ ಕ್ರಿಯಮಾಣಂ ಸ್ತುವಂತಿ ಚ ॥ ೨೯

ನೈತಾವತಾ ಭಗವತಃ ಸ್ವಮಾಯಾಮಯವೃತ್ತಿಭಿಃ ।
ನ ದುಷ್ಯೇತಾನುಭಾವಸ್ತೈರ್ಮಾಯಿನಃ ಕುಹಕಂ ಯಥಾ ॥ ೩೦

---

ಹೀಗಿರುವಾಗ ಸಂಭಾವಣಾದಿಗಳಿಂದ ಶುದ್ಧರಾಗುತ್ತಾರೆಂದು ಹೇಳಬೇಕಾದ್ದಿದೆಯೆ ?" ಎಂದನು (೨೫). ಹೀಗೆ ಧರ್ಮರಹಸ್ಯದಿಂದ ಕೂಡಿದ ಕರ್ಣಾಮೃತವಾದ ಶ್ರೀ ಚಂದ್ರಶೇಖರನ ನುಡಿಯನ್ನು ಎಷ್ಟು ಕೇಳಿದರೂ ಮುನಿಗೆ ತೃಪ್ತಿಯಾಗಲಿಲ್ಲ. ಆ ಮುನಿಯು ವಿಷ್ಣುವಿನ ಮಾಯೆಗೆ ಒಳಗಾಗಿ ಬಹಳಕಾಲ ಅಲೆದು ತುಂಬ ಆಯಾಸಗೊಂಡಿದ್ದನು. ಈಗ ಶಿವನ ವಾಗಮೃತದಿಂದ ಅವನ ಆಯಾಸವೆಲ್ಲವೂ ಹೊರಟುಹೋಗಲಾಗಿ ಇಂತೆಂದನು (೨೬—೨೭) : “ಆಹಾ ! ಏನು ಈಶ್ವರಲೀಲೆ ಇದು ! ಮಾನವರಿಗೆ ಅರ್ಥವಾಗತಕ್ಕದ್ದಲ್ಲ ! ಸ್ವಯಂ ಜಗದೀಶ್ವರರು ತಮ್ಮಿಂದ ಆಳಲ್ಪಡಬೇಕಾದ ಪ್ರಾಣಿಗಳನ್ನು ವಂದಿಸುತ್ತಾರೆ, ಹೊಗಳುತ್ತಾರೆ ! ಅಥವಾ ಧರ್ಮೋಪದೇಶಕರೂ ಸಹ ಜನರಿಗೆ ಧರ್ಮವನ್ನು ತಿಳಿಸಿಕೊಡುವುದಕ್ಕಾಗಿ ಅದೇ ಧರ್ಮವನ್ನು ವಿಶೇಷವಾಗಿ ಆಚರಿಸುವುದುಂಟು, ಅನುಮೋದಿಸುವುದುಂಟು, ಅನ್ಯರ ಆಚರಣೆಯನ್ನು ಹೊಗಳುವುದುಂಟು ! (೨೮–೨೯). ಲೋಕಸಂಗ್ರಹಾರ್ಥ ವಾಗಿ ನಡೆಯುವ ಮಾಯಿಕವಾದ ಈ ನಮಸ್ಕಾರಾದಿ ವ್ಯಾಪಾರಗಳಿಂದ ಭಗವಂತನಾದ ನಿನ್ನ ಮಹಿಮೆಗೆ ಯಾವ ಕುಂದೂ ಇರುವುದಿಲ್ಲ. ಇವೆಲ್ಲವೂ ಐಂದ್ರಜಾಲಿಕನ

ಸೃಷ್ಟ್ವೇದಂ ಮನಸಾ ವಿಶ್ವಮಾತ್ಮನಾನುಪ್ರವಿಶ್ಯ ಯಃ ।
ಗುಣೈಃ ಕುರ್ವದ್ಭಿರಾಭಾತಿ ಕರ್ತೇವ ಸ್ವಪ್ನದೃಗ್ ಯಥಾ ॥ ೩೧

ತಸ್ಮೈ ನಮೋ ಭಗವತೇ ತ್ರಿಗುಣಾಯ ಗುಣಾತ್ಮನೇ ।
ಕೇವಲಾಯಾದ್ವಿತೀಯಾಯ ಗುರವೇ ಬ್ರಹ್ಮಮೂರ್ತಯೇ ॥ ೩೨

ಕಂ ವೃಣೇ ನು ಪರಂ ಭೂಮನ್ ವರಂ ತ್ವದ್ ವರದರ್ಶನಾತ್ ।
ಯದ್ದರ್ಶನಾತ್ ಪೂರ್ಣಕಾಮಃ ಸತ್ಯಕಾಮಃ ಪುಮಾನ್ ಭವೇತ್ ॥ ೩೩

ವರಮೇಕಂ ವೃಣೇಽಥಾಪಿ ಪೂರ್ಣಾತ್ ಕಾಮಾಭಿವರ್ಷಣಾತ್ ।
ಭಗವತ್ಯಚ್ಯುತಾಂ ಭಕ್ತಿಂ ತತ್ಪರೇಷು ತಥಾ ತ್ವಯಿ ॥ ೩೪

ಸೂತ ಉವಾಚ—

ಇತ್ಯರ್ಚಿತೋಽಭಿಷ್ಟುತಶ್ಚ ಮುನಿನಾ ಸೂಕ್ತಯಾ ಗಿರಾ ।
ತಮಾಹ ಭಗವಾನ್ ಶರ್ವಃ ಶರ್ವಯಾ ಚಾಭಿನಂದಿತಃ ॥ ೩೫

---

ಮಾಯಾಮಯವಾದ ವರ್ತನೆಯಂತೆಯೇ ಸರಿ! (೩೦). ಮನಸ್ಸಿನಿಂದಲೇ ಈ ವಿಶ್ವವನ್ನು ಸೃಷ್ಟಿಮಾಡಿ, ತಾನು ಅದರೊಳಗೆ [1]ಅನುಪ್ರವೇಶಿಸಿ, ಕರ್ತೃಗಳಾಗಿರುವ ಸತ್ತ್ವಾದಿಗುಣಗಳ ಮೂಲಕ, ಕನಸುಕಾಣುವವನ ಹಾಗೆ ತಾನೇ ಕರ್ತೃವೋ ಎಂಬಂತೆ ತೋರಿಸಿಕೊಳ್ಳತಕ್ಕವನು ನೀನು! (೩೧). ಅಂತಹ ಭಗವಂತನಾದ ನಿನಗೆ ನಮಸ್ಕಾರ. ತ್ರಿಗುಣನೂ ಗುಣನಿಯಂತೃವೂ ಕೇವಲನೂ ಅದ್ವಿತೀಯನೂ ಗುರುವೂ ಪರಬ್ರಹ್ಮಮೂರ್ತಿಯೂ ಆದ ನಿನಗೆ ನಮಸ್ಕಾರ. ಹೇ ಭೂಮನ್, ಆತ್ಮದರ್ಶನವೆಂಬ ವರವನ್ನು ನೀನೇ ಕರುಣಿಸಿರುವಾಗ ಇದಕ್ಕಿಂತ ಬೇರೆಯಾಗಿ ಇನ್ನು ಯಾವ ವರವನ್ನು ಬೇಡಲಿ? ನಿನ್ನ ದರ್ಶನಮಾತ್ರದಿಂದಲೇ ಮಾನವನು ಸರ್ವಾನಂದ ಸಂದೋಹವನ್ನು ಪಡೆದವನೂ ಸತ್ಯವಾದ ಆನಂದ ಸ್ವರೂಪನೂ ಆಗಿ ಬಿಡುವನು (೩೨–೩೩). ಆದರೆ ನನ್ನ ಕಾಮನೆಗಳೆಲ್ಲವೂ ಪೂರ್ಣವಾಗಿದ್ದರೂ ಉತ್ತಮವಾದ ಈ ಒಂದು ವರವನ್ನು ಕೇಳಿಕೊಳ್ಳುತ್ತೇನೆ. ಏನೆಂದರೆ, ಭಗವಂತನಾದ ವಿಷ್ಣುವಿನಲ್ಲಿಯೂ ಅವನ ಭಕ್ತರಲ್ಲಿಯೂ ನಿನ್ನಲ್ಲಿಯೂ ನನಗೆ ಅಚಲವಾದ ಭಕ್ತಿಯು ಸದಾ ನೆಲೆಸಿರಲಿ" ಎಂದನು (೩೪). ಈ ಪ್ರಕಾರವಾಗಿ ಮಾರ್ಕಂಡೇಯ

---

1. ತತ್ ಸೃಷ್ಟ್ವಾ ತದೇವಾನುಪ್ರಾವಿಶತ್ ॥ ಜೀವಾತ್ಮನ ಅವಿದ್ಯಾಚೇಷ್ಟಿತಕ್ಕೆ ಕನಸು ಕಾಣತಕ್ಕವನ ದೃಷ್ಟಾಂತ.

ಕಾಮೋ ಮಹರ್ಷೇ ಸರ್ವೋಽಯಂ ಭಕ್ತಿಮಾಂಸ್ತ್ವಮಧೋಕ್ಷಜೇ ।
ಆಕಲ್ಪಾಂತಾದ್ ಯಶಃ ಪುಣ್ಯಮಜರಾಮರತಾ ತಥಾ ॥ ೩೬

ಜ್ಞಾನಂ ತ್ರೈಕಾಲಿಕಂ ಬ್ರಹ್ಮನ್ ವಿಜ್ಞಾನಂ ಚ ವಿರಕ್ತಿಮತ್ ।
ಬ್ರಹ್ಮವರ್ಚಸ್ವಿನೋ ಭೂಯಾತ್ ಪುರಾಣಾಚಾರ್ಯತಾಸ್ತು ತೇ ॥ ೩೭

ಸೂತ ಉವಾಚ—

ಏವಂ ವರಾನ್ ಸ ಮುನಯೇ ದತ್ತ್ವಾಗಾತ್ತ್ರ್ಯಕ್ಷ ಈಶ್ವರಃ ।
ದೇವ್ಯೈ ತತ್ಕರ್ಮ ಕಥಯನ್ನನುಭೂತಂ ಪುರಾಮುನಾ ॥ ೩೮

ಸೋಽಪ್ಯವಾಪ್ತಮಹಾಯೋಗಮಹಿಮಾ ಭಾರ್ಗವೋತ್ತಮಃ ।
ವಿಚರತ್ಯಧುನಾಪ್ಯದ್ಧಾ ಹರಾವೇಕಾಂತತಾಂ ಗತಃ ॥ ೩೯

ಅನುವರ್ಣಿತಮೇತತ್ತೇ ಮಾರ್ಕಂಡೇಯಸ್ಯ ಧೀಮತಃ ।
ಅನುಭೂತಂ ಭಗವತೋ ಮಾಯಾವೈಭವಮದ್ಭುತಮ್ ॥ ೪೦

---

ಮುನಿಯು ಸೂಕ್ತವಾದ ವಾಣಿಯಿಂದ ಪೂಜಿಸಿ ಸ್ತುತಿಸಿದಮೇಲೆ, ಭಗವಾನ್ ಶಂಕರನು ಪಾರ್ವತಿಯಿಂದಲೂ ಅನುಮೋದಿತನಾಗಿ "ಹೇ ಮಹರ್ಷಿಯೆ, ನೀನು ವಿಷ್ಣುಭಕ್ತನಾಗಿರುವುದರಿಂದ ಈ ಇಷ್ಟಾರ್ಥವು ಸಿದ್ಧಿಸಲಿ. ಕಲ್ಪಾಂತದವರೆಗೆ ಪುಣ್ಯಯಶಸ್ಸುಗಳು ವರ್ಧಿಸಲಿ. ನಿನಗೆ ಮುಪ್ಪುಸಾವುಗಳು ಬರದಿರಲಿ (೩೫–೩೬). ಬ್ರಾಹ್ಮಣೋತ್ತಮ, ನಿನಗೆ ತ್ರಿಕಾಲಜ್ಞಾನವೂ ಶಾಸ್ತ್ರಜ್ಞಾನವೂ ವೈರಾಗ್ಯವೂ ಪ್ರಾಪ್ತವಾಗಲಿ. ಬ್ರಹ್ಮವರ್ಚಸ್ವಿಯಾದ ನಿನಗೆ ಪುರಾಣಾಚಾರ್ಯತ್ವವೂ ಪ್ರಾಪ್ತವಾಗಲಿ!" ಎಂದು ವರವನ್ನಿತ್ತನು (೩೭). ಈ ರೀತಿಯಲ್ಲಿ ತ್ರ್ಯಂಬಕನಾದ ಈಶ್ವರನು ಮುನಿಗೆ ವರಗಳನ್ನಿತ್ತು ಆ ಮುನಿಯ ತಪಶ್ಚರ್ಯೆ ಮುಂತಾದ್ದನ್ನೂ ಆತನು ಅನುಭವಿಸಿದ ಶ್ರೀಹರಿಯ ಮಾಯಾ ವೈಭವವನ್ನೂ ಉಮಾದೇವಿಗೆ ವರ್ಣಿಸುತ್ತ ಹೊರಟುಹೋದನು (೩೮). ಶೌನಕರೆ, ನಿಮ್ಮ ಭೃಗುವಂಶೋತ್ಪನ್ನನಾದ ಆ ಮಾರ್ಕಂಡೇಯಮುನಿಯು ಮಹಾಯೋಗಬಲದಿಂದ ಮಹಿಮೆಗಳನ್ನು ಗಳಿಸಿದ್ದಾನೆ. ಶ್ರೀಹರಿಯ ಏಕಾಂತಭಕ್ತನಾಗಿ ಈಗಲೂ ಸಹ ಸಂಚರಿಸಿಕೊಂಡಿದ್ದಾನೆ (೩೯). ಹೀಗೆ ಮಾರ್ಕಂಡೇಯಮುನಿಯ ಚರಿತೆಯನ್ನೂ ಆತನು ಅನುಭವಿಸಿದ ಭಗವಂತನ ಮಾಯಾ ವೈಭವವನ್ನೂ ನಿಮಗೆ ತಿಳಿಸಿದ್ದೇನೆ. ಮನುಷ್ಯರಿಗೆ ಸರ್ಗ ಪ್ರಳಯರೂಪವಾದ ಯಾವ ಸಂಸಾರ

ಏತತ್ ಕೇಚಿದವಿದ್ವಾಂಸೋ ಮಾಯಾಸಂಸೃತಿಮಾತ್ಮನಃ ।
ಅನಾದ್ಯಾವರ್ತಿತಂ ನೃಣಾಂ ಕಾದಾಚಿತ್ಕಂ ಪ್ರಚಕ್ಷತೇ ॥ ೪೧

ಯ ಏವಮೇತದ್ ಭೃಗುವರ್ಯ ವರ್ಣಿತಂ
ರಥಾಂಗಪಾಣೇರನುಭಾವಭಾವಿತಮ್ ।
ಸಂಶ್ರಾವಯೇತ್ ಸಂಶೃಣುಯಾದು ತಾವುಭೌ
ತಯೋರ್ನ ಕರ್ಮಾಶಯಸಂಸೃತಿರ್ಭವೇತ್ ॥ ೪೨

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ದಶಮಾಧ್ಯಾಯಃ



ಉಂಟೋ ಇದು ಪರಮಾತ್ಮನ ಮಾಯಾ ಕಲ್ಪಿತವೆಂಬುದನ್ನರಿಯದಿರುವ ಕೆಲವು ಜನರು ಮಾರ್ಕಂಡೇಯನಿಗೆ ಕದಾಚಿತ್ತಾಗಿ ಒದಗಿದೆ ಈ ಮಾಯಾ ವೈಭವವು ಅನಾದಿಯಾಗಿ [1]ಬಹುಕಲ್ಪದವರೆಗೆ ನಡೆಯಿತೆಂದು ಹೇಳುತ್ತಾರೆ (೪೦–೪೧). ಶೌನಕಮುನಿಗಳೆ, ಶ್ರೀಮನ್ನಾರಾಯಣನ ಲೀಲಾಮಹಿಮೆಗಳನ್ನು ವರ್ಣಿಸುವ ಈ ಚಾರಿತ್ರವನ್ನು ಯಾರು ಪ್ರವಚನಮಾಡುವರೋ, ಯಾರು ಆಲಿಸುವರೋ ಅವರೀರ್ವರಿಗೂ ಕರ್ಮವಾಸನೆಯಿಂದುಂಟಾಗುವ ಸಂಸಾರವು ಇರುವುದಿಲ್ಲ" (೪೨) ಎಂದರು.

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ದ್ವಾದಶಸ್ಕಂಧದಲ್ಲಿ
ಹತ್ತನೆಯ ಅಧ್ಯಾಯ



1. ಮಾರ್ಕಂಡೇಯನ ಆಯುಸ್ಸು ಒಂದು ಕಲ್ಪದವರೆಗೆ ಮಾತ್ರ. ಬಾಲಮುಕುಂದನ ಉದರದೊಳಗೆ ಏಳುಸಲ ಪ್ರವೇಶಿಸಿ ಸಪ್ತಕಲ್ಪಗಳವರೆಗೆ ಇದ್ದಂತೆ ಮಾರ್ಕಂಡೇಯನಿಗೆ ಮಾಯೆಯಿಂದ ಕಾಣಿಸಿತು. ಆದ್ದರಿಂದ ಆತನು ಸಪ್ತಕಲ್ಪದವರೆಗೆ ಬದುಕಿದ್ದಾನೆ ಎನ್ನುತ್ತಾರೆ. ಅವನು ಇದ್ದದ್ದು ಸ್ವಲ್ಪಹೊತ್ತು ಮಾತ್ರ. ಆದ್ದರಿಂದ ವಿರೋಧವಿಲ್ಲ—ಎಂದು ಅಭಿಪ್ರಾಯ.

# ಏಕಾದಶಾಧ್ಯಾಯಃ

ಶೌನಕ ಉವಾಚ—

ಅಥೇಮಮರ್ಥಂ ಪೃಚ್ಛಾಮೋ ಭವಂತಂ ಬಹುವಿತ್ತಮಮ್ ।
ಸಮಸ್ತತಂತ್ರರಾದ್ಧಾಂತೇ ಭವಾನ್ ಭಾಗವತತತ್ತ್ವವಿತ್ ॥ ೧

ತಾಂತ್ರಿಕಾಃ ಪರಿಚರ್ಯಾಯಾಂ ಕೇವಲಸ್ಯ ಶ್ರಿಯಃ ಪತೇಃ ।
ಅಂಗೋಪಾಂಗಾಯುಧಾಕಲ್ಪಂ ಕಲ್ಪಯಂತಿ ಯಥಾ ಚ ಯೈಃ ॥ ೨

ತನ್ನೋ ವರ್ಣಯ ಭದ್ರಂ ತೇ ಕ್ರಿಯಾಯೋಗಂ ಬುಭುತ್ಸತಾಮ್ ।
ಯೇನ ಕ್ರಿಯಾನೈಪುಣೇನ ಮರ್ತ್ಯೋ ಯಾಯಾದಮರ್ತ್ಯತಾಮ್ ॥ ೩

ಸೂತ ಉವಾಚ—

ನಮಸ್ಕೃತ್ಯ ಗುರೂನ್ ವಕ್ಷ್ಯೇ ವಿಭೂತೀರ್ವೈಷ್ಣವೀರಪಿ ।
ಯಾಃ ಪ್ರೋಕ್ತಾ ವೇದತಂತ್ರಾಭ್ಯಾಮಾಚಾರ್ಯೈಃ ಪದ್ಮಜಾದಿಭಿಃ ॥ ೪

## ಅಧ್ಯಾಯ ೧೧

ಮಹಾಪುರುಷನ ವರ್ಣನೆ. ಆತನ ಅಂಗ, ಆಯುಧ—ಮುಂತಾದವುಗಳ ಸಂಕೇತ. ತಾಂತ್ರಿಕಪೂಜಾ ವಿಧಾನ. ಸೌರವ್ಯೂಹದ ವರ್ಣನೆ.

ಆಗ ಶೌನಕರು ಸೂತಪೌರಾಣಿಕರನ್ನು ಕುರಿತು "ಸೂತರೆ, ಭಾಗವತರೆ, ನೀವು ತಂತ್ರಸಿದ್ಧಾಂತಗಳ ರಹಸ್ಯವನ್ನೂ ಬಲ್ಲವರು, ಬಹುಜ್ಞರಾಗಿದ್ದೀರಿ. ಆದ್ದರಿಂದ ಇನ್ನೊಂದು ವಿಷಯವನ್ನು ನಿಮ್ಮಲ್ಲಿ ಕೇಳಬೇಕೆಂದಿದ್ದೇವೆ (೧). ಏನೆಂದರೆ, ಕೇವಲ ಚೈತನ್ಯಘನನಾದ ಲಕ್ಷ್ಮೀಪತಿ ಶ್ರೀವಿಷ್ಣುವಿನ ಸೇವಾವಿಧಿಯಲ್ಲಿ ತಾಂತ್ರಿಕರು ಪಾದಾದ್ಯಂಗಗಳನ್ನೂ ಗರುಡಾದ್ಯುಪಾಂಗಗಳನ್ನೂ ಸುದರ್ಶನಾದ್ಯಾಯುಧಗಳನ್ನೂ ಕೌಸ್ತುಭಾದಿ ಭೂಷಣಗಳನ್ನೂ ಕಲ್ಪಿಸುತ್ತಾರಲ್ಲವೆ? ಯಾವ ರೀತಿಯಾಗಿ ಯಾವ ತತ್ತ್ವಗಳನ್ನನುಸರಿಸಿ ಅವನ್ನು ಕಲ್ಪಿಸುತ್ತಾರೆಂಬುದನ್ನು ನಮಗೆ ಹೇಳೋಣವಾಗಲಿ. ನಿಮಗೆ ಮಂಗಳವಾಗಲಿ; ಆ ಕ್ರಿಯಾಯೋಗವನ್ನು ತಿಳಿದುಕೊಳ್ಳಲು ನಾವು ಇಚ್ಛಿಸುತ್ತೇವೆ. ಆ ಕ್ರಿಯಾಯೋಗದ ನೈಪುಣ್ಯದಿಂದ ಮರ್ತ್ಯನು ಅಮರ್ತ್ಯನಾಗುತ್ತಾನಲ್ಲವೆ?" ಎಂದರು (೨–೩). ಸೂತರು ಇತೆಂದರು. "ಸದ್ಗುರುಗಳಿಗೆ ನಮಸ್ಕಾರಗಳನ್ನರ್ಪಿಸಿ ಈ ವೈಷ್ಣವ ವಿಭೂತಿ

ಮಾಯಾದ್ಯೈರ್ನವಭಿಸ್ತತ್ತ್ವೈಃ ಸ ವಿಕಾರಮಯೋ ವಿರಾಟ್ ।
ನಿರ್ಮಿತೋ ದೃಶ್ಯತೇ ಯತ್ರ ಸಚಿತ್ಕೇ ಭುವನತ್ರಯಮ್ ॥ ೫

ಏತದ್ ವೈ ಪೌರುಷಂ ರೂಪಂ ಭೂಃ ಪಾದೌ ದ್ಯೌಃ ಶಿರೋ ನಭಃ ।
ನಾಭಿಃ ಸೂರ್ಯೋಽಕ್ಷಿಣೀ ನಾಸೇ ವಾಯುಃ ಕರ್ಣೌ ದಿಶಃ ಪ್ರಭೋಃ ॥ ೬

ಪ್ರಜಾಪತಿಃ ಪ್ರಜನನಮಪಾನೋ ಮೃತ್ಯುರೀಶಿತುಃ ।
ತದ್ಬಾಹವೋ ಲೋಕಪಾಲಾ ಮನಶ್ಚಂದ್ರೋ ಭ್ರುವೌ ಯಮಃ ॥ ೭

ಲಜ್ಜೋತ್ತರೋಽಧರೋ ಲೋಭೋ ದಂತಾ ಜ್ಯೋತ್ಸ್ನಾಸ್ಮಯೋ ಭ್ರಮಃ ।
ರೋಮಾಣಿ ಭೂರುಹಾ ಭೂಮ್ನೋ ಮೇಘಾಃ ಪುರುಷಮೂರ್ಧಜಾಃ ॥ ೮

---

ಮಹಿಮೆಗಳನ್ನು ವಿವರಿಸುವೆನು. ಬ್ರಹ್ಮನೇ ಮೊದಲಾದ ಆಚಾರ್ಯರು ವೇದ ಆಗಮಗಳೆರಡರಿಂದಲೂ ಇವನ್ನು ವರ್ಣಿಸಿದ್ದಾರೆ (೪). ಮಾಯಾದಿ [1]ನವತತ್ತ್ವಗಳೊಡನೆ ಯಾವ ಈ ಷೋಡಶ ವಿಕಾರಗಳುಂಟೋ ಈ ಸ್ವರೂಪಕ್ಕೆ ವಿರಾಟ್ ಎಂದು ಹೆಸರು. ಚಿತ್ತಿನಿಂದ ಅಧಿಷ್ಠಿತವಾದ ಈ ವಿರಾಟನಲ್ಲಿ ಭುವನತ್ರಯವೂ ಕಂಡುಬರುತ್ತದೆ (೫). ಇದೇ ಪೌರುಷರೂಪ—ಎಂದರೆ [2]ಈಶ್ವರನ ರೂಪ. ಭೂಮಿಯೇ ಈ ಪುರುಷನ ಪಾದದ್ವಯ. ದ್ಯುಲೋಕವು ಶಿರಸ್ಸು. ಆಕಾಶವು ನಾಭಿ. ಸೂರ್ಯನು ಕಣ್ಣು. ವಾಯುವೇ ನಾಸಿಕ. ದಿಕ್ಕುಗಳು ಕಿವಿ. ಪ್ರಜಾಪತಿಯು ಶಿಶ್ನ. ಮೃತ್ಯುವೇ ಈಶ್ವರನ ಗುದ. ದಿಕ್ಪಾಲರೇ ಬಾಹುಗಳು. ಚಂದ್ರನು ಮನಸ್ಸು. ಯಮನೇ ಎರಡು ಹುಬ್ಬುಗಳು (೬—೭). ಲಜ್ಜೆ ಈಶ್ವರನ ಮೇಲ್ದುಟಿ. ಲೋಭವು ಕೆಳದುಟಿ, ಬೆಳದಿಂಗಳು ಪುರುಷನ ಹಲ್ಲುಗಳು. ಭ್ರಮಣವೇ ಈತನ ನಗು. ಮರಗಳು, ರೋಮಗಳು, ಮೋಡಗಳು ಪುರುಷನ

---

1. ಪ್ರಕೃತಿ, ಸೂತ್ರ, ಮಹತ್, ಅಹಂಕಾರ, ಪಂಚತನ್ಮಾತ್ರೆಗಳು—ಇವು ನವತತ್ತ್ವಗಳು, ಮಾಯೆಯೇ ಪ್ರಕೃತಿ.

2. ಈಶ್ವರನಿಂದ ಅಧಿಷ್ಠಿತವಾದ ಪ್ರಯುಕ್ತ ವಿರಾಡನ್ನೇ ಈಶ್ವರನ ರೂಪವೆಂದು ಹೇಳಿದೆ.

ಯಾವಾನಯಂ ವೈ ಪುರುಷೋ ಯಾವತ್ಯಾ ಸಂಸ್ಥಯಾ ಮಿತಃ ।
ತಾವಾನಸಾವಪಿ ಮಹಾಪುರುಷೋ ಲೋಕಸಂಸ್ಥಯಾ ॥ ೯

ಕೌಸ್ತುಭವ್ಯಪದೇಶೇನ ಸ್ವಾತ್ಮಜ್ಯೋತಿರ್ಬಿಭರ್ತ್ಯಜಃ ।
ತತ್ಪ್ರಭಾ ವ್ಯಾಪಿನೀ ಸಾಕ್ಷಾತ್ ಶ್ರೀವತ್ಸಮುರಸಾ ವಿಭುಃ ॥ ೧೦

ಸ್ವಮಾಯಾಂ ವನಮಾಲಾಖ್ಯಾಂ ನಾನಾಗುಣಮಯೀಂ ದಧತ್ ।
ವಾಸಶ್ಛಂದೋಮಯಂ ಪೀತಂ ಬ್ರಹ್ಮಸೂತ್ರಂ ತ್ರಿವೃತ್ ಸ್ವರಮ್ ॥ ೧೧

ಬಿಭರ್ತಿ ಸಾಂಖ್ಯಂ ಯೋಗಂ ಚ ದೇವೋ ಮಕರಕುಂಡಲೇ ।
ಮೌಲಿಂ ಪದಂ ಪಾರಮೇಷ್ಠ್ಯಂ ಸರ್ವಲೋಕಾಭಯಂಕರಮ್ ॥ ೧೨

ಅವ್ಯಾಕೃತಮನಂತಾಖ್ಯಮಾಸನಂ ಯದಧಿಷ್ಠಿತಃ ।
ಧರ್ಮಜ್ಞಾನಾದಿಭಿರ್ಯುಕ್ತಂ ಸತ್ತ್ವಂ ಪದ್ಮಮಿಹೋಚ್ಯತೇ ॥ ೧೩

---

ಕೇಶಗಳು. ವ್ಯಷ್ಟಿಯಾದ ಪುರುಷನು (ಮನುಷ್ಯನು) ಎಷ್ಟು ಎತ್ತರವಾಗಿ ಯಾವ ಯಾವ ಅವಯವ ಸಂನಿವೇಶಗಳಿಂದ ಕೂಡಿದ್ದಾನೋ ಹಾಗೆ ಸಮಷ್ಟಿ ಯಾದ ಈ ಮಹಾಪುರುಷನೂ (ವಿರಾಟ್ ಪುರುಷನೂ) ಅಷ್ಟು ಎತ್ತರವಾಗಿ ಆಯಾ ಅವಯವ [1]ಸಂನಿವೇಶಗಳಿಂದ ಕೂಡಿದ್ದಾನೆ (೮–೯). ಕೌಸ್ತುಭವೆಂಬ ಹೆಸರಿನಿಂದ ಶುದ್ಧವಾದ ಜೀವಚೈತನ್ಯವನ್ನು ವಿಷ್ಣುವು ಧರಿಸಿದ್ದಾನೆ. ಸರ್ವ ವ್ಯಾಪಿಯಾದ ಕೌಸ್ತುಭಪ್ರಭೆಯೇ ಶ್ರೀವತ್ಸ. ಅದನ್ನು ತನ್ನ ಹೃದಯದಲ್ಲಿ ಧರಿಸಿ ದ್ದಾನೆ. ನಾನಾ ಗುಣಯುತವಾದ ತನ್ನ ಮಾಯೆಯೇ ವನಮಾಲೆ. ವೇದವೇ ಪೀತಾಂಬರ. ತ್ರಿಮಾತ್ರಿಕವಾದ ಪ್ರಣವವೇ ಯಜ್ಞೋಪವೀತ (೧೦–೧೧). ಸಾಂಖ್ಯ, ಯೋಗಗಳೆಂಬ ಎರಡು ಮಕರಕುಂಡಲಗಳನ್ನು ಈ ದೇವನು ಧರಿಸಿ ದ್ದಾನೆ. ಸರ್ವಲೋಕಗಳಿಗೂ ಅಭಯವನ್ನು ನೀಡುವ ಬ್ರಹ್ಮಲೋಕವೇ ಈತನ ಶಿರಸ್ಸು. ಈತನು ಹತ್ತಿ ಕುಳಿತಿರುವ ಅನಂತನೆಂಬ ಆಸನವೇ ಅವ್ಯಾಕೃತ (ಪ್ರಕೃತಿ). ಪದ್ಮವೆಂದರೆ ಧರ್ಮಜ್ಞಾನಾದಿಗಳಿಂದ ಯುಕ್ತವಾದ ಸತ್ತ್ವಗುಣ (೧೨–೧೩).

---

1. ಪಿಂಡ-ಬ್ರಹ್ಮಾಂಡಗಳಿಗೆ ಸಾದೃಶ್ಯವನ್ನೂ ಏಕತೆಯನ್ನೂ ಹೇಳುವುದು ಉದ್ದಿಷ್ಟ ವಾಗಿದೆ. ಮನುಷ್ಯನು ತನ್ನ ಕೈ ಅಳತೆಯಲ್ಲಿ ಏಳು ವಿತಸ್ತಿಗಳ ಎತ್ತರವಿದ್ದಾನೆ. ಹಾಗೆ ವಿರಾಟ್ ಪುರುಷನೂ ತನ್ನ ಅಳತೆಯ ಪ್ರಕಾರ ಏಳು ವಿತಸ್ತಿಗಳಷ್ಟು ಎತ್ತರವಾಗಿರುತ್ತಾನೆ —ಎಂದು ಊಹಿಸಿಕೊಳ್ಳಬೇಕು. "ವಿತಸ್ತಿರ್ದ್ವಾದಶಾಂಗುಲಃ"—ಅಮರ.

ಓಜಸ್ಸಹೋಬಲಯುತಂ ಮುಖ್ಯತತ್ತ್ವಂ ಗದಾಂ ದಧತ್ ।
ಅಪಾಂ ತತ್ತ್ವಂ ದರವರಂ ತೇಜಸ್ತತ್ತ್ವಂ ಸುದರ್ಶನಮ್ ॥ ೧೪

ನಭೋನಿಭಂ ನಭಸ್ತತ್ತ್ವಮಸಿಂ ಚರ್ಮ ತಮೋಮಯಮ್ ।
ಕಾಲರೂಪಂ ಧನುಃ ಶಾರ್ಙ್ಗಂ ತಥಾ ಕರ್ಮಮಯೇಷುಧಿಮ್ ॥ ೧೫

ಇಂದ್ರಿಯಾಣಿ ಶರಾನಾಹುರಾಕೂತೀರಸ್ಯ ಸ್ಯಂದನಮ್ ।
ತನ್ಮಾತ್ರಾಣ್ಯಸ್ಯಾಭಿವ್ಯಕ್ತಿಂ ಮುದ್ರಯಾರ್ಥಕ್ರಿಯಾತ್ಮತಾಮ್ ॥ ೧೬

ಮಂಡಲಂ ದೇವಯಜನಂ ದೀಕ್ಷಾ ಸಂಸ್ಕಾರ ಆತ್ಮನಃ ।
ಪರಿಚರ್ಯಾ ಭಗವತ ಆತ್ಮನೋ ದುರಿತಕ್ಷಯಃ ॥ ೧೭

ಭಗವಾನ್ ಭಗಶಬ್ದಾರ್ಥಂ ಲೀಲಾಕಮಲಮುದ್ವಹನ್ ।
ಧರ್ಮಂ ಯಶಶ್ಚ ಭಗವಾಂಶ್ಚಾಮರವ್ಯಜನೇऽಭಜತ್ ॥ ೧೮

ಆತಪತ್ರಂ ತು ವೈಕುಂಠಂ ದ್ವಿಜಾ ಧಾಮಾಕುತೋಭಯಮ್ ।
ತ್ರಿವೃದ್ ವೇದ ಸುಪರ್ಣಾಖ್ಯೋ ಯಜ್ಞಂ ವಹತಿ ಪೂರುಷಮ್ ॥ ೧೯

---

ಓಜಃಸಹೋಬಲಯುತವಾದ ಪ್ರಾಣತತ್ತ್ವವೆಂಬ ಗದೆಯನ್ನು ವಿಷ್ಣುವು ಧರಿಸಿದ್ದಾನೆ. ಜಲತತ್ತ್ವವೇ ಶಂಖ. ತೇಜಸ್ತತ್ತ್ವವೇ ಸುದರ್ಶನ ಚಕ್ರ. ಆಕಾಶದಂತೆ ಶ್ಯಾಮಲವರ್ಣವಾದ ಖಡ್ಗವೇ ಆಕಾಶತತ್ತ್ವ. ತಮೋಗುಣವೇ ಢಾಲು. ಕಾಲವೇ ಶಾರ್ಙ್ಗವೆಂಬ ಧನುಸ್ಸು ಕರ್ಮಜಾಲವೇ ಬತ್ತಳಿಕೆ (೧೪-೧೫). ಇಂದ್ರಿಯಗಳು ವಿಷ್ಣುವಿನ ಶರಗಳು. ಕ್ರಿಯಾಶಕ್ತಿಯುಕ್ತವಾದ ಮನಸ್ಸು ಅವನ ರಥ. ಪಂಚತನ್ಮಾತ್ರೆಗಳು ವಿಷ್ಣುರಥದ ಆಕೃತಿ. ಅಭಯಾದಿ ಮುದ್ರೆಯಿಂದ ವಿಷ್ಣುವು ಅಭಯದ, ವರದ—ಇತ್ಯಾದಿಯಾಗಿ ತಿಳಿಯತಕ್ಕದ್ದು (೧೬). ಸೂರ್ಯಮಂಡಲ ಅಥವಾ ಅಗ್ನಿಮಂಡಲವು ದೇವಪೂಜಾಸ್ಥಳ. ತನಗೆ ಗುರುವು ನೀಡಿದ ದೀಕ್ಷಾಸಂಸ್ಕಾರವೇ ಪೂಜಾಧಿಕಾರ. ತನ್ನ ದುರಿತವನ್ನು ಹೋಗಲಾಡಿಸಿಕೊಳ್ಳುವುದೇ ಭಗವಂತನ ಪರಿಚರ್ಯೆ (೧೭). ಭಗವಂತನು ಭಗಶಬ್ದಾರ್ಥವಾದ ಐಶ್ವರ್ಯಾದಿಷಾಡ್ಗುಣ್ಯವನ್ನು ಲೀಲಾಕಮಲವನ್ನಾಗಿ ಧರಿಸಿದ್ದಾನೆ. ಧರ್ಮವು ಆತನ ಚಾಮರ. ಯಶಸ್ಸು ಬೀಸಣಿಗೆ. ಅವನ ಶ್ವೇತಚ್ಛತ್ರವೆಂದರೆ ನಿರ್ಭಯವಾದ ವೈಕುಂಠಧಾಮ. ಋಗ್ಯಜುಃಸಾಮಗಳೆಂದು ರೂಪತ್ರಯವುಳ್ಳ ವೇದವು ಗರುಡ. ಈ ಗರುಡನು ಯಜ್ಞರೂಪನಾದ ಪುರುಷನನ್ನು ಹೊರುತ್ತದೆ (೧೮-೧೯).

ಅನಪಾಯಿನೀ ಸಾ ಶಕ್ತಿಃ ಶ್ರೀಃ ಸಾಕ್ಷಾದಾತ್ಮನೋ ಹರೇಃ ।
ವಿಷ್ವಕ್ಸೇನಸ್ತಂತ್ರಮೂರ್ತಿರ್ವಿದಿತಃ ಪಾರ್ಷದಾಧಿಪಃ ।
ನಂದಾದಯೋಽಷ್ಟೌ ದ್ವಾಃಸ್ಥಾಶ್ಚ ತೇಽಣಿಮಾದ್ಯಾ ಹರೇರ್ಗುಣಾಃ ॥ ೨೦

ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನಃ ಪುರುಷಃ ಸ್ವಯಮ್ ।
ಅನಿರುದ್ಧ ಇತಿ ಬ್ರಹ್ಮನ್ ಮೂರ್ತಿವ್ಯೂಹೋಽಭಿಧೀಯತೇ ॥ ೨೧

ಸ ವಿಶ್ವಸ್ತೈಜಸಃ ಪ್ರಾಜ್ಞಸ್ತುರೀಯ ಇತಿ ವೃತ್ತಿಭಿಃ ।
ಅರ್ಥೇಂದ್ರಿಯಾಶಯಜ್ಞಾನೈರ್ಭಗವಾನ್ ಪರಿಭಾವ್ಯತೇ ॥ ೨೨

ಅಂಗೋಪಾಂಗಾಯುಧಾಕಲ್ಪೈರ್ಭಗವಾಂಸ್ತಚ್ಚತುಷ್ಟಯಮ್ ।
ಬಿಭರ್ತಿ ಸ್ಮ ಚತುರ್ಮೂರ್ತಿರ್ಭಗವಾನ್ ಹರಿರೀಶ್ವರಃ ॥ ೨೩

---

ಅನಪಾಯಿನಿಯಾದ ಲಕ್ಷ್ಮಿಯೆಂದರೆ ಭಗವಂತನ ಶಕ್ತಿ. ಏಕೆಂದರೆ, ಚಿತ್ತು ಸಾಕ್ಷಾತ್ ಆತ್ಮನ ಸ್ವರೂಪ (ಶಕ್ತಿಯು ಚಿದಭಿನ್ನ ಮತ್ತು ಅನಪಾಯಿನಿ). ವಿಷ್ವಕ್‌ಸೇನನು ಪಂಚರಾತ್ರಾದ್ಯಾಗಮಸ್ವರೂಪನು. ಈತನೇ ಪಾರ್ಷದರ ಅಧಿಪತಿ ಯೆಂದು ವಿಖ್ಯಾತನಾಗಿದ್ದಾನೆ. ಅಣಿಮಾದ್ಯಷ್ಟಗುಣಗಳೇ ನಂದಾದಿ ದ್ವಾರಪಾಲಕರು (೨೦). ಶೌನಕರೆ, ಮಹಾಪುರುಷನಾದ ಶ್ರೀಮನ್ನಾರಾಯಣನೇ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ—ಎಂದು ಚತುರ್ವ್ಯೂಹನಾಗಿ ಮೂರ್ತಿಭೇದ ಗಳಿಂದ ಉಪಾಸ್ಯನೆಂದು ಉಕ್ತನಾಗಿದ್ದಾನೆ (೨೧). ಆ ಭಗವಂತನೇ ಮನುಷ್ಯನಲ್ಲಿ ವಿಶ್ವ, ತೈಜಸ, ಪ್ರಾಜ್ಞ, ತುರೀಯ—ಎಂದು ಜಾಗ್ರದಾದಿ ವೃತ್ತಿಭೇದದಿಂದ ಉಕ್ತ ನಾಗಿದ್ದಾನೆ ಈ ಜಾಗ್ರದಾದಿ ವೃತ್ತಿಗಳಿಗೆ ಕ್ರಮವಾಗಿ ಉಪಾಧಿಗಳು ಯಾವು ವೆಂದರೆ—ಬಾಹ್ಯಪದಾರ್ಥ, ಮನಸ್ಸು, ಇವೆರಡರಿಂದ ಉಭಯ ಸಂಸ್ಕಾರಯುಕ್ತ ವಾದ ಅಜ್ಞಾನ, ಈ ತ್ರಿತಯಗಳ ಸಾಕ್ಷಿತ್ವವೆಂಬ ಜ್ಞಾನ (೨೨). ಪೂರ್ವೋಕ್ತ ವಾದ ಅಂಗ, ಉಪಾಂಗ, ಆಯುಧ, ಭೂಷಣಗಳಿಂದ ಕೂಡಿದ ಭಗವಂತನು ವಾಸುದೇವಾದಿ ಚತುರ್ಮೂರ್ತಿಯಾಗಿ ವಿಶ್ವಾದಿರೂಪಚತುಷ್ಟಯವನ್ನು ಧರಿಸಿ ದ್ದಾನೆ. ಆದರೆ ಆತನು [1]ಸ್ವಯಂ ಭಗವಾನ್, ಹರಿ, ಈಶ್ವರನೇ ಆಗಿದ್ದಾನೆ (೨೩).

---

1. ವಿಶ್ವ, ತೈಜಸ, ಪ್ರಾಜ್ಞ, ತುರೀಯ ಭಾವಗಳು ಉಪಾಧಿವಶದಿಂದ ಈಶ್ವರನಿಗೆ ಇವೆ. ಉಪಾಧಿವಿನಿರ್ಮುಕ್ತನಾದ ಆತನು ಸ್ವತಃ ಈಶ್ವರನೇ, ಜೀವನಲ್ಲ.

ದ್ವಿಜಋಷಭ ಸ ಏಷ ಬ್ರಹ್ಮಯೋನಿಃ ಸ್ವಯಂದೃಕ್
ಸ್ವಮಹಿಮಪರಿಪೂರ್ಣೋ ಮಾಯಯಾ ಚ ಸ್ವಯೈತತ್ ।
ಸೃಜತಿ ಹರತಿ ಪಾತೀತ್ಯಾಖ್ಯಯಾನಾವೃತಾಕ್ಷೋ
ವಿವೃತ ಇವ ನಿರುಕ್ತಸ್ತತ್ಪರೈರಾತ್ಮಲಭ್ಯಃ ॥ ೨೪

ಶ್ರೀಕೃಷ್ಣ ಕೃಷ್ಣಸಖ ವೃಷ್ಣ್ಯೃಷಭಾವನಿಧ್ರು-
ಗ್ರಾಜನ್ಯವಂಶದಹನಾನಪವರ್ಗವೀರ್ಯ ।
ಗೋವಿಂದ ಗೋಪವನಿತಾವ್ರಜಭೃತ್ಯಗೀತ-
ತೀರ್ಥಶ್ರವಃ ಶ್ರವಣಮಂಗಲ ಪಾಹಿ ಭೃತ್ಯಾನ್ ॥ ೨೫

ಯ ಇದಂ ಕಲ್ಯ ಉತ್ಥಾಯ ಮಹಾಪುರುಷಲಕ್ಷಣಮ್ ।
ತಚ್ಚಿತ್ತಃ ಪ್ರಯತೋ ಜಪ್ತ್ವಾ ಬ್ರಹ್ಮ ವೇದ ಗುಹಾಶಯಮ್ ॥ ೨೬

---

ದ್ವಿಜೋತ್ತಮರಾದ ಶೌನಕರೆ, ಈ ಭಗವಂತನು ವೇದಗಳಿಗೆ ಕಾರಣನೂ ಸ್ವಯಂಜ್ಯೋತಿಯೂ ಸ್ವಮಹಿಮೆಯಲ್ಲಿ ಪ್ರತಿಷ್ಠಿತನೂ ಆಗಿದ್ದಾನೆ. ತನ್ನ ಮಾಯೆಯಿಂದ ಈ ವಿಶ್ವವನ್ನು ಸೃಜಿಸುತ್ತಾನೆ. ನಾಶಮಾಡುತ್ತಾನೆ. ಪಾಲಿಸುತ್ತಾನೆ. ಆತನ ವಿಶ್ವತೋಮುಖವಾದ ಜ್ಞಾನಕ್ಕೆ ತಡೆಯೇ ಇಲ್ಲ. ಆದರೂ ಬ್ರಹ್ಮಾದಿರೂಪದಿಂದ ಕಾಣಿಸುವ ಪ್ರಯುಕ್ತ ಭಿನ್ನನೋ ಎಂಬಂತೆ ಶಾಸ್ತ್ರಗಳಲ್ಲಿ ವರ್ಣಿತನಾಗಿರುವುದುಂಟು. ಆದರೆ ಭಿನ್ನನಲ್ಲ. ಏಕೆಂದರೆ, ಅವನ ಭಕ್ತರಾದ ಜ್ಞಾನಿಗಳಿಂದ [1]ಆತ್ಮನೆಂದೇ ಸರ್ವತ್ರ ಉಪಲಬ್ಧನಾಗಿದ್ದಾನೆ (೨೪). "ಓ ಶ್ರೀಕೃಷ್ಣ, ಅರ್ಜುನ ಮಿತ್ರ, ವೃಷ್ಣಿಕುಲೋತ್ತಮ, ಭೂದ್ರೋಹಿಗಳಾದ ಕ್ಷತ್ರಿಯರ ವಂಶವನ್ನು ನಿರ್ಮೂಲಮಾಡಿದವನೆ, ಅಕುಂಠಿತ ಪರಾಕ್ರಮ, ಗೋವಿಂದ, ಗೋಪವನಿತೆಯರಿಂದಲೂ ಭೃತ್ಯರಾದ ನಾರದಾದಿಗಳಿಂದಲೂ ಗೀತವಾದ ಪವಿತ್ರಕೀರ್ತಿಯುಳ್ಳವನೆ, ಶ್ರವಣಮಾತ್ರದಿಂದಲೇ ಮಂಗಳವನ್ನುಂಟುಮಾಡತಕ್ಕವನೆ, ಭಕ್ತರಾದ ನಿನ್ನ ಸೇವಕರನ್ನು ಪಾಲಿಸು" (೨೫). ಈ ಪ್ರಕಾರವಾಗಿ ಯಾವಾತನು ಉಷಃಕಾಲದಲ್ಲೆದ್ದು ಶುಚಿಯಾಗಿ ಭಗವಂತನನ್ನು ಚಿತ್ತದಲ್ಲಿ ಧ್ಯಾನಿಸುತ್ತ

---

1. ಬ್ರಹ್ಮಾದಿಗಳೆಲ್ಲರೂ ಒಬ್ಬ ಪರಮಾತ್ಮನೇ, ಭಿನ್ನರಲ್ಲ—ಎಂದು ಉಪಲಬ್ಧನಾಗಿದ್ದಾನೆ.

ಶೌನಕ ಉವಾಚ—

ಶುಕೋ ಯದಾಹ ಭಗವಾನ್ ವಿಷ್ಣುರಾತಾಯ ಶೃಣ್ವತೇ ।
ಸೌರೋ ಗಣೋ ಮಾಸಿ ಮಾಸಿ ನಾನಾ ವಸತಿ ಸಪ್ತಕಃ ॥ ೨೭

ತೇಷಾಂ ನಾಮಾನಿ ಕರ್ಮಾಣಿ ಸಂಯುಕ್ತಾನಾಮಧೀಶ್ವರೈಃ ।
ಬ್ರೂಹಿ ನಃ ಶ್ರದ್ದಧಾನಾನಾಂ ವ್ಯೂಹಂ ಸೂರ್ಯಾತ್ಮನೋ ಹರೇಃ ॥ ೨೮

ಸೂತ ಉವಾಚ—

ಅನಾದ್ಯವಿದ್ಯಯಾ ವಿಷ್ಣೋರಾತ್ಮನಃ ಸರ್ವದೇಹಿನಾಮ್ ।
ನಿರ್ಮಿತೋ ಲೋಕತಂತ್ರೋಽಯಂ ಲೋಕೇಷು ಪರಿವರ್ತತೇ ॥ ೨೯

ಏಕ ಏವ ಹಿ ಲೋಕಾನಾಂ ಸೂರ್ಯ ಆತ್ಮಾಽಽದಿಕೃದ್ಧರಿಃ ।
ಸರ್ವವೇದಕ್ರಿಯಾಮೂಲಮೃಷಿಭಿರ್ಬಹುಧೋದಿತಃ ॥ ೩೦

---

ಈ ಮಹಾಪುರುಷ ಲಕ್ಷಣವನ್ನು ಜಪಿಸುತ್ತಾನೋ ಆತನು ಹೃದಯಸ್ಥವಾದ ಪರಬ್ರಹ್ಮವನ್ನು ತಿಳಿಯುವನು" ಎಂದರು (೨೬). ಆಗ ಶೌನಕರು "ಭಗವಾನ್ ಶುಕಮಹರ್ಷಿಗಳು ಶ್ರೋತೃವಾದ ಪರೀಕ್ಷಿತನಿಗೆ ಹೇಳುವಾಗ ಪ್ರತಿಮಾಸದಲ್ಲಿಯೂ ಸೂರ್ಯಸಂಬಂಧಿಯಾಗಿ ಬೇರೆ ಬೇರೆ ಸಪ್ತಕಗಣಗಳಿವೆಯೆಂದು [1]ಹೇಳಿದರಷ್ಟೆ. ಆ ಸಪ್ತಕಗಳ ಅಧೀಶ್ವರರೊಡನೆ ಆ ದೇವತೆಗಳ ಹೆಸರುಗಳನ್ನೂ ಕರ್ಮಗಳನ್ನೂ ನಮಗೆ ಹೇಳಿರಿ. ಸೂರ್ಯಾತ್ಮಕನಾದ ಶ್ರೀಹರಿಯ ಈ ವ್ಯೂಹವನ್ನು ಕೇಳಲು ನಮಗೆ ಆಸಕ್ತಿಯುಂಟು" ಎಂದರು (೨೭–೨೮). ಸೂತರು ಇಂತೆಂದರು: "ಸರ್ವದೇಹಿಗಳಿಗೂ ಆತ್ಮನಾದ ವಿಷ್ಣುವಿನ ಅನಾದಿಯಾದ ಅವಿದ್ಯೆಯಿಂದ ಲೋಕಯಾತ್ರಾ ಪ್ರವರ್ತನೆಗಾಗಿ-ಸೂರ್ಯನು ನಿರ್ಮಿತನಾಗಿದ್ದಾನೆ. ಅದಕ್ಕಾಗಿ ಸೂರ್ಯನು ಲೋಕಗಳಲ್ಲಿ ಪರಿವರ್ತಿಸುತ್ತಿರುವನು (೨೯). ಲೋಕಗಳಿಗೆಲ್ಲ ಇರತಕ್ಕವನು ಒಬ್ಬನೇ ಸೂರ್ಯ. ಆ ಸೂರ್ಯನೇ [2]ಜಗದಾತ್ಮನೂ ಸೃಷ್ಟಿಕರ್ತನೂ ಆದ ಶ್ರೀಹರಿ. ವೇದೋಕ್ತವಾದ ಸಮಸ್ತಕ್ರಿಯೆಗಳಿಗೂ ಆತನೇ ಮೂಲ. ಉಪಾಧಿವಿಶೇಷದಿಂದ

---

1. ಪಂಚಮಸ್ಕಂಧ. ಅಧ್ಯಾಯ–೨೧.

2. 'ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ'.

ಕಾಲೋ ದೇಶಃ ಕ್ರಿಯಾ ಕರ್ತಾ ಕರಣಂ ಕಾರ್ಯಮಾಗಮಃ ।
ದ್ರವ್ಯಂ ಫಲಮಿತಿ ಬ್ರಹ್ಮನ್ ನವಧೋಕ್ತೋಽಜಯಾ ಹರಿಃ ॥ ೩೧

ಮಧ್ವಾದಿಷು ದ್ವಾದಶಸು ಭಗವಾನ್ ಕಾಲರೂಪಧೃಕ್ ।
ಲೋಕತಂತ್ರಾಯ ಚರತಿ ಪೃಥಗ್ದ್ವಾದಶಭಿರ್ಗಣೈಃ ॥ ೩೨

ಧಾತಾ ಕೃತಸ್ಥಲೀ ಹೇತಿರ್ವಾಸುಕೀ ರಥಕೃನ್ಮುನೇ ।
ಪುಲಸ್ತ್ಯಸ್ತುಂಬುರುರಿತಿ ಮಧುಮಾಸಂ ನಯಂತ್ಯಮೀ ॥ ೩೩

ಅರ್ಯಮಾ ಪುಲಹೋಽಥೌಜಾಃ ಪ್ರಹೇತಿಃ ಪುಂಜಿಕಸ್ಥಲೀ ।
ನಾರದಃ ಕಚ್ಛನೀರಶ್ಚ ನಯಂತ್ಯೇತೇ ಸ್ಮ ಮಾಧವಮ್ ॥ ೩೪

---

ಆತನನ್ನು ಋಷಿಗಳು ಬಹುಪ್ರಕಾರದಲ್ಲಿ ವರ್ಣಿಸಿದ್ದಾರೆ (೩೦). ಮೊದಲನೆಯದಾಗಿ, ಮಾಯೆಯಿಂದ ಶ್ರೀಹರಿಯು ಒಂಬತ್ತು ಪ್ರಕಾರವಾಗಿದ್ದಾನೆ. ಆ ಪ್ರಕಾರಗಳು ಯಾವುವೆಂದರೆ : ಕಾಲ, ದೇಶ, ಕ್ರಿಯಾ (ಅನುಷ್ಠಾನ), ಕರ್ತ, ಕರಣ (ಸ್ರುಗಾದಿ), ಕಾರ್ಯ (ಯಾಗಾದಿ), ಆಗಮ (ಮಂತ್ರ), ದ್ರವ್ಯ (ವ್ರೀಹ್ಯಾದಿ), [1]ಫಲ (ಸ್ವರ್ಗಾದಿ) (೩೧). ಚೈತ್ರಾದಿ ದ್ವಾದಶ ಮಾಸಗಳಲ್ಲಿ ಭಗವಂತನು ಕಾಲರೂಪವನ್ನು ಧರಿಸಿ ಲೋಕಯಾತ್ರಾಪ್ರವೃತ್ತಿಗೋಸ್ಕರ ಬೇರೆ ಬೇರೆ ಹನ್ನೆರಡು ಗಣಗಳೊಡನೆ ಸಂಚರಿಸುತ್ತಾನೆ. (ಸೂರ್ಯಸಹಿತವಾಗಿ) ಆ ಗಣಗಳು ಯಾವುವೆಂದರೆ: ಚೈತ್ರಮಾಸದಲ್ಲಿ ಧಾತಾ (ಸೂರ್ಯ), ಕೃತಸ್ಥಲೀ (ಅಪ್ಸರೆ), ಹೇತಿ (ರಾಕ್ಷಸ), ವಾಸುಕಿ (ನಾಗ), ರಥಕಾರ (ಯಕ್ಷ), ಪುಲಸ್ತ್ಯ (ಋಷಿ), ತುಂಬುರು (ಗಂಧರ್ವ)—ಈ ಏಳು [2]ಮಂದಿಗಳು ಚೈತ್ರಮಾಸವನ್ನು ಅನುವರ್ತಿಸುತ್ತಾರೆ (೩೨–೩೩). ಅನಂತರ ಅರ್ಯಮ (ಸೂರ್ಯ), ಪುಲಹ (ಋಷಿ), ಅಥೌಜ (ಯಕ್ಷ), ಪ್ರಹೇತಿ (ರಾಕ್ಷಸ), ಪುಂಜಿಕಸ್ಥಲೀ (ಅಪ್ಸರೆ), ನಾರದ (ಋಷಿ), ಕಚ್ಛನೀರ (ನಾಗ)—ಇವರು ವೈಶಾಖಮಾಸವನ್ನು ನಡೆಸುತ್ತಾರೆ (೩೪).

---

1. 'ಬ್ರಹ್ಮಾರ್ಪಣಂ ಬ್ರಹ್ಮಹವಿಃ...........' ಎಂಬ ಗೀತಾಶ್ಲೋಕದೊಡನೆ (೪–೨೪) ಹೋಲಿಸಿ.

2. ಸೂರ್ಯ, ಅಪ್ಸರೆ—ಮೊದಲಾದ ಏಳು ಮಂದಿ ಒಂದೊಂದು ಸಪ್ತಕಗಣ. ಒಂದೊಂದು ತಿಂಗಳಿಗೆ ಅವರ ಹೆಸರು ಬೇರೆ ಬೇರೆಯಾಗಿರುತ್ತದೆ.

ಮಿತ್ರೋಽತ್ರಿಃ ಪೌರುಷೇಯೋಽಥ ತಕ್ಷಕೋ ಮೇನಕಾ ಹಹಾಃ ।
ರಥಸ್ವನ ಇತಿ ಹ್ಯೇತೇ ಶುಕ್ರಮಾಸಂ ನಯಂತ್ಯಮೀ ॥ ೩೫

ವಸಿಷ್ಠೋ ವರುಣೋ ರಂಭಾ ಸಹಜನ್ಯಸ್ತಥಾ ಹುಹೂಃ ।
ಶುಕ್ರಶ್ಚಿತ್ರಸ್ವನಶ್ಚೈವ ಶುಚಿಮಾಸಂ ನಯಂತ್ಯಮೀ ॥ ೩೬

ಇಂದ್ರೋ ವಿಶ್ವಾವಸುಃ ಶ್ರೋತಾ ಏಲಾಪತ್ರಸ್ತಥಾಂಗಿರಾಃ ।
ಪ್ರಮ್ಲೋಚಾ ರಾಕ್ಷಸೋ ವರ್ಯೋ ನಭೋಮಾಸಂ ನಯಂತ್ಯಮೀ ॥ ೩೭

ವಿವಸ್ವಾನುಗ್ರಸೇನಶ್ಚ ವ್ಯಾಘ್ರ ಆಸಾರಣೋ ಭೃಗುಃ ।
ಅನುಮ್ಲೋಚಾ ಶಂಖಪಾಲೋ ನಭಸ್ಯಾಖ್ಯಂ ನಯಂತ್ಯಮೀ ॥ ೩೮

ಪೂಷಾ ಧನಂಜಯೋ ವಾತಃ ಸುಷೇಣಃ ಸುರುಚಿಸ್ತಥಾ ।
ಘೃತಾಚೀ ಗೌತಮಶ್ಚೇತಿ ತಪೋಮಾಸಂ ನಯಂತ್ಯಮೀ ॥ ೩೯

---

ಆಮೇಲೆ ಮಿತ್ರ (ಸೂರ್ಯ), ಅತ್ರಿ (ಋಷಿ), ಪೌರುಷೇಯ (ರಾಕ್ಷಸ), ತಕ್ಷಕ (ನಾಗ), ಮೇನಕೆ (ಅಪ್ಸರೆ), ಹಹಾ (ಗಂಧರ್ವ), ರಥಸ್ವನ (ಯಕ್ಷ)—ಇವರು ಜ್ಯೇಷ್ಠಮಾಸವನ್ನು ಅನುವರ್ತಿಸುವರು (೩೫) ವರುಣ (ಸೂರ್ಯ), ವಸಿಷ್ಠ, ರಂಭೆ, ಸಹಜನ್ಯ (ಯಕ್ಷ), ಹುಹೂ (ಗಂಧರ್ವ), ಶುಕ್ರ (ನಾಗ), ಚಿತ್ರಸ್ವನ (ರಾಕ್ಷಸ)—ಇವರು ಆಷಾಢವನ್ನು ಅನುವರ್ತಿಸುತ್ತಾರೆ (೩೬). ಇಂದ್ರ (ಸೂರ್ಯ) ವಿಶ್ವಾವಸು (ಗಂಧರ್ವ), ಶ್ರೋತಾ (ಯಕ್ಷ), ಏಲಾಪತ್ರ (ನಾಗ), ಅಂಗಿರಸ್ಸು (ಋಷಿ), ಪ್ರಮ್ಲೋಚಾ (ಅಪ್ಸರೆ), ವರ್ಯನೆಂಬ ರಾಕ್ಷಸ—ಇವರು ಶ್ರಾವಣಮಾಸವನ್ನು ನಡೆಸುತ್ತಾರೆ (೩೭). ವಿವಸ್ವಾನ್ (ಸೂರ್ಯ), ಉಗ್ರಸೇನ (ಗಂಧರ್ವ), ವ್ಯಾಘ್ರ (ರಾಕ್ಷಸ), ಆಸಾರಣ (ಯಕ್ಷ), ಭೃಗು (ಋಷಿ), ಅನುಮ್ಲೋಚಾ (ಅಪ್ಸರೆ), ಶಂಖಪಾಲ (ನಾಗ)—ಇವರು ಭಾದ್ರಪದವನ್ನು ಅನುವರ್ತಿಸುವರು (೩೮). ಪೂಷ (ಸೂರ್ಯ), ಧನಂಜಯ (ನಾಗ), ವಾತ (ರಾಕ್ಷಸ), ಸುಷೇಣ (ಗಂಧರ್ವ), ಸುರುಚಿ (ಯಕ್ಷ), ಘೃತಾಚೀ, ಗೌತಮ (ಋಷಿ)—ಇವರು [1]ಮಾಘಮಾಸವನ್ನು ಅನುವರ್ತಿಸುತ್ತಾರೆ (೩೯).

---

1. ಕೂರ್ಮಪುರಾಣದಲ್ಲಿ ಹೇಳಿದ ದ್ವಾದಶಸೂರ್ಯರ ಅನುಕ್ರಮದಿಂದ ಹೇಳಿರುವ ಪ್ರಯುಕ್ತ ಇಲ್ಲಿ ಮಾಸಕ್ರಮವು ಉಲ್ಲಂಘಿಸಲ್ಪಟ್ಟಿದೆ.

ಕ್ರತುರ್ವರ್ಚಾ ಭರದ್ವಾಜಃ ಪರ್ಜನ್ಯಃ ಸೇನಜಿತ್ತಥಾ ।
ವಿಶ್ವ ಐರಾವತಶ್ಚೈವ ತಪಸ್ಯಾಖ್ಯಂ ನಯಂತ್ಯಮೀ ॥ ೪೦

ಅಥಾಂಶುಃ ಕಶ್ಯಪಸ್ತಾರ್ಕ್ಷ್ಯ ಋತಸೇನಸ್ತಥೋರ್ವಶೀ ।
ವಿದ್ಯುಚ್ಛತ್ರುರ್ಮಹಾಶಂಖಃ ಸಹೋಮಾಸಂ ನಯಂತ್ಯಮೀ ॥ ೪೧

ಭಗಃ ಸ್ಫೂರ್ಜೋಽರಿಷ್ಟನೇಮಿರೂರ್ಣ ಆಯುಶ್ಚ ಪಂಚಮಃ ।
ಕರ್ಕೋಟಕಃ ಪೂರ್ವಚಿತ್ತಿಃ ಪುಷ್ಯಮಾಸಂ ನಯಂತ್ಯಮೀ ॥ ೪೨

ತ್ವಷ್ಟಾ ಋಚೀಕತನಯಃ ಕಂಬಲಶ್ಚ ತಿಲೋತ್ತಮಾ ।
ಬ್ರಹ್ಮಾಪೇತೋಽಥ ಶತಜಿದ್ ಧೃತರಾಷ್ಟ್ರ ಇಷಂಭರಾಃ ॥ ೪೩

ವಿಷ್ಣುರಶ್ವತರೋ ರಂಭಾ ಸೂರ್ಯವರ್ಚಾಶ್ಚ ಸತ್ಯಜಿತ್ ।
ವಿಶ್ವಾಮಿತ್ರೋ ಮಖಾಪೇತ ಊರ್ಜಮಾಸಂ ನಯಂತ್ಯಮೀ ॥ ೪೪

ಏತಾ ಭಗವತೋ ವಿಷ್ಣೋರಾದಿತ್ಯಸ್ಯ ವಿಭೂತಯಃ ।
ಸ್ಮರತಾಂ ಸಂಧ್ಯಯೋರ್ನೄಣಾಂ ಹರಂತ್ಯಂಹೋ ದಿನೇ ದಿನೇ ॥ ೪೫

---

ಪರ್ಜನ್ಯ (ಸೂರ್ಯ), ಕ್ರತು (ಯಕ್ಷ), ವರ್ಚ (ರಾಕ್ಷಸ), ಭರದ್ವಾಜ, ಸೇನಜಿತ್ (ಅಪ್ಸರೆ), ವಿಶ್ವ (ಗಂಧರ್ವ), ಐರಾವತ (ನಾಗ)—ಇವರು ಫಾಲ್ಗುಣಮಾಸವನ್ನು ಅನುವರ್ತಿಸುತ್ತಾರೆ (೪೦). ಅಂಶು (ಸೂರ್ಯ), ಕಶ್ಯಪ, ತಾರ್ಕ್ಷ್ಯ (ಯಕ್ಷ), ಋತಸೇನ (ಗಂಧರ್ವ), ಉರ್ವಶೀ, ವಿದ್ಯುಚ್ಛತ್ರು (ರಾಕ್ಷಸ), ಮಹಾಶಂಖ (ನಾಗ)—ಇವರು ಮಾರ್ಗಶೀರ್ಷಮಾಸವನ್ನು ಅನುವರ್ತಿಸುತ್ತಾರೆ (೪೧). ಭಗ (ಸೂರ್ಯ), ಸ್ಫೂರ್ಜ (ರಾಕ್ಷಸ), ಅರಿಷ್ಟನೇಮಿ (ಗಂಧರ್ವ), ಊರ್ಣ (ಯಕ್ಷ), ಆಯು (ಋಷಿ), ಕರ್ಕೋಟಕ (ನಾಗ), ಪೂರ್ವಚಿತ್ತಿ (ಅಪ್ಸರೆ)—ಇವರು ಪುಷ್ಯಮಾಸವನ್ನು ಅನುವರ್ತಿಸುತ್ತಾರೆ (೪೨). ತ್ವಷ್ಟಾ (ಸೂರ್ಯ), ಋಚೀಕತನಯ-ಜಮದಗ್ನಿ, ಕಂಬಲ (ನಾಗ), ತಿಲೋತ್ತಮೆ, ಬ್ರಹ್ಮಾಪೇತ (ರಾಕ್ಷಸ), ಶತಜಿತ್ (ಯಕ್ಷ), ಧೃತರಾಷ್ಟ್ರ (ಗಂಧರ್ವ)-ಇವರು ಇಷಂಭರರು—ಅಶ್ವಯುಜಮಾಸದ ಪಾಲಕರು-ಅಶ್ವಯುಜಮಾಸವನ್ನು ನಡೆಸತಕ್ಕವರು (೪೩). ವಿಷ್ಣು (ಸೂರ್ಯ), ಅಶ್ವತರ (ನಾಗ), ರಂಭೆ, ಸೂರ್ಯವರ್ಚ (ಗಂಧರ್ವ), ಸತ್ಯಜಿತ್ (ಯಕ್ಷ), ವಿಶ್ವಾಮಿತ್ರ (ಋಷಿ), ಮಖಾಪೇತ (ರಾಕ್ಷಸ)—ಇವರು ಕಾರ್ತಿಕ ಮಾಸವನ್ನು ಅನುವರ್ತಿಸುತ್ತಾರೆ (೪೪). ಇವರೆಲ್ಲರೂ ಆದಿತ್ಯರೂಪನಾದ

ದ್ವಾದಶಸ್ವಪಿ ಮಾಸೇಷು ದೇವೋಽಸೌ ಷಡ್ಭಿರಸ್ಯ ವೈ ।
ಚರನ್ ಸಮಂತಾತ್ತನುತೇ ಪರತ್ರೇಹ ಚ ಸನ್ಮತಿಮ್ ॥ ೪೬
ಸಾಮರ್ಗ್ಯಜುರ್ಭಿಸ್ತಲ್ಲಿಂಗೈರ್ಋಷಯಃ ಸಂಸ್ತುವಂತ್ಯಮುಮ್ ।
ಗಂಧರ್ವಾಸ್ತಂ ಪ್ರಗಾಯಂತಿ ನೃತ್ಯಂತ್ಯಪ್ಸರಸೋಽಗ್ರತಃ ॥ ೪೭
ಉನ್ನಹ್ಯಂತಿ ರಥಂ ನಾಗಾ ಗ್ರಾಮಣ್ಯೋ ರಥಯೋಜಕಾಃ ।
ಚೋದಯಂತಿ ರಥಂ ಪೃಷ್ಠೇ ನೈರ್ಋತಾ ಬಲಶಾಲಿನಃ ॥ ೪೮
ವಾಲಖಿಲ್ಯಾಃ ಸಹಸ್ರಾಣಿ ಷಷ್ಟಿರ್ಬ್ರಹ್ಮರ್ಷಯೋಽಮಲಾಃ ।
ಪುರತೋಽಭಿಮುಖಂ ಯಾಂತಿ ಸ್ತುವಂತಿ ಸ್ತುತಿಭಿರ್ವಿಭುಮ್ ॥ ೪೯
ಏವಂ ಹ್ಯನಾದಿನಿಧನೋ ಭಗವಾನ್ ಹರಿರೀಶ್ವರಃ ।
ಕಲ್ಪೇ ಕಲ್ಪೇ ಸ್ವಮಾತ್ಮಾನಂ ವ್ಯೂಹ್ಯ ಲೋಕಾನವತ್ಯಜಃ ॥ ೫೦

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ಏಕಾದಶಾಧ್ಯಾಯಃ

---

ಭಗವಾನ್ ವಿಷ್ಣುವಿನ ವಿಭೂತಿಗಳು. ಪ್ರತಿದಿನವೂ ಎರಡು ಸಂಧ್ಯಾಕಾಲಗಳಲ್ಲಿ ಇವರನ್ನು ಸ್ಮರಿಸಿಕೊಳ್ಳುತ್ತಿದ್ದರೆ, ಮಾನವರ ಪಾಪವನ್ನು ದೂರಮಾಡುತ್ತಾರೆ (೪೫). ದ್ವಾದಶಮಾಸಗಳಲ್ಲಿ ಈ ಹೆಸರಿನ ಸೂರ್ಯದೇವನು ಉಳಿದ ಆರು ಮಂದಿ ಗಂಧರ್ವಾದಿ ಪರಿವಾರದೊಡನೆ ಸಂಚರಿಸುತ್ತ ಜನರಿಗೆ ಇಹಪರಗಳಲ್ಲಿ ಸನ್ಮತಿಯನ್ನು ನೀಡುತ್ತಾನೆ. ಸೂರ್ಯದೇವ ಪ್ರಕಾಶಕಗಳಾದ ಋಗ್ಯಜುಃಸಾಮಗಳಿಂದ ಋಷಿಗಳು ಆತನನ್ನು ಸ್ತುತಿಸುತ್ತಾರೆ. ಗಂಧರ್ವರು ಹಾಡುತ್ತಾರೆ. ಅಪ್ಸರೆಯರು ಅವನೆದುರಿಗೆ ನರ್ತಿಸುತ್ತಾರೆ (೪೬–೪೭). ನಾಗ ದೇವತೆಗಳು ರಥವನ್ನು ದೃಢವಾಗಿ ಕಟ್ಟುತ್ತಾರೆ. ಯಕ್ಷರು ಸೂರ್ಯನ ರಥವನ್ನು ಯೋಜಿಸುತ್ತಾರೆ. ಬಲಶಾಲಿಗಳಾದ ರಾಕ್ಷಸರು ಸೂರ್ಯನ ರಥವನ್ನು ಹಿಂದಿನಿಂದ ತಳ್ಳುತ್ತಾರೆ. ಅರುವತ್ತು ಸಾವಿರ ವಾಲಖಿಲ್ಯರೆಂಬ ಪರಿಶುದ್ಧರಾದ ಬ್ರಹ್ಮರ್ಷಿಗಳು ವಿಭುವಾದ ಆದಿತ್ಯನ ಎದುರಿಗೆ ಅಭಿಮುಖವಾಗಿ ಸ್ತುತಿಸುತ್ತಾರೆ (೪೮–೪೯). ಈ ಪ್ರಕಾರವಾಗಿ ಅನಾದಿ ನಿಧನನೂ ಅಜನೂ ಈಶ್ವರನೂ ಆದ ಭಗವಾನ್ ಶ್ರೀಹರಿಯು ಕಲ್ಪಕಲ್ಪಗಳಲ್ಲಿಯೂ ತನ್ನನ್ನು ವಿಭಜಿಸಿಕೊಂಡು ಲೋಕಗಳನ್ನು ಪಾಲಿಸುತ್ತಿದ್ದಾನೆ" (೫೦).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ದ್ವಾದಶಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯ

# ದ್ವಾದಶಾಧ್ಯಾಯಃ

**ಸೂತ ಉವಾಚ—**

ನಮೋ ಧರ್ಮಾಯ ಮಹತೇ ನಮಃ ಕೃಷ್ಣಾಯ ವೇಧಸೇ ।
ಬ್ರಾಹ್ಮಣೇಭ್ಯೋ ನಮಸ್ಕೃತ್ಯ ಧರ್ಮಾನ್ ವಕ್ಷ್ಯೇ ಸನಾತನಾನ್ ॥ ೧

ಏತದ್ ವಃ ಕಥಿತಂ ವಿಪ್ರಾ ವಿಷ್ಣೋಶ್ಚರಿತಮದ್ಭುತಮ್ ।
ಭವದ್ಭಿರ್ಯದಹಂ ಪೃಷ್ಟೋ ನರಾಣಾಂ ಪುರುಷೋಚಿತಮ್ ॥ ೨

ಅತ್ರ ಸಂಕೀರ್ತಿತಃ ಸಾಕ್ಷಾತ್ ಸರ್ವಪಾಪಹರೋ ಹರಿಃ ।
ನಾರಾಯಣೋ ಹೃಷೀಕೇಶೋ ಭಗವಾನ್ ಸಾತ್ತ್ವತಾಂ ಪತಿಃ ॥ ೩

ಅತ್ರ ಬ್ರಹ್ಮ ಪರಂ ಗುಹ್ಯಂ ಜಗತಃ ಪ್ರಭವಾಪ್ಯಯಮ್ ।
ಜ್ಞಾನಂ ಚ ತದುಪಾಖ್ಯಾನಂ ಪ್ರೋಕ್ತಂ ವಿಜ್ಞಾನಸಂಯುತಮ್ ॥ ೪

## ಅಧ್ಯಾಯ ೧೨

ಭಾಗವತ ಮಹಾಪುರಾಣದ ಎಲ್ಲ ಸ್ಕಂಧಗಳಲ್ಲಿಯೂ ಬಂದ ವಿಷಯಗಳನ್ನು ಸಂಕ್ಷೇಪವಾಗಿ ತಿಳಿಸುವುದು. ಫಲಕಥನ.

ಸೂತರು ಹೇಳಿದರು : “(ಹರಿಭಕ್ತಿಯೆಂಬ) ಮಹಾಧರ್ಮಕ್ಕೆ ನಮಸ್ಕಾರ. ಸೃಷ್ಟಿಕರ್ತನಾದ ಶ್ರೀಕೃಷ್ಣನಿಗೆ ನಮಸ್ಕಾರ. ಬ್ರಾಹ್ಮಣರಿಗೆ ನಮಸ್ಕರಿಸಿ ಶಾಶ್ವತವಾದ ಧರ್ಮಗಳನ್ನೂ (ಈ ಪುರಾಣದಲ್ಲಿ ಉಕ್ತವಾದ ವಿಷಯಗಳನ್ನೂ) ಹೇಳುವೆನು (೧). ಎಲೈ ವಿಪ್ರರೆ, ನೀವು ನನ್ನನ್ನು ಕೇಳಿದ್ದರಿಂದ ವಿಷ್ಣುವಿನ ಅದ್ಭುತವಾದ ಈ ಚರಿತೆಯನ್ನು ನಿಮಗೆ ಹೇಳಿದ್ದೇನೆ. ಮನುಷ್ಯರಾದವರು ಅವಶ್ಯವಾಗಿ ಶ್ರವಣ ಮಾಡಬೇಕಾದದ್ದು ಇದು. ಈ ಪುರಾಣದಲ್ಲಿ ನಾರಾಯಣನೂ ಹೃಷೀಕೇಶನೂ ಸಾತ್ತ್ವತರ ಅಧಿಪತಿಯೂ ಸರ್ವಪಾಪಹರನೂ ಆದ ಭಗವಾನ್ ಶ್ರೀಹರಿಯನ್ನು ಸಾಕ್ಷಾತ್ತಾಗಿ [1]ವರ್ಣಿಸಲಾಗಿದೆ (೨-೩). ಇದರಲ್ಲಿ ಜಗತ್ತಿನ ಉತ್ಪತ್ತಿ ವಿನಾಶಗಳಿಗೆ ಕಾರಣವೂ (ನಿರ್ಗುಣವಾದ್ದರಿಂದ) ಗುಹ್ಯವೂ ಆದ ಪರಬ್ರಹ್ಮವೂ ಅಪರೋಕ್ಷಜ್ಞಾನಪರ್ಯಂತವಾದ ಜ್ಞಾನವೂ ಅದರ

1. ಇದು ದೇವತಾಕಾಂಡದ ವಿಷಯ.

ಭಕ್ತಿಯೋಗಃ ಸಮಾಖ್ಯಾತೋ ವೈರಾಗ್ಯಂ ಚ ತದಾಶ್ರಯಮ್ ।
ಪಾರೀಕ್ಷಿತಮುಪಾಖ್ಯಾನಂ ನಾರದಾಖ್ಯಾನಮೇವ ಚ ॥ ೫

ಪ್ರಾಯೋಪವೇಶೋ ರಾಜರ್ಷೇರ್ವಿಪ್ರಶಾಪಾತ್ ಪರೀಕ್ಷಿತಃ ।
ಶುಕಸ್ಯ ಬ್ರಹ್ಮರ್ಷಭಸ್ಯ ಸಂವಾದಶ್ಚ ಪರೀಕ್ಷಿತಃ ॥ ೬

ಯೋಗಧಾರಣಯೋತ್ಕ್ರಾಂತಿಃ ಸಂವಾದೋ ನಾರದಾಜಯೋಃ ।
ಅವತಾರಾನುಗೀತಂ ಚ ಸರ್ಗಃ ಪ್ರಾಧಾನಿಕೋಽಗ್ರತಃ ॥ ೭

ವಿದುರೋದ್ಧವಸಂವಾದಃ ಕ್ಷತ್ತೃಮೈತ್ರೇಯಯೋಸ್ತತಃ ।
ಪುರಾಣಸಂಹಿತಾಪ್ರಶ್ನೋ ಮಹಾಪುರುಷಸಂಸ್ಥಿತಿಃ ॥ ೮

---

ಸಾಧನವೂ [1]ಕಥಿತವಾಗಿವೆ (೪). ಅಲ್ಲದೆ (ಸಾಧ್ಯಸಾಧನರೂಪವಾದ) ಭಕ್ತಿಯೋಗವೂ ಅದರಿಂದ ನಿಷ್ಪನ್ನವಾಗುವ ವೈರಾಗ್ಯವೂ [2]ವರ್ಣಿತವಾಗಿವೆ (ಪ್ರಥಮ ಸ್ಕಂಧದಲ್ಲಿ) ಪರೀಕ್ಷಿತನ ಜನ್ಮಾದಿ ವೃತ್ತಾಂತ, ನಾರದರ ಆಖ್ಯಾನ, ವಿಪ್ರಶಾಪದಿಂದ ರಾಜರ್ಷಿಯಾದ ಪರೀಕ್ಷಿತನ ಪ್ರಾಯೋಪವೇಶನ, ಬ್ರಾಹ್ಮಣೋತ್ತಮರಾದ ಶುಕಮುನಿಗಳೊಡನೆ ಸಂವಾದಗಳು ಬಂದಿವೆ (೫–೬). (ದ್ವಿತೀಯ ಸ್ಕಂಧದಲ್ಲಿ) ಯೋಗಧಾರಣೆಯಿಂದ ಪ್ರಾಪ್ತವಾಗುವ ಅರ್ಚಿರಾದಿಗತಿ, ಬ್ರಹ್ಮ ನಾರದರ ಸಂವಾದ, ಅವತಾರಗಳ ವಿಚಾರ, ಮಹದಾದಿಕ್ರಮದಿಂದ ಪ್ರಧಾನ ಕಾರ್ಯವಾದ ವಿರಾಡ್‌ರೂಪಸರ್ಗ—ಇವು ಕಥಿತವಾಗಿವೆ (೭). (ತೃತೀಯ ಸ್ಕಂಧದಲ್ಲಿ) ಉದ್ಧವ-ವಿದುರ ಸಂವಾದವೂ, ವಿದುರ-ಮೈತ್ರೇಯರ ಸಂವಾದವೂ ಬಂದಿವೆ. ಈ ಭಾಗವತ ಪುರಾಣ ಸಂಹಿತೆಯ ವಿಷಯವಾಗಿ ಪ್ರಶ್ನೆ, ಪ್ರಳಯ ಕಾಲದಲ್ಲಿ ಮಹಾಪುರುಷನ ಸ್ಥಿತಿ, ಗುಣಕ್ಷೋಭರೂಪವಾದ ಪ್ರಾಕೃತಿಕಸರ್ಗ, ಸಪ್ತ ವಿಕೃತಿಗಳ ಸರ್ಗ, ವಿರಾಟ್‌ಪುರುಷನ ಆವಿಷ್ಕಾರಕ್ಕೆ ಕಾರಣವಾದ ಬ್ರಹ್ಮಾಂಡದ

---

1. ಇದು ಬ್ರಹ್ಮಕಾಂಡದ ವಿಷಯ.

2. ಇದು ಕರ್ಮಕಾಂಡದ ವಿಷಯ. ಈ ಗ್ರಂಥದಲ್ಲಿ ಸಾಮಾನ್ಯವಾಗಿ ಈ ಮೂರು ವಿಷಯಗಳ ಸಂಗ್ರಹವಾಗಿದೆ. ಇನ್ನು ಮುಂದೆ ಬೇರೆ ಬೇರೆ ಸ್ಕಂಧಗಳಲ್ಲಿರುವ ವಿಶೇಷ ವಿಷಯಗಳನ್ನು ಹೇಳಲಾಗುವುದು.

ತತಃ ಪ್ರಾಕೃತಿಕಃ ಸರ್ಗಃ ಸಪ್ತ ವೈಕೃತಿಕಾಶ್ಚ ಯೇ ।
ತತೋ ಬ್ರಹ್ಮಾಂಡಸಂಭೂತಿರ್ವೈರಾಜಃ ಪುರುಷೋ ಯತಃ ॥ ೯

ಕಾಲಸ್ಯ ಸ್ಥೂಲಸೂಕ್ಷ್ಮಸ್ಯ ಗತಿಃ ಪದ್ಮಸಮುದ್ಭವಃ ।
ಭುವ ಉದ್ಧರಣೇಽಂಭೋಧೇರ್ಹಿರಣ್ಯಾಕ್ಷವಧೋ ಯಥಾ ॥ ೧೦

ಊರ್ಧ್ವತಿರ್ಯಗವಾಕ್ಸರ್ಗೋ ರುದ್ರಸರ್ಗಸ್ತಥೈವ ಚ ।
ಅರ್ಧನಾರೀನರಸ್ಯಾಥ ಯತಃ ಸ್ವಾಯಂಭುವೋ ಮನುಃ ॥ ೧೧

ಶತರೂಪಾ ಚ ಯಾ ಸ್ತ್ರೀಣಾಮಾದ್ಯಾ ಪ್ರಕೃತಿರುತ್ತಮಾ ।
ಸಂತಾನೋ ಧರ್ಮಪತ್ನೀನಾಂ ಕರ್ದಮಸ್ಯ ಪ್ರಜಾಪತೇಃ ॥ ೧೨

ಅವತಾರೋ ಭಗವತಃ ಕಪಿಲಸ್ಯ ಮಹಾತ್ಮನಃ ।
ದೇವಹೂತ್ಯಾಶ್ಚ ಸಂವಾದಃ ಕಪಿಲೇನ ಚ ಧೀಮತಾ ॥ ೧೩

ನವಬ್ರಹ್ಮಸಮುತ್ಪತ್ತಿರ್ದಕ್ಷಯಜ್ಞವಿನಾಶನಮ್ ।
ಧ್ರುವಸ್ಯ ಚರಿತಂ ಪಶ್ಚಾತ್ಪೃಥೋಃ ಪ್ರಾಚೀನಬರ್ಹಿಷಃ ॥ ೧೪

---

ಉತ್ಪತ್ತಿ (೮–೯). ಕಾಲದ ಸ್ಥೂಲಸೂಕ್ಷ್ಮಗತಿ, (ಭಗವಂತನ ಉದರದಿಂದ ಲೋಕಸಂಸ್ಥಾನರೂಪವಾದ) ಪದ್ಮದ ಉತ್ಪತ್ತಿ, ಸಮುದ್ರದಿಂದ ಭೂಮಿಯ ನ್ನೆತ್ತುವ ಪ್ರಯತ್ನ, ಹಿರಣ್ಯಾಕ್ಷವಧ—ಇವು ವರ್ಣಿತವಾಗಿವೆ (೧೦). ಆಮೇಲೆ ಊರ್ಧ್ವಾದಿ ದಿಕ್ಕುಗಳ ಸೃಷ್ಟಿ, ರುದ್ರಸರ್ಗ, ಅರ್ಧನಾರೀನರಸ್ವರೂಪನಾದ ಬ್ರಹ್ಮನ ವಿಚಾರ, ಸ್ವಾಯಂಭುವಮನು, ಸ್ತ್ರೀಯರ ಆದ್ಯಪ್ರಕೃತಿಯೆನಿಸಿದ ಶತರೂಪಾ, ಕರ್ದಮ ಪ್ರಜಾಪತಿಯ ಧರ್ಮಪತ್ನಿಯರ ಸಂತಾನ—ಇವು ಬಂದಿವೆ. ಮಹಾತ್ಮನಾದ ಭಗವಾನ್ ಕಪಿಲನ ಅವತಾರ, ಕಪಿಲನಿಗೆ ದೇವಹೂತಿಯೊಡನೆ ಸಂವಾದ—ಇವು ವರ್ಣಿತವಾಗಿವೆ (೧೧–೧೩). ಅನಂತರ (ಚತುರ್ಥಸ್ಕಂಧದಲ್ಲಿ) ಮರೀಚ್ಯಾದಿ ನವಬ್ರಹ್ಮರ ಸಂತಾನದ ವರ್ಣನೆ, ದಕ್ಷಯಜ್ಞವಿಧ್ವಂಸ, ಧ್ರುವಚರಿತೆ, ಪೃಥುಚಾರಿತ್ರ, ಪ್ರಾಚೀನಬರ್ಹಿ ಮತ್ತು ನಾರದರ ಸಂಭಾಷಣೆಗಳು ಬಂದಿವೆ. ಆಮೇಲೆ (ಪಂಚಮಸ್ಕಂಧದಲ್ಲಿ) ಪ್ರಿಯವ್ರತಚರಿತೆ, ನಾಭಿ, ಋಷಭ ಮತ್ತು ಭರತ-

ನಾರದಸ್ಯ ಚ ಸಂವಾದಸ್ತತಃ ಪ್ರೈಯವ್ರತಂ ದ್ವಿಜಾಃ ।
ನಾಭೇಸ್ತತೋಽನುಚರಿತಮೃಷಭಸ್ಯ ಭರತಸ್ಯ ಚ ॥ ೧೫

ದ್ವೀಪವರ್ಷಸಮುದ್ರಾಣಾಂ ಗಿರಿನದ್ಯುಪವರ್ಣನಮ್ ।
ಜ್ಯೋತಿಶ್ಚಕ್ರಸ್ಯ ಸಂಸ್ಥಾನಂ ಪಾತಾಲನರಕಸ್ಥಿತಿಃ ॥ ೧೬

ದಕ್ಷಜನ್ಮ ಪ್ರಚೇತೋಭ್ಯಸ್ತತ್ಪುತ್ರೀಣಾಂ ಚ ಸಂತತಿಃ ।
ಯತೋ ದೇವಾಸುರನರಾಸ್ತಿರ್ಯಙ್ನಗಖಗಾದಯಃ ॥ ೧೭

ತ್ವಾಷ್ಟ್ರಸ್ಯ ಜನ್ಮ ನಿಧನಂ ಪುತ್ರಯೋಶ್ಚ ದಿತೇರ್ದ್ವಿಜಾಃ ।
ದೈತ್ಯೇಶ್ವರಸ್ಯ ಚರಿತಂ ಪ್ರಹ್ಲಾದಸ್ಯ ಮಹಾತ್ಮನಃ ॥ ೧೮

ಮನ್ವಂತರಾನುಕಥನಂ ಗಜೇಂದ್ರಸ್ಯ ವಿಮೋಕ್ಷಣಮ್ ।
ಮನ್ವಂತರಾವತಾರಾಶ್ಚ ವಿಷ್ಣೋರ್ಹಯಶಿರಾದಯಃ ॥ ೧೯

ಕೌರ್ಮಂ ಧಾನ್ವಂತರಂ ಮಾತ್ಸ್ಯಂ ವಾಮನಂ ಚ ಜಗತ್ಪತೇಃ ।
ಕ್ಷೀರೋದಮಥನಂ ತದ್ವದಮೃತಾರ್ಥೇ ದಿವೌಕಸಾಮ್ ॥ ೨೦

ದೇವಾಸುರಮಹಾಯುದ್ಧಂ ರಾಜವಂಶಾನುಕೀರ್ತನಮ್ ।
ಇಕ್ಷ್ವಾಕುಜನ್ಮ ತದ್ವಂಶಃ ಸುದ್ಯುಮ್ನಸ್ಯ ಮಹಾತ್ಮನಃ ॥ ೨೧

---

ಇವರ ಚರಿತೆಗಳು ಬಂದಿವೆ (೧೪–೧೫). ಅಲ್ಲದೆ ದ್ವೀಪ, ಸಮುದ್ರ, ಪರ್ವತ, ವರ್ಷ, ನದಿಗಳ ಉಪವರ್ಣನೆಯೂ ಜ್ಯೋತಿಶ್ಚಕ್ರದ ಸಂಸ್ಥಾನವೂ ಪಾತಾಳ ಮತ್ತು ನರಕಗಳ ಸ್ಥಿತಿಯೂ ಬಂದಿವೆ. ಆಮೇಲೆ (ಷಷ್ಠಸ್ಕಂಧದಲ್ಲಿ) ಪ್ರಚೇತಸರಿಂದ ದಕ್ಷಜನ್ಮ, ದಕ್ಷನ ಸಂತತಿ, ದೇವ-ಅಸುರ-ನರ-ತಿರ್ಯಗ್‌ಜಂತು-ಪರ್ವತ-ಪಕ್ಷಿ ಮೊದಲಾದವುಗಳ ಉತ್ಪತ್ತಿಗಳು ವರ್ಣಿತವಾಗಿವೆ. (೧೬–೧೭) ಅಲ್ಲದೆ ವೃತ್ರಾಸುರನ ಜನನ ಮರಣಗಳೂ ವರ್ಣಿತವಾಗಿವೆ. ಅನಂತರ (ಸಪ್ತಮಸ್ಕಂಧದಲ್ಲಿ) ದಿತಿಪುತ್ರರಾದ ಹಿರಣ್ಯಾಕ್ಷ ಹಿರಣ್ಯಕಶಿಪುಗಳ ಜನನ ಮರಣಗಳ ವೃತ್ತಾಂತವೂ ಮಹಾತ್ಮನಾದ ಪ್ರಹ್ಲಾದನ ಚರಿತ್ರೆಯೂ ಬಂದಿವೆ. (ಅಷ್ಟಮಸ್ಕಂಧದಲ್ಲಿ) ಮನ್ವಂತರ ವರ್ಣನೆ, ಗಜೇಂದ್ರಮೋಕ್ಷ, ವಿಷ್ಣುವಿನ ಮನ್ವಂತರಾವತಾರಗಳಾದ ಹಯಗ್ರೀವಾದಿಗಳ ವರ್ಣನೆ—ಇವು ಬಂದಿವೆ. ಜಗದೀಶ್ವರನ ಮತ್ಸ್ಯ, ಕೂರ್ಮ, ಮೋಹಿನೀ ವಾಮನಾವತಾರಗಳ ವೃತ್ತಾಂತವಿದೆ. ಅಮೃತಕ್ಕಾಗಿ ದೇವತೆಗಳು ಸಮುದ್ರವನ್ನು ಮಥಿಸುವ ಕಥೆ ಇದೆ (೧೮–೨೦). ಆಮೇಲೆ ದೇವಾಸುರರಿಗೆ

ಇಲೋಪಾಖ್ಯಾನಮುತ್ರೋಕ್ತಂ ತಾರೋಪಾಖ್ಯಾನಮೇವ ಚ ।
ಸೂರ್ಯವಂಶಾನುಕಥನಂ ಶಶಾದಾದ್ಯಾ ನೃಗಾದಯಃ ॥ ೨೨

ಸೌಕನ್ಯಂ ಚಾಥ ಶರ್ಯಾತೇಃ ಕಕುತ್ಸ್ಥಸ್ಯ ಚ ಧೀಮತಃ ।
ಖಟ್ವಾಂಗಸ್ಯ ಚ ಮಾಂಧಾತುಃ ಸೌಭರೇಃ ಸಗರಸ್ಯ ಚ ॥ ೨೩

ರಾಮಸ್ಯ ಕೋಸಲೇಂದ್ರಸ್ಯ ಚರಿತಂ ಕಿಲ್ಬಿಷಾಪಹಮ್ ।
ನಿಮೇರಂಗ ಪರಿತ್ಯಾಗೋ ಜನಕಾನಾಂ ಚ ಸಂಭವಃ ॥ ೨೪

ರಾಮಸ್ಯ ಭಾರ್ಗವೇಂದ್ರಸ್ಯ ನಿಃಕ್ಷತ್ರಕರಣಂ ಭುವಃ ।
ಐಲಸ್ಯ ಸೋಮವಂಶಸ್ಯ ಯಯಾತೇರ್ನಹುಷಸ್ಯ ಚ ॥ ೨೫

ದೌಷ್ಯಂತೇರ್ಭರತಸ್ಯಾಪಿ ಶಂತನೋಸ್ತತ್ಸುತಸ್ಯ ಚ ।
ಯಯಾತೇರ್ಜ್ಯೇಷ್ಠಪುತ್ರಸ್ಯ ಯದೋರ್ವಂಶೋಽನುಕೀರ್ತಿತಃ ॥ ೨೬

ಯತ್ರಾವತೀರ್ಣೋ ಭಗವಾನ್ ಕೃಷ್ಣಾಖ್ಯೋ ಜಗದೀಶ್ವರಃ ।
ವಸುದೇವಗೃಹೇ ಜನ್ಮ ತತೋ ವೃದ್ಧಿಶ್ಚ ಗೋಕುಲೇ ॥ ೨೭

---

ಘಟಿಸಿದ ಘೋರಯುದ್ಧದ ಪ್ರಸ್ತಾವ ಉಂಟು (ನವಮಸ್ಕಂಧದಲ್ಲಿ) ವಿವಿಧ ರಾಜವಂಶದ ಕಥನವಿದೆ. ಇಕ್ಷ್ವಾಕುವಿನ ಜನ್ಮ, ಅವನ ವಂಶ, ಮಹಾತ್ಮನಾದ ಸುದ್ಯುಮ್ನನ ಚರಿತೆ, ಇಲೋಪಾಖ್ಯಾನ, ತಾರೆಯ ಕಥೆ, ಸೂರ್ಯವಂಶದ ಪ್ರಸ್ತಾವ, ಶಶಾದ-ನೃಗಾದಿಗಳ ಚರಿತೆ ಇವೆ (೨೧ ೨೨). ಶರ್ಯಾತಿ, ಕಕುತ್ಸ್ಥ, ಖಟ್ವಾಂಗ, ಮಾಂಧಾತೃ, ಸೌಭರಿ ಮತ್ತು ಸಗರ ಚಕ್ರವರ್ತಿ—ಇವರ ಚರಿತೆಗಳೂ ಬಂದಿವೆ. ಆಮೇಲೆ ಕೋಸಲೇಂದ್ರನಾದ ಶ್ರೀರಾಮನ ಪಾಪಹಾರಿಯಾದ ಪುಣ್ಯಚರಿತೆ ಯುಂಟು. ನಿಮಿಯ ದೇಹತ್ಯಾಗ, ಜನಕವಂಶೀಯರ ಉತ್ಪತ್ತಿ, ಭಾರ್ಗವ ಪರಶುರಾಮನು ಭೂಮಿಯಲ್ಲಿ ಕ್ಷತ್ರಿಯರಿಲ್ಲದಂತೆ ಮಾಡಿದ್ದು, ಸೋಮವಂಶೀಯ ರಾದ ಐಲ, ಯಯಾತಿ, ನಹುಷರ ಚರಿತೆಗಳು ಕಥಿತವಾಗಿವೆ (೨೩-೨೫). ಅಲ್ಲದೆ ದುಷ್ಯಂತಪುತ್ರನಾದ ಭರತನ ಕಥೆಯೂ ಶಂತನುವಿನ ಮತ್ತು ಅವನ ಮಗನಾದ ಭೀಷ್ಮನ ಕಥೆಯೂ ಬಂದಿವೆ. ಯಯಾತಿಯ ಹಿರಿಯ ಮಗನಾದ ಯದುರಾಜನ ವಂಶವೂ ಇಲ್ಲಿ ಕೀರ್ತಿತವಾಗಿದೆ. ಈ ಯದುವಂಶದಲ್ಲಿ ಜಗದೀಶ್ವರನಾದ ಭಗವಾನ್ ಶ್ರೀಕೃಷ್ಣನು ವಸುದೇವಗೃಹದಲ್ಲಿ ಅವತರಿಸಿ ಗೋಕುಲದಲ್ಲಿ ಬೆಳೆದನೆಂದೂ ತಿಳಿಸಿದೆ (೨೬-೨೭).

ತಸ್ಯ ಕರ್ಮಾಣ್ಯಪಾರಾಣಿ ಕೀರ್ತಿತಾನ್ಯಸುರದ್ವಿಷಃ ।
ಪೂತನಾಸುಪಯಃಪಾನಂ ಶಕಟೋಚ್ಚಾಟನಂ ಶಿಶೋಃ ॥ ೨೮

ತೃಣಾವರ್ತಸ್ಯ ನಿಷ್ಪೇಷಸ್ತಥೈವ ಬಕವತ್ಸಯೋಃ ।
ಧೇನುಕಸ್ಯ ಸಹಭ್ರಾತುಃ ಪ್ರಲಂಬಸ್ಯ ಚ ಸಂಕ್ಷಯಃ ॥ ೨೯

ಗೋಪಾನಾಂ ಚ ಪರಿತ್ರಾಣಂ ದಾವಾಗ್ನೇಃ ಪರಿಸರ್ಪತಃ ।
ದಮನಂ ಕಾಲಿಯಸ್ಯಾಹೇರ್ಮಹಾಹೇರ್ನಂದಮೋಕ್ಷಣಮ್ ॥ ೩೦

ವ್ರತಚರ್ಯಾ ತು ಕನ್ಯಾನಾಂ ಯತ್ರ ತುಷ್ಟೋಽಚ್ಯುತೋ ವ್ರತೈಃ ।
ಪ್ರಸಾದೋ ಯಜ್ಞಪತ್ನೀಭ್ಯೋ ವಿಪ್ರಾಣಾಂ ಚಾನುತಾಪನಮ್ ॥ ೩೧

ಗೋವರ್ಧನೋದ್ಧಾರಣಂ ಚ ಶಕ್ರಸ್ಯ ಸುರಭೇರಥ ।
ಯಜ್ಞಾಭಿಷೇಕಂ ಕೃಷ್ಣಸ್ಯ ಸ್ತ್ರೀಭಿಃ ಕ್ರೀಡಾ ಚ ರಾತ್ರಿಷು ॥ ೩೨

---

(ಅನಂತರ ದಶಮಸ್ಕಂಧದಲ್ಲಿ) ಅಸುರಾರಿಯಾದ ಶ್ರೀಕೃಷ್ಣನ ಅಪಾರ ಕಾರ್ಯಗಳು ವರ್ಣಿತವಾಗಿವೆ ಆತನು ಶಿಶುವಾಗಿದ್ದಾಗ ಪ್ರಾಣಸಹಿತವಾಗಿ ಪೂತನೆಯ ಸ್ತನ್ಯಪಾನ ಮಾಡಿದ್ದು, ಶಕಟಸುರನನ್ನು ಒದ್ದು ಹಾರಿಸಿದ್ದು, ತೃಣಾವರ್ತನ ವಧೆ, ಬಕವತ್ಸಾಸುರರ ವಧೆ, ಸೋದರನಾದ ಬಲರಾಮನೊಡನೆ ಸೇರಿ ಧೇನುಕನನ್ನೂ ಪ್ರಲಂಬನನ್ನೂ ಸಂಹರಿಸಿದ್ದು—ಇವು ಬಂದಿವೆ (೨೮–೨೯). ಸುತ್ತಲೂ ಮುತ್ತಿಬರುತ್ತಿದ್ದ ಕಾಳ್ಗಿಚ್ಚಿನಿಂದ ಗೋಪರನ್ನು ರಕ್ಷಿಸಿದ್ದು, ಕಾಲಿಯ ಸರ್ಪದ ದಮನ, ಮಹಾಸರ್ಪವಾದ ವರುಣಭೃತ್ಯನಿಂದ ನಂದನನ್ನು ಬಿಡಿಸಿ ಕೊಂಡು ಬಂದದ್ದು, ಗೋಪಕನ್ಯೆಯರ ವ್ರತಾಚರಣೆ, ಆ ವ್ರತಗಳಿಂದ ಅಚ್ಯುತನು ಸಂತುಷ್ಟನಾದದ್ದು, ವಿಪ್ರಪತ್ನಿಯರನ್ನು ಅನುಗ್ರಹಿಸುವುದು, ವಿಪ್ರರ ಪಶ್ಚಾತ್ತಾಪ—ಇವೂ ವರ್ಣಿತವಾಗಿವೆ (೩೦–೩೧) ಅನಂತರ ಗೋವರ್ಧನಗಿರಿಯನ್ನೆತ್ತಿ ಹಿಡಿದದ್ದು, ದೇವೇಂದ್ರನಿಂದ ಶ್ರೀಕೃಷ್ಣನ ಪೂಜೆ, ಕಾಮಧೇನುವಿನಿಂದ ಕ್ಷೀರಾಭಿಷೇಕ, ರಾತ್ರಿಯಲ್ಲಿ ಗೋಪಿಯರೊಡನೆ ರಾಸಕ್ರೀಡೆ, ದುರ್ಬುದ್ಧಿಗಳಾದ ಶಂಖಚೂಡ, ಅರಿಷ್ಟ ಮತ್ತು ಕೇಶಿಗಳ ವಧೆ, ಅಕ್ರೂರನು ನಂದಗೋಕುಲಕ್ಕೆ ಆಗಮಿಸಿದ್ದು, ತರುವಾಯ ಬಲರಾಮಕೃಷ್ಣರು ಮಥುರೆಗೆ ಪ್ರಯಾಣ ಮಾಡುವುದು

ಶಂಖಚೂಡಸ್ಯ ದುರ್ಬುದ್ಧೇರ್ವಧೋಽರಿಷ್ಟಸ್ಯ ಕೇಶಿನಃ ।
ಅಕ್ರೂರಾಗಮನಂ ಪಶ್ಚಾತ್ ಪ್ರಸ್ಥಾನಂ ರಾಮಕೃಷ್ಣಯೋಃ ॥ ೩೩

ವ್ರಜಸ್ತ್ರೀಣಾಂ ವಿಲಾಪಶ್ಚ ಮಥುರಾಲೋಕನಂ ತತಃ ।
ಗಜಮುಷ್ಟಿಕಚಾಣೂರಕಂಸಾದೀನಾಂ ಚ ಯೋ ವಧಃ ॥ ೩೪

ಮೃತಸ್ಯಾನಯನಂ ಸೂನೋಃ ಪುನಃ ಸಾಂದೀಪನೇರ್ಗುರೋಃ ।
ಮಥುರಾಯಾಂ ನಿವಸತಾ ಯದುಚಕ್ರಸ್ಯ ಯತ್ಪ್ರಿಯಮ್ ।
ಕೃತಮುದ್ಧವರಾಮಾಭ್ಯಾಂ ಯುತೇನ ಹರಿಣಾ ದ್ವಿಜಾಃ ॥ ೩೫

ಜರಾಸಂಧಸಮಾನೀತಸೈನ್ಯಸ್ಯ ಬಹುಶೋ ವಧಃ ।
ಘಾತನಂ ಯವನೇಂದ್ರಸ್ಯ ಕುಶಸ್ಥಲ್ಯಾ ನಿವೇಶನಮ್ ॥ ೩೬

ಆದಾನಂ ಪಾರಿಜಾತಸ್ಯ ಸುಧರ್ಮಾಯಾಃ ಸುರಾಲಯಾತ್ ।
ರುಕ್ಮಿಣ್ಯಾ ಹರಣಂ ಯುದ್ಧೇ ಪ್ರಮಥ್ಯ ದ್ವಿಷತೋ ಹರೇಃ ॥ ೩೭

ಹರಸ್ಯ ಜೃಂಭಣಂ ಯುದ್ಧೇ ಬಾಣಸ್ಯ ಭುಜಕೃಂತನಮ್ ।
ಪ್ರಾಗ್ಜ್ಯೋತಿಷಪತಿಂ ಹತ್ವಾ ಕನ್ಯಾನಾಂ ಹರಣಂ ಚ ಯತ್ ॥ ೩೮

---

–ಇವು ಕಥಿತವಾಗಿವೆ (೩೨-೩೩). ಆಮೇಲೆ ವ್ರಜಾಂಗನೆಯರ ವಿಲಾಪ, ಮಥುರಾ ನಗರದರ್ಶನಗಳು ಬಂದಿವೆ. ಅನಂತರ ಕುವಲಯಾಪೀಡವೆಂಬ ಆನೆಯ ಸಂಹಾರ, ಮುಷ್ಟಿಕ ಚಾಣೂರರ ವಧೆ, ಕಂಸವಧೆ, ಗುರುವಾದ ಸಾಂದೀಪನಿಯ ಮೃತಪುತ್ರನನ್ನು ಯಮಲೋಕದಿಂದ ಕರೆತರುವುದು—ಇವು ಬಂದಿವೆ. ಅಲ್ಲದೆ ಮಥುರೆಯಲ್ಲಿ ಬಲರಾಮ ಮತ್ತು ಉದ್ಧವರೊಡನೆ ವಾಸವಾಗಿದ್ದ ಶ್ರೀಹರಿಯು ಯಾದವರಿಗೆ ಮಾಡಿದ ಉಪಕಾರ, ಜರಾಸಂಧನು ಕರೆತಂದ ಸೈನ್ಯವನ್ನು ಕೊಂದಿದ್ದು, ಕಾಲಯವನನ ಸಂಹಾರ, ದ್ವಾರಕಾ ನಿರ್ಮಾಣ—ಇವು ವರ್ಣಿತವಾಗಿವೆ (೩೪–೩೬). ದೇವಲೋಕದಿಂದ ಪಾರಿಜಾತ ಮತ್ತು ಸುಧರ್ಮಾಸಭೆಗಳನ್ನು ತರುವುದು, ಶತ್ರುಗಳನ್ನು ಸೋಲಿಸಿ ಶ್ರೀಕೃಷ್ಣನು ರುಕ್ಮಿಣಿಯನ್ನು ಕರೆದೊಯ್ಯುವುದು, ಬಾಣಾಸುರ ಸಂಗ್ರಾಮದಲ್ಲಿ ಹರನ ಜೃಂಭಣ, ಬಾಣನ ಭುಜಗಳನ್ನು ಕತ್ತರಿಸುವುದು. ನರಕಾಸುರನನ್ನು ಸಂಹರಿಸಿ ಅವನ ಸೆರೆಯಲ್ಲಿದ್ದ ಕನ್ಯೆಯರನ್ನು ಕರೆತರುವುದು—ಇವು ಕಥಿತವಾಗಿವೆ (೩೭–೩೮).

ಚೈದ್ಯಪೌಂಡ್ರಕಸಾಲ್ವಾನಾಂ ದಂತವಕ್ತ್ರಸ್ಯ ದುರ್ಮತೇಃ ।
ಶಂಬರೋ ದ್ವಿವಿದಃ ಪೀಠೋ ಮುರಃ ಪಂಚಜನಾದಯಃ ॥ ೩೯

ಮಾಹಾತ್ಮ್ಯಂ ಚ ವಧಸ್ತೇಷಾಂ ವಾರಾಣಸ್ಯಾಶ್ಚ ದಾಹನಮ್ ।
ಭಾರಾವತರಣಂ ಭೂಮೇರ್ನಿಮಿತ್ತೀಕೃತ್ಯ ಪಾಂಡವಾನ್ ॥ ೪೦

ವಿಪ್ರಶಾಪಾಪದೇಶೇನ ಸಂಹಾರಃ ಸ್ವಕುಲಸ್ಯ ಚ ।
ಉದ್ಧವಸ್ಯ ಚ ಸಂವಾದೋ ವಾಸುದೇವಸ್ಯ ಚಾದ್ಭುತಃ ॥ ೪೧

ಯತ್ರಾತ್ಮವಿದ್ಯಾ ಹ್ಯಖಿಲಾ ಪ್ರೋಕ್ತಾ ಧರ್ಮವಿನಿರ್ಣಯಃ ।
ತತೋ ಮರ್ತ್ಯಪರಿತ್ಯಾಗ ಆತ್ಮಯೋಗಾನುಭಾವತಃ ॥ ೪೨

ಯುಗಲಕ್ಷಣವೃತ್ತಿಶ್ಚ ಕಲೌ ನೄಣಾಮುಪಪ್ಲವಃ ।
ಚತುರ್ವಿಧಶ್ಚ ಪ್ರಲಯ ಉತ್ಪತ್ತಿಸ್ತ್ರಿವಿಧಾ ತಥಾ ॥ ೪೩

---

ಆಮೇಲೆ ಶಿಶುಪಾಲ, ಪೌಂಡ್ರಕ, ಸಾಲ್ವ, ದಂತವಕ್ತ್ರ, ಶಂಬರ, ದ್ವಿವಿದ, ಪೀಠ? ಮುರ, ಪಂಚಜನ—ಮೊದಲಾದವರ ಪ್ರಭಾವ ಮತ್ತು ಅವರ ವಧೆ—ಇವು ಬಂದಿವೆ. ಕಾಶೀನಗರವನ್ನು ದಹಿಸಿದ್ದು, ಪಾಂಡವರ ವ್ಯಾಜದಿಂದ ಭೂಭಾರವನ್ನಿಳುಹಿದ್ದು—ಇವು ವರ್ಣಿತವಾಗಿವೆ (೩೯–೪೦). ಅನಂತರ ಏಕಾದಶಸ್ಕಂಧದಲ್ಲಿ ವಿಪ್ರಶಾಪದ ನೆವದಿಂದ ತನ್ನ ಯಾದವಕುಲವನ್ನು ಸಂಹರಿಸಿದ್ದು ಮತ್ತು ವಾಸುದೇವನಿಗೂ ಉದ್ಧವನಿಗೂ ನಡೆದ ಮಹಿಮಾನ್ವಿತವಾದ ಸಂವಾದಗಳು ಬಂದಿವೆ. ಈ ಸಂವಾದಗಳಲ್ಲಿ ಸಮಸ್ತ ಬ್ರಹ್ಮವಿದ್ಯೆಯೂ ಧರ್ಮನಿರ್ಣಯವೂ ಬಂದಿವೆ. ಅನಂತರ ಶ್ರೀಕೃಷ್ಣನು ತನ್ನ ಮಾನುಷಭಾವವನ್ನು ಆತ್ಮಯೋಗಬಲದಿಂದ ಅಂತರ್ಧಾನಗೊಳಿಸಿದ ವಿಷಯವು ಬಂದಿದೆ (೪೧–೪೨). ಆಮೇಲೆ (ದ್ವಾದಶಸ್ಕಂಧದಲ್ಲಿ) ಚತುರ್ಯುಗಲಕ್ಷಣವೂ ಯುಗಾನುಸಾರವಾಗಿ ಜನರ ವರ್ತನವೂ ಕಲಿಯುಗದಲ್ಲಿ ಜನರಿಗಾಗುವ ಉಪದ್ರವವೂ ವರ್ಣಿತವಾಗಿವೆ. ಚತುರ್ವಿಧಪ್ರಳಯವಿಚಾರವೂ, (ಪ್ರಾಕೃತಿಕ, ನೈಮಿತ್ತಿಕ, ನಿತ್ಯ) ಎಂಬ ಮೂರು ಬಗೆಯ ಸೃಷ್ಟಿಯ ವಿಚಾರವೂ ಇವೆ. ರಾಜರ್ಷಿಯಾದ ಪರೀಕ್ಷಿತನ ದೇಹತ್ಯಾಗ, ವ್ಯಾಸಋಷಿಗಳು ವೇದಶಾಖೆಗಳನ್ನು ವಿಂಗಡಿಸಿದ್ದು, ಮಾರ್ಕಂಡೇಯಮುನಿಯ ಕಥೆ, ಭಗವಂತನ ಸ್ವರೂಪವರ್ಣನೆ, ಜಗದಾತ್ಮನಾದ ಸೂರ್ಯನ ವ್ಯೂಹರಚನೆಗಳು

ದೇಹತ್ಯಾಗಶ್ಚ ರಾಜರ್ಷೇರ್ವಿಷ್ಣುರಾತಸ್ಯ ಧೀಮತಃ ।
ಶಾಖಾಪ್ರಣಯನಮೃಷೇರ್ಮಾರ್ಕಂಡೇಯಸ್ಯ ಸತ್ಕಥಾ ।
ಮಹಾಪುರುಷವಿನ್ಯಾಸಃ ಸೂರ್ಯಸ್ಯ ಜಗದಾತ್ಮನಃ ॥ ೪೪

ಇತಿ ಚೋಕ್ತಂ ದ್ವಿಜಶ್ರೇಷ್ಠಾ ಯತ್ಪೃಷ್ಟೋಽಹಮಿಹಾಸ್ಮಿ ವಃ ।
ಲೀಲಾವತಾರಕರ್ಮಾಣಿ ಕೀರ್ತಿತಾನೀಹ ಸರ್ವಶಃ ॥ ೪೫

ಪತಿತಃ ಸ್ಖಲಿತಶ್ಚಾರ್ತಃ ಕ್ಷುತ್ತ್ವಾ ವಾ ವಿವಶೋ ಬ್ರುವನ್ ।
ಹರಯೇ ನಮ ಇತ್ಯುಚ್ಚೈರ್ಮುಚ್ಯತೇ ಸರ್ವಪಾತಕಾತ್ ॥ ೪೬

ಸಂಕೀರ್ತ್ಯಮಾನೋ ಭಗವಾನನಂತಃ
ಶ್ರುತಾನುಭಾವೋ ವ್ಯಸನಂ ಹಿ ಪುಂಸಾಮ್ ।
ಪ್ರವಿಶ್ಯ ಚಿತ್ತಂ ವಿಧುನೋತ್ಯಶೇಷಂ
ಯಥಾ ತಮೋಽರ್ಕೋಽಭ್ರಮಿವಾತಿವಾತಃ ॥ ೪೭

ಮೃಷಾ ಗಿರಸ್ತಾ ಹ್ಯಸತೀರಸತ್ಕಥಾ
ನ ಕಥ್ಯತೇ ಯದ್ ಭಗವಾನಧೋಕ್ಷಜಃ ।
ತದೇವ ಸತ್ಯಂ ತದುಹೈವ ಮಂಗಲಂ
ತದೇವ ಪುಣ್ಯಂ ಭಗವದ್ಗುಣೋದಯಮ್ ॥ ೪೮

---

ಕಥಿತವಾಗಿವೆ (೪೩–೪೪). ಎಲೈ ಶೌನಕಾದಿ ದ್ವಿಜಶ್ರೇಷ್ಠರೆ, ನೀವು ಕೇಳಿದ್ದನ್ನು ಈ ಪ್ರಕಾರವಾಗಿ ತಿಳಿಸಿದ್ದೇನೆ. ಭಗವಂತನ ಎಲ್ಲ ಲೀಲಾವತಾರಕೃತ್ಯಗಳನ್ನೂ ಹೀಗೆ ಕೀರ್ತಿಸಲಾಯಿತು. ಯಾವನಾದರೂ ಬಿದ್ದಾಗ, ಜಾರಿದಾಗ, ದುಃಖಿತನಾದಾಗ, ಸೀನಿದಾಗ, ವಿವಶನಾಗಿಯಾದರೂ 'ಹರಯೇ ನಮಃ' ಎಂದು ಗಟ್ಟಿಯಾಗಿ ಹೇಳಿದರೆ ಸಾಕು, ಆತನು ಸಮಸ್ತ ಪಾತಕಗಳಿಂದಲೂ ಬಿಡುಗಡೆ ಹೊಂದುತ್ತಾನೆ (೪೫–೪೬). ಭಗವಾನ್ ಅನಂತನ ನಾಮಸಂಕೀರ್ತನೆ ಮಾಡಿದರೆ ಅಥವಾ ಅವನ ಮಹಿಮೆಯನ್ನು ಕೇಳಿದರೆ ಸಾಕು, ಆತನು ಮಾನವರ ಕಷ್ಟವನ್ನು ತೊಡೆದುಹಾಕುತ್ತಾನೆ. ಜನರ ಚಿತ್ತವನ್ನು ಪ್ರವೇಶಿಸಿ, ಸೂರ್ಯನು ಕತ್ತಲೆಯನ್ನು ಹೇಗೋ ಹಾಗೆ—ಬಿರುಗಾಳಿಯು ಮೋಡವನ್ನು ಹೇಗೋ ಹಾಗೆ—ಅಶೇಷ ದುಃಖವನ್ನೂ ನಾಶಪಡಿಸುತ್ತಾನೆ (೪೭). ಶ್ರೀಹರಿಕೀರ್ತನೆಯಿಲ್ಲದ ಮಾತುಗಳು ಪೊಳ್ಳು ನುಡಿಗಳು ; ದುರಾಲಾಪಗಳು ; ಕೆಟ್ಟಕಥೆಗಳು ; ಭಗವಂತನ ಗುಣಗಳ

ತದೇವ ರಮ್ಯಂ ರುಚಿರಂ ನವಂ ನವಂ
ತದೇವ ಶಶ್ವನ್ಮನಸೋ ಮಹೋತ್ಸವಮ್ ।
ತದೇವ ಶೋಕಾರ್ಣವಶೋಷಣಂ ನೃಣಾಂ
ಯದುತ್ತಮಶ್ಲೋಕಯಶೋಽನುಗೀಯತೇ ॥ ೪೯

ನ ತದ್ ವಚಶ್ಚಿತ್ರಪದಂ ಹರೇರ್ಯಶೋ
ಜಗತ್ಪವಿತ್ರಂ ಪ್ರಗೃಣೀತ ಕರ್ಹಿಚಿತ್ ।
ತದ್ ಧ್ವಾಂಕ್ಷತೀರ್ಥಂ ನ ತು ಹಂಸಸೇವಿತಂ
ಯತ್ರಾಚ್ಯುತಸ್ತತ್ರ ಹಿ ಸಾಧವೋಽಮಲಾಃ ॥ ೫೦

ಸ ವಾಗ್ವಿಸರ್ಗೋ ಜನತಾಘಸಂಪ್ಲವೋ
ಯಸ್ಮಿನ್ಪ್ರತಿ ಶ್ಲೋಕಮಬದ್ಧವತ್ಯಪಿ ।
ನಾಮಾನ್ಯನಂತಸ್ಯ ಯಶೋಽಂಕಿತಾನಿ ಯ-
ಚ್ಛೃಣ್ವಂತಿ ಗಾಯಂತಿ ಗೃಣಂತಿ ಸಾಧವಃ ॥ ೫೧

ನೈಷ್ಕರ್ಮ್ಯಮಪ್ಯಚ್ಯುತ ಭಾವವರ್ಜಿತಂ
ನ ಶೋಭತೇ ಜ್ಞಾನಮಲಂ ನಿರಂಜನಮ್ ।

---

ವರ್ಣನೆಯಿರುವ ಮಾತೇ ಸತ್ಯ ; ಅದೇ ಮಂಗಳ ; ಅದೇ ಪುಣ್ಯ (೪೮). ಉತ್ತಮ ಶ್ಲೋಕನಾದ ಶ್ರೀಹರಿಯ ಕೀರ್ತಿಯನ್ನು ಹಾಡುವ ನುಡಿಯೇ ರಮ್ಯವಾದದ್ದು ; ರುಚಿಕರವಾದದ್ದು ; ನಿತ್ಯನವೀನವಾದದ್ದು ; ಹೃದಯಕ್ಕೆ ಹಬ್ಬವನ್ನುಂಟುಮಾಡ ತಕ್ಕದ್ದು ; ಮಾನವರ ಶೋಕಸಮುದ್ರವನ್ನು ಒಣಗಿಸತಕ್ಕದ್ದು ಅದೇ ಸರಿ (೪೯). ವಿಚಿತ್ರ ಪದಘಟಿತವಾಗಿದ್ದರೂ ಯಾವ ನುಡಿಯು ಶ್ರೀಹರಿಯ ಜಗತ್‌ಪವಿತ್ರವಾದ ಯಶಸ್ಸನ್ನು ಎಲ್ಲಿಯೂ ಕೊಂಡಾಡುವುದಿಲ್ಲವೋ ಆ ನುಡಿಯು ಕಾಗೆ ಹೊರಳಾಡುವ ಕೊಳಕು ನೀರು, ಹಂಸಸೇವಿತವಾದ ಕೊಳವಲ್ಲ. ಎಲ್ಲಿ ಅಚ್ಯುತನಿರುವನೋ ಅಲ್ಲಿ (ಹಂಸಗಳಂತೆ) ಶುಭ್ರರಾದ ಸಾಧು ಜನರಿರುತ್ತಾರೆ (೫೦). ಶ್ಲೋಕವು ಅಬದ್ಧ ವಾಗಿದ್ದರೂ ಚಿಂತೆ ಇಲ್ಲ, ಅದರಲ್ಲಿ ಭಗವಂತನ ಕೀರ್ತಿಯನ್ನು ಹಾಡುವ ನಾಮಾಂಕಿತಗಳಿದ್ದರೆ ಸಾಕು, ಅದೇ ಸತ್ಯವಾದ ವಾಕ್‌ಪ್ರಯೋಗ. ಜನತೆಯ ಪಾಪವನ್ನು ಹೊಡೆದೋಡಿಸತಕ್ಕದ್ದು ಅದೇ. ಅದನ್ನೇ ಸಾಧು ಜನರು ಕೇಳುತ್ತಾರೆ, ಹಾಡುತ್ತಾರೆ, ಪಠಿಸುತ್ತಾರೆ (೫೧). ಉಪಾಧಿನಿವರ್ತಕವಾದ ಬ್ರಹ್ಮಜ್ಞಾನವೂ

*

ಕುತಃ ಪುನಃ ಶಶ್ವದಭದ್ರಮೀಶ್ವರೇ
ನ ಹ್ಯರ್ಪಿತಂ ಕರ್ಮ ಯದಪ್ಯನುತ್ತಮಮ್ ॥ ೫೨

ಯಶಃಶ್ರಿಯಾಮೇವ ಪರಿಶ್ರಮಃ ಪರೋ
ವರ್ಣಾಶ್ರಮಾಚಾರತಪಃಶ್ರುತಾದಿಷು ।
ಅವಿಸ್ಮೃತಿಃ ಶ್ರೀಧರಪಾದಪದ್ಮಯೋ-
ರ್ಗುಣಾನುವಾದಶ್ರವಣಾದಿಭಿರ್ಹರೇಃ ॥ ೫೩

ಅವಿಸ್ಮೃತಿಃ ಕೃಷ್ಣಪದಾರವಿಂದಯೋಃ
ಕ್ಷಿಣೋತ್ಯಭದ್ರಾಣಿ ಶಮಂ ತನೋತಿ ಚ ।
ಸತ್ತ್ವಸ್ಯ ಶುದ್ಧಿಂ ಪರಮಾತ್ಮಭಕ್ತಿಂ
ಜ್ಞಾನಂ ಚ ವಿಜ್ಞಾನವಿರಾಗಯುಕ್ತಮ್ ॥ ೫೪

ಯೂಯಂ ದ್ವಿಜಾಗ್ರ್ಯಾ ಬತ ಭೂರಿಭಾಗಾ
ಯಚ್ಛಶ್ವದಾತ್ಮನ್ಯಖಿಲಾತ್ಮಭೂತಮ್ ।

---

ಸಹ ವಿಷ್ಣುಭಕ್ತಿವರ್ಜಿತವಾಗಿದ್ದರೆ ಚೆನ್ನಾಗಿ [1]ಶೋಭಿಸುವುದಿಲ್ಲ. ಹೀಗಿರುವಾಗ ಕರ್ಮವು ಈಶ್ವರಾರ್ಪಿತವಾಗದಿದ್ದರೆ ಎಂದಿಗಾದರೂ ಶೋಭಿಸೀತೆ? ಶ್ರೇಷ್ಠಕರ್ಮವಾಗಿದ್ದರೂ ಕರ್ಮವೆನ್ನುವುದು ಸದಾ ದುಃಖಾತ್ಮಕವಲ್ಲವೆ? (೫೨). ವರ್ಣಾಶ್ರಮ ಧರ್ಮಗಳ ಆಚರಣೆ, ತಪಸ್ಸು, ವಿದ್ಯೆ—ಮುಂತಾದವುಗಳಲ್ಲಿ ಮಾಡುವ ತೀವ್ರವಾದ ಪರಿಶ್ರಮಕ್ಕೆ ಕೀರ್ತಿ, ಸಂಪತ್ತು—ಇವೆರಡೇ ಫಲಗಳು. ಆದರೆ ಭಗವಂತನ ಗುಣ ಕಥಾನುವಾದಗಳಿಂದಲೂ ಶ್ರವಣಾದಿಗಳಿಂದಲೂ ಆಗುವ ಫಲವೇನೆಂದರೆ—ಶ್ರೀಹರಿಯ ಪಾದಪದ್ಮಗಳಲ್ಲಿಯೇ ನೆಲೆನಿಲ್ಲುವ ಮರವೆಯಾಗದ ದೃಢವಾದ ಸ್ಮರಣೆ (೫೩). ಶ್ರೀಕೃಷ್ಣಪದಾರವಿಂದಗಳ ಈ ದೃಢವಾದ ಸ್ಮರಣೆಯು ಅಮಂಗಳಗಳನ್ನು ನಿರ್ಮೂಲಮಾಡುತ್ತದೆ. ಶಾಂತಿಯನ್ನೀಯುತ್ತದೆ. ಚಿತ್ತಶುದ್ಧಿಯನ್ನು ಗೈಯುತ್ತದೆ. ಪರಮಾತ್ಮಭಕ್ತಿಯನ್ನು ಬೆಳೆಸುತ್ತದೆ. ವೈರಾಗ್ಯವನ್ನುಂಟುಮಾಡುವುದಲ್ಲದೆ ಅನುಭವಪರ್ಯಂತವಾದ ಸಮ್ಯಗ್ಜ್ಞಾನವನ್ನುಂಟುಮಾಡುತ್ತದೆ (೫೪). ಎಲೈ ಶೌನಕಾದಿದ್ವಿಜೋತ್ತಮರೆ, ನೀವು ಬಹಳ ಭಾಗ್ಯಶಾಲಿಗಳು. ಯಾರಿಗೆ

---

1. ಅಪರೋಕ್ಷಜ್ಞಾನವನ್ನುಂಟುಮಾಡಲು ಸಮರ್ಥವಾಗುವುದಿಲ್ಲ—ಎಂದು ಅಭಿಪ್ರಾಯ.

ನಾರಾಯಣಂ ದೇವಮದೇವಮೀಶ-
ಮಜಸ್ರಭಾವಾ ಭಜತಾವಿವೇಶ್ಯ ॥ ೫೫

ಅಹಂ ಚ ಸಂಸ್ಮಾರಿತ ಆತ್ಮತತ್ತ್ವಂ
ಶ್ರುತಂ ಪುರಾ ಮೇ ಪರಮರ್ಷಿವಕ್ತ್ರಾತ್ ।
ಪ್ರಾಯೋಪವೇಶೇ ನೃಪತೇಃ ಪರೀಕ್ಷಿತಃ
ಸದಸ್ಯೃಷೀಣಾಂ ಮಹತಾಂ ಚ ಶೃಣ್ವತಾಮ್ ॥ ೫೬

ಏತದ್ವಃ ಕಥಿತಂ ವಿಪ್ರಾಃ ಕಥನೀಯೋರುಕರ್ಮಣಃ ।
ಮಾಹಾತ್ಮ್ಯಂ ವಾಸುದೇವಸ್ಯ ಸರ್ವಾಶುಭವಿನಾಶನಮ್ ॥ ೫೭

ಯ ಏವಂ ಶ್ರಾವಯೇನ್ನಿತ್ಯಂ ಯಾಮಕ್ಷಣಮನನ್ಯಧೀಃ ।
ಶ್ರದ್ಧಾವಾನ್ ಯೋಽನುಶೃಣುಯಾತ್ ಪುನಾತ್ಯಾತ್ಮಾನಮೇವ ಸಃ ॥ ೫೮

ದ್ವಾದಶ್ಯಾಮೇಕಾದಶ್ಯಾಂ ವಾ ಶೃಣ್ವನ್ನಾಯುಷ್ಯವಾನ್ ಭವೇತ್ ।
ಪಠತ್ಯನಶ್ನನ್ ಪ್ರಯತಸ್ತತೋ ಭವತ್ಯಪಾತಕೀ ॥ ೫೯

---

ಇನ್ನೊಬ್ಬ ದೇವನೇ ಇಲ್ಲವೋ ಅಂತಹ ದೇವದೇವನೂ ಸರ್ವನಿಯಾಮಕನೂ ಸರ್ವಾಂತರ್ಯಾಮಿಯೂ ಆದ ಶ್ರೀಮನ್ನಾರಾಯಣನನ್ನು ಸತತವಾದ ಭಕ್ತಿಭಾವದಿಂದ ತನ್ಮಯರಾಗಿ ಭಜಿಸುತ್ತಿರಿ (೫೫). ಹಿಂದೆ ಪರೀಕ್ಷಿತಮಹಾರಾಜನು ಪ್ರಾಯೋಪವೇಶಮಾಡಿದಾಗ, ಋಷಿಗಳ ಸಭೆಯಲ್ಲಿ ಮಹಾಜನರು ಕೇಳುತ್ತಿರುವಾಗ, ಪರಮರ್ಷಿಗಳಾದ ಶುಕಮಹಾತ್ಮರ ಬಾಯಿಯಿಂದ ಯಾವ ಆತ್ಮತತ್ತ್ವವನ್ನು ನಾನು ಕೇಳಿದ್ದೆನೋ ಅದನ್ನು ನೀವೀಗ ನನ್ನ ಸ್ಮರಣೆಗೆ ತಂದಿರಿ (೫೬). ಹೇ ವಿಪ್ರೋತ್ತಮರೆ, ಕಥನಯೋಗ್ಯನೂ ಮಹಾಕರ್ಮನೂ ಆದ ವಾಸುದೇವನ ಸರ್ವಾಶುಭವಿನಾಶಕವಾದ ಮಾಹಾತ್ಮ್ಯವನ್ನು ನಿಮಗೆ ಹೇಳಿದ್ದೇನೆ. ಯಾವಾತನು ಪ್ರತಿದಿನವೂ ಏಕಚಿತ್ತನಾಗಿ ಈ ಪುರಾಣವನ್ನು ಒಂದು ಯಾಮದವರೆಗೆ ಅಥವಾ ಒಂದು ಕ್ಷಣಕಾಲ ಪ್ರವಚನಮಾಡುತ್ತಾನೋ ಯಾವಾತನು ಶ್ರದ್ಧಾವಂತನಾಗಿ ಇದನ್ನು ಕೇಳುತ್ತಾನೋ ಆತನು ತನ್ನ ಆತ್ಮವನ್ನೇ ಶುದ್ಧಿಮಾಡಿಕೊಳ್ಳುತ್ತಾನೆ (೫೭–೫೮). ಏಕಾದಶಿಯ ದಿನ ಅಥವಾ ದ್ವಾದಶಿಯ ದಿನ ಇದರ ಶ್ರವಣ ಮಾಡತಕ್ಕವನು ಆಯುಷ್ಮಂತನಾಗುತ್ತಾನೆ. ಉಪವಾಸವಿದ್ದು ಪರಿಶುದ್ಧನಾಗಿ ಇದನ್ನು

ಪುಷ್ಕರೇ ಮಥುರಾಯಾಂ ಚ ದ್ವಾರವತ್ಯಾಂ ಯತಾತ್ಮವಾನ್ ।
ಉಪೋಷ್ಯ ಸಂಹಿತಾಮೇತಾಂ ಪಠಿತ್ವಾ ಮುಚ್ಯತೇ ಭಯಾತ್ ॥ ೬೦

ದೇವತಾ ಮುನಯಃ ಸಿದ್ಧಾಃ ಪಿತರೋ ಮನವೋ ನೃಪಾಃ ।
ಯಚ್ಛಂತಿ ಕಾಮಾನ್ ಗೃಣತಃ ಶೃಣ್ವತೋ ಯಸ್ಯ ಕೀರ್ತನಾತ್ ॥ ೬೧

ಋಚೋ ಯಜೂಂಷಿ ಸಾಮಾನಿ ದ್ವಿಜೋಽಧೀತ್ಯಾನುವಿಂದತೇ ।
ಮಧುಕುಲ್ಯಾಃ ಘೃತಕುಲ್ಯಾಃ ಪಯಃಕುಲ್ಯಾಶ್ಚ ತತ್ಫಲಮ್ ॥ ೬೨

ಪುರಾಣಸಂಹಿತಾಮೇತಾಮಧೀತ್ಯ ಪ್ರಯತೋ ದ್ವಿಜಃ ।
ಪ್ರೋಕ್ತಂ ಭಗವತಾ ಯತ್ತು ತತ್ಪದಂ ಪರಮಂ ವ್ರಜೇತ್ ॥ ೬೩

ವಿಪ್ರೋಽಧೀತ್ಯಾಪ್ನುಯಾತ್ ಪ್ರಜ್ಞಾಂ ರಾಜನ್ಯೋದಧಿಮೇಖಲಾಮ್ ।
ವೈಶ್ಯೋ ನಿಧಿಪತಿತ್ವಂ ಚ ಶೂದ್ರಃ ಶುದ್ಧ್ಯೇತ ಪಾತಕಾತ್ ॥ ೬೪

---

ಪಠಿಸತಕ್ಕವನು ಪಾತಕಗಳಿಂದ ಮುಕ್ತನಾಗುತ್ತಾನೆ (೫೯). ಪುಷ್ಕರಕ್ಷೇತ್ರ, ಮಥುರೆ ಮತ್ತು ದ್ವಾರಕೆಗಳಲ್ಲಿ ಜಿತೇಂದ್ರಿಯನಾಗಿ ಉಪವಾಸವಿದ್ದು ಈ ಪುರಾಣ ಸಂಹಿತೆಯನ್ನು ಪಠಿಸುವವನು ಸರ್ವಭಯಗಳಿಂದಲೂ ನಿರ್ಮುಕ್ತನಾಗುತ್ತಾನೆ. ಈ ಸ್ಥಳಗಳಲ್ಲಿ ಈ ಪುರಾಣಸಂಹಿತೆಯ ಪಠನಶ್ರವಣಕೀರ್ತನಗಳನ್ನು ಮಾಡ ತಕ್ಕವರ ಇಷ್ಟಾರ್ಥಗಳನ್ನು ದೇವತೆಗಳೂ ಮುನಿಗಳೂ ಸಿದ್ಧರೂ ಪಿತೃದೇವತೆಗಳೂ ಮನುಚಕ್ರವರ್ತಿಗಳೂ ನೆರವೇರಿಸುತ್ತಾರೆ (೬೦–೬೧). ದ್ವಿಜನು ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಅಧ್ಯಯನಮಾಡಿದರೆ ಯಾವ ಮಧುಕುಲ್ಯಾ, ಘೃತಕುಲ್ಯಾ, ಪಯಃಕುಲ್ಯಾ—ಎಂಬ [1]ಫಲಗಳನ್ನು ಪಡೆಯುತ್ತಾನೋ ಆ ಫಲ ಗಳನ್ನು ಈ ಪುರಾಣದ ಅಧ್ಯಯನಕರ್ತನೂ ಪಡೆಯುತ್ತಾನೆ (೬೨). ಹೇ ವಿಪ್ರರೆ, ಭಗವಂತನು ಪರಮಪದವೆಂಬ ಯಾವ ಮೋಕ್ಷವನ್ನು ಹೇಳಿದ್ದಾನೋ ಆ ಫಲವನ್ನು ಶುದ್ಧನಾಗಿ ಈ ಭಾಗವತಪುರಾಣವನ್ನು ಅಧ್ಯಯನಮಾಡತಕ್ಕವನು ಪಡೆಯು ತ್ತಾನೆ (೬೩). ಈ ಸಂಹಿತೆಯನ್ನು ಅಧ್ಯಯನಮಾಡುವ ಬ್ರಾಹ್ಮಣನು ಆತ್ಮ-ಜ್ಞಾನವನ್ನೂ ಕ್ಷತ್ರಿಯನು ಸಾಗರಪರ್ಯಂತವಾದ ಪೃಥ್ವಿಯನ್ನೂ ವೈಶ್ಯನು ಐಶ್ವರ್ಯ ವನ್ನೂ ಪಡೆಯುತ್ತಾನೆ. ಶೂದ್ರನು ಪಾತಕದಿಂದ ಬಿಡುಗಡೆ ಹೊಂದಿ ಶುದ್ಧ

---

1. ಜೇನು, ತುಪ್ಪ, ಹಾಲುಗಳಿಂದ ಸಮೃದ್ಧವಾದ ಪುಣ್ಯಫಲ.

ಕಲಿಮಲಸಂಹತಿಕಾಲನೋಽಖಿಲೇಶೋ
ಹರಿರಿತರತ್ರ ನ ಗೀಯತೇ ಹ್ಯಭೀಕ್ಷ್ಣಮ್ ।
ಇಹ ತು ಪುನರ್ಭಗವಾನಶೇಷಮೂರ್ತಿಃ
ಪರಿಪಠಿತೋಽನುಪದಂ ಕಥಾಪ್ರಸಂಗೈಃ ॥ ೬೫

ತಮುಹಮಜಮನಂತಮಾತ್ಮತತ್ತ್ವಂ
ಜಗದುದಯಸ್ಥಿತಿಸಂಯಮಾತ್ಮಶಕ್ತಿಮ್ ।
ದ್ಯುಪತಿಭಿರಜಶಕ್ರ ಶಂಕರಾದ್ಯೈ-
ರ್ದುರವಸಿತಸ್ತವಮಚ್ಯುತಂ ನತೋಽಸ್ಮಿ ॥ ೬೬

ಉಪಚಿತನವಶಕ್ತಿಭಿಃ ಸ್ವ ಆತ್ಮ-
ನ್ಯುಪರಚಿತಸ್ಥಿರಜಂಗಮಾಲಯಾಯ ।
ಭಗವತ ಉಪಲಬ್ಧಿಮಾತ್ರಧಾಮ್ನೇ
ಸುರಋಷಭಾಯ ನಮಃ ಸನಾತನಾಯ ॥ ೬೭

---

ನಾಗುತ್ತಾನೆ (೬೪). ಕಲಿದೋಷಸಂಘಾತವನ್ನು ವಿಧ್ವಂಸಗೊಳಿಸಬಲ್ಲ ಅಖಿಲೇಶ್ವರನಾದ ಶ್ರೀಹರಿಯು ಇತರ ಗ್ರಂಥಗಳಲ್ಲಿ ವಿಶೇಷವಾಗಿ ಕೀರ್ತಿತನಾಗಿಲ್ಲ. ಈ ಪುರಾಣದಲ್ಲಾದರೋ ವಿಶ್ವಮೂರ್ತಿಯಾದ ಆ ಭಗವಂತನು ಹೆಜ್ಜೆಹೆಜ್ಜೆಗೂ ಕಥಾಪ್ರಸಂಗಗಳಿಂದ ವರ್ಣಿಸಲ್ಪಟ್ಟಿದ್ದಾನೆ (೬೫). ಅಜನೂ ಅನಂತನೂ ಆತ್ಮದ ಸತ್ಯಸ್ವರೂಪನೂ ಜಗತ್ತಿನ ಉದಯ-ಸ್ಥಿತಿ-ನಾಶಗಳಿಗೆ ಕಾರಣಗಳಾದ ರಜಸ್ಸು-ಸತ್ತ್ವ-ತಮಸ್ಸು ಎಂಬ ಆತ್ಮಶಕ್ತಿಯುಳ್ಳವನೂ ಬ್ರಹ್ಮ ದೇವೇಂದ್ರ ಶಂಕರಾದಿ ದೇವತೆಗಳಿಗೂ ಸ್ತುತಿಸಲು ಅಶಕ್ಯವಾದ ಮಹಿಮೆಯುಳ್ಳವನೂ ಆದ ಅಚ್ಯುತನಿಗೆ ನಮಸ್ಕರಿಸಿದ್ದೇನೆ (೬೬). ಅಭಿವ್ಯಕ್ತವಾದ [1]ನವಶಕ್ತಿಗಳಿಂದ ತನ್ನಲ್ಲಿಯೇ ಸ್ಥಿರವೂ ಜಂಗಮವೂ ಆದ ಆಲಯವನ್ನು ರಚಿಸಿಕೊಂಡಿರುವ ಉಪಲಬ್ಧಿ ಮಾತ್ರಸ್ವರೂಪನೂ ದೇವೋತ್ತಮನೂ ಸನಾತನನೂ ಆದ ಆ ಭಗವಂತನಿಗೆ ನಮಸ್ಕಾರ (೬೭).

---

1. ಪ್ರಕೃತಿ, ಪುರುಷ (ಜೀವ), ಮಹತ್, ಅಹಂಕಾರ ಮತ್ತು ಶಬ್ದಾದಿ ಪಂಚತನ್ಮಾತ್ರಗಳು.

ಸ್ವಸುಖನಿಭೃತಚೇತಾಸ್ತದ್ವ್ಯುದಸ್ತಾನ್ಯಭಾವೋऽ-
ಪ್ಯಜಿತರುಚಿರಲೀಲಾಕೃಷ್ಟಸಾರಸ್ತದೀಯಮ್ ।
ವ್ಯತನುತ ಕೃಪಯಾ ಯಸ್ತತ್ತ್ವದೀಪಂ ಪುರಾಣಂ
ತಮಖಿಲವೃಜಿನಘ್ನಂ ವ್ಯಾಸಸೂನುಂ ನತೋऽಸ್ಮಿ ॥ ೬೮

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ದ್ವಾದಶಸ್ಕಂಧೇ
ದ್ವಾದಶೋಽಧ್ಯಾಯಃ



---

ಹೃದಯದಲ್ಲಿ ತುಂಬಿ ತುಳುಕುವ ಆತ್ಮಾನಂದವುಳ್ಳವರಾಗಿ, ಆ ನಿಮಿತ್ತದಿಂದ ಅನ್ಯವಸ್ತುವಿನಲ್ಲಿ ಆದರವನ್ನು ಕಳೆದುಕೊಂಡಿದ್ದರೂ ಸಹ ಶ್ರೀಹರಿಯ ಮಧುರಲೀಲೆಗಳಿಗೆ ವಶರಾಗಿ ಚಿತ್ತಸ್ಥೈರ್ಯವನ್ನು ಬದಿಗಿರಿಸಿ, ಪರಮಾತ್ಮನ ತತ್ತ್ವಪ್ರಕಾಶಕವಾದ ಈ ಪುರಾಣವನ್ನು ಕೃಪೆಯಿಂದ ಯಾರು ರಚಿಸಿದರೋ ಅಂತಹ ಅಖಿಲ ಪಾಪ ನಿರ್ಮೂಲನಕ್ಷಮರೂ ಶ್ರೀ ವೇದವ್ಯಾಸಪುತ್ರರೂ ಆದ ಶುಕಮಹರ್ಷಿಗಳಿಗೆ ನಮಸ್ಕರಿಸುತ್ತೇನೆ" (೬೮).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ದ್ವಾದಶಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯ



# ತ್ರಯೋದಶಾಧ್ಯಾಯಃ

ಸೂತ ಉವಾಚ—

ಯಂ ಬ್ರಹ್ಮಾ ವರುಣೇಂದ್ರರುದ್ರಮರುತಃ
ಸ್ತುನ್ವಂತಿ ದಿವ್ಯೈಃ ಸ್ತವೈ-
ರ್ವೇದೈಃ ಸಾಂಗಪದಕ್ರಮೋಪನಿಷದೈ-
ರ್ಗಾಯಂತಿ ಯಂ ಸಾಮಗಾಃ ।

ಧ್ಯಾನಾವಸ್ಥಿತತದ್ಗತೇನ ಮನಸಾ
ಪಶ್ಯಂತಿ ಯಂ ಯೋಗಿನೋ
ಯಸ್ಯಾಂತಂ ನ ವಿದುಃ ಸುರಾಸುರಗಣಾ
ದೇವಾಯ ತಸ್ಮೈ ನಮಃ ॥ ೧

ಪೃಷ್ಠೇ ಭ್ರಾಮ್ಯದಮಂದಮಂದರಗಿರಿ-
ಗ್ರಾವಾಗ್ರಕಂಡೂಯನಾ-
ನ್ನಿದ್ರಾಲೋಃ ಕಮಠಾಕೃತೇರ್ಭಗವತಃ
ಶ್ವಾಸಾನಿಲಾಃ ಪಾಂತು ವಃ ।

## ಅಧ್ಯಾಯ ೧೩

ಅಷ್ಟಾದಶ ಪುರಾಣಗಳಲ್ಲಿರುವ ಶ್ಲೋಕಗಳ ಸಂಖ್ಯೆ. ಭಾಗವತಪುರಾಣದ ಶ್ರೇಷ್ಠತೆ. ಫಲಶ್ರುತಿ. ಮಂಗಳ.

ಸೂತಪೌರಣಿಕರು ಹೇಳಿದರು : “ಯಾರನ್ನು ಬ್ರಹ್ಮ, ಇಂದ್ರ, ರುದ್ರ, ಮರುತ್ತುಗಳು ದಿವ್ಯಸ್ತೋತ್ರಗಳಿಂದಲೂ ಷಡಂಗ-ಪದ-ಕ್ರಮ-ಉಪನಿಷತ್ತುಗಳಿಂದ ಸಹಿತವಾದ ವೇದಗಳಿಂದಲೂ ಸ್ತುತಿಸುತ್ತಾರೋ, ಯಾರನ್ನು ಸಾಮವೇದಿಗಳು ಹೊಗಳಿ ಗಾನಮಾಡುತ್ತಾರೋ, ಯಾರನ್ನು ಯೋಗಿಗಳ ಧ್ಯಾನದಿಂದ ನಿಶ್ಚಲವೂ ಭಗವಲ್ಲೀನವೂ ಆದ ಮನಸ್ಸಿನಿಂದ ಸಾಕ್ಷಾತ್ಕರಿಸುತ್ತಾರೋ, ಯಾವ ಪರಮಾತ್ಮನ ಮಹಿಮೆಯ ಆದ್ಯಂತವು ದೇವಾಸುರರಿಗೂ ತಿಳಿದಿಲ್ಲವೋ ಆ ಸ್ವಾಮಿಗೆ ನಮಸ್ಕಾರ (೧). (ಸಮುದ್ರ ಮಥನಕಾಲದಲ್ಲಿ) ತನ್ನ ಬೆನ್ನಿನ ಮೇಲಿದ್ದ

ಯತ್ಸಂಸ್ಕಾರಕಲಾನುವರ್ತನವಶಾದ್
ವೇಲಾನಿಭೇನಾಂಭಸಾಂ
ಯಾತಾಯಾತಮತಂದ್ರಿತಂ ಜಲನಿಧೇ-
ರ್ನಾದ್ಯಾಪಿ ವಿಶ್ರಾಮ್ಯತಿ ॥ ೨

ಪುರಾಣಸಂಖ್ಯಾಸಂಭೂತಿಮಸ್ಯ ವಾಚ್ಯಪ್ರಯೋಜನೇ ।
ದಾನಂ ದಾನಸ್ಯ ಮಾಹಾತ್ಮ್ಯಂ ಪಾಠಾದೇಶ್ಚ ನಿಬೋಧತ ॥ ೩

ಬ್ರಾಹ್ಮಂ ದಶ ಸಹಸ್ರಾಣಿ ಪಾದ್ಮಂ ಪಂಚೋನಷಷ್ಟಿ ಚ ।
ಶ್ರೀವೈಷ್ಣವಂ ತ್ರಯೋವಿಂಶಚ್ಚತುರ್ವಿಂಶತಿ ಶೈವಕಮ್ ॥ ೪

ದಶಾಷ್ಟೌ ಶ್ರೀ ಭಾಗವತಂ ನಾರದಂ ಪಂಚವಿಂಶತಿಃ ।
ಮಾರ್ಕಂಡಂ ನವ ವಾಹ್ನಂ ಚ ದಶಪಂಚ ಚತುಃಶತಮ್ ॥ ೫

---

ಮಂದರಪರ್ವತವನ್ನು ದೇವಾಸುರರು ಮಥಿಸುತ್ತಿರುವಾಗ ಪರ್ವತದ ಚೂಪಾದ ಭಾಗದ ಘರ್ಷಣೆಯಿಂದ ಬೆನ್ನನ್ನು ತುರಿಸಿದಂತಾಗಿ ಯಾವ ಮಹಾಕೂರ್ಮಕ್ಕೆ ನಿದ್ರೆಬಂದಿತೊ, ಅಂತಹ ಕೂರ್ಮಾಕೃತಿಯನ್ನು ಧರಿಸಿದ ಭಗವಂತನ ಶ್ವಾಸಾನಿಲಗಳು ನಿಮ್ಮನ್ನು ಕಾಪಾಡಲಿ! (ರಭಸದಿಂದ ಬರುತ್ತಿದ್ದ) ಆ ಶ್ವಾಸಾನಿಲಗಳ ವೇಗ ದಿಂದುಂಟಾದ ಸಂಸ್ಕಾರಲೇಶವು ಉಳಿದದ್ದರಿಂದ ಸಮುದ್ರಜಲದ ಅವಿಚ್ಛಿನ್ನ ಯಾತಾ ಯಾತಗಳು ಇಂದಿಗೂ ನಿಂತಿಲ್ಲ! (ಈಗ ಬೀಸುವ ಗಾಳಿಯಿಂದಾದ) ಸಮುದ್ರ ಕ್ಷೋಭದಿಂದ ಅಲೆಗಳು ಏಳುತ್ತವೆಯೆಂಬುದು ಒಂದು ಕುಂಟುನೆಪವೇ ಸರಿ! (೨). ಈಗ ಎಲ್ಲ ಪುರಾಣಗಳ ಶ್ಲೋಕ ಸಂಖ್ಯೆಯನ್ನು ಈ ಭಾಗವತ ಪುರಾಣದ ವಿಷಯ ಪ್ರಯೋಜನಗಳನ್ನೂ ಈ ಗ್ರಂಥದ ದಾನಕ್ರಮವನ್ನೂ ದಾನಪಾಠಾದಿಗಳ ಮಹಿಮೆ ಯನ್ನೂ ತಿಳಿದುಕೊಳ್ಳಿರಿ (೩). ಬ್ರಹ್ಮಪುರಾಣವು ಹತ್ತುಸಾವಿರ ಶ್ಲೋಕ ಗಳಿಂದ ಕೂಡಿದೆ. ಪದ್ಮಪುರಾಣವು ಐವತ್ತೈದು ಸಾವಿರ ಶ್ಲೋಕಗಳಿಂದ ಕೂಡಿದೆ. ಶ್ರೀ ವಿಷ್ಣುಪುರಾಣವು ಇಪ್ಪತ್ತುಮೂರುಸಾವಿರ ಶ್ಲೋಕಗಳಿಂದಲೂ ಶಿವಪುರಾಣವು ಇಪ್ಪತ್ತನಾಲ್ಕುಸಾವಿರ ಶ್ಲೋಕಗಳಿಂದಲೂ ಸಹಿತವಾಗಿವೆ (೪). ಶ್ರೀಮದ್ ಭಾಗವತದಲ್ಲಿ ಹದಿನೆಂಟುಸಾವಿರ ಶ್ಲೋಕಗಳಿವೆ. ನಾರದಪುರಾಣದಲ್ಲಿ ಇಪ್ಪತ್ತೈದು ಸಾವಿರಗಳಿವೆ. ಮಾರ್ಕಂಡೇಯ ಪುರಾಣದಲ್ಲಿ ಒಂಬತ್ತುಸಾವಿರ, ಅಗ್ನಿಪುರಾಣದಲ್ಲಿ

ಚತುರ್ದಶ ಭವಿಷ್ಯಂ ಸ್ಯಾತ್ತಥಾ ಪಂಚಶತಾನಿ ಚ ।
ದಶಾಷ್ಟೌ ಬ್ರಹ್ಮವೈವರ್ತಂ ಲಿಂಗಮೇಕಾದಶೈವ ತು ॥ ೬

ಚತುರ್ವಿಂಶತಿ ವಾರಾಹಮೇಕಾಶೀತಿಸಹಸ್ರಕಮ್ ।
ಸ್ಕಾಂದಂ ಶತಂ ತಥಾ ಚೈಕಂ ವಾಮನಂ ದಶ ಕೀರ್ತಿತಮ್ ॥ ೭

ಕೌರ್ಮಂ ಸಪ್ತದಶಾಖ್ಯಾತಂ ಮಾತ್ಸ್ಯಂ ತತ್ತು ಚತುರ್ದಶ ।
ಏಕೋನವಿಂಶತ್ಸೌಪರ್ಣಂ ಬ್ರಹ್ಮಾಂಡಂ ದ್ವಾದಶೈವ ತು ॥ ೮

ಏವಂ ಪುರಾಣಸಂದೋಹಶ್ಚತುರ್ಲಕ್ಷ ಉದಾಹೃತಃ ।
ತತ್ರಾಷ್ಟಾದಶಸಾಹಸ್ರಂ ಶ್ರೀಭಾಗವತಮಿಷ್ಯತೇ ॥ ೯

ಇದಂ ಭಗವತಾ ಪೂರ್ವಂ ಬ್ರಹ್ಮಣೇ ನಾಭಿಪಂಕಜೇ ।
ಸ್ಥಿತಾಯ ಭವಭೀತಾಯ ಕಾರುಣ್ಯಾತ್ ಸಂಪ್ರಕಾಶಿತಮ್ ॥ ೧೦

ಹದಿನೈದುಸಾವಿರದ ನಾನೂರು, ಭವಿಷ್ಯಪುರಾಣದಲ್ಲಿ ಹದಿನಾಲ್ಕುಸಾವಿರದ ಐದುನೂರು, ಬ್ರಹ್ಮವೈವರ್ತದಲ್ಲಿ ಹದಿನೆಂಟುಸಾವಿರ, ಲಿಂಗಪುರಾಣದಲ್ಲಿ ಹನ್ನೊಂದು ಸಾವಿರ ಶ್ಲೋಕಗಳಿವೆ (೫–೬). ವಾರಾಹವು ಇಪ್ಪತ್ತುನಾಲ್ಕು ಸಾವಿರ ಗ್ರಂಥ ಉಳ್ಳದ್ದು. ಸ್ಕಾಂದವು ಎಂಬತ್ತೊಂದುಸಾವಿರದ ಒಂದುನೂರು ಗ್ರಂಥ ಉಳ್ಳದ್ದು. ವಾಮನಪುರಾಣವು ಹತ್ತುಸಾವಿರ ಗ್ರಂಥ ಉಳ್ಳದ್ದು. ಕೂರ್ಮ ಪುರಾಣದಲ್ಲಿ ಹದಿನೇಳುಸಾವಿರ ಶ್ಲೋಕಗಳಿವೆ. ಮತ್ಸ್ಯಪುರಾಣದಲ್ಲಿ ಹದಿನಾಲ್ಕು ಸಾವಿರ ಶ್ಲೋಕಗಳಿವೆ. ಗರುಡಪುರಾಣದಲ್ಲಿ ಹತ್ತೊಂಬತ್ತುಸಾವಿರ. ಬ್ರಹ್ಮಾಂಡ ದಲ್ಲಿ ಹನ್ನೆರಡುಸಾವಿರ (೭–೮). ಹೀಗೆ ಹದಿನೆಂಟು ಪುರಾಣಗಳಲ್ಲಿರುವ [1]ಶ್ಲೋಕಸಂಖ್ಯಾ ಸಮುದಾಯವು ಒಟ್ಟು ನಾಲ್ಕುಲಕ್ಷವಾಗಿರುತ್ತದೆ. ಇವುಗಳಲ್ಲಿ ಶ್ರೀಮದ್ಭಾಗವತವು ಹದಿನೆಂಟುಸಾವಿರ ಶ್ಲೋಕಗಳಿಂದ ಸಹಿತವಾದದ್ದೆಂದು ಹೇಳಿ ದ್ದಾಯಿತು (೯). ಭಗವಂತನು ತನ್ನ ನಾಭಿಕಮಲದಲ್ಲಿ ಸಂಸಾರಭೀತನಾಗಿ

1. ಶ್ಲೋಕ ಅಥವಾ ಗ್ರಂಥ = ೩೨ ಅಕ್ಷರ.

ಆದಿಮಧ್ಯಾವಸಾನೇಷು ವೈರಾಗ್ಯಾಖ್ಯಾನಸಂಯುತಮ್ ।
ಹರಿಲೀಲಾಕಥಾವ್ರಾತಾಮೃತಾನಂದಿತಸತ್ಸುರಮ್ ॥ ೧೧

ಸರ್ವವೇದಾಂತಸಾರಂ ಯದ್ ಬ್ರಹ್ಮಾತ್ಮೈಕತ್ವಲಕ್ಷಣಮ್ ।
ವಸ್ತ್ವದ್ವಿತೀಯಂ ತನ್ನಿಷ್ಠಂ ಕೈವಲ್ಯೈಕಪ್ರಯೋಜನಮ್ ೧೨

ಪ್ರೌಷ್ಠಪದ್ಯಾಂ ಪೌರ್ಣಮಾಸ್ಯಾಂ ಹೇಮಸಿಂಹಸಮನ್ವಿತಮ್ ।
ದದಾತಿ ಯೋ ಭಾಗವತಂ ಸ ಯಾತಿ ಪರಮಾಂ ಗತಿಮ್ ॥ ೧೩

ರಾಜಂತೇ ತಾವದನ್ಯಾನಿ ಪುರಾಣಾನಿ ಸತಾಂ ಗಣೇ ।
ಯಾವನ್ನ ದೃಶ್ಯತೇ ಸಾಕ್ಷಾಚ್ಛ್ರೀಮದ್ಭಾಗವತಂ ಪರಮ್ ॥ ೧೪

ಸರ್ವವೇದಾಂತಸಾರಂ ಹಿ ಶ್ರೀ ಭಾಗವತಮಿಷ್ಯತೇ ।
ತದ್ರಸಾಮೃತತೃಪ್ತಸ್ಯ ನಾನ್ಯತ್ರ ಸ್ಯಾದ್ರತಿಃ ಕ್ವಚಿತ್ ॥ ೧೫

---

ಕುಳಿತಿದ್ದ ಬ್ರಹ್ಮನಿಗೆ ಈ ಪುರಾಣವನ್ನು ಕಾರುಣ್ಯದಿಂದ ಹಿಂದೆ ಪ್ರಕಟಿಸಿದ್ದನು. ಈ ಪುರಾಣದ ಆದಿಮಧ್ಯಾವಸಾನಗಳಲ್ಲಿ ವೈರಾಗ್ಯವನ್ನು ಬೋಧಿಸುವ ಆಖ್ಯಾನಗಳಿವೆ. ಸಜ್ಜನರನ್ನೂ ದೇವತೆಗಳನ್ನೂ ಸಹ ಆನಂದಗೊಳಿಸತಕ್ಕ ಹರಿಕಥಾ ಸಂದೋಹಾಮೃತವೇ ಈ ಗ್ರಂಥದಲ್ಲಿದೆ (೧೦–೧೧). ಸರ್ವೋಪನಿಷತ್ತುಗಳ ಸಾರವೂ ಬ್ರಹ್ಮ-ಜೀವಾತ್ಮಗಳ ಏಕತಾಸ್ವರೂಪವೂ ಆದ ಯಾವ ಅದ್ವಿತೀಯ ಬ್ರಹ್ಮವಸ್ತು ಉಂಟೋ ಅದೇ ಈ ಭಾಗವತದ ವಿಷಯುವಾಗಿದೆ. ಕೈವಲ್ಯವೇ ಇದರ ಮುಖ್ಯ ಪ್ರಯೋಜನ (೧೨). ಭಾದ್ರಪದಮಾಸದ ಪೂರ್ಣಿಮೆಯ ದಿನ ಈ ಭಾಗವತ ಪುಸ್ತಕವನ್ನು ಸುವರ್ಣ ಸಿಂಹಾಸನದಲ್ಲಿರಿಸಿ ಯಾವಾತನು ದಾನ ಮಾಡುತ್ತಾನೋ ಆತನಿಗೆ ಶ್ರೇಷ್ಠವಾದ ಸದ್ಗತಿಯು ದೊರೆಯುವುದು. ಅಮೃತ ಸಾಗರವಾದ ಶ್ರೀಮದ್ಭಾಗವತಪುರಾಣವನ್ನು ಎಲ್ಲಿಯವರೆಗೆ ಕೇಳುವುದಿಲ್ಲವೋ ಅಲ್ಲಿಯವರೆಗೆ ಮಾತ್ರ ಅನ್ಯಪುರಾಣಗಳು ಸಜ್ಜನರ ನಡುವೆ ಶೋಭಿಸುತ್ತವೆ! (೧೩–೧೪). ಈ ಭಾಗವತವು ಸರ್ವವೇದಾಂತಸಾರವಾದದ್ದು. ಭಾಗವತರಸಾಮೃತ

ನಿಮ್ನಗಾನಾಂ ಯಥಾ ಗಂಗಾ ದೇವಾನಾಮಚ್ಯುತೋ ಯಥಾ ।
ವೈಷ್ಣವಾನಾಂ ಯಥಾ ಶಂಭುಃ ಪುರಾಣಾನಾಮಿದಂ ತಥಾ ॥ ೧೬

ಕ್ಷೇತ್ರಾಣಾಂ ಚೈವ ಸರ್ವೇಷಾಂ ಯಥಾ ಕಾಶೀ ಹ್ಯನುತ್ತಮಾ ।
ತಥಾ ಪುರಾಣವ್ರಾತಾನಾಂ ಶ್ರೀಮದ್ಭಾಗವತಂ ದ್ವಿಜಾಃ ॥ ೧೭

ಶ್ರೀಮದ್ಭಾಗವತಂ ಪುರಾಣಮಮಲಂ
ಯದ್ವೈಷ್ಣವಾನಾಂ ಪ್ರಿಯಂ
ಯಸ್ಮಿನ್ ಪಾರಮಹಂಸ್ಯಮೇಕಮಮಲಂ
ಜ್ಞಾನಂ ಪರಂ ಗೀಯತೇ ।

ತತ್ರ ಜ್ಞಾನವಿರಾಗಭಕ್ತಿಸಹಿತಂ
ನೈಷ್ಕರ್ಮ್ಯಮಾವಿಷ್ಕೃತಂ
ತಚ್ಛೃಣ್ವನ್ ವಿಪಠನ್ ವಿಚಾರಣಪರೋ
ಭಕ್ತ್ಯಾ ವಿಮುಚ್ಯೇನ್ನರಃ ॥ ೧೮

---

ದಿಂದ ತೃಪ್ತನಾದವನಿಗೆ ಇನ್ನೊಂದರಲ್ಲಿ ಎಂದಿಗೂ ಅಭಿರುಚಿಯುಂಟಾಗದು. ನದಿಗಳಲ್ಲಿ ಗಂಗಾನದಿಯು ಹೇಗೆ ಶ್ರೇಷ್ಠವೋ ದೇವತೆಗಳಲ್ಲಿ ಅಚ್ಯುತನು ಹೇಗೋ ವಿಷ್ಣುಭಕ್ತರಲ್ಲಿ ಶಿವನು ಹೇಗೋ ಹಾಗೆ ಪುರಾಣಗಳಲ್ಲಿ ಶ್ರೀಮದ್ಭಾಗವತವು ಪರಮೋತ್ತಮವಾದದ್ದು (೧೫-೧೬). ಓ ಬ್ರಾಹ್ಮಣೋತ್ತಮರೆ, ಸಮಸ್ತ ಕ್ಷೇತ್ರಗಳಲ್ಲಿ ಕಾಶಿಯು ಹೇಗೆ ಪರಮೋತ್ತಮವಾಗಿದೆಯೋ ಹಾಗೆ ಪುರಾಣಗಳಲ್ಲಿ ಶ್ರೀಮದ್ಭಾಗವತವು ಪರಮೋತ್ತಮವಾದದ್ದು (೧೭). ನಿರ್ದೋಷವಾದ ಈ ಪುರಾಣವು ವಿಷ್ಣುಭಕ್ತರಿಗೆ ಪ್ರಿಯವಾದದ್ದು. ಪರಮಹಂಸರಿಗೆ ಪ್ರಾಪ್ಯವೂ ಅದ್ವಿತೀಯವೂ ನಿರ್ಮಲವೂ ಆದ ಪರಮಾತ್ಮಜ್ಞಾನವು ಇದರಲ್ಲಿ ವರ್ಣಿತವಾಗಿದೆ. ಜ್ಞಾನವೈರಾಗ್ಯ ಭಕ್ತಿಸಹಿತವಾದ ಸರ್ವಕರ್ಮೋಪಸಂಹಾರವು ಇಲ್ಲಿ ಪ್ರಸ್ತುತವಾಗಿದೆ. ಯಾವ ಮಾನವನು ಈ ಭಾಗವತ ಪುರಾಣವನ್ನು ಶ್ರವಣ ಮಾಡುತ್ತ, ಪಾರಾಯಣಮಾಡುತ್ತ, ಅರ್ಥವನ್ನು ಪರಿಶೀಲಿಸುತ್ತ ಇರುವನೋ

ಕಸ್ಮೈ ಯೇನ ವಿಭಾಸಿತೋಽಯಮತುಲೋ
ಜ್ಞಾನಪ್ರದೀಪಃ ಪುರಾ
ತದ್ರೂಪೇಣ ಚ ನಾರದಾಯ ಮುನಯೇ
ಕೃಷ್ಣಾಯ ತದ್ರೂಪಿಣಾ ।

ಯೋಗೀಂದ್ರಾಯ ತದಾತ್ಮನಾಥ ಭಗವ-
ದ್ರಾತಾಯ ಕಾರುಣ್ಯತ-
ಸ್ತಚ್ಛುದ್ಧಂ ವಿಮಲಂ ವಿಶೋಕಮಮೃತಂ
ಸತ್ಯಂ ಪರಂ ಧೀಮಹಿ ॥ ೧೯

ನಮಸ್ತಸ್ಮೈ ಭಗವತೇ ವಾಸುದೇವಾಯ ಸಾಕ್ಷಿಣೇ ।
ಯ ಇದಂ ಕೃಪಯಾ ಕಸ್ಮೈ ವ್ಯಾಚಚಕ್ಷೇ ಮುಮುಕ್ಷವೇ ॥ ೨೦

ಯೋಗೀಂದ್ರಾಯ ನಮಸ್ತಸ್ಮೈ ಶುಕಾಯ ಬ್ರಹ್ಮರೂಪಿಣೇ ।
ಸಂಸಾರಸರ್ಪದಷ್ಟಂ ಯೋ ವಿಷ್ಣುರಾತಮಮೂಮುಚತ್ ॥ ೨೧

---

ಅವನು ಮುಕ್ತನಾಗುವನು (೧೮). ಜ್ಞಾನಪ್ರದೀಪವೂ ಅಸದೃಶವೂ ಆದ ಈ ಭಾಗವತಪುರಾಣವನ್ನು ಕಲ್ಪಾದಿಯಲ್ಲಿ ಶ್ರೀಮನ್ನಾರಾಯಣನು ಬ್ರಹ್ಮನಿಗೆ ಉಪದೇಶಿಸಿದನು. ಅನಂತರ ಆತನೇ ಬ್ರಹ್ಮರೂಪಿಯಾಗಿ ನಾರದಮುನಿಗೂ ನಾರದರೂಪದಿಂದ ವ್ಯಾಸಮುನಿಗೂ ಉಪದೇಶಿಸಿದನು. ಆಮೇಲೆ ವ್ಯಾಸಾತ್ಮಕನಾಗಿ ಯೋಗೀಂದ್ರಶುಕಮಹರ್ಷಿಗೂ ಶುಕರೂಪನಾಗಿ ಪರೀಕ್ಷಿತನಿಗೂ ಕಾರುಣ್ಯದಿಂದ ಬೋಧಿಸಿದನು. ಹೀಗೆ ಪರಂಪರೆಯಿಂದ ಉಪದೇಶಿಸಿದ ಶುದ್ಧವೂ ವಿಮಲವೂ ವಿಶೋಕವೂ ಅಮೃತವೂ ಸತ್ಯವೂ ಆದ ಶ್ರೀಮನ್ನಾರಾಯಣನೆಂಬ ಪರತತ್ತ್ವವನ್ನು ಧ್ಯಾನಿಸೋಣ (೧೯). ಮುಮುಕ್ಷುವಾದ ಬ್ರಹ್ಮನಿಗೆ ಈ ಪುರಾಣವನ್ನು ಕೃಪೆಯಿಂದ ವ್ಯಾಖ್ಯಾನಮಾಡಿ ತಿಳಿಸಿರುವ, ಅಂತಃಸಾಕ್ಷಿಯೂ ಭಗವಂತನೂ ಆದ ಶ್ರೀವಾಸುದೇವನಿಗೆ ನಮಸ್ಕಾರ (೨೦). ಸಂಸಾರಸರ್ಪದಿಂದ ದಷ್ಟನಾದ

ಭವೇ ಭವೇ ಯಥಾ ಭಕ್ತಿಃ ಪಾದಯೋಸ್ತವ ಜಾಯತೇ ।
ತಥಾ ಕುರುಷ್ವ ದೇವೇಶ ನಾಥಸ್ತ್ವಂ ನೋ ಯತಃ ಪ್ರಭೋ ॥ ೨೨

ನಾಮಸಂಕೀರ್ತನಂ ಯಸ್ಯ ಸರ್ವಪಾಪಪ್ರಣಾಶನಮ್ ।
ಪ್ರಣಾಮೋ ದುಃಖಶಮನಸ್ತಂ ನಮಾಮಿ ಹರಿಂ ಪರಮ್ ॥ ೨೩

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ
ಸಂಹಿತಾಯಾಂ ದ್ವಾದಶಸ್ಕಂಧೇ ತ್ರಯೋದಶಾಧ್ಯಾಯಃ

ಇತಿ ದ್ವಾದಶಃ ಸ್ಕಂಧಃ ಸಮಾಪ್ತಃ
ಸಂಪೂರ್ಣೋಽಯಂ ಗ್ರಂಥಃ

ತ್ವದೀಯಂ ವಸ್ತು ಗೋವಿಂದ ತುಭ್ಯಮೇವ ಸಮರ್ಪಯೇ ।
ತೇನ ತ್ವದಂಘ್ರಿಕಮಲೇ ರತಿಂ ಮೇ ಯಚ್ಛ ಶಾಶ್ವತೀಮ್ ॥



---

ಪರೀಕ್ಷಿತರಾಜನನ್ನು ವಿಮೋಚನಗೊಳಿಸಿದ ಯೋಗೀಂದ್ರರೂ ಬ್ರಹ್ಮಸ್ವರೂಪರೂ ಆದ ಶುಕಮಹರ್ಷಿಗಳಿಗೆ ನಮಸ್ಕಾರ (೨೧). ಹೇ ದೇವೇಶ್ವರ, ಪ್ರಭು, ಶ್ರೀಕೃಷ್ಣ, ಜನ್ಮಜನ್ಮದಲ್ಲಿಯೂ ನಮಗೆ ನಿನ್ನ ಪಾದಗಳಲ್ಲಿ ಭಕ್ತಿಯುಂಟಾಗುವಂತೆ ಅನುಗ್ರಹಿಸು. ನೀನೇ ನಮಗೆ ತಾರಕನಾದ ಸ್ವಾಮಿಯಾಗಿದ್ದೀಯಲ್ಲವೆ? ಯಾರ ನಾಮಕೀರ್ತನೆಯು ಸರ್ವಪಾಪಪ್ರಣಾಶಕವೋ ಯಾರಿಗೆ ಅರ್ಪಿಸುವ ಪ್ರಣಾಮವು ಸಮಸ್ತ ದುಃಖಗಳನ್ನೂ ಪರಿಹರಿಸುವುದೋ ಅಂತಹ ಪರಮಾತ್ಮನಾದ ಶ್ರೀಹರಿಗೆ ನಮಸ್ಕಾರ ಮಾಡುತ್ತೇನೆ" ಎಂದರು (೨೨-೨೩).

ಇಲ್ಲಿಗೆ ಶ್ರೀಮದ್ಭಾಗವತ ಮಹಾಪುರಾಣದ ದ್ವಾದಶಸ್ಕಂಧದಲ್ಲಿ
ಹದಿಮೂರನೆಯ ಅಧ್ಯಾಯ.
ಶ್ರೀಮದ್ಭಾಗವತವು ಸಮಾಪ್ತವಾಯಿತು

ಶ್ರೀಕೃಷ್ಣಾರ್ಪಣಮಸ್ತು



|| ಓಂ ನಮೋ ಭಗವತೇ ವಾಸುದೇವಾಯ ||

# ಶ್ರೀಮದ್ಭಾಗವತಮಾಹಾತ್ಮ್ಯಮ್

## ಪ್ರಥಮೋಧ್ಯಾಯಃ

ಸಚ್ಚಿದಾನಂದರೂಪಾಯ ವಿಶ್ವೋತ್ಪತ್ತ್ಯಾದಿಹೇತವೇ ।
ತಾಪತ್ರಯವಿನಾಶಾಯ ಶ್ರೀಕೃಷ್ಣಾಯ ವಯಂ ನುಮಃ ॥ ೧

ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ
ದ್ವೈಪಾಯನೋ ವಿರಹಕಾತರ ಆಜುಹಾವ ।
ಪುತ್ರೇತಿ ತನ್ಮಯತಯಾ ತರವೋಽಭಿನೇದು-
ಸ್ತಂ ಸರ್ವಭೂತಹೃದಯಂ ಮುನಿಮಾನತೋಽಸ್ಮಿ ॥ ೨

---

## ಶ್ರೀಪದ್ಮಪುರಾಣದ ಉತ್ತರಖಂಡ

### ಅಧ್ಯಾಯ ೧

ಶೌನಕರ ಪ್ರಶ್ನೆ ; ಸೂತರ ಉತ್ತರ. ಸನತ್ಕುಮಾರಾದಿಗಳು ನಾರದರನ್ನು ಕಾಣುವುದು. ಭಕ್ತಿ-ನಾರದರ ಸಂವಾದ.

[1]ಸಚ್ಚಿದಾನಂದಸ್ವರೂಪನೂ ವಿಶ್ವದ ಉತ್ಪತ್ತಿ ಸ್ಥಿತಿಲಯಗಳಿಗೆ ಕಾರಣನೂ [2]ತಾಪತ್ರಯಗಳನ್ನು ನಿವಾರಿಸತಕ್ಕವನೂ ಆದ ಶ್ರೀಕೃಷ್ಣನನ್ನು ನಾವು ಸ್ತುತಿಸುತ್ತೇವೆ (೧). ಇನ್ನೂ ಉಪನಯನವಾಗದಿರುವಾಗಲೇ (ಆತ್ಮಜ್ಞಾನವು ಲಭಿಸಿದ್ದರಿಂದ) ಶುಕಮುನಿಗಳಿಗೆ ಕರ್ತವ್ಯಶೇಷವಾವುದೂ ಉಳಿಯಲಿಲ್ಲ. ಆಗ ಸಂನ್ಯಾಸಿಗಳಾಗಿ ಹೊರಟುಹೋಗುತ್ತಿದ್ದ ಅವರನ್ನು ವ್ಯಾಸಮುನಿಗಳು ವಿರಹಭೀತರಾಗಿ ಹಿಂಬಾಲಿಸುತ್ತ ಹೋಗಿ, 'ಪುತ್ರ ೩' ಎಂದು ಕೂಗಿಕೊಳ್ಳುತ್ತಿದ್ದರು. ಆ ಸಮಯದಲ್ಲಿ (ಕಾಡಿನಲ್ಲಿದ್ದ) ಮರಗಳು ತನ್ಮಯತೆಯಿಂದ (ಶುಕರೂಪದಿಂದ) ವ್ಯಾಸರಿಗೆ

---

1. ಸತ್ = ಸದಾ ಇರುವಿಕೆ. ಚಿತ್ = ಜ್ಞಾನ, ಚೈತನ್ಯ.

2. ತಾಪತ್ರಯ = ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ.

ನೈಮಿಷೇ ಸೂತಮಾಸೀನಮಭಿವಾದ್ಯ ಮಹಾಮತಿಮ್ ।
ಕಥಾಮೃತರಸಾಸ್ವಾದಕುಶಲಃ ಶೌನಕೋಽಬ್ರವೀತ್ ॥ ೩

ಶೌನಕ ಉವಾಚ—

ಅಜ್ಞಾನಧ್ವಾಂತವಿಧ್ವಂಸಕೋಟಿಸೂರ್ಯಸಮಪ್ರಭ ।
ಸೂತಾಖ್ಯಾಹಿ ಕಥಾಸಾರಂ ಮಮ ಕರ್ಣರಸಾಯನಮ್ ॥ ೪

ಭಕ್ತಿಜ್ಞಾನವಿರಾಗಾಪ್ತೋ ವಿವೇಕೋ ವರ್ಧತೇ ಮಹಾನ್ ।
ಮಾಯಾಮೋಹನಿರಾಸಶ್ಚ ವೈಷ್ಣವೈಃ ಕ್ರಿಯತೇ ಕಥಮ್ ॥ ೫

ಇಹ ಘೋರೇ ಕಲೌ ಪ್ರಾಯೋ ಜೀವಶ್ಚಾಸುರತಾಂ ಗತಃ ।
ಕ್ಲೇಶಾಕ್ರಾಂತಸ್ಯ ತಸ್ಯೈವ ಶೋಧನೇ ಕಿಂ ಪರಾಯಣಮ್ ॥ ೬

ಶ್ರೇಯಸಾಂ ಯದ್ಭವೇಚ್ಛ್ರೇಯಃ ಪಾವನಾನಾಂ ಚ ಪಾವನಮ್ ।
ಕೃಷ್ಣಪ್ರಾಪ್ತಿಕರಂ ಶಶ್ವತ್ಸಾಧನಂ ತದ್ವದಾಧುನಾ ॥ ೭

---

ಸಮಾಧಾನದ ಉತ್ತರವನ್ನು ಹೇಳಿದವು. ಹೀಗೆ ಸರ್ವಭೂತಗಳ ಹೃದಯವನ್ನು ಪ್ರವೇಶಿಸಬಲ್ಲವರಾದ ಶುಕಮಹರ್ಷಿಗಳಿಗೆ [1]ನಮಸ್ಕರಿಸುತ್ತೇವೆ (೨). (ಭಗವಂತನ) ಕಥಾಮೃತರಸವನ್ನು ಆಸ್ವಾದಿಸುವುದರಲ್ಲಿ ಕುಶಲರಾದ ಶೌನಕರು ನೈಮಿಷಾರಣ್ಯದಲ್ಲಿ ಆಸೀನರಾಗಿದ್ದ ಸೂತಪೌರಾಣಿಕರನ್ನು ವಂದಿಸಿ ಹೀಗೆಂದರು : "ಸೂತರೆ, ಅಜ್ಞಾನವೆಂಬ ಕತ್ತಲೆಯನ್ನು ನಾಶಗೊಳಿಸಲು ಸಮರ್ಥವಾದ ಕೋಟಿ ಸೂರ್ಯಪ್ರಕಾಶವುಳ್ಳವರು ನೀವು. ಕರ್ಣರಸಾಯನವೂ ಸಾರಭೂತವೂ ಆದ ಭಗವಂತನ ಕಥೆಯೊಂದನ್ನು ಹೇಳಿರಿ (೩–೪). ಭಕ್ತಿ ಜ್ಞಾನ ವೈರಾಗ್ಯಗಳಿಂದ ಕೂಡಿದ ಉತ್ತಮವಾದ ವಿವೇಕವು ವರ್ಧಿಸುವ ಬಗೆ ಯಾವುದು? ವಿಷ್ಣುಭಕ್ತರಾದವರು ಮಾಯೆಯಿಂದಾದ ಅಜ್ಞಾನವನ್ನು ಹೋಗಲಾಡಿಸಿಕೊಳ್ಳುವುದು ಹೇಗೆ (೫). ಘೋರವಾದ ಈ ಕಲಿಯುಗದಲ್ಲಿ ಮಾನವನು ದಾನವನಾಗಿಬಿಟ್ಟಿದ್ದಾನೆ! ಆದರೆ ನಾನಾ ಕ್ಲೇಶಗಳಿಂದ ಸ್ವತಃ ಬಳಲುತ್ತಿರುವ ಈತನನ್ನು ಆ ಕ್ಲೇಶಗಳಿಂದ ತಪ್ಪಿಸಲು ಶ್ರೇಷ್ಠವಾದ ಮಾರ್ಗ ಯಾವುದು? ಶ್ರೇಯಸ್ಸುಗಳಲ್ಲಿ ಉತ್ತಮವಾದ ಶ್ರೇಯಸ್ಸೂ ಪಾವನಗಳಲ್ಲಿ ಪಾವನವೂ ಆದ, ಶ್ರೀಕೃಷ್ಣಪ್ರಾಪ್ತಿಕರವಾದ ನಿಶ್ಚಿತ ಸಾಧನವನ್ನು ನನಗೆ ತಿಳಿಸಿಕೊಡಿರಿ (೬–೭).

---

3. ಅನುಬಂಧವನ್ನು ನೋಡಿ—೧೧

ಚಿಂತಾಮಣಿರ್ಲೋಕಸುಖಂ ಸುರದ್ರುಃ ಸ್ವರ್ಗಸಂಪದಮ್ ।
ಪ್ರಯಚ್ಛತಿ ಗುರುಃ ಪ್ರೀತೋ ವೈಕುಂಠಂ ಯೋಗಿದುರ್ಲಭಮ್ ॥ ೮

ಸೂತ ಉವಾಚ—

ಪ್ರೀತಿಃ ಶೌನಕ ಚಿತ್ತೇ ತೇ ಹ್ಯತೋ ವಚ್ಮಿ ವಿಚಾರ್ಯ ಚ ।
ಸರ್ವಸಿದ್ಧಾಂತನಿಷ್ಪನ್ನಂ ಸಂಸಾರಭಯನಾಶನಮ್ ॥ ೯

ಭಕ್ತ್ಯೋಘವರ್ಧನಂ ಯಚ್ಚ ಕೃಷ್ಣಸಂತೋಷಹೇತುಕಮ್ ।
ತದಹಂ ತೇಽಭಿಧಾಸ್ಯಾಮಿ ಸಾವಧಾನತಯಾ ಶೃಣು ॥ ೧೦

ಕಾಲವ್ಯಾಲಮುಖಗ್ರಾಸತ್ರಾಸನಿರ್ನಾಶಹೇತವೇ ।
ಶ್ರೀಮದ್ಭಾಗವತಂ ಶಾಸ್ತ್ರಂ ಕಲೌ ಕೀರೇಣ ಭಾಷಿತಮ್ ॥ ೧೧

ಏತಸ್ಮಾದಪರಂ ಕಿಂಚಿನ್ಮನಃಶುದ್ಧ್ಯೈ ನ ವಿದ್ಯತೇ ।
ಜನ್ಮಾಂತರೇ ಭವೇತ್ಪುಣ್ಯಂ ತದಾ ಭಾಗವತಂ ಲಭೇತ್ ॥ ೧೨

---

ಚಿಂತಾಮಣಿಯು ಜನರಿಗೆ ಬೇಕಾದ ಸುಖಕರ ವಸ್ತುವನ್ನು ಕೊಡಬಲ್ಲದು. ಕಲ್ಪವೃಕ್ಷವು ಸ್ವರ್ಗಸಂಪತ್ತನ್ನೇ ನೀಡೀತು. ಪ್ರಸನ್ನನಾದ ಗುರುವಾದರೋ ಯೋಗಿಗಳಿಗೂ ದುರ್ಲಭವಾದ ವೈಕುಂಠವನ್ನೇ ದೊರಕಿಸಿಕೊಡುತ್ತಾನೆ" ಎಂದರು (೮). ಆಗ ಸೂತರು ಇಂತೆಂದರು: "ಶೌನಕರೆ, ನಿಮ್ಮ ಹೃದಯದಲ್ಲಿ (ಭಗವತ್ಕಥೆಯನ್ನು ಕೇಳಲು) ಪ್ರೀತಿಯುಂಟು. ಆದ್ದರಿಂದ ಹೇಳುತ್ತೇನೆ. ನಾನು ವಿಚಾರ ಮಾಡಿದ್ದರಲ್ಲಿ ಸರ್ವಸಿದ್ಧಾಂತಗಳ ಸಾರವೆಂದು ನಿಶ್ಚಿತವಾದದ್ದೂ ಸಂಸಾರಭಯವನ್ನು ಹೋಗಲಾಡಿಸತಕ್ಕದ್ದೂ ಭಕ್ತಿಯನ್ನು ಬೆಳೆಸತಕ್ಕದ್ದೂ ಶ್ರೀಕೃಷ್ಣನ ಸಂಪ್ರೀತಿಗೆ ಕಾರಣವಾದದ್ದೂ ಆಗಿರುವ ಒಂದಾನೊಂದು ಗ್ರಂಥವಿದೆ. ಅದನ್ನು ನಿಮಗೆ ಹೇಳುವೆನು. ಸಾವಧಾನಚಿತ್ತರಾಗಿ ಕೇಳಿರಿ (೯–೧೦). ಶುಕಮಹರ್ಷಿಗಳು ಈ ಕಲಿಯುಗಕ್ಕಾಗಿಯೇ ಶ್ರೀಮದ್ಭಾಗವತವೆಂಬ ಶಾಸ್ತ್ರವನ್ನು ಉಪದೇಶಿಸಿದ್ದಾರೆ. ಮೃತ್ಯುವೆಂಬ ಮಹಾಸರ್ಪದ ಬಾಯಿಗೆ ಗ್ರಾಸವಾಗುತ್ತೇವೆಂಬ ಯಾವ ಹೆದರಿಕೆಯುಂಟೋ ಅದನ್ನು ನಿರ್ಮೂಲಗೊಳಿಸುವುದಕ್ಕಾಗಿ ಈ ಪುರಾಣವನ್ನು ಅವರು ಹೇಳಿದ್ದಾರೆ (೧೧). ಚಿತ್ತಶುದ್ಧಿಗೆ ಇದಕ್ಕಿಂತ ಹೆಚ್ಚಿನದಾದ ಇನ್ನೊಂದು ಗ್ರಂಥವಿಲ್ಲ. ಜನ್ಮಾಂತರದಲ್ಲಿ ಯಾರು ಪುಣ್ಯ ಮಾಡಿರು

*

ಪರೀಕ್ಷಿತೇ ಕಥಾಂ ವಕ್ತುಂ ಸಭಾಯಾಂ ಸಂಸ್ಥಿತೇ ಶುಕೇ ।
ಸುಧಾಕುಂಭಂ ಗೃಹೀತ್ವೈವ ದೇವಾಸ್ತತ್ರ ಸಮಾಗಮನ್ ॥ ೧೩

ಶುಕಂ ನತ್ವಾಽವದನ್ ಸರ್ವೇ ಸ್ವಕಾರ್ಯಕುಶಲಾಃ ಸುರಾಃ ।
ಕಥಾಸುಧಾಂ ಪ್ರಯಚ್ಛಸ್ವ ಗೃಹೀತ್ವೈವ ಸುಧಾಮಿಮಾಮ್ ॥ ೧೪

ಏವಂ ವಿನಿಮಯೇ ಜಾತೇ ಸುಧಾ ರಾಜ್ಞಾ ಪ್ರಪೀಯತಾಮ್ ।
ಪ್ರಪಾಸ್ಯಾಮೋ ವಯಂ ಸರ್ವೇ ಶ್ರೀಮದ್ಭಾಗವತಾಮೃತಮ್ ॥ ೧೫

ಕ್ವ ಸುಧಾ ಕ್ವ ಕಥಾ ಲೋಕೇ ಕ್ವ ಕಾಚಃ ಕ್ವ ಮಣಿರ್ಮಹಾನ್ ।
ಬ್ರಹ್ಮರಾತೋ ವಿಚಾರ್ಯೈವಂ ತದಾ ದೇವಾನ್ ಜಹಾಸ ಹ ॥ ೧೬

ಅಭಕ್ತಾಂಸ್ತಾಂಶ್ಚ ವಿಜ್ಞಾಯ ನ ದದೌ ಸ ಕಥಾಮೃತಮ್ ।
ಶ್ರೀಮದ್ಭಾಗವತೀ ವಾರ್ತಾ ಸುರಾಣಾಮಪಿ ದುರ್ಲಭಾ ॥ ೧೭

ರಾಜ್ಞೋ ಮೋಕ್ಷಂ ತಥಾ ವೀಕ್ಷ್ಯ ಪುರಾ ಧಾತಾಪಿ ವಿಸ್ಮಿತಃ ।
ಸತ್ಯಲೋಕೇ ತುಲಾಂ ಬದ್ಧ್ವಾಽತೋಲಯತ್ಸಾಧನಾನ್ಯಜಃ ॥ ೧೮

---

ತ್ತಾರೋ ಅವರಿಗೆ ಭಾಗವತವು ಲಭಿಸುತ್ತದೆ! (೧೨). ಪರೀಕ್ಷಿತರಾಜನಿಗೆ ಈ ಭಾಗವತವನ್ನು ಹೇಳುವುದಕ್ಕಾಗಿ ಶುಕಮುನಿಗಳು ಸಭೆಗೆ ಬಂದು ಕುಳಿತು ಕೊಂಡರು. ಅಷ್ಟರಲ್ಲಿ ದೇವತೆಗಳು ಅಮೃತಕಲಶವನ್ನು ಹಿಡಿದುಕೊಂಡೇ ಅಲ್ಲಿಗೆ ಬಂದುಬಿಟ್ಟರು! (೧೩). ಸ್ವಕಾರ್ಯಧುರಂಧರರಾದ ಆ ದೇವತೆಗಳೆಲ್ಲರೂ ಶುಕಮುನಿಗಳಿಗೆ ನಮಸ್ಕಾರ ಮಾಡಿ "ಮಹಾತ್ಮರೆ, ಈ ಅಮೃತವನ್ನು ತೆಗೆದು ಕೊಂಡು, ಭಗವತ್ಕಥೆಯೆಂಬ ಅಮೃತವನ್ನು ನಮಗೆ ಕೊಡಿರಿ! ಹೀಗೆ ವಿನಿಮಯ ಮಾಡಿಕೊಂಡಮೇಲೆ ಪರೀಕ್ಷಿತನು ಈ ಅಮೃತವನ್ನು ಕುಡಿಯಲಿ! ನಾವು ಶ್ರೀಮದ್ಭಾಗತವೆಂಬ ಅಮೃತವನ್ನು ಕುಡಿಯುವೆವು!" ಎಂದರು (೧೪–೧೫). ಆಗ ಪರೀಕ್ಷಿತರಾಜನು ತನ್ನ ಮನಸ್ಸಿನಲ್ಲಿ "ಅಮೃತವೆಲ್ಲಿ? ಈ ಭಾಗವತಕಥೆ ಎಲ್ಲಿ? ಗಾಜಿನ ಚೂರು ಎಲ್ಲಿ? ಶ್ರೇಷ್ಠವಾದ ರತ್ನವೆಲ್ಲಿ?" ಎಂದು ವಿಚಾರ ಮಾಡಿ, ದೇವತೆಗಳನ್ನು ನೋಡಿ ನಕ್ಕನು. ಅವರು ದೈವಭಕ್ತರಲ್ಲವೆಂದು ತಿಳಿದು ಈ ಕಥಾಮೃತವನ್ನು ವಿನಿಮಯವಾಗಿ ನೀಡಲು ಒಪ್ಪಲಿಲ್ಲ. ಭಾಗವತದ ವಿಚಾರವು ದೇವತೆಗಳಿಗೂ ದುರ್ಲಭವಾದದ್ದು (೧೬–೧೭). ಅನಂತರ ಪರೀಕ್ಷಿತ

ಲಘೂನ್ಯನ್ಯಾನಿ ಜಾತಾನಿ ಗೌರವೇಣ ಇದಂ ಮಹತ್ ।
ತದಾ ಋಷಿಗಣಾಃ ಸರ್ವೇ ವಿಸ್ಮಯಂ ಪರಮಂ ಯಯುಃ ॥ ೧೯

ಮೇನಿರೇ ಭಗವದ್ರೂಪಂ ಶಾಸ್ತ್ರಂ ಭಾಗವತಂ ಕಲೌ ।
ಪಠನಾಚ್ಛ್ರವಣಾತ್ಸದ್ಯೋ ವೈಕುಂಠಫಲದಾಯಕಮ್ ॥ ೨೦

ಸಪ್ತಾಹೇನ ಶ್ರುತಂ ಚೈತತ್ಸರ್ವಥಾ ಮುಕ್ತಿದಾಯಕಮ್ ।
ಸನಕಾದ್ಯೈಃ ಪುರಾ ಪ್ರೋಕ್ತಂ ನಾರದಾಯ ದಯಾಪರೈಃ ॥ ೨೧

ಯದ್ಯಪಿ ಬ್ರಹ್ಮಸಂಬಂಧಾಚ್ಛ್ರುತಮೇತತ್ಸುರರ್ಷಿಣಾ ।
ಸಪ್ತಾಹಶ್ರವಣವಿಧಿಃ ಕುಮಾರೈಸ್ತಸ್ಯ ಭಾಷಿತಃ ॥ ೨೨

ಶೌನಕ ಉವಾಚ—

ಲೋಕವಿಗ್ರಹಮುಕ್ತಸ್ಯ ನಾರದಸ್ಯಾಸ್ಥಿರಸ್ಯ ಚ ।
ವಿಧಿಶ್ರವೇ ಕುತಃ ಪ್ರೀತಿಃ ಸಂಯೋಗಃ ಕುತ್ರ ತೈಃ ಸಹ ॥ ೨೩

---

ನಿಗೆ ಮೋಕ್ಷವಾದದ್ದನ್ನು ನೋಡಿ ಬ್ರಹ್ಮನಿಗೂ ಅಚ್ಚರಿಯಾಯಿತು! ಅವನು ಸತ್ಯಲೋಕದಲ್ಲಿ ಒಂದು ತಕ್ಕಡಿಯನ್ನು ನಿರ್ಮಿಸಿ ಮೋಕ್ಷಸಾಧನಗಳೆಲ್ಲವನ್ನೂ ತೂಗಿ ನೋಡಿದನು. ಉಳಿದ ಗ್ರಂಥಗಳೆಲ್ಲವೂ ಹಗುರಾದವು. ಈ ಭಾಗವತವು ಮಾತ್ರ ಭಾರಿ ತೂಕವನ್ನು ಪಡೆಯಿತು! ಆಗ ಸಮಸ್ತ ಋಷಿಗಳೂ ಪರಮವಿಸ್ಮಯವನ್ನೈದಿದರು (೧೮–೧೯). ಈ ಭಾಗವತವು ಕಲಿಯುಗದಲ್ಲಿ ಸಾಕ್ಷಾತ್ ಭಗವಂತನೆಂದೇ ಅವರು ಭಾವಿಸಿದರು. ಪಠನದಿಂದಲೂ ಶ್ರವಣದಿಂದಲೂ ಇದು ಶೀಘ್ರದಲ್ಲಿಯೇ ವೈಕುಂಠವೆಂಬ ಫಲವನ್ನು ನೀಡುತ್ತದೆ. ಸಪ್ತಾಹದಲ್ಲಿ ಈ ಪುರಾಣವನ್ನು ಶ್ರವಣಮಾಡಿದರೆ ಇದು ಮುಕ್ತಿಯನ್ನೇ ನೀಡುತ್ತದೆ. ದಯಾವಿಷ್ಟರಾದ ಸನಕಾದಿಮುನಿಗಳು ಹಿಂದೆ ಇದನ್ನು ನಾರದಮುನಿಗಳಿಗೆ ಹೇಳಿದರು (೨೦–೨೧). ದೇವರ್ಷಿಗಳಾದ ನಾರದರು ಮೊದಲು ಬ್ರಹ್ಮನಿಂದಲೇ ಈ ಪುರಾಣವನ್ನು ಕೇಳಿ ತಿಳಿದಿದ್ದರು. ಆದರೆ ಈ ಸಪ್ತಾಹಶ್ರವಣವಿಧಿಯನ್ನು ಮಾತ್ರ ವಿಶೇಷವಾಗಿ ಸನಕಾದಿಗಳು ನಾರದರಿಗೆ ಹೇಳಿದ್ದಾರೆ" (೨೨). ಆಗ ಶೌನಕರು "ಸೂತರೆ, ಜನರಿಗೆ ಜಗಳ ಹುಟ್ಟಿಸುವುದರಲ್ಲೇ ನಿರತರಾಗಿ, ಒಂದು ಕಡೆ ಸ್ಥಿರವಾಗಿ ನಿಲ್ಲದೆ ಸದಾ ಅಲೆದಾಡುವ ನಾರದರಿಗೆ ಭಾಗವತದ ಶ್ರವಣವಿಧಿಯಲ್ಲಿ ಏಕೆ ಆಸಕ್ತಿ

ಸೂತ ಉವಾಚ—

**ಅತ್ರ ತೇ ಕೀರ್ತಯಿಷ್ಯಾಮಿ ಭಕ್ತಿಯುಕ್ತಂ ಕಥಾನಕಮ್ ।**
**ಶುಕೇನ ಮಮ ಯತ್ಪ್ರೋಕ್ತಂ ರಹಃ ಶಿಷ್ಯಂ ವಿಚಾರ್ಯ ಚ ॥** ೨೪

**ಏಕದಾ ಹಿ ವಿಶಾಲಾಯಾಂ ಚತ್ವಾರ ಋಷಯೋಽಮಲಾಃ ।**
**ಸತ್ಸಂಗಾರ್ಥಂ ಸಮಾಯಾತಾ ದದೃಶುಸ್ತತ್ರ ನಾರದಮ್ ॥** ೨೫

ಕುಮಾರಾ ಊಚುಃ—

**ಕಥಂ ಬ್ರಹ್ಮನ್ ದೀನಮುಖಃ ಕುತಶ್ಚಿಂತಾತುರೋ ಭವಾನ್ ।**
**ತ್ವರಿತಂ ಗಮ್ಯತೇ ಕುತ್ರ ಕುತಶ್ಚಾಗಮನಂ ತವ ॥** ೨೬

**ಇದಾನೀಂ ಶೂನ್ಯಚಿತ್ತೋಽಸಿ ಗತವಿತ್ತೋ ಯಥಾ ಜನಃ ।**
**ತವೇದಂ ಮುಕ್ತಸಂಗಸ್ಯ ನೋಚಿತಂ ವದ ಕಾರಣಮ್ ॥** ೨೭

ನಾರದ ಉವಾಚ—

**ಅಹಂ ತು ಪೃಥಿವೀಂ ಯಾತೋ ಜ್ಞಾತ್ವಾ ಸರ್ವೋತ್ತಮಾಮಿತಿ ।**
**ಪುಷ್ಕರಂ ಚ ಪ್ರಯಾಗಂ ಚ ಕಾಶೀಂ ಗೋದಾವರೀಂ ತಥಾ ॥** ೨೮

---

ಹುಟ್ಟಿತು! ಸನತ್ಕುಮಾರಾದಿಗಳೊಡನೆ ಅವರಿಗೆ ಎಲ್ಲಿ ಭೇಟಿಯಾಯಿತು?" ಎಂದು ಕೇಳಿದರು (೨೩). ಅದಕ್ಕೆ ಸೂತರು ಹೀಗೆ ನುಡಿದರು: "ಈ ವಿಷಯದಲ್ಲಿ ಭಕ್ತಿಗೆ ಸಂಬಂಧಿಸಿದ ಒಂದು ಕಥಾನಕವನ್ನು ನಿಮಗೆ ಹೇಳುವೆನು. ಶುಕಮುನಿಗಳು ಇದನ್ನು ನನಗೆ ಹೇಳಿದ್ದಾರೆ. ನಾನು ಶಿಷ್ಯನೆಂಬುದನ್ನು ನಿರ್ಣಯಿಸಿಕೊಂಡಮೇಲೆ ಏಕಾಂತದಲ್ಲಿ ಹೇಳಿದ ಸಂಗತಿ ಇದು. ಶುದ್ಧಚಿತ್ತರಾದ ನಾಲ್ವರು ಸನಕಾದಿಮುನಿಗಳು ಸತ್ಸಂಗಕ್ಕಾಗಿ ಒಮ್ಮೆ ವಿಶಾಲಾನಗರಕ್ಕೆ ಆಗಮಿಸಿದರು. ಅಲ್ಲಿ ನಾರದರು ಕಾಣಿಸಿದರು (೨೪–೨೫). ಅವರು ನಾರದರನ್ನು ಕುರಿತು "ಹೇ ಬ್ರಾಹ್ಮಣ, ಏಕೆ ನೀನು ಮುಖವನ್ನು ಬಾಡಿಸಿಕೊಂಡು ಚಿಂತಾತುರನಾಗಿದ್ದೀಯೆ? ಇಷ್ಟು ತ್ವರೆಯಿಂದ ಎಲ್ಲಿಗೆ ಹೋಗುತ್ತಿದ್ದೀಯೆ? ಎಲ್ಲಿಂದ ಬಂದೆ? ಹಣವನ್ನು ಕಳೆದುಕೊಂಡ ಮನುಷ್ಯನಂತೆ ನಿನ್ನ ಮನಸ್ಸು ಶೂನ್ಯವಾಗಿದೆ. ಸರ್ವಸಂಗವನ್ನು ತ್ಯಜಿಸಿರುವ ನಿನಗೆ ಇದು ಉಚಿತವಾದ್ದಲ್ಲ. ಕಾರಣವೇನು, ಹೇಳು" ಎಂದರು (೨೬–೨೭). ಆಗ ನಾರದರು "ಮುನೀಶ್ವರರೆ, ನಾನು ಸರ್ವೋತ್ತಮವಾದದ್ದು

ಹರಿಕ್ಷೇತ್ರಂ ಕುರುಕ್ಷೇತ್ರಂ ಶ್ರೀರಂಗಂ ಸೇತುಬಂಧನಮ್ ।
ಏವಮಾದಿಷು ತೀರ್ಥೇಷು ಭ್ರಮಮಾಣ ಇತಸ್ತತಃ ॥ ೨೯

ನಾಪಶ್ಯಂ ಕುತ್ರಚಿಚ್ಛರ್ಮ ಮನಸ್ಸಂತೋಷಕಾರಕಮ್ ।
ಕಲಿನಾಽಧರ್ಮಮಿತ್ರೇಣ ಧರೇಯಂ ಬಾಧಿತಾಧುನಾ ॥ ೩೦

ಸತ್ಯಂ ನಾಸ್ತಿ ತಪಃ ಶೌಚಂ ದಯಾ ದಾನಂ ನ ವಿದ್ಯತೇ ।
ಉದರಂಭರಿಣೋ ಜೀವಾ ವರಾಕಾಃ ಕೂಟಭಾಷಿಣಃ ॥ ೩೧

ಮಂದಾಃ ಸುಮಂದಮತಯೋ ಮಂದಭಾಗ್ಯಾ ಹ್ಯುಪದ್ರುತಾಃ ।
ಪಾಖಂಡನಿರತಾಃ ಸಂತೋ ವಿರಕ್ತಾಃ ಸಪರಿಗ್ರಹಾಃ ॥ ೩೨

ತರುಣೀಪ್ರಭುತಾ ಗೇಹೇ ಶ್ಯಾಲಕೋ ಬುದ್ಧಿದಾಯಕಃ ।
ಕನ್ಯಾವಿಕ್ರಯಿಣೋ ಲೋಭಾದ್ದಂಪತೀನಾಂ ಚ ಕಲ್ಕನಮ್ ॥ ೩೩

---

ಭೂಲೋಕವೆಂದು ತಿಳಿದು ಇಲ್ಲಿಗೆ ಬಂದೆನು. ಪುಷ್ಕರಕ್ಷೇತ್ರ, ಪ್ರಯಾಗ, ಕಾಶೀ, ಗೋದಾವರೀ, ಹರಿಕ್ಷೇತ್ರ, ಕುರುಕ್ಷೇತ್ರ, ಶ್ರೀರಂಗ, ಸೇತುಬಂಧನ—ಮುಂತಾದ ಪುಣ್ಯಸ್ಥಳಗಳಲ್ಲಿ ತಿರುಗಾಡುತ್ತಿದ್ದೆನು (೨೮–೨೯). ಎಲ್ಲಿ ಹೋದರೂ ಜನರ ಮನಸ್ಸಿಗೆ ನೆಮ್ಮದಿಯನ್ನೀಯುವ ಸೌಖ್ಯವನ್ನು ನಾನು ಕಾಣಲಿಲ್ಲ. ಅಧರ್ಮದ ಗೆಳೆಯನಾದ ಕಲಿಪುರುಷನು ಈ ಪೃಥಿವಿಯಲ್ಲೀಗ ಹಾವಳಿಯೆಬ್ಬಿಸಿದ್ದಾನೆ. ಸತ್ಯವಿಲ್ಲ, ತಪಸ್ಸಿಲ್ಲ, ಶುಚಿತ್ವವಿಲ್ಲ, ದಯಾದಾನಗಳ ಸುಳಿವಿಲ್ಲ, ಜನರು ಕೇವಲ ಹೊಟ್ಟೆಬಾಕರಾಗಿ ಶೋಚನೀಯರಾಗಿದ್ದಾರೆ. ಕಪಟದ ಮಾತುಗಳನ್ನಾಡುತ್ತಾರೆ (೩೦–೩೧). ವಿವೇಕಶೂನ್ಯರಾದ ಈ ಜನರ ಬುದ್ಧಿಗೆ ಮಂಕುಬಡಿದಿದೆ. ಭಾಗ್ಯಹೀನರಾದ ಇವರು ನಾನಾ ಉಪದ್ರವಗಳಿಗೆ ಸಿಕ್ಕಿಕೊಳ್ಳುತ್ತಿದ್ದಾರೆ. ಸಾಧುಗಳೆನಿಸಿಕೊಳ್ಳತಕ್ಕವರು ವಸ್ತುತಃ ಪಾಖಂಡರಾಗಿದ್ದಾರೆ. ಇವರು ವಿರಕ್ತವೇಷವನ್ನು ಧರಿಸಿ ಧನಾದಿಗಳನ್ನು ಪರಿಗ್ರಹಿಸುತ್ತಾರೆ (೩೨). ಜನರ ಮನೆಗಳಲ್ಲಿ ತರುಣಿಯರದೇ ಪ್ರಭುತ್ವವಾಗಿದೆ. ಭಾವಮೈದುನನೇ ಬುದ್ಧಿಹೇಳುವ ಸಲಹೆಗಾರ. ಹಣದ ಆಸೆಗಾಗಿ ಹೆಣ್ಣುಮಕ್ಕಳನ್ನು ವಿಕ್ರಯಿಸುತ್ತಾರೆ. ದಂಪತಿಗಳು ಪರಸ್ಪರ ವಂಚಕರು. ಪವಿತ್ರಾಶ್ರಮಗಳನ್ನೂ ತೀರ್ಥಕ್ಷೇತ್ರಗಳನ್ನೂ ನದಿಗಳನ್ನೂ ಯವನರು ಆಕ್ರಮಿಸಿಕೊಂಡು

ಆಶ್ರಮಾ ಯವನೈ ರುದ್ಧಾಸ್ತೀರ್ಥಾನಿ ಸರಿತಸ್ತಥಾ ।
ದೇವತಾಯತನಾನ್ಯತ್ರ ದುಷ್ಟೈರ್ನಷ್ಟಾನಿ ಭೂರಿಶಃ ॥ ೩೪

ನ ಯೋಗೀ ನೈವ ಸಿದ್ಧೋ ವಾ ನ ಜ್ಞಾನೀ ಸತ್ಕ್ರಿಯೋ ನರಃ ।
ಕಲಿದಾವಾನಲೇನಾದ್ಯ ಸಾಧನಂ ಭಸ್ಮತಾಂ ಗತಮ್ ॥ ೩೫

ಅಟ್ಟಶೂಲಾ ಜನಪದಾಃ ಶಿವಶೂಲಾ ದ್ವಿಜಾತಯಃ ।
ಕಾಮಿನ್ಯಃ ಕೇಶಶೂಲಿನ್ಯಃ ಸಂಭವಂತಿ ಕಲಾವಿಹ ॥ ೩೬

ಏವಂ ಪಶ್ಯನ್ ಕಲೇರ್ದೋಷಾನ್ ಪರ್ಯಟನ್ನವನೀಮಹಮ್ ।
ಯಾಮುನಂ ತಟಮಾಪನ್ನೋ ಯತ್ರ ಲೀಲಾ ಹರೇರಭೂತ್ ॥ ೩೭

ತತ್ರಾಶ್ಚರ್ಯಂ ಮಯಾ ದೃಷ್ಟಂ ಶ್ರೂಯತಾಂ ತನ್ಮುನೀಶ್ವರಾಃ ।
ಏಕಾ ತು ತರುಣೀ ತತ್ರ ನಿಷಣ್ಣಾ ಖಿನ್ನಮಾನಸಾ ॥ ೩೮

ವೃದ್ಧೌ ದ್ವೌ ಪತಿತೌ ಪಾರ್ಶ್ವೇ ನಿಃಶ್ವಸಂತಾವಚೇತನೌ ।
ಶುಶ್ರೂಷಂತೀ ಪ್ರಬೋಧಂತೀ ರುದತೀ ಚ ತಯೋಃ ಪುರಃ ॥ ೩೯

---

ಕೆಡಿಸಿದ್ದಾರೆ. ಈ ದುಷ್ಟರು ಅಸಂಖ್ಯಾತವಾದ ದೇವಾಲಯಗಳನ್ನು ಹಾಳುಗೆಡವಿದ್ದಾರೆ (೩೩–೩೪). ಒಬ್ಬ ಯೋಗಿಯಾಗಲಿ ಸಿದ್ಧಪುರುಷನಾಗಲಿ ಜ್ಞಾನಿಯಾಗಲಿ ಸದಾಚಾರನಿಷ್ಠನಾಗಲಿ ಪೃಥ್ವಿಯಲ್ಲಿಲ್ಲ. ಕಲಿಯೆಂಬ ಕಾಳ್ಗಿಚ್ಚು ಎಲ್ಲ ಪುಣ್ಯಸಾಧನಗಳನ್ನೂ ಸುಟ್ಟು ಬೂದಿಮಾಡಿಬಿಟ್ಟಿದೆ. ರಾಷ್ಟ್ರದ ಜನರು ಅನ್ನವನ್ನು ಮಾರಿ ಜೀವಿಸುತ್ತಾರೆ. ಬ್ರಾಹ್ಮಣರು ವೇದವನ್ನು ಮಾರುತ್ತಿದ್ದಾರೆ. ಈ ಕಲಿಯುಗದಲ್ಲಿ ಸ್ತ್ರೀಯರು ವ್ಯಭಿಚಾರದಿಂದ ಧನಸಂಪಾದನೆ ಮಾಡುತ್ತಿದ್ದಾರೆ (೩೫–೩೬). ಈ ಕಲಿದೋಷಗಳನ್ನು ನೋಡುತ್ತ ತಿರುಗಾಡಿಕೊಂಡು ಯಮುನಾತೀರದ ಬೃಂದಾವನಕ್ಕೆ ಬಂದೆನು. ಆ ಸ್ಥಳದಲ್ಲಿ ಶ್ರೀಕೃಷ್ಣನ ಲೀಲಾಪ್ರಸಂಗವು ನಡೆದಿತ್ತಲ್ಲವೆ? ಅಲ್ಲಿ ನಾನೊಂದು ಆಶ್ಚರ್ಯವನ್ನು ಕಂಡೆನು. ಅದನ್ನು ಕೇಳಿರಿ. ಒಬ್ಬ ತರುಣಿ ಖಿನ್ನಮನಸ್ಕಳಾಗಿ ಅಲ್ಲಿ ಕುಳಿತುಕೊಂಡಿದ್ದಳು (೩೭–೩೮). ಅವಳ ಬಳಿಯಲ್ಲಿ ಇಬ್ಬರು ವೃದ್ಧರು ಸೇದುಸಿರುಬಿಡುತ್ತ ಬಿದ್ದುಕೊಂಡಿದ್ದರು. ಅವರ ಚೈತನ್ಯವೇ ಉಡುಗಿಹೋಗಿತ್ತು. ಈ ತರುಣಿಯು ಅಳುತ್ತಲೇ ಅವರನ್ನು ಎಚ್ಚರ

ದಶದಿಕ್ಷು ನಿರೀಕ್ಷಂತೀ ರಕ್ಷಿತಾರಂ ನಿಜಂ ವಪುಃ ।
ವೀಜ್ಯಮಾನಾ ಶತಸ್ತ್ರೀಭಿರ್ಬೋಧ್ಯಮಾನಾ ಮುಹುರ್ಮುಹುಃ ॥ ೪೦

ದೃಷ್ಟ್ವಾ ದೂರಾದ್ಗತಃ ಸೋऽಹಂ ಕೌತುಕೇನ ತದಂತಿಕಮ್ ।
ಮಾಂ ದೃಷ್ಟ್ವಾ ಚೋತ್ಥಿತಾ ಬಾಲಾ ವಿಹ್ವಲಾ ಚಾಬ್ರವೀದ್ವಚಃ ॥ ೪೧

ಬಾಲೋವಾಚ—

ಭೋ ಭೋಃ ಸಾಧೋ ಕ್ಷಣಂ ತಿಷ್ಠ ಮಚ್ಚಿಂತಾಮಪಿ ನಾಶಯ ।
ದರ್ಶನಂ ತವ ಲೋಕಸ್ಯ ಸರ್ವಥಾಘಹರಂ ಪರಮ್ ॥ ೪೨

ಬಹುಧಾ ತವ ವಾಕ್ಯೇನ ದುಃಖಶಾಂತಿರ್ಭವಿಷ್ಯತಿ ।
ಯದಾ ಭಾಗ್ಯಂ ಭವೇದ್ಭೂರಿ ಭವತೋ ದರ್ಶನಂ ತದಾ ॥ ೪೩

ನಾರದ ಉವಾಚ—

ಕಾಸಿ ತ್ವಂ ಕಾವಿಮೌ ಚೇಮಾ ನಾರ್ಯಃ ಕಾಃ ಪದ್ಮಲೋಚನಾಃ ।
ವದ ದೇವಿ ಸವಿಸ್ತಾರಂ ಸ್ವಸ್ಯ ದುಃಖಸ್ಯ ಕಾರಣಮ್ ॥ ೪೪

---

ಗೊಳಿಸಲು ಹವಣಿಸುತ್ತ ಶುಶ್ರೂಷೆ ಮಾಡುತ್ತಿದ್ದಳು (೩೯). ತನ್ನ ದೇಹವನ್ನು ಯಾರಾದರೂ ಕಾಪಾಡಿಯಾರೆ ?—ಎಂದು ದಶದಿಕ್ಕುಗಳನ್ನೂ ನೋಡುತ್ತಿದ್ದಳು. ಇನ್ನೊಂದು ವಿಶೇಷವೇನೆಂದರೆ, ಅವಳ ಸುತ್ತಲೂ ನೂರಾರು ಸ್ತ್ರೀಯರು ಸೇರಿಕೊಂಡು ಆ ತರುಣಿಗೆ ಗಾಳಿಹಾಕುತ್ತ ಮತ್ತೆ ಮತ್ತೆ ಸಂತೈಸುತ್ತಿದ್ದರು ! ನಾನು ದೂರದಲ್ಲಿ ಈ ದೃಶ್ಯವನ್ನು ಕಂಡು ಕೌತುಕದಿಂದ ಅವಳ ಸಮೀಪಕ್ಕೆ ಹೋದೆನು. ನನ್ನನ್ನು ಕಂಡೊಡನೆ ಆ ಹುಡುಗಿಯು ಎದ್ದು ನಿಂತು ಕಳವಳಿಸುತ್ತ ಹೀಗೆಂದಳು (೪೦–೪೧). "ಓ ಓ ಸಾಧುಗಳೆ, ಕ್ಷಣಕಾಲ ನಿಲ್ಲಿರಿ, ನನ್ನ ಈ ಕಷ್ಟವನ್ನು ಪರಿಹರಿಸಿರಿ. ನಿಮ್ಮ ದರ್ಶನವೇ ಲೋಕದ ಪಾಪವನ್ನು ಸರ್ವಥಾ ಪರಿಹರಿಸುತ್ತದೆ. ನಿಮ್ಮ ನುಡಿಯಿಂದ ನನ್ನ ದುಃಖಕ್ಕೆ ಶಮನವಾಗುವುದು. ನಿಮ್ಮ ದರ್ಶನವಾಗಬೇಕಾದರೆ ಮಹಾಭಾಗ್ಯವು ಒದಗಿರಬೇಕು" ಎಂದಳು. (೪೨–೪೩). ಆಗ ನಾನು "ದೇವಿ, ನೀನು ಯಾರು ? (ಬಿದ್ದಿರತಕ್ಕ) ಇವರಿಬ್ಬರು ಯಾರು ? ಕಮಲನೇತ್ರೆಯರಾದ ಈ ಸ್ತ್ರೀಯರು ಯಾರು ? ನಿನ್ನ ಶೋಕಕ್ಕೆ

ಬಾಲೋವಾಚ—

ಅಹಂ ಭಕ್ತಿರಿತಿ ಖ್ಯಾತಾ ಇಮೌ ಮೇ ತನಯೌ ಮತೌ ।
ಜ್ಞಾನವೈರಾಗ್ಯನಾಮಾನೌ ಕಾಲಯೋಗೇನ ಜರ್ಜರೌ ॥ ೪೫

ಗಂಗಾದ್ಯಾಃ ಸರಿತಶ್ಚೇಮಾ ಮತ್ಸೇವಾರ್ಥಂ ಸಮಾಗತಾಃ ।
ತಥಾಪಿ ನ ಚ ಮೇ ಶ್ರೇಯಃ ಸೇವಿತಾಯಾಃ ಸುರೈರಪಿ ॥ ೪೬

ಇದಾನೀಂ ಶೃಣು ಮದ್ವಾರ್ತಾಂ ಸಚಿತ್ತಸ್ತ್ವಂ ತಪೋಧನ ।
ವಾರ್ತಾ ಮೇ ವಿತತಾಪ್ಯಸ್ತಿ ತಾಂ ಶ್ರುತ್ವಾ ಸುಖಮಾವಹ ॥ ೪೭

ಉತ್ಪನ್ನಾ ದ್ರವಿಡೇ ಸಾಹಂ ವೃದ್ಧಿಂ ಕರ್ಣಾಟಕೇ ಗತಾ ।
ಕ್ವಚಿತ್ಕ್ವಚಿನ್ಮಹಾರಾಷ್ಟ್ರೇ ಗುರ್ಜರೇ ಜೀರ್ಣತಾಂ ಗತಾ ॥ ೪೮

ತತ್ರ ಘೋರಕಲೇರ್ಯೋಗಾತ್ಪಾಖಂಡೈಃ ಖಂಡಿತಾಂಗಕಾ ।
ದುರ್ಬಲಾಹಂ ಚಿರಂ ಯಾತಾ ಪುತ್ರಾಭ್ಯಾಂ ಸಹ ಮಂದತಾಮ್ ॥ ೪೯

---

ಕಾರಣವೇನೆಂಬುದನ್ನು ವಿಸ್ತಾರವಾಗಿ ಹೇಳು" ಎಂದೆನು (೪೪). ಆ ತರುಣಿ ಹೇಳಿದ್ದೇನೆಂದರೆ "ನಾನು ಭಕ್ತಿ ಎಂಬ ಹೆಸರಿನಿಂದ ಪ್ರಸಿದ್ಧಳಾದವಳು. ಇವರಿಬ್ಬರೂ ನನ್ನ ಮಕ್ಕಳು. ಜ್ಞಾನ, ವೈರಾಗ್ಯ ಎಂದು ಇವರ ಹೆಸರು! ಕಾಲಪ್ರಭಾವದಿಂದ ದೇಹದಲ್ಲಿ ಜೀರ್ಣರಾಗಿದ್ದಾರೆ! ಈ ಸ್ತ್ರೀಯರೆಲ್ಲರೂ ಗಂಗಾದಿನದೀದೇವತೆಗಳು. ನನ್ನ ಶುಶ್ರೂಷೆಗಾಗಿ ಬಂದಿದ್ದಾರೆ. ದೇವತೆಗಳೇ ನನ್ನ ಪರಿಚರ್ಯೆ ಮಾಡುತ್ತಿದ್ದರೂ ನನಗೆ ಕ್ಷೇಮವಿಲ್ಲವಾಗಿದೆ (೪೫–೪೬). ನನ್ನ ವೃತ್ತಾಂತವನ್ನು ಸಾವಧಾನವಾಗಿ ಕೇಳಿರಿ. ತಪೋಧನರೆ, ನನ್ನ ವೃತ್ತಾಂತವು ದೊಡ್ಡದು. ಅದನ್ನು ಆಲಿಸಿ ನನಗೆ ಒಳ್ಳೆಯದನ್ನು ಮಾಡಿರಿ. ನಾನು ದ್ರಾವಿಡ ದೇಶದಲ್ಲಿ ಹುಟ್ಟಿ ಕರ್ಣಾಟಕ ದೇಶದಲ್ಲಿ ಬೆಳೆದೆ. ಮಹಾರಾಷ್ಟ್ರದ ಕೆಲವು ಪ್ರದೇಶಗಳಲ್ಲಿಯೂ ಇದ್ದೆ. ಕಡೆಗೆ ಗುರ್ಜರ ದೇಶದಲ್ಲಿ ಜರ್ಜರಿತಳಾಗಿ ಮುದುಕಿಯಾಗಿ ಬಿಟ್ಟೆ! (೪೭–೪೮). ಅಲ್ಲಿ ಈ ಘೋರಕಲಿಯ ಪ್ರಭಾವದಿಂದ ಪಾಖಂಡರು ನನ್ನ ಅವಯವಗಳನ್ನು ಕಡಿದರು. ನಾನು ಅತ್ಯಂತ ದುರ್ಬಲಳಾಗಿ ಈ ಮಕ್ಕಳ ಜೊತೆಗೆ ನಾನೂ ಜಡತ್ವವನ್ನು ಪಡೆದೆ. ಆಮೇಲೆ ಈ ವೃಂದಾವನಕ್ಕೆ ಬಂದಮೇಲೆ ನವಯೌವನವನ್ನು ಪಡೆದೆನೋ ಎಂಬಂತೆ ರೂಪಶಾಲಿನಿಯಾದ ಯುವತಿಯಾಗಿದ್ದೇನೆ! ಸದ್ಯದಲ್ಲಿ

ವೃಂದಾವನಂ ಪುನಃ ಪ್ರಾಪ್ಯ ನವೀನೇವ ಸುರೂಪಿಣೀ ।
ಜಾತಾಹಂ ಯುವತೀ ಸಮ್ಯಕ್ಶ್ರೇಷ್ಠರೂಪಾ ತು ಸಾಂಪ್ರತಮ್ ॥ ೫೦

ಇಮೌ ತು ಶಯಿತಾವತ್ರ ಸುತೌ ಮೇ ಕ್ಲಿಶ್ಯತಃ ಶ್ರಮಾತ್ ।
ಇದಂ ಸ್ಥಾನಂ ಪರಿತ್ಯಜ್ಯ ವಿದೇಶಂ ಗಮ್ಯತೇ ಮಯಾ ॥ ೫೧

ಜರಠತ್ವಂ ಸಮಾಯಾತೌ ತೇನ ದುಃಖೇನ ದುಃಖಿತಾ ।
ಸಾಹಂ ತು ತರುಣೀ ಕಸ್ಮಾತ್ಸುತೌ ವೃದ್ಧಾವಿಮೌ ಕುತಃ ॥ ೫೨

ತ್ರಯಾಣಾಂ ಸಹಚಾರಿತ್ವಾದ್ವೈಪರೀತ್ಯಂ ಕುತಃ ಸ್ಥಿತಮ್ ।
ಘಟತೇ ಜರಠಾ ಮಾತಾ ತರುಣೌ ತನಯಾವಿತಿ ॥ ೫೩

ಅತಃ ಶೋಚಾಮಿ ಚಾತ್ಮಾನಂ ವಿಸ್ಮಯಾವಿಷ್ಟಮಾನಸಾ ।
ವದ ಯೋಗನಿಧೇ ಧೀಮನ್ ಕಾರಣಂ ಚಾತ್ರ ಕಿಂ ಭವೇತ್ ॥ ೫೪

ನಾರದ ಉವಾಚ—

ಜ್ಞಾನೇನಾತ್ಮನಿ ಪಶ್ಯಾಮಿ ಸರ್ವಮೇತತ್ತವಾನಘೇ ।
ನ ವಿಷಾದಸ್ತ್ವಯಾ ಕಾರ್ಯೋ ಹರಿಃ ಶಂ ತೇ ಕರಿಷ್ಯತಿ ॥ ೫೫

---

ನನಗೆ ಮನೋಹರವಾದ ಸುಂದರರೂಪವು ಬಂದಿದೆ (೪೯–೫೦). ಆದರೆ ಈ ನನ್ನ ಪುತ್ರರಿಬ್ಬರೂ ಆಯಾಸದಿಂದ ಮಲಗಿಬಿಟ್ಟಿದ್ದಾರೆ. ಬಹಳ ಕಷ್ಟಪಡುತ್ತಿದ್ದಾರೆ. ಆದ್ದರಿಂದ ಈ ದೇಶವನ್ನು ಬಿಟ್ಟು ನಾನು ದೇಶಾಂತರಕ್ಕೆ ಹೋಗಬೇಕೆಂದಿದ್ದೇನೆ. ಇವರು ವೃದ್ಧರಾಗಿಬಿಟ್ಟಿದ್ದಾರೆ. ಆ ಚಿಂತೆಯಿಂದ ನಾನು ಶೋಕಾರ್ತಳಾಗಿದ್ದೇನೆ. ನಾನು ತರುಣಿ, ನನ್ನ ಮಕ್ಕಳು ಮುದುಕರು! ಏಕೆ ಹೀಗಾಯಿತು? ಏನಿದು? (೫೧–೫೨). ನಾವು ಯಾವಾಗಲೂ ಒಟ್ಟಿಗೇ ಇರುತ್ತಿರುವಾಗ ಈ ವೈಪರೀತ್ಯವುಂಟಾದದ್ದೇಕೆ? ತಾಯಿ ಮುದುಕಿ, ಮಕ್ಕಳು ತರುಣರು—ಎಂಬುದು ಸರಿಯಾದದ್ದು. ಲೋಕದಲ್ಲಿ ಹಾಗೆ ಘಟಿಸುತ್ತದೆ. ಆದಕಾರಣ ಈ ಅಚ್ಚರಿಯಿಂದ ಮತಿಗೆಟ್ಟು ನನ್ನ ಪರಿಸ್ಥಿತಿಗಾಗಿ ಶೋಕಿಸುತ್ತಿದ್ದೇನೆ. ಓ ಧೀಮಂತರೆ, ಯೋಗನಿಧಿಗಳೆ, ಇದಕ್ಕೆ ಏನು ಕಾರಣವಿರಬಹುದು? ಹೇಳಿರಿ" ಎಂದಳು (೫೩–೫೪). ಆಗ ನಾನು "ಭದ್ರೆ, ಇದಕ್ಕೆ ಕಾರಣವೇನೆಂಬುದನ್ನು ಜ್ಞಾನದೃಷ್ಟಿಯಿಂದ ನೋಡಿ ಹೇಳುವೆನು. ನೀನು ವಿಷಾದಿಸಬೇಡ.

ಸೂತ ಉವಾಚ—

ಕ್ಷಣಮಾತ್ರೇಣ ತಜ್ಜ್ಞಾತ್ವಾ ವಾಕ್ಯಮೂಚೇ ಮುನೀಶ್ವರಃ ॥ ೩೬

ನಾರದ ಉವಾಚ—

ಶೃಣುಷ್ವಾವಹಿತಾ ಬಾಲೇ ಯುಗೋಽಯಂ ದಾರುಣಃ ಕಲಿಃ ।
ತೇನ ಲುಪ್ತಃ ಸದಾಚಾರೋ ಯೋಗಮಾರ್ಗಸ್ತಪಾಂಸಿ ಚ ॥ ೩೭

ಜನಾ ಅಘಾಸುರಾಯಂತೇ ಶಾಠ್ಯದುಷ್ಕರ್ಮಕಾರಿಣಃ ।
ಇಹ ಸಂತೋ ವಿಷೀದಂತಿ ಪ್ರಹೃಷ್ಯಂತಿ ಹ್ಯಸಾಧವಃ ।
ಧತ್ತೇ ಧೈರ್ಯಂ ತು ಯೋ ಧೀಮಾನ್ ಸ ಧೀರಃ
ಪಂಡಿತೋಽಥವಾ ॥ ೩೮

ಅಸ್ಪೃಶ್ಯಾನವಲೋಕ್ಯೇಯಂ ಶೇಷಭಾರಕರೀ ಧರಾ ।
ವರ್ಷೇ ವರ್ಷೇ ಕ್ರಮಾಜ್ಜಾತಾ ಮಂಗಲಂ ನಾಪಿ ದೃಶ್ಯತೇ ॥ ೩೯

---

ಶ್ರೀಹರಿಯು ನಿನಗೆ ಶುಭವನ್ನುಂಟುಮಾಡುವನು" ಎಂದೆನು (೩೫). (ಈ ವಿಷಯವನ್ನು ವಿವರಿಸುತ್ತ ಸೂತರು ಶೌನಕರಿಗೆ ಹೇಳುತ್ತಾರೆ). "ಶೌನಕರೆ, ಒಂದು ಕ್ಷಣಮಾತ್ರದಲ್ಲಿ ನಾರದಮುನಿಗಳು ಜ್ಞಾನದೃಷ್ಟಿಯಿಂದ ಅದನ್ನರಿತು ಭಕ್ತಿಗೆ ಇಂತೆಂದರು (೩೬): "ಬಾಲಿಕೆ, ಮನಸ್ಸಿಟ್ಟು ಕೇಳು. ಇದು ಭೀಕರವಾದ ಕಲಿಯುಗ. ಆದ್ದರಿಂದ ಸದಾಚಾರವೂ ಯೋಗಮಾರ್ಗವೂ ತಪಶ್ಚರಣೆಗಳೂ ಲುಪ್ತವಾಗಿರುತ್ತವೆ. ಜನರು ಶಠಬುದ್ಧಿಯುವರಾಗಿ ದುಷ್ಕರ್ಮಗಳನ್ನು ನಡೆಸುತ್ತ ಅಘಾಸುರನಂತೆ ವರ್ತಿಸುತ್ತಾರೆ. ಇಲ್ಲಿ ಸಜ್ಜನರು ವಿಷಾದಿಸುತ್ತಾರೆ. ದುರ್ಜನರು ಸಂತೋಷದಿಂದ ಬೀಗುತ್ತಾರೆ. ಈ ಪರಿಸ್ಥಿತಿಯಲ್ಲಿ ಯಾವ ಬುದ್ಧಿಶಾಲಿಯು ಧೈರ್ಯವನ್ನು ವಹಿಸುತ್ತಾನೋ ಅವನನ್ನು ಧೀರನೆಂದೋ ಪಂಡಿತನೆಂದೋ ಹೇಳಬೇಕಾಗಿದೆ (೩೭–೩೮). ಸ್ಪರ್ಶಕ್ಕೂ ಯೋಗ್ಯರಲ್ಲದ ಈ ಮನುಷ್ಯರನ್ನು ನೋಡಿದರೆ ಭೂಮಿಯು ಆದಿಶೇಷನಿಗೆ ವರ್ಷವರ್ಷವೂ ಭಾರವಾಗಿ ಪರಿಣಮಿಸುತ್ತಿದೆ ಎನ್ನಬಹುದು. ಮಂಗಳಕರವಾದ ಕಾರ್ಯವು ಎಲ್ಲಿಯೂ ಕಂಡುಬರುತ್ತಿಲ್ಲ. ಮಕ್ಕಳೊಡನೆ ಬಳಲುತ್ತಿರುವ ನಿನ್ನನ್ನೂ ಸಹ ಇಂದು ಯಾವನೂ ಕಣ್ಣೆತ್ತಿ ನೋಡುವುದಿಲ್ಲ. ಅನುರಾಗವನ್ನು ಕಳೆದುಕೊಂಡು ಕುರುಡರಾಗಿಬಿಟ್ಟಿರುವ ಈ

ನ ತ್ವಾಮಪಿ ಸುತೈಃ ಸಾಕಂ ಕೋಽಪಿ ಪಶ್ಯತಿ ಸಾಂಪ್ರತಮ್ ।
ಉಪೇಕ್ಷಿತಾನುರಾಗಾಂಧೈರ್ಜರ್ಜರತ್ವೇನ ಸಂಸ್ಥಿತಾ ॥ ೬೦

ವೃಂದಾವನಸ್ಯ ಸಂಯೋಗಾತ್ಪುನಸ್ತ್ವಂ ತರುಣೀ ನವಾ ।
ಧನ್ಯಂ ವೃಂದಾವನಂ ತೇನ ಭಕ್ತಿರ್ನೃತ್ಯತಿ ಯತ್ರ ಚ ॥ ೬೧

ಅತ್ರೇಮೌ ಗ್ರಾಹಕಾಭಾವಾನ್ನ ಜರಾಮಪಿ ಮುಂಚತಃ ।
ಕಿಂಚಿದಾತ್ಮಸುಖೇನೇಹ ಪ್ರಸುಪ್ತಿರ್ಮನ್ಯತೇಽನಯೋಃ ॥ ೬೨

ಭಕ್ತಿರುವಾಚ—

ಕಥಂ ಪರೀಕ್ಷಿತಾ ರಾಜ್ಞಾ ಸ್ಥಾಪಿತೋ ಹ್ಯಶುಚಿಃ ಕಲಿಃ ।
ಪ್ರವೃತ್ತೇ ತು ಕಲೌ ಸರ್ವಸಾರಃ ಕುತ್ರ ಗತೋ ಮಹಾನ್ ॥ ೬೩

ಕರುಣಾಪರೇಣ ಹರಿಣಾಪ್ಯಧರ್ಮಃ ಕಥಮೀಕ್ಷ್ಯತೇ ।
ಇಮಂ ಮೇ ಸಂಶಯಂ ಛಿಂಧಿ ತ್ವದ್ವಾಚಾ ಸುಖಿತಾಸ್ಮ್ಯಹಮ್ ॥ ೬೪

ನಾರದ ಉವಾಚ—

ಯದಿ ಪೃಷ್ಟಸ್ತ್ವಯಾ ಬಾಲೇ ಪ್ರೇಮತಃ ಶ್ರವಣಂ ಕುರು ।
ಸರ್ವಂ ವಕ್ಷ್ಯಾಮಿ ತೇ ಭದ್ರೇ ಕಶ್ಮಲಂ ತೇ ಗಮಿಷ್ಯತಿ ॥ ೬೫

---

ಜನರ ಕಾರಣದಿಂದ ನೀನು ಜರ್ಜರಳಾಗಿದ್ದೀಯೆ (೫೯–೬೦). ಈ ವೃಂದಾವನದ ಸಂಬಂಧದಿಂದ ನೀನು ಮತ್ತೆ ನವಯೌವನವನ್ನು ಪಡೆದೆಯಲ್ಲವೆ? ಭಕ್ತಿಯು ಎಲ್ಲಿ ನರ್ತಿಸುವಂತಾದಳೋ ಆ ವೃಂದಾವನವು ಧನ್ಯವಾಯಿತು. ಇಲ್ಲಿ ಈ ಜ್ಞಾನ, ವೈರಾಗ್ಯರಿಗೆ ಗ್ರಾಹಕರು ಯಾರೂ ಇಲ್ಲದ್ದರಿಂದ ಇವರ ಮುಪ್ಪು ಹೋಗಲಿಲ್ಲ. ವೈಯಕ್ತಿಕವಾಗಿ ನಿನಗೆ ಸ್ವಲ್ಪ ಸೌಖ್ಯವಾದ್ದರಿಂದ ಇವರಿಬ್ಬರಿಗೆ (ಸುಖದ) ನಿದ್ರೆ ಬಂದಿದೆಯೆಂದು ತಿಳಿಯಬೇಕಾಗಿದೆ" ಎಂದರು (೬೧–೬೨). ಆಗ ಭಕ್ತಿಯು "ಈ ಕೊಳಕು ಕಲಿಯುಗವನ್ನು ಪರೀಕ್ಷಿತರಾಜನಾದರೂ ಅಳಿಸದೆ ಉಳಿಸಿದ್ದು ಹೇಗೆ? ಈ ಕಲಿಯು ಪ್ರವರ್ತಿಸಿದಮೇಲೆ ಸರ್ವಸಾರವಾದ ಮಹತ್ತರವಾದ ಧರ್ಮವಾದರೂ ಎಲ್ಲಿ ಹೋಯಿತು? ಕರುಣಾಶಾಲಿಯಾದ ಶ್ರೀಹರಿಯಾದರೂ ಈ ಅಧರ್ಮವನ್ನು ಸುಮ್ಮನೆ ನೋಡುತ್ತಿರುವುದೇಕೆ? ಮುನಿಗಳೆ, ನನ್ನ ಈ ಸಂಶಯವನ್ನು ಬಗೆಹರಿಸಿರಿ. ನಿಮ್ಮ ಮಾತಿನಿಂದ ನನಗೆ ಸಮಾಧಾನವಾಗುತ್ತಿದೆ" ಎಂದಳು (೬೩–೬೪). ಅದಕ್ಕೆ ನಾರದರು ಇಂತೆಂದರು: "ಭದ್ರೆ, ಪ್ರೀತಿಯಿಂದ

ಯದಾ ಮುಕುಂದೋ ಭಗವಾನ್ ಕ್ಷ್ಮಾಂ ತ್ಯಕ್ತ್ವಾ ಸ್ವಪದಂ ಗತಃ ।
ತದ್ದಿನಾತ್ಕಲಿರಾಯಾತಃ ಸರ್ವಸಾಧನಬಾಧಕಃ ॥ ೬೬

ದೃಷ್ಟೋ ದಿಗ್ವಿಜಯೇ ರಾಜ್ಞಾ ದೀನವಚ್ಛರಣಂ ಗತಃ ।
ನ ಮಯಾ ಮಾರಣೀಯೋಽಯಂ ಸಾರಂಗ ಇವ ಸಾರಭುಕ್ ॥ ೬೭

ಯತ್ಫಲಂ ನಾಸ್ತಿ ತಪಸಾ ನ ಯೋಗೇನ ಸಮಾಧಿನಾ ।
ತತ್ಫಲಂ ಲಭತೇ ಸಮ್ಯಕ್ಕಲೌ ಕೇಶವಕೀರ್ತನಾತ್ ॥ ೬೮

ಏಕಾಕಾರಂ ಕಲಿಂ ದೃಷ್ಟ್ವಾ ಸಾರವತ್ಸಾರನೀರಸಮ್ ।
ವಿಷ್ಣುರಾತಃ ಸ್ಥಾಪಿತವಾನ್ ಕಲಿಜಾನಾಂ ಸುಖಾಯ ಚ ॥ ೬೯

ಕುಕರ್ಮಾಚರಣಾತ್ಸಾರಃ ಸರ್ವತೋ ನಿರ್ಗತೋಽಧುನಾ ।
ಪದಾರ್ಥಾಃ ಸಂಸ್ಥಿತಾ ಭೂಮೌ ಬೀಜಹೀನಾಸ್ತುಷಾ ಯಥಾ ॥ ೭೦

---

ನೀನು ಈ ಪ್ರಶ್ನೆಯನ್ನು ಕೇಳುವುದಾದರೆ ಉತ್ತರವನ್ನೂ ಆಲಿಸು. ನಿನ್ನ ಚಿಂತೆಯು ದೂರವಾಗುವಂತೆ ಎಲ್ಲವನ್ನೂ ಹೇಳುವೆನು. ಯಾವ ದಿನ ಭಗವಾನ್ ಮುಕುಂದನು ಈ ಧರೆಯನ್ನು ತ್ಯಜಿಸಿ ತನ್ನ ಧಾಮಕ್ಕೆ ತೆರಳಿದನೋ ಆ ದಿನದಿಂದ ಮೊದಲ್ಗೊಂಡು ಸರ್ವಧರ್ಮಸಾಧನಗಳನ್ನು ಬಾಧಿಸತಕ್ಕ ಕಲಿಪುರುಷನು ಬಂದು ತಳ ಊರಿದನು (೬೫–೬೬). ಪರೀಕ್ಷಿತರಾಜನ ದಿಗ್ವಿಜಯಕಾಲದಲ್ಲಿ ಆತನಿಗೆ ಕಲಿಯು ಕಾಣಿಸಿಕೊಂಡಾಗ, ಕಲಿಯು ದೈನ್ಯದಿಂದ ರಾಜನಿಗೆ ಶರಣಾಗತನಾದನು. ಕಲಿಯು ಪದಾರ್ಥಗಳ ಸಾರವನ್ನು ಹೀರತಕ್ಕವನಾದರೂ ಬಡಜಿಂಕೆಯಂತೆ ಶರಣಾದನು. ಆಮೇಲೆ ರಾಜನು ಅವನನ್ನು ಕೊಲ್ಲಲಿಲ್ಲ (೬೭). "ಈತನನ್ನು ನಾನು ಕೊಲ್ಲುವುದು ತರವಲ್ಲ. ತಪಸ್ಸಿನಿಂದಾಗಲಿ ಕರ್ಮಯೋಗದಿಂದಾಗಲಿ ಸಮಾಧಿಯಿಂದಾಗಲಿ ಯಾವ ಫಲವು ದುರ್ಲಭವೋ ಅದು ಈ ಕಲಿಯುಗದಲ್ಲಿ ಕೇಶವನ ಕೀರ್ತನೆಯಿಂದಲೇ ಸುಲಭವಾಗಿ ಲಭ್ಯವಾಗುತ್ತದೆ" ಎಂದು ರಾಜನು ಆಲೋಚಿಸಿದನು (೬೮). ವಸ್ತುತಃ ತಿರುಳಿಲ್ಲದಿದ್ದರೂ ಈ ಒಂದು ಗುಣಸಾರವು ಕಲಿಯಲ್ಲಿ ಇದೆಯೆಂಬುದನ್ನೂ ಆಗಲೇ ಕಲಿಪುರುಷನು ಸರ್ವತ್ರ ಏಕರೂಪದಿಂದ ಹರಡಿರುವುದನ್ನೂ ನೋಡಿದ ಪರೀಕ್ಷಿತನು, ಕಲಿಯುಗದ ಜನರಿಗೆ ಕೇಶವಕೀರ್ತನೆಯಿಂದ ಸುಖವು ಲಭಿಸಲೆಂದು ಆತನನ್ನು ಕೊಲ್ಲದೆ ಉಳಿಸಿದನು (೬೯). ಈಗಲಾದರೋ ದುಷ್ಕೃತ್ಯಗಳ ಆಚರಣೆಯಿಂದ ಪದಾರ್ಥಗಳ

ವಿಪ್ರೈರ್ಭಾಗವತೀ ವಾರ್ತಾ ಗೇಹೇ ಗೇಹೇ ಜನೇ ಜನೇ ।
ಕಾರಿತಾ ಕಣಲೋಭೇನ ಕಥಾಸಾರಸ್ತತೋ ಗತಃ ॥ ೭೧

ಅತ್ಯುಗ್ರಭೂರಿಕರ್ಮಾಣೋ ನಾಸ್ತಿಕಾ ರೌರವಾ ಜನಾಃ ।
ತೇಽಪಿ ತಿಷ್ಠಂತಿ ತೀರ್ಥೇಷು ತೀರ್ಥಸಾರಸ್ತತೋ ಗತಃ ॥ ೭೨

ಕಾಮಕ್ರೋಧಮಹಾಲೋಭ ತೃಷ್ಣಾವ್ಯಾಕುಲಚೇತಸಃ ।
ತೇಽಪಿ ತಿಷ್ಠಂತಿ ತಪಸಿ ತಪಸ್ಸಾರಸ್ತತೋ ಗತಃ ॥ ೭೩

ಮನಸಶ್ಚಾಜಯಾಲ್ಲೋಭಾದ್ದಂಭಾತ್ಪಾಖಂಡಸಂಶ್ರಯಾತ್ ।
ಶಾಸ್ತ್ರಾನಭ್ಯಸನಾಚ್ಚೈವ ಧ್ಯಾನಯೋಗಫಲಂ ಗತಮ್ ॥ ೭೪

ಪಂಡಿತಾಸ್ತು ಕಲತ್ರೇಣ ರಮಂತೇ ಮಹಿಷಾ ಇವ ।
ಪುತ್ರಸ್ಯೋತ್ಪಾದನೇ ದಕ್ಷಾ ಅದಕ್ಷಾ ಮುಕ್ತಿಸಾಧನೇ ॥ ೭೫

ನ ಹಿ ವೈಷ್ಣವತಾ ಕುತ್ರ ಸಂಪ್ರದಾಯಪುರಸ್ಸರಾ ।
ಏವಂ ಪ್ರಲಯತಾಂ ಪ್ರಾಪ್ತೋ ವಸ್ತುಸಾರಃ ಸ್ಥಲೇ ಸ್ಥಲೇ ॥ ೭೬

---

ಸಾರವೇ ಸರ್ವತ್ರ ಹೊರಟುಹೋಗಿದೆ. ಎಲ್ಲ ಪದಾರ್ಥಗಳೂ ಬೀಜವಿಲ್ಲದ ಹೊಟ್ಟಿನಂತೆ ನಿಃಸಾರವಾಗಿವೆ. ವಿಪ್ರರು ಕಾಸಿನ ಆಸೆಗೆ ಒಳಪಟ್ಟು ಭಗವಂತನ ಕಥೆಯನ್ನು ಮನೆಮನೆಯಲ್ಲಿಯೂ ಜನಜನರಲ್ಲಿಯೂ ಹಂಚುತ್ತಿದ್ದಾರೆ. ಆದ್ದರಿಂದ ಭಗವತ್ಕಥೆಯ ತಿರುಳು ಹೊರಟುಹೋಗಿದೆ (೭೦ ೭೧). ಅತ್ಯಂತ ಭೀಕರ ಕೃತ್ಯವನ್ನೆಸಗತಕ್ಕವರೂ ನಾಸ್ತಿಕರೂ ರೌರವನರಕಯೋಗ್ಯರಾದ ಜನರೂ ತೀರ್ಥಕ್ಷೇತ್ರಗಳಲ್ಲಿ ನೆಲೆಸಿದ್ದಾರೆ. ಆದ್ದರಿಂದ ತೀರ್ಥಸಾರವು ಹೊರಟುಹೋಯಿತು. ಕಾಮ, ಕ್ರೋಧ, ಲೋಭ, ದುರಾಸೆಗಳಿಂದ ಕ್ಷುಬ್ಧಚಿತ್ತರಾದ ಜನರೂ ತಪಸ್ಸು ಮಾಡುತ್ತೇವೆಂದು ಹೊರಟಿದ್ದಾರೆ. ಆದ್ದರಿಂದ ತಪಃಸಾರವು ಹೊರಟುಹೋಯಿತು (೭೨–೭೩). ಮನೋಜಯವಿಲ್ಲದ್ದರಿಂದಲೂ ಬೂಟಾಟಿಕೆಯಿಂದಲೂ ಪಾಖಂಡರು ಕೈಹಾಕಿದ್ದರಿಂದಲೂ ಶಾಸ್ತ್ರವನ್ನು ಸರಿಯಾಗಿ ವ್ಯಾಸಂಗ ಮಾಡದೆ ಇದ್ದುದರಿಂದಲೂ ಧ್ಯಾನಯೋಗಕ್ಕೆ ಫಲವು ಕಾಣದೆ ಹೋಗಿದೆ (೭೪). ಪಂಡಿತರಾದವರೂ ಸಹ ಕೋಣಗಳಂತೆ ಹೆಂಡತಿಯರೊಡನೆ ರಮಿಸುವುದರಲ್ಲಿಯೇ ನಿರತರಾಗಿದ್ದಾರೆ. ಮಕ್ಕಳನ್ನು ಹುಟ್ಟಿಸುವುದರಲ್ಲಿ ಇವರು ದಕ್ಷರು. ಮುಕ್ತಿಸಾಧನೆಯಲ್ಲಿ ಮಾತ್ರ ಇವರಿಗೆ ದಕ್ಷತೆ ಇಲ್ಲವಾಗಿದೆ (೭೫). ಸಂಪ್ರದಾಯಪೂರ್ವಕ

ಅಯಂ ತು ಯುಗಧರ್ಮೋ ಹಿ ವರ್ತತೇ ಕಸ್ಯ ದೂಷಣಮ್ ।
ಅತಸ್ತು ಪುಂಡರೀಕಾಕ್ಷಃ ಸಹತೇ ನಿಕಟೇ ಸ್ಥಿತಃ ॥ ೭೭

ಸೂತ ಉವಾಚ

ಇತಿ ತದ್ವಚನಂ ಶ್ರುತ್ವಾ ವಿಸ್ಮಯಂ ಪರಮಂ ಗತಾ ।
ಭಕ್ತಿರೂಚೇ ವಚೋ ಭೂಯಃ ಶ್ರೂಯತಾಂ ತಚ್ಚ ಶೌನಕ ॥ ೭೮

ಭಕ್ತಿರುವಾಚ—

ಸುರರ್ಷೇ ತ್ವಂ ಹಿ ಧನ್ಯೋಽಸಿ ಮದ್ಭಾಗ್ಯೇನ ಸಮಾಗತಃ ।
ಸಾಧೂನಾಂ ದರ್ಶನಂ ಲೋಕೇ ಸರ್ವಸಿದ್ಧಿಕರಂ ಪರಮ್ ॥ ೭೯

ಜಯತಿ ಜಗತಿ ಮಾಯಾಂ ಯಸ್ಯ ಕಾಯಾಧವಸ್ತೇ
ವಚನರಚನಮೇಕಂ ಕೇವಲಂ ಚಾಕಲಯ್ಯ ।
ಧ್ರುವಪದಮಪಿ ಯಾತೋ ಯತ್ಕೃಪಾತೋ ಧ್ರುವೋಽಯಂ
ಸಕಲಕುಶಲಪಾತ್ರಂ ಬ್ರಹ್ಮಪುತ್ರಂ ನತಾಸ್ಮಿ ॥ ೮೦

ಇತಿ ಶ್ರೀಪದ್ಮಪುರಾಣೇ ಉತ್ತರಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ
ಭಕ್ತಿನಾರದ ಸಮಾಗಮೋ ನಾಮ ಪ್ರಥಮಾಧ್ಯಾಯಃ

---

ವಾಗಿ ವಿಷ್ಣುಭಕ್ತಿಯಲ್ಲಿ ನಿಷ್ಠೆಯೆಂಬುದು ಎಲ್ಲಿಯೂ ಇಲ್ಲ. ಹೀಗಾದ್ದರಿಂದ ಎಲ್ಲೆಲ್ಲಿಯೂ ವಸ್ತುಗಳಲ್ಲಿ ಸಾರಭಾಗವು ನಾಶವಾಗಿದೆ. ಇದೆಲ್ಲವೂ ಯುಗ ಧರ್ಮವಾದ್ದರಿಂದ ಯಾರನ್ನು ದೂಷಿಸಬೇಕು? ಆದ್ದರಿಂದ ಪುಂಡರೀಕಾಕ್ಷನಾದ ಶ್ರೀಹರಿಯು ಬಳಿಯಲ್ಲಿದ್ದರೂ ಸಹಿಸಿಕೊಂಡಿದ್ದಾನೆ" ಎಂದರು (೭೬–೭೭). ಶೌನಕರೆ, ಹೀಗೆ ನಾರದರು ಹೇಳಿದ್ದನ್ನು ಕೇಳಿ ಪರಮಾಶ್ಚರ್ಯಭರಿತಳಾದ ಭಕ್ತಿಯು ಈ ಮಾತನ್ನಾಡಿದಳು. ಏನೆಂದರೆ, "ದೇವರ್ಷಿನಾರದರೆ, ನೀವೇ ಧನ್ಯರು. ನನ್ನ ಭಾಗ್ಯವಶದಿಂದ ಇಲ್ಲಿಗೆ ಆಗಮಿಸಿದ್ದೀರಿ ಲೋಕದಲ್ಲಿ ಸಾಧುಗಳ ದರ್ಶನವು ಸರ್ವಸಿದ್ಧಿಪ್ರದವಾದುದು (೭೮–೭೯). ಕೇವಲ ಯಾರ ಒಂದು ಮಾತನ್ನಾಲಿಸಿದ್ದರಿಂದ ಕಯಾಧೂಪುತ್ರನಾದ ಪ್ರಹ್ಲಾದನು ಜಗತ್ತಿನಲ್ಲಿ ಹರಡಿದ ಸಂಸಾರ ಮಾಯೆಯನ್ನು ಗೆದ್ದುಬಿಟ್ಟನೋ, ಹಾಗೆಯೇ ಧ್ರುವಕುಮಾರನು ಶಾಶ್ವತವಾದ ವಿಷ್ಣುಪದವನ್ನು ಪಡೆದನೋ, ಅಂತಹ, ಸಕಲಶ್ರೇಯಸ್ಸುಗಳಿಗೆ ಭಾಜನರೂ ಬ್ರಹ್ಮದೇವನ ಮಾನಸಪುತ್ರರೂ ಆದ ನಾರದಮುನಿಗಳಿಗೆ ನಮಸ್ಕರಿಸುತ್ತೇನೆ" ಎಂದಳು (೮೦).

ಇಲ್ಲಿಗೆ ಶ್ರೀಪದ್ಮಪುರಾಣದ ಉತ್ತರಖಂಡದಲ್ಲಿ ಒಂದನೆಯ ಅಧ್ಯಾಯ

# ದ್ವಿತೀಯೋಧ್ಯಾಯಃ

ನಾರದ ಉವಾಚ—

ವೃಥಾ ಖೇದಯಸೇ ಬಾಲೇ ಅಹೋ ಚಿಂತಾತುರಾ ಕಥಮ್ ।
ಶ್ರೀಕೃಷ್ಣಚರಣಾಂಭೋಜಂ ಸ್ಮರ ದುಃಖಂ ಗಮಿಷ್ಯತಿ ॥ ೧

ದ್ರೌಪದೀ ಚ ಪರಿತ್ರಾತಾ ಯೇನ ಕೌರವಕಶ್ಮಲಾತ್ ।
ಪಾಲಿತಾ ಗೋಪಸುಂದರ್ಯಃ ಸ ಕೃಷ್ಣಃ ಕ್ವಾಪಿ ನೋ ಗತಃ ॥ ೨

ತ್ವಂ ತು ಭಕ್ತಿಃ ಪ್ರಿಯಾ ತಸ್ಯ ಸತತಂ ಪ್ರಾಣತೋಽಧಿಕಾ ।
ತ್ವಯಾಽಽಹೂತಸ್ತು ಭಗವಾನ್ ಯಾತಿ ನೀಚಗೃಹೇಷ್ವಪಿ ॥ ೩

ಸತ್ಯಾದಿತ್ರಿಯುಗೇ ಬೋಧವೈರಾಗ್ಯೌ ಮುಕ್ತಿಸಾಧಕೌ ।
ಕಲೌ ತು ಕೇವಲಾ ಭಕ್ತಿರ್ಬ್ರಹ್ಮಸಾಯುಜ್ಯಕಾರಿಣೀ ॥ ೪

## ಅಧ್ಯಾಯ ೨

ಭಕ್ತಿ-ನಾರದರ ಸಂಭಾಷಣೆ. ನಾರದರಿಗೆ ಸನತ್ಕುಮಾರಾದಿಗಳ ಸಂದರ್ಶನ.
ಭಾಗವತದ ಮಹಿಮೆ.

ನಾರದರು ಭಕ್ತಿಗೆ ಹೇಳಿದರು : “ಬಾಲಿಕೆ, ವ್ಯರ್ಥವಾಗಿ ಖೇದಪಡುತ್ತಿರುವೆಯಲ್ಲ. ಇಷ್ಟೇಕೆ ಚಿಂತೆಯಿಂದ ಉದ್ವಿಗ್ನಳಾಗಿದ್ದೀಯೆ ? ಶ್ರೀಕೃಷ್ಣನ ಪಾದಕಮಲವನ್ನು ಸ್ಮರಿಸುತ್ತಿರು. ನಿನ್ನ ದುಃಖವು ಹೊರಟುಹೋಗುವುದು (೧). ಯಾವಾತನು ದ್ರೌಪದಿಯನ್ನು ಕೌರವರ ಪಾಪಕೃತ್ಯದಿಂದ ರಕ್ಷಿಸಿದನೋ ಗೋಪಿಯರನ್ನು ಪಾಲಿಸಿದನೋ ಆ ಶ್ರೀಕೃಷ್ಣನು ಎಲ್ಲಿಗೂ ಹೊರಟುಹೋಗಿಲ್ಲ. ಭಕ್ತಿಯೆಂಬ ನೀನು ಆತನಿಗೆ ಪ್ರಾಣಕ್ಕಿಂತಲೂ ಪ್ರಿಯಳಾದವಳು. ನೀನು ಕರೆದರೆ ಆ ಭಗವಂತನು ಬರದಿರುವನೆ ? ಪ್ರೀತಿಯಿಂದ ಕರೆದರೆ ಕೀಳುಮಟ್ಟದ ಜನರ ಮನೆಗೆ ಸಹ ಅವನು ಹೋಗತಕ್ಕವನು (೨-೩). ‘ಕೃತ, ತ್ರೇತಾ, ದ್ವಾಪರಗಳೆಂಬ ಮೂರು ಯುಗಗಳಲ್ಲಿ ಜ್ಞಾನವೈರಾಗ್ಯಗಳು ಮುಕ್ತಿಗೆ ಸಾಧಕರಾಗಿದ್ದರು. ಕಲಿಯುಗದಲ್ಲಾದರೋ ಕೇವಲ ಭಕ್ತಿಯೊಂದೇ ಬ್ರಹ್ಮಸಾಯುಜ್ಯವನ್ನು ಸಾಧಿಸಿ ಕೊಡತಕ್ಕವಳು’ ಹೀಗೆಂದು ನಿಶ್ಚಯಿಸಿ ಪರಮಾನಂದ ಚಿನ್ಮೂರ್ತಿಯಾದ

ಇತಿ ನಿಶ್ಚಿತ್ಯ ಚಿದ್ರೂಪಃ ಸದ್ರೂಪಾಂ ತ್ವಾಂ ಸಸರ್ಜ ಹ ।
ಪರಮಾನಂದಚಿನ್ಮೂರ್ತಿಃ ಸುಂದರೀಂ ಕೃಷ್ಣವಲ್ಲಭಾಮ್ ॥ ೫

ಬದ್ಧ್ವಾಂಜಲಿಂ ತ್ವಯಾ ಪೃಷ್ಟಂ ಕಿಂ ಕರೋಮೀತಿ ಚೈಕದಾ ।
ತ್ವಾಂ ತದಾಽಽಜ್ಞಾಪಯತ್ಕೃಷ್ಣೋ ಮದ್ಭಕ್ತಾನ್ ಪೋಷಯೇತಿ ಚ ॥ ೬

ಅಂಗೀಕೃತಂ ತ್ವಯಾ ತದ್ವೈ ಪ್ರಸನ್ನೋಽಭೂದ್ಧರಿಸ್ತದಾ ।
ಮುಕ್ತಿಂ ದಾಸೀಂ ದದೌ ತುಭ್ಯಂ ಜ್ಞಾನವೈರಾಗ್ಯಕಾವಿಮೌ ॥ ೭

ಪೋಷಣಂ ಸ್ವೇನ ರೂಪೇಣ ವೈಕುಂಠೇ ತ್ವಂ ಕರೋಷಿ ಚ ।
ಭೂಮೌ ಭಕ್ತವಿಪೋಷಾಯ ಛಾಯಾರೂಪಂ ತ್ವಯಾ ಕೃತಮ್ ॥ ೮

ಮುಕ್ತಿಂ ಜ್ಞಾನಂ ವಿರಕ್ತಿಂ ಚ ಸಹ ಕೃತ್ವಾಗತಾ ಭುವಿ ।
ಕೃತಾದಿದ್ವಾಪರಸ್ಯಾಂತಂ ಮಹಾನಂದೇನ ಸಂಸ್ಥಿತಾ ॥ ೯

ಕಲೌ ಮುಕ್ತಿಃ ಕ್ಷಯಂ ಪ್ರಾಪ್ತಾ ಪಾಖಂಡಾಮಯಪೀಡಿತಾ ।
ತ್ವದಾಜ್ಞಯಾ ಗತಾ ಶೀಘ್ರಂ ವೈಕುಂಠಂ ಪುನರೇವ ಸಾ ॥ ೧೦

---

ಭಗವಂತನು ಶ್ರೀಕೃಷ್ಣವಲ್ಲಭೆಯೂ ಸುಂದರಿಯೂ ಸದ್ರೂಪಳೂ ಆದ ನಿನ್ನನ್ನು ಸೃಷ್ಟಿಸಿದ್ದಾನೆ (೪–೫). ಒಂದುಸಲ ಶ್ರೀಕೃಷ್ಣನನ್ನು ಕುರಿತು ನೀನು ಬದ್ಧಾಂಜಲಿಯಾಗಿ 'ನನ್ನ ಕರ್ತವ್ಯವೇನು?' ಎಂದು ಕೇಳಿದ್ದೀಯೆ. ಆಗ ಶ್ರೀಕೃಷ್ಣನು 'ನನ್ನ ಭಕ್ತರನ್ನು ಪೋಷಿಸಬೇಕು' ಎಂದು ನಿನಗೆ ಆಜ್ಞಾಪಿಸಿದ್ದಾನೆ. ಅದಕ್ಕೆ ನೀನು ಒಪ್ಪಿಕೊಂಡೆ. ಆಗ ಪ್ರಸನ್ನನಾದ ಶ್ರೀಹರಿಯು ಮುಕ್ತಿಯನ್ನು ನಿನ್ನ ದಾಸಿಯನ್ನಾಗಿಯೂ ಈ ಜ್ಞಾನವೈರಾಗ್ಯರನ್ನು (ಪುತ್ರರನ್ನಾಗಿಯೂ) ನಿನಗೆ ಅನುಗ್ರಹಿಸಿದನು (೬–೭). ನಿನ್ನ ನಿಜಸ್ವರೂಪವನ್ನು ಧರಿಸಿ ವೈಕುಂಠದಲ್ಲಿ ಭಕ್ತರ ಪೋಷಣೆಯನ್ನು ಮಾಡುತ್ತಿದ್ದೀಯೆ. ಭೂಲೋಕದಲ್ಲಿ ಭಕ್ತರನ್ನು ಪೋಷಿಸುವುದಕ್ಕಾಗಿ ಛಾಯಾರೂಪವನ್ನು ಧರಿಸಿದ್ದೀಯೆ (೮). ಭೂಲೋಕಕ್ಕೆ ಮುಕ್ತಿ, ಜ್ಞಾನ, ವೈರಾಗ್ಯರನ್ನು ಜೊತೆಗೆ ಕರೆದುಕೊಂಡು ಬಂದಿದ್ದೀಯೆ. ಕೃತ, ತ್ರೇತಾ, ದ್ವಾಪರಯುಗಗಳು ಕಳೆಯುವವರೆಗೆ ಪರಮಾನಂದದಿಂದ ಕಾಲಯಾಪನೆ ಮಾಡಿದೆ. ಕಲಿಯುಗದಲ್ಲಿ ಮಾತ್ರ ಪಾಖಂಡಜನರೆಂಬ ರೋಗದಿಂದ ಮುಕ್ತಿಯು ಕ್ಷೀಣತೆಯನ್ನು ಹೊಂದಿ, ನಿನ್ನ ಆಜ್ಞೆಯಂತೆ ಅವಳು ಮತ್ತೆ ವೈಕುಂಠಕ್ಕೆ ಹೋಗಿಬಿಟ್ಟಳು (೯–೧೦).

ಸ್ಮೃತಾ ತ್ವಯಾಪಿ ಚಾತ್ರೈವ ಮುಕ್ತಿರಾಯಾತಿ ಯಾತಿ ಚ ।
ಪುತ್ರೀಕೃತ್ಯ ತ್ವಯೇಮೌ ಚ ಪಾರ್ಶ್ವೇ ಸ್ವಸ್ಯೈವ ರಕ್ಷಿತೌ ॥ ೧೧

ಉಪೇಕ್ಷಾತಃ ಕಲೌ ಮಂದೌ ವೃದ್ಧೌ ಜಾತೌ ಸುತೌ ತವ ।
ತಥಾಪಿ ಚಿಂತಾಂ ಮುಂಚ ತ್ವಮುಪಾಯಂ ಚಿಂತಯಾಮ್ಯಹಮ್ ॥ ೧೨

ಕಲಿನಾ ಸದೃಶಃ ಕೋಽಪಿ ಯುಗೋ ನಾಸ್ತಿ ವರಾನನೇ ।
ತಸ್ಮಿಂಸ್ತ್ವಾಂ ಸ್ಥಾಪಯಿಷ್ಯಾಮಿ ಗೇಹೇ ಗೇಹೇ ಜನೇ ಜನೇ ॥ ೧೩

ಅನ್ಯಧರ್ಮಾಂಸ್ತಿರಸ್ಕೃತ್ಯ ಪುರಸ್ಕೃತ್ಯ ಮಹೋತ್ಸವಾನ್ ।
ತದಾ ನಾಹಂ ಹರೇರ್ದಾಸೋ ಲೋಕೇ ತ್ವಾಂ ನ ಪ್ರವರ್ತಯೇ ॥ ೧೪

ತ್ವದನ್ವಿತಾಶ್ಚ ಯೇ ಜೀವಾ ಭವಿಷ್ಯಂತಿ ಕಲಾವಿಹ ।
ಪಾಪಿನೋಽಪಿ ಗಮಿಷ್ಯಂತಿ ನಿರ್ಭಯಂ ಕೃಷ್ಣಮಂದಿರಮ್ ॥ ೧೫

---

ನೀನು ಅವಳನ್ನು ಆಗಾಗ ಸ್ಮರಿಸಿಕೊಂಡಾಗ ಮುಕ್ತಿಯು ಇಲ್ಲಿಗೆ ಬರುತ್ತಾಳೆ. ಮತ್ತೆ ಹೊರಟುಹೋಗಿಬಿಡುತ್ತಾಳೆ! ಈ ಜ್ಞಾನ ವೈರಾಗ್ಯರನ್ನು ಮಾತ್ರ ನೀನು ಪುತ್ರರೆಂಬ ಭಾವನೆಯಿಂದ ಇಲ್ಲಿಯೇ ರಕ್ಷಿಸಿಕೊಂಡಿದ್ದೀಯೆ. ಈ ಕಲಿಯುಗದಲ್ಲಿ ಜನರ ಉಪೇಕ್ಷೆಗೆ ಒಳಗಾಗಿ ಇವರಿಬ್ಬರು ನಿನ್ನ ಪುತ್ರರು, ಮಂದರೂ ಜೀರ್ಣರೂ ಆಗಿಬಿಟ್ಟಿದ್ದಾರೆ. ಆದರೆ ಚಿಂತಿಸಬೇಡ. ಇದಕ್ಕೆ ಪರಿಹಾರೋಪಾಯವನ್ನು ಆಲೋಚಿಸುತ್ತೇನೆ (೧೧-೧೨) ಎಲೌ ಭದ್ರೆ, ಕಲಿಯುಗಕ್ಕೆ ಸದೃಶವಾದ ಇನ್ನೊಂದು ಕಾಲವಿಲ್ಲ. ನಿನ್ನನ್ನು ಮನೆ ಮನೆಯಲ್ಲಿಯೂ ಜನಜನರಲ್ಲಿಯೂ ನಾನು ಸ್ಥಾಪಿಸುತ್ತೇನೆ, ನೋಡುತ್ತಿರು. ಅನ್ಯಧರ್ಮಗಳನ್ನು ನಿವಾರಿಸಿ ಹರಿಮಹೋತ್ಸವಗಳ ಪೂರ್ವಕ ನಿನ್ನನ್ನು ನಾನು ಮತ್ತೆ ಸ್ಥಾಪಿಸದಿದ್ದರೆ, ನಿನಗೆ ಚಾಲನೆಯನ್ನು ಕೊಡದಿದ್ದರೆ, ನಾನು ಹರಿದಾಸನೇ ಅಲ್ಲ! (೧೩–೧೪). ಈ ಕಲಿಯುಗದಲ್ಲಿ ಯಾವ ಜೀವಿಗಳು ಪಾಪಿಗಳಾಗಿದ್ದರೂ ಭಕ್ತಿಯಾದ ನಿನ್ನೊಡನೆ ಸ್ನೇಹ ಬೆಳೆಸಿದರೆ ಯಾವ ಆತಂಕವೂ ಇಲ್ಲದೆ ಶ್ರೀಕೃಷ್ಣನನ್ನು ಸೇರಬಲ್ಲರು. ಯಾರ ಹೃದಯದಲ್ಲಿ ಪ್ರೇಮರೂಪಿಯಾದ ಭಕ್ತಿಯು ಸರ್ವದಾ ನೆಲೆಸಿರುವುದೋ ಅವರು ಪಾಪರಹಿತರಾಗಿ ಪರಿಶುದ್ಧರಾಗು

*

ಯೇಷಾಂ ಚಿತ್ತೇ ವಸೇದ್ಭಕ್ತಿಃ ಸರ್ವದಾ ಪ್ರೇಮರೂಪಿಣೀ ।
ನ ತೇ ಪಶ್ಯಂತಿ ಕೀನಾಶಂ ಸ್ವಪ್ನೇऽಪ್ಯಮಲಮೂರ್ತಯಃ ॥ ೧೬

ನ ಪ್ರೇತೋ ನ ಪಿಶಾಚೋ ವಾ ರಾಕ್ಷಸೋ ವಾಸುರೋऽಪಿ ವಾ ।
ಭಕ್ತಿಯುಕ್ತಮನಸ್ಕಾನಾಂ ಸ್ಪರ್ಶನೇ ನ ಪ್ರಭುರ್ಭವೇತ್ ॥ ೧೭

ನ ತಪೋಭಿರ್ನ ವೇದೈಶ್ಚ ನ ಜ್ಞಾನೇನಾಪಿ ಕರ್ಮಣಾ ।
ಹರಿರ್ಹಿ ಸಾಧ್ಯತೇ ಭಕ್ತ್ಯಾ ಪ್ರಮಾಣಂ ತತ್ರ ಗೋಪಿಕಾಃ ॥ ೧೮

ನೃಣಾಂ ಜನ್ಮಸಹಸ್ರೇಣ ಭಕ್ತೌ ಪ್ರೀತಿರ್ಹಿ ಜಾಯತೇ ।
ಕಲೌ ಭಕ್ತಿಃ ಕಲೌ ಭಕ್ತಿರ್ಭಕ್ತ್ಯಾ ಕೃಷ್ಣಃ ಪುರಃ ಸ್ಥಿತಃ ॥ ೧೯

ಭಕ್ತಿದ್ರೋಹಕರಾ ಯೇ ಚ ತೇ ಸೀದಂತಿ ಜಗತ್ತ್ರಯೇ ।
ದುರ್ವಾಸಾ ದುಃಖಮಾಪನ್ನಃ ಪುರಾ ಭಕ್ತವಿನಿಂದಕಃ ॥ ೨೦

ಅಲಂ ವ್ರತೈರಲಂ ತೀರ್ಥೈರಲಂ ಯೋಗೈರಲಂ ಮಖೈಃ ।
ಅಲಂ ಜ್ಞಾನಕಥಾಲಾಪೈರ್ಭಕ್ತಿರೇಕೈವ ಮುಕ್ತಿದಾ ॥ ೨೧

---

ವರು. ಕನಸಿನಲ್ಲಿಯೂ ಅವರಿಗೆ ಯಮದರ್ಶನವಾಗುವುದಿಲ್ಲ (೧೫–೧೬). ಪ್ರೇತ, ಪಿಶಾಚಿ, ರಾಕ್ಷಸ, ಅಸುರರಲ್ಲಿ ಯಾವನೂ ಸಹ ಭಕ್ತಿಯುಕ್ತಚಿತ್ತರನ್ನು ಮುಟ್ಟಲೂ ಸಮರ್ಥನಲ್ಲ. ತಪಸ್ಸು, ವೇದ, ಜ್ಞಾನ, ಕರ್ಮ—ಇವುಗಳಿಂದ (ಸುಲಭವಾಗಿ) ಹರಿಯನ್ನು ಒಲಿಸಿಕೊಳ್ಳಲು ಶಕ್ಯವಲ್ಲ. ಭಕ್ತಿಯಿಂದ ಮಾತ್ರ (ಸುಖವಾಗಿ) ಅವನನ್ನು ಮೆಚ್ಚಿಸಬಹುದು. ಗೋಪಸ್ತ್ರೀಯರೇ ಇದಕ್ಕೆ ನಿದರ್ಶನ (೧೭–೧೮). ಮನುಷ್ಯರಿಗೆ ಸಾವಿರಜನ್ಮಗಳಲ್ಲಿ ಮಾಡಿದ ಪುಣ್ಯದ ಬಲದಿಂದ ಶ್ರೀಹರಿಯಲ್ಲಿ ಭಕ್ತಿಯನ್ನಿಡಲು ಆಸಕ್ತಿಹುಟ್ಟುವುದು. ಕಲಿಯುಗದಲ್ಲಿ ಭಕ್ತಿಯೇ ಮುಖ್ಯವಾದದ್ದು, ಭಕ್ತಿಯೇ ಮುಖ್ಯವಾದದ್ದು. ಭಕ್ತಿಯಿದ್ದರೆ ಶ್ರೀಕೃಷ್ಣನು ಎದುರಿಗೆ ನಿಂತಿದ್ದಾನೆಂದು ತಿಳಿಯಬೇಕು (೧೯). ಯಾರು ಭಕ್ತಿಗೆ ದ್ರೋಹವನ್ನು ಮಾಡುವರೋ ಅವರು ಮೂರು ಲೋಕಗಳಲ್ಲಿಯೂ ಕಷ್ಟಕ್ಕೆ ಒಳಗಾಗುತ್ತಾರೆ. ಹಿಂದೆ ದುರ್ವಾಸಮುನಿಯು ಭಕ್ತನೊಬ್ಬನನ್ನು (ಅಂಬರೀಷನನ್ನು) ನಿಂದಿಸಿ ಕಷ್ಟಕ್ಕೆ ಸಿಕ್ಕಿದ್ದನು. ವ್ರತಗಳೂ ಸಾಕು, ತೀರ್ಥಾಟನೆಗಳೂ ಸಾಕು, ಯೋಗಸಾಧನೆಗಳೂ ಸಾಕು. ಯಾಗಗಳೂ ಬೇಡ, ಜ್ಞಾನವಿಚಾರಗಳೂ ಬೇಡ, ಕೇವಲ ಭಕ್ತಿಯೊಂದೇ ಮುಕ್ತಿಯನ್ನು ಸಾಧಿಸಬಲ್ಲದು" ಎಂದರು (೨೦–೨೧).

ಸೂತ ಉವಾಚ—

ಇತಿ ನಾರದನಿರ್ಣೀತಂ ಸ್ವಮಾಹಾತ್ಮ್ಯಂ ನಿಶಮ್ಯ ಸಾ ।
ಸರ್ವಾಂಗಪುಷ್ಟಿಸಂಯುಕ್ತಾ ನಾರದಂ ವಾಕ್ಯಮಬ್ರವೀತ್ ॥ ೨೨

ಭಕ್ತಿರುವಾಚ—

ಅಹೋ ನಾರದ ಧನ್ಯೋಽಸ್ಮಿ ಪ್ರೀತಿಸ್ತೇ ಮಯಿ ನಿಶ್ಚಲಾ ।
ನ ಕದಾಚಿದ್ವಿಮುಂಚಾಮಿ ಚಿತ್ತೇ ಸ್ಥಾಸ್ಯಾಮಿ ಸರ್ವದಾ ॥ ೨೩

ಕೃಪಾಲುನಾ ತ್ವಯಾ ಸಾಧೋ ಮದ್ಬಾಧಾ ಧ್ವಂಸಿತಾ ಕ್ಷಣಾತ್ ।
ಪುತ್ರಯೋಶ್ಚೇತನಾ ನಾಸ್ತಿ ತತೋ ಬೋಧಯ ಬೋಧಯ ॥ ೨೪

ಸೂತ ಉವಾಚ—

ತಸ್ಯಾ ವಚಃ ಸಮಾಕರ್ಣ್ಯ ಕಾರುಣ್ಯಂ ನಾರದೋ ಗತಃ ।
ತಯೋರ್ಬೋಧನಮಾರೇಭೇ ಕರಾಗ್ರೇಣ ವಿಮರ್ದಯನ್ ॥ ೨೫

ಮುಖಂ ಸಂಯೋಜ್ಯ ಕರ್ಣಾಂತೇ ಶಬ್ದಮುಚ್ಚೈಃ ಸಮುಚ್ಚರನ್ ।
ಜ್ಞಾನ ಪ್ರಬುಧ್ಯತಾಂ ಶೀಘ್ರಂ ರೇ ವೈರಾಗ್ಯ ಪ್ರಬುಧ್ಯತಾಮ್ ॥ ೨೬

---

ಹೀಗೆ ನಾರದರು ಭಕ್ತಿಗೆ ಅವಳ ಮಹಿಮೆಯನ್ನು ವರ್ಣಿಸಿ ಹೇಳಲಾಗಿ ಅವಳಿಗೆ ಸರ್ವಾಂಗಗಳಲ್ಲಿಯೂ ಪುಷ್ಟಿ ಬಂದಂತಾಯಿತು. ಅವಳು ನಾರದರನ್ನು ಕುರಿತು "ಓ ನಾರದರೆ, ನೀವೇ ಧನ್ಯರು. ನನ್ನಲ್ಲಿ ನಿಮಗೆ ನಿಶ್ಚಲವಾದ ಪ್ರೀತಿಯುಂಟು. ನಿಮ್ಮ ಹೃದಯದಲ್ಲಿ ಸದಾ ನೆಲೆಸಿರುತ್ತೇನೆ. ಎಂದಿಗೂ ಅಲ್ಲಿಂದ ನಾನು ಕದಲುವುದಿಲ್ಲ. ಸಾಧುಗಳೆ, ದಯಾಳುಗಳಾದ ನೀವು ನನ್ನ ಯಾತನೆಯನ್ನು ಒಂದು ಕ್ಷಣ ಮಾತ್ರದಲ್ಲಿ ಹೋಗಲಾಡಿಸಿದಿರಿ. ಆದರೆ ಈ ಮಕ್ಕಳಿಗೆ ಚೈತನ್ಯವು ಬರಲಿಲ್ಲ, ಇವರನ್ನು ಎಚ್ಚರಗೊಳಿಸಿರಿ" ಎಂದಳು (೨೨–೨೪). ಮತ್ತೆ ಸೂತರು ಹೇಳಿದ್ದೇನೆಂದರೆ "ಶೌನಕರೆ, ಭಕ್ತಿಯ ಈ ಮಾತನ್ನು ಕೇಳಿ ಕರುಣಾರ್ದ್ರಹೃದಯರಾದ ನಾರದರು ಜ್ಞಾನವೈರಾಗ್ಯರ ಮೈ ದಡವುತ್ತ ಅವರನ್ನು ಎಚ್ಚರಗೊಳಿಸಲು ಪ್ರಯತ್ನಿಸಿದರು. ಅವರಿಬ್ಬರ ಕಿವಿಗಳ ಸಮೀಪದಲ್ಲಿ ತಮ್ಮ ಮುಖವನ್ನಿಟ್ಟು "ಏ ಜ್ಞಾನ, ಎಚ್ಚರವಾಗು! ಏ ವೈರಾಗ್ಯ, ಎಚ್ಚರವಾಗು! ಬೇಗನೆ, ಬೇಗನೆ" ಎಂದರು (೨೫–೨೬).

ವೇದವೇದಾಂತಘೋಷೈಶ್ಚ ಗೀತಾಪಾಠೈರ್ಮುಹುರ್ಮುಹುಃ ।
ಬೋಧ್ಯಮಾನೌ ತದಾ ತೇನ ಕಥಂಚಿಚ್ಚೋತ್ಥಿತೌ ಬಲಾತ್ ॥ ೨೭

ನೇತ್ರೈರನವಲೋಕಂತೌ ಜೃಂಭಂತೌ ಸಾಲಸಾವುಭೌ ।
ಬಕವತ್ಪಲಿತೌ ಪ್ರಾಯಃ ಶುಷ್ಕಕಾಷ್ಠಸಮಾಂಗಕೌ ॥ ೨೮

ಕ್ಷುತ್ಕ್ಷಾಮೌ ತೌ ನಿರೀಕ್ಷ್ಯೈವ ಪುನಃ ಸ್ವಾಪಪರಾಯಣೌ ।
ಋಷಿಶ್ಚಿಂತಾಪರೋ ಜಾತಃ ಕಿಂ ವಿಧೇಯಂ ಮಯೇತಿ ಚ ॥ ೨೯

ಅಹೋ ನಿದ್ರಾ ಕಥಂ ಯಾತಿ ವೃದ್ಧತ್ವಂ ಚ ಮಹತ್ತರಮ್ ।
ಚಿಂತಯನ್ನಿತಿ ಗೋವಿಂದಂ ಸ್ಮಾರಯಾಮಾಸ ಭಾರ್ಗವ ॥ ೩೦

ವ್ಯೋಮವಾಣೀ ತದೈವಾಭೂನ್ಮಾ ಋಷೇ ಖಿದ್ಯತಾಮಿತಿ ।
ಉದ್ಯಮಃ ಸಫಲಸ್ತೇಽಯಂ ಭವಿಷ್ಯತಿ ನ ಸಂಶಯಃ ॥ ೩೧

ಏತದರ್ಥಂ ತು ಸತ್ಕರ್ಮ ಸುರರ್ಷೇ ತ್ವಂ ಸಮಾಚರ ।
ತತ್ತೇ ಕರ್ಮಾಭಿಧಾಸ್ಯಂತಿ ಸಾಧವಃ ಸಾಧುಭೂಷಣಾಃ ॥ ೩೨

---

ವೇದೋಪನಿಷತ್ತುಗಳನ್ನು ಗಟ್ಟಿಯಾಗಿ ಪಠಿಸಿದರು. ಗೀತಾ ಶ್ಲೋಕಗಳನ್ನುಚ್ಚರಿಸಿದರು. ಹೀಗೆ ಮತ್ತೆ ಮತ್ತೆ ಮಾಡುತ್ತಿರಲಾಗಿ ಜ್ಞಾನವೈರಾಗ್ಯರು ಕಷ್ಟದಿಂದ ಹೇಗೋ ಎಚ್ಚೆತ್ತರು. ಅವರಿಬ್ಬರಿಗೂ ಕಣ್ಣು ಬಿಡಲಾಗುತ್ತಿರಲಿಲ್ಲ! ಆಲಸ್ಯದಿಂದ ಆಕಳಿಸುತ್ತಿದ್ದರು! ಅವರ ಕೂದಲು ಬಕಪಕ್ಷಿಯಂತೆ ಬೆಳ್ಳಗಾಗಿತ್ತು. ಅವರ ಅವಯವಗಳು ಒಣಗಿದ ಕಟ್ಟಿಗೆಯಂತಾಗಿದ್ದವು (೨೭–೨೮). ಹಸಿವಿನಿಂದ ಬಳಲಿದ್ದ ಅವರು ನಾರದ ಮುನಿಗಳನ್ನು ಒಮ್ಮೆ ನೋಡಿ, ಮತ್ತೆ ನಿದ್ರಾವಶರಾದರು! ಆಗ ನಾರದರಿಗೆ 'ಈಗ ನಾನು ಏನು ಮಾಡಬೇಕು?' ಎಂಬ ಚಿಂತೆ ಕಾಡಿಸತೊಡಗಿತು. "ಅಯ್ಯೋ ನಿದ್ರೆಯೇ! ಇದು ಹೋಗುವ ಬಗೆ ಯಾವುದು? ಇವರ ಈ ಮುಪ್ಪು ಹಿಂಜರಿಯುವುದು ಹೇಗೆ?" ಎಂದು ಚಿಂತಾಪರರಾಗಿ ಗೋವಿಂದನನ್ನು ಸ್ಮರಿಸತೊಡಗಿದರು (೨೯–೩೦) ಶೌನಕರೆ, ಆಗ ಒಂದು ಆಕಾಶವಾಣಿಯುಂಟಾಗಿ "ಋಷಿಯೇ, ಖಿನ್ನನಾಗಬೇಡ. ನಿನ್ನ ಉದ್ಯಮವು ಫಲಿಸುವುದು. ಸಂದೇಹ ಬೇಡ. ಹೇ ದೇವರ್ಷಿ, ಇದಕ್ಕಾಗಿ ನೀನೊಂದು ಸತ್ಕರ್ಮವನ್ನು ಮಾಡಬೇಕಾಗುವುದು. ಸಾಧುಗಳಿಗೆ ಭೂಷಣ

ಸತ್ಕರ್ಮಣಿ ಕೃತೇ ತಸ್ಮಿನ್ ಸನಿದ್ರಾ ವೃದ್ಧತಾನಯೋಃ ।
ಗಮಿಷ್ಯತಿ ಕ್ಷಣಾದ್ಭಕ್ತಿಃ ಸರ್ವತಃ ಪ್ರಸರಿಷ್ಯತಿ ॥ ೩೩

ಇತ್ಯಾಕಾಶವಚಃ ಸ್ಪಷ್ಟಂ ತತ್ಸರ್ವೈರಪಿ ವಿಶ್ರುತಮ್ ।
ನಾರದೋ ವಿಸ್ಮಯಂ ಲೇಭೇ ನೇದಂ ಜ್ಞಾತಮಿತಿ ಬ್ರುವನ್ ॥ ೩೪

ನಾರದ ಉವಾಚ—

ಅನಯಾಽಽಕಾಶವಾಣ್ಯಾಪಿ ಗೋಪ್ಯತ್ವೇನ ನಿರೂಪಿತಮ್ ।
ಕಿಂ ವಾ ತತ್ಸಾಧನಂ ಕಾರ್ಯಂ ಯೇನ ಕಾರ್ಯಂ ಭವೇತ್ತಯೋಃ ॥ ೩೫

ಕ್ವ ಭವಿಷ್ಯಂತಿ ಸಂತಸ್ತೇ ಕಥಂ ದಾಸ್ಯಂತಿ ಸಾಧನಮ್ ।
ಮಯಾತ್ರ ಕಿಂ ಪ್ರಕರ್ತವ್ಯಂ ಯದುಕ್ತಂ ವ್ಯೋಮಭಾಷಯಾ ॥ ೩೬

ಸೂತ ಉವಾಚ—

ತತ್ರ ದ್ವಾವಪಿ ಸಂಸ್ಥಾಪ್ಯ ನಿರ್ಗತೋ ನಾರದೋ ಮುನಿಃ ।
ತೀರ್ಥಂ ತೀರ್ಥಂ ವಿನಿಷ್ಕ್ರಮ್ಯ ಪೃಚ್ಛನ್ಮಾರ್ಗೇ ಮುನೀಶ್ವರಾನ್ ॥ ೩೭

---

ಪ್ರಾಯರಾದ ಕೆಲವು ಸಜ್ಜನರು ಆ ಸತ್ಕರ್ಮವಾವುದೆಂಬುದನ್ನು ನಿನಗೆ ತಿಳಿಸುವರು (೩೧–೩೨). ಆ ಸತ್ಕಾರ್ಯವನ್ನು ನೀನು ನಡೆಸಿದೊಡನೆಯೇ ಇವರಿಬ್ಬರ ನಿದ್ರೆಯೂ ವೃದ್ಧತ್ವವೂ ತೊಲಗಿಹೋಗುವುದು. ಭಕ್ತಿಯು ಎಲ್ಲೆಲ್ಲಿಯೂ ವಿಸ್ತಾರವಾಗಿ ಸಂಚರಿಸುವಳು" ಎಂದಿತು. ಈ ಆಕಾಶವಾಣಿಯು ಸರ್ವರಿಗೂ ಸ್ಪಷ್ಟವಾಗಿ ಕೇಳಿಸಿತು. ನಾರದರು 'ಇದೇನೆಂಬುದು ತಿಳಿಯಲಿಲ್ಲ' ಎನ್ನುತ್ತ ವಿಸ್ಮಿತರಾದರು (೩೩–೩೪). ಅವರು "ಈ ಆಕಾಶವಾಣಿಯಾದರೂ ಗೂಢವಾಗಿಯೇ ಹೇಳಿದೆ. ಅದು ಹೇಳಿದ ಸತ್ಕರ್ಮ ಯಾವುದು? ಅದನ್ನು ನಡೆಸುವ ಸಾಧನ ಯಾವುದು? ಆದರಿಂದ ಈ ಜ್ಞಾನವೈರಾಗ್ಯರಿಗೆ ಪ್ರಯೋಜನವಾಗುವುದಷ್ಟೆ! ಅಂತಹ ಸತ್ಕರ್ಮವನ್ನು ತಿಳಿಸುವ ಸಾಧುಗಳೆಲ್ಲಿದ್ದಾರೆ? ಇದಕ್ಕೆ ಬೇಕಾದ ಸಾಧನವನ್ನು ಅವರು ಕೊಡುವ ಬಗೆ ಹೇಗೆ? ಈ ಅಂತರಿಕ್ಷವಾಣಿಯು ಹೇಳಿದ ವಿಷಯದಲ್ಲಿ ನಾನೀಗ ಮಾಡಬೇಕಾದ ಕರ್ತವ್ಯವೇನು?" ಎಂದು ಚಿಂತಿಸತೊಡಗಿದರು" (೩೫–೩೬). ಆಮೇಲೆ ಸೂತರು ಹೇಳಿದ್ದೇನೆಂದರೆ, "ಶೌನಕರೆ, ನಾರದಮುನಿಗಳು ಆ ಜ್ಞಾನವೈರಾಗ್ಯರಿಬ್ಬರನ್ನೂ ಅಲ್ಲಿಯೇ ಬಿಟ್ಟು ನಾನಾ ತೀರ್ಥಕ್ಷೇತ್ರಗಳಿಗೆ ಭೇಟಿ ನೀಡುತ್ತ

ವೃತ್ತಾಂತಃ ಶ್ರೂಯತೇ ಸರ್ವೈಃ ಕಿಂಚಿನ್ನಿಶ್ಚಿತ್ಯ ನೋಚ್ಯತೇ ।
ಅಸಾಧ್ಯಂ ಕೇಚನ ಪ್ರೋಚುರ್ದುರ್ಜ್ಞೇಯಮಿತಿ ಚಾಪರೇ ।
ಮೂಕೀಭೂತಾಸ್ತಥಾನ್ಯೇ ತು ಕಿಯಂತಸ್ತು ಪಲಾಯಿತಾಃ ॥ ೩೮
ಹಾಹಾಕಾರೋ ಮಹಾನಾಸೀತ್ತ್ರೈಲೋಕ್ಯೇ ವಿಸ್ಮಯಾವಹಃ ।
ವೇದವೇದಾಂತಘೋಷೈಶ್ಚ ಗೀತಾಪಾಠೈರ್ವಿಬೋಧಿತಮ್ ॥ ೩೯
ಭಕ್ತಿಜ್ಞಾನವಿರಾಗಾಣಾಂ ನೋದತಿಷ್ಠತ್ತ್ರಿಕಂ ಯದಾ ।
ಉಪಾಯೋ ನಾಪರೋಽಸ್ತೀತಿ ಕರ್ಣೇ ಕರ್ಣೇಽಜಪನ್ ಜನಾಃ ॥ ೪೦
ಯೋಗಿನಾ ನಾರದೇನಾಪಿ ಸ್ವಯಂ ನ ಜ್ಞಾಯತೇ ತು ಯತ್ ।
ತತ್ಕಥಂ ಶಕ್ಯತೇ ವಕ್ತುಮಿತರೈರಿಹ ಮಾನುಷೈಃ ॥ ೪೧

---

ಹೋದರು. ದಾರಿಯಲ್ಲಿ ಕಂಡ ಎಲ್ಲ ಮುನಿಗಳನ್ನೂ ಕುರಿತು ಈ ವಿಷಯವನ್ನು ವಿವರಿಸುತ್ತ ಈಗ ಯಾವ ಕಾರ್ಯವನ್ನು ನಾನು ಮಾಡಬೇಕೆಂದು ಕೇಳುತ್ತ ಸಂಚರಿಸ ತೊಡಗಿದರು (೩೭). ಎಲ್ಲರೂ ಈ ವೃತ್ತಾಂತವನ್ನು ಆಲಿಸಿ ಕೇಳತಕ್ಕವರೇ; ಆದರೆ ಒಬ್ಬರೂ ನಿಶ್ಚಯಿಸಿ ಉತ್ತರ ಹೇಳಲಾರದೆ ಹೋದರು. ' ಇದು ಅಸಾಧ್ಯ ವಾದದ್ದು ' ಎಂದು ಕೆಲವರು ಹೇಳಿದರೆ, ಇನ್ನು ಕೆಲವರು ' ಇದೇನೋ ದುರ್ಜ್ಞೇಯ ವಾದುದು ' ಎಂದುಬಿಡುತ್ತಿದ್ದರು. ಹಲವರು ಏನೂ ಹೇಳದೆ ಮೂಕರಂತೆ ಇರುತ್ತಿದ್ದರು ! ಇನ್ನುಳಿದವರು ಈ ವಿಚಾರವನ್ನು ಕೇಳಿದೊಡನೆ ಸರಸರನೆ ಹೊರಟುಹೋಗುತ್ತಿದ್ದರು ! (೩೮). ಈ ವೃತ್ತಾಂತವು ಮೂರುಲೋಕಗಳಲ್ಲಿಯೂ ಪ್ರಸರಿಸಿ ಅಚ್ಚರಿಯನ್ನುಂಟುಮಾಡಿತು. ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಕೆಲವರು ಭಕ್ತಿಜ್ಞಾನವೈರಾಗ್ಯರ ಬಳಿಗೆ ಬಂದು ವೇದೋಪನಿಷತ್ತುಗಳನ್ನು ಪಠಿಸಿ ದರು. ಗೀತಾ ಶ್ಲೋಕಗಳನ್ನು ಉಚ್ಚರಿಸಿದರು. ಕುಸಿದುಬಿದ್ದಿದ್ದ ಭಕ್ತಿ ಜ್ಞಾನ ವೈರಾಗ್ಯದಲ್ಲಿ ಒಬ್ಬರೂ ಮೇಲೇಳಲಿಲ್ಲ. ಆಗ ಜನರು ' ಇನ್ನು ಬೇರೆ ಉಪಾಯ ವೇನೂ ಇಲ್ಲ ' ಎಂದು ಇನ್ನೊಬ್ಬರ ಕಿವಿಗಳಲ್ಲಿ ಗುಸುಗುಟ್ಟಿದರು ! (೩೯–೪೦). " ಯೋಗಿಗಳಾದ ನಾರದಮುನಿಗಳಿಗೇ ಗೊತ್ತಾಗದ ಸಂಗತಿಯನ್ನು ಸಾಮಾನ್ಯ ರಾದ ಇತರ ಮನುಷ್ಯರು ಹೇಳಬಲ್ಲರೆ ? " ಎಂದುಕೊಂಡರು. ಈ ಪ್ರಕಾರವಾಗಿ ಕೇಳಿದ ಋಷಿಗಳೆಲ್ಲರೂ ' ಇದು ನಮಗೆ ತಿಳಿಯದು ' ಎಂದು ನಿರ್ಣಯದಿಂದ

ಏವಮೃಷಿಗಣೈಃ ಪೃಷ್ಟೈರ್ನಿರ್ಣೀಯೋಕ್ತಂ ದುರಾಸದಮ್ ॥ ೪೨

ತತಶ್ಚಿಂತಾತುರಃ ಸೋಽಥ ಬದರೀವನಮಾಗತಃ ।
ತಪಶ್ಚರಾಮಿ ಚಾತ್ರೇತಿ ತದರ್ಥಂ ಕೃತನಿಶ್ಚಯಃ ॥ ೪೩

ತಾವದ್ದದರ್ಶ ಪುರತಃ ಸನಕಾದೀನ್ಮುನೀಶ್ವರಾನ್ ।
ಕೋಟಿಸೂರ್ಯಸಮಾಭಾಸಾನುವಾಚ ಮುನಿಸತ್ತಮಃ ॥ ೪೪

ನಾರದ ಉವಾಚ—

ಇದಾನೀಂ ಭೂರಿಭಾಗ್ಯೇನ ಭವದ್ಭಿಃ ಸಂಗಮೋಽಭವತ್ ।
ಕುಮಾರಾ ಬ್ರುವತಾಂ ಶೀಘ್ರಂ ಕೃಪಾಂ ಕೃತ್ವಾ ಮಮೋಪರಿ ॥ ೪೫

ಭವಂತೋ ಯೋಗಿನಃ ಸರ್ವೇ ಬುದ್ಧಿಮಂತೋ ಬಹುಶ್ರುತಾಃ ।
ಪಂಚಹಾಯನಸಂಯುಕ್ತಾಃ ಪೂರ್ವೇಷಾಮಪಿ ಪೂರ್ವಜಾಃ ॥ ೪೬

ಸದಾ ವೈಕುಂಠನಿಲಯಾ ಹರಿಕೀರ್ತನತತ್ಪರಾಃ ।
ಲೀಲಾಮೃತರಸೋನ್ಮತ್ತಾಃ ಕಥಾಮಾತ್ರೈಕಜೀವಿನಃ ॥ ೪೭

---

ಹೇಳಲಾಗಿ, ನಾರದರು ಚಿಂತಾವಿಷ್ಟರಾಗಿ ಬದರಿಕಾರಣ್ಯಕ್ಕೆ ಬಂದರು. (ಆ ಸತ್ಕರ್ಮವು ಯಾವುದೆಂದು ತಿಳಿಯುವುದಕ್ಕಾಗಿ) 'ಇಲ್ಲಿ ತಪಸ್ಸನ್ನಾಚರಿಸುವೆನು' ಎಂದು ನಿಶ್ಚಯಿಸಿದರು. ಅಷ್ಟರಲ್ಲಿ ಎದುರಿಗೆ ಬರುತ್ತಿದ್ದ ಕೋಟಿಸೂರ್ಯಸಮ ಪ್ರಭರಾದ ಸನಕಾದಿಮುನೀಶ್ವರರು ನಾರದರಿಗೆ ಗೋಚರಿಸಿದರು (೪೧–೪೪). ಆಗ ನಾರದರು ಈ ವೃತ್ತಾಂತವೆಲ್ಲವನ್ನೂ ಅವರಿಗೆ ತಿಳಿಸಿ ಹೇಳಿದ್ದೇನೆಂದರೆ, "ಪೂಜ್ಯರೆ, ನನ್ನ ಮಹಾಭಾಗ್ಯದಿಂದ ಈಗ ನಿಮ್ಮ ಸಂಗಮವು ಲಭಿಸಿತು. ನೀವೆಲ್ಲರೂ ಯೋಗಿಗಳು. ಮಹಾಪ್ರಾಜ್ಞರೂ ಬಹುಶ್ರುತರೂ ಆಗಿದ್ದೀರಿ. ಸದಾ ಐದು ವರ್ಷ ವಯಸ್ಸಿನ ಕುಮಾರರಾದ ನೀವು ನಮ್ಮ ಪೂರ್ವಜರಿಗೂ ಪೂರ್ವಜ ರಾಗಿದ್ದೀರಿ. ನನ್ನ ಮೇಲೆ ಕೃಪೆಯಿಟ್ಟು ಆ ಸತ್ಕರ್ಮ ಯಾವುದೆಂಬುದನ್ನು ಹೇಳೋಣವಾಗಲಿ (೪೫–೪೬). ವೈಕುಂಠನಿವಾಸಿಗಳೂ ಸದಾ ಹರಿಕೀರ್ತನ ತತ್ಪರರೂ ಭಗವಂತನ ಕಥಾಲೀಲೆಗಳ ಅಮೃತರಸವನ್ನು ಪಾನಮಾಡುತ್ತ ಕಥಾ ಮಾತ್ರದಿಂದಲೇ ಕಾಲಯಾಪನೆಮಾಡತಕ್ಕವರೂ ಆಗಿದ್ದೀರಿ. ಯಾವಾಗಲೂ

ಹರಿಃ ಶರಣಮೇವಂ ಹಿ ನಿತ್ಯಂ ಯೇಷಾಂ ಮುಖೇ ವಚಃ ।
ಅತಃ ಕಾಲಸಮಾದಿಷ್ಟಾ ಜರಾ ಯುಷ್ಮಾನ್ನ ಬಾಧತೇ ॥ ೪೮

ಯೇಷಾಂ ಭ್ರೂಭಂಗಮಾತ್ರೇಣ ದ್ವಾರಪಾಲೌ ಹರೇಃ ಪುರಾ ।
ಭೂಮೌ ನಿಪತಿತೌ ಸದ್ಯೋ ಯತ್ಕೃಪಾತಃ ಪುರಂ ಗತೌ ॥ ೪೯

ಅಹೋ ಭಾಗ್ಯಸ್ಯ ಯೋಗೇನ ದರ್ಶನಂ ಭವತಾಮಿಹ ।
ಅನುಗ್ರಹಸ್ತು ಕರ್ತವ್ಯೋ ಮಯಿ ದೀನೇ ದಯಾಪರೈಃ ॥ ೫೦

ಅಶರೀರಗಿರೋಕ್ತಂ ಯತ್ತತ್ಕಿಂ ಸಾಧನಮುಚ್ಯತಾಮ್ ।
ಅನುಷ್ಠೇಯಂ ಕಥಂ ತಾವತ್ಪ್ರಬ್ರುವಂತು ಸವಿಸ್ತರಮ್ ॥ ೫೧

ಭಕ್ತಿಜ್ಞಾನವಿರಾಗಾಣಾಂ ಸುಖಮುತ್ಪದ್ಯತೇ ಕಥಮ್ ।
ಸ್ಥಾಪನಂ ಸರ್ವವರ್ಣೇಷು ಪ್ರೇಮಪೂರ್ವಂ ಪ್ರಯತ್ನತಃ ॥ ೫೨

ಕುಮಾರಾ ಊಚುಃ—
ಮಾ ಚಿಂತಾಂ ಕುರು ದೇವರ್ಷೇ ಹರ್ಷಂ ಚಿತ್ತೇ ಸಮಾವಹ ।
ಉಪಾಯಃ ಸುಖಸಾಧ್ಯೋಽತ್ರ ವರ್ತತೇ ಪೂರ್ವ ಏವ ಹಿ ॥ ೫೩

---

ನಿಮ್ಮ ಬಾಯಲ್ಲಿ ‘ಶ್ರೀಹರಿಃ ಶರಣಂ’ ಎಂಬ ಮಾತೇ ಪಲ್ಲವಿಸುತ್ತಿರುವುದು. ಆದ್ದರಿಂದ ಕಾಲಚೋದಿತವಾದ ಮುಪ್ಪು ನಿಮ್ಮನ್ನು ಬಾಧಿಸುವುದಿಲ್ಲ (೪೭–೪೮). ಶ್ರೀಹರಿಯ ದ್ವಾರಪಾಲಕರಾಗಿದ್ದ ಜಯವಿಜಯರು ಹಿಂದೆ ನಿಮ್ಮ ಭ್ರೂಭಂಗ ವಿಕ್ಷೇಪಮಾತ್ರದಿಂದ ಭೂಲೋಕಕ್ಕೆ ಉರುಳಿಬಿದ್ದರು! ಮತ್ತೆ ನಿಮ್ಮ ಕೃಪೆಯಿಂದಲೇ ವೈಕುಂಠಲೋಕವನ್ನು ಸೇರಿಕೊಂಡರು! ಆಹಾ! ನನ್ನ ಭಾಗ್ಯಯೋಗದಿಂದ ನಿಮ್ಮ ದರ್ಶನವಾಯಿತು. ದಯಾಳುಗಳಾದ ನೀವು ದೀನನಾದ ನನ್ನಲ್ಲಿ ಅನುಗ್ರಹಮಾಡಬೇಕು (೪೯–೫೦). ಅಶರೀರವಾಣಿಯು ಹೇಳಿದ ಆ ಕರ್ಮಸಾಧನ ಯಾವುದು? ಆ ಸತ್ಕರ್ಮವನ್ನು ಅನುಷ್ಠಾನಮಾಡುವ ಬಗೆ ಹೇಗೆ? ಅದನ್ನು ವಿಸ್ತಾರವಾಗಿ ಹೇಳೋಣವಾಗಲಿ. ಭಕ್ತಿಜ್ಞಾನವೈರಾಗ್ಯರಿಗೆ ಕುಶಲವಾಗುವುದು ಹೇಗೆ? ಸಕಲವರ್ಣದವರಲ್ಲಿಯೂ ಪ್ರೇಮಪೂರ್ವಕವಾಗಿ ಅವರನ್ನು ಸ್ಥಾಪಿಸುವ ಪ್ರಯತ್ನವನ್ನು ನಡೆಸುವುದೆಂತು?” ಎಂದರು (೫೧–೫೨). ಆಗ ಆ ಕುಮಾರರು ಇಂತೆಂದರು: “ದೇವರ್ಷಿ ನಾರದರೆ, ಚಿಂತೆಬೇಡ, ಮನಸ್ಸಿಗೆ ಹರ್ಷ

ಅಹೋ ನಾರದ ಧನ್ಯೋಽಸಿ ವಿರಕ್ತಾನಾಂ ಶಿರೋಮಣಿಃ ।
ಸದಾ ಶ್ರೀಕೃಷ್ಣದಾಸಾನಾಮಗ್ರಣೀರ್ಯೋಗಭಾಸ್ಕರಃ ॥ ೫೪

ತ್ವಯಿ ಚಿತ್ರಂ ನ ಮಂತವ್ಯಂ ಭಕ್ತ್ಯರ್ಥಮನುವರ್ತಿನಿ ।
ಘಟತೇ ಕೃಷ್ಣದಾಸಸ್ಯ ಭಕ್ತೇಃ ಸಂಸ್ಥಾಪನಾ ಸದಾ ॥ ೫೫

ಋಷಿಭಿರ್ಬಹವೋ ಲೋಕೇ ಪಂಥಾನಃ ಪ್ರಕಟೀಕೃತಾಃ ।
ಶ್ರಮಸಾಧ್ಯಾಶ್ಚ ತೇ ಸರ್ವೇ ಪ್ರಾಯಃ ಸ್ವರ್ಗಫಲಪ್ರದಾಃ ॥ ೫೬

ವೈಕುಂಠಸಾಧಕಃ ಪಂಥಾ ಸ ತು ಗೋಪ್ಯೋ ಹಿ ವರ್ತತೇ ।
ತಸ್ಯೋಪದೇಷ್ಟಾ ಪುರುಷಃ ಪ್ರಾಯೋ ಭಾಗ್ಯೇನ ಲಭ್ಯತೇ ॥ ೫೭

ಸತ್ಕರ್ಮ ತವ ನಿರ್ದಿಷ್ಟಂ ವ್ಯೋಮವಾಚಾ ತು ಯತ್ಪುರಾ ।
ತದುಚ್ಯತೇ ಶೃಣುಷ್ವಾದ್ಯ ಸ್ಥಿರಚಿತ್ತಃ ಪ್ರಸನ್ನಧೀಃ ॥ ೫೮

ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ತೇ ತು ಕರ್ಮವಿಸೂಚಕಾಃ ॥ ೫೯

---

ವನ್ನು ತಂದುಕೊಳ್ಳಿರಿ. ಇದಕ್ಕೆ ಸುಖಸಾಧ್ಯವಾದ ಉಪಾಯವು ಹಿಂದೆಯೇ ನಿರ್ದಿಷ್ಟವಾಗಿರುತ್ತದೆ. ನಾರದರೆ, ವಿರಕ್ತಶಿರೋಮಣಿಗಳಾದ ನೀವು ಧನ್ಯರು. ಯೋಗಭಾಸ್ಕರರಾದ ನೀವು ಶ್ರೀಕೃಷ್ಣಭಕ್ತರಲ್ಲಿ ಅಗ್ರಗಣ್ಯರಾಗಿದ್ದೀರಿ (೫೩–೫೪). ಭಕ್ತಿಗೋಸ್ಕರ ಈ ಬಗೆಯಲ್ಲಿ ಶ್ರಮಿಸುವ ನಿಮ್ಮಲ್ಲಿ ಈ ಕಳಕಳಿಯು ಅಚ್ಚರಿಯೇನಲ್ಲ. ಶ್ರೀಕೃಷ್ಣದಾಸನಾದವನು ಭಕ್ತಿಯನ್ನು ಸಂಸ್ಥಾಪಿಸುವುದು ಯುಕ್ತವಾಗಿಯೇ ಇದೆ. ಇದಕ್ಕಾಗಿ ಹಲವಾರು ಮಾರ್ಗಗಳನ್ನು ಋಷಿಗಳು ತೋರಿಸಿದ್ದಾರೆ. ಆದರೆ ಅವೆಲ್ಲವೂ ಶ್ರಮಸಾಧ್ಯವಾದವು. ಅಲ್ಲದೆ ಅವುಗಳಿಂದ ದೊರೆಯುವ ಫಲ ಸ್ವರ್ಗಮಾತ್ರ (೫೫–೫೬). ವೈಕುಂಠವನ್ನು ಸಾಧಿಸಿಕೊಡುವ ಮಾರ್ಗವು ಮಾತ್ರ ಗುಪ್ತವಾಗಿದೆ. ಅದನ್ನು ತೋರಿಸಿಕೊಡುವ ಪುರುಷನು ಭಾಗ್ಯದಿಂದಲೇ ವಿರಳವಾಗಿ ಲಭಿಸುತ್ತಾನೆ. ಸತ್ಕರ್ಮವೆಂದು ಅಶರೀರವಾಣಿಯಿಂದ ನಿಮಗೆ ಯಾವುದು ನಿರ್ದಿಷ್ಟವಾಯಿತೋ ಅದನ್ನೀಗ ತಿಳಿಸಲಾಗುತ್ತದೆ. ಪ್ರಸನ್ನತೆಯಿಂದ ಸ್ಥಿರಚಿತ್ತರಾಗಿ ಕೇಳಿರಿ (೫೭–೫೮). ದ್ರವ್ಯಯಜ್ಞ, ತಪೋಯಜ್ಞ, ಯೋಗಯಜ್ಞ, ವೇದಾಧ್ಯಯನಯಜ್ಞ, ಶಾಸ್ತ್ರಜ್ಞಾನವೆಂಬ ಯಜ್ಞ—ಇವೆಲ್ಲವೂ

ಸತ್ಕರ್ಮಸೂಚಕೋ ನೂನಂ ಜ್ಞಾನಯಜ್ಞಃ ಸ್ಮೃತೋ ಬುಧೈಃ ।
ಶ್ರೀಮದ್ಭಾಗವತಾಲಾಪಃ ಸ ತು ಗೀತಃ ಶುಕಾದಿಭಿಃ ॥ ೬೦

ಭಕ್ತಿಜ್ಞಾನವಿರಾಗಾಣಾಂ ತದ್‌ಘೋಷೇಣ ಬಲಂ ಮಹತ್ ।
ವ್ರಜಿಷ್ಯತಿ ದ್ವಯೋಃ ಕಷ್ಟಂ ಸುಖಂ ಭಕ್ತೇರ್ಭವಿಷ್ಯತಿ ॥ ೬೧

ಪ್ರಲಯಂ ಹಿ ಗಮಿಷ್ಯಂತಿ ಶ್ರೀಮದ್ಭಾಗವತಧ್ವನೇಃ ।
ಕಲೇರ್ದೋಷಾ ಇಮೇ ಸರ್ವೇ ಸಿಂಹಶಬ್ದಾದ್ ವೃಕಾ ಇವ ॥ ೬೨

ಜ್ಞಾನವೈರಾಗ್ಯಸಂಯುಕ್ತಾ ಭಕ್ತಿಃ ಪ್ರೇಮರಸಾಹವಾ ।
ಪ್ರತಿಗೇಹಂ ಪ್ರತಿಜನಂ ತತಃ ಕ್ರೀಡಾಂ ಕರಿಷ್ಯತಿ ॥ ೬೩

ನಾರದ ಉವಾಚ—

ವೇದವೇದಾಂತಘೋಷೈಶ್ಚ ಗೀತಾಪಾಠೈಃ ಪ್ರಬೋಧಿತಮ್ ।
ಭಕ್ತಿಜ್ಞಾನವಿರಾಗಾಣಾಂ ನೋದತಿಷ್ಠತ್ತ್ರಿಕಂ ಯದಾ ॥ ೬೪

---

(ಸ್ವರ್ಗಾದಿಫಲವನ್ನು ಕೊಡುವ) ಕರ್ಮವನ್ನು ಸೂಚಿಸುತ್ತವೆ. ಆದರೆ ಪ್ರಕೃತವಾದ ಸತ್ಕರ್ಮವನ್ನು ಸೂಚಿಸತಕ್ಕದ್ದು ಜ್ಞಾನಯಜ್ಞವೆಂದು ವಿದ್ವಾಂಸರು ಸ್ಮರಿಸಿದ್ದಾರೆ. ಅದು ಯಾವುದೆಂದರೆ, ಶುಕಾದಿಮಹರ್ಷಿಗಳು ಹಾಡಿದ ಶ್ರೀಮದ್ಭಾಗವತದ ಕಥಾಲಾಪ (೫೯–೬೦). ಆ ಭಾಗವತವನ್ನು ಕೀರ್ತಿಸುವುದರಿಂದ ಭಕ್ತಿಜ್ಞಾನವೈರಾಗ್ಯಗಳಿಗೆ ಮಹತ್ತರವಾದ ಬಲವು ಬರುತ್ತದೆ. ಜ್ಞಾನವೈರಾಗ್ಯಗಳ ಕಷ್ಟವು ತೊಲಗುತ್ತದೆ. ಭಕ್ತಿಗೆ ಸುಖವು ಲಭಿಸುತ್ತದೆ. ಶ್ರೀಮದ್ಭಾಗವತದ ಧ್ವನಿಯನ್ನು ಕೇಳಿದೊಡನೆ, ಸಿಂಹಗರ್ಜನೆಯನ್ನು ಕೇಳಿದ ತೋಳಗಳಂತೆ, ಈ ಸಕಲ ಕಲಿದೋಷಗಳೂ ಹೇಳಹೆಸರಿಲ್ಲದಂತೆ ತೊಲಗುತ್ತವೆ (೬೧–೬೨). ಅನಂತರ ಜ್ಞಾನವೈರಾಗ್ಯಸಹಿತಳಾದ ಭಕ್ತಿಯು ಪ್ರೇಮರಸವನ್ನು ಉಕ್ಕಿಸುತ್ತ, ಪ್ರತಿ ಗೃಹದಲ್ಲಿಯೂ ಪ್ರತಿ ಜನರಲ್ಲಿಯೂ ಕ್ರೀಡಿಸತೊಡಗುವಳು" ಎಂದರು (೬೩). ಆಗ ನಾರದರು "ಪೂಜ್ಯರೆ, ವೇದೋಪನಿಷತ್ತುಗಳ ಘೋಷಗಳಿಂದಲೂ ಗೀತಾಪಾಠಗಳಿಂದಲೂ ಎಚ್ಚರಿಸಿದರೆ ಸಹ ಈ ಮೂರು ಭಕ್ತಿಜ್ಞಾನವೈರಾಗ್ಯಗಳೂ ಮೇಲಕ್ಕೆ ಏಳಲಿಲ್ಲ. ಹೀಗಿರುವಾಗ ಶ್ರೀಮದ್ಭಾಗವತವನ್ನು ಪಠಿಸಿದರೆ ಅವರಿಗೆ ಹೇಗೆ ಪ್ರಬೋಧವಾಗುತ್ತದೆ? ಭಾಗವತದ ಪ್ರತಿಶ್ಲೋಕದಲ್ಲಿಯೂ ಪ್ರತಿಯೊಂದು ಪದದಲ್ಲಿಯೂ

ಶ್ರೀಮದ್ಭಾಗವತಾಲಾಪಾತ್ತತ್ಕಥಂ ಬೋಧಮೇಷ್ಯತಿ ।
ತತ್ಕಥಾಸು ತು ವೇದಾರ್ಥಃ ಶ್ಲೋಕೇ ಶ್ಲೋಕೇ ಪದೇ ಪದೇ ॥ ೬೫

ಛಿಂದಂತು ಸಂಶಯಂ ಹ್ಯೇನಂ ಭವಂತೋಽಮೋಘದರ್ಶನಾಃ ।
ವಿಲಂಬೋ ನಾತ್ರ ಕರ್ತವ್ಯಃ ಶರಣಾಗತವತ್ಸಲಾಃ ॥ ೬೬

ಕುಮಾರಾ ಊಚುಃ—

ವೇದೋಪನಿಷದಾಂ ಸಾರಾಜ್ಜಾತಾ ಭಾಗವತೀ ಕಥಾ ।
ಅತ್ಯುತ್ತಮಾ ತತೋ ಭಾತಿ ಪೃಥಗ್ಭೂತಾ ಫಲಾಕೃತಿಃ ॥ ೬೭

ಆಮೂಲಾಗ್ರಂ ರಸಸ್ತಿಷ್ಠನ್ನಾಸ್ತೇ ನ ಸ್ವಾದ್ಯತೇ ಯಥಾ ।
ಸ ಭೂಯಃ ಸಂಪೃಥಗ್ಭೂತಃ ಫಲೇ ವಿಶ್ವಮನೋಹರಃ ॥ ೬೮

ಯಥಾ ದುಗ್ಧೇ ಸ್ಥಿತಂ ಸರ್ಪಿರ್ನ ಸ್ವಾದಾಯೋಪಕಲ್ಪತೇ ।
ಪೃಥಗ್ಭೂತಂ ಹಿ ತದ್ಗವ್ಯಂ ದೇವಾನಾಂ ರಸವರ್ಧನಮ್ ॥ ೬೯

---

ಇರತಕ್ಕದ್ದು ವೇದಾರ್ಥವೇ ಸರಿಯಷ್ಟೆ ? (೬೪–೬೫). ಹೇ ಶರಣಾಗತ ವತ್ಸಲರೆ, ಈ ನನ್ನ ಸಂಶಯವನ್ನು ತಾವು ಪರಿಹರಿಸಬೇಕು. ಈಗ ತಡಮಾಡುವುದಕ್ಕೆ ಅವಕಾಶವಿಲ್ಲ. ನಿಮ್ಮ ದರ್ಶನವು ಯಾವಾಗಲೂ ಫಲಕಾರಿಯೇ ಆಗಿರುವುದು" ಎಂದು ಕೇಳಿದರು (೬೬). ಅದಕ್ಕೆ ಸನತ್ಕುಮಾರಾದಿಗಳು ಇಂತೆಂದರು: "ನಾರದರೆ, ಭಾಗವತಕಥೆಯು ವೇದೋಪನಿಷತ್ತುಗಳ ಸಾರದಿಂದಲೇ ಹುಟ್ಟಿದೆ. ಆದರೆ ಮರದಿಂದ ಬೇರೆಯಾಗಿರುವ ಹಣ್ಣಿನಂತೆ ಅತ್ಯುತ್ತಮವಾಗಿ ಪ್ರಕಾಶಿಸುತ್ತದೆ. ವೃಕ್ಷದಲ್ಲಿ ಬೇರಿನಿಂದ ತುದಿಯವರೆಗೂ ರಸವಿದ್ದರೂ ಜನರು ಆಸ್ವಾದಿಸಲಾರರು. ಅದೇ ರಸವೇ ಮತ್ತೆ ಪೃಥಕ್ಕಾಗಿ ಹಣ್ಣಿನಲ್ಲಿ ಸೇರಿದಾಗ ವಿಶ್ವಮನೋಹರವಾಗಿರುತ್ತದೆ! (೬೭–೬೮). ಹಾಲಿನಲ್ಲಿ ತುಪ್ಪವಿದ್ದರೂ ಅದನ್ನು ಆಸ್ವಾದಿಸಲಾಗುವುದಿಲ್ಲ. ಅದೇ ಘೃತವನ್ನು ಹಾಲಿನಿಂದ ಬೇರೆಯಾಗಿ ತೆಗೆದಾಗ ದೇವತೆಗಳಿಗೆ ಸಹ ಅಧಿಕವಾದ ರುಚಿಯನ್ನುಂಟುಮಾಡುತ್ತದೆ. ಕಬ್ಬಿನ ಜಲ್ಲೆಗಳಲ್ಲಿ ಸರ್ವತ್ರ ವ್ಯಾಪಿಸಿಕೊಂಡು ಸಕ್ಕರೆ ಇರುತ್ತದೆ. ಆ ಸಕ್ಕರೆಯನ್ನು ಬೇರ್ಪಡಿಸಿ ತೆಗೆದಾಗ ಅತ್ಯಂತ ಮಧುರವಾಗಿ ಆಸ್ವಾದ್ಯವಾಗುತ್ತದೆ. ಹಾಗೆಯೇ ಭಾಗವತರ ಕಥಾವೃತ್ತಾಂತ

ಇಕ್ಷೂಣಾಮಪಿ ಮಧ್ಯಾಂತಂ ಶರ್ಕರಾ ವ್ಯಾಪ್ಯ ತಿಷ್ಠತಿ ।
ಪೃಥಗ್ಭೂತಾ ಚ ಸಾ ಮಿಷ್ಟಾ ತಥಾ ಭಾಗವತೀ ಕಥಾ ॥ ೭೦

ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಮ್ ।
ಭಕ್ತಿಜ್ಞಾನವಿರಾಗಾಣಾಂ ಸ್ಥಾಪನಾಯ ಪ್ರಕಾಶಿತಮ್ ॥ ೭೧

ವೇದಾಂತವೇದಸುಸ್ನಾತೇ ಗೀತಾಯಾ ಅಪಿ ಕರ್ತರಿ ।
ಪರಿತಾಪವತಿ ವ್ಯಾಸೇ ಮುಹ್ಯತ್ಯಜ್ಞಾನಸಾಗರೇ ॥ ೭೨

ತದಾ ತ್ವಯಾ ಪುರಾ ಪ್ರೋಕ್ತಂ ಚತುಃಶ್ಲೋಕಸಮನ್ವಿತಮ್ ।
ತದೀಯಶ್ರವಣಾತ್ಸದ್ಯೋ ನಿರ್ಬಾಧೋ ಬಾದರಾಯಣಃ ॥ ೭೩

ತತ್ರ ತೇ ವಿಸ್ಮಯಃ ಕೇನ ಯತಃ ಪ್ರಶ್ನಕರೋ ಭವಾನ್ ।
ಶ್ರೀಮದ್ಭಾಗವತಂ ಶ್ರಾವ್ಯಂ ಶೋಕದುಃಖವಿನಾಶನಮ್ ॥ ೭೪

ನಾರದ ಉವಾಚ—

ಯದ್ದರ್ಶನಂ ಚ ವಿನಿಹಂತ್ಯಶುಭಾನಿ ಸದ್ಯಃ
ಶ್ರೇಯಸ್ತನೋತಿ ಭವದುಃಖದವಾರ್ದಿತಾನಾಮ್ ।
ನಿಶ್ಶೇಷಶೇಷಮುಖಗೀತಕಥೈಕಪಾನಾಃ
ಪ್ರೇಮಪ್ರಕಾಶಕೃತಯೇ ಶರಣಂ ಗತೋಽಸ್ಮಿ ॥ ೭೫

---

ವಾಗಿದೆ (೬೯–೭೦). ಈ ಭಾಗವತ ಪುರಾಣವು ವೇದಸಮಾನವಾದದ್ದು. ಭಕ್ತಿಜ್ಞಾನವೈರಾಗ್ಯಗಳ ಸಂಸ್ಥಾಪನೆಗೋಸ್ಕರ ಪ್ರಕಾಶಿತವಾಗಿರುವುದು. ವೇದ ವೇದಾಂತಗಳಲ್ಲಿ ಈಜಾಡಿದ ಮತ್ತು ಭಗವದ್ಗೀತೆಯನ್ನೂ ವಿರಚಿಸಿದ ವ್ಯಾಸ-ಮುನಿಗಳು ಒಮ್ಮೆ ಅಜ್ಞಾನಸಾಗರದಲ್ಲಿ ಮುಳುಗಿ ಆಯಾಸಪಡುತ್ತಿದ್ದರಲ್ಲವೆ? (೭೧–೭೨). ಆ ಸಮಯದಲ್ಲಿ ನೀವೇ ಚತುಃಶ್ಲೋಕೀಭಾಗವತವನ್ನು ಅವರಿಗೆ ಶ್ರವಣಮಾಡಿಸಿದಿರಿ! ಅದರ ಶ್ರವಣಮಾತ್ರದಿಂದಲೇ ವ್ಯಾಸಮುನಿಗಳ ಪರಿತಾಪವು ಪರಿಹೃತವಾಯಿತಲ್ಲವೆ? ಹೀಗಿರುವಾಗ ನಿಮಗೆ ವಿಸ್ಮಯವೇಕೆ? ನೀವೇ ಪ್ರಶ್ನೆ ಮಾಡುವುದೇಕೆ? ಸಮಸ್ತ ಶೋಕವಿಷಾದಗಳನ್ನೂ ನಿವಾರಿಸಬಲ್ಲ ಶ್ರೀಮದ್ಭಾಗವತ ವನ್ನು ಅವಶ್ಯವಾಗಿ ಶ್ರವಣ ಮಾಡಬೇಕು" ಎಂದರು (೭೩–೭೪). ಆಗ ನಾರದ ಮುನಿಗಳು "ಮಹಾತ್ಮರೆ, ನಿಮ್ಮ ದರ್ಶನವು ಆ ಕ್ಷಣದಲ್ಲಿಯೇ ಸಮಸ್ತ ಅಶುಭ

ಭಾಗ್ಯೋದಯೇನ ಬಹುಜನ್ಮಸಮಾರ್ಜಿತೇನ
ಸತ್ಸಂಗಮಂ ಚ ಲಭತೇ ಪುರುಷೋ ಯದಾ ವೈ ।
ಅಜ್ಞಾನಹೇತುಕೃತಮೋಹಮದಾಂಧಕಾರ-
ನಾಶಂ ವಿಧಾಯ ಹಿ ತದೋದಯತೇ ವಿವೇಕಃ ॥ ೭೬

ಇತಿ ಶ್ರೀಪದ್ಮಪುರಾಣೇ ಉತ್ತರಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ
ಕುಮಾರನಾರದ ಸಂವಾದೋ ನಾಮ ದ್ವಿತೀಯೋಧ್ಯಾಯಃ



---

ಗಳನ್ನೂ ನಾಶಪಡಿಸುತ್ತದೆ. ಸಂಸಾರದುಃಖವೆಂಬ ಕಾಳ್ಗಿಚ್ಚಿನಿಂದ ನೊಂದವರಿಗೆ ಶ್ರೇಯಸ್ಸನ್ನುಂಟುಮಾಡುತ್ತದೆ. ಆದಿಶೇಷನ ಸಮಸ್ತ ಮುಖಗಳಿಂದಲೂ ಹಾಡಲ್ಪಡುವ ಶ್ರೀಹರಿಯ ಕಥಾಮೃತವನ್ನು ಸದಾ ಪಾನಮಾಡತಕ್ಕವರು ನೀವು. ಈ ಬಗೆಯಿಂದ ನನ್ನಲ್ಲಿ ವಾತ್ಸಲ್ಯವನ್ನು ಪ್ರಕಟಿಸಿದ್ದಕ್ಕಾಗಿ ನಿಮಗೆ ಶರಣಾಗಿದ್ದೇನೆ (೭೫). ಬಹುಜನ್ಮಗಳಲ್ಲಿ ಆರ್ಜಿಸಿದ ಪುಣ್ಯಪರಿಪಾಕದಿಂದ ಪುರುಷನಿಗೆ ಸತ್ಸಂಗವು ಲಭಿಸುತ್ತದೆ. ಈ ಸತ್ಸಂಗವು ಅಜ್ಞಾನಜನ್ಯವಾದ ಮೋಹಮದಗಳೆಂಬ ಕತ್ತಲೆಯನ್ನು ವಿನಾಶಗೊಳಿಸಿದ ಮೇಲೆ ವಿವೇಕೋದಯವಾಗುತ್ತದೆ!" ಎಂದರು (೭೬).

ಇಲ್ಲಿಗೆ ಶ್ರೀಪದ್ಮಪುರಾಣದ ಉತ್ತರಖಂಡದಲ್ಲಿ ಎರಡನೆಯ ಅಧ್ಯಾಯ



# ತೃತೀಯೋಧ್ಯಾಯಃ

ನಾರದ ಉವಾಚ—

ಜ್ಞಾನಯಜ್ಞಂ ಕರಿಷ್ಯಾಮಿ ಶುಕಶಾಸ್ತ್ರಕಥೋಜ್ಜ್ವಲಮ್ ।
ಭಕ್ತಿಜ್ಞಾನವಿರಾಗಾಣಾಂ ಸ್ಥಾಪನಾರ್ಥಂ ಪ್ರಯತ್ನತಃ ॥ ೧

ಕುತ್ರ ಕಾರ್ಯೋ ಮಯಾ ಯಜ್ಞಃ ಸ್ಥಲಂ ತದ್ವಾಚ್ಯತಾಮಿಹ ।
ಮಹಿಮಾ ಶುಕಶಾಸ್ತ್ರಸ್ಯ ವಕ್ತವ್ಯೋ ವೇದಪಾರಗೈಃ ॥ ೨

ಕಿಯದ್ಭಿರ್ದಿವಸೈಃ ಶ್ರಾವ್ಯಾ ಶ್ರೀಮದ್ಭಾಗವತೀ ಕಥಾ ।
ಕೋ ವಿಧಿಸ್ತತ್ರ ಕರ್ತವ್ಯೋ ಮಮೇದಂ ಬ್ರುವತಾಮಿತಃ ॥ ೩

ಕುಮಾರಾ ಊಚುಃ—

ಶೃಣು ನಾರದ ವಕ್ಷ್ಯಾಮೋ ವಿನಮ್ರಾಯ ವಿವೇಕಿನೇ ।
ಗಂಗಾದ್ವಾರಸಮೀಪೇ ತು ತಟಮಾನಂದನಾಮಕಮ್ ॥ ೪

## ಅಧ್ಯಾಯ ೩

ಸನತ್ಕುಮಾರರಿಂದ ಸಪ್ತಾಹಭಾಗವತ ಪ್ರವಚನ. ಭಾಗವತದ ಮಹಿಮೆ.
ಜ್ಞಾನವೈರಾಗ್ಯ ಭಕ್ತಿಗಳ ಪುನರುಜ್ಜೀವನ.

ನಾರದರು ಹೇಳಿದರು : " ಶ್ರೀಶುಕಶಾಸ್ತ್ರ ಕಥೆಗಳಿಂದ ಉಜ್ಜ್ವಲವಾದ ಜ್ಞಾನ ಯಜ್ಞವನ್ನು ನಡೆಸುವೆನು. ಭಕ್ತಿಜ್ಞಾನವೈರಾಗ್ಯಗಳ ಸ್ಥಾಪನೆಗಾಗಿ ಪ್ರಯತ್ನಿಸುವೆನು. ಪೂಜ್ಯರಾದ ಕುಮಾರರೆ, ನಾನು ಈ ಜ್ಞಾನಯಜ್ಞವನ್ನು ಮಾಡಬೇಕಾದ ಸ್ಥಳವನ್ನು ತಿಳಿಸಿರಿ. ವೇದಪಾರಂಗತರಾದ ನೀವು ಶುಕಶಾಸ್ತ್ರವಾದ ಶ್ರೀ ಭಾಗವತದ ಮಹಿಮೆಯನ್ನು ಹೇಳಬೇಕು. ಎಷ್ಟು ದಿನಗಳಲ್ಲಿ ಶ್ರೀಮದ್ಭಾಗವತವನ್ನು ಶ್ರವಣಮಾಡಬೇಕು ? ಅದರ ವಿಧಾನವೇನು ? " ಎಂದರು (೧–೩). ಆಗ ಸನತ್ಕುಮಾರಾದಿಗಳು ಇಂತೆಂದರು : " ನಾರದರೆ, ವಿನೀತರೂ ವಿವೇಕಿಗಳೂ ಆದ ನಿಮಗೆ ಇವೆಲ್ಲವನ್ನೂ ಹೇಳುತ್ತೇವೆ, ಕೇಳಿರಿ. ಗಂಗಾದ್ವಾರ ಸಮೀಪದಲ್ಲಿ ಆನಂದವೆಂಬ ಹೆಸರಿನ ನದೀತೀರವಿದೆ. ನಾನಾ ಋಷಿಗಳೂ ದೇವತೆಗಳೂ

ನಾನಾಋಷಿಗಣೈರ್ಜುಷ್ಟಂ ದೇವಸಿದ್ಧನಿಷೇವಿತಮ್ ।
ನಾನಾತರುಲತಾಕೀರ್ಣಂ ನವಕೋಮಲವಾಲುಕಮ್ ॥ ೫

ರಮ್ಯಮೇಕಾಂತದೇಶಸ್ಥಂ ಹೇಮಪದ್ಮಸುಸೌರಭಮ್ ।
ಯತ್ಸಮೀಪಸ್ಥಜೀವಾನಾಂ ವೈರಂ ಚೇತಸಿ ನ ಸ್ಥಿತಮ್ ॥ ೬

ಜ್ಞಾನಯಜ್ಞಸ್ತ್ವಯಾ ತತ್ರ ಕರ್ತವ್ಯೋ ಹ್ಯಪ್ರಯತ್ನತಃ ।
ಅಪೂರ್ವರಸರೂಪಾ ಚ ಕಥಾ ತತ್ರ ಭವಿಷ್ಯತಿ ॥ ೭

ಪುರಃಸ್ಥಂ ನಿರ್ಬಲಂ ಚೈವ ಜರಾಜೀರ್ಣಕಲೇವರಮ್ ।
ತದ್ದ್ವಯಂ ಚ ಪುರಸ್ಕೃತ್ಯ ಭಕ್ತಿಸ್ತತ್ರಾಗಮಿಷ್ಯತಿ ॥ ೮

ಯತ್ರ ಭಾಗವತೀ ವಾರ್ತಾ ತತ್ರ ಭಕ್ತ್ಯಾದಿಕಂ ವ್ರಜೇತ್ ।
ಕಥಾಶಬ್ದಂ ಸಮಾಕರ್ಣ್ಯ ತತ್ತ್ರಿಕಂ ತರುಣಾಯತೇ ॥ ೯

ಸೂತ ಉವಾಚ—

ಏವಮುಕ್ತ್ವಾ ಕುಮಾರಾಸ್ತೇ ನಾರದೇನ ಸಮಂ ತತಃ ।
ಗಂಗಾತಟಂ ಸಮಾಜಗ್ಮುಃ ಕಥಾಪಾನಾಯ ಸತ್ವರಾಃ ॥ ೧೦

---

ಸಿದ್ಧಪುರುಷರೂ ಅಲ್ಲಿದ್ದಾರೆ. ಅನೇಕ ಬಗೆಯ ಮರಬಳ್ಳಿಗಳಿಂದ ಕೂಡಿದೆಯಲ್ಲದೆ ಆ ಸ್ಥಳವು ಮೃದುವಾದ ಮರಳಿನಿಂದ ರಮ್ಯವಾಗಿದೆ (೪–೫). ಅನ್ಯಜನರು ಬಾರದ ಏಕಾಂತಸ್ಥಳವಾಗಿದ್ದು ತಾವರೆಗಳ ಪರಿಮಳದಿಂದ ಮನೋಹರವಾಗಿದೆ. ಆ ತೀರದಲ್ಲಿರತಕ್ಕ ಪ್ರಾಣಿಗಳಿಗೆ ಅನ್ಯೋನ್ಯವೈರವು ಮನಸ್ಸಿನಲ್ಲಿ ಸುಳಿಯುವುದಿಲ್ಲ. ಅಲ್ಲಿ ನೀವು ಹೆಚ್ಚು ಶ್ರಮವಿಲ್ಲದೆ ಜ್ಞಾನಯಜ್ಞವನ್ನು ನಡೆಸಬಹುದು. ಅಪೂರ್ವರಸಯುಕ್ತವಾದ ಈ ಭಾಗವತಪ್ರವಚನವು ಅಲ್ಲಿ ನಡೆಯಲಿ (೬–೭). ಭಕ್ತಿಯು ಅಲ್ಲಿಗೆ ಬರುವಳು. ಮುಪ್ಪಿನಿಂದ ಜೀರ್ಣಶರೀರಗಳುಳ್ಳ ಜ್ಞಾನವೈರಾಗ್ಯಗಳೆಂಬ ಇಬ್ಬರು ಮಕ್ಕಳನ್ನು ಕರೆತರುವಳು. ಎಲ್ಲಿ ಭಾಗವತದ ಪ್ರವಚನವಿರುತ್ತದೆಯೋ ಅಲ್ಲಿಗೆ ಭಕ್ತಿ ಮೊದಲಾದವರು ಬಂದೇ ಬರುವರು. ಇದನ್ನು ಕೇಳಿದೊಡನೆ ಆ ಮೂವರೂ ನವಯೌವನವನ್ನು ಪಡೆಯುವರು!" ಎಂದರು (೮–೯). ಹೀಗೆ ಹೇಳಿ ಸೂತರು ಶೌನಕರನ್ನು ಕುರಿತು ಇಂತೆಂದರು: ಶೌನಕರೆ, ಸನತ್ಕುಮಾರಾದಿಗಳು ಈ ಪ್ರಕಾರವಾಗಿ ನುಡಿದು ಭಾಗವತಕಥಾಪಾನ

ಯದಾ ಯಾತಾಸ್ತಟಂ ತೇ ತು ತದಾ ಕೋಲಾಹಲೋಽಪ್ಯಭೂತ್ ।
ಭೂರ್ಲೋಕೇ ದೇವಲೋಕೇ ಚ ಬ್ರಹ್ಮಲೋಕೇ ತಥೈವ ಚ ॥ ೧೧

ಶ್ರೀಭಾಗವತಪೀಯೂಷಪಾನಾಯ ರಸಲಂಪಟಾಃ ।
ಧಾವಂತೋಽಪ್ಯಾಯಯುಃ ಸರ್ವೇ ಪ್ರಥಮಂ ಯೇ ಚ ವೈಷ್ಣವಾಃ ॥ ೧೨

ಭೃಗುರ್ವಸಿಷ್ಠಶ್ಚ್ಯವನಶ್ಚ ಗೌತಮೋ
ಮೇಧಾತಿಥಿರ್ದೇವಲದೇವರಾತೌ ।
ರಾಮಸ್ತಥಾ ಗಾಧಿಸುತಶ್ಚ ಶಾಕಲೋ
ಮೃಕಂಡುಪುತ್ರಾತ್ರಿಜಪಿಪ್ಪಲಾದಾಃ ॥ ೧೩

ಯೋಗೇಶ್ವರೌ ವ್ಯಾಸಪರಾಶರೌ ಚ
ಛಾಯಾಶುಕೋ ಜಾಜಲಿಜಹ್ನುಮುಖ್ಯಾಃ ।
ಸರ್ವೇಽಪ್ಯಮೀ ಮುನಿಗಣಾಃ ಸಹಪುತ್ರಶಿಷ್ಯಾಃ
ಸ್ವಸ್ತ್ರೀಭಿರಾಯಯುರತಿಪ್ರಣಯೇನ ಯುಕ್ತಾಃ ॥ ೧೪

ವೇದಾಂತಾನಿ ಚ ವೇದಾಶ್ಚ ಮಂತ್ರಾಸ್ತಂತ್ರಾಃ ಸಮೂರ್ತಯಃ ।
ದಶಸಪ್ತಪುರಾಣಾನಿ ಷಟ್ಶಾಸ್ತ್ರಾಣಿ ತಥಾಽಽಯಯುಃ ॥ ೧೫

---

ಮಾಡುವುದಕ್ಕಾಗಿ ನಾರದರೊಡನೆ ತ್ವರೆಯಿಂದ ಗಂಗಾನದೀತೀರಕ್ಕೆ ಆಗಮಿಸಿದರು. ಅವರು ಗಂಗಾತಟಕ್ಕೆ ಬಂದೊಡನೆ ಭೂಲೋಕ ದೇವಲೋಕ ಬ್ರಹ್ಮಲೋಕಗಳಲ್ಲಿ ಸಂಭ್ರಮದ ಕೋಲಾಹಲ ಉಂಟಾಯಿತು (೧೦-೧೧). ಶ್ರೀ ಭಾಗವತಾಮೃತ ಪಾನಕ್ಕಾಗಿ ರಸಲಂಪಟರಾದ ಸಕಲರೂ ಓಡೋಡುತ್ತ ಅಲ್ಲಿಗೆ ಬಂದು ಸೇರಿದರು. ಅವರಲ್ಲಿ ವಿಷ್ಣುಭಕ್ತರು ಮೊದಲುಬಂದರು. ಭೃಗು, ವಸಿಷ್ಠ, ಚ್ಯವನ, ಗೌತಮ, ಮೇಧಾತಿಥಿ, ದೇವಲ, ದೇವರಾತ, ಪರಶುರಾಮ, ವಿಶ್ವಾಮಿತ್ರ, ಶಾಕಲ, ಮಾರ್ಕಂಡೇಯ, ಅತ್ರಿ, ಪಿಪ್ಪಲಾದ ಮುನಿಗಳು ಧಾವಿಸಿ ಬಂದರು (೧೨-೧೩). ಯೋಗೇಶ್ವರರಾದ ವ್ಯಾಸಪರಾಶರರೂ ಛಾಯಾರೂಪದಲ್ಲಿದ್ದ ಶುಕಮುನಿಗಳೂ ಜಾಜಲಿ, ಜಹ್ನು—ಮುಂತಾದ ಮುನಿಗಳೂ ತಮ್ಮ ತಮ್ಮ ಪತ್ನೀ, ಪುತ್ರ, ಶಿಷ್ಯರೊಡನೆ ಅತ್ಯಂತ ಆಸಕ್ತಿಯಿಂದ ಬಂದು ಸೇರಿದರು (೧೪). ವೇದ, ವೇದಾಂತಗಳೂ ಮಂತ್ರತಂತ್ರ ಶಾಸ್ತ್ರಗಳೂ ಉಳಿದ ಹದಿನೇಳು ಪುರಾಣಗಳೂ ಷಡ್ದರ್ಶನ

ಗಂಗಾದ್ಯಾಃ ಸರಿತಸ್ತತ್ರ ಪುಷ್ಕರಾದಿಸರಾಂಸಿ ಚ ।
ಕ್ಷೇತ್ರಾಣಿ ಚ ದಿಶಃ ಸರ್ವಾ ದಂಡಕಾದಿವನಾನಿ ಚ ॥ ೧೭

ನಗಾದಯೋ ಯಯುಸ್ತತ್ರ ದೇವಗಂಧರ್ವದಾನವಾಃ ।
ಗುರುತ್ವಾತ್ತತ್ರ ನಾಯಾತಾನ್ಭೃಗುಃ ಸಂಬೋಧ್ಯ ಚಾನಯತ್ ॥ ೧೭

ದೀಕ್ಷಿತಾ ನಾರದೇನಾಥ ದತ್ತಮಾಸನಮುತ್ತಮಮ್ ।
ಕುಮಾರಾ ವಂದಿತಾಃ ಸರ್ವೈರ್ನಿಷೇದುಃ ಕೃಷ್ಣತತ್ಪರಾಃ ॥ ೧೮

ವೈಷ್ಣವಾಶ್ಚ ವಿರಕ್ತಾಶ್ಚ ನ್ಯಾಸಿನೋ ಬ್ರಹ್ಮಚಾರಿಣಃ ।
ಮುಖಭಾಗೇ ಸ್ಥಿತಾಸ್ತೇ ಚ ತದಗ್ರೇ ನಾರದಃ ಸ್ಥಿತಃ ॥ ೧೯

ಏಕಭಾಗೇ ಋಷಿಗಣಾಸ್ತದನ್ಯತ್ರ ದಿವೌಕಸಃ ।
ವೇದೋಪನಿಷದೋಽನ್ಯತ್ರ ತೀರ್ಥಾನ್ಯತ್ರ ಸ್ತ್ರಿಯೋಽನ್ಯತಃ ॥ ೨೦

ಜಯಶಬ್ದೋ ನಮಶ್ಶಬ್ದಃ ಶಂಖಶಬ್ದಸ್ತಥೈವ ಚ ।
ಚೂರ್ಣಲಾಜಾಪ್ರಸೂನಾನಾಂ ನಿಕ್ಷೇಪಃ ಸುಮಹಾನಭೂತ್ ॥ ೨೧

---

ಗಳೂ ಶರೀರಧಾರಿಗಳಾಗಿ ಬಂದು ಸೇರಿದರು. ಗಂಗಾದಿನದಿಗಳು, ಪುಷ್ಕರಾದಿ ಸರಸ್ಸುಗಳು, ಪುಣ್ಯಕ್ಷೇತ್ರಗಳು, ದಿಕ್ಕುಗಳು, ದಂಡಕಾದ್ಯರಣ್ಯಗಳು, ಪರ್ವತಗಳು —ಇವೆಲ್ಲವುಗಳ ಅಭಿಮಾನಿದೇವತೆಗಳು ಆಗಮಿಸಿದರು. ದೇವ ಗಂಧರ್ವ ದಾನವರೂ ಬಂದರು. ಇನ್ನೂ ಅಲ್ಲಿಗೆ ಬರದಿದ್ದವರನ್ನು ಭೃಗುಮುನಿಗಳು ತಾವು ಹಿರಿಯರಾದ್ದರಿಂದ ಬುದ್ಧಿಹೇಳಿ, ಕರೆತಂದರು! (೧೫–೧೭). ಅನಂತರ ಕಥಾ-ದೀಕ್ಷಿತರಾದ ಸನತ್ಕುಮಾರಾದಿಗಳಿಗೆ ನಾರದರು ಉತ್ತಮವಾದ ಆಸನವನ್ನು ಕೊಡಲಾಗಿ, ಸರ್ವವಂದಿತರಾದ ಆ ಕುಮಾರರು ಶ್ರೀಕೃಷ್ಣನನ್ನು ಧ್ಯಾನಿಸುತ್ತ ಆಸನದಲ್ಲಿ ಕುಳಿತರು. ಅವರೆದುರಿಗೆ ಶ್ರವಣಮಾಡುವುದಕ್ಕಾಗಿ ವಿಷ್ಣುಭಕ್ತರೂ ವಿರಕ್ತರಾದ ಸಂನ್ಯಾಸಿಗಳೂ ಬ್ರಹ್ಮಚಾರಿಗಳೂ ಇದ್ದರು. ಅವರೆಲ್ಲರೆದುರಿಗೆ ನಾರದರಿದ್ದರು (೧೮–೧೯). ಒಂದು ಪಾರ್ಶ್ವದಲ್ಲಿ ಋಷಿಗಳೂ ಇನ್ನೊಂದು ಪಾರ್ಶ್ವದಲ್ಲಿ ದೇವತೆಗಳೂ ಒಂದೆಡೆ ವೇದೋಪನಿಷತ್ತುಗಳೂ ಇನ್ನೊಂದೆಡೆ ತೀರ್ಥಾಭಿಮಾನಿದೇವತೆಗಳೂ ಮತ್ತೊಂದೆಡೆ ಸ್ತ್ರೀಯರೂ ಶ್ರವಣಮಾಡುವುದಕ್ಕಾಗಿ ಸೇರಿದ್ದರು. ಒಡನೆಯೇ 'ಜಯ ಜಯ' ಶಬ್ದವೂ 'ನಮೋನಮಃ' ಶಬ್ದವೂ ಶಂಖಧ್ವನಿಗಳೂ ಬೃಹದಾ

*

ವಿಮಾನಾನಿ ಸಮಾರುಹ್ಯ ಕಿಯಂತೋ ದೇವನಾಯಕಾಃ ।
ಕಲ್ಪವೃಕ್ಷಪ್ರಸೂನೈಸ್ತಾನ್ ಸರ್ವಾಂಸ್ತತ್ರ ಸಮಾಕಿರನ್ ॥ ೨೨

ಸೂತ ಉವಾಚ—

ಏವಂ ತೇಷ್ವೇಕಚಿತ್ತೇಷು ಶ್ರೀಮದ್ಭಾಗವತಸ್ಯ ಚ ।
ಮಾಹಾತ್ಮ್ಯಮೂಚಿರೇ ಸ್ಪಷ್ಟಂ ನಾರದಾಯ ಮಹಾತ್ಮನೇ ॥ ೨೩

ಕುಮಾರಾ ಊಚುಃ—

ಅಥ ತೇ ವರ್ಣ್ಯತೇಽಸ್ಮಾಭಿರ್ಮಹಿಮಾ ಶುಕಶಾಸ್ತ್ರಜಃ ।
ಯಸ್ಯ ಶ್ರವಣಮಾತ್ರೇಣ ಮುಕ್ತಿಃ ಕರತಲೇ ಸ್ಥಿತಾ ॥ ೨೪

ಸದಾ ಸೇವ್ಯಾ ಸದಾ ಸೇವ್ಯಾ ಶ್ರೀಮದ್ಭಾಗವತೀ ಕಥಾ ।
ಯಸ್ಯಾಃ ಶ್ರವಣಮಾತ್ರೇಣ ಹರಿಶ್ಚಿತ್ತಂ ಸಮಾಶ್ರಯೇತ್ ॥ ೨೫

ಗ್ರಂಥೋಽಷ್ಟಾದಶಸಾಹಸ್ರೋ ದ್ವಾದಶಸ್ಕಂಧಸಮ್ಮಿತಃ ।
ಪರೀಕ್ಷಿಚ್ಛುಕಸಂವಾದಃ ಶೃಣು ಭಾಗವತಂ ಚ ತತ್ ॥ ೨೬

---

ಕಾರದಲ್ಲಿ ಕೇಳಿದವು. ಮಂಗಳಚೂರ್ಣ, ಅರಳು, ಹೂಗಳನ್ನು ವಿಪುಲವಾಗಿ ಎರಚಲಾಯಿತು. ದೇವನಾಯಕರು ವಿಮಾನಗಳಲ್ಲಿ ಕುಳಿತು ಕಲ್ಪವೃಕ್ಷದ ಹೂಗಳನ್ನು ಎಲ್ಲೆಲ್ಲಿಯೂ ಹರಡಿದರು (೨೦–೨೨). ಅನಂತರ ಸರ್ವರೂ ಏಕಚಿತ್ತರಾಗಿ ಕುಳಿತಿರುವಾಗ ಆ ಕುಮಾರರು ಮಹಾತ್ಮರಾದ ನಾರದಮುನಿಗಳನ್ನು ಸಂಬೋಧಿಸಿ ಶ್ರೀಮದ್ಭಾಗವತದ ಮಾಹಾತ್ಮ್ಯವನ್ನು ಸ್ಪಷ್ಟವಾಗಿ ಕೇಳುವಂತೆ ಈರೀತಿ ಹೇಳಿದರು (೨೩): “ನಾರದ ಮುನಿಗಳೆ, ಶುಕಶಾಸ್ತ್ರವೆನಿಸಿದ ಶ್ರೀಮದ್ಭಾಗವತದ ಮಹಿಮೆಯನ್ನೀಗ ವರ್ಣಿಸುತ್ತೇವೆ. ಇದನ್ನು ಕೇಳಿದ ಮಾತ್ರದಿಂದಲೇ ಮುಕ್ತಿಯು ಕರತಳದಲ್ಲಿ ಬಂದು ನಿಲ್ಲುವುದು. ಶ್ರೀಮದ್ಭಾಗವತ ಕಥೆಯನ್ನು ಸರ್ವದಾ ಸೇವಿಸುತ್ತಿರಬೇಕು. ಇದರ ಶ್ರವಣಮಾಡಿದರೆ ಶ್ರೀಹರಿಯು ನಮ್ಮ ಚಿತ್ತದಲ್ಲಿ ನೆಲೆಸುವನು (೨೪–೨೫). ಈ ಭಾಗವತದಲ್ಲಿ ಹದಿನೆಂಟು ಸಾವಿರ ಶ್ಲೋಕಗಳಿವೆ. ಹನ್ನೆರಡು ಸ್ಕಂಧಗಳಿವೆ. ಇದು ಶ್ರೀಶುಕಮಹರ್ಷಿಗಳಿಗೂ ಪರೀಕ್ಷಿತರಾಜನಿಗೂ ನಡೆದ ಸಂವಾದರೂಪವಾದದ್ದು. ಈ ಶುಕಶಾಸ್ತ್ರವು ಒಂದು ಕ್ಷಣಕಾಲವಾದರೂ ಯಾರ ಕಿವಿಗೆ ಬೀಳುವುದಿಲ್ಲವೋ ಆ

ತಾವತ್ಸಂಸಾರಚಕ್ರೇಽಸ್ಮಿನ್ ಭ್ರಮತೇಽಜ್ಞಾನತಃ ಪುಮಾನ್ ।
ಯಾವತ್ಕರ್ಣಗತಾ ನಾಸ್ತಿ ಶುಕಶಾಸ್ತ್ರಕಥಾ ಕ್ಷಣಮ್ ॥ ೨೭

ಕಿಂ ಶ್ರುತೈರ್ಬಹುಭಿಃ ಶಾಸ್ತ್ರೈಃ ಪುರಾಣೈಶ್ಚ ಭ್ರಮಾವಹೈಃ ।
ಏಕಂ ಭಾಗವತಂ ಶಾಸ್ತ್ರಂ ಮುಕ್ತಿದಾನೇನ ಗರ್ಜತಿ ॥ ೨೮

ಕಥಾ ಭಾಗವತಸ್ಯಾಪಿ ನಿತ್ಯಂ ಭವತಿ ಯದ್ಗೃಹೇ ।
ತದ್ಗೃಹಂ ತೀರ್ಥರೂಪಂ ಹಿ ವಸತಾಂ ಪಾಪನಾಶನಮ್ ॥ ೨೯

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।
ಶುಕಶಾಸ್ತ್ರಕಥಾಯಾಶ್ಚ ಕಲಾಂ ನಾರ್ಹಂತಿ ಷೋಡಶೀಮ್ ॥ ೩೦

ತಾವತ್ಪಾಪಾನಿ ದೇಹೇಽಸ್ಮಿನ್ನಿವಸಂತಿ ತಪೋಧನಾಃ ।
ಯಾವನ್ನ ಶ್ರೂಯತೇ ಸಮ್ಯಕ್ ಶ್ರೀಮದ್ಭಾಗವತಂ ನರೈಃ ॥ ೩೧

ನ ಗಂಗಾ ನ ಗಯಾ ಕಾಶೀ ಪುಷ್ಕರಂ ನ ಪ್ರಯಾಗಕಮ್ ।
ಶುಕಶಾಸ್ತ್ರಕಥಾಯಾಶ್ಚ ಫಲೇನ ಸಮತಾಂ ನಯೇತ್ ॥ ೩೨

---

ಮನುಷ್ಯನು ಅಜ್ಞಾನವಶನಾಗಿ ಸಂಸಾರಚಕ್ರದಲ್ಲಿ ಸುತ್ತುತ್ತಲೇ ಇರುವನು (೨೬–೨೭). ಭ್ರಮೆಯನ್ನುಂಟುಮಾಡತಕ್ಕ ನಾನಾ ಶಾಸ್ತ್ರಗಳನ್ನೂ ಅನ್ಯ ಪುರಾಣಗಳನ್ನೂ ಕೇಳುವುದರಿಂದ ಏನಾದೀತು ? ಈ ಭಾಗವತಶಾಸ್ತ್ರ ಒಂದೇ ಮುಕ್ತಿಯನ್ನು ಕೊಡುತ್ತೇನೆಂದು ಘೋಷಿಸುತ್ತ ವಿರಾಜಿಸುತ್ತಿದೆ. ಯಾವ ಗೃಹದಲ್ಲಿ ಭಾಗವತಾ ಕಥಾ ಪ್ರವಚನವು ನಿತ್ಯವೂ ನಡೆಯುವುದೋ ಆ ಗೃಹವು ಅಲ್ಲಿ ವಾಸಮಾಡತಕ್ಕವರಿಗೆ ಪಾಪಹಾರಿಯಾದ ಪುಣ್ಯಕ್ಷೇತ್ರವಾಗುತ್ತದೆ (೨೮–೨೯). ಸಾವಿರ ಅಶ್ವಮೇಧಯಾಗಗಳೂ ನೂರು ವಾಜಪೇಯ ಯಾಗಗಳೂ ಈ ಶುಕಶಾಸ್ತ್ರಕಥೆಯ ಹದಿನಾರನೆಯ ಒಂದಂಶ ಯೋಗ್ಯತೆಯನ್ನು ಪಡೆಯಲಾರವು. ಎಲೈ ತಪೋಧನರೆ, ಶ್ರೀಮದ್ಭಾಗವತವನ್ನು ಜನರು ಎಲ್ಲಿಯವರೆಗೆ ಕೇಳುವುದಿಲ್ಲವೋ ಅಲ್ಲಿಯವರೆಗೆ ಮಾತ್ರ ಈ ದೇಹದಲ್ಲಿ ಪಾಪಗಳು ಉಳಿದಾವು (೩೦–೩೧). ಗಂಗೆಯಾಗಲಿ ಗಯೆಯಾಗಲಿ ಕಾಶಿಯಾಗಲಿ ಪುಷ್ಕರಕ್ಷೇತ್ರವಾಗಲಿ ಪ್ರಯಾಗವೇ ಆಗಲಿ, ಈ ಶುಕಶಾಸ್ತ್ರಕಥೆಯಿಂದಾಗುವ ಫಲಕ್ಕೆ ಹೋಲಿಕೆಯನ್ನು ಪಡೆಯಲಾರದು. ಪರಮಗತಿಯಾದ ಮೋಕ್ಷವನ್ನು ಬಯಸುವುದಾದರೆ,

ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಮ್ ।
ಪಠಸ್ವ ಸ್ವಮುಖೇನೈವ ಯದೀಚ್ಛಸಿ ಪರಾಂ ಗತಿಮ್ ॥ ೩೩

ವೇದಾದಿರ್ವೇದಮಾತಾ ಚ ಪೌರುಷಂ ಸೂಕ್ತಮೇವ ಚ ।
ತ್ರಯೀ ಭಾಗವತಂ ಚೈವ ದ್ವಾದಶಾಕ್ಷರ ಏವ ಚ ॥ ೩೪

ದ್ವಾದಶಾತ್ಮಾ ಪ್ರಯಾಗಶ್ಚ ಕಾಲಃ ಸಂವತ್ಸರಾತ್ಮಕಃ ।
ಬ್ರಾಹ್ಮಣಾಶ್ಚಾಗ್ನಿಹೋತ್ರಂ ಚ ಸುರಭಿರ್ದ್ವಾದಶೀ ತಥಾ ॥ ೩೫

ತುಲಸೀ ಚ ವಸಂತಶ್ಚ ಪುರುಷೋತ್ತಮ ಏವ ಚ ।
ಏತೇಷಾಂ ತತ್ತ್ವತಃ ಪ್ರಾಜ್ಞೈರ್ನ ಪೃಥಗ್ಭಾವ ಇಷ್ಯತೇ ॥ ೩೬

ಯಶ್ಚ ಭಾಗವತಂ ಶಾಸ್ತ್ರಂ ವಾಚಯೇದರ್ಥತೋಽನಿಶಮ್ ।
ಜನ್ಮಕೋಟಿಕೃತಂ ಪಾಪಂ ನಶ್ಯತೇ ನಾತ್ರ ಸಂಶಯಃ ॥ ೩೭

ಶ್ಲೋಕಾರ್ಧಂ ಶ್ಲೋಕಪಾದಂ ವಾ ಪಠೇದ್ಭಾಗವತಂ ಚ ಯಃ ।
ನಿತ್ಯಂ ಪುಣ್ಯಮವಾಪ್ನೋತಿ ರಾಜಸೂಯಾಶ್ವಮೇಧಯೋಃ ॥ ೩೮

ಉಕ್ತಂ ಭಾಗವತಂ ನಿತ್ಯಂ ಕೃತಂ ಚ ಹರಿಚಿಂತನಮ್ ।
ತುಲಸೀಪೋಷಣಂ ಚೈವ ಧೇನೂನಾಂ ಸೇವನಂ ಸಮಮ್ ॥ ೩೯

---

ಭಾಗವತದಲ್ಲಿರುವ ಒಂದು ಶ್ಲೋಕದ ಅರ್ಧವನ್ನಾಗಲಿ ಅಥವಾ ಒಂದು ಪಾದವನ್ನಾಗಲಿ ಪ್ರತಿದಿನವೂ ಬಾಯಿಯಿಂದ ಪಠಿಸಿರಿ! (೩೨–೩೩). ವೇದಕಾರಣನಾದ ಬ್ರಹ್ಮ, ವೇದಮಾತೆಯಾದ ಗಾಯತ್ರಿ, ಪುರುಷಸೂಕ್ತ, ವೇದತ್ರಯ, ಭಾಗವತ, ದ್ವಾದಶಾಕ್ಷರೀಮಂತ್ರ, ಸೂರ್ಯ, ಪ್ರಯಾಗ, ಸಂವತ್ಸರಾತ್ಮಕವಾದ ಕಾಲ, ಬ್ರಾಹ್ಮಣರು, ಅಗ್ನಿಹೋತ್ರ, ಗೋವು, ದ್ವಾದಶೀತಿಥಿ, ತುಳಸಿ, ವಸಂತಋತು ಮತ್ತು ಪುರುಷೋತ್ತಮನಾದ ಶ್ರೀಮನ್ನಾರಾಯಣ ಇವರಿಗೆ ತಾತ್ತ್ವಿಕವಾದ ಯಾವ ಭೇದವೂ ಇಲ್ಲವೆಂದು ಪ್ರಾಜ್ಞರು ಸಂಮತಿಸುತ್ತಾರೆ (೩೪–೩೬). ಯಾವಾತನು ಭಾಗವತ ಶಾಸ್ತ್ರವನ್ನು ಅರ್ಥಾನುಸಂಧಾನಪೂರ್ವಕವಾಗಿ ನಿತ್ಯವೂ ಪಠಿಸುತ್ತಾನೋ ಆತನು ಕೋಟಿಜನ್ಮಗಳಲ್ಲಿ ಮಾಡಿದ್ದ ಪಾಪವೂ ಸಹ ನಶಿಸುತ್ತದೆ, ಸಂದೇಹವಿಲ್ಲ. ಯಾವನು ಭಾಗವತದ ಶ್ಲೋಕಾರ್ಧವನ್ನೋ ಶ್ಲೋಕಪಾದವನ್ನೋ ಪ್ರತಿದಿನ ಪಠಿಸುತ್ತಾನೋ, ಆತನು ರಾಜಸೂಯಾಶ್ವಮೇಧಯಾಗಗಳ ಪುಣ್ಯವನ್ನು ಪಡೆಯುತ್ತಾನೆ (೩೭–೩೮). ನಿತ್ಯವೂ ಭಾಗವತದ ಪಾರಾಯಣ, ಶ್ರೀಹರಿಯ

ಅಂತಕಾಲೇ ತು ಯೇನೈವ ಶ್ರೂಯತೇ ಶುಕಶಾಸ್ತ್ರವಾಕ್ ।
ಪ್ರೀತ್ಯಾ ತಸ್ಯೈವ ವೈಕುಂಠಂ ಗೋವಿಂದೋಽಪಿ ಪ್ರಯಚ್ಛತಿ ॥ ೪೦

ಹೇಮಸಿಂಹಯುತಂ ಚೈತದ್ವೈಷ್ಣವಾಯ ದದಾತಿ ಚ ।
ಕೃಷ್ಣೇನ ಸಹ ಸಾಯುಜ್ಯಂ ಸ ಪುಮಾಂಲ್ಲಭತೇ ಧ್ರುವಮ್ ॥ ೪೧

ಆಜನ್ಮಮಾತ್ರಮಪಿ ಯೇನ ಶಠೇನ ಕಿಂಚಿ-
ಚ್ಚಿತ್ತಂ ವಿಧಾಯ ಶುಕಶಾಸ್ತ್ರಕಥಾ ನ ಪೀತಾ ।
ಚಾಂಡಾಲವಚ್ಚ ಖರವದ್ಬತ ತೇನ ನೀತಂ
ಮಿಥ್ಯಾ ಸ್ವಜನ್ಮ ಜನನೀಜನಿದುಃಖಭಾಜಾ ॥ ೪೨

ಜೀವಚ್ಛವೋ ನಿಗದಿತಃ ಸ ತು ಪಾಪಕರ್ಮಾ
ಯೇನ ಶ್ರುತಂ ಶುಕಕಥಾವಚನಂ ನ ಕಿಂಚಿತ್ ।
ಧಿಕ್ ತಂ ನರಂ ಪಶುಸಮಂ ಭುವಿ ಭಾರರೂಪ-
ಮೇವಂ ವದಂತಿ ದಿವಿ ದೇವಸಮಾಜಮುಖ್ಯಾಃ ॥ ೪೩

---

ಧ್ಯಾನ, ತುಳಸಿಯ ಪೋಷಣೆ, ಗೋಸೇವೆ—ಇವು ಸಮವಾದ ಫಲವನ್ನು ಕೊಡತಕ್ಕವು. ದೇಹಾಂತಸಮಯದಲ್ಲಿ ಯಾವಾತನು ಈ ಶುಕಶಾಸ್ತ್ರದ ವಾಕ್ಯವನ್ನು ಆದರದಿಂದ ಕೇಳುತ್ತಾನೋ ಆತನಿಗೆ ಗೋವಿಂದನು ವೈಕುಂಠಲೋಕವನ್ನು ಕರುಣಿಸುತ್ತಾನೆ (೩೯–೪೦). ಯಾವ ಪುರುಷನು ಈ ಗ್ರಂಥವನ್ನು ಸುವರ್ಣಮಯ ಸಿಂಹಸಹಿತವಾಗಿ ವಿಷ್ಣುಭಕ್ತನಿಗೆ ದಾನ ಮಾಡುತ್ತಾನೋ ಆತನು ಶ್ರೀಕೃಷ್ಣನ ಸಾಯುಜ್ಯವನ್ನು ನಿಶ್ಚಯವಾಗಿ ಪಡೆಯುತ್ತಾನೆ (೪೧). ದುರ್ವಿನೀತನಾದ ಯಾವನು ಹುಟ್ಟಿದಲಾಗಾಯಿತು ಒಂದು ಸಲವಾದರೂ ಮನಸ್ಸಿಟ್ಟು ಈ ಶುಕಶಾಸ್ತ್ರವಾದ ಭಾಗವತವನ್ನು ಶ್ರವಣ ಮಾಡಿಲ್ಲವೋ ಅವನು ಚಾಂಡಾಲನಿದ್ದಂತೆ, ಕತ್ತೆಯಿದ್ದಂತೆ. ತಾಯಿಗೆ ಕಷ್ಟವನ್ನಿತ್ತು ತನ್ನ ಜನ್ಮವನ್ನು ಅವನು ವ್ಯರ್ಥವಾಗಿ ಕಳೆದಿರುತ್ತಾನೆ! (೪೨). "ಯಾವನು ಈ ಭಾಗವತದ ನುಡಿಯನ್ನು ಸ್ವಲ್ಪವೂ ಕೇಳಿಲ್ಲವೋ ಆ ಪಾಪಿಯು ಉಸಿರಾಡುವ ಹೆಣವಿದ್ದ ಹಾಗೆ! ಭೂಮಿಗೆ ಭಾರವಾಗಿರುವ ಆ ನರಪಶುವಿಗೆ ಧಿಕ್ಕಾರವಿರಲಿ!" ಎಂಬುದಾಗಿ ದೇವಲೋಕದ ಮಹಾತ್ಮರು

ದುರ್ಲಭೈವ ಕಥಾ ಲೋಕೇ ಶ್ರೀಮದ್ಭಾಗವತೋದ್ಭವಾ ।
ಕೋಟಿಜನ್ಮಸಮುತ್ಥೇನ ಪುಣ್ಯೇನೈವ ತು ಲಭ್ಯತೇ ॥ ೪೪

ತೇನ ಯೋಗನಿಧೇ ಧೀಮನ್ ಶ್ರೋತವ್ಯಾ ಸಾ ಪ್ರಯತ್ನತಃ ।
ದಿನಾನಾಂ ನಿಯಮೋ ನಾಸ್ತಿ ಸರ್ವದಾ ಶ್ರವಣಂ ಮತಮ್ ॥ ೪೫

ಸತ್ಯೇನ ಬ್ರಹ್ಮಚರ್ಯೇಣ ಸರ್ವದಾ ಶ್ರವಣಂ ಮತಮ್ ।
ಅಶಕ್ಯತ್ವಾತ್ಕಲೌ ಬೋಧ್ಯೋ ವಿಶೇಷೋಽತ್ರ ಶುಕಾಜ್ಞಯಾ ॥ ೪೬

ಮನೋವೃತ್ತಿಜಯಶ್ಚೈವ ನಿಯಮಾಚರಣಂ ತಥಾ ।
ದೀಕ್ಷಾಂ ಕರ್ತುಮಶಕ್ಯತ್ವಾತ್ಸಪ್ತಾಹಶ್ರವಣಂ ಮತಮ್ ॥ ೪೭

ಶ್ರದ್ಧಾತಃ ಶ್ರವಣೇ ನಿತ್ಯಂ ಮಾಘೇ ತಾವದ್ಧಿ ಯತ್ಫಲಮ್ ।
ತತ್ಫಲಂ ಶುಕದೇವೇನ ಸಪ್ತಾಹಶ್ರವಣೇ ಕೃತಮ್ ॥ ೪೮

---

ಹೇಳುತ್ತಾರೆ (೪೩). ವಾಸ್ತವವಾಗಿ ಶ್ರೀಮದ್ಭಾಗವತದ ಕಥಾಲಾಭವು ಲೋಕದಲ್ಲಿ ದುರ್ಲಭವಾದದ್ದು. ಕೋಟಿಜನ್ಮದ ಪುಣ್ಯದಿಂದ ಮಾತ್ರವೇ ಇದು ಲಭಿಸುತ್ತದೆ. ಆದ್ದರಿಂದ, ಯೋಗನಿಧಿಗಳಾದ ನಾರದರೆ, ನೀವು ಧೀಮಂತರಾಗಿದ್ದೀರಿ. ಪ್ರಯತ್ನಪೂರ್ವಕವಾಗಿ ಭಾಗವತವನ್ನು ಕೇಳಬೇಕು. ಶ್ರವಣಕ್ಕೆ ಎಷ್ಟು ದಿನಗಳೆಂಬ ನಿಯಮವೇನೂ ಇಲ್ಲ. ಸರ್ವದಾ ಶ್ರವಣ ಮಾಡಬಹುದು (೪೪–೪೫). ಆದರೆ ಶ್ರವಣಮಾಡುವ ಕಾಲದಲ್ಲಿ ಸತ್ಯನಿಷ್ಠೆಯೂ ಬ್ರಹ್ಮಚರ್ಯಪಾಲನೆಯೂ ಆವಶ್ಯಕ. ಇದು ಕಲಿಯುಗದಲ್ಲಿ ದೀರ್ಘಕಾಲ ಅಶಕ್ಯವಾದ್ದರಿಂದ ಶುಕಮುನಿಗಳು ಶ್ರವಣಕ್ಕೆ ಒಂದು ವಿಶೇಷವನ್ನು ಗೊತ್ತುಪಡಿಸಿದ್ದಾರೆ. ಮನೋಜಯ, ನಿಯಮಪಾಲನೆ, ದೀಕ್ಷಾವ್ರತಗಳನ್ನು ಪಾಲಿಸುವುದು ಅಸಾಧ್ಯವಾದ್ದರಿಂದ ಸಪ್ತಾಹ ಶ್ರವಣವಿಧಿಯನ್ನು ಅವರು ತಿಳಿಸಿದ್ದಾರೆ (೪೬–೪೭). ಮಾಘಮಾಸದಲ್ಲಿ ಪ್ರತಿದಿನವೂ ಶ್ರದ್ಧೆಯಿಂದ ಶ್ರವಣಮಾಡಿದರೆ ಯಾವ ಫಲವು ದೊರೆಯುವುದೋ ಅಷ್ಟೇ ಫಲವು ಸಪ್ತಾಹಶ್ರವಣದಿಂದಲೂ ಬರುವುದೆಂದು ಶುಕದೇವರು ತಿಳಿಸಿದ್ದಾರೆ. ಕಲಿಯುಗದಲ್ಲಿ ಜನರಿಗೆ ಮನೋಜಯವು ಕಠಿಣವಾದ್ದರಿಂದಲೂ ರೋಗಗಳು ಬರಬಹುದಾದ್ದರಿಂದಲೂ ಆಯುಸ್ಸು ಅಲ್ಪವಾದ್ದರಿಂದಲೂ ನಾನಾ ವಿಘ್ನಗಳ

ಮನಸಶ್ಚಾಜಯಾದ್ರೋಗಾತ್ಪುಂಸಾಂ ಚೈವಾಯುಷಃ ಕ್ಷಯಾತ್ ।
ಕಲೇರ್ದೋಷಬಹುತ್ವಾಚ್ಚ ಸಪ್ತಾಹಶ್ರವಣಂ ಮತಮ್ ॥ ೪೯

ಯತ್ಫಲಂ ನಾಸ್ತಿ ತಪಸಾ ನ ಯೋಗೇನ ಸಮಾಧಿನಾ ।
ಅನಾಯಾಸೇನ ತತ್ಸರ್ವಂ ಸಪ್ತಾಹಶ್ರವಣೇ ಲಭೇತ್ ॥ ೫೦

ಯಜ್ಞಾದ್ಗರ್ಜತಿ ಸಪ್ತಾಹೋ ಸಪ್ತಾಹೋ ಗರ್ಜತಿ ವ್ರತಾತ್ ।
ತಪಸೋ ಗರ್ಜತಿ ಪ್ರೋಚ್ಚೈಸ್ತೀರ್ಥಾನ್ನಿತ್ಯಂ ಹಿ ಗರ್ಜತಿ ॥ ೫೧

ಯೋಗಾದ್ಗರ್ಜತಿ ಸಪ್ತಾಹೋ ಧ್ಯಾನಾಜ್ಜ್ಞಾನಾಚ್ಚ ಗರ್ಜತಿ ।
ಕಿಂ ಬ್ರೂಮೋ ಗರ್ಜನಂ ತಸ್ಯ ರೇ ರೇ ಗರ್ಜತಿ ಗರ್ಜತಿ ॥ ೫೨

ಶೌನಕ ಉವಾಚ—

ಸಾಶ್ಚರ್ಯಮೇತತ್ಕಥಿತಂ ಕಥಾನಕಂ
ಜ್ಞಾನಾದಿಧರ್ಮಾನ್ ವಿಗಣಯ್ಯ ಸಾಂಪ್ರತಮ್ ।
ನಿಃಶ್ರೇಯಸೇ ಭಾಗವತಂ ಪುರಾಣಂ
ಜಾತಂ ಕುತೋ ಯೋಗವಿದಾದಿಸೂಚಕಮ್ ॥ ೫೩

---

ಸಂಭವವಿರುವುದರಿಂದಲೂ ಸಪ್ತಾಹ ಶ್ರವಣವು ಸಂಮತವಾಗಿದೆ (೪೮–೪೯). ತಪಸ್ಸಿನಿಂದ, ಶಮದಮಾದಿ ಯೋಗಾಚರಣೆಯಿಂದ, ಚಿತ್ತವೃತ್ತಿ ನಿರೋಧದಿಂದ ಯಾವ ಫಲವು ಲಭಿಸದೋ ಅದು ಸಪ್ತಾಹ ಶ್ರವಣವಿಧಿಯಿಂದ ಲಭಿಸುತ್ತದೆ. ಭಾಗವತದ ಸಪ್ತಾಹಶ್ರವಣವು ಯಜ್ಞಕ್ಕಿಂತ ನಾನು ಹೆಚ್ಚೆಂದು ಗರ್ಜಿಸುತ್ತದೆ! ವ್ರತಾಚರಣೆಗಿಂತ ತಾನು ಅಧಿಕವೆಂದು ಗರ್ಜಿಸುತ್ತದೆ! ತಪಸ್ಸಿಗಿಂತ, ತೀರ್ಥಾಟನೆಗಿಂತ, ಯೋಗಕ್ಕಿಂತ, ಧ್ಯಾನಕ್ಕಿಂತ, ಜ್ಞಾನಕ್ಕಿಂತ ತಾನು ಅಧಿಕಫಲಪ್ರದವೆಂದು ಗರ್ಜಿಸುತ್ತದೆ! ಏನು ಹೇಳೋಣ ಅದರ ಗರ್ಜನೆಯನ್ನು! ಎಲೋ, ಎಲೋ, ಅದು ಗರ್ಜಿಸುತ್ತದೆ! ಗರ್ಜಿಸುತ್ತದೆ!" ಎಂದರು (೫೦–೫೨). ಆಗ ಶೌನಕರು ಸೂತಪುರಾಣಿಕರನ್ನು ಕುರಿತು "ಸೂತರೆ, ಈಗ ಒಂದು ಆಶ್ಚರ್ಯದ ಕಥೆಯನ್ನು ಹೇಳಿಬಿಟ್ಟಿರಿ! ಜ್ಞಾನಧ್ಯಾನಾದಿ ಮಹಾಧರ್ಮಗಳನ್ನು ಗಣಿಸಿದಾಗ, ಆ ಯೋಗ ಜ್ಞಾನಾದಿಗಳನ್ನೇ ಬೋಧಿಸುವ ಈ ಭಾಗವತ ಪುರಾಣವು ಆ ಎಲ್ಲ ನಿಷ್ಠೆಗಳಿಗಿಂತ ಅಧಿಕವಾಗಿ ಮೋಕ್ಷಕ್ಕೆ ಕಾರಣವೆಂಬುದೇಕೆ?" ಎಂದು ಕೇಳಿದರು (೫೩).

ಸೂತ ಉವಾಚ—

ಯದಾ ಕೃಷ್ಣೋ ಧರಾಂ ತ್ಯಕ್ತ್ವಾ ಸ್ವಪದಂ ಗಂತುಮುದ್ಯತಃ ।
ಏಕಾದಶಂ ಪರಿಶ್ರುತ್ಯಾಪ್ಯುದ್ಧವೋ ವಾಕ್ಯಮಬ್ರವೀತ್ ॥ ೫೪

ಉದ್ಧವ ಉವಾಚ—

ತ್ವಂ ತು ಯಾಸ್ಯಾಸಿ ಗೋವಿಂದ ಭಕ್ತಕಾರ್ಯಂ ವಿಧಾಯ ಚ ।
ಮಚ್ಚಿತ್ತೇ ಮಹತೀ ಚಿಂತಾ ತಾಂ ಶ್ರುತ್ವಾ ಸುಖಮಾವಹ ॥ ೫೫

ಆಗತೋಽಯಂ ಕಲಿರ್ಘೋರೋ ಭವಿಷ್ಯಂತಿ ಪುನಃ ಖಲಾಃ ।
ತತ್ಸಂಗೇನೈವ ಸಂತೋಽಪಿ ಗಮಿಷ್ಯಂತ್ಯುಗ್ರತಾಂ ಯದಾ ॥ ೫೬

ತದಾ ಭಾರವತೀ ಭೂಮಿರ್ಗೋರೂಪೇಯಂ ಕಮಾಶ್ರಯೇತ್ ।
ಅನ್ಯೋ ನ ದೃಶ್ಯತೇ ತ್ರಾತಾ ತ್ವತ್ತಃ ಕಮಲಲೋಚನ ॥ ೫೭

ಅತಃ ಸತ್ಸು ದಯಾಂ ಕೃತ್ವಾ ಭಕ್ತವತ್ಸಲ ಮಾ ವ್ರಜ ।
ಭಕ್ತಾರ್ಥಂ ಸಗುಣೋ ಜಾತೋ ನಿರಾಕಾರೋಽಪಿ ಚಿನ್ಮಯಃ ॥ ೫೮

---

ಆದಕ್ಕೆ ಸೂತರು ಹೇಳಿದ್ದೇನೆಂದರೆ : ಶ್ರೀಕೃಷ್ಣನು ಭೂಲೋಕವನ್ನು ಪರಿತ್ಯಜಿಸಿ ಸ್ವಧಾಮಕ್ಕೆ ತೆರಳಲು ಸಿದ್ಧನಾದನು. ಭಾಗವತದ ಏಕಾದಶಸ್ಕಂಧದಲ್ಲಿ, ಶ್ರೀಕೃಷ್ಣನು ಬೋಧಿಸಿದ ವಿಷಯವನ್ನು ಆಲಿಸಿದ್ದರೂ ಸಹ ಉದ್ಧವನು ಈ ರೀತಿ ಕೇಳಿದನು : “ ಗೋವಿಂದ, ಭಕ್ತರ ಕಾರ್ಯವನ್ನು ನೆರವೇರಿಸಿ ನೀನೀಗ ತೆರಳು ತ್ತಿರುವೆ. ನನ್ನ ಮನಸ್ಸಿನಲ್ಲಿ ಒಂದು ದೊಡ್ಡ ಚಿಂತೆ ಹುಟ್ಟಿದೆ. ಅದನ್ನು ಕೇಳಿ ನನಗೆ ಸಮಾಧಾನವನ್ನುಂಟುಮಾಡು (೫೪–೫೫). ಈಗ ಘೋರವಾದ ಕಲಿಯುಗವು ಪ್ರಾಪ್ತವಾಗಿದೆ. ಮತ್ತೆ ದುರ್ಜನರು ಉದ್ಭವಿಸುವರು! ಅವರ ಸಹವಾಸದಿಂದ ಸಜ್ಜನರು ದುರ್ಜನರಾಗುವರು. ಅವರ ಭಾರವನ್ನು ಹೊತ್ತ ಈ ಭೂಮಿಯು ಗೋರೂಪವನ್ನು ಧರಿಸಿ ಯಾರನ್ನಾಶ್ರಯಿಸಬೇಕು ? ಹೇ ಕಮಲ-ಲೋಚನ, ನಿನ್ನ ಹೊರತಾಗಿ ಭೂಮಿಯನ್ನು ರಕ್ಷಿಸತಕ್ಕ ಇನ್ನೊಬ್ಬನು ಕಂಡು ಬರುವುದಿಲ್ಲ (೫೬–೫೭). ಹೇ ಭಕ್ತವತ್ಸಲ, ಸಜ್ಜನರಲ್ಲಿ ಕೃಪೆಯಿಡು, ತೆರಳ ಬೇಡ! ನಿರಾಕಾರನೂ ಚಿನ್ಮಯನೂ ಆದ ನೀನು ಭಕ್ತರಿಗೋಸ್ಕರವಲ್ಲವೆ ಸಗುಣನಾಗಿ ಅವತರಿಸಿದ್ದು ? ನೀನು ಹೊರಟುಹೋದರೆ ನಿನ್ನ ಭಕ್ತರಾದವರು

ತ್ವದ್ವಿಯೋಗೇನ ತೇ ಭಕ್ತಾಃ ಕಥಂ ಸ್ಥಾಸ್ಯಂತಿ ಭೂತಲೇ ।
ನಿರ್ಗುಣೋಪಾಸನೇ ಕಷ್ಟಮತಃ ಕಿಂಚಿದ್ವಿಚಾರಯ ॥ ೫೯

ಇತ್ಯುದ್ಧವವಚಃ ಶ್ರುತ್ವಾ ಪ್ರಭಾಸೇಽಚಿಂತಯದ್ಧರಿಃ ।
ಭಕ್ತಾವಲಂಬನಾರ್ಥಾಯ ಕಿಂ ವಿಧೇಯಂ ಮಯೇತಿ ಚ ॥ ೬೦

ಸ್ವಕೀಯಂ ಯದ್ಭವೇತ್ತೇಜಸ್ತಚ್ಚ ಭಾಗವತೇಽದಧಾತ್ ।
ತಿರೋಧಾಯ ಪ್ರವಿಷ್ಟೋಽಯಂ ಶ್ರೀಮದ್ಭಾಗವತಾರ್ಣವಮ್ ॥ ೬೧

ತೇನೇಯಂ ವಾಙ್ಮಯೀ ಮೂರ್ತಿಃ ಪ್ರತ್ಯಕ್ಷಾ ವರ್ತತೇ ಹರೇಃ ।
ಸೇವನಾಚ್ಛ್ರವಣಾತ್ಪಾಠಾದ್ದರ್ಶನಾತ್ಪಾಪನಾಶಿನೀ ॥ ೬೨

ಸಪ್ತಾಹಶ್ರವಣಂ ತೇನ ಸರ್ವೇಭ್ಯೋಽಪ್ಯಧಿಕಮ್ ಕೃತಮ್ ।
ಸಾಧನಾನಿ ತಿರಸ್ಕೃತ್ಯ ಕಲೌ ಧರ್ಮೋಽಯಮೀರಿತಃ ॥ ೬೩

ದುಃಖದಾರಿದ್ರ್ಯದೌರ್ಭಾಗ್ಯಪಾಪಪ್ರಕ್ಷಾಲನಾಯ ಚ ।
ಕಾಮಕ್ರೋಧಜಯಾರ್ಥಂ ಹಿ ಕಲೌ ಧರ್ಮೋಽಯಮೀರಿತಃ ॥ ೬೪

---

ಭೂತಳದಲ್ಲಿರುವುದಾದರೂ ಎಂತು ? ನಿರ್ಗುಣೋಪಾಸನೆಯೇ ಕಷ್ಟಕರವಾದದ್ದು. ಆದ್ದರಿಂದ ಸ್ವಲ್ಪ ವಿಚಾರಮಾಡು" ಎಂದನು (೫೮–೫೯). ಪ್ರಭಾಸಕ್ಷೇತ್ರದಲ್ಲಿದ್ದಾಗ ಶ್ರೀಹರಿಯು ಉದ್ಧವನ ಈ ಮಾತನ್ನು ಕೇಳಿ, 'ಭಕ್ತರ ಅವಲಂಬನೆಗಾಗಿ ಏನು ಮಾಡಲಿ ?' ಎಂದು ತನ್ನಲ್ಲಿ ಆಲೋಚಿಸಿ, ತನ್ನ ತೇಜೋವಿಶೇಷವನ್ನು ಭಾಗವತ ಪುರಾಣದಲ್ಲಿರಿಸಿದನು. ತಾನು ಅಂತರ್ಧಾನಹೊಂದಿ ಶ್ರೀಮದ್ಭಾಗವತ ಸಾಗರವನ್ನು ಶ್ರೀಕೃಷ್ಣನು ಪ್ರವೇಶಿಸಿದನು (೬೦–೬೧). ಆದ್ದರಿಂದ, ಶೌನಕರೆ, ಈ ಭಾಗವತವು ಶ್ರೀಹರಿಯ ಪ್ರತ್ಯಕ್ಷವಾದ ವಾಙ್ಮಯಮೂರ್ತಿಯಾಗಿದೆ. ಇದರ ಸೇವನೆಯಿಂದ, ಶ್ರವಣದಿಂದ, ವಾಚನದಿಂದ, ದರ್ಶನದಿಂದ ಸಹ ಪಾಪವು ನಾಶವಾಗುತ್ತದೆ. ಆದಕಾರಣ ಇದರ ಸಪ್ತಾಹಶ್ರವಣವು ಇತರ ಎಲ್ಲ ಧರ್ಮಗಳಿಗಿಂತಲೂ ಮಹತ್ತರವೆಂದು ನಿರ್ಣೀತವಾಗಿದೆ. ಕಲಿಯುಗದಲ್ಲಿ ಅನ್ಯಸಾಧನಗಳನ್ನು ಅಲ್ಲಗಳೆದು ಈ ಭಾಗವತಧರ್ಮವು ಉತ್ತಮವೆಂದು ಸಿದ್ಧವಾಗಿದೆ (೬೨–೬೩). ದುಃಖ - ದಾರಿದ್ರ್ಯ - ಭಾಗ್ಯಹೀನತೆಗಳನ್ನು ಕಳೆದುಕೊಳ್ಳುವುದಕ್ಕಾಗಿಯೂ ಪಾಪಗಳನ್ನು ತೊಡೆದುಹಾಕುವುದಕ್ಕಾಗಿಯೂ ಕಾಮಕ್ರೋಧಾದಿ

ಅನ್ಯಥಾ ವೈಷ್ಣವೀ ಮಾಯಾ ದೇವೈರಪಿ ಸುದುಸ್ತ್ಯಜಾ ।
ಕಥಂ ತ್ಯಾಜ್ಯಾ ಭವೇತ್ಪುಂಭಿಃ ಸಪ್ತಾಹೋಽತಃ ಪ್ರಕೀರ್ತಿತಃ ॥ ೬೫

ಸೂತ ಉವಾಚ—

ಏವಂ ನಗಾಹಶ್ರವಣೋರುಧರ್ಮೇ
ಪ್ರಕಾಶ್ಯಮಾನೇ ಋಷಿಭಿಃ ಸಭಾಯಾಮ್ ।
ಆಶ್ಚರ್ಯಮೇಕಂ ಸಮಭೂತ್ತದಾನೀಂ
ತದುಚ್ಯತೇ ಸಂಶೃಣು ಶೌನಕ ತ್ವಮ್ ॥ ೬೬

ಭಕ್ತಿಃ ಸುತೌ ತೌ ತರುಣೌ ಗೃಹೀತ್ವಾ
ಪ್ರೇಮೈಕರೂಪಾ ಸಹಸಾಽಽವಿರಾಸೀತ್ ।
ಶ್ರೀಕೃಷ್ಣ ಗೋವಿಂದ ಹರೇ ಮುರಾರೇ
ನಾಥೇತಿ ನಾಮಾನಿ ಮುಹುರ್ವದಂತೀ ॥ ೬೭

ತಾಂ ಚಾಗತಾಂ ಭಾಗವತಾರ್ಥಭೂಷಾಂ
ಸುಚಾರುವೇಷಾಂ ದದೃಶುಃ ಸದಸ್ಯಾಃ ।
ಕಥಂ ಪ್ರವಿಷ್ಟಾ ಕಥಮಾಗತೇಯಂ
ಮಧ್ಯೇ ಮುನೀನಾಮಿತಿ ತರ್ಕಯಂತಃ ॥ ೬೮

---

ಗಳನ್ನು ಜಯಿಸುವುದಕ್ಕಾಗಿಯೂ ಈ ಭಾಗವತೋಕ್ತಧರ್ಮವು ಪ್ರಶಸ್ತವಾದ ಸಾಧನವಾಗಿದೆ. ಈ ವೈಷ್ಣವಮಾಯೆಯೆಂಬುದನ್ನು ತ್ಯಜಿಸುವುದು ದೇವತೆಗಳಿಗೂ ಶಕ್ಯವಲ್ಲ. ಇನ್ನು ಮಾನವರಿಗೆ ಶಕ್ಯವಾದೀತೆ? ಆದ್ದರಿಂದ ಈ ಮಾಯಾಬಂಧದಿಂದ ಬಿಡುಗಡೆ ಹೊಂದುವುದಕ್ಕಾಗಿ ಭಾಗವತದ ಸಪ್ತಾಹಶ್ರವಣವಿಧಿಯು ಉಕ್ತವಾಗಿದೆ (೬೪–೬೫) ಶೌನಕರೆ, ಈ ಪ್ರಕಾರವಾಗಿ ಸಪ್ತಾಹಶ್ರವಣವೆಂಬ ಶ್ರೇಷ್ಠವಾದ ಧರ್ಮವನ್ನು ಸನಕಾದಿಋಷಿಗಳು ಸಭೆಯಲ್ಲಿ ಘೋಷಿಸುತ್ತಿರಲಾಗಿ, ಒಂದು ವಿಸ್ಮಯಕರವಾದ ಘಟನೆಯು ನಡೆಯಿತು. ಅದೇನೆಂಬುದನ್ನು ಹೇಳುತ್ತೇನೆ, ಕೇಳಿರಿ : ಪ್ರೇಮೈಕಸ್ವರೂಪಳಾದ ಭಕ್ತಿಯು ತರುಣರಾದ ಜ್ಞಾನವೈರಾಗ್ಯರೆಂಬ ತನ್ನ ಇಬ್ಬರು ಪುತ್ರರನ್ನು ಕರೆದುಕೊಂಡು ಥಟ್ಟನೆ ಅಲ್ಲಿ ಕಾಣಿಸಿಕೊಂಡಳು! 'ಶ್ರೀಕೃಷ್ಣ ಗೋವಿಂದ ಹರೇ ಮುರಾರೇ ಹೇ ನಾಥ' ಎಂದು ಮತ್ತೆಮತ್ತೆ ಜಪಿಸುತ್ತ ಬಂದಳು! (೬೬–೬೭). ಭಾಗವತಸಿದ್ಧಾಂತಕ್ಕೆ ಭೂಷಣಪ್ರಾಯಳೂ ಸುಂದರಾಕೃತಿಯವಳೂ ಆದ ಅವಳನ್ನು ಸದಸ್ಯರೆಲ್ಲರೂ ನೋಡಿದರು! 'ಇವಳು ಇಲ್ಲಿಗೆ

ಊಚುಃ ಕುಮಾರಾ ವಚನಂ ತದಾನೀಂ
ಕಥಾರ್ಥತೋ ನಿಷ್ಪತಿತಾಧುನೇಯಮ್ ।
ಏನಂ ಗಿರಃ ಸಾ ಸಸುತಾ ನಿಶಮ್ಯ
ಸನತ್ಕುಮಾರಂ ನಿಜಗಾದ ನಮ್ರಾ ॥ ೬೯

ಭಕ್ತಿರುವಾಚ—

ಭವದ್ಭಿರದ್ಯೈವ ಕೃತಾಸ್ಮಿ ಪುಷ್ಟಾ
ಕಲಿಪ್ರಣಷ್ಟಾಪಿ ಕಥಾರಸೇನ ।
ಕ್ವಾಹಂ ತು ತಿಷ್ಠಾಮ್ಯಧುನಾ ಬ್ರುವಂತು
ಬ್ರಾಹ್ಮಾ ಇದಂ ತಾಂ ಗಿರಮೂಚಿರೇ ತೇ ॥ ೭೦

ಭಕ್ತೇಷು ಗೋವಿಂದಸ್ವರೂಪಕರ್ತ್ರೀ
ಪ್ರೇಮೈಕಧರ್ತ್ರೀ ಭವರೋಗಹಂತ್ರೀ ।
ಸಾ ತ್ವಂ ಚ ತಿಷ್ಠಸ್ವ ಸುಧೈರ್ಯಸಂಶ್ರಯಾ
ನಿರಂತರಂ ವೈಷ್ಣವಮಾನಸಾನಿ ॥ ೭೧

ತತೋಽಪಿ ದೋಷಾಃ ಕಲಿಜಾ ಇಮೇ ತ್ವಾಂ
ದ್ರಷ್ಟುಂ ನ ಶಕ್ತಾಃ ಪ್ರಭವೋಽಪಿ ಲೋಕೇ ।

---

ಹೇಗೆ ಬಂದಳು? ಮುನಿಗಳ ಸಭೆಯ ನಡುವೆ ಏಕೆ ಪ್ರವೇಶಿಸಿದಳು?' ಎಂದು ಅವರು ತರ್ಕಿಸತೊಡಗಿದರು (೬೮). ಆಗ ಸನತ್ಕುಮಾರರು 'ಶ್ರೀಮದ್ಭಾಗವತ ಕಥಾಸಾರವು ಅರ್ಥರೂಪದಲ್ಲೀಗ ನಿಷ್ಪನ್ನವಾಯಿತು! ಅವಳೇ ಇವಳು!' ಎಂದರು. ಪುತ್ರಸಹಿತಳಾಗಿದ್ದ ಭಕ್ತಿಯು ಆ ಮಾತನ್ನು ಕೇಳಿ ಸನತ್ಕುಮಾರರನ್ನು ಕುರಿತು "ಮಹಾತ್ಮರೆ, ಈಗ ತಾನೇ ನಾನು ನಿಮ್ಮಿಂದ ಸಂಪುಷ್ಟಳಾದೆನು. ಕಲಿದೋಷದಿಂದ ನಷ್ಟಳಾಗಿಹೋಗಿದ್ದರೂ ಭಾಗವತಕಥಾರಸದಿಂದ ಸಂಜೀವಿತಳಾದೆನು. ಇನ್ನು ಮೇಲೆ ನಾನು ಎಲ್ಲಿ ವಾಸವಾಗಿರಬೇಕು, ಹೇಳಿರಿ" ಎಂದಳು (೬೯–೭೦). ಆಗ ಬ್ರಹ್ಮನ ಮಾನಸಪುತ್ರರಾದ ಕುಮಾರರು "ಭದ್ರೆ, ಭಕ್ತರ ಹೃದಯದಲ್ಲಿ ವಾಸವಾಗಿರು. ಶ್ರೀಕೃಷ್ಣನ ಸಾರೂಪ್ಯವನ್ನುಂಟುಮಾಡತಕ್ಕವಳೂ ಕೇವಲ ಪ್ರೇಮ ಸ್ವರೂಪಳೂ ಭವರೋಗ ಹಾರಿಣಿಯೂ ಆದ ನೀನು ವಿಷ್ಣುಭಕ್ತರ ಅಂತಃಕರಣದಲ್ಲಿ ಧೈರ್ಯದಿಂದ ನೆಲೆಸು (೭೧). ಆಗ ಕಲಿಜನ್ಯಗಳಾದ ದೋಷಗಳು ಎಷ್ಟು ಪ್ರಬಲ

ಏವಂ ತದಾಜ್ಞಾವಸರೇಽಪಿ ಭಕ್ತಿ-
ಸ್ತದಾ ನಿಷಣ್ಣಾ ಹರಿದಾಸಚಿತ್ತೇ ॥ ೭೨

ಸಕಲಭುವನಮಧ್ಯೇ ನಿರ್ಧನಾಸ್ತೇಽಪಿ ಧನ್ಯಾ
ನಿವಸತಿ ಹೃದಿ ಯೇಷಾಂ ಶ್ರೀಹರೇರ್ಭಕ್ತಿರೇಕಾ ।
ಹರಿರಪಿ ನಿಜಲೋಕಂ ಸರ್ವಥಾತೋ ವಿಹಾಯ
ಪ್ರವಿಶತಿ ಹೃದಿ ತೇಷಾಂ ಭಕ್ತಿಸೂತ್ರೋಪನದ್ಧಃ ॥ ೭೩

ಬ್ರೂಮೋಽದ್ಯ ತೇ ಕಿಮಧಿಕಂ ಮಹಿಮಾನಮೇವಂ
ಬ್ರಹ್ಮಾತ್ಮಕಸ್ಯ ಭುವಿ ಭಾಗವತಾಭಿಧಸ್ಯ ।
ಯತ್ಸಂಶ್ರಯಾನ್ನಿಗದಿತೇ ಲಭತೇ ಸುವಕ್ತಾ
ಶ್ರೋತಾಪಿ ಕೃಷ್ಣಸಮತಾಮಲಮನ್ಯಧರ್ಮೈಃ ॥ ೭೪

ಇತಿ ಶ್ರೀಪದ್ಮಪುರಾಣೇ ಉತ್ತರಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ
ಭಕ್ತಿಕಷ್ಟನಿವರ್ತನಂ ನಾಮ ತೃತೀಯೋಧ್ಯಾಯಃ



ವಾಗಿದ್ದರೂ ನಿನ್ನನ್ನು ಕಣ್ಣೆತ್ತಿ ನೋಡಲಾರವು!" ಎಂದು ತಿಳಿಸಿದರು. ಹೀಗೆ ಕುಮಾರರು ಆಜ್ಞೆಮಾಡಲಾಗಿ ಭಕ್ತಿಯು ಶ್ರೀಕೃಷ್ಣಭಕ್ತರ ಹೃದಯದಲ್ಲಿ ಬಂದು ನೆಲೆಸಿದಳು. ಶೌನಕರೆ, ಯಾರ ಹೃದಯದಲ್ಲಿ ಅದ್ವಿತೀಯವಾದ ಶ್ರೀಹರಿಭಕ್ತಿಯು ನೆಲೆಸಿರುವುದೋ ಅವರು ಧನರಹಿತರಾದರೂ ಸಕಲ ಲೋಕಗಳಲ್ಲಿ ಧನ್ಯರೆಂದೇ–ಧನಿಕರೆಂದೇ ತಿಳಿಯಬೇಕು. ಆಗ ಶ್ರೀಹರಿಯು ಭಕ್ತಿಸೂತ್ರಕ್ಕೆ ಕಟ್ಟುಬಿದ್ದು, ತನ್ನ ವೈಕುಂಠಲೋಕದಿಂದ ಬಂದು, ಭಕ್ತರ ಹೃದಯವನ್ನು ಪ್ರವೇಶಿಸುವನು (೭೨-೭೩) ಶೌನಕರೆ, ವೇದಸ್ವರೂಪವಾದ ಭಾಗವತದ ಮಹಿಮೆಯನ್ನು ಇನ್ನೂ ಅಧಿಕವಾಗಿ ಏನು ಹೇಳೋಣ? ಈ ಗ್ರಂಥವನ್ನಾಶ್ರಯಿಸಿ ಪ್ರವಚನ ಮಾಡಿದರೆ ವಕ್ತಾರನೂ ಶ್ರೋತಾರನೂ ಸಹ ಶ್ರೀಕೃಷ್ಣಸಾಮ್ಯವನ್ನೈದುವರು ಉಳಿದ ಧರ್ಮಸಾಧನಗಳಿಂದ ಏನಾಗಬೇಕಾಗಿದೆ? (೭೪).

ಇಲ್ಲಿಗೆ ಶ್ರೀ ಪದ್ಮಪುರಾಣದ ಉತ್ತರಖಂಡದಲ್ಲಿ
ಮೂರನೆಯ ಅಧ್ಯಾಯ



# ಚತುರ್ಥೋಧ್ಯಾಯಃ

ಸೂತ ಉವಾಚ—

ಅಥ ವೈಷ್ಣವಚಿತ್ತೇಷು ದೃಷ್ಟ್ವಾ ಭಕ್ತಿಮಲೌಕಿಕೀಮ್ ।
ನಿಜಲೋಕಂ ಪರಿತ್ಯಜ್ಯ ಭಗವಾನ್ ಭಕ್ತವತ್ಸಲಃ ॥ ೧

ವನಮಾಲೀ ಘನಶ್ಯಾಮಃ ಪೀತವಾಸಾ ಮನೋಹರಃ ।
ಕಾಂಚೀಕಲಾಪರುಚಿರೋ ಲಸನ್ಮುಕುಟಕುಂಡಲಃ ॥ ೨

ತ್ರಿಭಂಗಲಲಿತಶ್ಚಾರುಕೌಸ್ತುಭೇನ ವಿರಾಜಿತಃ ।
ಕೋಟಿಮನ್ಮಥಲಾವಣ್ಯೋ ಹರಿಚಂದನಚರ್ಚಿತಃ ॥ ೩

ಪರಮಾನಂದಚಿನ್ಮೂರ್ತಿರ್ಮಧುರೋ ಮುರಲೀಧರಃ ।
ಆವಿವೇಶ ಸ್ವಭಕ್ತಾನಾಂ ಹೃದಯಾನ್ಯಮಲಾನಿ ಚ ॥ ೪

ವೈಕುಂಠವಾಸಿನೋ ಯೇ ಚ ವೈಷ್ಣವಾ ಉದ್ಧವಾದಯಃ ।
ತತ್ಕಥಾಶ್ರವಣಾರ್ಥಂ ತೇ ಗೂಢರೂಪೇಣ ಸಂಸ್ಥಿತಾಃ ॥ ೫

## ಅಧ್ಯಾಯ ೪

ಆತ್ಮದೇವನ ಕಥೆ. ಗೋಕರ್ಣ ಮತ್ತು ಧುಂಧುಕಾರಿ—ಎಂಬವರ ಜನನ.

ಸೂತಪೌರಾಣಿಕರು ಮುಂದುವರಿಯುತ್ತ ಹೇಳಿದರು: ವಿಷ್ಣುಭಕ್ತರ ಹೃದಯಗಳಲ್ಲಿ ಅಲೌಕಿಕವಾದ ಭಕ್ತಿಯು ಬಂದು ನೆಲೆಸಿದ್ದನ್ನು ಕಂಡು ಭಕ್ತವತ್ಸಲನಾದ ಭಗವಂತನು ತನ್ನ ಲೋಕವನ್ನು ತ್ಯಜಿಸಿ ಬಂದನು (೧). ವನಮಾಲಿಯೂ ಮೇಘಶ್ಯಾಮಲಮೂರ್ತಿಯೂ ಪೀತಾಂಬರಧಾರಿಯೂ ಮನೋಹರನೂ ಕಾಂಚೀಕಲಾಪದಿಂದ ಮನೋಜ್ಞನೂ ಕಿರೀಟಕುಂಡಲಗಳಿಂದ ವಿರಾಜಿತನೂ ಉದರಪ್ರದೇಶದಲ್ಲಿ ತ್ರಿವಳೀಭಂಗಿಯಿಂದ ಲಲಿತನೂ ಉಜ್ವಲವಾದ ಕೌಸ್ತುಭಮಣಿಯಿಂದ ಶೋಭಿತನೂ ಕೋಟಿಮನ್ಮಥಲಾವಣ್ಯನೂ ಹರಿಚಂದನಲಿಪ್ತನೂ ಪರಮಾನಂದಸ್ವರೂಪನೂ ಚಿನ್ಮೂರ್ತಿಯೂ ಮಧುರಾಕೃತಿಯುಳ್ಳವನೂ ಮುರಳೀಧರನೂ ಆದ ಶ್ರೀಕೃಷ್ಣನು ತನ್ನ ಭಕ್ತರ ನಿರ್ಮಲಹೃದಯಗಳನ್ನು ಪ್ರವೇಶಿಸಿದನು (೨-೪). ವೈಕುಂಠವಾಸಿಗಳಾಗಿದ್ದ ಉದ್ಧವನೇ ಮೊದಲಾದ ವಿಷ್ಣುಭಕ್ತರು ಭಾಗವತಕಥಾ-ಶ್ರವಣ ಮಾಡುವುದಕ್ಕಾಗಿ ಗೂಢರೂಪದಿಂದ ಸಭೆಗೆ ಬಂದರು. ಎಲ್ಲೆಲ್ಲಿಯೂ

ತದಾ ಜಯಜಯಾರಾವೋ ರಸಪುಷ್ಟಿರಲೌಕಿಕೀ ।
ಚೂರ್ಣಪ್ರಸೂನವೃಷ್ಟಿಶ್ಚ ಮುಹುಃ ಶಂಖರವೋಽಪ್ಯಭೂತ್ ॥ ೬

ತತ್ಸಭಾಸಂಸ್ಥಿತಾನಾಂ ಚ ದೇಹಗೇಹಾತ್ಮವಿಸ್ಮೃತಿಃ ।
ದೃಷ್ಟ್ವಾ ಚ ತನ್ಮಯಾವಸ್ಥಾಂ ನಾರದೋ ವಾಕ್ಯಮಬ್ರವೀತ್ ॥ ೭

ಅಲೌಕಿಕೋಽಯಂ ಮಹಿಮಾ ಮುನೀಶ್ವರಾಃ
ಸಪ್ತಾಹಜನ್ಯೋಽದ್ಯ ವಿಲೋಕಿತೋ ಮಯಾ ।
ಮೂಢಾಃ ಶಠಾ ಯೇ ಪಶುಪಕ್ಷಿಣೋಽತ್ರ
ಸರ್ವೇಽಪಿ ನಿಷ್ಪಾಪತಮಾ ಭವಂತಿ ॥ ೮

ಅತೋ ನೃಲೋಕೇ ನನು ನಾಸ್ತಿ ಕಿಂಚಿ-
ಚ್ಚಿತ್ತಸ್ಯ ಶೋಧಾಯ ಕಲೌ ಪವಿತ್ರಮ್ ।
ಅಘೌಘವಿಧ್ವಂಸಕರಂ ತಥೈವ
ಕಥಾಸಮಾನಂ ಭುವಿ ನಾಸ್ತಿ ಚಾನ್ಯತ್ ॥ ೯

---

ಜಯಜಯವೆಂಬ ಧ್ವನಿ ಎದ್ದಿತು. ಭಾಗವತಕಥೆಗೆ ಅಪೂರ್ವವಾದ ರಸಪುಷ್ಟಿಯೊದಗಿತು. ಪರಿಮಳಚೂರ್ಣಗಳೂ ಪುಷ್ಪಗಳೂ ಉದುರಿದವು. ಮೇಲಿಂದ ಮೇಲೆ ಶಂಖಧ್ವನಿಯು ಮೊಳಗಿತು (೫–೬) ಆ ಸಭೆಯಲ್ಲಿ ನೆರೆದವರು ದೇಹವನ್ನೂ ಮರೆತರು. ಮನೆಯನ್ನೂ ಮರೆತರು. ತಮ್ಮನ್ನೇ ಮರೆತರು! ಸದಸ್ಯರ ಈ ತನ್ಮಯಾವಸ್ಥೆಯನ್ನು ಕಂಡು ನಾರದ ಮುನಿಗಳು ಇಂತೆಂದರು (೭) : " ಓ ಮುನೀಶ್ವರರೆ, ಭಾಗವತ ಸಪ್ತಾಹದಿಂದಾಗುವ ಈ ಅಲೌಕಿಕ ಮಹಿಮೆಯನ್ನು ನಾನು ಕಣ್ಣಾರೆ ಕಂಡೆನು. ಇಂತಹ ಸ್ಥಳಕ್ಕೆ ಬಂದ ಮೂಢರೂ ದುರ್ವಿನೀತರೂ ಪಶುಪಕ್ಷಿಗಳೂ ಸಹ ತಮ್ಮ ಪಾಪಕರ್ಮಗಳನ್ನು ನಿಃಶೇಷವಾಗಿ ತೊಡೆದುಕೊಳ್ಳುತ್ತಾರೆ (೮). ಕಲಿಯುಗದಲ್ಲಿ ಚಿತ್ತಶೋಧನೆಗೆ ಈ ಭಾಗವತಕ್ಕೆ ಸಮವಾದ ಇನ್ನೊಂದು ಪವಿತ್ರವಸ್ತು ಭೂಲೋಕದಲ್ಲಿಲ್ಲ. ಹಾಗೆಯೇ ಪಾಪರಾಶಿಯನ್ನು ವಿಧ್ವಂಸಗೊಳಿಸತಕ್ಕ ಇದಕ್ಕೆ ಸಮಾನವಾದದ್ದು ಇನ್ನೊಂದಿಲ್ಲ. ಮಹಾತ್ಮರೆ, ಕಥಾಮಯವಾದ ಈ ಸಪ್ತಾಹ ಜ್ಞಾನಯಜ್ಞದಿಂದ ಯಾರು ಯಾರು ಪವಿತ್ರರಾಗುತ್ತಾರೆ?—ಎಂಬುದನ್ನು ನನಗೆ ಹೇಳಿರಿ. ದಯಾಳುಗಳಾದ ನೀವು ಲೋಕ

ಕೇ ಕೇ ವಿಶುದ್ಧ್ಯಂತಿ ವದಂತು ಮಹ್ಯಂ
ಸಪ್ತಾಹಯಜ್ಞೇನ ಕಥಾಮಯೇನ ।
ಕೃಪಾಲುಭಿರ್ಲೋಕಹಿತಂ ವಿಚಾರ್ಯ
ಪ್ರಕಾಶಿತಃ ಕೋಽಪಿ ನವೀನಮಾರ್ಗಃ ॥ ೧೦

ಕುಮಾರಾ ಊಚುಃ—

ಯೇ ಮಾನವಾಃ ಪಾಪಕೃತಸ್ತು ಸರ್ವದಾ
ಸದಾ ದುರಾಚಾರರತಾ ವಿಮಾರ್ಗಗಾಃ ।
ಕ್ರೋಧಾಗ್ನಿದಗ್ಧಾಃ ಕುಟಿಲಾಶ್ಚ ಕಾಮಿನಃ
ಸಪ್ತಾಹಯಜ್ಞೇನ ಕಲೌ ಪುನಂತಿ ತೇ ॥ ೧೧

ಸತ್ಯೇನ ಹೀನಾಃ ಪಿತೃಮಾತೃದೂಷಕಾ-
ಸ್ತೃಷ್ಣಾಕುಲಾಶ್ಚಾಶ್ರಮಧರ್ಮವರ್ಜಿತಾಃ ।
ಯೇ ದಾಂಭಿಕಾ ಮತ್ಸರಿಣೋಽಪಿ ಹಿಂಸಕಾಃ
ಸಪ್ತಾಹಯಜ್ಞೇನ ಕಲೌ ಪುನಂತಿ ತೇ ॥ ೧೨

ಪಂಚೋಗ್ರಪಾಪಾಶ್ಛಲಛದ್ಮಕಾರಿಣಃ
ಕ್ರೂರಾಃ ಪಿಶಾಚಾ ಇವ ನಿರ್ದಯಾಶ್ಚ ಯೇ ।
ಬ್ರಹ್ಮಸ್ವಪುಷ್ಟಾ ವ್ಯಭಿಚಾರಕಾರಿಣಃ
ಸಪ್ತಾಹಯಜ್ಞೇನ ಕಲೌ ಪುನಂತಿ ತೇ ॥ ೧೩

---

ಹಿತಕ್ಕಾಗಿ ವಿಚಾರಮಾಡಿ ಒಂದು ನವೀನಮಾರ್ಗವನ್ನು ತೋರಿಸಿಕೊಟ್ಟಿದ್ದೀರಿ" ಎಂದರು (೯–೧೦). ಅದಕ್ಕೆ ಕುಮಾರರು ಹೇಳಿದ್ದೇನೆಂದರೆ: ಸರ್ವದಾ ಪಾಪ ಕೃತ್ಯಗಳನ್ನೆಸಗತಕ್ಕವರೂ ದುರಾಚಾರದಲ್ಲಿ ನಿರತರೂ ದುರ್ಮಾರ್ಗದಲ್ಲಿ ಹೋಗ ತಕ್ಕವರೂ ಕ್ರೋಧವೆಂಬ ಅಗ್ನಿಯಿಂದ ಬೆಂದುಹೋಗತಕ್ಕ ಕೋಪಿಷ್ಠರೂ ಮೋಸ ಗಾರರೂ ಕಾಮುಕರೂ ಸಹ ಕಲಿಯುಗದಲ್ಲಿ ಸಪ್ತಾಹಯಜ್ಞದಿಂದ ಪವಿತ್ರರಾಗು ತ್ತಾರೆ (೧೧). ಸತ್ಯವನ್ನಾಡದವರೂ ತಂದೆತಾಯಿಗಳನ್ನು ದೂಷಿಸತಕ್ಕವರೂ ದುರಾಸೆಗೆ ಒಳಗಾದವರೂ ಆಶ್ರಮಧರ್ಮವನ್ನು ಪಾಲಿಸದವರೂ ಠಕ್ಕರೂ ಅಸೂಯಾಪರರೂ ಹಿಂಸಾಮಾರ್ಗದವರೂ ಸಹ ಸಪ್ತಾಹಯಜ್ಞದಿಂದ ಕಲಿಯುಗ ದಲ್ಲಿ ಶುದ್ಧರಾಗುತ್ತಾರೆ (೧೨). ಪಂಚಮಹಾಪಾತಕಗಳನ್ನೆಸಗಿದವರೂ

ಕಾಯೇನ ವಾಚಾ ಮನಸಾಪಿ ಪಾತಕಂ
ನಿತ್ಯಂ ಪ್ರಕುರ್ವಂತಿ ಶಠಾ ಹಠೇನ ಯೇ ।
ಪರಸ್ವಪುಷ್ಟಾ ಮಲಿನಾ ದುರಾಶಯಾಃ
ಸಪ್ತಾಹಯಜ್ಞೇನ ಕಲೌ ಪುನಂತಿ ತೇ ॥ ೧೪

ಅತ್ರ ತೇ ಕೀರ್ತಯಿಷ್ಯಾಮ ಇತಿಹಾಸಂ ಪುರಾತನಮ್ ।
ಯಸ್ಯ ಶ್ರವಣಮಾತ್ರೇಣ ಪಾಪಹಾನಿಃ ಪ್ರಜಾಯತೇ ॥ ೧೫

ತುಂಗಭದ್ರಾತಟೇ ಪೂರ್ವಮಭೂತ್ಪತ್ತನಮುತ್ತಮಮ್ ।
ಯತ್ರ ವರ್ಣಾಃ ಸ್ವಧರ್ಮೇಣ ಸತ್ಯಸತ್ಕರ್ಮತತ್ಪರಾಃ ॥ ೧೬

ಆತ್ಮದೇವಃ ಪುರೇ ತಸ್ಮಿನ್ ಸರ್ವವೇದವಿಶಾರದಃ ।
ಶ್ರೌತಸ್ಮಾರ್ತೇಷು ನಿಷ್ಣಾತೋ ದ್ವಿತೀಯ ಇವ ಭಾಸ್ಕರಃ ॥ ೧೭

---

ಹಠವನ್ನು ಸಾಧಿಸತಕ್ಕವರೂ ವಂಚಕರೂ ಪಿಶಾಚಿಗಳಂತೆ ದಯಾರಹಿತರಾದ ಕ್ರೂರಜನರೂ ಬ್ರಹ್ಮಸ್ವವನ್ನು ಅಪಹರಿಸಿದವರೂ ವ್ಯಭಿಚಾರಿಗಳೂ ಸಹ ಈ ಸಪ್ತಾಹಯಜ್ಞದಿಂದ ಕಲಿಯುಗದಲ್ಲಿ ದೋಷರಹಿತರಾಗುತ್ತಾರೆ (೧೩). ಯಾವ ಶಠಜನರು ದೈಹಿಕವಾಗಿ ವಾಚಿಕವಾಗಿ ಮಾನಸಿಕವಾಗಿಯಾದರೂ ಛಲದಿಂದ ಸದಾ ಪಾಪವನ್ನೆಸಗುತ್ತಾರೋ ಪರಧನದಿಂದ ಪುಷ್ಟರೂ ಕೊಳಕರೂ ದುರಭಿಪ್ರಾಯ ಪೂರಿತರೂ ಆಗಿರುತ್ತಾರೋ ಅವರೂ ಸಹ ಕಲಿಯುಗದಲ್ಲಿ ಸಪ್ತಾಹಯಜ್ಞದಿಂದ ಪರಿಶುದ್ಧರಾಗುತ್ತಾರೆ (೧೪). ಈ ವಿಷಯವಾಗಿ ಪುರಾತನವಾದ ಒಂದು ಇತಿಹಾಸವನ್ನು ನಿಮಗೆ ಹೇಳುತ್ತೇವೆ. ಅದರ ಶ್ರವಣಮಾತ್ರದಿಂದ ಪಾಪ ನಾಶ ವಾಗುವುದು. ಹಿಂದೆ ತುಂಗಭದ್ರಾನದೀತಟವಲ್ಲಿ ಉತ್ತಮವಾದ ಒಂದು ಪಟ್ಟಣ ವಿತ್ತು. ಅಲ್ಲಿ ಎಲ್ಲ ವರ್ಣದವರೂ ಸ್ವಧರ್ಮವನ್ನು ಪಾಲಿಸುತ್ತ ಸತ್ಯವಂತರೂ ಸತ್ಕರ್ಮನಿರತರೂ ಆಗಿದ್ದರು (೧೫-೧೬). ಆ ಪಟ್ಟಣದಲ್ಲಿ ಆತ್ಮದೇವನೆಂಬಾತನು ಸರ್ವವೇದವಿಶಾರದನೂ ಶ್ರೌತಸ್ಮಾರ್ತಕರ್ಮಗಳಲ್ಲಿ ನಿಷ್ಣಾತನೂ ಆಗಿ ಎರಡನೆಯ ಸೂರ್ಯನೋ ಎಂಬಂತೆ ತೇಜಸ್ವಿಯಾಗಿ ಬಾಳುತ್ತಿದ್ದನು. ಅವನು ಶ್ರೀಮಂತ ನಾದರೂ [1]ಭಿಕ್ಷುಕನ ಪಾಡು ಅವನದಾಗಿತ್ತು ! ಅವನಿಗೆ ಧುಂಧುಲಿ ಎಂಬ ಮಡದಿ

---

1. ಮೂಲದಲ್ಲಿ ಭಿಕ್ಷುಕ ಎಂದು ಹೇಳಿದೆ. ಹೆಂಡತಿಯ ದುರ್ಗುಣಗಳಿಂದ ಕಷ್ಟಕ್ಕೀಡಾಗಿದ್ದನೆಂದು ತಾತ್ಪರ್ಯವಿರಬಹುದು.

ಭಿಕ್ಷುಕೋ ವಿತ್ತವಾಂಲ್ಲೋಕೇ ತತ್ಸ್ತ್ರಿಯಾ ಧುಂಧುಲೀ ಸ್ಮೃತಾ ।
ಸ್ವವಾಕ್ಯಸ್ಥಾಪಿಕಾ ನಿತ್ಯಂ ಸುಂದರೀ ಸುಕುಲೋದ್ಭವಾ ॥ ೧೮

ಲೋಕವಾರ್ತಾರತಾ ಕ್ರೂರಾ ಪ್ರಾಯಶೋ ಬಹುಜಲ್ಪಿಕಾ ।
ಶೂರಾ ಚ ಗೃಹಕೃತ್ಯೇಷು ಕೃಪಣಾ ಕಲಹಪ್ರಿಯಾ ॥ ೧೯

ಏವಂ ನಿವಸತೋಃ ಪ್ರೇಮ್ಣಾ ದಂಪತ್ಯೋ ರಮಮಾಣಯೋಃ ।
ಅರ್ಥಾಃ ಕಾಮಾಸ್ತಯೋರಾಸನ್ನ ಸುಖಾಯ ಗೃಹಾದಿಕಮ್ ॥ ೨೦

ಪಶ್ಚಾದ್ಧರ್ಮಾಃ ಸಮಾರಬ್ಧಾಸ್ತಾಭ್ಯಾಂ ಸಂತಾನಹೇತವೇ ।
ಗೋಭೂಹಿರಣ್ಯವಾಸಾಂಸಿ ದೀನೇಭ್ಯೋ ಯಚ್ಛತಃ ಸದಾ ॥ ೨೧

ಧನಾರ್ಧಂ ಧರ್ಮಮಾರ್ಗೇಣ ತಾಭ್ಯಾಂ ನೀತಂ ತಥಾಪಿ ಚ ।
ನ ಪುತ್ರೋ ನಾಪಿ ವಾ ಪುತ್ರೀ ತತಶ್ಚಿಂತಾತುರೋ ಭೃಶಮ್ ॥ ೨೨

ಏಕದಾ ಸ ದ್ವಿಜೋ ದುಃಖಾದ್ ಗೃಹಂ ತ್ಯಕ್ತ್ವಾ ವನಂ ಗತಃ ।
ಮಧ್ಯಾಹ್ನೇ ತೃಷಿತೋ ಜಾತಸ್ತಡಾಗಂ ಸಮುಪೇಯಿವಾನ್ ॥ ೨೩

---

ಇದ್ದಳು. ಅವಳು ಸತ್ಕುಲಪ್ರಸೂತಳೂ ಸುಂದರಿಯೂ ಆಗಿದ್ದರೂ ತನ್ನ ಮಾತೇ ನಡೆಯಬೇಕೆಂಬ ಹಠಸ್ವಭಾವದವಳು (೧೭–೧೮). ಕೆಲಸಕ್ಕೆ ಬಾರದ ಲೋಕವಾರ್ತೆಯಲ್ಲಿ ನಿರತಳೂ ಕ್ರೂರಸ್ವಭಾವದವಳೂ ಬಹಳ ಮಾತಾಡತಕ್ಕ ವಾಚಾಟಳೂ ಆಗಿದ್ದಳು. ಗೃಹಕೃತ್ಯದಲ್ಲಿ ಮಾತ್ರ ದಕ್ಷಳು. ಅವಳು ಜಿಪುಣಳೂ ಜಗಳಗಂಟಿಯೂ ಆಗಿದ್ದಳು. ಆದರೂ ಆ ದಂಪತಿಗಳು ಪ್ರೇಮದಿಂದ ವಿಹರಿಸುತ್ತಿದ್ದಾಗ ಅರ್ಥಕಾಮಗಳು ಅವರಿಗೆ ಬೇಕಾದಷ್ಟು ದೊರಕಿದವು. ಆದರೂ ಮನೆ ಮೊದಲಾದ ಆಸ್ತಿಯು ಮನಸ್ಸಿಗೆ ಸುಖವನ್ನು ನೀಡಲಿಲ್ಲ (೧೯–೨೦). ತರುವಾಯ ಸಂತಾನಪ್ರಾಪ್ತಿಗಾಗಿ ಅವರು ಧರ್ಮಕಾರ್ಯಗಳನ್ನಾರಂಭಿಸಿದರು. ಬಡವರಿಗೆ ಗೋವು ಭೂಮಿ ಸುವರ್ಣ ವಸ್ತ್ರ—ಮೊದಲಾದವನ್ನು ದಾನ ಮಾಡಲಾರಂಭಿಸಿದರು. ತಮ್ಮಲ್ಲಿದ್ದ ಧನದಲ್ಲಿ ಅರ್ಧಭಾಗವನ್ನು ಧರ್ಮಮಾರ್ಗದಲ್ಲಿ ವ್ಯಯ ಮಾಡಿದರು. ಆದರೆ ಪುತ್ರನೂ ಹುಟ್ಟಲಿಲ್ಲ! ಪುತ್ರಿಯೂ ಹುಟ್ಟಲಿಲ್ಲ. ಆಗ ಆತ್ಮದೇವನು ಬಹಳ ಚಿಂತಾಗ್ರಸ್ತನಾದನು (೨೧–೨೨). ಒಂದುಸಲ ಆ ಬ್ರಾಹ್ಮಣನು ಮನೆಯಿಂದ ಹೊರಟು ಕಾಡಿಗೆ ಹೋದನು. ಮಧ್ಯಾಹ್ನದ ಹೊತ್ತಿಗೆ ಬಾಯಾರಿಕೆಯಾದ್ದರಿಂದ ಒಂದು ಕೆರೆಯ ಬಳಿಗೆ ಹೋದನು. ನೀರನ್ನು ಕುಡಿದು

*

ಪೀತ್ವಾ ಜಲಂ ನಿಷಣ್ಣಸ್ತು ಪ್ರಜಾದುಃಖೇನ ಕರ್ಶಿತಃ ।
ಮುಹೂರ್ತಾದಪಿ ತತ್ರೈವ ಸಂನ್ಯಾಸೀ ಕಶ್ಚಿದಾಗತಃ ॥ ೨೪

ದೃಷ್ಟ್ವಾ ಪೀತಜಲಂ ತಂ ತು ವಿಪ್ರೋ ಯಾತಸ್ತದಂತಿಕಮ್ ।
ನತ್ವಾ ಚ ಪಾದಯೋಸ್ತಸ್ಯ ನಿಃಶ್ವಸನ್ ಸಂಸ್ಥಿತಃ ಪುರಃ ॥ ೨೫

ಯತಿರುವಾಚ—

ಕಥಂ ರೋದಿಷಿ ವಿಪ್ರ ತ್ವಂ ಕಾ ತೇ ಚಿಂತಾ ಬಲೀಯಸೀ ।
ವದ ತ್ವಂ ಸತ್ವರಂ ಮಹ್ಯಂ ಸ್ವಸ್ಯ ದುಃಖಸ್ಯ ಕಾರಣಮ್ ॥ ೨೬

ಬ್ರಾಹ್ಮಣ ಉವಾಚ—

ಕಿಂ ಬ್ರವೀಮಿ ಋಷೇ ದುಃಖಂ ಪೂರ್ವಪಾಪೇನ ಸಂಚಿತಮ್ ।
ಮದೀಯಾಃ ಪೂರ್ವಜಾಸ್ತೋಯಂ ಕವೋಷ್ಣಮುಪಭುಂಜತೇ ॥ ೨೭

ಮದ್ದತ್ತಂ ನೈವ ಗೃಹ್ಣಂತಿ ಪ್ರೀತ್ಯಾ ದೇವಾ ದ್ವಿಜಾತಯಃ ।
ಪ್ರಜಾದುಃಖೇನ ಶೂನ್ಯೋಽಹಂ ಪ್ರಾಣಾಂಸ್ತ್ಯಕ್ತುಮಿಹಾಗತಃ ॥ ೨೮

ಧಿಗ್ಜೀವಿತಂ ಪ್ರಜಾಹೀನಂ ಧಿಗ್ಗೃಹಂ ಚ ಪ್ರಜಾಂ ವಿನಾ ।
ಧಿಗ್ಧನಂ ಚಾನಪತ್ಯಸ್ಯ ಧಿಕ್ಕುಲಂ ಸಂತತಿಂ ವಿನಾ ॥ ೨೯

---

ತುಸುಹೊತ್ತು ಕುಳಿತುಕೊಂಡನು. ಸಂತಾನವಾಗಲಿಲ್ಲವೆಂಬ ದುಃಖವು ಅವನನ್ನು ಬಾಧಿಸುತ್ತಿತ್ತು. ಆಗ ಒಬ್ಬ ಸಂನ್ಯಾಸಿ ಅಲ್ಲಿಗೆ ಬಂದನು (೨೩–೨೪). ಆ ಸಂನ್ಯಾಸಿಯು ನೀರನ್ನು ಕುಡಿದಮೇಲೆ ಆತ್ಮದೇವನು ಆತನ ಸಮೀಪಕ್ಕೆ ಹೋಗಿ ಪಾದಗಳಿಗೆ ನಮಸ್ಕರಿಸಿ ನಿಟ್ಟುಸಿರುಬಿಡುತ್ತ ಎದುರಿಗೆ ನಿಂತುಕೊಂಡನು. ಆಗ ಸಂನ್ಯಾಸಿಯು "ಎಲೈ ಬ್ರಾಹ್ಮಣ, ಏಕೆ ಶೋಕಿಸುತ್ತಿದ್ದೀಯೆ. ನಿನಗೆ ಒದಗಿರುವ ಪ್ರಬಲವಾದ ಚಿಂತೆ ಯಾವುದು? ನಿನ್ನ ದುಃಖಕ್ಕೆ ಕಾರಣವೇನೆಂಬುದನ್ನು ಕೂಡಲೇ ಹೇಳು" ಎಂದನು (೨೫–೨೬). ಆ ಬ್ರಾಹ್ಮಣನು ಇಂತೆಂದನು: "ಋಷಿಗಳೆ, ನನ್ನ ದುಃಖದ ಕಾರಣವನ್ನೇನು ಹೇಳಲಿ? ನನ್ನ ಪೂರ್ವಜನ್ಮದ ಪಾಪಸಂಚಯ ವಿದು. ನನ್ನ ಪಿತೃಗಳು ಬೆಚ್ಚನೆಯ ಕಣ್ಣೀರನ್ನು ಅನುಭವಿಸಬೇಕಾಗಿ ಬಂದಿತು. ನಾನು ಅರ್ಪಿಸಿದ ಯಾವುದನ್ನೂ ದೇವತೆಗಳಾಗಲಿ ದ್ವಿಜರಾಗಲಿ ಸಂತೋಷದಿಂದ ಸ್ವೀಕರಿಸುತ್ತಿಲ್ಲ. ಸಂತತಿಯಿಲ್ಲವೆಂಬ ದುಃಖದಿಂದ ದಿಕ್ಕುಗಾಣದೆ, ಆತ್ಮಹತ್ಯೆ ಮಾಡಿಕೊಳ್ಳಲು ಇಲ್ಲಿಗೆ ಬಂದಿದ್ದೇನೆ! (೨೭–೨೮). ಮಕ್ಕಳಿಲ್ಲದ ಬಾಳಿಗೆ

ಪಾಲ್ಯತೇ ಯಾ ಮಯಾ ಧೇನುಃ ಸಾ ವಂಧ್ಯಾ ಸರ್ವಥಾ ಭವೇತ್ ।
ಯೋ ಮಯಾ ರೋಪಿತೋ ವೃಕ್ಷಃ ಸೋऽಪಿ
ವಂಧ್ಯತ್ವಮಾಶ್ರಯೇತ್ ॥ ೩೦

ಯತ್ಫಲಂ ಮದ್ಗೃಹಾಯಾತಂ ತಚ್ಚ ಶೀಘ್ರಂ ವಿನಶ್ಯತಿ ।
ನಿರ್ಭಾಗ್ಯಸ್ಯಾನಪತ್ಯಸ್ಯ ಕಿಮತೋ ಜೀವಿತೇನ ಮೇ ॥ ೩೧

ಇತ್ಯುಕ್ತ್ವಾ ಸ ರುರೋದೋಚ್ಚೈಸ್ತತ್ಪಾರ್ಶ್ವೇ ದುಃಖಪೀಡಿತಃ ।
ತದಾ ತಸ್ಯ ಯತೇಶ್ಚಿತ್ತೇ ಕರುಣಾಭೂದ್ಗರೀಯಸೀ ॥ ೩೨

ತದ್ಭಾಲಾಕ್ಷರಮಾಲಾಂ ಚ ವಾಚಯಾಮಾಸ ಯೋಗವಾನ್ ।
ಸರ್ವಂ ಜ್ಞಾತ್ವಾ ಯತಿಃ ಪಶ್ಚಾದ್ವಿಪ್ರಮೂಚೇ ಸವಿಸ್ತರಮ್ ॥ ೩೩

ಯತಿರುವಾಚ—

ಮುಂಚಾಜ್ಞಾನಂ ಪ್ರಜಾರೂಪಂ ಬಲಿಷ್ಠಾ ಕರ್ಮಣೋ ಗತಿಃ ।
ವಿವೇಕಂ ತು ಸಮಾಸಾದ್ಯ ತ್ಯಜ ಸಂಸಾರವಾಸನಾಮ್ ॥ ೩೪

ಶೃಣು ವಿಪ್ರ ಮಯಾ ತೇऽದ್ಯ ಪ್ರಾರಬ್ಧಂ ತು ವಿಲೋಕಿತಮ್ ।
ಸಪ್ತಜನ್ಮಾವಧಿ ತವ ಪುತ್ರೋ ನೈವ ಚ ನೈವ ಚ ॥ ೩೫

---

ಧಿಕ್ಕಾರ! ಮಕ್ಕಳಿಲ್ಲದ ಮನೆಗೆ ಧಿಕ್ಕಾರ! ಸಂತತಿಯಿಲ್ಲದವನ ಐಶ್ವರ್ಯಕ್ಕೆ ಧಿಕ್ಕಾರ! ಸಂತಾನವಿಲ್ಲದ ಕುಲವು ನಿಂದ್ಯವಾದದ್ದು! ನಾನು ಸಾಕಿರುವ ಹಸುವು ಕೂಡ ಬಂಜೆಯಾಗಿ ಹೋದೀತು! ನಾನು ಬೆಳೆಸುವ ಮರವೂ ಹಣ್ಣನ್ನು ಕೊಡಲಾರದು! (೨೯-೩೦). ನನ್ನ ಮನೆಗೆ ಬಂದು ಸೇರಿರುವ ಸಂಪತ್ತು ಶೀಘ್ರವಾಗಿ ನಶಿಸುತ್ತದೆ. ಮಕ್ಕಳಿಲ್ಲದೆ ಭಾಗ್ಯಹೀನನಾಗಿರುವ ನನಗೆ ಈ ಪ್ರಾಣದಿಂದ ಏನಾಗಬೇಕು?" ಎಂದು ಹೇಳಿ ಶೋಕಸಂತಪ್ತನಾಗಿ ಆ ಸಂನ್ಯಾಸಿಯೆದುರಿಗೆ ಗಟ್ಟಿಯಾಗಿ ಅಳತೊಡಗಿದನು. ಆಗ ಆ ಯತಿಯ ಚಿತ್ತದಲ್ಲಿ ಕಾರುಣ್ಯವುಂಟಾಯಿತು (೩೧-೩೨). ಯೋಗಬಲವಿದ್ದ ಆ ಯತಿಯು ಆತ್ಮದೇವನ ಹಣೆಬರಹವನ್ನು ಓದಿನೋಡಿ ಹೀಗೆಂದು ವಿವರಿಸಿದನು : "ಎಲೈ ಬ್ರಾಹ್ಮಣ, ಸಂತಾನದ ವಿಷಯದಲ್ಲಿ ನಿನಗಾಗಿರುವ ಈ ಅಜ್ಞಾನವನ್ನು ದೂರಮಾಡು. ಕರ್ಮಗತಿಯು ಪ್ರಬಲವಾದದ್ದು. ವಿವೇಕವನ್ನು ತಂದುಕೊಂಡು ಈ ಸಂಸಾರವಾಸನೆಯನ್ನು ಪರಿತ್ಯಜಿಸು (೩೩-೩೪) ನಿನ್ನ ಪ್ರಾರಬ್ಧವು ಹೇಗಿದೆಯೆಂಬುದನ್ನು ನಾನು ನೋಡಿದೆ. ಇನ್ನು ಏಳು ಜನ್ಮದ

ಸಂತತೇಃ ಸಗರೋ ದುಃಖಮವಾಪಾಂಗಃ ಪುರಾ ತಥಾ ।
ರೇ ಮುಂಚಾದ್ಯ ಕುಟುಂಬಾಶಾಂ ಸಂನ್ಯಾಸೇ ಸರ್ವಥಾ ಸುಖಮ್ ॥ ೩೬

ಬ್ರಾಹ್ಮಣ ಉವಾಚ—

ವಿವೇಕೇನ ಭವೇತ್ಕಿಂ ಮೇ ಪುತ್ರಂ ದೇಹಿ ಬಲಾದಪಿ ।
ನೋ ಚೇತ್ತ್ಯಜಾಮ್ಯಹಂ ಪ್ರಾಣಾಂಸ್ತ್ವದಗ್ರೇ ಶೋಕಮೂರ್ಛಿತಃ ॥ ೩೭

ಪುತ್ರಾದಿಸುಖಹೀನೋಽಯಂ ಸಂನ್ಯಾಸಃ ಶುಷ್ಕ ಏವ ಹಿ ।
ಗೃಹಸ್ಥಃ ಸರಸೋ ಲೋಕೇ ಪುತ್ರಪೌತ್ರಸಮನ್ವಿತಃ ॥ ೩೮

ಇತಿ ವಿಪ್ರಾಗ್ರಹಂ ದೃಷ್ಟ್ವಾ ಪ್ರಾಬ್ರವೀತ್ಸ ತಪೋಧನಃ ।
ಚಿತ್ರಕೇತುರ್ಗತಃ ಕಷ್ಟಂ ವಿಧಿಲೇಖವಿಮಾರ್ಜನಾತ್ ॥ ೩೯

---

ವರೆಗೂ ನಿನಗೆ ನಿಶ್ಚಯವಾಗಿ ಪುತ್ರಯೋಗವಿಲ್ಲ ! ಸಗರಚಕ್ರವರ್ತಿಯೇ ಹಿಂದೆ ಮಕ್ಕಳಿಂದ ಕಷ್ಟವನ್ನನುಭವಿಸಿದ್ದಾನೆ. ಹಾಗೆಯೇ [1]ಅಂಗನೆಂಬ ರಾಜನೂ ಅನುಭವಿಸಿದ್ದಾನೆ. ಎಲೋ ! ಕುಟುಂಬವ ಆಸೆಯನ್ನು ಬಿಡು. ಸರ್ವಥಾ ಸಂನ್ಯಾಸವನ್ನು ತೆಗೆದುಕೊಂಡರೆ ಸುಖ ಉಂಟು !" ಎಂದನು (೩೫–೩೬). ಆದಕ್ಕೆ ಆ ವಿಪ್ರನು " ಸ್ವಾಮಿ, ಈ ವಿವೇಕದಿಂದ ನನಗೇನಾದೀತು ? ಹೇಗಾದರೂ ನನಗೆ ಪುತ್ರಸಂತಾನವಾಗುವಂತೆ ಕರುಣಿಸಿರಿ. ಇಲ್ಲದಿದ್ದರೆ ಶೋಕಸಂತಪ್ತನಾದ ನಾನು ನಿಮ್ಮೆದುರಿಗೆ ಪ್ರಾಣವನ್ನು ತ್ಯಜಿಸುವೆನು. ಪುತ್ರಾದಿ ಸಂಸಾರದಿಂದಾಗುವ ಸುಖವಿಲ್ಲದೇ ಇರುವ ಸಂನ್ಯಾಸವು ಒಣಸಂನ್ಯಾಸವಲ್ಲವೆ ? ಪುತ್ರಪೌತ್ರರಿಂದ ಸಹಿತನಾಗಿ ಮೆರೆಯುವ ಗೃಹಸ್ಥನೇ ಲೋಕದಲ್ಲಿ ಸಾರವತ್ತಾದವನು " ಎಂದು ಸಂತತಿಗಾಗಿ ಆಗ್ರಹಪಡಿಸಿದನು (೩೭–೩೮). ಆತ್ಮದೇವನ ಹಠವನ್ನು ಕಂಡು ಆ ತಪೋಧನನು " ಅಯ್ಯಾ, ಬ್ರಹ್ಮನು ಬರೆದ ಹಣೆಬರಹವನ್ನು ಒರಸಲು ಪ್ರಯತ್ನಿಸಿ ಹಿಂದೆ ಚಿತ್ರಕೇತು [2]ಕಷ್ಟಕ್ಕೊಳಗಾದನು. ನಿನಗೆ ಪುತ್ರನಿಂದ ಸುಖವಾಗುವುದಿಲ್ಲ ! ದುರದೃಷ್ಟಶಾಲಿಯ ಪ್ರಯತ್ನದಂತೆ ಮಗನಿಂದ ಸುಖವಾಗದು. ಆದರೂ ತುಂಬ ಹಠಮಾಡು

---

1. ಈತನ ಮಗ ವೇನರಾಜ. ಮಗನ ದೌರ್ಜನ್ಯದಿಂದ ನಿರ್ವಿಣ್ಣನಾಗಿ ಅಂಗನು ರಾಜಧಾನಿಯನ್ನು ಬಿಟ್ಟು ಹೋದನು (ಭಾಗ ೪–೧೩).

2. ಅನುಬಂಧವನ್ನು ನೋಡಿ—೧೨.

ನ ಯಾಸ್ಯಸಿ ಸುಖಂ ಪುತ್ರಾದ್ಯಥಾ ದೈವಹತೋದ್ಯಮಃ ।
ಅತೋ ಹಠೇನ ಯುಕ್ತೋಽಸಿ ಹ್ಯರ್ಥಿನಂ ಕಿಂ ವದಾಮ್ಯಹಮ್ ॥ ೪೦

ತಸ್ಯಾಗ್ರಹಂ ಸಮಾಲೋಕ್ಯ ಫಲಮೇಕಂ ಸ ದತ್ತವಾನ್ ।
ಇದಂ ಭಕ್ಷಯ ಪತ್ನ್ಯಾ ತ್ವಂ ತತಃ ಪುತ್ರೋ ಭವಿಷ್ಯತಿ ॥ ೪೧

ಸತ್ಯಂ ಶೌಚಂ ದಯಾ ದಾನಮೇಕಭಕ್ತಂ ತು ಭೋಜನಮ್ ।
ವರ್ಷಾವಧಿ ಸ್ತ್ರಿಯಾ ಕಾರ್ಯಂ ತೇನ ಪುತ್ರೋಽತಿನಿರ್ಮಲಃ ॥ ೪೨

ಏವಮುಕ್ತ್ವಾ ಯಯೌ ಯೋಗೀ ವಿಪ್ರಸ್ತು ಗೃಹಮಾಗತಃ ।
ಪತ್ನ್ಯಾಃ ಪಾಣೌ ಫಲಂ ದತ್ವಾ ಸ್ವಯಂ ಯಾತಸ್ತು ಕುತ್ರಚಿತ್ ॥ ೪೩

ತರುಣೀ ಕುಟಿಲಾ ತಸ್ಯ ಸಖ್ಯಗ್ರೇ ಚ ರುರೋದ ಹ ।
ಅಹೋ ಚಿಂತಾ ಮಮೋತ್ಪನ್ನಾ ಫಲಂ ಚಾಹಂ ನ ಭಕ್ಷಯೇ ॥ ೪೪

---

ತ್ತಿದ್ದೀಯೆ. ಪುತ್ರಾರ್ಥಿಯಾದ ನಿನಗೆ ಇನ್ನೇನು ಹೇಳಲಿ ?" ಎಂದನು (೩೯–೪೦). ಅನಂತರ ಆ ಬ್ರಾಹ್ಮಣನ ಮೊಂಡುತನವನ್ನು ನೋಡಿ ಯತೀಶ್ವರನು ಒಂದು ಫಲವನ್ನು ಅವನಿಗಿತ್ತು "ಈ ಫಲವನ್ನು ನಿನ್ನ [1]ಪತ್ನಿಯಿಂದ ತಿನ್ನಿಸು. ಅದರಿಂದ ಪುತ್ರಸಂತಾನವಾಗುವುದು. ಆ ಸ್ತ್ರೀಯು ಒಂದು ವರ್ಷದವರೆಗೆ ಸತ್ಯ, ಶೌಚ, ದಯಾ, ದಾನ—ಎಂಬ ಧರ್ಮಗಳನ್ನು ತಪ್ಪದೆ ಪಾಲಿಸಬೇಕು. ದಿನಕ್ಕೆ ಒಂದು ಹೊತ್ತು ಮಾತ್ರ ಭೋಜನ ಮಾಡತಕ್ಕದ್ದು. ಹೀಗೆ ಮಾಡಿದರೆ ನಿರ್ಮಲನಾದ ಗುಣಶಾಲಿ ಪುತ್ರನು ಜನಿಸುವನು" ಎಂದು ಹೇಳಿದನು (೪೧–೪೨). ಹೀಗೆ ಹೇಳಿ ಆ ಯೋಗೀಶ್ವರನು ಹೊರಟುಹೋದನು. ಇತ್ತಲಾಗಿ ವಿಪ್ರನು ಮನೆಗೆ ಬಂದು ಆ ಫಲವನ್ನು ಪತ್ನಿಯ ಕೈಗೆ ಕೊಟ್ಟು ತಾನು ಎಲ್ಲಿಗೋ ಕಾರ್ಯನಿಮಿತ್ತವಾಗಿ ತೆರಳಿದನು (೪೩). ವಿಪ್ರನ ಪತ್ನಿಯಾದ ಧುಂಧುಳಿಯು ಕುಟಿಲಬುದ್ಧಿಯ ತರುಣಿಯಾಗಿದ್ದಳು. ಅವಳು ತನ್ನ ಗೆಳತಿಯ ಎದುರಿಗೆ ತನ್ನ ಗೋಳನ್ನು ಹೇಳಿಕೊಂಡು ಅತ್ತಳು. "ಅಯ್ಯೋ ! ನನಗೊಂದು ದೊಡ್ಡ ಚಿಂತೆ ಹುಟ್ಟಿತು. ನಾನು

---

1. ಮೂಲದಲ್ಲಿ 'ಇದಂ ಭಕ್ಷಯ ಪತ್ನ್ಯಾ ತ್ವಂ' ಎಂದಿದೆ. 'ಇದನ್ನು ಪತ್ನಿಯೊಡನೆ ತಿನ್ನು' ಎಂಬ ಅರ್ಥವು ಸಹಜವಾಗಿ ತೋರುತ್ತದೆ. ಆದರೆ ಮುಂದಿನ ಕಥಾನುಸಾರವಾಗಿ 'ಭಕ್ಷಯ' ಎಂಬಲ್ಲಿ ಪ್ರೇರಣಾರ್ಥದ ಇನ್ನೊಂದು 'ಣಿಚ್' ಪ್ರತ್ಯಯವನ್ನು ಸೇರಿಸಿ ಅರ್ಥ ಮಾಡಲಾಗಿದೆ.

ಫಲಭಕ್ಷಣೇನ ಗರ್ಭಃ ಸ್ಯಾದ್ಗರ್ಭೇಣೋದರವೃದ್ಧಿತಾ ।
ಸ್ವಲ್ಪಭಕ್ಷಂ ತತೋಽಶಕ್ತಿರ್ಗೃಹಕಾರ್ಯಂ ಕಥಂ ಭವೇತ್ ॥ ೪೫

ದೈವಾದ್ ಧಾಟೀ ವ್ರಜೇದ್ಗ್ರಾಮೇ ಪಲಾಯೇದ್ಗರ್ಭಿಣೀ ಕಥಮ್ ।
ಶುಕವನ್ನಿವಸೇದ್ಗರ್ಭಸ್ತಂ ಕುಕ್ಷೇಃ ಕಥಮುತ್ಸೃಜೇತ್ ॥ ೪೬

ತಿರ್ಯಕ್ಚೇದಾಗತೋ ಗರ್ಭಸ್ತದಾ ಮೇ ಮರಣಂ ಭವೇತ್ ।
ಪ್ರಸೂತೌ ದಾರುಣಂ ದುಃಖಂ ಸುಕುಮಾರೀ ಕಥಂ ಸಹೇ ॥ ೪೭

ಮಂದಾಯಾಂ ಮಯಿ ಸರ್ವಸ್ವಂ ನನಾಂದಾ ಸಂಹರೇತ್ತದಾ ।
ಸತ್ಯಶೌಚಾದಿನಿಯಮೋ ದುರಾರಾಧ್ಯಃ ಸ ದೃಶ್ಯತೇ ॥ ೪೮

ಲಾಲನೇ ಪಾಲನೇ ದುಃಖಂ ಪ್ರಸೂತಾಯಾಶ್ಚ ವರ್ತತೇ ।
ವಂಧ್ಯಾ ವಾ ವಿಧವಾ ನಾರೀ ಸುಖಿನೀ ಚೇತಿ ಮೇ ಮತಿಃ ॥ ೪೯

ಏವಂ ಕುತರ್ಕಯೋಗೇನ ತತ್ಫಲಂ ನೈವ ಭಕ್ಷಿತಮ್ ।
ಪತ್ಯಾ ಪೃಷ್ಟಂ ಫಲಂ ಭುಕ್ತಂ ಭುಕ್ತಂ ಚೇತಿ ತಯೇರಿತಮ್ ॥ ೫೦

---

ಈ ಹಣ್ಣನ್ನು ತಿನ್ನುವುದಿಲ್ಲ! ಹಣ್ಣನ್ನು ತಿಂದರೆ ಗರ್ಭ ನಿಲ್ಲುತ್ತದೆ. ನಾನು ಗರ್ಭಿಣಿಯಾದರೆ ಹೊಟ್ಟೆ ದಪ್ಪವಾಗುತ್ತದೆ. ಆಹಾರ ಕಡಿಮೆಯಾಗುತ್ತದೆ! ಕಡಿಮೆಯಾದರೆ ದೇಹದಲ್ಲಿ ಅಶಕ್ತಿ ತಲೆದೋರುತ್ತದೆ. ಆಗ ಮನೆಗೆಲಸ ನಡೆಯುವುದು ಹೇಗೆ! (೪೪–೪೫). ಆಕಸ್ಮಾತ್ ಈ ಊರಿನಲ್ಲಿ ಸೈನಿಕರ ಧಾಳಿ ನಡೆಯಬಹುದು! ಆಗ ಬಸುರಿಯಾದವಳು ಓಡಿಹೋಗುವುದು ಹೇಗೆ? ಗಿಣಿಯ ಹಾಗೆ ಹೊಟ್ಟೆಯಲ್ಲಿ ಗರ್ಭವು ಕುಳಿತಿರುತ್ತದೆ! ಅದು ಹೊರಗೆ ಬರುವ ವಿಧಾನವೆಂತು? ಅದು ಹುಟ್ಟುವಾಗ ಅಡ್ಡಲಾಗಿ ಬಂದರೆ ನನಗೆ ಸಾವೇ ಗತಿ! ಹಡೆಯುವಾಗ ಭಯಂಕರ ಯಾತನೆಯಾಗುತ್ತದೆ. ಸುಕುಮಾರಿಯಾದ ನಾನು ಅದನ್ನು ಹೇಗೆ ತಡೆದುಕೊಂಡೇನು! (೪೬–೪೭). ಮನೆಯಲ್ಲಿ ನಾನು ಚುರುಕಾಗಿ ಇಲ್ಲದಿದ್ದರೆ ನನ್ನ ನಾದಿನಿಯು ಸರ್ವಸ್ವವನ್ನೂ ಅಪಹರಿಸಿಬಿಡುವಳು. ಅಲ್ಲದೆ ಸತ್ಯ, ಶೌಚಾದಿ ನಿಯಮಗಳನ್ನು ಪಾಲಿಸಬೇಕಂತೆ. ಅದು ನನಗೆ ಸಾಧ್ಯವೆಂದು ಕಾಣುವುದಿಲ್ಲ! ಹಡೆದವಳಿಗೆ ಮಗುವಿನ ಲಾಲನೆಪಾಲನೆಗಳನ್ನು ಮಾಡುವಾಗ ಎಷ್ಟು ಕಷ್ಟವಾಗುತ್ತದೆ! ಹೆಂಗಸು ಬಂಜೆಯಾಗಿದ್ದರೆ ಅಥವಾ ವಿಧವೆಯಾಗಿದ್ದರೆ ಮಾತ್ರ ಅವಳಿಗೆ ಸುಖವೆಂದು ನನ್ನ ಅಭಿಪ್ರಾಯ!" ಎಂದು ಹಲುಬಿದಳು (೪೮–೪೯). ಹೀಗೆ

ಏಕದಾ ಭಗಿನೀ ತಸ್ಯಾಸ್ತದ್ಗೃಹಂ ಸ್ವೇಚ್ಛಯಾऽऽಗತಾ ।
ತದಗ್ರೇ ಕಥಿತಂ ಸರ್ವಂ ಚಿಂತೇಯಂ ಮಹತೀ ಹಿ ಮೇ ॥ ೫೧

ದುರ್ಬಲಾ ತೇನ ದುಃಖೇನ ಹ್ಯನುಜೇ ಕರವಾಣಿ ಕಿಮ್ ।
ಸಾಬ್ರವೀನ್ಮಮ ಗರ್ಭೋऽಸ್ತಿ ತಂ ದಾಸ್ಯಾಮಿ ಪ್ರಸೂತಿತಃ ॥ ೫೨

ತಾವತ್ಕಾಲಂ ಸಗರ್ಭೇವ ಗುಪ್ತಾ ತಿಷ್ಠ ಗೃಹೇ ಸುಖಮ್ ।
ವಿತ್ತಂ ತ್ವಂ ಮತ್ಪತೇರ್ಯಚ್ಛ ಸ ತೇ ದಾಸ್ಯತಿ ಬಾಲಕಮ್ ॥ ೫೩

ಷಾಣ್ಮಾಸಿಕೋ ಮೃತೋ ಬಾಲ ಇತಿ ಲೋಕೋ ವದಿಷ್ಯತಿ ।
ತಂ ಬಾಲಂ ಪೋಷಯಿಷ್ಯಾಮಿ ನಿತ್ಯಮಾಗತ್ಯ ತೇ ಗೃಹೇ ॥ ೫೪

ಫಲಮರ್ಪಯ ಧೇನ್ವೈ ತ್ವಂ ಪರೀಕ್ಷಾರ್ಥಂ ತು ಸಾಂಪ್ರತಮ್ ।
ತತ್ತದಾಚರಿತಂ ಸರ್ವಂ ತಥೈವ ಸ್ತ್ರೀಸ್ವಭಾವತಃ ॥ ೫೫

---

ಧುಂಧುಳಿಯು ಕುತರ್ಕವನ್ನು ಮಾಡಿದಳೇ ಹೊರತು ಆ ಫಲವನ್ನು ತಿನ್ನಲೇ ಇಲ್ಲ. ಪತಿಯು ಬಂದು ಕೇಳಿದಾಗ 'ತಿಂದೆ! ತಿಂದೆ!' ಎಂದು ಹೇಳಿಬಿಟ್ಟಳು. ಹೀಗಿರುವಾಗ ಅವಳ ತಂಗಿಯು ಒಮ್ಮೆ ಅವಳ ಮನೆಗೆ ಬಂದಳು. ಧುಂಧುಳಿಯು ಆಕೆಗೆ ಈ ವೃತ್ತಾಂತವೆಲ್ಲವನ್ನೂ ತಿಳಿಸಿ, "ಈ ರೀತಿಯಲ್ಲಿ ನನಗೆ ದೊಡ್ಡ ಚಿಂತೆ ಹುಟ್ಟಿಕೊಂಡಿದೆ (೫೦-೫೧). ಈ ದುಃಖದಿಂದ ಸೊರಗಿಹೋಗಿದ್ದೇನೆ. ತಂಗಿ, ಈಗ ನಾನು ಏನು ಮಾಡಲಿ?" ಎಂದಳು. ಅವಳ ತಂಗಿಯು "ಅಕ್ಕ, ನಾನೀಗ ಗರ್ಭಿಣಿಯಾಗಿದ್ದೇನೆ. ಮಗು ಹುಟ್ಟಿದಕೂಡಲೇ ಅದನ್ನು ನಿನಗೆ ಕೊಡುತ್ತೇನೆ! ಅಲ್ಲಿಯವರೆಗೆ ನೀನು ಬಸುರಿಯಾಗಿರುವ ಹಾಗೆ ಮನೆಯಲ್ಲಿ ಗುಟ್ಟಾಗಿ ವ್ಯವಹರಿಸಿಕೊಂಡಿರು! ಸುಖವಾಗಿರು! ಸಾಕಷ್ಟು ಹಣವನ್ನು ನನ್ನ ಗಂಡನಿಗೆ ಕೊಡು. ಆತನು ಮಗುವನ್ನು ನಿನಗೆ ಕೊಡುವನು (೫೨-೫೩). (ನನ್ನ ವಿಷಯದಲ್ಲಿ ಚಿಂತೆ ಬೇಡ) 'ಆರು ತಿಂಗಳಾಗಿದ್ದಾಗ ಮಗು ಸತ್ತು ಹುಟ್ಟಿತಂತೆ!' ಎಂದು ಜನರು ಹೇಳಿಕೊಳ್ಳುವಂತೆ ಮಾಡುವೆನು. ನಿನ್ನ ಮನೆಗೆ ಪ್ರತಿದಿನ ಬಂದು ನಾನು ಆ ಶಿಶುವನ್ನು ಪೋಷಿಸುವೆನು. ಸದ್ಯದಲ್ಲಿ ಆ ಫಲವನ್ನು ನಿನ್ನ ಮನೆಯ ಹಸುವಿಗೆ

ಅಥ ಕಾಲೇನ ಸಾ ನಾರೀ ಪ್ರಸೂತಾ ಬಾಲಕಂ ತದಾ ।
ಆನೀಯ ಜನಕೋ ಬಾಲಂ ರಹಸ್ಯೇ ಧುಂಧುಲೀಂ ದದೌ ॥ ೫೬

ತಯಾ ಚ ಕಥಿತಂ ಭರ್ತ್ರೇ ಪ್ರಸೂತಃ ಸುಖಮರ್ಭಕಃ ।
ಲೋಕಸ್ಯ ಸುಖಮುತ್ಪನ್ನಮಾತ್ಮದೇವಪ್ರಜೋದಯಾತ್ ॥ ೫೭

ದದೌ ದಾನಂ ದ್ವಿಜಾತಿಭ್ಯೋ ಜಾತಕರ್ಮ ವಿಧಾಯ ಚ ।
ಗೀತವಾದಿತ್ರಘೋಷೋಽಭೂತ್ತದ್ದ್ವಾರೇ ಮಂಗಲಂ ಬಹು ॥ ೫೮

ಭರ್ತುರಗ್ರೇಽಬ್ರವೀದ್ವಾಕ್ಯಂ ಸ್ತನ್ಯಂ ನಾಸ್ತಿ ಕುಚೇ ಮಮ ।
ಅನ್ಯಸ್ತನ್ಯೇನ ನಿರ್ದುಗ್ಧಾ ಕಥಂ ಪುಷ್ಣಾಮಿ ಬಾಲಕಮ್ ॥ ೫೯

ಮತ್ಸ್ವಸುಶ್ಚ ಪ್ರಸೂತಾಯಾ ಮೃತೋ ಬಾಲಸ್ತು ವರ್ತತೇ ।
ತಾಮಾಕಾರ್ಯ ಗೃಹೇ ರಕ್ಷ ಸಾ ತೇಽರ್ಭಂ ಪೋಷಯಿಷ್ಯತಿ ॥ ೬೦

---

ತಿನ್ನಿಸು. ಪರೀಕ್ಷೆ ಮಾಡಿನೋಡೋಣ!" ಎಂದಳು. ಅನಂತರ ಸ್ತ್ರೀಸ್ವಭಾವಕ್ಕೆ ಅನುಗುಣವಾಗಿ ಸರ್ವವನ್ನೂ ಹಾಗೆಯೇ ನಡೆಸಲಾಯಿತು (೫೮–೫೫). ಅನಂತರ ಪ್ರಸವಸಮಯವಾದಾಗ ಧುಂಧುಳಿಯ ತಂಗಿ ಒಂದು ಗಂಡು ಶಿಶುವನ್ನು ಹಡೆದಳು. ಶಿಶುವಿನ ತಂದೆಯು ಅದನ್ನು ರಹಸ್ಯವಾಗಿ ತಂದು ಧುಂಧುಳಿಗೆ ಕೊಟ್ಟನು. ಅವಳು ಸುಖವಾಗಿ ತನಗೆ ಬಾಲಕನು ಹುಟ್ಟಿದನೆಂದು ಪತಿಗೆ ತಿಳಿಸಿದಳು! ಆತ್ಮದೇವನಿಗೆ ಪುತ್ರಸಂತಾನವಾಯಿತೆಂದು ಕೇಳಿ ಜನರೆಲ್ಲರಿಗೂ ಸಂತೋಷವಾಯಿತು. ಅವನು ಮಗುವಿಗೆ ಜಾತಕರ್ಮವನ್ನು ಮಾಡಿ ವಿಪ್ರರಿಗೆ ಬೇಕಾದಷ್ಟು ದಾನ ಮಾಡಿದನು. ಮನೆಯಲ್ಲಿ ಗೀತವಾದ್ಯಗಳ ಮಂಗಳಧ್ವನಿ ಮೊಳಗಿತು (೫೬–೫೮). ಧುಂಧುಳಿಯು ತನ್ನ ಪತಿಯನ್ನು ಕುರಿತು "ನನಗೆ ಸ್ತನದಲ್ಲಿ ಹಾಲು ಬರುತ್ತಿಲ್ಲ. ಸ್ತನ್ಯವಿಲ್ಲದೆ ಬೇರೆಯವರ ಹಾಲಿಂದ ಮಗುವನ್ನು ಹೇಗೆ ಪೋಷಿಸಲಿ? ನನ್ನ ಸೋದರಿ ಹಡೆದಿದ್ದಾಳೆ. ಮಗು ಸತ್ತುಹೋಗಿದೆಯಂತೆ. ಅವಳನ್ನು ಮನೆಗೆ ಕರೆಸಿ ಇಟ್ಟುಕೊಂಡರೆ ನಿನ್ನ ಪುತ್ರನನ್ನು ಪೋಷಿಸುವಳು!" ಎಂದಳು (೫೯). ಆತ್ಮದೇವನು ಮಗನನ್ನು ಸಾಕುವುದಕ್ಕಾಗಿ ಹಾಗೆಯೇ ಮಾಡಿದನು. ಮಗನಿಗೆ 'ಧುಂಧುಕಾರಿ'

ಪತಿನಾ ತತ್ಕೃತಂ ಸರ್ವಂ ಪುತ್ರರಕ್ಷಣಹೇತವೇ ।
ಪುತ್ರಸ್ಯ ಧುಂಧುಕಾರೀತಿ ನಾಮ ಮಾತ್ರಾ ಪ್ರತಿಷ್ಠಿತಮ್ ॥ ೬೧

ತ್ರಿಮಾಸೇ ನಿರ್ಗತೇ ಚಾಥ ಸಾ ಧೇನುಃ ಸುಷುವೇಽರ್ಭಕಮ್ ।
ಸರ್ವಾಂಗಸುಂದರಂ ದಿವ್ಯಂ ನಿರ್ಮಲಂ ಕನಕಪ್ರಭಮ್ ॥ ೬೨

ದೃಷ್ಟ್ವಾ ಪ್ರಸನ್ನೋ ವಿಪ್ರಸ್ತು ಸಂಸ್ಕಾರಾನ್ ಸ್ವಯಮಾದಧೇ ।
ಮತ್ವಾಽಽಶ್ಚರ್ಯಂ ಜನಾಃ ಸರ್ವೇ ದಿದೃಕ್ಷಾರ್ಥಂ ಸಮಾಗತಾಃ ॥ ೬೩

ಭಾಗ್ಯೋದಯೋಽಧುನಾ ಜಾತ ಆತ್ಮದೇವಸ್ಯ ಪಶ್ಯತ ।
ಧೇನ್ವಾ ಬಾಲಃ ಪ್ರಸೂತಸ್ತು ದೇವರೂಪೀತಿ ಕೌತುಕಮ್ ॥ ೬೪

ನ ಜ್ಞಾತಂ ತದ್ರಹಸ್ಯಂ ತು ಕೇನಾಪಿ ವಿಧಿಯೋಗತಃ ।
ಗೋಕರ್ಣಂ ತಂ ಸುತಂ ದೃಷ್ಟ್ವಾ ಗೋಕರ್ಣಂ ನಾಮ ಚಾಕರೋತ್ ॥ ೬೫

---

ಎಂದು ತಾಯಿ ಹೆಸರಿಟ್ಟಳು. ಆಮೇಲೆ ಮೂರು ತಿಂಗಳು ಕಳೆಯಲಾಗಿ ಆತ್ಮದೇವನ ಮನೆಯಲ್ಲಿದ್ದ ಗೋವು ಒಂದು ಗಂಡುಮಗುವನ್ನು ಪ್ರಸವಿಸಿತು ! ಅದು ಸರ್ವಾಂಗ ಸುಂದರವೂ ನಿರ್ಮಲವೂ ದಿವ್ಯಾಕೃತಿಯುಳ್ಳದ್ದೂ ಆಗಿತ್ತು (೬೦–೬೨). ಆ ಶಿಶುವಿನ ಬಣ್ಣ ಚಿನ್ನದಂತೆ ಶೋಭಿಸುತ್ತಿತ್ತು. ಅದನ್ನು ನೋಡಿ ಆತ್ಮದೇವನಿಗೆ ಪರಮಾನಂದವಾಯಿತು. ಜಾತಕರ್ಮಾದಿಸಂಸ್ಕಾರಗಳನ್ನು ತಾನೇ ಮಾಡಿದನು. ಈ ಆಶ್ಚರ್ಯವನ್ನು ಕೇಳಿ ಊರಿನ ಜನರೆಲ್ಲರೂ ಶಿಶುವನ್ನು ನೋಡುವುದಕ್ಕಾಗಿ ಬರುತ್ತಿದ್ದರು. " ನೋಡಿರಿ ! ಆತ್ಮದೇವನಿಗೆ ಎಂತಹ ಭಾಗ್ಯ ಒದಗಿಬಂದಿತು ! ಗೋವು ನರಾಕೃತಿಯ ಪುತ್ರನನ್ನು ಪ್ರಸವಿಸಿದೆ. ಸಾಕ್ಷಾದ್ದೇವತೆಯಂತಿದೆ ಈ ಮಗು. ಆಶ್ಚರ್ಯ ! " ಎಂದುಕೊಳ್ಳುತ್ತಿದ್ದರು (೬೩–೬೪). ಅದರ ಗುಟ್ಟೇನೆಂಬುದು ದೈವಯೋಗದಿಂದ ಯಾರಿಗೂ ತಿಳಿಯಲಿಲ್ಲ. ಆ ಮಗುವಿನ ಕಿವಿಗಳು ಗೋವಿನ ಕಿವಿಗಳಂತೆ ಇದ್ದುದರಿಂದ ಅದಕ್ಕೆ ಗೋಕರ್ಣ—ಎಂದು ಆತ್ಮದೇವನು ನಾಮಕರಣ ಮಾಡಿದನು. ಹೀಗೆಯೇ ಕಾಲವು ಕಳೆದ ಮೇಲೆ ಆ ಇಬ್ಬರು

ಕಿಯತ್ಕಾಲೇನ ತೌ ಜಾತೌ ತರುಣೌ ತನಯಾವುಭೌ ।
ಗೋಕರ್ಣಃ ಪಂಡಿತೋ ಜ್ಞಾನೀ ಧುಂಧುಕಾರೀ ಮಹಾಖಲಃ ॥ ೬೬

ಸ್ನಾನಶೌಚಕ್ರಿಯಾಹೀನೋ ದುರ್ಭಕ್ಷೀ ಕ್ರೋಧವರ್ಧಿತಃ ।
ದುಷ್ಪರಿಗ್ರಹಕರ್ತಾ ಚ ಶವಹಸ್ತೇನ ಭೋಜನಮ್ ॥ ೬೭

ಚೌರಃ ಸರ್ವಜನದ್ವೇಷೀ ಪರವೇಶ್ಮಪ್ರದೀಪಕಃ ।
ಲಾಲನಾಯಾರ್ಭಕಾನ್ ಧೃತ್ವಾ ಸದ್ಯಃ ಕೂಪೇ ನ್ಯಪಾತಯತ್ ॥ ೬೮

ಹಿಂಸಕಃ ಶಸ್ತ್ರಧಾರೀ ಚ ದೀನಾಂಧಾನಾಂ ಪ್ರಪೀಡಕಃ ।
ಚಾಂಡಾಲಾಭಿರತೋ ನಿತ್ಯಂ ಪಾಶಹಸ್ತಃ ಶ್ವಸಂಗತಃ ॥ ೬೯

ತೇನ ವೇಶ್ಯಾಕುಸಂಗೇನ ಪಿತ್ರ್ಯಂ ವಿತ್ತಂ ತು ನಾಶಿತಮ್ ।
ಏಕದಾ ಪಿತರೌ ತಾಡ್ಯ ಪಾತ್ರಾಣಿ ಸ್ವಯಮಾಹರತ್ ॥ ೭೦

---

ಮಕ್ಕಳೂ ಯುವಕರಾದರು. ಗೋಕರ್ಣನು ಪಂಡಿತನೂ ಜ್ಞಾನಿಯೂ ಆದನು. ಧುಂಧುಕಾರಿಯು ದೊಡ್ಡ ಘಟಿಂಗನಾದನು (೬೫–೬೬). ಅವನು ಸರಿಯಾಗಿ ಸ್ನಾನಾದಿಶೌಚಕ್ರಿಯೆಯನ್ನು ಮಾಡುತ್ತಿರಲಿಲ್ಲ. ನಿಷಿದ್ಧವಸ್ತುವನ್ನು ತಿನ್ನುತ್ತಿದ್ದನು. ಅತ್ಯಂತ ಕೋಪಿಷ್ಠ. ಕಂಡ ಕಂಡವರು ದಾನ ಮಾಡಿದ್ದನ್ನೆಲ್ಲ ತೆಗೆದುಕೊಳ್ಳುತ್ತಿದ್ದನು. ಹೆಣದ ಕೈಯಿಂದ ಬಂದದ್ದನ್ನಾದರೂ ಅವನು ತಿನ್ನತಕ್ಕವನು. ಅವನು ಕಳ್ಳನಾಗಿದ್ದನಲ್ಲದೆ ಸರ್ವಜನರೊಡನೆಯೂ ದ್ವೇಷವನ್ನು ಕಟ್ಟಿಕೊಳ್ಳುತ್ತಿದ್ದನು. ಇನ್ನೊಬ್ಬರ ಮನೆಗೆ ಬೆಂಕಿ ಹಚ್ಚತಕ್ಕವನು. ಒಳ್ಳೆಯ ಮಾತುಗಳನ್ನಾಡಿ ಲಾಲಿಸುವೆನೆಂದು ಮಕ್ಕಳನ್ನು ಎತ್ತಿಕೊಂಡು ಹೋಗಿ ಭಾವಿಗೆ ತಳ್ಳಿಬಿಡುತ್ತಿದ್ದನು (೬೭–೬೮). ಹಿಂಸಾನಿರತನೂ ಶಸ್ತ್ರಧಾರಿಯೂ ಆಗಿ ಬಡವರನ್ನೂ ಕುರುಡರನ್ನೂ ಪೀಡಿಸುತ್ತಿದ್ದನು. ಆತನಿಗೆ ಚಂಡಾಲರ ಸಹವಾಸವಿತ್ತು. ಕೈಯಲ್ಲಿ ಹಗ್ಗವನ್ನು ಹಿಡಿದುಕೊಂಡು ನಾಯಿಗಳೊಡನೆ ಅಲೆಯುತ್ತಿದ್ದನು (೬೯). ಆ ಧುಂಧುಕಾರಿಯು ತರುವಾಯ ಸೂಳೆಯರ ಸಹವಾಸ ಮಾಡುತ್ತ, ತಂದೆ ಸಂಪಾದಿಸಿದ ಧನವನ್ನು ಕಳೆದುಬಿಟ್ಟನು. ಒಂದು ಸಲ ತಂದೆತಾಯಿಗಳನ್ನು ಹೊಡೆದು ಮನೆಯಲ್ಲಿದ್ದ ಪಾತ್ರೆಗಳನ್ನೂ ಎತ್ತಿಕೊಂಡು ಹೋದನು (೭೦).

ತತ್ಪಿತಾ ಕೃಪಣಃ ಪ್ರೋಚ್ಚೈರ್ಧನಹೀನೋ ರುರೋದ ಹ ।
ವಂಧ್ಯತ್ವಂ ತು ಸಮೀಚೀನಂ ಕುಪುತ್ರೋ ದುಃಖದಾಯಕಃ ॥ ೭೧

ಕ್ವ ತಿಷ್ಠಾಮಿ ಕ್ವ ಗಚ್ಛಾಮಿ ಕೋ ಮೇ ದುಃಖಂ ವ್ಯಪೋಹಯೇತ್ ।
ಪ್ರಾಣಾಂಸ್ತ್ಯಜಾಮಿ ದುಃಖೇನ ಹಾ ಕಷ್ಟಂ ಮಮ ಸಂಸ್ಥಿತಮ್ ॥ ೭೨

ತದಾನೀಂ ತು ಸಮಾಗತ್ಯ ಗೋಕರ್ಣೋ ಜ್ಞಾನಸಂಯುತಃ ।
ಬೋಧಯಾಮಾಸ ಜನಕಂ ವೈರಾಗ್ಯಂ ಪರಿದರ್ಶಯನ್ ॥ ೭೩

ಅಸಾರಃ ಖಲು ಸಂಸಾರೋ ದುಃಖರೂಪೀ ವಿಮೋಹಕಃ ।
ಸುತಃ ಕಸ್ಯ ಧನಂ ಕಸ್ಯ ಸ್ನೇಹವಾನ್ ಜ್ವಲತೇಽನಿಶಮ್ ॥ ೭೪

ನ ಚೇಂದ್ರಸ್ಯ ಸುಖಂ ಕಿಂಚಿನ್ನ ಸುಖಂ ಚಕ್ರವರ್ತಿನಃ ।
ಸುಖಮಸ್ತಿ ವಿರಕ್ತಸ್ಯ ಮುನೇರೇಕಾಂತಜೀವಿನಃ ॥ ೭೫

---

ಅವನ ತಂದೆ ಆತ್ಮದೇವನು ಧನವನ್ನೆಲ್ಲ ಕಳೆದುಕೊಂಡು ದೈನ್ಯದಿಂದ ಗೋಳಾಡ ತೊಡಗಿದನು. "ಮಕ್ಕಳಿಲ್ಲದಿರುವುದೇ ಬಹಳ ಒಳ್ಳೆಯದು! ಈ ಕೆಟ್ಟ ಮಗನು ನನಗೆ ಸಂಕಟವನ್ನು ಕೊಡುತ್ತಿದ್ದಾನೆ. ಈಗ ನಾನು ಎಲ್ಲಿರಲಿ? ಎಲ್ಲಿಗೆ ಹೋಗಲಿ? ನನ್ನ ಈ ದುಃಖವನ್ನು ಪರಿಹರಿಸತಕ್ಕವರು ಯಾರು? ನಾನು ಪ್ರಾಣವನ್ನು ಕಳೆದುಕೊಳ್ಳುತ್ತೇನೆ. ಅಯ್ಯೋ! ನನಗೆ ಭಾರಿ ಕಷ್ಟ ಒದಗಿತು!" ಎಂದು ಗಟ್ಟಿಯಾಗಿ ಅಳಲಾರಂಭಿಸಿದನು (೭೧–೭೨). ಆ ಸಮಯದಲ್ಲಿ ಜ್ಞಾನಿಯಾದ ಗೋಕರ್ಣನು ಆಗಮಿಸಿ ಜನಕನಾದ ಆತ್ಮದೇವನಿಗೆ ವೈರಾಗ್ಯ ಮಾರ್ಗವನ್ನು ಬೋಧಿಸುತ್ತ "ಸಂಸಾರವು ನಿಶ್ಚಯವಾಗಿ ನಿಃಸಾರವಾದದ್ದು. ಇದು ಸದಾ ದುಃಖಜನಕವೂ ಭ್ರಾಂತಿಕಾರಕವೂ ಆಗಿರುತ್ತದೆ. ಯಾವನು ಯಾರಿಗೆ ಮಗನಾಗಿರುತ್ತಾನೆ? ಯಾವುದು ಯಾವನಿಗೆ ಧನವಾಗಿ ಉಳಿಯುತ್ತದೆ? ಸ್ನೇಹ(ಎಣ್ಣೆ)ವಿರುವವರೆಗೆ ಉರಿಯುತ್ತಲೇ ಇರಬೇಕಾಗುವುದು! (೭೩–೭೪). ದೇವೇಂದ್ರನಿಗೂ ಸುಖವಿಲ್ಲ; ಚಕ್ರವರ್ತಿಗೂ ಸುಖವಿಲ್ಲ. ವಿರಕ್ತನಾಗಿ ಏಕಾಂತದಲ್ಲಿ ಜೀವಿಸುವ ಮುನಿಯೊಬ್ಬನಿಗೆ ಸುಖವಿರುತ್ತದೆ. ನನ್ನ

ಮುಂಚಾಜ್ಞಾನಂ ಪ್ರಜಾರೂಪಂ ಮೋಹತೋ ನರಕೇ ಗತಿಃ ।
ನಿಪತಿಷ್ಯತಿ ದೇಹೋಽಯಂ ಸರ್ವಂ ತ್ಯಕ್ತ್ವಾ ವನಂ ವ್ರಜ ॥ ೭೬

ತದ್ವಾಕ್ಯಂ ತು ಸಮಾಕರ್ಣ್ಯ ಗಂತುಕಾಮಃ ಪಿತಾಬ್ರವೀತ್ ।
ಕಿಂ ಕರ್ತವ್ಯಂ ವನೇ ತಾತ ತತ್ತ್ವಂ ವದ ಸವಿಸ್ತರಮ್ ॥ ೭೭

ಅಂಧಕೂಪೇ ಸ್ನೇಹಪಾಶೇ ಬದ್ಧಃ ಪಂಗುರಹಂ ಶಠಃ ।
ಕರ್ಮಣಾ ಪತಿತೋ ನೂನಂ ಮಾಮುದ್ಧರ ದಯಾನಿಧೇ ॥ ೭೮

ಗೋಕರ್ಣ ಉವಾಚ—

ದೇಹೇಽಸ್ಥಿಮಾಂಸರುಧಿರೇಽಭಿಮತಿಂ ತ್ಯಜ ತ್ವಂ
ಜಾಯಾಸುತಾದಿಷು ಸದಾ ಮಮತಾಂ ವಿಮುಂಚ ।
ಪಶ್ಯಾನಿಶಂ ಜಗದಿದಂ ಕ್ಷಣಭಂಗನಿಷ್ಠಂ
ವೈರಾಗ್ಯರಾಗರಸಿಕೋ ಭವ ಭಕ್ತಿನಿಷ್ಠಃ ॥ ೭೯

---

ಮಕ್ಕಳೆಂಬ ಅಜ್ಞಾನವನ್ನು ಪರಿತ್ಯಜಿಸು. ಅಜ್ಞಾನಕ್ಕೆ ನರಕವೇ ಗತಿಯಾಗುವುದು. ಹೇಗಿದ್ದರೂ ಒಂದು ದಿನ ಈ ದೇಹವು ಬಿದ್ದುಹೋಗುವುದು. ಆದ್ದರಿಂದ ಇದೆಲ್ಲವನ್ನೂ ಪರಿತ್ಯಜಿಸಿ ಮಮತೆಯನ್ನು ಬಿಟ್ಟು ಅರಣ್ಯಕ್ಕೆ ಹೋಗು" ಎಂದನು (೭೫–೭೬). ಆ ಮಾತನ್ನು ಕೇಳಿದಾಗ ಆತ್ಮದೇವನಿಗೆ ಅರಣ್ಯಕ್ಕೆ ಹೊರಟು ಹೋಗಲು ಇಚ್ಛೆಯಾಯಿತು. ಅವನು ಗೋಕರ್ಣನನ್ನು ಕುರಿತು "ಅಪ್ಪಾ-ಗೋಕರ್ಣ, ಅರಣ್ಯದಲ್ಲಿ ನಾನು ಏನು ಮಾಡಬೇಕು? ತತ್ತ್ವವನ್ನು ವಿವರಿಸಿ ಹೇಳು. ಹಠಮಾರಿಯಾದ ನಾನು ಸ್ನೇಹಪಾಶದಲ್ಲಿ ಸಿಕ್ಕಿ ಕುಂಟನಾಗಿ ತೆವಳುತ್ತ ಹಾಳುಭಾವಿಗೆ ಬಿದ್ದಿದ್ದೇನೆ! ನನ್ನ ಕರ್ಮದಿಂದ ನಾನು ಬಿದ್ದೆನು. ಹೇ ದಯಾನಿಧಿ, ನನ್ನನ್ನು ಮೇಲಕ್ಕೆ ಎತ್ತು" ಎಂದನು (೭೭–೭೮). ಆಗ ಗೋಕರ್ಣನಿಂತೆಂದನು: "ಈ ದೇಹವು ಮೂಳೆ ಮಾಂಸ ನೆತ್ತರುಗಳ ರಾಶಿ. ಮೊದಲು ಇದರಲ್ಲಿ 'ನಾನು' ಎಂಬ ಅಭಿಮಾನವನ್ನು ತ್ಯಜಿಸಬೇಕು. ಆಮೇಲೆ ಮಡದಿ ಮಕ್ಕಳು ಮೊದಲಾದವರಲ್ಲಿ 'ನನ್ನದು' ಎಂಬ ಮಮಕಾರವನ್ನು ಬಿಡು. ಈ ಜಗತ್ತೆಲ್ಲವೂ ಕ್ಷಣಭಂಗುರವೆಂಬುದನ್ನು ಮನಸ್ಸಿಗೆ ತಂದುಕೊ. ವೈರಾಗ್ಯವೆಂಬ ರಸದಲ್ಲಿ ಆಸಕ್ತಿ

ಧರ್ಮಂ ಭಜಸ್ವ ಸತತಂ ತ್ಯಜ ಲೋಕಧರ್ಮಾನ್
ಸೇವಸ್ವ ಸಾಧುಪುರುಷಾನ್ ಜಹಿ ಕಾಮತೃಷ್ಣಾಮ್ ।
ಅನ್ಯಸ್ಯ ದೋಷಗುಣಚಿಂತನಮಾಶು ಮುಕ್ತ್ವಾ
ಸೇವಾಕಥಾರಸಮಹೋ ನಿತರಾಂ ಪಿಬ ತ್ವಮ್ ॥ ೮೦

ಏವಂ ಸುತೋಕ್ತಿವಶತೋಽಪಿ ಗೃಹಂ ವಿಹಾಯ
ಯಾತೋ ವನಂ ಸ್ಥಿರಮತಿರ್ಗತಷಷ್ಟಿವರ್ಷಃ ।
ಯುಕ್ತೋ ಹರೇರನುದಿನಂ ಪರಿಚರ್ಯಯಾಸೌ
ಶ್ರೀಕೃಷ್ಣಮಾಪ ನಿಯತಂ ದಶಮಸ್ಯ ಪಾಠಾತ್ ॥ ೮೧

ಇತಿ ಶ್ರೀಪದ್ಮಪುರಾಣೇ ಉತ್ತರಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ
ವಿಪ್ರಮೋಕ್ಷೋ ನಾಮ ಚತುರ್ಥೋಧ್ಯಾಯಃ



ಯನ್ನು ತಳೆದು ಸದಾ ಭಕ್ತಿನಿಷ್ಠನಾಗಿರು (೭೯). ಧರ್ಮನಿರತನಾಗಿರು ಲೋಕ ವ್ಯವಹಾರಗಳನ್ನು ವರ್ಜಿಸು. ಸಾಧುಪುರುಷರನ್ನು ಸೇವಿಸು. ಆಶಾಪಾಶವನ್ನು ಕತ್ತರಿಸಿಹಾಕು. ಪರರಲ್ಲಿರುವ ದೋಷವನ್ನಾಗಲಿ ಗುಣವನ್ನಾಗಲಿ ಚಿಂತಿಸುವುದನ್ನು ಬಿಟ್ಟು, ಭಗವತ್‌ಸೇವೆಯನ್ನು ಮಾಡುತ್ತ ಕಥಾರಸವನ್ನು ಸದಾ ಪಾನ ಮಾಡುತ್ತಿರು" ಎಂದನು (೮೦). ಹೀಗೆ ಪುತ್ರನಾಡಿದ ಹಿತವಚನವನ್ನು ಕೇಳಿದ ಮೇಲೆ ಆತ್ಮದೇವನ ಬುದ್ಧಿಯು ಸ್ಥಿರವಾಯಿತು. ಅರುವತ್ತುವರ್ಷ ವಯಸ್ಸಾಗಿದ್ದ ಆತನು ಗಟ್ಟಿಮನಸ್ಸುಮಾಡಿ ಮನೆಯನ್ನು ಬಿಟ್ಟು ಅರಣ್ಯಕ್ಕೆ ನಡೆದನು. ಅಲ್ಲಿ ಪ್ರತಿದಿನವೂ ಶ್ರೀಹರಿಯ ಸೇವೆಮಾಡುತ್ತ, ಭಾಗವತದ ದಶಮಸ್ಕಂಧವನ್ನು ಪಠಿಸುತ್ತ, ಶ್ರೀಕೃಷ್ಣನ ಪಾದವನ್ನು ಸೇರಿಕೊಂಡನು (೮೧).

ಇಲ್ಲಿಗೆ ಶ್ರೀಪದ್ಮಪುರಾಣದ ಉತ್ತರಖಂಡದಲ್ಲಿ ನಾಲ್ಕನೆಯ ಅಧ್ಯಾಯ



## ಪಂಚಮೋಧ್ಯಾಯಃ

ಸೂತ ಉವಾಚ—

ಪಿತರ್ಯುಪರತೇ ತೇನ ಜನನೀ ತಾಡಿತಾ ಭೃಶಮ್ ।
ಕ್ವ ವಿತ್ತಂ ತಿಷ್ಠತಿ ಬ್ರೂಹಿ ಹನಿಷ್ಯೇ ಲತ್ತಯಾ ನ ಚೇತ್ ॥ ೧

ಇತಿ ತದ್ವಾಕ್ಯಸಂತ್ರಾಸಾಜ್ಜನನ್ಯಾ ಪುತ್ರದುಃಖತಃ ।
ಕೂಪೇ ಪಾತಃ ಕೃತೋ ರಾತ್ರೌ ತೇನ ಸಾ ನಿಧನಂ ಗತಾ ॥ ೨

ಗೋಕರ್ಣಸ್ತೀರ್ಥಯಾತ್ರಾರ್ಥಂ ನಿರ್ಗತೋ ಯೋಗಸಂಸ್ಥಿತಃ ।
ನ ದುಃಖಂ ನ ಸುಖಂ ತಸ್ಯ ನ ವೈರೀ ನಾಪಿ ಬಾಂಧವಃ ॥ ೩

ಧುಂಧುಕಾರೀ ಗೃಹೇಽತಿಷ್ಠತ್ಪಂಚಪಣ್ಯವಧೂವೃತಃ ।
ಅತ್ಯುಗ್ರಕರ್ಮಕರ್ತಾ ಚ ತತ್ಪೋಷಣವಿಮೂಢಧೀಃ ॥ ೪

### ಅಧ್ಯಾಯ ೫

ಧುಂಧುಕಾರಿಯು ಸತ್ತು ಪ್ರೇತವಾಗುವುದು. ಗೋಕರ್ಣನಿಂದ ಭಾಗವತ ಪ್ರವಚನ.
ಭಾಗವತದ ಶ್ರವಣದಿಂದ ಪ್ರೇತಕ್ಕೆ ಸದ್ಗತಿ.

ಪೌರಾಣಿಕರಾದ ಸೂತರು ಮುಂದುವರಿದು, ಸನತ್ಕುಮಾರರು ಹೇಳಿದ್ದನ್ನು ತಿಳಿಸಿದರು : ಶೌನಕರೆ, ಹೀಗೆ ತಂದೆಯು ಮನೆಯಿಂದ ನಿರ್ಗಮಿಸಿ ಕೆಲವು ಕಾಲದ ಮೇಲೆ ಮೃತನಾದನು. ಇತ್ತಲಾಗಿ ಧುಂಧುಕಾರಿಯು ತಾಯಿಯಾದ ಧುಂಧುಳಿಯನ್ನು ಹಣಕ್ಕಾಗಿ ಹೊಡೆದು ಪೀಡಿಸತೊಡಗಿದನು. 'ಹಣವೆಲ್ಲಿದೆ, ಹೇಳು. ಇನ್ನೂ ಲತ್ತೆಯಿಂದ ಬಿಗಿಯಲೊ ? ಬಿಗಿಯಬಾರದೆಂದಿದ್ದರೆ ಹೇಳಿಬಿಡು !' ಎಂದು ಕಾಡಿಸಿದನು (೧). ಪುತ್ರನಿಂದಾದ ದುಃಖವನ್ನು ತಡೆಯಲಾರದೆ ಅವನಿಗೆ ಹೆದರಿದ ತಾಯಿ ಒಂದು ರಾತ್ರಿ ಭಾವಿಗೆ ಬಿದ್ದು ಸತ್ತುಹೋದಳು. ಯೋಗಮಾರ್ಗನಿರತನಾದ ಗೋಕರ್ಣನು ತೀರ್ಥಯಾತ್ರೆಗಾಗಿ ಹೊರಟುಹೋದನು. ಅವನಿಗೆ ದುಃಖವೂ ಇಲ್ಲ, ಸುಖವೂ ಇಲ್ಲ, ವೈರಿಯೂ ಇಲ್ಲ, ಬಾಂಧವನೂ ಇಲ್ಲ (೨–೩). ಧುಂಧುಕಾರಿಯು ಐದು ಜನ ವೇಶ್ಯೆಯರನ್ನು ಕಟ್ಟಿಕೊಂಡು ಮನೆಯಲ್ಲಿಳಿದನು. ಅವರನ್ನು ಪೋಷಿಸುವುದಕ್ಕಾಗಿ ಬುದ್ಧಿಗೆಟ್ಟು ಎಂತಹ

ಏಕದಾ ಕುಲಟಾಸ್ತಾಸ್ತು ಭೂಷಣಾನ್ಯಭಿಲಿಪ್ಸವಃ ।
ತದರ್ಥಂ ನಿರ್ಗತೋ ಗೇಹಾತ್ಕಾಮಾಂಧೋ ಮೃತ್ಯುಮಸ್ಮರನ್ ॥ ೫

ಯತಸ್ತತಶ್ಚ ಸಂಹೃತ್ಯ ವಿತ್ತಂ ವೇಶ್ಮ ಪುನರ್ಗತಃ ।
ತಾಭ್ಯೋಽಯಚ್ಛತ್ಸುವಸ್ತ್ರಾಣಿ ಭೂಷಣಾನಿ ಕಿಯಂತಿ ಚ ॥ ೬

ಬಹುವಿತ್ತಚಯಂ ದೃಷ್ಟ್ವಾ ರಾತ್ರೌ ನಾರ್ಯೋ ವ್ಯಚಾರಯನ್ ।
ಚೌರ್ಯಂ ಕರೋತ್ಯಸೌ ನಿತ್ಯಮತೋ ರಾಜಾ ಗ್ರಹೀಷ್ಯತಿ ॥ ೭

ವಿತ್ತಂ ಹೃತ್ವಾ ಪುನಶ್ಚೈನಂ ಮಾರಯಿಷ್ಯತಿ ನಿಶ್ಚಿತಮ್ ।
ಅತೋಽರ್ಥಗುಪ್ತಯೇ ಗೂಢಮಸ್ಮಾಭಿಃ ಕಿಂ ನ ಹನ್ಯತೇ ॥ ೮

ನಿಹತ್ಯೈನಂ ಗೃಹೀತ್ವಾರ್ಥಂ ಯಾಸ್ಯಾಮೋ ಯತ್ರ ಕುತ್ರಚಿತ್ ।
ಇತಿ ತಾ ನಿಶ್ಚಯಂ ಕೃತ್ವಾ ಸುಪ್ತಂ ಸಂಬಧ್ಯ ರಶ್ಮಿಭಿಃ ॥ ೯

---

ಉಗ್ರಕರ್ಮವನ್ನಾದರೂ ಮಾಡುತ್ತಿದ್ದನು. ಒಂದುಸಲ ಆ ಜಾರಿಣಿಯರು ತಮಗೆ ಚಿನ್ನದ ಒಡವೆಗಳು ಬೇಕೆಂದು ಬಯಸಿದರು. ಅದಕ್ಕಾಗಿ ಆ ಕಾಮಾಂಧನು ಸಾವಿಗೂ ಹೆದರದೆ ಹೋಗಿ ಯಾರನ್ನೋ ದೋಚಿ ಹಣವನ್ನು ತಂದನು. ಆ ಸ್ತ್ರೀಯರಿಗೆ ಬೇಕಾದಷ್ಟು ಒಳ್ಳೆಯ ವಸ್ತ್ರಗಳನ್ನೂ ಒಡವೆಗಳನ್ನೂ ತಂದುಕೊಟ್ಟನು (೪–೬). ಅಷ್ಟು ಹಣದ ರಾಶಿಯನ್ನು ಕಂಡು ಒಂದು ರಾತ್ರಿ ಆ ಹೆಂಗಸರು ತಮ್ಮಲ್ಲಿಯೇ ಪರಸ್ಪರವಾಗಿ ಆಲೋಚಿದರು : "ಈತನು ಎಲ್ಲಿಯೋ ರಾತ್ರಿ ಹೊತ್ತು ಕಳ್ಳತನ ಮಾಡುತ್ತಿದ್ದಾನೆ. ಒಂದುದಿನ ರಾಜನ ಕೈಗೆ ಸಿಕ್ಕಿಬೀಳುವನು. ಈ ಹಣವನ್ನು ರಾಜನು ಕಿತ್ತುಕೊಂಡು ಈತನಿಗೆ ಮರಣದಂಡನೆಯನ್ನೇ ವಿಧಿಸುವನು. ಆದ್ದರಿಂದ ಇದನ್ನೆಲ್ಲ ಉಳಿಸಿಕೊಳ್ಳುವುದಕ್ಕಾಗಿ, ನಾವೇ ಇವನನ್ನು ಗುಟ್ಟಾಗಿ ಏಕೆ ಕೊಂದುಬಿಡಬಾರದು ! (೭–೮). ಇವನನ್ನು ಸಾಯಿಸಿ ಹಣವನ್ನು ತೆಗೆದುಕೊಂಡು ಎಲ್ಲಾದರೂ ಹೊರಟುಹೋಗೋಣ!" ಎಂದು ಆಲೋಚಿಸಿ ಹಾಗೆಯೇ ಮಾಡಬೇಕೆಂದು ನಿಶ್ಚಯಿಸಿದರು. ಒಂದುಸಲ ರಾತ್ರಿ ಅವನು ನಿದ್ರಿಸುತ್ತಿದ್ದಾಗ ಹಗ್ಗಗಳಿಂದ ಅವನನ್ನು ಕಟ್ಟಿಹಾಕಿ, ಕತ್ತಿಗೆ ನೇಣನ್ನು ಬಿಗಿದು ಜಗ್ಗತೊಡಗಿದರು. ಆದರೂ ಧುಂಧುಕಾರಿಯು ಸಾಯದಿದ್ದಾಗ, ಬೆಂಕಿ ಕೆಂಡಗಳನ್ನು

ಪಾಶಂ ಕಂಠೇ ನಿಧಾಯಾಸ್ಯ ತನ್ಮೃತ್ಯುಮುಪಚಕ್ರಮುಃ ।
ತ್ವರಿತಂ ನ ಮಮಾರಾಸೌ ಚಿಂತಾಯುಕ್ತಾಸ್ತದಾಭವನ್ ॥ ೧೦

ತಪ್ತಾಂಗಾರಸಮೂಹಾಂಶ್ಚ ತನ್ಮುಖೇ ಹಿ ವಿಚಿಕ್ಷಿಪುಃ ।
ಅಗ್ನಿಜ್ವಾಲಾತಿದುಃಖೇನ ವ್ಯಾಕುಲೋ ನಿಧನಂ ಗತಃ ॥ ೧೧

ತಂ ದೇಹಂ ಮುಮುಚುರ್ಗರ್ತೇ ಪ್ರಾಯಃ ಸಾಹಸಿಕಾಃ ಸ್ತ್ರಿಯಃ ।
ನ ಜ್ಞಾತಂ ತದ್ರಹಸ್ಯಂ ತು ಕೇನಾಪೀದಂ ತಥೈವ ಚ ॥ ೧೨

ಲೋಕೈಃ ಪೃಷ್ಟಾ ವದಂತಿ ಸ್ಮ ದೂರಂ ಯಾತಃ ಪ್ರಿಯೋ ಹಿ ನಃ ।
ಆಗಮಿಷ್ಯತಿ ವರ್ಷೇಽಸ್ಮಿನ್ ವಿತ್ತಲೋಭವಿಕರ್ಷಿತಃ ॥ ೧೩

ಸ್ತ್ರೀಣಾಂ ನೈವ ತು ವಿಶ್ವಾಸಂ ದುಷ್ಟಾನಾಂ ಕಾರಯೇದ್ಬುಧಃ ।
ವಿಶ್ವಾಸೇ ಯಃ ಸ್ಥಿತೋ ಮೂಢಃ ಸ ದುಃಖೈಃ ಪರಿಭೂಯತೇ ॥ ೧೪

ಸುಧಾಮಯಂ ವಚೋ ಯಾಸಾಂ ಕಾಮಿನಾಂ ರಸವರ್ಧನಮ್ ।
ಹೃದಯಂ ಕ್ಷುರಧಾರಾಭಂ ಪ್ರಿಯಃ ಕೋ ನಾಮ ಯೋಷಿತಾಮ್ ॥ ೧೫

---

ಅವನ ಮುಖದಮೇಲೆ ಸುರುವಿದರು. ಬೆಂಕಿಯ ಜ್ವಾಲೆಗೆ ಸಿಕ್ಕಿ ಅವನು ಸತ್ತನು (೯–೧೧). ಹೆಣವನ್ನು ಒಂದು ಹಳ್ಳಕ್ಕೆ ತಳ್ಳಿ ಮುಚ್ಚಿಬಿಟ್ಟರು. ಸ್ತ್ರೀಯರು ಸಾಹಸಿಕರು! ಈ ರಹಸ್ಯವು ಯಾರಿಗೂ ತಿಳಿಯಲಿಲ್ಲ. ಧುಂಧುಕಾರಿಯು ಎಲ್ಲಿದ್ದಾನೆಂದು ಜನರು ವಿಚಾರಿಸಿದಾಗ "ನಮ್ಮ ಪ್ರಿಯನು ಯಾವುದೋ ದೂರ ದೇಶಕ್ಕೆ ಹೋಗಿದ್ದಾನೆ. ಹಣದ ಆಸೆಯಿಂದ ಸಂಪಾದಿಸುವುದಕ್ಕಾಗಿ ಹೋಗಿದ್ದಾನೆ. ಈ ವರ್ಷವೇ ವಾಪಸು ಬರಬಹುದು!" ಎಂದು ಹೇಳುತ್ತಿದ್ದರು (೧೨–೧೩). ವಿವೇಕಿಯಾದವನು ದುಷ್ಟರಾದ ಜಾರಿಣೀ ಸ್ತ್ರೀಯರಲ್ಲಿ ಎಂದಿಗೂ ವಿಶ್ವಾಸವನ್ನಿಡಬಾರದು. ಅವರಲ್ಲಿ ವಿಶ್ವಾಸವಿರಿಸುವ ಮೂಢನು ನಾನಾ ದುಃಖಗಳಿಗೆ ಈಡಾಗುತ್ತಾನೆ. ಅಂತಹ ಸ್ತ್ರೀಯರ ಮಾತು ಕಾಮುಕರಿಗೆ ಅಮೃತಮಯವಾಗಿದ್ದು ರುಚಿಯನ್ನು ಹೆಚ್ಚಿಸುತ್ತದೆ. ಅವರ ಹೃದಯವು ಕ್ಷೌರದ ಕತ್ತಿಯಂತೆ ತೀಕ್ಷ್ಣವಾದದ್ದು. ವೇಶ್ಯಾಸ್ತ್ರೀಯರಿಗೆ ಪ್ರಿಯನೆಂಬವನು ಯಾವನಿದ್ದಾನೆ? (೧೪–೧೫).

ಸಂಹೃತ್ಯ ವಿತ್ತಂ ತಾ ಯಾತಾಃ ಕುಲಟಾ ಬಹುಭರ್ತೃಕಾಃ ।
ಧುಂಧುಕಾರೀ ಬಭೂವಾಥ ಮಹಾನ್ ಪ್ರೇತಃ ಕುಕರ್ಮತಃ ॥ ೧೬

ವಾತ್ಯಾರೂಪಧರೋ ನಿತ್ಯಂ ಧಾವನ್ ದಶದಿಶೋಽಂತರಮ್ ।
ಶೀತಾತಪಪರಿಕ್ಲಿಷ್ಟೋ ನಿರಾಹಾರಃ ಪಿಪಾಸಿತಃ ॥ ೧೭

ನ ಲೇಭೇ ಶರಣಂ ಕ್ವಾಪಿ ಹಾ ದೈವೇತಿ ಮುಹುರ್ವದನ್ ।
ಕಿಯತ್ಕಾಲೇನ ಗೋಕರ್ಣೋ ಮೃತಂ ಲೋಕಾದಬುಧ್ಯತ ॥ ೧೮

ಅನಾಥಂ ತಂ ವಿದಿತ್ವೈವ ಗಯಾಶ್ರಾದ್ಧಮಚೀಕರತ್ ।
ಯಸ್ಮಿಂಸ್ತೀರ್ಥೇ ತು ಸಂಯಾತಿ ತತ್ರ ಶ್ರಾದ್ಧಮವರ್ತಯತ್ ॥ ೧೯

ಏವಂ ಭ್ರಮನ್ ಸ ಗೋಕರ್ಣಃ ಸ್ವಪುರಂ ಸಮುಪೇಯಿವಾನ್ ।
ರಾತ್ರೌ ಗೃಹಾಂಗಣೇ ಸ್ವಪ್ತುಮಾಗತೋಽಲಕ್ಷಿತಃ ಪರೈಃ ॥ ೨೦

---

ಕುಲಟೆಯರಿಗೆ ಬಹುಮಂದಿ ಗಂಡಂದಿರು. ಅವರೇ ಅಲ್ಲವೆ ಧುಂಧುಕಾರಿಯನ್ನು ಸಾಯಿಸಿ ಹಣವನ್ನು ಗಂಟುಕಟ್ಟಿಕೊಂಡು ಹೋದವರು? ಆಮೇಲೆ ಧುಂಧುಕಾರಿಯು ತನ್ನ ದುಷ್ಕರ್ಮಕ್ಕೆ ಸರಿಯಾಗಿ ದೊಡ್ಡ ಪ್ರೇತವಾದನು! ಆ ಪ್ರೇತವು ಗಾಳಿಯ ರೂಪದಲ್ಲಿದ್ದು ಹತ್ತುದಿಕ್ಕುಗಳಿಗೂ ಅಲೆಯುತ್ತ ಚಳಿಬಿಸಿಲುಗಳಿಂದ ನೊಂದು ಆಹಾರವಿಲ್ಲದೆ ಹಸಿವಿನಿಂದ ಬಳಲುತ್ತಿತ್ತು (೧೬–೧೭). ಅದಕ್ಕೆ ಎಲ್ಲಿಯೂ ಗತಿಯಿಲ್ಲದೆ 'ಅಯ್ಯೋ! ನನ್ನ ದೈವವೆ!' ಎಂದುಕೊಳ್ಳುತ್ತ ಅಲೆಯತೊಡಗಿತು. ಧುಂಧುಕಾರಿಯು ಸತ್ತುಹೋದನೆಂದು ಕೆಲವು ಕಾಲದಮೇಲೆ ಗೋಕರ್ಣನಿಗೆ ಜನರಿಂದ ತಿಳಿದುಬಂದಿತು. ಅವನು ಅನಾಥನಾದನೆಂದರಿತು ಗೋಕರ್ಣನು ಗಯಾಶ್ರಾದ್ಧವನ್ನು ಮಾಡಿದನು. ತಾನು ಹೋದ ತೀರ್ಥಕ್ಷೇತ್ರದಲ್ಲಿ ಧುಂಧುಕಾರಿಗೋಸ್ಕರ ತೀರ್ಥಶ್ರಾದ್ಧವನ್ನು ಮಾಡುತ್ತಿದ್ದನು (೧೮–೧೯). ಹೀಗೆ ಗೋಕರ್ಣನು ತಿರುಗಾಡುತ್ತ ಒಂದುಸಲ ತನ್ನ ಊರಿಗೆ ಬಂದನು. ಮಲಗುವುದಕ್ಕಾಗಿ ರಾತ್ರಿಯಲ್ಲಿ ತನ್ನ ಹಿಂದಿನ ಮನೆಯ ಅಂಗಳಕ್ಕೆ ಹೋದನು. ಅವನು ಬಂದದ್ದು ಊರಿನ ಜನರಿಗೆ ಗೊತ್ತಾಗಲಿಲ್ಲ. ಅಲ್ಲಿ ತನ್ನ ಬಂಧುವು ಮಲಗಿದ್ದಾನೆಂಬುದನ್ನರಿತು ಪ್ರೇತನಾದ ಧುಂಧುಕಾರಿಯು ನಡುರಾತ್ರಿಯಲ್ಲಿ ಅತಿಭೀಕರ

ತತ್ರ ಸುಪ್ತಂ ಸ ವಿಜ್ಞಾಯ ಧುಂಧುಕಾರೀ ಸ್ವಬಾಂಧವಮ್ ।
ನಿಶೀಥೇ ದರ್ಶಯಾಮಾಸ ಮಹಾರೌದ್ರತರಂ ವಪುಃ ॥ ೨೧

ಸಕೃನ್ಮೇಷಃ ಸಕೃದ್ಧಸ್ತೀ ಸಕೃಚ್ಚ ಮಹಿಷೋಽಭವತ್ ।
ಸಕೃದಿಂದ್ರಃ ಸಕೃಚ್ಚಾಗ್ನಿಃ ಪುನಶ್ಚ ಪುರುಷೋಽಭವತ್ ॥ ೨೨

ವೈಪರೀತ್ಯಮಿದಂ ದೃಷ್ಟ್ವಾ ಗೋಕರ್ಣೋ ಧೈರ್ಯಸಂಯುತಃ ।
ಅಯಂ ದುರ್ಗತಿಕಃ ಕೋಽಪಿ ನಿಶ್ಚಿತ್ಯಾಥ ತಮಬ್ರವೀತ್ ॥ ೨೩

ಗೋಕರ್ಣ ಉವಾಚ—

ಕಸ್ತ್ವಮುಗ್ರತರೋ ರಾತ್ರೌ ಕುತೋ ಯಾತೋ ದಶಾಮಿಮಾಮ್ ।
ಕಿಂ ವಾ ಪ್ರೇತಃ ಪಿಶಾಚೋ ವಾ ರಾಕ್ಷಸೋಽಸೀತಿ ಶಂಸ ನಃ ॥ ೨೪

ಸೂತ ಉವಾಚ—

ಏವಂ ಪೃಷ್ಟಸ್ತದಾ ತೇನ ರುರೋದೋಚ್ಚೈಃ ಪುನಃ ಪುನಃ ।
ಅಶಕ್ತೋ ವಚನೋಚ್ಚಾರೇ ಸಂಜ್ಞಾಮಾತ್ರಂ ಚಕಾರ ಹ ॥ ೨೫

---

ವಾದ ರೂಪವನ್ನು ಧರಿಸಿ ಗೋಕರ್ಣನಿಗೆ ಕಾಣಿಸಿಕೊಂಡನು (೨೦–೨೧). ಒಮ್ಮೆ ಕುರಿಯಾಗಿ, ಒಮ್ಮೆ ಆನೆಯಾಗಿ, ಒಮ್ಮೆ ಕೋಣವಾಗಿ ಗೋಚರಿಸಿದನು! ಒಂದುಸಲ ದೇವೇಂದ್ರನಂತೆ, ಇನ್ನೊಂದುಸಲ ಅಗ್ನಿಯಂತೆ ತೋರಿಸಿಕೊಂಡು ಮತ್ತೆ ಮನುಷ್ಯಾಕೃತಿಯನ್ನು ತಳೆದನು! ಈ ಅದ್ಭುತದೃಶ್ಯವನ್ನು ನೋಡಿದ ಗೋಕರ್ಣನು 'ಯಾವನೋ ದುರ್ಗತಿಗೆ ಒಳಗಾದವನೀತನು' ಎಂದು ನಿಶ್ಚಯಿಸಿ ಧೈರ್ಯದಿಂದ "ಈ ರಾತ್ರಿಯಲ್ಲಿ ಉಗ್ರರೂಪನಾಗಿ ಕಾಣಿಸಿಕೊಳ್ಳುತಕ್ಕ ನೀನು ಯಾರು? ಈ ಅವಸ್ಥೆ ನಿನಗೇಕೆ ಬಂದಿತು? ನೀನೇನು ಪ್ರೇತವೊ, ಪಿಶಾಚವೊ, ರಾಕ್ಷಸನೊ? ನಮಗೆ ಹೇಳು" ಎಂದನು (೨೨–೨೪). ಹೀಗೆ ಕೇಳಲಾಗಿ ಪ್ರೇತವು ಮತ್ತೆ ಮತ್ತೆ ಗಟ್ಟಿಯಾಗಿ ಅಳುವುದಕ್ಕಾರಂಭಿಸಿತು. ಮಾತನಾಡಲು ಅದಕ್ಕೆ ಶಕ್ತಿ ಇರಲಿಲ್ಲ. ಬರಿಯ ಸನ್ನೆಯನ್ನು ಮಾಡುತ್ತಿತ್ತು. ಆಗ ಗೋಕರ್ಣನು ಒಂದು ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡು ಪ್ರೇತದಮೇಲೆ ಸೋಕಿದನು. ಅದರ ಸ್ಪರ್ಶದಿಂದ ಪ್ರೇತದ ಪಾಪರಾಶಿಯು ಸ್ವಲ್ಪ ಕಡಿಮೆಯಾಗಲು ಅದು

ತತೋಽಂಜಲೌ ಜಲಂ ಕೃತ್ವಾ ಗೋಕರ್ಣಸ್ತಮುದೈರಯತ್ ।
ತತ್ಸೇಕಹತಪಾಪೋಽಸೌ ಪ್ರವಕ್ತುಮುಪಚಕ್ರಮೇ ॥ ೨೬

ಪ್ರೇತ ಉವಾಚ—

ಅಹಂ ಭ್ರಾತಾ ತ್ವದೀಯೋಽಸ್ಮಿ ಧುಂಧುಕಾರೀತಿ ನಾಮತಃ ।
ಸ್ವಕೀಯೇನೈವ ದೋಷೇಣ ಬ್ರಹ್ಮತ್ವಂ ನಾಶಿತಂ ಮಯಾ ॥ ೨೭

ಕರ್ಮಣೋ ನಾಸ್ತಿ ಸಂಖ್ಯಾ ಮೇ ಮಹ್ಯಾಜ್ಞಾನೇ ವಿವರ್ತಿನಃ ।
ಲೋಕಾನಾಂ ಹಿಂಸಕಃ ಸೋಽಹಂ ಸ್ತ್ರೀಭಿರ್ದುಃಖೇನ ಮಾರಿತಃ ॥ ೨೮

ಅತಃ ಪ್ರೇತತ್ವಮಾಪನ್ನೋ ದುರ್ದಶಾಂ ಚ ವಹಾಮ್ಯಹಮ್ ।
ವಾತಾಹಾರೇಣ ಜೀವಾಮಿ ದೈವಾಧೀನಫಲೋದಯಾತ್ ॥ ೨೯

ಅಹೋ ಬಂಧೋ ಕೃಪಾಸಿಂಧೋ ಭ್ರಾತರ್ಮಾಮಾಶು ಮೋಚಯ ।
ಗೋಕರ್ಣೋ ವಚನಂ ಶ್ರುತ್ವಾ ತಸ್ಮೈ ವಾಕ್ಯಮಥಾಬ್ರವೀತ್ ॥ ೩೦

ಗೋಕರ್ಣ ಉವಾಚ—

ತ್ವದರ್ಥಂ ತು ಗಯಾಪಿಂಡೋ ಮಯಾ ದತ್ತೋ ವಿಧಾನತಃ ।
ತತ್ಕಥಂ ನೈವ ಮುಕ್ತೋಽಸಿ ಮಮಾಶ್ಚರ್ಯಮಿದಂ ಮಹತ್ ॥ ೩೧

---

ಮಾತಾಡಲಾರಂಭಿಸಿತು (೨೫–೨೬). "ನಾನು ಧುಂಧುಕಾರಿ, ನಿನ್ನ ಸೋದರ. ನನ್ನ ಪಾಪಕರ್ಮದಿಂದಲೇ ಬ್ರಾಹ್ಮಣ್ಯವನ್ನು ಕಳೆದುಕೊಂಡೆನು. ಅಜ್ಞಾನದಲ್ಲಿ ತೊಳಲುತ್ತಿದ್ದ ನಾನು ಎಷ್ಟು ಪಾಪಕರ್ಮಗಳನ್ನು ಮಾಡಿದೆನೋ ಲೆಕ್ಕವಿಲ್ಲ! ಲೋಕಹಿಂಸಕನಾಗಿ ಬಾಳುತ್ತಿದ್ದ ನನ್ನನ್ನು ಸ್ತ್ರೀಯರು ಕೆಟ್ಟದಾರಿಯಿಂದ ನನ್ನನ್ನು ಸಾಯಿಸಿದರು (೨೭–೨೮). ಆದ್ದರಿಂದ ಪ್ರೇತನಾಗಿ ಈ ದುರವಸ್ಥೆಯನ್ನು ಅನುಭವಿಸುತ್ತಿದ್ದೇನೆ. ಗಾಳಿಯೇ ನನಗೆ ಆಹಾರ. ಅದರಿಂದ ಬದುಕಬೇಕಾಗಿದೆ. ನನ್ನ ದುರ್ದೈವವು ಈ ರೀತಿಯಾಗಿ ಫಲಿಸಿದೆ. ಓ ನನ್ನ ಬಂಧುವೆ, ಕೃಪಾಸಿಂಧುವೆ, ಸೋದರನೆ, ಬೇಗನೆ ಈ ಕಷ್ಟದಿಂದ ನನ್ನನ್ನು ಪಾರುಮಾಡು" ಎಂದು ಪ್ರೇತವು ಹೇಳಿತು. ಆ ಮಾತನ್ನು ಕೇಳಿ ಗೋಕರ್ಣನು ಹೀಗೆಂದನು (೨೯–೩೦): "ನಿನಗಾಗಿ ನಾನು ವಿಧಿಪೂರ್ವಕವಾಗಿ ಗಯೆಯಲ್ಲಿ ಪಿಂಡಪ್ರದಾನಮಾಡಿದ್ದೇನೆ. ಹೀಗಿರುವಾಗ ನಿನಗೆ ಪ್ರೇತತ್ವದಿಂದ ಬಿಡುಗಡೆಯಾಗಲಿಲ್ಲವೆ? ನನಗೆ ಬಹಳ

ಗಯಾಶ್ರಾದ್ಧಾನ್ನ ಮುಕ್ತಿಶ್ಚೇದುಪಾಯೋ ನಾಪರಸ್ತ್ವಿಹ ।
ಕಿಂ ವಿಧೇಯಂ ಮಯಾ ಪ್ರೇತ ತತ್ತ್ವಂ ವದ ಸವಿಸ್ತರಮ್ ॥ ೩೨

ಪ್ರೇತ ಉವಾಚ—

ಗಯಾಶ್ರಾದ್ಧಶತೇನಾಪಿ ಮುಕ್ತಿರ್ಮೇ ನ ಭವಿಷ್ಯತಿ ।
ಉಪಾಯಮಪರಂ ಕಿಂಚಿತ್ತ್ವಂ ವಿಚಾರಯ ಸಾಂಪ್ರತಮ್ ॥ ೩೩

ಇತಿ ತದ್ವಾಕ್ಯಮಾಕರ್ಣ್ಯ ಗೋಕರ್ಣೋ ವಿಸ್ಮಯಂ ಗತಃ ।
ಶತಶ್ರಾದ್ಧೈರ್ನ ಮುಕ್ತಿಶ್ಚೇದಸಾಧ್ಯಂ ಮೋಚನಂ ತವ ॥ ೩೪

ಇದಾನೀಂ ತು ನಿಜಂ ಸ್ಥಾನಮಾತಿಷ್ಠ ಪ್ರೇತ ನಿರ್ಭಯಃ ।
ತ್ವನ್ಮುಕ್ತಿಸಾಧಕಂ ಕಿಂಚಿದಾಚರಿಷ್ಯೇ ವಿಚಾರ್ಯ ಚ ॥ ೩೫

ಧುಂಧುಕಾರೀ ನಿಜಸ್ಥಾನಂ ತೇನಾದಿಷ್ಟಸ್ತತೋ ಗತಃ ।
ಗೋಕರ್ಣಶ್ಚಿಂತಯಾಮಾಸ ತಾಂ ರಾತ್ರಿಂ ನ ತದಧ್ಯಗಾತ್ ॥ ೩೬

---

ಆಶ್ಚರ್ಯವಾಗುತ್ತಿದೆ. ಗಯಾಶ್ರಾದ್ಧದಿಂದಲೂ ಬಿಡುಗಡೆಯಾಗದಿದ್ದರೆ ಬೇರೆ ಉಪಾಯವಿಲ್ಲ. ಎಲೈ ಪ್ರೇತವೆ, ಈಗ ನಾನು ಏನು ಮಾಡಬೇಕು ? ವಿಸ್ತಾರವಾಗಿ ಹೇಳು" ಎಂದನು (೩೧–೩೨). ಅದಕ್ಕೆ ಪ್ರೇತವು "ನೂರು ಗಯಾಶ್ರಾದ್ಧ ಮಾಡಿದರೂ ನನಗೆ ಪ್ರೇತಜನ್ಮದಿಂದ ಮುಕ್ತಿ ಇಲ್ಲ ! ಬೇರೆ ಮಾರ್ಗವೇನೆಂಬುದನ್ನು ನೀನೇ ಆಲೋಚಿಸು" ಎಂದಿತು. ಅದನ್ನು ಕೇಳಿ ವಿಸ್ಮಿತನಾದ ಗೋಕರ್ಣನು "ನೂರು ಗಯಾಶ್ರಾದ್ಧಮಾಡಿದರೂ ಪ್ರೇತತ್ವದಿಂದ ಬಿಡುಗಡೆ ಇಲ್ಲವಾದರೆ ನಿನ್ನ ಪ್ರೇತತ್ವವನ್ನು ತಪ್ಪಿಸುವುದು ಅಸಾಧ್ಯ. ಎಲೈ ಪ್ರೇತವೆ, ನಿನ್ನ ಸ್ಥಳಕ್ಕೆ ಹೊರಟುಹೋಗು. ಹೆದರಬೇಡ. ನಿನ್ನ ಮುಕ್ತಿಗೆ ಸಾಧಕವೇನೆಂಬುದನ್ನು ವಿಚಾರಿಸಿ ಅದರಂತೆ ಮಾಡುವೆನು" ಎಂದನು (೩೩–೩೫). ಗೋಕರ್ಣನ ಆದೇಶದಂತೆ ಧುಂಧುಕಾರಿಯು ತನ್ನ ಸ್ಥಳಕ್ಕೆ ಹೊರಟುಹೋದನು. ಇತ್ತ ಗೋಕರ್ಣನು ಆ ರಾತ್ರಿಯೆಲ್ಲ ವಿಚಾರದಲ್ಲಿ ತೊಡಗಿದನು. ಏನೂ ತೋರಲಿಲ್ಲ. ಪ್ರಾತಃಕಾಲದಲ್ಲಿ ಆ ಊರಿನ ಜನರಿಗೆ ಗೋಕರ್ಣನು ಬಂದಿದ್ದಾನೆಂಬುದು

ಪ್ರಾತಸ್ತಮಾಗತಂ ದೃಷ್ಟ್ವಾ ಲೋಕಾಃ ಪ್ರೀತ್ಯಾ ಸಮಾಗತಃ ।
ತತ್ಸರ್ವಂ ಕಥಿತಂ ತೇನ ಯಜ್ಜಾತಂ ಚ ಯಥಾ ನಿಶಿ ॥ ೩೭

ವಿದ್ವಾಂಸೋ ಯೋಗನಿಷ್ಠಾಶ್ಚ ಜ್ಞಾನಿನೋ ಬ್ರಹ್ಮವಾದಿನಃ ।
ತನ್ಮುಕ್ತಿಂ ನೈವ ತೇಽಪಶ್ಯನ್ ಪಶ್ಯಂತಃ ಶಾಸ್ತ್ರಸಂಚಯಾನ್ ॥ ೩೮

ತತಃ ಸರ್ವೈಃ ಸೂರ್ಯವಾಕ್ಯಂ ತನ್ಮುಕ್ತೌ ಸ್ಥಾಪಿತಂ ಪರಮ್ ।
ಗೋಕರ್ಣಃ ಸ್ತಂಭನಂ ಚಕ್ರೇ ಸೂರ್ಯವೇಗಸ್ಯ ವೈ ತದಾ ॥ ೩೯

ತುಭ್ಯಂ ನಮೋ ಜಗತ್ಸಾಕ್ಷಿನ್ ಬ್ರೂಹಿ ಮೇ ಮುಕ್ತಿಹೇತುಕಮ್ ।
ತಚ್ಛ್ರುತ್ವಾ ದೂರತಃ ಸೂರ್ಯಃ ಸ್ಫುಟಮಿತ್ಯಭ್ಯಭಾಷತ ॥ ೪೦

ಶ್ರೀಮದ್ಭಾಗವತಾನ್ಮುಕ್ತಿಃ ಸಪ್ತಾಹಂ ವಾಚನಂ ಕುರು ।
ಇತಿ ಸೂರ್ಯವಚಃ ಸರ್ವೈರ್ಧರ್ಮರೂಪಂ ತು ವಿಶ್ರುತಮ್ ॥ ೪೧

ಸರ್ವೇಽಬ್ರುವನ್ ಪ್ರಯತ್ನೇನ ಕರ್ತವ್ಯಂ ಸುಕರಂ ತ್ವಿದಮ್ ।
ಗೋಕರ್ಣೋ ನಿಶ್ಚಯಂ ಕೃತ್ವಾ ವಾಚನಾರ್ಥಂ ಪ್ರವರ್ತಿತಃ ॥ ೪೨

---

ಗೊತ್ತಾಗಿ, ಎಲ್ಲರೂ ಸಂತೋಷದಿಂದ ಅಲ್ಲಿಗೆ ಬಂದರು. ಗೋಕರ್ಣನು ರಾತ್ರಿಯಲ್ಲಿ ನಡೆದ ವೃತ್ತಾಂತವನ್ನು ಅವರಿಗೆ ತಿಳಿಸಿದನು (೩೬–೩೭). ಅಲ್ಲಿ ವಿದ್ವಾಂಸರಿದ್ದರು. ಯೋಗನಿಷ್ಠರಿದ್ದರು. ಜ್ಞಾನಿಗಳೂ ಬ್ರಹ್ಮವಾದಿಗಳೂ ಇದ್ದರು. ಅವರು ಶಾಸ್ತ್ರಗಳನ್ನೆಲ್ಲ ಹುಡುಕಾಡಿದರೂ ಧುಂಧುಕಾರಿಯ ಪ್ರೇತತ್ವದ ವಿಮೋಚನೆಗೆ ದಾರಿಯನ್ನು ಕಾಣದಾದರು. ಕಡೆಗೆ ಎಲ್ಲರೂ ಸೇರಿ ಸೂರ್ಯದೇವನ ವಾಕ್ಯವೇ ವಿಮೋಚನೆಗೆ ದಾರಿಯೆಂದು ನಿರ್ಣಯಿಸಿದರು. ಆಗ ಗೋಕರ್ಣನು (ತನ್ನ ಯೋಗಬಲದಿಂದ) ಸೂರ್ಯವೇಗವನ್ನು ಸ್ತಂಭಿಸಿದನು (೩೮–೩೯). "ಓ ಜಗತ್ ಸಾಕ್ಷಿಯೆ, ನಿನಗೆ ನಮಸ್ಕರಿಸುತ್ತೇನೆ. ಈ ಪ್ರೇತತ್ವದ ವಿಮೋಚನೆಗೆ ಮಾರ್ಗವೇನೆಂಬುದನ್ನು ಹೇಳು" ಎಂದು ಪ್ರಾರ್ಥಿಸಿದನು. ಆಗ ಸೂರ್ಯದೇವನು ದೂರದಿಂದಲೇ ಸ್ಪಷ್ಟವಾಗಿ ಕೇಳಿಸುವಂತೆ "ಶ್ರೀಮದ್ಭಾಗವತದಿಂದ ವಿಮೋಚನೆಯಾಗುತ್ತದೆ. ಸಪ್ತಾಹಪಾರಾಯಣವನ್ನು ಮಾಡು" ಎಂದನು. ಧರ್ಮರೂಪವಾದ ಸೂರ್ಯವಾಕ್ಯವನ್ನು ಸರ್ವರೂ ಕೇಳಿದರು (೪೦–೪೧). ಎಲ್ಲರೂ 'ಇದನ್ನು

ತತ್ರ ಸಂಶ್ರವಣಾರ್ಥಾಯ ದೇಶಗ್ರಾಮಾಜ್ಜನಾ ಯಯುಃ ।
ಪಂಗ್ವಂಧವೃದ್ಧಮಂದಾಶ್ಚ ತೇಽಪಿ ಪಾಪಕ್ಷಯಾಯ ವೈ ॥ ೪೩

ಸಮಾಜಸ್ತು ಮಹಾನ್ ಜಾತೋ ದೇವವಿಸ್ಮಯಕಾರಕಃ ।
ಯದೈವಾಸನಮಾಸ್ಥಾಯ ಗೋಕರ್ಣೋಽಕಥಯತ್ಕಥಾಮ್ ॥ ೪೪

ಸ ಪ್ರೇತೋಽಪಿ ತದಾಽಽಯಾತಃ ಸ್ಥಾನಂ ಪಶ್ಯನ್ನಿತಸ್ತತಃ ।
ಸಪ್ತಗ್ರಂಥಿಯುತಂ ತತ್ರಾಪಶ್ಯತ್ಕೀಚಕಮುಚ್ಛ್ರಿತಮ್ ॥ ೪೫

ತನ್ಮೂಲಚ್ಛಿದ್ರಮಾವಿಶ್ಯ ಶ್ರವಣಾರ್ಥಂ ಸ್ಥಿತೋ ಹ್ಯಸೌ ।
ವಾತರೂಪೀ ಸ್ಥಿತಿಂ ಕರ್ತುಮಶಕ್ತೋ ವಂಶಮಾವಿಶತ್ ॥ ೪೬

ವೈಷ್ಣವಂ ಬ್ರಾಹ್ಮಣಂ ಮುಖ್ಯಂ ಶ್ರೋತಾರಂ ಪರಿಕಲ್ಪ್ಯ ಸಃ ।
ಪ್ರಥಮಸ್ಕಂಧತಃ ಸ್ಪಷ್ಟಮಾಖ್ಯಾನಂ ಧೇನುಜೋಽಕರೋತ್ ॥ ೪೭

---

ಅವಶ್ಯವಾಗಿ ಮಾಡಬೇಕು. ಸುಲಭವಾದದ್ದು ಇದು ' ಎಂದರು. ಗೋಕರ್ಣನೂ ಹಾಗೆಯೇ ನಿಶ್ಚಯಿಸಿ ಶ್ರೀಮದ್ಭಾಗವತದ ವಾಚನಕ್ಕೆ ಪ್ರವೃತ್ತನಾದನು. ಈ ಸುದ್ದಿಯನ್ನು ಕೇಳಿ ಆ ದೇಶದ ವಿವಿಧ ಗ್ರಾಮಗಳಿಂದಲೂ ಶ್ರವಣಕ್ಕಾಗಿ ಜನರು ಬಂದು ನೆರೆದರು. ಕುಂಟರು, ಕುರುಡರು, ಮುದುಕರೂ, ದಡ್ಡರೂ ಸಹ ತಮ್ಮ ಪಾಪವನ್ನು ಹೋಗಲಾಡಿಸಿಕೊಳ್ಳಬೇಕೆಂದು ಬಂದರು (೪೨–೪೩). ದೇವತೆಗಳಿಗೂ ಅಚ್ಚರಿಯಾಗುವಂತೆ ದೊಡ್ಡ ಜನಜಂಗುಳಿ ಸೇರಿತು. ಗೋಕರ್ಣನು ಪೀಠದಲ್ಲಿ ಕುಳಿತು ಭಾಗವತಕಥೆಯನ್ನು ಹೇಳಲಾರಂಭಿಸಿದಾಗ ಪ್ರೇತವೂ ಸಹ ತನ್ನ ಸ್ಥಳವಾವುದೆಂದು ನೋಡುತ್ತ ಅಲ್ಲಿಗೆ ಬಂದಿತು. ಏಳು ಗಿಣ್ಣುಗಳಿದ್ದ ಒಂದು ಬಿದಿರುಗಳವನ್ನು ಅಲ್ಲಿ ನೆಟ್ಟಿರುವುದನ್ನದು ಕಂಡಿತು (೪೪–೪೫). ಪ್ರೇತವು ವಾಯುರೂಪಿಯಾದ್ದರಿಂದ ಇನ್ನೆಲ್ಲಿಯೂ ಸ್ಥಿರವಾಗಿ ಇರಲಾರದೆ ಆ ಬಿದಿರುಗಳದ ಬುಡದಲ್ಲಿದ್ದ ರಂಧ್ರವನ್ನು ಹೊಕ್ಕು ಗಳದಲ್ಲಿ ಪ್ರತಿಷ್ಠಿತವಾಯಿತು. ಅನಂತರ ಗೋಕರ್ಣನು ವಿಷ್ಣುಭಕ್ತನಾದ ಒಬ್ಬ ಬ್ರಾಹ್ಮಣನನ್ನು ಪ್ರಧಾನ ಶ್ರೋತೃವನ್ನಾಗಿ ಮಾಡಿಕೊಂಡು ಭಾಗವತದ ಪ್ರಥಮಸ್ಕಂಧದಿಂದ ಕಥನವನ್ನಾರಂಭಿಸಿದನು (೪೬–೪೭). ದಿನದ ಕಡೆಯಲ್ಲಿ [1]ಕಥೆಯನ್ನು ಉಪಸಂಹಾರ ಮಾಡಲಾಯಿತು. ಆಗ

1. ಮೂಲದಲ್ಲಿರುವ ಗಾಥಾಶಬ್ದಕ್ಕೆ ಕಥೆಯೆಂಬ ಅರ್ಥವಿರಬಹುದು. ಇದೇ ಅಧ್ಯಾಯದ ೮೮ನೆಯ ಶ್ಲೋಕದಲ್ಲಿ ' ಸಪ್ತಾಹಗಾಥಾಶ್ರವಣೇನ ' ಎಂದು ಪ್ರಯೋಗವಿದೆ.

ದಿನಾಂತೇ ರಕ್ಷಿತಾ ಗಾಥಾ ತದಾ ಚಿತ್ರಂ ಬಭೂವ ಹ ।
ವಂಶೈಕಗ್ರಂಥಿಭೇದೋಽಭೂತ್ಸಶಬ್ದಂ ಪಶ್ಯತಾಂ ಸತಾಮ್ ॥ ೪೮

ದ್ವಿತೀಯೇಽಹ್ನಿ ತಥಾ ಸಾಯಂ ದ್ವಿತೀಯಗ್ರಂಥಿಭೇದನಮ್ ।
ತೃತೀಯೇಽಹ್ನಿ ತಥಾ ಸಾಯಂ ತೃತೀಯಗ್ರಂಥಿಭೇದನಮ್ ॥ ೪೯

ಏವಂ ಸಪ್ತದಿನೈಶ್ಚೈವ ಸಪ್ತಗ್ರಂಥಿವಿಭೇದನಮ್ ।
ಕೃತ್ವಾ ಸ ದ್ವಾದಶಸ್ಕಂಧಶ್ರವಣಾತ್ಪ್ರೇತತಾಂ ಜಹೌ ॥ ೫೦

ದಿವ್ಯರೂಪಧರೋ ಜಾತಸ್ತುಲಸೀದಾಮಮಂಡಿತಃ ।
ಪೀತವಾಸಾ ಘನಶ್ಯಾಮೋ ಮುಕುಟೀ ಕುಂಡಲಾನ್ವಿತಃ ॥ ೫೧

ನನಾಮ ಭ್ರಾತರಂ ಸದ್ಯೋ ಗೋಕರ್ಣಮಿತಿ ಚಾಬ್ರವೀತ್ ।
ತ್ವಯಾಹಂ ಮೋಚಿತೋ ಬಂಧೋ ಕೃಪಯಾ ಪ್ರೇತಕಶ್ಮಲಾತ್ । ೫೨

ಧನ್ಯಾ ಭಾಗವತೀ ವಾರ್ತಾ ಪ್ರೇತಪೀಡಾವಿನಾಶಿನೀ ।
ಸಪ್ತಾಹೋಽಪಿ ತಥಾ ಧನ್ಯಃ ಕೃಷ್ಣಲೋಕಫಲಪ್ರದಃ ॥ ೫೩

---

ಒಂದು ಅದ್ಭುತ ನಡೆಯಿತು. ಜನರು ನೋಡುತ್ತಿರುವಾಗಲೇ (ಪ್ರೇತವಿದ್ದ) ಬಿದಿರುಗಳದ ಒಂದು ಗಿಣ್ಣು ಭಡ್ ಎಂದು ಒಡೆಯಿತು! ಎರಡನೆಯ ದಿನವೂ ಸಾಯಂಕಾಲದಲ್ಲಿ ಎರಡನೆಯ ಗಿಣ್ಣು ಒಡೆಯಿತು. ಮೂರನೆಯ ದಿನದ ಸಂಜೆ ಮೂರನೆಯ ಗಿಣ್ಣು ಒಡೆಯಿತು (೪೮–೪೯). ಹೀಗೆ ಏಳು ದಿನಗಳಲ್ಲಿ ದ್ವಾದಶಸ್ಕಂಧವನ್ನು ಶ್ರವಣಮಾಡಿದಮೇಲೆ, ಏಳು ಗಿಣ್ಣುಗಳು ಒಡೆದುಹೋಗಲು ಧುಂಧುಕಾರಿಯು ತನ್ನ ಪ್ರೇತತ್ವವನ್ನು ಕಳೆದುಕೊಂಡನು! ಅವನಿಗೆ ದಿವ್ಯರೂಪ ಉಂಟಾಯಿತು. ತುಳಸೀಹಾರದಿಂದ ಅಲಂಕೃತನೂ ಪೀತಾಂಬರಧಾರಿಯೂ ಮೇಘಶ್ಯಾಮನೂ ಕಿರಿಟಧಾರಿಯೂ ಕುಂಡಲಧಾರಿಯೂ ಆಗಿ ಕಾಣಿಸಿಕೊಂಡನು! (೫೦–೫೧). ಆತನು ತನ್ನ ಸೋದರನಾದ ಗೋಕರ್ಣನಿಗೆ ನಮಸ್ಕಾರಮಾಡಿ ಹೀಗೆಂದನು : "ಓ ಬಂಧುವೆ, ನೀನು ಕೃಪೆಯಿಟ್ಟು ನನ್ನನ್ನು ಪ್ರೇತತ್ವದೋಷದಿಂದ ವಿಮೋಚನೆಗೊಳಿಸಿದ್ದೀಯೆ. ಪ್ರೇತಪೀಡೆಯನ್ನು ವಿಧ್ವಂಸಗೊಳಿಸತಕ್ಕ ಈ ಭಾಗವತಶ್ರವಣವು ಧನ್ಯವಾದದ್ದು. ಶ್ರೀಕೃಷ್ಣಲೋಕವೆಂಬ ಫಲವನ್ನು

ಕಂಪಂತೇ ಸರ್ವಪಾಪಾನಿ ಸಪ್ತಾಹಶ್ರವಣೇ ಸ್ಥಿತೇ ।
ಅಸ್ಮಾಕಂ ಪ್ರಲಯಂ ಸದ್ಯಃ ಕಥಾ ಚೇಯಂ ಕರಿಷ್ಯತಿ ॥ ೫೪

ಆರ್ದ್ರಂ ಶುಷ್ಕಂ ಲಘು ಸ್ಥೂಲಂ ವಾಙ್ಮನಃಕರ್ಮಭಿಃ ಕೃತಮ್ ।
ಶ್ರವಣಂ ವಿದಹೇತ್ಪಾಪಂ ಪಾವಕಃ ಸಮಿಧೋ ಯಥಾ ॥ ೫೫

ಅಸ್ಮಿನ್ ವೈ ಭಾರತೇ ವರ್ಷೇ ಸೂರಿಭಿರ್ದೇವಸಂಸದಿ ।
ಅಕಥಾಶ್ರಾವಿಣಾಂ ಪುಂಸಾಂ ನಿಷ್ಫಲಂ ಜನ್ಮ ಕೀರ್ತಿತಮ್ ॥ ೫೬

ಕಿಂ ಮೋಹತೋ ರಕ್ಷಿತೇನ ಸುಪುಷ್ಟೇನ ಬಲೀಯಸಾ ।
ಅಧ್ರುವೇಣ ಶರೀರೇಣ ಶುಕಶಾಸ್ತ್ರಕಥಾಂ ವಿನಾ ॥ ೫೭

ಅಸ್ಥಿಸ್ತಂಭಂ ಸ್ನಾಯುಬದ್ಧಂ ಮಾಂಸಶೋಣಿತಲೇಪಿತಮ್ ।
ಚರ್ಮಾವನದ್ಧಂ ದುರ್ಗಂಧಂ ಪಾತ್ರಂ ಮೂತ್ರಪುರೀಷಯೋಃ ॥ ೫೮

---

ನೀಡುವ ಭಾಗವತಸಪ್ತಾಹವೂ ಧನ್ಯವೇ (೫೨–೫೩). ಸಮಸ್ತಪಾಪಗಳೂ ಸಹ ' ಈ ಭಾಗವತಕಥೆಯು ಈಗಲೇ ನಮ್ಮನ್ನು ನಾಶಪಡಿಸಿಬಿಡುವುದು ' ಎಂದು ಹೆದರಿ ನಡುಗುತ್ತವೆ ! ವಾಙ್ಮನಃಕಾಯಕರ್ಮಗಳಿಂದ ಮಾಡಿದ ಪಾಪವು ಹಸಿಯಾಗಿರಲಿ, ಒಣಗಿರಲಿ, ಚಿಕ್ಕದಾಗಿರಲಿ, ದೊಡ್ಡದಾಗಿರಲಿ, ಬೆಂಕಿಯು ಕಟ್ಟಿಗೆಯನ್ನು ಸುಡುವಂತೆ, ಭಾಗವತಶ್ರವಣವು ಆ ಪಾಪವನ್ನು ಸುಟ್ಟುಹಾಕುವುದು (೫೪–೫೫). ಈ ಭರತಖಂಡದಲ್ಲಿ ಹುಟ್ಟಿದವರು ಶ್ರೀಮದ್ಭಾಗವತಶ್ರವಣವನ್ನು ಮಾಡದಿದ್ದಲ್ಲಿ ಅವರ ಜನ್ಮವು ವ್ಯರ್ಥವೆಂದು ಜ್ಞಾನಿಗಳು ದೇವಸಭೆಯಲ್ಲಿ ಹೇಳಿದ್ದಾರೆ ! ಈ ದೇಹವು " ಪುಷ್ಟವಾಗಿರಲಿ, ಬಲಿಷ್ಠವಾಗಿರಲಿ " ಎಂದು ಮೋಹದಿಂದ ರಕ್ಷಿಸಿಕೊಂಡರೆ ಏನಾಯಿತು ? ಶುಕಶಾಸ್ತ್ರಕಥೆಯನ್ನು ಕೇಳದಿದ್ದಮೇಲೆ ನಶ್ವರವಾದ ಈ ದೇಹದಿಂದ ಏನು ಪ್ರಯೋಜನ ! (೫೬–೫೭). ಶರೀರವೆಂಬ ಈ ಮನೆಗೆ ಮೂಳೆಯೇ ಕಂಬವಾಗಿದೆ. ಇದನ್ನು ನರಗಳಿಂದ ಕಟ್ಟಲಾಗಿದೆ. ರಕ್ತ ಮಾಂಸಗಳನ್ನು ಬಳಿದು ಚರ್ಮವನ್ನು ಹೊದಿಸಲಾಗಿದೆ. ಮಲಮೂತ್ರಗಳಿಗೆ ಆಗರವಾದ ದುರ್ಗಂಧದ ಶರೀರವಿದು. ಮುಪ್ಪು ಶೋಕಗಳೆಂಬ ಪರಿಣಾಮಗಳು ಇದ್ದೇ ಇರುತ್ತವೆ. ಸಂಕ್ಷೋಭೆಗೆ ಒಳಗಾದ ರೋಗಮಂದಿರ ಇದು. ಎಷ್ಟು ತುಂಬಿದರೂ ಸಾಲದು. ಎಷ್ಟು ಪೋಷಿಸಿದರೂ ಸಾಲದು. ದೋಷಕಾರಿಯೂ ದೋಷ

ಜರಾಶೋಕವಿಪಾಕಾರ್ತಂ ರೋಗಮಂದಿರಮಾತುರಮ್ ।
ದುಷ್ಪೂರಂ ದುರ್ಧರಂ ದುಷ್ಟಂ ಸದೋಷಂ ಕ್ಷಣಭಂಗುರಮ್ ॥ ೫೯

ಕೃಮಿವಿಡ್ಭಸ್ಮಸಂಜ್ಞಾಂತಂ ಶರೀರಮಿತಿ ವರ್ಣಿತಮ್ ।
ಅಸ್ಥಿರೇಣ ಸ್ಥಿರಂ ಕರ್ಮ ಕುತೋಽಯಂ ಸಾಧಯೇನ್ನ ಹಿ ॥ ೬೦

ಯತ್ಪ್ರಾತಃ ಸಂಸ್ಕೃತಂ ಚಾನ್ನಂ ಸಾಯಂ ತಚ್ಚ ವಿನಶ್ಯತಿ ।
ತದೀಯರಸಸಂಪುಷ್ಟೇ ಕಾಯೇ ಕಾ ನಾಮ ನಿತ್ಯತಾ ॥ ೬೧

ಸಪ್ತಾಹಶ್ರವಣಾಲ್ಲೋಕೇ ಪ್ರಾಪ್ಯತೇ ನಿಕಟೇ ಹರಿಃ ।
ಅತೋ ದೋಷನಿವೃತ್ತ್ಯರ್ಥಮೇತದೇವ ಹಿ ಸಾಧನಮ್ ॥ ೬೨

ಬುದ್ಬುದಾ ಇವ ತೋಯೇಷು ಮಶಕಾ ಇವ ಜಂತುಷು ।
ಜಾಯಂತೇ ಮರಣಾಯೈವ ಕಥಾಶ್ರವಣವರ್ಜಿತಾಃ ॥ ೬೩

ಜಡಸ್ಯ ಶುಷ್ಕವಂಶಸ್ಯ ಯತ್ರ ಗ್ರಂಥಿವಿಭೇದನಮ್ ।
ಚಿತ್ರಂ ಕಿಮು ತದಾ ಚಿತ್ತಗ್ರಂಥಿಭೇದಃ ಕಥಾಶ್ರವಾತ್ ॥ ೬೪

---

ಸಹಿತವೂ ಕ್ಷಣಭಂಗುರವೂ ಆಗಿದೆ (೫೮–೫೯). ಕೃಮಿಯಾಗಿ ಗೊಬ್ಬರವಾಗಿ ಬೂದಿಯಾಗಿ ನಾಮಾವಶೇಷವಾಗಿ ಹೋಗತಕ್ಕದ್ದು ಈ ಶರೀರ. ಅಸ್ಥಿರವಾದ ಈ ದೇಹದಿಂದ ಸ್ಥಿರವಾದ ಪುಣ್ಯವನ್ನೇಕೆ ಸಂಪಾದಿಸಿಕೊಳ್ಳಬಾರದು ? ಬೆಳಿಗ್ಗೆ ಮಾಡಿದ ಅನ್ನವು ಸಂಜೆಗೆ ಹಳಸಿ ಕೆಟ್ಟುಹೋಗುತ್ತದೆ. ಅಂತಹ ಅನ್ನದಿಂದ ಬೆಳೆದ ದೇಹವು ನಿತ್ಯವಾಗಿ ಉಳಿದೀತೆ? (೬೦–೬೧). ಭಾಗವತದ ಸಪ್ತಾಹಶ್ರವಣ ವಿಧಿಯಿಂದ ಶ್ರೀಹರಿಯನ್ನು ಶೀಘ್ರವಾಗಿ ಸೇರಬಹುದು. ಪಾಪನಿವೃತ್ತಿಗೆ ಇದೇ ಮುಖ್ಯವಾದ ಸಾಧನ. ಈ ಕಥೆಯನ್ನು ಯಾರು ಶ್ರವಣಮಾಡುವುದಿಲ್ಲವೋ ಅವರು ನೀರಲ್ಲಿ ಗುಳ್ಳೆಗಳಂತೆಯೂ ಪ್ರಾಣಿಗಳ ನಡುವೆ ಸೊಳ್ಳೆಗಳಂತೆಯೂ ಮತ್ತೆ ಮತ್ತೆ ಹುಟ್ಟುತ್ತಲೇ ಇರುತ್ತಾರೆ. ಹುಟ್ಟುವುದು ಮತ್ತೆ ಸಾಯುವುದಕ್ಕಾಗಿಯೇ ! (೬೨–೬೩). ಜಡವಸ್ತುವಾದ ಒಣಬಿದಿರಿನ ಗ್ರಂಥಿಯೇ ಕಥಾಶ್ರವಣದಿಂದ ಒಡೆದು ಸಡಿಲವಾಗುವುದೆಂದಮೇಲೆ, ಮಾನವರ ಚಿತ್ತಗ್ರಂಥಿಯು ಸಡಿಲವಾಗುವುದರಲ್ಲಿ ಅಚ್ಚರಿಯೇನು ? ಇದರ ಸಪ್ತಾಹಶ್ರವಣವನ್ನು ಮಾಡಿದರೆ, ಹೃದಯದ ವಾಸನಾಗ್ರಂಥಿಯು ಹರಿಯುವುದು. ಸಕಲಸಂಶಯಗಳೂ ನಿವೃತ್ತವಾಗುತ್ತವೆ.

ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ಸಪ್ತಾಹಶ್ರವಣೇ ಕೃತೇ ॥ ೬೫

ಸಂಸಾರಕರ್ದಮಾಲೇಪಪ್ರಕ್ಷಾಲನಪಟೀಯಸಿ ।
ಕಥಾತೀರ್ಥೇ ಸ್ಥಿತೇ ಚಿತ್ತೇ ಮುಕ್ತಿರೇವ ಬುಧೈಃ ಸ್ಮೃತಾ ॥ ೬೬

ಏವಂ ಬ್ರುವತಿ ವೈ ತಸ್ಮಿನ್ ವಿಮಾನಮಾಗಮತ್ತದಾ ।
ವೈಕುಂಠವಾಸಿಭಿರ್ಯುಕ್ತಂ ಪ್ರಸ್ಫುರದ್ದೀಪ್ತಿಮಂಡಲಮ್ ॥ ೬೭

ಸರ್ವೇಷಾಂ ಪಶ್ಯತಾಂ ಭೇಜೇ ವಿಮಾನಂ ಧುಂಧುಲೀಸುತಃ ।
ವಿಮಾನೇ ವೈಷ್ಣವಾನ್ ವೀಕ್ಷ್ಯ ಗೋಕರ್ಣೋ ವಾಕ್ಯಮಬ್ರವೀತ್ ॥ ೬೮

ಗೋಕರ್ಣ ಉವಾಚ—

ಅತ್ರೈವ ಬಹವಃ ಸಂತಿ ಶ್ರೋತಾರೋ ಮಮ ನಿರ್ಮಲಾಃ ।
ಆನೀತಾನಿ ವಿಮಾನಾನಿ ನ ತೇಷಾಂ ಯುಗಪತ್ಕುತಃ ॥ ೬೯

---

ಶ್ರೋತೃವಿನ ಪಾಪಕರ್ಮಗಳೆಲ್ಲವೂ ನವೆಯುತ್ತವೆ (೬೪–೬೫). ಸಂಸಾರವೆಂಬ ಕೆಸರಿನ ಲೇಪವನ್ನು ತೊಳೆಯುವುದರಲ್ಲಿ ಅತ್ಯಂತ ಸಮರ್ಥವಾದ ಭಾಗವತ ಕಥಾತೀರ್ಥವು ಚಿತ್ತದಲ್ಲಿ ಸೇರಲಾಗಿ ಮೋಕ್ಷವೇ ದೊರೆಯುತ್ತದೆಯೆಂದು ವಿದ್ವಾಂಸರು ತಿಳಿದಿದ್ದಾರೆ" ಎಂದು ಆತನು ಹೇಳುತ್ತಿರುವಾಗ, ವೈಕುಂಠನಿವಾಸಿಗಳಾದ ದಿವ್ಯಪುರುಷರಿಂದ ಸಹಿತವಾಗಿ ಅತ್ಯಂತ ಪ್ರಕಾಶಮಾನವಾದ ವಿಮಾನವು ಅಲ್ಲಿಗೆ ಆಗಮಿಸಿತು! (೬೬–೬೭). ಸರ್ವರೂ ನೋಡುತ್ತಿರುವಾಗ ಅವರ ಎದುರಿನಲ್ಲಿಯೇ ಧುಂಧುಲೀಪುತ್ರನು ವಿಮಾನವನ್ನು ಹತ್ತಿದನು. ಆಗ ವಿಮಾನದಲ್ಲಿದ್ದ ವಿಷ್ಣುಭಕ್ತರನ್ನು ನೋಡಿ ಗೋಕರ್ಣನು "ಮಹಾತ್ಮರೆ, ನಾನು ಹೇಳಿದ ಭಾಗವತಕಥೆಯನ್ನು ಶ್ರವಣಮಾಡಿದ ಪರಿಶುದ್ಧಚಿತ್ತರು ಇಲ್ಲಿಯೇ ಬಹಳ ಮಂದಿ ಇದ್ದಾರೆ. ನೀವು ಜೊತೆಯಲ್ಲಿಯೇ ಅವರಿಗೋಸ್ಕರವೂ ವಿಮಾನಗಳನ್ನು ಏಕೆ ತರಲಿಲ್ಲ? ಸರ್ವರೂ ಸಮವಾಗಿಯೇ ಶ್ರವಣಮಾಡಿರುವುದು ಕಂಡುಬರುತ್ತದೆ. ಹೀಗಿರುವಾಗ ಫಲಭೇದವೇಕಾಯಿತು? ಶ್ರೀಹರಿಭಕ್ತರಾದ ನೀವು ಹೇಳಬೇಕು"

ಶ್ರವಣಂ ಸಮಭಾಗೇನ ಸರ್ವೇಷಾಮಿಹ ದೃಶ್ಯತೇ ।
ಫಲಭೇದಃ ಕುತೋ ಜಾತಃ ಪ್ರಬ್ರುವಂತು ಹರಿಪ್ರಿಯಾಃ ॥ ೭೦

ಹರಿದಾಸಾ ಊಚುಃ—

ಶ್ರವಣಸ್ಯ ವಿಭೇದೇನ ಫಲಭೇದೋಽತ್ರ ಸಂಸ್ಥಿತಃ ।
ಶ್ರವಣಂ ತು ಕೃತಂ ಸರ್ವೈರ್ನ ತಥಾ ಮನನಂ ಕೃತಮ್ ।
ಫಲಭೇದಸ್ತತೋ ಜಾತೋ ಭಜನಾದಪಿ ಮಾನದ ॥ ೭೧

ಸಪ್ತರಾತ್ರಮುಪೋಷ್ಯೈವ ಪ್ರೇತೇನ ಶ್ರವಣಂ ಕೃತಮ್ ।
ಮನನಾದಿ ತಥಾ ತೇನ ಸ್ಥಿರಚಿತ್ತೇ ಕೃತಂ ಭೃಶಮ್ ॥ ೭೨

ಅದೃಢಂ ಚ ಹತಂ ಜ್ಞಾನಂ ಪ್ರಮಾದೇನ ಹತಂ ಶ್ರುತಮ್ ।
ಸಂದಿಗ್ಧೋ ಹಿ ಹತೋ ಮಂತ್ರೋ ವ್ಯಗ್ರಚಿತ್ತೋ ಹತೋ ಜಪಃ ॥ ೭೩

ಅವೈಷ್ಣವೋ ಹತೋ ದೇಶೋ ಹತಂ ಶ್ರಾದ್ಧಮಪಾತ್ರಕಮ್ ।
ಹತಮಶ್ರೋತ್ರಿಯೇ ದಾನಮನಾಚಾರಂ ಹತಂ ಕುಲಮ್ ॥ ೭೪

---

ಎಂದನು (೬೮–೭೦). ಆಗ ವಿಮಾನದಲ್ಲಿದ್ದ ಹರಿಭಕ್ತರು ಇಂತೆಂದರು: "ಮಾನನೀಯ-ಗೋಕರ್ಣ, ಶ್ರವಣಭೇದದಿಂದ ಫಲಭೇದವಾಗಿದೆ. ಎಲ್ಲರೂ ಶ್ರವಣಮಾಡಿದ್ದು ಹೌದು. ಆದರೆ ಅದೇ ರೀತಿಯಲ್ಲಿ ಮನನವನ್ನು ಮಾಡಲಿಲ್ಲ. ಹಾಗೆಯೇ ಭಕ್ತಿಯಲ್ಲಿರುವ ವ್ಯತ್ಯಾಸದಿಂದಲೂ ಈ ರೀತಿ ಫಲಭೇದವಾಗಿದೆ (೭೧). ಪ್ರೇತವು ಏಳು ರಾತ್ರಿಗಳವರೆಗೆ ಉಪವಾಸ ಮಾಡಿಯೇ ಶ್ರವಣ ಮಾಡಿದೆ. ಹಾಗೆಯೇ ಸ್ಥಿರವಾದ ಮನಸ್ಸಿಟ್ಟು ಮನನವನ್ನೂ ಮಾಡಿದೆ. ದೃಢವಾಗದ ಜ್ಞಾನವು ನಿಷ್ಫಲ, ಅವಧಾನವಿಲ್ಲದೆ ಕೇಳಿದ ಶ್ರವಣವೂ ನಿಷ್ಫಲ; ಸಂದೇಹ ವಿರಿಸಿದ ಮಂತ್ರವೂ ಫಲವನ್ನೀಯದು. ಮನಃಸ್ಥೈರ್ಯವಿಲ್ಲದೆ ಮಾಡುವ ಜಪವೂ ಫಲವನ್ನೀಯದು (೭೨–೭೩). ವಿಷ್ಣುಭಕ್ತರಿಲ್ಲದ ದೇಶವು ಹಾಳುನೆಲ. ಸರಿಯಾದ ಪಾತ್ರವಿಲ್ಲದೆ ಮಾಡಿದ ಶ್ರಾದ್ಧವು ಹಾಳಾದಹಾಗೆ. ಶ್ರೋತ್ರಿಯನಲ್ಲದವನಿಗೆ ಕೊಡುವ ದಾನವೂ ಹಾಳು. ಆಚಾರಶೂನ್ಯವಾದ ಕುಲವೂ ಹಾಳಾಗುತ್ತದೆ. ಗುರುವಾಕ್ಯದಲ್ಲಿ ಅಚಲವಾದ ನಂಬಿಕೆ, ತನ್ನಲ್ಲಿ ದೈನ್ಯಭಾವನೆ, ಮನೋದೋಷ ಗಳನ್ನು ಜಯಿಸುವುದು, ಪುರಾಣಕಥೆಯಲ್ಲಿ ಏಕಾಗ್ರತೆ—ಇತ್ಯಾದಿ ಗುಣಸಂಪತ್ತು ಗಳಿದ್ದರೆ ಶ್ರವಣದಿಂದ ಫಲವು ದೊರೆಯುತ್ತದೆ. ಈ ಭಾಗವತಕಥೆಯನ್ನು ವಿಹಿತ

ವಿಶ್ವಾಸೋ ಗುರುವಾಕ್ಯೇಷು ಸ್ವಸ್ಮಿನ್ ದೀನತ್ವಭಾವನಾ ।
ಮನೋದೋಷಜಯಶ್ಚೈವ ಕಥಾಯಾಂ ನಿಶ್ಚಲಾ ಮತಿಃ ॥ ೭೫

ಏವಮಾದಿ ಕೃತಂ ಚೇತ್ಸ್ಯಾತ್ತದಾ ವೈ ಶ್ರವಣೇ ಫಲಮ್ ।
ಪುನಃ ಶ್ರವಾಂತೇ ಸರ್ವೇಷಾಂ ವೈಕುಂಠೇ ವಸತಿರ್ಧ್ರುವಮ್ ॥ ೭೬

ಗೋಕರ್ಣ ತವ ಗೋವಿಂದೋ ಗೋಲೋಕಂ ದಾಸ್ಯತಿ ಸ್ವಯಮ್ ।
ಏವಮುಕ್ತ್ವಾ ಯಯುಃ ಸರ್ವೇ ವೈಕುಂಠಂ ಹರಿಕೀರ್ತನಾಃ ॥ ೭೭

ಶ್ರಾವಣೇ ಮಾಸಿ ಗೋಕರ್ಣಃ ಕಥಾಮೂಚೇ ತಥಾ ಪುನಃ ।
ಸಪ್ತರಾತ್ರವತೀಂ ಭೂಯಃ ಶ್ರವಣಂ ತೈಃ ಕೃತಂ ಪುನಃ ॥ ೭೮

ಕಥಾಸಮಾಪ್ತೌ ಯಜ್ಜಾತಂ ಶ್ರೂಯತಾಂ ತಚ್ಚ ನಾರದ ॥ ೭೯

ವಿಮಾನೈಃ ಸಹ ಭಕ್ತೈಶ್ಚ ಹರಿರಾವಿರ್ಬಭೂವ ಹ ।
ಜಯಶಬ್ದಾ ನಮಃಶಬ್ದಾಸ್ತತ್ರಾಸನ್ ಬಹವಸ್ತದಾ ॥ ೮೦

ಪಾಂಚಜನ್ಯಧ್ವನಿಂ ಚಕ್ರೇ ಹರ್ಷಾತ್ತತ್ರ ಸ್ವಯಂ ಹರಿಃ ।
ಗೋಕರ್ಣಂ ತು ಸಮಾಲಿಂಗ್ಯಾಕರೋತ್ಸ್ವಸದೃಶಂ ಹರಿಃ ॥ ೮೧

ಶ್ರೋತೄನನ್ಯಾನ್ ಘನಶ್ಯಾಮಾನ್ ಪೀತಕೌಶೇಯವಾಸಸಃ ।
ಕಿರೀಟಿನಃ ಕುಂಡಲಿನಸ್ತಥಾ ಚಕ್ರೇ ಹರಿಃ ಕ್ಷಣಾತ್ ॥ ೮೨

---

ರೀತಿಯಲ್ಲಿ ಪುನಃ ಶ್ರವಣಮಾಡಿದರೆ ನಿಶ್ಚಯವಾಗಿಯೂ ಸರ್ವರಿಗೂ ವೈಕುಂಠ ವಾಸವು ಲಭಿಸುತ್ತದೆ. ಗೋಕರ್ಣ, ಗೋವಿಂದನು ನಿಶ್ಚಯವಾಗಿಯೂ ನಿನಗೆ ಗೋಲೋಕವನ್ನನುಗ್ರಹಿಸುವನು" ಹೀಗೆ ಹೇಳಿ ಆ ಶ್ರೀಹರಿಭಕ್ತರು ವೈಕುಂಠ ಲೋಕಕ್ಕೆ ತೆರಳಿದರು (೭೪–೭೭). ಅಮೇಲೆ ಗೋಕರ್ಣನು ಶ್ರಾವಣಮಾಸ ಬರಲಾಗಿ ಪುನಃ ಶ್ರೀಮದ್ಭಾಗವತಕಥಾಪ್ರವಚನವನ್ನು ಮಾಡಿದನು. ಆ ಜನರು ಬಂದು ಶ್ರದ್ಧೆಯಿಂದ ಮತ್ತೆ ಶ್ರವಣಮಾಡಿದರು. ನಾರದರೆ, ಕಥಾಸಮಾಪ್ತಿಯಾದಾಗ ಏನಾಯಿತೆಂಬುದನ್ನು ಕೇಳಿರಿ ! (೭೮–೭೯). ಭಕ್ತಜನರಿಂದ ಸಹಿತನಾದ ಶ್ರೀಹರಿಯು ವಿಮಾನಗಳೊಂದಿಗೆ ಅಲ್ಲಿ ಪ್ರತ್ಯಕ್ಷನಾದನು ! ಎಲ್ಲೆಲ್ಲಿಯೂ 'ಜಯ ಜಯ !, ನಮೋನಮಃ'—ಎಂಬ ಘೋಷಗಳು ಮೊಳಗಿದವು. ಶ್ರೀಹರಿಯು ಸಂತೋಷದಿಂದ ಪಾಂಚಜನ್ಯವನ್ನೂದಿದನು ! ಗೋಕರ್ಣನನ್ನು ಅಪ್ಪಿಕೊಂಡು ಅವನಿಗೆ ಸಾರೂಪ್ಯಮೋಕ್ಷವನ್ನಿತ್ತನು (೮೦–೮೧). ಹಾಗೆಯೇ ಅನ್ಯಶ್ರೋತೃ

ತದ್ಗ್ರಾಮೇ ಯೇ ಸ್ಥಿತಾ ಜೀವಾ ಅಶ್ವಚಾಂಡಾಲಜಾತಯಃ ।
ವಿಮಾನೇ ಸ್ಥಾಪಿತಾಸ್ತೇಽಪಿ ಗೋಕರ್ಣಕೃಪಯಾ ತದಾ ॥ ೮೩

ಪ್ರೇಷಿತಾ ಹರಿಲೋಕೇ ತೇ ಯತ್ರ ಗಚ್ಛಂತಿ ಯೋಗಿನಃ ।
ಗೋಕರ್ಣೇನ ಸ ಗೋಪಾಲೋ ಗೋಲೋಕಂ ಗೋಪವಲ್ಲಭಮ್ ।
ಕಥಾಶ್ರವಣತಃ ಪ್ರೀತೋ ನಿರ್ಯಯೌ ಭಕ್ತವತ್ಸಲಃ ॥ ೮೪

ಅಯೋಧ್ಯಾವಾಸಿನಃ ಪೂರ್ವಂ ಯಥಾ ರಾಮೇಣ ಸಂಗತಾಃ ।
ತಥಾ ಕೃಷ್ಣೇನ ತೇ ನೀತಾ ಗೋಲೋಕಂ ಯೋಗಿದುರ್ಲಭಮ್ ॥ ೮೫

ಯತ್ರ ಸೂರ್ಯಸ್ಯ ಸೋಮಸ್ಯ ಸಿದ್ಧಾನಾಂ ನ ಗತಿಃ ಕದಾ ।
ತಂ ಲೋಕಂ ಹಿ ಗತಾಸ್ತೇ ತು ಶ್ರೀಮದ್ಭಾಗವತಶ್ರವಾತ್ ॥ ೮೬

ಬ್ರೂಮೋಽತ್ರ ತೇ ಕಿಂ ಫಲವೃಂದಮುಜ್ಜ್ವಲಂ
ಸಪ್ತಾಹಯಜ್ಞೇನ ಕಥಾಸು ಸಂಚಿತಮ್ ।
ಕರ್ಣೇನ ಗೋಕರ್ಣಕಥಾಕ್ಷರೋ ಯೈಃ
ಪೀತಶ್ಚ ತೇ ಗರ್ಭಗತಾ ನ ಭೂಯಃ ॥ ೮೭

---

ಗಳನ್ನೂ ಮೇಘಶ್ಯಾಮಲರನ್ನಾಗಿಯೂ ಪೀತಾಂಬರಧಾರಿಗಳನ್ನಾಗಿಯೂ ಕಿರೀಟ ಕುಂಡಲಸಮೇತರನ್ನಾಗಿಯೂ ಒಂದು ಕ್ಷಣದಲ್ಲಿ ಮಾಡಿದನು. ಅಲ್ಲದೆ ಗೋಕರ್ಣನ ಮೇಲಿನ ಕೃಪೆಯಿಂದ (ಅವನ ಇಷ್ಟದಂತೆ) ಆ ಗ್ರಾಮದಲ್ಲಿದ್ದ ನಾಯಿ, ಚಂಡಾಲ —ಮೊದಲಾದ ಜೀವರನ್ನೂ ಸಹ ವಿಮಾನದಲ್ಲಿ ಹತ್ತಿಸಿಕೊಂಡನು (೮೨–೮೩). ಯೋಗಿಗಳು ವೈಕುಂಠದಲ್ಲಿ ಯಾವ ಸ್ಥಳವನ್ನು ಸೇರುವರೋ ಅಲ್ಲಿಗೆ ಎಲ್ಲರನ್ನೂ ಕಳಿಸಿದನು. ಭಕ್ತವತ್ಸಲನಾದ ಆ ಗೋಪಾಲನು ಕಥಾಶ್ರವಣ ಮಾಡಿಸಿದ್ದರಿಂದ ಸಂಪ್ರೀತನಾಗಿ ಗೋಕರ್ಣನೊಡನೆ ಗೋಪವಲ್ಲಭವಾದ ಗೋಲೋಕವನ್ನಡರಿದನು (೮೪). ಹಿಂದೆ ಶ್ರೀರಾಮನು ಅಯೋಧ್ಯಾವಾಸಿಗಳೆಲ್ಲರನ್ನೂ ಹೇಗೆ ತನ್ನೊಡನೆ ಕರೆದೊಯ್ದನೋ ಹಾಗೆ ಶ್ರೀಕೃಷ್ಣನು ಯೋಗಿಗಳಿಗೂ ದುರ್ಲಭವಾದ ಗೋಲೋಕಕ್ಕೆ ಅವರನ್ನು ಕರೆದೊಯ್ದನು. ಸೂರ್ಯನಿಗಾಗಲಿ ಚಂದ್ರನಿಗಾಗಲಿ ಸಿದ್ಧಪುರುಷರಿಗಾಗಲಿ ಎಲ್ಲಿಗೆ ಪ್ರವೇಶವಿಲ್ಲವೋ ಆ ಲೋಕಕ್ಕೆ ಆ ಜೀವರು ಶ್ರೀಮದ್ಭಾಗವತ ಶ್ರವಣದ ಪುಣ್ಯಬಲದಿಂದ ಹೋಗಿ ಸೇರಿದರು! (೮೫–೮೬). ನಾರದರೆ, ಭಾಗವತಕಥೆಯು ಸಪ್ತಾಹಯಜ್ಞದಿಂದ ಗಳಿಸಿದ ಶ್ರೇಷ್ಠಫಲವನ್ನು

ವಾತಾಂಬುಪರ್ಣಾಶನದೇಹಶೋಷಣೈ-
ಸ್ತಪೋಭಿರುಗ್ರೈಶ್ಚಿರಕಾಲಸಂಚಿತೈಃ ।
ಯೋಗೈಶ್ಚ ಸಂಯಾಂತಿ ನ ತಾಂ ಗತಿಂ ವೈ
ಸಪ್ತಾಹಗಾಥಾಶ್ರವಣೇನ ಯಾಂತಿ ಯಾಮ್ ॥ ೭೭

ಇತಿಹಾಸಮಿಮಂ ಪುಣ್ಯಂ ಶಾಂಡಿಲ್ಯೋಽಪಿ ಮುನೀಶ್ವರಃ ।
ಪಠತೇ ಚಿತ್ರಕೂಟಸ್ಥೋ ಬ್ರಹ್ಮಾನಂದಪರಿಪ್ಲುತಃ ॥ ೭೮

ಆಖ್ಯಾನಮೇತತ್ಪರಮಂ ಪವಿತ್ರಂ
ಶ್ರುತಂ ಸಕೃದ್ವೈ ವಿದಹೇದಘೌಘಮ್ ।
ಶ್ರಾದ್ಧೇ ಪ್ರಯುಕ್ತಂ ಪಿತೃತೃಪ್ತಿಮಾವಹೇ-
ನ್ನಿತ್ಯಂ ಸುಪಾಠಾದಪುನರ್ಭವಂ ಚ ॥ ೮೦

ಇತಿ ಶ್ರೀಪದ್ಮಪುರಾಣೇ ಉತ್ತರಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ
ಗೋಕರ್ಣಮೋಕ್ಷವರ್ಣನಂ ನಾಮ ಪಂಚಮೋಧ್ಯಾಯಃ

---

ಏನೆಂದು ನಾವು ವರ್ಣಿಸೋಣ! ಗೋಕರ್ಣನು ಮಾಡಿದ ಕಥಾಪ್ರವಚನದ ಅಕ್ಷರವನ್ನು ಯಾರು ಆದರದಿಂದ ಕೇಳಿದರೋ ಅವರು ಮತ್ತೆ ಗರ್ಭವಾಸವನ್ನು ಮಾಡಬೇಕಾಗಿ ಬರಲಿಲ್ಲ! (೭೬). ಕೇವಲ ವಾಯುಸೇವನೆ, ಜಲಮಾತ್ರವೇ ಆಹಾರ, ಎಲೆಗಳನ್ನು ಮಾತ್ರ ತಿನ್ನುವುದು, (ಮುಂತಾದ ದೇಹಶೋಷಕಗಳಾದ) ಉಗ್ರತಪಸ್ಸುಗಳನ್ನು ಆಚರಿಸುವುದರಿಂದಲೂ ಚಿರಕಾಲದವರೆಗೆ ಯೋಗಾಭ್ಯಾಸ ಮಾಡುವುದರಿಂದಲೂ ಯಾವ ಗತಿಯನ್ನು ಪಡೆಯಲಾರರೋ ಅಂತಹ ಶ್ರೇಷ್ಠವಾದ ಗತಿಯನ್ನು ಸಪ್ತಾಹ ಕಥಾಶ್ರವಣದಿಂದ ಜನರು ಪಡೆಯುತ್ತಾರೆ (೭೭). ಪುಣ್ಯ-ಕರವಾದ ಈ ಇತಿಹಾಸವನ್ನು ಚಿತ್ರಕೂಟದಲ್ಲಿರುವ ಮುನೀಶ್ವರನಾದ ಶಾಂಡಿಲ್ಯನು ಬ್ರಹ್ಮಾನಂದವನ್ನನುಭವಿಸುತ್ತ ಪಠಿಸುತ್ತಿರುವನು. ಪರಮಪವಿತ್ರವಾದ ಈ ಆಖ್ಯಾನವನ್ನು ಒಂದುಸಲ ಕೇಳಿದರೂ ಸಾಕು, ಆ ಶ್ರವಣವು ಪಾಪರಾಶಿಯನ್ನು ತೊಡೆದುಹಾಕುತ್ತದೆ. ಶ್ರಾದ್ಧಕಾಲದಲ್ಲಿ ಪಠಿಸಿದರೆ ಪಿತೃಗಳಿಗೆ ತೃಪ್ತಿಯಾಗುತ್ತದೆ. ನಿತ್ಯವೂ ವಿಹಿತರೀತಿಯಲ್ಲಿ ಪಠಿಸುವುದರಿಂದ ಪುನರ್ಜನ್ಮವಿರುವುದಿಲ್ಲ (೭೮–೮೦).

ಇಲ್ಲಿಗೆ ಶ್ರೀ ಪದ್ಮಪುರಾಣದ ಉತ್ತರಖಂಡದಲ್ಲಿ
ಐದನೆಯ ಅಧ್ಯಾಯ



## ಷಷ್ಠೋಽಧ್ಯಾಯಃ

ಕುಮಾರಾ ಊಚುಃ—

ಅಥ ತೇ ಸಂಪ್ರವಕ್ಷ್ಯಾಮಃ ಸಪ್ತಾಹಶ್ರವಣೇ ವಿಧಿಮ್ ।
ಸಹಾಯೈರ್ವಸುಭಿಶ್ಚೈವ ಪ್ರಾಯಃ ಸಾಧ್ಯೋ ವಿಧಿಃ ಸ್ಮೃತಃ ॥ ೧

ದೈವಜ್ಞಂ ತು ಸಮಾಹೂಯ ಮುಹೂರ್ತಂ ಪೃಚ್ಛ್ಯ ಯತ್ನತಃ ।
ವಿವಾಹೇ ಯಾದೃಶಂ ವಿತ್ತಂ ತಾದೃಶಂ ಪರಿಕಲ್ಪಯೇತ್ ॥ ೨

ನಭಸ್ಯ ಆಶ್ವಿನೋರ್ಜೌ ಚ ಮಾರ್ಗಶೀರ್ಷಃ ಶುಚಿರ್ನಭಾಃ ।
ಏತೇ ಮಾಸಾಃ ಕಥಾರಂಭೇ ಶ್ರೋತೄಣಾಂ ಮೋಕ್ಷಸೂಚಕಾಃ ॥ ೩

ಮಾಸಾನಾಂ ವಿಪ್ರ ಹೇಯಾನಿ ತಾನಿ ತ್ಯಾಜ್ಯಾನಿ ಸರ್ವಥಾ ।
ಸಹಾಯಾಶ್ಚೇತರೇ ತತ್ರ ಕರ್ತವ್ಯಾಃ ಸೋದ್ಯಮಾಶ್ಚ ಯೇ ॥ ೪

ದೇಶೇ ದೇಶೇ ತಥಾ ಸೇಯಂ ವಾರ್ತಾ ಪ್ರೇಷ್ಯಾ ಪ್ರಯತ್ನತಃ ।
ಭವಿಷ್ಯತಿ ಕಥಾ ಚಾತ್ರ ಆಗಂತವ್ಯಂ ಕುಟುಂಬಿಭಿಃ ॥ ೫

## ಅಧ್ಯಾಯ ೬

ಭಾಗವತದ ಸಪ್ತಾಹಶ್ರವಣವಿಧಿ; ಸನತ್ಕುಮಾರರಿಂದ ಭಾಗವತಪ್ರವಚನ ಫಲಶ್ರುತಿ.

ಸನತ್ಕುಮಾರರು ಹೇಳಿದರು : ನಾರದರೆ, ಈಗ ಸಪ್ತಾಹಶ್ರವಣವಿಧಿಯನ್ನು ನಿಮಗೆ ತಿಳಿಸುತ್ತೇವೆ. ಈ ವಿಧಿಯನ್ನು ಸಾಧಿಸುವುದಕ್ಕೆ ಬಹಳ ಸಹಾಯಬೇಕು, ಹಣವೂ ಬೇಕು. ಜ್ಯೋತಿಃಶಾಸ್ತ್ರಜ್ಞನನ್ನು ಕೇಳಿ ಮುಹೂರ್ತವನ್ನು ಗೊತ್ತು ಪಡಿಸಬೇಕು. ಮದುವೆಯ ಕಾರ್ಯದಲ್ಲಿ ಹೇಗೆ ಹಣಬೇಕಾಗುವುದೋ ಹಾಗೆ ಹಣವನ್ನು ಒದಗಿಸಿಕೊಳ್ಳತಕ್ಕದ್ದು (೧–೨). ಭಾದ್ರಪದ, ಆಶ್ವಯುಜ, ಕಾರ್ತಿಕ, ಮಾರ್ಗಶೀರ್ಷ, ಆಷಾಢ, ಶ್ರಾವಣ—ಈ ಮಾಸಗಳು, ಕಥಾರಂಭವನ್ನು ಮಾಡಿದರೆ, ಶ್ರೋತೃಗಳಿಗೆ ಮೋಕ್ಷಫಲವನ್ನೀಯುತ್ತವೆ. (ಶಾಸ್ತ್ರದಲ್ಲಿ ಹೇಳಿದ) ನಿಂದ್ಯಮಾಸಗಳು ತ್ಯಾಜ್ಯವಾದವು. ಉತ್ಸಾಹಶಾಲಿಗಳಾದ ಕೆಲವು ಸಹಾಯಕರನ್ನು ಗೊತ್ತುಪಡಿಸಿಕೊಳ್ಳಬೇಕು (೩–೪). 'ಇಲ್ಲಿ ಭಾಗವತಕಥಾಶ್ರವಣವು ನಡೆಯುತ್ತದೆ. ನೀವೆಲ್ಲರೂ ಕುಟುಂಬಸಹಿತವಾಗಿ ಆಗಮಿಸಬೇಕು' ಎಂದು

ದೂರೇ ಹರಿಕಥಾಃ ಕೇಚಿದ್ದೂರೇ ಚಾಚ್ಯುತಕೀರ್ತನಾಃ ।
ಸ್ತ್ರಿಯಃ ಶೂದ್ರಾದಯೋ ಯೇ ಚ ತೇಷಾಂ ಬೋಧೋ
ಯತೋ ಭವೇತ್ ॥ ೬

ದೇಶೇ ದೇಶೇ ವಿರಕ್ತಾ ಯೇ ವೈಷ್ಣವಾಃ ಕೀರ್ತನೋತ್ಸುಕಾಃ ।
ತೇಷ್ವೇವ ಪತ್ರಂ ಪ್ರೇಷ್ಯಂ ಚ ತಲ್ಲೇಖನಮಿತೀರಿತಮ್ ॥ ೭

ಸತಾಂ ಸಮಾಜೋ ಭವಿತಾ ಸಪ್ತರಾತ್ರಂ ಸುದುರ್ಲಭಃ ।
ಅಪೂರ್ವರಸರೂಪೈವ ಕಥಾ ಚಾತ್ರ ಭವಿಷ್ಯತಿ ॥ ೮

ಶ್ರೀಭಾಗವತಪೀಯೂಷಪಾನಾಯ ರಸಲಂಪಟಾಃ ।
ಭವಂತಶ್ಚ ತಥಾ ಶೀಘ್ರಮಾಯಾತ ಪ್ರೇಮತತ್ಪರಾಃ ॥ ೯

ನಾವಕಾಶಃ ಕದಾಚಿಚ್ಚೇದ್ದಿನಮಾತ್ರಂ ತಥಾಪಿ ತು ।
ಸರ್ವಥಾಽಽಗಮನಂ ಕಾರ್ಯಂ ಕ್ಷಣೋಽತ್ರೈವ ಸುದುರ್ಲಭಃ ॥ ೧೦

---

ದೇಶದೇಶಕ್ಕೂ ಸುದ್ದಿಯನ್ನು ಪ್ರಯತ್ನಪೂರ್ವಕವಾಗಿ ಮುಟ್ಟಿಸಬೇಕು. ಹರಿಕಥೆಗಳೂ ಹರಿಕೀರ್ತನೆಗಳೂ ಯಾರಿಗೆ ಲಭ್ಯವಾಗದೆ ದೂರವಾಗಿದ್ದಾರೋ ಮತ್ತು ಸ್ತ್ರೀ ಶೂದ್ರಾದಿಗಳಿದ್ದಾರೋ ಅವರೆಲ್ಲರಿಗೂ ಈ ಸಂಗತಿಯು ತಿಳಿಯಬೇಕು (೫–೬). ದೇಶದೇಶಗಳಲ್ಲಿ ಯಾವ ವಿರಕ್ತರೂ ವಿಷ್ಣುಭಕ್ತರೂ ಹರಿಕೀರ್ತನದಲ್ಲಿ ಆಸಕ್ತಿಯುಳ್ಳವರೂ ಇದ್ದಾರೋ ಅವರಿಗೆ ಪತ್ರವನ್ನು ಬರೆದು ಕಳಿಸಲೇಬೇಕು. "ಏಳು ರಾತ್ರಿಗಳವರೆಗೆ ಸಜ್ಜನರ ಸಮುದಾಯವು ನೆರೆಯುತ್ತದೆ. ಇದು ದುರ್ಲಭವಾದದ್ದು. ಅಪೂರ್ವರಸಮಯವಾದ ಕಥಾಪ್ರವಚನವು ನಡೆಯುವುದು. ರಸಾಭಿಜ್ಞರಾದ ನೀವು ಶ್ರೀಮದ್ಭಾಗವತಾಮೃತವನ್ನು ಪಾನಮಾಡಲೋಸುಗ ಪ್ರೀತಿಯಿಂದ ಶೀಘ್ರವಾಗಿ ಬನ್ನಿರಿ (೭–೯). ಅವಕಾಶವಿಲ್ಲವಾದರೆ ಮೂರು ದಿನಗಳವರೆಗಾದರೂ ಆಗಮಿಸಿರಿ! ಒಟ್ಟಿನಲ್ಲಿ ನೀವು ಸರ್ವಥಾ ದಯಮಾಡಿಸಬೇಕು. ಈ ಬಗೆಯ ಉತ್ಸವವು ಸುಲಭವಾಗಿ ದೊರೆಯತಕ್ಕದ್ದಲ್ಲ" ಎಂಬುದಾಗಿ ಅವರನ್ನು ವಿನಯದಿಂದ ಆಹ್ವಾನಿಸಬೇಕು. ಆಗಮಿಸತಕ್ಕವರಿಗಾಗಿ ವಾಸಸ್ಥಾನ

ಏವಮಾಕರಣಂ ತೇಷಾಂ ಕರ್ತವ್ಯಂ ವಿನಯೇನ ಚ ।
ಆಗಂತುಕಾನಾಂ ಸರ್ವೇಷಾಂ ವಾಸಸ್ಥಾನಾನಿ ಕಲ್ಪಯೇತ್ ॥ ೧೧

ತೀರ್ಥೇ ವಾಪಿ ವನೇ ವಾಪಿ ಗೃಹೇ ವಾ ಶ್ರವಣಂ ಮತಮ್ ।
ವಿಶಾಲಾ ವಸುಧಾ ಯತ್ರ ಕರ್ತವ್ಯಂ ತತ್ಕಥಾಸ್ಥಲಮ್ ॥ ೧೨

ಶೋಧನಂ ಮಾರ್ಜನಂ ಭೂಮೇರ್ಲೇಪನಂ ಧಾತುಮಂಡನಮ್ ।
ಗೃಹೋಪಸ್ಕರಮುದ್ಧೃತ್ಯ ಗೃಹಕೋಣೇ ನಿವೇಶಯೇತ್ ॥ ೧೩

ಅರ್ವಾಕ್ಪಂಚಾಹತೋ ಯತ್ನಾದಾಸ್ತೀರ್ಣಾನಿ ಪ್ರಮೇಲಯೇತ್ ।
ಕರ್ತವ್ಯೋ ಮಂಡಪಃ ಪ್ರೋಚ್ಚೈಃ ಕದಲೀಖಂಡಮಂಡಿತಃ ॥ ೧೪

ಫಲಪುಷ್ಪದಲೈರ್ವಿಷ್ವಗ್ವಿತಾನೇನ ವಿರಾಜಿತಃ ।
ಚತುರ್ದಿಕ್ಷು ಧ್ವಜಾರೋಪೋ ಬಹುಸಂಪದ್ವಿರಾಜಿತಃ ॥ ೧೫

---

ಗಳನ್ನು ಏರ್ಪಡಿಸಬೇಕು (೧೦–೧೧). ತೀರ್ಥಕ್ಷೇತ್ರದಲ್ಲಾಗಲಿ ಆರಣ್ಯದಲ್ಲಾಗಲಿ ಅಥವಾ ಗೃಹದಲ್ಲಾಗಲಿ ಕಥಾಶ್ರವಣವು ನಡೆಯಬಹುದು. ಕಥೆಯನ್ನು ನಡೆಸುವ ಸ್ಥಳವು ವಿಶಾಲವಾಗಿರಬೇಕು. ನೆಲವನ್ನು ಸ್ವಚ್ಛಪಡಿಸಿ, ನೀರು ಚುಮುಕಿಸಿ, ಗೋಮಯದಿಂದ ಬಳಿದು, ರಂಗವಲ್ಲಿ—ಮೊದಲಾದ್ದರಿಂದ ಅಲಂಕರಿಸಬೇಕು. ಗೃಹೋಪಕರಣಗಳನ್ನೆತ್ತಿ ಒಂದು ಕಡೆ ಸೇರಿಸತಕ್ಕದ್ದು. ಐದು ದಿನಗಳ ಮೊದಲೇ ಕುಳಿತುಕೊಳ್ಳುವ ಆಸನಗಳನ್ನು ಸಂಗ್ರಹಿಸತಕ್ಕದ್ದು. ಬಾಳೆಯ ಗಿಡಗಳಿಂದ ಭೂಷಿತವಾಗಿರುವ ಎತ್ತರವಾದ ಮಂಟಪವನ್ನು ರಚಿಸತಕ್ಕದ್ದು (೧೨–೧೪). ಹಣ್ಣು, ಹೂ, ಎಲೆಗಳನ್ನು ಸುತ್ತಲೂ ನೇತುಹಾಕಿ ಶೋಭಿಸುವಂತೆ ಮಾಡಿ ಮಂಟಪದ ನಾಲ್ಕು ಕಡೆಗಳಲ್ಲಿ ಧ್ವಜವನ್ನೆತ್ತಿ ಕಟ್ಟಬೇಕು. ವಿವಿಧಾಲಂಕಾರಗಳಿಂದ ಸುಂದರಗೊಳಿಸಬೇಕು (ಮಂಟಪದೆದುರಿಗೆ ಎತ್ತರವಾದ ಸ್ಥಳದಲ್ಲಿ ಕುಳಿತುಕೊಳ್ಳಲು ಏಳು ಸಾಲುಗಳನ್ನು ವಿಶಾಲವಾಗಿ [1]ರಚಿಸಬೇಕು). ಜನರಿಗೆ ತಿಳಿವಳಿಕೆಯನ್ನು ಕೊಟ್ಟು, ಈ ಸಾಲುಗಳಲ್ಲಿ ವಿರಕ್ತರಾದ ವಿಪ್ರರು ಕುಳಿತುಕೊಳ್ಳುವಂತೆ

---

1. ೧೬ನೆಯ ಶ್ಲೋಕದ ಪೂರ್ವಾರ್ಧಕ್ಕೆ ಊಹಿಸಿರುವ ಅರ್ಥ ಇದು. ಈ ಅರ್ಥ ಸಂದಿಗ್ಧವಾದದ್ದು.

*

ಊರ್ಧ್ವಂ ಸಪ್ತೈವ ಲೋಕಾಶ್ಚ ಕಲ್ಪನೀಯಾಃ ಸವಿಸ್ತರಮ್ |
ತೇಷು ವಿಪ್ರಾ ವಿರಕ್ತಾಶ್ಚ ಸ್ಥಾಪನೀಯಾಃ ಪ್ರಬೋಧ್ಯ ಚ || ೧೬

ಪೂರ್ವಂ ತೇಷಾಮಾಸನಾನಿ ಕರ್ತವ್ಯಾನಿ ಯಥೋತ್ತರಮ್ |
ವಕ್ತುಶ್ಚಾಪಿ ತದಾ ದಿವ್ಯಮಾಸನಂ ಪರಿಕಲ್ಪಯೇತ್ || ೧೭

ಉದಙ್ಮುಖೋ ಭವೇದ್ವಕ್ತಾ ಶ್ರೋತಾ ವೈ ಪ್ರಾಙ್ಮುಖಸ್ತದಾ |
ಪ್ರಾಙ್ಮುಖಶ್ಚೇದ್ಭವೇದ್ವಕ್ತಾ ಶ್ರೋತಾ ಚೋದಙ್ಮುಖಸ್ತದಾ || ೧೮

ಅಥವಾ ಪೂರ್ವದಿಗ್ಜ್ಞೇಯಾ ಪೂಜ್ಯಪೂಜಕಮಧ್ಯತಃ |
ಶ್ರೋತೄಣಾಮಾಗಮೇ ಪ್ರೋಕ್ತೋ ದೇಶಕಾಲಾದಿಕೋವಿದೈಃ || ೧೯

ವಿರಕ್ತೋ ವೈಷ್ಣವೋ ವಿಪ್ರೋ ವೇದಶಾಸ್ತ್ರವಿಶುದ್ಧಿಕೃತ್ |
ದೃಷ್ಟಾಂತಕುಶಲೋ ಧೀರೋ ವಕ್ತಾ ಕಾರ್ಯೋಽತಿನಿಃಸ್ಪೃಹಃ || ೨೦

ಅನೇಕ ಧರ್ಮವಿಭ್ರಾಂತಾಃ ಸ್ತ್ರೈಣಾಃ ಪಾಖಂಡವಾದಿನಃ |
ಶುಕಶಾಸ್ತ್ರಕಥೋಚ್ಚಾರೇ ತ್ಯಾಜ್ಯಾಸ್ತೇ ಯದಿ ಪಂಡಿತಾಃ || ೨೧

---

ನೋಡಿಕೊಳ್ಳಬೇಕು (೧೫–೧೬). ಮೊದಲು ಇವರಿಗೆ ಆಸನಗಳನ್ನು ಕಲ್ಪಿಸಿ, ಅನಂತರ ಉಳಿದವರಿಗೆ ಆಸನಗಳನ್ನು ಯೋಜಿಸಬೇಕು. ಅಲ್ಲದೆ ಪ್ರವಚನಕರ್ತನಿಗೆ ದಿವ್ಯವಾದ ಒಂದು ಆಸನವನ್ನು ಸ್ಥಾಪಿಸಬೇಕು. ಪ್ರವಚನಕರ್ತನು ಉತ್ತರಾಭಿಮುಖನಾಗಿ ಕುಳಿತುಕೊಳ್ಳುವಂತಿದ್ದರೆ, ಶ್ರೋತೃವು ಪೂರ್ವಾಭಿಮುಖನಾಗಿರಬೇಕು. ಒಂದುವೇಳೆ ಪ್ರವಚನಕರ್ತನು ಪೂರ್ವಾಭಿಮುಖನಾದರೆ ಶ್ರೋತೃವು ಉತ್ತರಾಭಿಮುಖನಾಗಿರಬೇಕು (೧೭–೧೮). ಅಥವಾ ಪೂಜ್ಯಪೂಜಕರ ನಡುವೆ ಯಾರಿಗಾದರೂ ಪೂರ್ವದಿಕ್ಕು ಬಂದಿರಬೇಕೆಂದು ಶ್ರೋತೃಗಳ ವಿಷಯವಾಗಿ ದೇಶಕಾಲಾದಿಕೋವಿದರು ಶಾಸ್ತ್ರದಲ್ಲಿ [1]ಹೇಳಿದ್ದಾರೆ (೧೯). ಪ್ರವಚನಕರ್ತನು ವಿರಕ್ತನೂ ವಿಷ್ಣುಭಕ್ತನೂ ವೇದಶಾಸ್ತ್ರಗಳ ತತ್ತ್ವವನ್ನರಿತವನೂ ದೃಷ್ಟಾಂತಗಳನ್ನು ಕೊಡುವುದರಲ್ಲಿ ಕುಶಲನೂ ಅತ್ಯಂತ ನಿಃಸ್ಪೃಹನೂ ಆದ ವಿಪ್ರನಾಗಿರುವಂತೆ ನೋಡಿಕೊಳ್ಳತಕ್ಕದ್ದು. ನಾನಾಧರ್ಮಗಳ ಸತ್ಯವನ್ನರಿಯಲಾರದೆ ಭ್ರಾಂತರಾದವರೂ ಸ್ತ್ರೀಲಂಪಟರೂ ನಾಸ್ತಿಕರೂ, ಅವರು ಪಂಡಿತರಾಗಿದ್ದರೂ ಸಹ, ಈ ಶುಕಶಾಸ್ತ್ರಪ್ರವಚನಮಾಡುವ ವಿಷಯದಲ್ಲಿ ಪರಿತ್ಯಾಜ್ಯರಾಗುತ್ತಾರೆ (೨೦–೨೧).

---

1. ಈ ಶ್ಲೋಕದ ತಾತ್ಪರ್ಯವೂ ಸಂದಿಗ್ಧವಾದದ್ದು.

ವಕ್ತುಃ ಪಾರ್ಶ್ವೇ ಸಹಾಯಾರ್ಥಮನ್ಯಃ ಸ್ಥಾಪ್ಯಸ್ತಥಾವಿಧಃ ।
ಪಂಡಿತಃ ಸಂಶಯಚ್ಛೇತ್ತಾ ಲೋಕಬೋಧನತತ್ಪರಃ ॥ ೨೨

ವಕ್ತ್ರಾ ಕ್ಷೌರಂ ಪ್ರಕರ್ತವ್ಯಂ ದಿನಾದರ್ವಾಗ್ವ್ರತಾಪ್ತಯೇ ।
ಅರುಣೋದಯೇಽಸೌ ನಿರ್ವರ್ತ್ಯ ಶೌಚಂ ಸ್ನಾನಂ ಸಮಾಚರೇತ್ ॥ ೨೩

ನಿತ್ಯಂ ಸಂಕ್ಷೇಪತಃ ಕೃತ್ವಾ ಸಂಧ್ಯಾದ್ಯಂ ಸ್ವಂ ಪ್ರಯತ್ನತಃ ।
ಕಥಾವಿಘ್ನವಿಘಾತಾಯ ಗಣನಾಥಂ ಪ್ರಪೂಜಯೇತ್ ॥ ೨೪

ಪಿತೄನ್ ಸಂತರ್ಪ್ಯ ಶುದ್ಧ್ಯರ್ಥಂ ಪ್ರಾಯಶ್ಚಿತ್ತಂ ಸಮಾಚರೇತ್ ।
ಮಂಡಲಂ ಚ ಪ್ರಕರ್ತವ್ಯಂ ತತ್ರ ಸ್ಥಾಪ್ಯೋ ಹರಿಸ್ತಥಾ ॥ ೨೫

ಕೃಷ್ಣಮುದ್ದಿಶ್ಯ ಮಂತ್ರೇಣ ಚರೇತ್ಪೂಜಾವಿಧಿಂ ಕ್ರಮಾತ್ ।
ಪ್ರದಕ್ಷಿಣನಮಸ್ಕಾರಾನ್ ಪೂಜಾಂತೇ ಸ್ತುತಿಮಾಚರೇತ್ ॥ ೨೬

---

ವಕ್ತಾರನ ಬಳಿಯಲ್ಲಿ ಅವನ ಸಹಾಯಕ್ಕಾಗಿ ಅಷ್ಟೇ ಯೋಗ್ಯತೆಯುಳ್ಳ ಇನ್ನೊಬ್ಬ ವಿದ್ವಾಂಸನನ್ನು ಕುಳ್ಳಿರಿಸಬೇಕು. ಆತನು ಜನರ ಸಂಶಯವನ್ನು ಪರಿಹರಿಸಿ ಅವರಿಗೆ ಸರಿಯಾದ ಬೋಧವನ್ನುಂಟುಮಾಡುವುದರಲ್ಲಿ ತತ್ಪರನಾಗಿರಬೇಕು. ಪ್ರವಚನ ಕರ್ತಾರನು ಒಂದು ದಿನ ಮೊದಲು ವ್ರತಾಂಗವಾಗಿ ಕ್ಷೌರವನ್ನು ಮಾಡಿಸಿಕೊಳ್ಳ ತಕ್ಕದ್ದು. ಪ್ರವಚನಾರಂಭದ ದಿನ ಕರ್ತನು ಅರುಣೋದಯಕಾಲದಲ್ಲಿ ಶೌಚ ವನ್ನು ಮುಗಿಸಿ ಸ್ನಾನಮಾಡತಕ್ಕದ್ದು (೨೨–೨೩). ಆಮೇಲೆ ಸಂಧ್ಯಾದಿ ನಿತ್ಯಕರ್ಮವನ್ನು ಸಂಕ್ಷೇಪವಾಗಿ ಆಚರಿಸಿ, ಕಥಾಪ್ರಸಂಗಕ್ಕೆ ವಿಘ್ನವು ಬಾರದಿರ ಲೆಂದು ಗಣಪತಿ ಪೂಜೆಯನ್ನು ಮಾಡತಕ್ಕದ್ದು. ಪಿತೃದೇವತೆಗಳಿಗೆ ತರ್ಪಣವನ್ನಿತ್ತು ಸರ್ವಶುದ್ಧಿಗಾಗಿ ಪ್ರಾಯಶ್ಚಿತ್ತವಿಧಿಯನ್ನಾಚರಿಸಿ, ಮಂಟಪದಲ್ಲಿ ಮಂಡಲವನ್ನು ರಚಿಸಿ, ಅದರಲ್ಲಿ ಶ್ರೀಹರಿಯನ್ನು ಸ್ಥಾಪಿಸಬೇಕು (೨೪–೨೫). ಶ್ರೀಕೃಷ್ಣನನ್ನು ಉದ್ದೇಶಿಸಿ ಮಂತ್ರಪೂರ್ವಕವಾಗಿ ಪೂಜಾವಿಧಿಯನ್ನು ನೆರವೇರಿಸಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡತಕ್ಕದ್ದು. ಕಡೆಯಲ್ಲಿ ಸ್ತೋತ್ರವನ್ನು ಮಾಡಿ "ಹೇ ಕರುಣಾನಿಧೇ, ಕರ್ಮಜಾಡ್ಯದಲ್ಲಿ ಸಿಕ್ಕಿ ಸಂಸಾರಸಾಗರದಲ್ಲಿ ಮುಳುಗಿಹೋಗಿರುವ ದೀನನಾದ ನನ್ನನ್ನು ಸಂಸಾರಸಾಗರದಿಂದ ಉದ್ಧರಿಸು" ಎಂದು ಪ್ರಾರ್ಥಿಸ

ಸಂಸಾರಸಾಗರೇ ಮಗ್ನಂ ದೀನಂ ಮಾಂ ಕರುಣಾನಿಧೇ ।
ಕರ್ಮಮೋಹಗೃಹೀತಾಂಗಂ ಮಾಮುದ್ಧರ ಭವಾರ್ಣವಾತ್ ॥ ೨೭

ಶ್ರೀಮದ್ಭಾಗವತಸ್ಯಾಪಿ ತತಃ ಪೂಜಾ ಪ್ರಯತ್ನತಃ ।
ಕರ್ತವ್ಯಾ ವಿಧಿನಾ ಪ್ರೀತ್ಯಾ ಧೂಪದೀಪಸಮನ್ವಿತಾ ॥ ೨೮

ತತಸ್ತು ಶ್ರೀಫಲಂ ಧೃತ್ವಾ ನಮಸ್ಕಾರಂ ಸಮಾಚರೇತ್ ।
ಸ್ತುತಿಃ ಪ್ರಸನ್ನಚಿತ್ತೇನ ಕರ್ತವ್ಯಾ ಕೇವಲಂ ತದಾ ॥ ೨೯

ಶ್ರೀಮದ್ಭಾಗವತಾಖ್ಯೋಽಯಂ ಪ್ರತ್ಯಕ್ಷಃ ಕೃಷ್ಣ ಏವ ಹಿ ।
ಸ್ವೀಕೃತೋಽಸಿ ಮಯಾ ನಾಥ ಮುಕ್ತ್ಯರ್ಥಂ ಭವಸಾಗರೇ ॥ ೩೦

ಮನೋರಥೋ ಮದೀಯೋಽಯಂ ಸಫಲಃ ಸರ್ವಥಾ ತ್ವಯಾ ।
ನಿರ್ವಿಘ್ನೇನೈವ ಕರ್ತವ್ಯೋ ದಾಸೋಽಹಂ ತವ ಕೇಶವ ॥ ೩೧

ಏವಂ ದೀನವಚಃ ಪ್ರೋಚ್ಯ ವಕ್ತಾರಂ ಚಾಥ ಪೂಜಯೇತ್ ।
ಸಂಭೂಷ್ಯ ವಸ್ತ್ರಭೂಷಾಭಿಃ ಪೂಜಾಂತೇ ತಂ ಚ ಸಂಸ್ತವೇತ್ ॥ ೩೨

ಶುಕರೂಪ ಪ್ರಬೋಧಜ್ಞ ಸರ್ವಶಾಸ್ತ್ರವಿಶಾರದ ।
ಏತತ್ಕಥಾಪ್ರಕಾಶೇನ ಮದಜ್ಞಾನಂ ವಿನಾಶಯ ॥ ೩೩

---

ತಕ್ಕದ್ದು (೨೬–೨೭). ಆಮೇಲೆ ಕರ್ತನು ಶ್ರೀಮದ್ಭಾಗವತ ಪುಸ್ತಕವನ್ನೂ ಸಹ ವಿಧಿಪೂರ್ವಕವಾಗಿ ಸಂತೋಷದಿಂದ ಪೂಜಿಸಬೇಕು. ಧೂಪದೀಪಗಳನ್ನರ್ಪಿಸಬೇಕು. ಆಮೇಲೆ ಶ್ರೀಫಲವನ್ನು (ಬಿಲ್ವಫಲವನ್ನು) ಕೈಯಲ್ಲಿ ಹಿಡಿದುಕೊಂಡು ನಮಸ್ಕಾರಮಾಡಿ ಪ್ರಸನ್ನಚಿತ್ತದಿಂದ ಸ್ತುತಿಯನ್ನು ಮಾಡಬೇಕು : "ಶ್ರೀಮದ್ಭಾಗವತವು ಪ್ರತ್ಯಕ್ಷನಾದ ಶ್ರೀಕೃಷ್ಣನೇ ಸರಿ. ಹೇ ನಾಥ, ಭವಸಾಗರವನ್ನು ದಾಟಿ ಮುಕ್ತಿಯನ್ನು ಪಡೆಯಬೇಕೆಂದು ನಿನಗೆ ಶರಣಾಗತನಾಗಿದ್ದೇನೆ (೨೮–೩೦). ನನ್ನ ಈ ಮನೋರಥವು ನಿನ್ನ ಕೃಪೆಯಿಂದ ನಿರ್ವಿಘ್ನವಾಗಿ ನೆರವೇರಲಿ. ಹೇ ಕೇಶವ, ನಾನು ನಿನ್ನ ಭೃತ್ಯ" ಎನ್ನಬೇಕು. ಈ ಪ್ರಕಾರ ದೈನ್ಯದಿಂದ ಪ್ರಾರ್ಥಿಸಿ, ಅನಂತರ ಪ್ರವಚನಕಾರನನ್ನು ಪೂಜಿಸತಕ್ಕದ್ದು. ಆತನಿಗೆ ವಸ್ತ್ರಭೂಷಣಗಳನ್ನರ್ಪಿಸಿ "ಹೇ ಶುಕರೂಪ, ಜ್ಞಾನಿಯೆ, ಸರ್ವಶಾಸ್ತ್ರವಿಶಾರದ, ಈ ಕಥಾಪ್ರವಚನದಿಂದ

ತದಗ್ರೇ ನಿಯಮಃ ಪಶ್ಚಾತ್ಕರ್ತವ್ಯಃ ಶ್ರೇಯಸೇ ಮುದಾ ।
ಸಪ್ತರಾತ್ರಂ ಯಥಾಶಕ್ತ್ಯಾ ಧಾರಣೀಯಃ ಸ ಏವ ಹಿ ॥ ೩೪

ವರಣಂ ಪಂಚವಿಪ್ರಾಣಾಂ ಕಥಾಭಂಗನಿವೃತ್ತಯೇ ।
ಕರ್ತವ್ಯಂ ತೈರ್ಹರೇರ್ಜಾಪ್ಯಂ ದ್ವಾದಶಾಕ್ಷರವಿದ್ಯಯಾ ॥ ೩೫

ಬ್ರಾಹ್ಮಣಾನ್ ವೈಷ್ಣವಾಂಶ್ಚಾನ್ಯಾಂಸ್ತಥಾ ಕೀರ್ತನಕಾರಿಣಃ ।
ನತ್ವಾ ಸಂಪೂಜ್ಯ ದತ್ತಾಜ್ಞಃ ಸ್ವಯಮಾಸನಮಾವಿಶೇತ್ ॥ ೩೬

ಲೋಕವಿತ್ತಧನಾಗಾರಪುತ್ರಚಿಂತಾಂ ವ್ಯುದಸ್ಯ ಚ ।
ಕಥಾಚಿತ್ತಃ ಶುದ್ಧಮತಿಃ ಸ ಲಭೇತ್ಫಲಮುತ್ತಮಮ್ ॥ ೩೭

ಆಸೂರ್ಯೋದಯಮಾರಭ್ಯ ಸಾರ್ಧತ್ರಿಪ್ರಹರಾಂತಕಮ್ ।
ವಾಚನೀಯಾ ಕಥಾ ಸಮ್ಯಗ್ಧೀರಕಂಠಂ ಸುಧೀಮತಾ ॥ ೩೮

---

ನನ್ನ ಅಜ್ಞಾನವನ್ನು ಹೋಗಲಾಡಿಸು” ಎಂದು ಸ್ತೋತ್ರಪೂರ್ವಕವಾಗಿ ಕೇಳಿಕೊಳ್ಳಬೇಕು (೩೧–೩೩). ಆತನೆದುರಿಗೆ ಶ್ರೋತೃನಿಯಮವನ್ನು ಪಾಲಿಸುತ್ತೇನೆಂದು ಪ್ರತಿಜ್ಞೆಮಾಡತಕ್ಕದ್ದು. ಯಥಾಶಕ್ತಿಯಾಗಿ ಏಳು ರಾತ್ರಿಗಳವರೆಗೂ ಆ ನಿಯಮವನ್ನು ಪಾಲಿಸತಕ್ಕದ್ದು. ಕಥಾಭಂಗವಾದೀತೆಂದು ಅದನ್ನು ತಪ್ಪಿಸುವುದಕ್ಕಾಗಿ ಐವರು ಬ್ರಾಹ್ಮಣರಿಗೆ ವರಣವನ್ನೀಯಬೇಕು. ಅವರು ಶ್ರೀಹರಿಯ ದ್ವಾದಶಾಕ್ಷರ ಮಂತ್ರವನ್ನು ಜಪಿಸುತ್ತಿರಬೇಕು (೩೪–೩೫). ಬ್ರಾಹ್ಮಣರನ್ನೂ ವಿಷ್ಣುಭಕ್ತರನ್ನೂ ಹರಿಕೀರ್ತನಕಾರರನ್ನೂ ನಮಸ್ಕರಿಸಿ ಪೂಜಿಸಿ, ಅವರಿಂದ ಅನುಮತಿಯನ್ನು ಪಡೆದು ತಾನು ಆಸನದಲ್ಲಿ ಕುಳಿತುಕೊಳ್ಳಬೇಕು. ಲೋಕವ್ಯವಹಾರ, ಹಣಕಾಸಿನ ವಿಚಾರ, ಮನೆಮಕ್ಕಳ ಚಿಂತೆ—ಇವೆಲ್ಲವನ್ನೂ ದೂರಮಾಡಿ ಶುದ್ಧಮನಸ್ಸಿನಿಂದ ಯಾವಾತನು ಕಥೆಯನ್ನು ಏಕಾಗ್ರತೆಯಿಂದ ಆಲಿಸುತ್ತಾನೋ ಆತನಿಗೆ ಉತ್ತಮವಾದ ಫಲವು ದೊರೆಯುವುದು (೩೬–೩೭). ಸೂರ್ಯೋದಯದಿಂದ ಹಿಡಿದು ಮೂರೂವರೆ [1]ಪ್ರಹರಗಳಕಾಲ ಕಥಾಪ್ರಸಂಗವನ್ನು

1. ಪ್ರಹರ = ೧ ದಿನದಲ್ಲಿ ಎಂಟನೆಯ ಒಂದು ಭಾಗ; ಸುಮಾರು ೩ ಘಂಟೆ. 3½ ಪ್ರಹರ = ಹತ್ತೂವರೆ ಘಂಟೆ.

ಕಥಾವಿರಾಮಃ ಕರ್ತವ್ಯೋ ಮಧ್ಯಾಹ್ನೇ ಘಟಿಕಾದ್ವಯಮ್ ।
ತತ್ಕಥಾಮನು ಕಾರ್ಯಂ ವೈ ಕೀರ್ತನಂ ವೈಷ್ಣವೈಸ್ತದಾ ॥ ೩೯

ಮಲಮೂತ್ರಜಯಾರ್ಥಂ ಹಿ ಲಘ್ವಾಹಾರಃ ಸುಖಾವಹಃ ।
ಹವಿಷ್ಯಾನ್ನೇನ ಕರ್ತವ್ಯೋ ಹ್ಯೇಕವಾರಂ ಕಥಾರ್ಥಿನಾ ॥ ೪೦

ಉಪೋಷ್ಯ ಸಪ್ತರಾತ್ರಂ ವೈ ಶಕ್ತಿಶ್ಚೇಚ್ಛೃಣುಯಾತ್ತದಾ ।
ಘೃತಪಾನಂ ಪಯಃಪಾನಂ ಕೃತ್ವಾ ವೈ ಶೃಣುಯಾತ್ಸುಖಮ್ ॥ ೪೧

ಫಲಾಹಾರೇಣ ವಾ ಭಾವ್ಯಮೇಕಭುಕ್ತೇನ ವಾ ಪುನಃ ।
ಸುಖಸಾಧ್ಯಂ ಭವೇದ್ಯತ್ತು ಕರ್ತವ್ಯಂ ಶ್ರವಣಾಯ ತತ್ ॥ ೪೨

ಭೋಜನಂ ತು ವರಂ ಮನ್ಯೇ ಕಥಾಶ್ರವಣಕಾರಕಮ್ ।
ನೋಪವಾಸೋ ವರಃ ಪ್ರೋಕ್ತಃ ಕಥಾವಿಘ್ನಕರೋ ಯದಿ ॥ ೪೩

---

ನಡೆಸಬೇಕು. ವಿದ್ವಾಂಸನು ಧೀರಕಂಠದಿಂದ ಪ್ರವಚನಮಾಡಬೇಕು. ಮಧ್ಯಾಹ್ನದಲ್ಲಿ ಎರಡು [1]ಗಳಿಗೆಗಳಕಾಲ ವಿಶ್ರಾಂತಿಗಾಗಿ ಕಥೆಯನ್ನು ನಿಲ್ಲಿಸಬೇಕು. ದಿನದ ಪ್ರವಚನವು ಸಮಾಪ್ತವಾದಮೇಲೆ ವಿಷ್ಣುಭಕ್ತರು ಹರಿಕೀರ್ತನವನ್ನು ನಡೆಸಬೇಕು (೩೮–೩೯). ಮಲಮೂತ್ರಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದಕ್ಕಾಗಿ ಶ್ರೋತಾರನು ಅಲ್ಪಾಹಾರವನ್ನು ಸ್ವೀಕರಿಸುವುದು ಸುಖಕರವಾಗಿರುತ್ತದೆ. (ಹುಳಿಖಾರಗಳಿಲ್ಲದ) ಹವಿಷ್ಯಾನ್ನವನ್ನು ದಿನಕ್ಕೆ ಒಂದುಸಲ ತೆಗೆದುಕೊಳ್ಳುವುದುತ್ತಮ. ಸಾಮರ್ಥ್ಯವಿದ್ದರೆ ಸಪ್ತರಾತ್ರದವರೆಗೂ ಉಪವಾಸವಿದ್ದು ಕಥಾಶ್ರವಣಮಾಡಬೇಕು. ಘೃತಪಾನವನ್ನು ಅಥವಾ ಕ್ಷೀರಪಾನವನ್ನು ಮಾಡಬಹುದು. ಹಣ್ಣನ್ನಾದರೂ ತಿನ್ನಬಹುದು ಅಥವಾ ಒಂದು ಹೊತ್ತು ಮಾತ್ರ ಭೋಜನಮಾಡಬೇಕು. ಒಟ್ಟಿನಲ್ಲಿ ಶ್ರವಣಮಾಡಲು ತನಗೆ ಯಾವುದು ಹಿತಕರವೋ ಅದನ್ನು ಮಾಡತಕ್ಕದ್ದು (೪೦–೪೨). ಉಪವಾಸವು ಶ್ರವಣಕ್ಕೆ ವಿಘ್ನಮಾಡುವುದಾದರೆ ಭೋಜನ ಮಾಡುವುದೇ ಉತ್ತಮ. ಈ ಸಪ್ತಾಹವ್ರತವನ್ನು ಸ್ವೀಕರಿಸಿದವರು ಪಾಲಿಸಬೇಕಾದ ನಿಯಮಗಳನ್ನು ಹೇಳುತ್ತೇವೆ. ನಾರದರೆ, ವಿಷ್ಣುದೀಕ್ಷೆಯನ್ನು

---

1. ಒಂದು ಗಳಿಗೆ = ೨೪ ನಿಮಿಷ.

ಸಪ್ತಾಹವ್ರತಿನಾಂ ಪುಂಸಾಂ ನಿಯಮಾನ್ ಶೃಣು ನಾರದ ।
ವಿಷ್ಣುದೀಕ್ಷಾವಿಹೀನಾನಾಂ ನಾಧಿಕಾರಃ ಕಥಾಶ್ರವೇ ॥ ೪೪

ಬ್ರಹ್ಮಚರ್ಯಮಧಃಸುಪ್ತಿಃ ಪತ್ರಾವಲ್ಯಾಂ ಚ ಭೋಜನಮ್ ।
ಕಥಾಸಮಾಪ್ತೌ ಭುಕ್ತಿಂ ಚ ಕುರ್ಯಾನ್ನಿತ್ಯಂ ಕಥಾವ್ರತೀ ॥ ೪೫

ದ್ವಿದಲಂ ಮಧು ತೈಲಂ ಚ ಗರಿಷ್ಠಾನ್ನಂ ತಥೈವ ಚ ।
ಭಾವದುಷ್ಟಂ ಪರ್ಯುಷಿತಂ ಜಹ್ಯಾನ್ನಿತ್ಯಂ ಕಥಾವ್ರತೀ ॥ ೪೬

ಕಾಮಂ ಕ್ರೋಧಂ ಮದಂ ಮಾನಂ ಮತ್ಸರಂ ಲೋಭಮೇವ ಚ ।
ದಂಭಂ ಮೋಹಂ ತಥಾ ದ್ವೇಷಂ ದೂರಯೇಚ್ಚ ಕಥಾವ್ರತೀ ॥ ೪೭

ವೇದವೈಷ್ಣವವಿಪ್ರಾಣಾಂ ಗುರುಗೋವ್ರತಿನಾಂ ತಥಾ ।
ಸ್ತ್ರೀರಾಜಮಹತಾಂ ನಿಂದಾಂ ವರ್ಜಯೇದ್ಯಃ ಕಥಾವ್ರತೀ ॥ ೪೮

ರಜಸ್ವಲಾಂತ್ಯಜಮ್ಲೇಚ್ಛಪತಿತವ್ರಾತ್ಯಕೈಸ್ತದಾ ।
ದ್ವಿಜದ್ವಿಡ್ ವೇದಬಾಹ್ಯೈಶ್ಚ ನ ವದೇದ್ಯಃ ಕಥಾವ್ರತೀ ॥ ೪೯

ಸತ್ಯಂ ಶೌಚಂ ದಯಾ ಮೌನಮಾರ್ಜವಂ ವಿನಯಂ ತಥಾ ।
ಉದಾರಮಾನಸಂ ತದ್ವದೇವಂ ಕುರ್ಯಾತ್ಕಥಾವ್ರತೀ ॥ ೫೦

---

ಸ್ವೀಕರಿಸದೆ ಇರತಕ್ಕವರಿಗೆ ಭಾಗವತ ಕಥಾಶ್ರವಣದಲ್ಲಿ ಅಧಿಕಾರವಿಲ್ಲ (೪೩–೪೪). ದೀಕ್ಷಾನಿಯಮಗಳು ಯಾವುವೆಂದರೆ—ಬ್ರಹ್ಮಚರ್ಯ, ನೆಲದಮೇಲೆ ಮಲಗುವುದು, ಪತ್ರಾವಳಿಯಲ್ಲಿ ಭೋಜನ—ಇವಿಷ್ಟು ಕರ್ತವ್ಯ. ಭೋಜನವನ್ನಾದರೋ ಕಥಾ ಸಮಾಪ್ತಿಯಾದಮೇಲೆ ಮಾಡಬೇಕು. ವ್ರತಧಾರಿಯು ದ್ವಿದಳಧಾನ್ಯ, ಜೇನು, ಎಣ್ಣೆ, ಗುರುವಾದ ಆಹಾರ, ಭಾವದುಷ್ಟವೂ ಪರ್ಯುಷಿತವೂ ಆದ ಆಹಾರ—ಇವನ್ನು ವರ್ಜಿಸಬೇಕು (೪೫–೪೬). ಕಾಮ, ಕ್ರೋಧ, ಮದ, ಮಾನ, ಮತ್ಸರ, ಲೋಭ, ದಂಭ, ವ್ಯಾಮೋಹ, ದ್ವೇಷ—ಇವನ್ನು ದೂರಮಾಡಬೇಕು (೪೭). ವ್ರತನಿಷ್ಠನಾದವನು ವೇದ, ವೈಷ್ಣವ, ವಿಪ್ರರನ್ನೂ ಗುರು ಗೋವು ವ್ರತಧಾರಿಗಳನ್ನೂ ನಿಂದಿಸಕೂಡದು. ಹೆಂಗಸರನ್ನೂ ರಾಜನನ್ನೂ ಹಿರಿಯರನ್ನೂ ನಿಂದಿಸತಕ್ಕದ್ದಲ್ಲ. ಆತನು ರಜಸ್ವಲೆಯಾದ ಸ್ತ್ರೀ ಅಂತ್ಯಜ ಮ್ಲೇಚ್ಛರೊಡನೆಯೂ ಪತಿತ ವ್ರಾತ್ಯರೊಡನೆಯೂ ಬ್ರಹ್ಮದ್ವೇಷಿ ವೇದಬಾಹ್ಯರೊಡನೆಯೂ ಮಾತಾಡ ಕೂಡದು (೪೮–೪೯). ಕಥಾವ್ರತನಿಷ್ಠನು ಸತ್ಯ, ಶೌಚ, ದಯೆ, ಮೌನ,

ದರಿದ್ರಶ್ಚ ಕ್ಷಯೀ ರೋಗೀ ನಿರ್ಭಾಗ್ಯಃ ಪಾಪಕರ್ಮವಾನ್ ।
ಅನಪತ್ಯೋ ಮೋಕ್ಷಕಾಮಃ ಶೃಣುಯಾಚ್ಚ ಕಥಾಮಿಮಾಮ್ ॥ ೫೧

ಅಪುಷ್ಪಾ ಕಾಕವಂಧ್ಯಾ ಚ ವಂಧ್ಯಾ ಯಾ ಚ ಮೃತಾರ್ಭಕಾ ।
ಸ್ರವದ್ಗರ್ಭಾ ಚ ಯಾ ನಾರೀ ತಯಾ ಶ್ರಾವ್ಯಾ ಪ್ರಯತ್ನತಃ ॥ ೫೨

ಏತೇಷು ವಿಧಿನಾ ಶ್ರಾವೇ ತದಕ್ಷಯತರಂ ಭವೇತ್ ।
ಅತ್ಯುತ್ತಮಾ ಕಥಾ ದಿವ್ಯಾ ಕೋಟಿಯಜ್ಞಫಲಪ್ರದಾ ॥ ೫೩

ಏವಂ ಕೃತ್ವಾ ವ್ರತವಿಧಿಮುದ್ಯಾಪನಮಥಾಚರೇತ್ ।
ಜನ್ಮಾಷ್ಟಮೀವ್ರತಮಿವ ಕರ್ತವ್ಯಂ ಫಲಕಾಂಕ್ಷಿಭಿಃ ॥ ೫೪

ಅಕಿಂಚನೇಷು ಭಕ್ತೇಷು ಪ್ರಾಯೋ ನೋದ್ಯಾಪನಾಗ್ರಹಃ ।
ಶ್ರವಣೇನೈವ ಪೂತಾಸ್ತೇ ನಿಷ್ಕಾಮಾ ವೈಷ್ಣವಾ ಯತಃ ॥ ೫೫

---

ಋಜುತ್ವ, ವಿನಯ, ಔದಾರ್ಯ—ಈ ಗುಣಗಳನ್ನು ಪಾಲಿಸಬೇಕು. ದರಿದ್ರ, ಕ್ಷಯರೋಗಿ, ಸದಾ ಯಾವುದಾದರೊಂದು ರೋಗದಿಂದ ಬಳಲತಕ್ಕವನು, ಭಾಗ್ಯಹೀನ, ಪಾಪಿ, ಸಂತಾನವಿಲ್ಲದವನು, ಮೋಕ್ಷಾಪೇಕ್ಷಿ—ಇಷ್ಟು ಜನರು ಅವಶ್ಯವಾಗಿ ಈ ಕಥಾಶ್ರವಣವನ್ನು ಮಾಡಬೇಕು (೫೦–೫೧). ಅಲ್ಲದೆ (ವಯಸ್ಸಾದರೂ) ಋತುಮತಿಯಾಗದೆ ಋತುದೋಷವಿರತಕ್ಕವಳು, ಒಂದೇ ಮಗುವನ್ನು ಹಡೆದ ಸ್ತ್ರೀ, ಬಂಜೆ, ಸತ್ತಮಕ್ಕಳನ್ನು ಹಡೆಯುತಕ್ಕವಳು, ಗರ್ಭಸ್ರಾವವಾಗತಕ್ಕವಳು—ಇಂಥವರು ಪ್ರಯತ್ನಪೂರ್ವಕವಾಗಿ ಭಾಗವತವನ್ನು ಕೇಳಬೇಕು (೫೨). ವಿಧಿಪೂರ್ವಕವಾಗಿ ಇದರ ಶ್ರವಣಮಾಡಿದರೆ ಅಕ್ಷಯವಾದ ಫಲವು ದೊರಕುತ್ತದೆ. ಅತ್ಯುತ್ತಮವಾದ ಈ ದಿವ್ಯಕಥೆಯು ಕೋಟಿಯಜ್ಞಗಳ ಫಲವನ್ನೀಯುತ್ತದೆ. ಹೀಗೆ ವ್ರತವಿಧಿಯನ್ನು ಪಾಲಿಸಿ ಕೊನೆಯಲ್ಲಿ ಉದ್ಯಾಪನವನ್ನು ಫಲಾರ್ಥಿಗಳು ಮಾಡತಕ್ಕದ್ದು ಜನ್ಮಾಷ್ಟಮೀ ವ್ರತದಂತೆ ಇದನ್ನು ಆಚರಿಸಬೇಕು (೫೩–೫೪). ಭಕ್ತಜನರು ಬಡವರಾಗಿದ್ದರೆ ಉದ್ಯಾಪನೆಯನ್ನು ಮಾಡಲೇಬೇಕೆಂಬ ನಿಯಮವಿಲ್ಲ. ಕೇವಲ ಶ್ರವಣದಿಂದಲೇ ಅವರು ಪವಿತ್ರರಾಗಿ ಬಿಡುತ್ತಾರೆ. ಎಷ್ಟಾದರೂ ವಿಷ್ಣುಭಕ್ತರು ನಿಷ್ಕಾಮರಾಗಿರುತ್ತಾರಲ್ಲವೆ? ಹೀಗೆ

ಏವಂ ನಗಾಹಯಜ್ಞೇಽಸ್ಮಿನ್ ಸಮಾಪ್ತೇ ಶ್ರೋತೃಭಿಸ್ತದಾ ।
ಪುಸ್ತಕಸ್ಯ ಚ ವಕ್ತುಶ್ಚ ಪೂಜಾ ಕಾರ್ಯಾತಿಭಕ್ತಿತಃ ॥ ೫೬

ಪ್ರಸಾದತುಲಸೀಮಾಲಾ ಶ್ರೋತೃಭ್ಯಶ್ಚಾಥ ದೀಯತಾಮ್ ।
ಮೃದಂಗತಾಲಲಲಿತಂ ಕರ್ತವ್ಯಂ ಕೀರ್ತನಂ ತತಃ ॥ ೫೭

ಜಯಶಬ್ದಂ ನಮಃಶಬ್ದಂ ಶಂಖಶಬ್ದಂ ಚ ಕಾರಯೇತ್ ।
ವಿಪ್ರೇಭ್ಯೋ ಯಾಚಕೇಭ್ಯಶ್ಚ ವಿತ್ತಮನ್ನಂ ಚ ದೀಯತಾಮ್ ॥ ೫೮

ವಿರಕ್ತಶ್ಚೇದ್ಭವೇಚ್ಛ್ರೋತಾ ಗೀತಾ ವಾಚ್ಯಾ ಪರೇಽಹನಿ ।
ಗೃಹಸ್ಥಶ್ಚೇತ್ತದಾ ಹೋಮಃ ಕರ್ತವ್ಯಃ ಕರ್ಮಶಾಂತಯೇ ॥ ೫೯

ಪ್ರತಿಶ್ಲೋಕಂ ತು ಜುಹುಯಾದ್ವಿಧಿನಾ ದಶಮಸ್ಯ ಚ ।
ಪಾಯಸಂ ಮಧು ಸರ್ಪಿಶ್ಚ ತಿಲಾನ್ನಾದಿಕಸಂಯುತಮ್ ॥ ೬೦

ಅಥವಾ ಹವನಂ ಕುರ್ಯಾದ್ಗಾಯತ್ರ್ಯಾ ಸುಸಮಾಹಿತಃ ।
ತನ್ಮಯತ್ವಾತ್ಪುರಾಣಸ್ಯ ಪರಮಸ್ಯ ಚ ತತ್ತ್ವತಃ ॥ ೬೧

---

ಸಪ್ತಾಹಯಜ್ಞವು ಸಮಾಪ್ತವಾದಮೇಲೆ, ಶ್ರೋತೃಗಳು ಭಾಗವತ ಪುಸ್ತಕವನ್ನೂ ಪ್ರವಚನಕರ್ತೃವನ್ನೂ ದೃಢಭಕ್ತಿಯಿಂದ ಪೂಜಿಸಬೇಕು (೫೫–೫೬). ಅನಂತರ ಬಂದಿರುವ ಶ್ರೋತೃಗಳಿಗೆ ಪ್ರಸಾದರೂಪವಾಗಿ ತುಲಸೀಮಾಲೆಗಳನ್ನು ಕೊಡ ತಕ್ಕದ್ದು. ಆಮೇಲೆ ತಾಳಮೃದಂಗಗಳ ಸಹಿತವಾಗಿ ಹರಿಕೀರ್ತನೆ ಮಾಡತಕ್ಕದ್ದು. ಜಯ ಜಯ! ನಮೋ ನಮಃ—ಎಂದು ಘೋಷಿಸುತ್ತ ಶಂಖವನ್ನೂದಬೇಕು. ವಿಪ್ರರಿಗೂ ಯಾಚಕರಿಗೂ ಧನವನ್ನಿತ್ತು ಅನ್ನದಾನ ಮಾಡಬೇಕು (೫೭–೫೮). ಶ್ರೋತೃವಾದ ಕರ್ತನು ವೈರಾಗ್ಯಮಾರ್ಗದಲ್ಲಿದ್ದರೆ ಮಾರನೆಯದಿನ ಭಗವದ್ಗೀತೆ ಯನ್ನು ಪಾರಾಯಣಮಾಡಬೇಕು. ಗೃಹಸ್ಥನಾಗಿದ್ದರೆ ಕರ್ಮಶಾಂತಿಗಾಗಿ ಹೋಮವೊಂದನ್ನು ಮಾಡಬೇಕಾಗುತ್ತದೆ. ದಶಮಸ್ಕಂಧದ ಪ್ರತಿಯೊಂದು ಶ್ಲೋಕಕ್ಕೆ ಒಂದೊಂದು ಸಲದಂತೆ ಪಾಯಸ, ಜೇನುತುಪ್ಪ, ಘೃತ, ತಿಲ, ಅನ್ನಾದಿ ಗಳಿಂದ ಸಹಿತವಾಗಿ ವಿಧಿಪೂರ್ವಕವಾಗಿ ಅಗ್ನಿಗೆ ಆಹುತಿಯನ್ನು ಕೊಡಬೇಕು (೫೯–೬೦). ಅಥವಾ ಸಮಾಹಿತಚಿತ್ತನಾಗಿ ಗಾಯತ್ರೀ ಮಂತ್ರ ಪೂರ್ವಕವಾದ

ಹೋಮಾಶಕ್ತೌ ಬುಧೋ ಹೌಮ್ಯಂ ದದ್ಯಾತ್ತತ್ಫಲಸಿದ್ಧಯೇ ।
ನಾನಾಚ್ಛಿದ್ರನಿರೋಧಾರ್ಥಂ ನ್ಯೂನತಾಧಿಕತಾನಯೋಃ ॥ ೬೨

ದೋಷಯೋಃ ಪ್ರಶಮಾರ್ಥಂ ಚ ಪಠೇನ್ನಾಮಸಹಸ್ರಕಮ್ ।
ತೇನ ಸ್ಯಾತ್ಸಫಲಂ ಸರ್ವಂ ನಾಸ್ತ್ಯಸ್ಮಾದಧಿಕಂ ಯತಃ ॥ ೬೩

ದ್ವಾದಶ ಬ್ರಾಹ್ಮಣಾನ್ ಪಶ್ಚಾದ್ಭೋಜಯೇನ್ಮಧುಪಾಯಸೈಃ ।
ದದ್ಯಾತ್ಸುವರ್ಣಂ ಧೇನುಂ ಚ ವ್ರತಪೂರ್ಣತ್ವಹೇತವೇ ॥ ೬೪

ಶಕ್ತೌ ಪಲತ್ರಯಮಿತಂ ಸ್ವರ್ಣಸಿಂಹಂ ವಿಧಾಯ ಚ ।
ತತ್ರಾಸ್ಯ ಪುಸ್ತಕಂ ಸ್ಥಾಪ್ಯಂ ಲಿಖಿತಂ ಲಲಿತಾಕ್ಷರಮ್ ॥ ೬೫

ಸಂಪೂಜ್ಯಾವಾಹನಾದ್ಯೈಸ್ತದುಪಚಾರೈಃ ಸದಕ್ಷಿಣಮ್ ।
ವಸ್ತ್ರಭೂಷಣಗಂಧಾದ್ಯೈಃ ಪೂಜಿತಾಯ ಯತಾತ್ಮನೇ ॥ ೬೬

---

ಆಹುತಿಗಳನ್ನರ್ಪಿಸಬಹುದು. ಏಕೆಂದರೆ, ಶ್ರೀಮದ್ಭಾಗವತಪುರಾಣವು ತಾತ್ತ್ವಿಕವಾಗಿ ಗಾಯತ್ರೀಮಯವಾಗಿದೆ. ಹೋಮವನ್ನು ಮಾಡಲು ಅಶಕ್ತನಾದರೆ, ಆ ಫಲದ ಸಿದ್ಧಿಗಾಗಿ ಹೋಮಕ್ಕೆ ಸಮವಾದಷ್ಟು ದಾನವನ್ನು ಮಾಡತಕ್ಕದ್ದು. ಶ್ರವಣವಿಧಿಯಲ್ಲಿ ಸಂಭವಿಸಬಹುದಾದ ಲೋಪದೋಷಗಳ ಪರಿಹಾರಕ್ಕಾಗಿ ಈ ಹೋಮವಿಧಿಯನ್ನು ಹೇಳಲಾಗಿದೆ. ಈ ವಿಧಿಯ ಅನುಷ್ಠಾನದಲ್ಲಿಯೂ ನ್ಯೂನತೆ ಅಧಿಕತೆಗಳು ಬರಬಹುದು. ಇವುಗಳ ಶಮನಕ್ಕಾಗಿ ವಿಷ್ಣುನಾಮಸಹಸ್ರವನ್ನು ಪಠಿಸಬೇಕು. ಇದರಿಂದ ಎಲ್ಲ ಆಚರಣೆಯೂ ಸಫಲವಾಗುತ್ತದೆ. ನಾಮಸಹಸ್ರ ಪಾಠಕ್ಕಿಂತ ಉತ್ತಮವಾದ ಇನ್ನೊಂದು ಉಪಾಯವಿಲ್ಲ (೬೧-೬೩). ಆಮೇಲೆ ಮಧುಪಾಯಸಾದಿಗಳನ್ನು ಬಡಿಸಿ ಹನ್ನೆರಡು ಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ವ್ರತದ ಪೂರ್ಣತೆಗಾಗಿ ಸುವರ್ಣದಾನ ಗೋದಾನಗಳನ್ನು ಮಾಡತಕ್ಕದ್ದು. ಕರ್ತನಿಗೆ ಸಾಮರ್ಥ್ಯವಿದ್ದ ಪಕ್ಷದಲ್ಲಿ [1]ಮೂರುಪಲ ತೂಕದ ಸುವರ್ಣಸಿಂಹವನ್ನು ಮಾಡಿಸಿ, ಅದರಲ್ಲಿ ಸುಂದರಾಕ್ಷರಗಳಿಂದ ಬರೆದ ಭಾಗವತ ಪುಸ್ತಕವನ್ನಿಡಬೇಕು (೬೪–೬೫). ಅದನ್ನು ಆವಾಹನಾದ್ಯುಪಚಾರಗಳಿಂದ ಪೂಜಿಸಿ ದಕ್ಷಿಣೆಯನ್ನಿಡತಕ್ಕದ್ದು. ಜಿತೇಂದ್ರಿಯನಾದ ಆಚಾರ್ಯನನ್ನು ವಸ್ತ್ರ

---

1. 3 ಪಲ = ಸುಮಾರು 125 ಗ್ರಾಂ. ಸಿಂಹವೆಂದರೆ ಸಿಂಹಪೀಠವೆಂದೂ ಅರ್ಥವಿರಬಹುದು.

ಆಚಾರ್ಯಾಯ ಸುಧೀರ್ದತ್ತ್ವಾ ಮುಕ್ತಃ ಸ್ಯಾದ್ಭವಬಂಧನೈಃ ।
ಏವಂ ಕೃತೇ ವಿಧಾನೇ ಚ ಸರ್ವಪಾಪನಿವಾರಣೇ ॥ ೬೭

ಫಲದಂ ಸ್ಯಾತ್ಪುರಾಣಂ ತು ಶ್ರೀಮದ್ಭಾಗವತಂ ಶುಭಮ್ ।
ಧರ್ಮಕಾಮಾರ್ಥಮೋಕ್ಷಾಣಾಂ ಸಾಧನಂ ಸ್ಯಾನ್ನ ಸಂಶಯಃ ॥ ೬೮

ಕುಮಾರಾ ಊಚುಃ—

ಇತಿ ತೇ ಕಥಿತಂ ಸರ್ವಂ ಕಿಂ ಭೂಯಃ ಶ್ರೋತುಮಿಚ್ಛಸಿ ।
ಶ್ರೀಮದ್ಭಾಗವತೇನೈವ ಭುಕ್ತಿಮುಕ್ತೀ ಕರೇ ಸ್ಥಿತೇ ॥ ೬೯

ಸೂತ ಉವಾಚ—

ಇತ್ಯುಕ್ತ್ವಾ ತೇ ಮಹಾತ್ಮಾನಃ ಪ್ರೋಚುರ್ಭಾಗವತೀಂ ಕಥಾಮ್ ।
ಸರ್ವಪಾಪಹರಾಂ ಪುಣ್ಯಾಂ ಭುಕ್ತಿಮುಕ್ತಿಪ್ರದಾಯಿನೀಮ್ ॥ ೭೦

ಶೃಣ್ವತಾಂ ಸರ್ವಭೂತಾನಾಂ ಸಪ್ತಾಹಂ ನಿಯತಾತ್ಮನಾಮ್ ।
ಯಥಾವಿಧಿ ತತೋ ದೇವಂ ತುಷ್ಟುವುಃ ಪುರುಷೋತ್ತಮಮ್ ॥ ೭೧

---

ಭೂಷಣ ಗಂಧಾದಿಗಳಿಂದ ಪೂಜಿಸಿ ಸ್ವರ್ಣಸಿಂಹಸಹಿತವಾದ ಪುಸ್ತಕವನ್ನು ಆತನಿಗೆ ದಾನಮಾಡಬೇಕು. ಹೀಗೆ ಮಾಡಿದರೆ ಭವಬಂಧನಗಳಿಂದ ಕರ್ತನು ವಿಮೋಚನೆಯನ್ನು ಪಡೆಯುತ್ತಾನೆ. ಈ ರೀತಿ ಮಾಡಿದಾಗ ಸಕಲಪಾಪಗಳೂ ನಿವೃತ್ತವಾಗುತ್ತವೆ. ಶುಭಕರವಾದ ಶ್ರೀಮದ್ಭಾಗವತ ಪುರಾಣವು ಫಲಪ್ರದವಾಗುತ್ತದೆ. ಧರ್ಮಾರ್ಥಕಾಮಮೋಕ್ಷಗಳಿಗೆ ಇದು ನಿಶ್ಚಯವಾಗಿಯೂ ಸಾಧನವಾಗುತ್ತದೆ, ಸಂದೇಹವಿಲ್ಲ (೬೬–೬೮). ನಾರದರೆ, ಹೀಗೆ ಸರ್ವವನ್ನೂ ಹೇಳಿದ್ದಾಯಿತು. ಇನ್ನೇನನ್ನು ಕೇಳಲು ಬಯಸುವಿರಿ? ಶ್ರೀಮದ್ಭಾಗವತದಿಂದಲೇ ಭುಕ್ತಿಮುಕ್ತಿಗಳೆರಡೂ ಕೈಗೆ ಸಿಗುತ್ತವೆ. ಈ ಪ್ರಕಾರ ಹೇಳಿ ಮಹಾತ್ಮರಾದ ಕುಮಾರರು ಸರ್ವಪಾಪಹಾರಿಯೂ ಪುಣ್ಯಕರವೂ ಭುಕ್ತಿಮುಕ್ತಿಪ್ರದವೂ ಆದ ಭಾಗವತ ಕಥೆಯನ್ನು ಪ್ರವಚನಮಾಡಿದರು (೬೯–೭೦). ಸಕಲಜೀವಿಗಳೂ ಏಕಾಗ್ರತೆಯಿಂದ ಸಪ್ತಾಹದವರೆಗೆ ವಿಧಿವತ್ತಾಗಿ ಅದನ್ನು ಕೇಳಿದರು. ಅನಂತರ ಪುರುಷೋತ್ತಮನಾದ ಶ್ರೀಹರಿಯನ್ನು ಸ್ತೋತ್ರಮಾಡಿದರು. ಸಮಾಪ್ತಿಯಾದಾಗ ಜ್ಞಾನ, ವೈರಾಗ್ಯ ಭಕ್ತಿಗಳಿಗೆ ವಿಪುಲವಾದ ಪುಷ್ಟಿ ದೊರಕಿತು. ಸರ್ವಮನೋಹರವಾದ ಪರಮ

ತದಂತೇ ಜ್ಞಾನವೈರಾಗ್ಯಭಕ್ತೀನಾಂ ಪುಷ್ಟತಾ ಪರಾ ।
ತಾರುಣ್ಯಂ ಪರಮಂ ಚಾಭೂತ್ಸರ್ವಭೂತಮನೋಹರಮ್ ॥ ೭೨

ನಾರದಶ್ಚ ಕೃತಾರ್ಥೋಽಭೂತ್ಸಿದ್ಧೇ ಸ್ವೀಯೇ ಮನೋರಥೇ ।
ಪುಲಕೀಕೃತಸರ್ವಾಂಗಃ ಪರಮಾನಂದಸಂಭೃತಃ ॥ ೭೩

ಏವಂ ಕಥಾಂ ಸಮಾಕರ್ಣ್ಯ ನಾರದೋ ಭಗವತ್ಪ್ರಿಯಃ ।
ಪ್ರೇಮಗದ್ಗದಯಾ ವಾಚಾ ತಾನುವಾಚ ಕೃತಾಂಜಲಿಃ ॥ ೭೪

ನಾರದ ಉವಾಚ—

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಭವದ್ಭಿಃ ಕರುಣಾಪರೈಃ ।
ಅದ್ಯ ಮೇ ಭಗವಾಂಲ್ಲಬ್ಧಃ ಸರ್ವಪಾಪಹರೋ ಹರಿಃ ॥ ೭೫

ಶ್ರವಣಂ ಸರ್ವಧರ್ಮೇಭ್ಯೋ ವರಂ ಮನ್ಯೇ ತಪೋಧನಾಃ ।
ವೈಕುಂಠಸ್ಥೋ ಯತಃ ಕೃಷ್ಣಃ ಶ್ರವಣಾದಸ್ಯ ಲಭ್ಯತೇ ॥ ೭೬

ಸೂತ ಉವಾಚ—

ಏವಂ ಬ್ರುವತಿ ವೈ ತತ್ರ ನಾರದೇ ವೈಷ್ಣವೋತ್ತಮೇ ।
ಪರಿಭ್ರಮನ್ ಸಮಾಯಾತಃ ಶುಕೋ ಯೋಗೇಶ್ವರಸ್ತದಾ ॥ ೭೭

---

ತಾರುಣ್ಯವು ಲಭಿಸಿತು (೭೧-೭೨). ತಮ್ಮ ಮನೋರಥವು ಸಿದ್ಧಿಸಿತೆಂದು ನಾರದಮುನಿಗಳು ಕೃತಾರ್ಥರಾದರು ಅವರಿಗೆ ರೋಮಾಂಚವುಂಟಾಗಿ ಪರಮಾನಂದವಾಯಿತು. ಈ ರೀತಿಯಲ್ಲಿ ಭಾಗವತಕಥೆಯನ್ನು ಶ್ರವಣಮಾಡಿದ ಭಗವದ್ಭಕ್ತರಾದ ನಾರದರು ಅಂಜಲಿಬದ್ಧರಾಗಿ ಪ್ರೇಮದಿಂದ ಗದ್ಗದಿಸುತ್ತ ಕುಮಾರರನ್ನು ಕುರಿತು ಇಂತೆಂದರು (೭೩-೭೪) : "ತಪೋಧನರೆ, ಕರುಣಾಳುಗಳಾದ ನಿಮ್ಮಿಂದ ನಾನು ಧನ್ಯನಾದೆನು. ಅನುಗೃಹೀತನಾದೆನು. ಸರ್ವಪಾಪಹರನಾದ ಭಗವಾನ್ ಶ್ರೀಹರಿಯು ನನಗೆ ಒಲಿದನು. ಸರ್ವಧರ್ಮಗಳಿಗಿಂತಲೂ ಭಾಗವತಶ್ರವಣವು ಶ್ರೇಷ್ಠವೆಂದು ನಾನು ತಿಳಿಯುತ್ತೇನೆ. ವೈಕುಂಠನಿವಾಸಿಯಾಗಿರುವ ಶ್ರೀಕೃಷ್ಣನು ಈ ಶ್ರವಣದಿಂದ ಲಬ್ಧನಾಗುತ್ತಾನೆ" ಎಂದರು (೭೫-೭೬). ಅವರು ಹಾಗೆ ಹೇಳುತ್ತಿರುವಾಗ ಯೋಗೇಶ್ವರರಾದ ಶುಕಮುನಿಗಳು ತಿರುಗಾಡುತ್ತ

ತತ್ರಾಯಯೌ ಷೋಡಶವಾರ್ಷಿಕಸ್ತದಾ
ವ್ಯಾಸಾತ್ಮಜೋ ಜ್ಞಾನಮಹಾಬ್ಧಿಚಂದ್ರಮಾಃ ।
ಕಥಾವಸಾನೇ ನಿಜಲಾಭಪೂರ್ಣಃ
ಪ್ರೇಮ್ಣಾ ಪಠನ್ ಭಾಗವತಂ ಶನೈಃ ಶನೈಃ ॥ ೭೮

ದೃಷ್ಟ್ವಾ ಸದಸ್ಯಾಃ ಪರಮೋರುತೇಜಸಂ
ಸದ್ಯಃ ಸಮುತ್ಥಾಯ ದದುರ್ಮಹಾಸನಮ್ ।
ಪ್ರೀತ್ಯಾ ಸುರರ್ಷಿಸ್ತಮಪೂಜಯತ್ಸುಖಂ
ಸ್ಥಿತೋಽವದತ್ಸಂಶೃಣುತಾಮಲಾಂ ಗಿರಮ್ ॥ ೭೯

ಶ್ರೀಶುಕ ಉವಾಚ—

ನಿಗಮಕಲ್ಪತರೋರ್ಗಲಿತಂ ಫಲಂ
ಶುಕಮುಖಾದಮೃತದ್ರವಸಂಯುತಮ್ ।
ಪಿಬತ ಭಾಗವತಂ ರಸಮಾಲಯಂ
ಮುಹುರಹೋ ರಸಿಕಾ ಭುವಿ ಭಾವುಕಾಃ ॥ ೮೦

---

ಅಲ್ಲಿಗೆ ಬಂದರು. ನೋಡುವುದಕ್ಕೆ ಹದಿನಾರು ವರ್ಷ ವಯಸ್ಸಿನಂತೆ ಕಾಣ ತಕ್ಕವರೂ ಜ್ಞಾನಸಾಗರಕ್ಕೆ ಚಂದ್ರನಂತೆ ಇರತಕ್ಕವರೂ ನಿಜಸುಖಲಾಭದಿಂದ ಪೂರ್ಣರೂ ವ್ಯಾಸಪುತ್ರರೂ ಆದ ಶುಕಮಹರ್ಷಿಗಳು ಪ್ರೇಮದಿಂದ ಭಾಗವತವನ್ನು ಪಠಿಸುತ್ತ ಅಲ್ಲಿಗೆ ಆಗಮಿಸಿದರು (೭೭–೭೮). ಮಹಾತೇಜಸ್ವಿಗಳಾದ ಅವರನ್ನು ಕಂಡೊಡನೆ ಸದಸ್ಯರೆಲ್ಲರೂ ಎದ್ದು ನಿಂತು ಉತ್ತಮವಾದ ಪೀಠವನ್ನು ಅವರಿಗೆ ನೀಡಿದರು. ದೇವರ್ಷಿಗಳಾದ ನಾರದರು ಶುಕಮುನಿಗಳನ್ನು ಆದರದಿಂದ ಸತ್ಕರಿಸಿದರು. ಶುಕಮುನಿಗಳು ಅವರೆಲ್ಲರೂ ಕೇಳುವಂತೆ ನಿರ್ಮಲವಾದ ಈ ವಾಣಿಯನ್ನು ಉದ್ಗರಿಸಿದರು (೭೯). "ಈ ಭಾಗವತವು ವೇದವೆಂಬ ಕಲ್ಪವೃಕ್ಷದ ಹಣ್ಣು. ಶುಕಮುಖದಿಂದ (ಶುಕಮುನಿಗಳು ಹೇಳಿದ್ದರಿಂದ—ಗಿಣಿಯು ಬಾಯಿಂದ ಕುಟುಕಿದುದರಿಂದ) ಭೂಮಿಗೆ ಉದುರಿದೆಯಾದ್ದರಿಂದ ಅಮೃತದ್ರವಸಹಿತವಾಗಿದೆ. ಅಹೋ! ರಸಜ್ಞರೆ, ಭಕ್ತಜನರೆ, ರಸಮಯವಾದ ಈ ಹಣ್ಣನ್ನು ಮುಕ್ತಿಯಾಗುವ

ಧರ್ಮಃ ಪ್ರೋಜ್ಝಿತಕೈತವೋಽತ್ರ ಪರಮೋ ನಿರ್ಮತ್ಸರಾಣಾಂ ಸತಾಂ
ವೇದ್ಯಂ ವಾಸ್ತವಮತ್ರ ವಸ್ತು ಶಿವದಂ ತಾಪತ್ರಯೋನ್ಮೂಲನಮ್ ।
ಶ್ರೀಮದ್ಭಾಗವತೇ ಮಹಾಮುನಿಕೃತೇ ಕಿಂ ವಾ ಪರೈರೀಶ್ವರಃ
ಸದ್ಯೋ ಹೃದ್ಯವರುಧ್ಯತೇಽತ್ರ ಕೃತಿಭಿಃ ಶುಶ್ರೂಷುಭಿಸ್ತತ್ಕ್ಷಣಾತ್ ॥ ೮೧

ಶ್ರೀಮದ್ಭಾಗವತಂ ಪುರಾಣತಿಲಕಂ ಯದ್ವೈಷ್ಣವಾನಾಂ ಧನಂ
ಯಸ್ಮಿನ್ ಪಾರಮಹಂಸ್ಯಮೇವಮಮಲಂ ಜ್ಞಾನಂ ಪರಂ ಗೀಯತೇ ।
ಯತ್ರ ಜ್ಞಾನವಿರಾಗಭಕ್ತಿಸಹಿತಂ ನೈಷ್ಕರ್ಮ್ಯಮಾವಿಷ್ಕೃತಂ
ತಚ್ಛೃಣ್ವನ್ ಪ್ರಪಠನ್ ವಿಚಾರಣಪರೋ ಭಕ್ತ್ಯಾ ವಿಮುಚ್ಯೇನ್ನರಃ ॥ ೮೨

---

ವರೆಗೆ–ತೃಪ್ತಿಯಾಗುವವರೆಗೆ ಮತ್ತೆ ಮತ್ತೆ ಸೇವಿಸಿರಿ (೮೦). ಇದರಲ್ಲಿ ಅಸೂಯಾ ರಹಿತರಾದ ಸಜ್ಜನರಿಗಾಗಿ ಫಲಾಭಿಸಂಧಿಯೆಂಬ ಕಪಟವಿಲ್ಲದ ಪರಮೋನ್ನತವಾದ ಭಕ್ತಿಧರ್ಮವು ನಿರೂಪಿತವಾಗಿದೆ. ಪರಮಾರ್ಥವಾದ ತತ್ತ್ವವೇ ಇಲ್ಲಿ ತಿಳಿಯ ಬೇಕಾದ ವಸ್ತು ಇದು ಪರಮಸುಖವನ್ನು ಕೊಡತಕ್ಕದ್ದೂ ತಾಪತ್ರಯ ವಿನಾಶಕವೂ ಆಗಿದೆ. ಮಹಾಮುನಿಯಾದ [1]ಶ್ರೀಮನ್ನಾರಾಯಣನು ವಿರಚಿಸಿದ ಶ್ರೀಮದ್ಭಾಗವತವಿರುವಾಗ ಇತರ ಗ್ರಂಥಗಳಿಂದ ಆಗಬೇಕಾದ್ದೇನಿದೆ? ಇದನ್ನು ಶ್ರವಣಮಾಡತಕ್ಕ ಧನ್ಯರ ಹೃದಯದಲ್ಲಿ ಈಶ್ವರನು ಒಡನೆಯೇ ಸ್ಥಿರವಾಗಿ ನಿಂತು ಬಿಡುತ್ತಾನೆ (೮೧). ಪುರಾಣಗಳಿಗೆ ತಿಲಕಪ್ರಾಯವಾಗಿರುವ ಶ್ರೀಮದ್ಭಾಗವತವು ವಿಷ್ಣುಭಕ್ತರ ಆಸ್ತಿಯಾಗಿದೆ ಇದರಲ್ಲಿ ಪರಮಹಂಸರಿಗೆ ಗಮ್ಯವಾದ ಪರಮ ನಿರ್ಮಲಜ್ಞಾನವನ್ನು ಪ್ರತಿಪಾದಿಸಲಾಗಿದೆ. ಜ್ಞಾನವೈರಾಗ್ಯಭಕ್ತಿಸಹಿತವಾದ ನೈಷ್ಕರ್ಮ್ಯಸ್ವರೂಪವೆನಿಸಿದ ಬ್ರಹ್ಮಜ್ಞಾನವು ನಿರೂಪಿತವಾಗಿದೆ. ಆದ್ದರಿಂದ

---

1. ಮಹಾಮುನಿಯೆಂದರೆ ಶ್ರೀಮನ್ನಾರಾಯಣನೆಂದು ಶ್ರೀಧರೀಯ ವ್ಯಾಖ್ಯಾನದಲ್ಲಿ ಬರೆದಿದೆ. ವ್ಯಾಸರು ತಮ್ಮನ್ನೇ ಮಹಾಮುನಿಯೆಂದು ಕರೆದುಕೊಳ್ಳಲಾರರೆಂದು ಹೀಗೆ ಅರ್ಥ ಮಾಡಿರಬೇಕು. ವ್ಯಾಸರು ಶುಕಮುನಿಗಳ ಮೂಲಕ ಪ್ರಸಾರ ಮಾಡಿದ್ದರಿಂದ ಹಿಂದಿನ ಶ್ಲೋಕದಲ್ಲಿ 'ಶುಕಮುಖಾತ್' ಎಂದು ಹೇಳಿದ್ದು ಸಂಗತವಾಗುತ್ತದೆ. ಈ ಎರಡು ಶ್ಲೋಕಗಳೂ ಭಾಗವತದ ಆದಿಯಲ್ಲಿ ಬಂದಿವೆ.

ಸ್ವರ್ಗೇ ಸತ್ಯೇ ಚ ಕೈಲಾಸೇ ವೈಕುಂಠೇ ನಾಸ್ತ್ಯಯಂ ರಸಃ ।
ಅತಃ ಪಿಬಂತು ಸದ್ಭಾಗ್ಯಾ ಮಾ ಮಾ ಮುಂಚತ ಕರ್ಹಿಚಿತ್ ॥ ೮೩

ಸೂತ ಉವಾಚ—

ಏವಂ ಬ್ರುವಾಣೇ ಸತಿ ಬಾದರಾಯಣೌ
ಮಧ್ಯೇ ಸಭಾಯಾಂ ಹರಿರಾವಿರಾಸೀತ್ ।
ಪ್ರಹ್ಲಾದಬಲ್ಯುದ್ಧವಫಾಲ್ಗುನಾದಿಭಿ-
ರ್ವೃತಃ ಸುರರ್ಷಿಸ್ತಮಪೂಜಯಚ್ಚ ತಾನ್ ॥ ೮೪

ದೃಷ್ಟ್ವಾ ಪ್ರಸನ್ನಂ ಮಹದಾಸನೇ ಹರಿಂ
ತೇ ಚಕ್ರಿರೇ ಕೀರ್ತನಮಗ್ರತಸ್ತದಾ ।
ಭವೋ ಭವಾನ್ಯಾ ಕಮಲಾಸನಸ್ತು
ತತ್ರಾಗಮತ್ಕೀರ್ತನದರ್ಶನಾಯ ॥ ೮೫

---

ವಿಚಾರಶೀಲನಾದ ಮನುಷ್ಯನು ಈ ಭಾಗವತವನ್ನು ಶ್ರವಣಮಾಡಿದರೆ, ಪಠಿಸಿದರೆ, ಭಕ್ತಿಮಾರ್ಗದಿಂದ ಮೋಕ್ಷವನ್ನು ಪಡೆಯುತ್ತಾನೆ (೮೨). ಎಲೈ ಭಾಗ್ಯವಂತರೆ, ಈ ರಸವು ಸ್ವರ್ಗದಲ್ಲೂ ದೊರೆಯದು, ಸತ್ಯಲೋಕದಲ್ಲಿಯೂ ದೊರೆಯದು. ಇದು ಕೈಲಾಸದಲ್ಲಿಯೂ ಸಿಗುವುದಿಲ್ಲ, ವೈಕುಂಠದಲ್ಲಿಯೂ ಸಿಗುವುದಿಲ್ಲ. (ಭೂಲೋಕದಲ್ಲಿ ನಿಮಗೆ ದೊರಕಿದೆ) ಆದ್ದರಿಂದ ಇದನ್ನು ಕುಡಿಯಿರಿ. ಎಂದೆಂದಿಗೂ ಬಿಡಬೇಡಿರಿ " ಎಂದರು (೮೩). ಬಾದರಾಯಣಪುತ್ರರಾದ ಶುಕಮುನಿಗಳು ಹೀಗೆ ನುಡಿಯುತ್ತಿರಲಾಗಿ ಸಭಾಮಧ್ಯದಲ್ಲಿ ಶ್ರೀಹರಿಯು ಆವಿರ್ಭವಿಸಿದನು. ಪ್ರಹ್ಲಾದ, ಬಲಿ, ಉದ್ಧವ, ಅರ್ಜುನ—ಮೊದಲಾದವರಿಂದ ಪರಿವೃತನಾಗಿದ್ದ ಆತನನ್ನೂ ಪ್ರಹ್ಲಾದನೇ ಮೊದಲಾದವರನ್ನೂ ನಾರದರು ಪೂಜಿಸಿದರು (೮೪). ಉನ್ನತವಾದ ಆಸನದಲ್ಲಿ ಪ್ರಸನ್ನನಾಗಿ ಮಂಡಿಸಿದ್ದ ಶ್ರೀಹರಿಯನ್ನು ನೋಡಿ ಸಭಾಸದರೆಲ್ಲರೂ ಆವನೆದುರಿಗೆ ಕೀರ್ತನೆಯನ್ನು ನಡೆಸಿದರು. ಕೀರ್ತನ ವೈಭವ ವನ್ನು ನೋಡುವುದಕ್ಕಾಗಿ ಪಾರ್ವತೀ ಸಹಿತನಾದ ಶಿವನೂ ಬ್ರಹ್ಮನೂ (ಇತರ

ಪ್ರಹ್ಲಾದಸ್ತಾಲಧಾರೀ ತರಲಗತಿತಯಾ ಚೋದ್ಧವಃ ಕಾಂಸ್ಯಧಾರೀ
ವೀಣಾಧಾರೀ ಸುರರ್ಷಿಃ ಸ್ವರಕುಶಲತಯಾ
ರಾಗಕರ್ತಾರ್ಜುನೋಽಭೂತ್ ।
ಇಂದ್ರೋಽವಾದೀನ್ಮೃದಂಗಂ ಜಯಜಯಸುಕರಾಃ
ಕೀರ್ತನೇ ತೇ ಕುಮಾರಾ
ಯತ್ರಾಗ್ರೇ ಭಾವವಕ್ತಾ ಸರಸರಚನಯಾ
ವ್ಯಾಸಪುತ್ರೋ ಬಭೂವ ॥ ೮೬

ನನರ್ತ ಮಧ್ಯೇ ತ್ರಿಕಮೇವ ತತ್ರ
ಭಕ್ತ್ಯಾದಿಕಾನಾಂ ನಟವತ್ಸುತೇಜಸಾಮ್ ।
ಅಲೌಕಿಕಂ ಕೀರ್ತನಮೇತದೀಕ್ಷ್ಯ
ಹರಿಃ ಪ್ರಸನ್ನೋಽಪಿ ವಚೋಽಬ್ರವೀತ್ತತ್ ॥ ೮೭

ಮತ್ತೋ ವರಂ ಭಾವವೃತಾದ್ ವೃಣುಧ್ವಂ
ಪ್ರೀತಃ ಕಥಾಕೀರ್ತನತೋಽಸ್ಮಿ ಸಾಂಪ್ರತಮ್ ।
ಶ್ರುತ್ವೇತಿ ತದ್ವಾಕ್ಯಮತಿಪ್ರಸನ್ನಾಃ
ಪ್ರೇಮಾರ್ದ್ರಚಿತ್ತಾ ಹರಿಮೂಚಿರೇ ತೇ ॥ ೮೮

---

ದೇವತೆಗಳೂ) ಅಲ್ಲಿಗೆ ಆಗಮಿಸಿದರು (೮೫). ಆ ಕೀರ್ತನಸಮಯದಲ್ಲಿ ಪ್ರಹ್ಲಾದನು ತಾಳವನ್ನೂ ಉದ್ಧವನು ಜಾಗಟೆಯನ್ನೂ ನಾರದರು ವೀಣೆಯನ್ನೂ ನುಡಿಸುತ್ತಿದ್ದರು. ಸ್ವರಕುಶಲನಾದ ಅರ್ಜುನನು ರಾಗಾಲಾಪನೆಯನ್ನು ಮಾಡುತ್ತಿದ್ದನು. ಇಂದ್ರನು ಮೃದಂಗವನ್ನು ಬಾರಿಸುತ್ತಿದ್ದನು. ಸನತ್ಕುಮಾರಾದಿಗಳು 'ಜಯ ಜಯ!' ಎಂದು ಘೋಷಿಸುತ್ತಿದ್ದರು. ಶುಕಮುನಿಗಳು ಸರಸರಚನೆಯಿಂದ ಕೂಡಿದ ಭಕ್ತಿಭಾವಪೂರ್ಣವಾದ ಗೀತವನ್ನು ಹಾಡುತ್ತಿದ್ದರು! (೮೬). ಅವರೆಲ್ಲರ ನಡುವೆ ತೇಜಸ್ವಿಗಳಾದ ಜ್ಞಾನವೈರಾಗ್ಯಭಕ್ತಿಗಳೆಂಬ ಮೂವರು ನರ್ತಿಸುತ್ತಿದ್ದರು! ಅಲೌಕಿಕವಾದ ಆ ದಿವ್ಯಕೀರ್ತನಪ್ರಕಾರವನ್ನು ನೋಡಿ ಶ್ರೀಹರಿಯು ಪ್ರಸನ್ನನಾಗಿ

ನಗಾಹಗಾಥಾಸು ಚ ಸರ್ವಭಕ್ತೈ-
ರೇಭಿಸ್ತ್ವಯಾ ಭಾವ್ಯಮಿತಿ ಪ್ರಯತ್ನಾತ್ ।
ಮನೋರಥೋಽಯಂ ಪರಿಪೂರಣೀಯ-
ಸ್ತಥೇತಿ ಚೋಕ್ತ್ವಾಂತರಧೀಯತಾಚ್ಯುತಃ ॥ ೮೯

ತತೋಽನಮತ್ತಚ್ಚರಣೇಷು ನಾರದ-
ಸ್ತಥಾ ಶುಕಾದೀನಪಿ ತಾಪಸಾಂಶ್ಚ ।
ಅಥ ಪ್ರಹೃಷ್ಟಾಃ ಪರಿನಷ್ಟಮೋಹಾಃ
ಸರ್ವೇ ಯಯುಃ ಪೀತಕಥಾಮೃತಾಸ್ತೇ ॥ ೯೦

ಭಕ್ತಿಃ ಸುತಾಭ್ಯಾಂ ಸಹ ರಕ್ಷಿತಾ ಸಾ
ಶಾಸ್ತ್ರೇ ಸ್ವಕೀಯೇಽಪಿ ತದಾ ಶುಕೇನ ।
ಅತೋ ಹರಿರ್ಭಾಗವತಸ್ಯ ಸೇವನಾ-
ಚ್ಚಿತ್ತಂ ಸಮಾಯಾತಿ ಹಿ ವೈಷ್ಣವಾನಾಮ್ ॥ ೯೧

---

" ನಿಮ್ಮ ಭಕ್ತಿಭಾವದಿಂದ ಸಂಭವಿಸಿದ ಭಾಗವತಕಥಾಕೀರ್ತನದಿಂದ ಸಂಪ್ರೀತನಾಗಿದ್ದೇನೆ. ಬೇಕಾದ ವರವನ್ನು ಕೇಳಿಕೊಳ್ಳಿರಿ " ಎಂದನು. ಆಗ ಪ್ರೇಮಾರ್ದ್ರಚಿತ್ತರಾದ ನಾರದಾದಿಗಳು " ಭಾಗವತದ ಸಪ್ತಾಹ ಕಥಾಪ್ರವಚನವಾದೆಡೆಗಳಲ್ಲಿ ಈ ನಿನ್ನ ಸರ್ವಭಕ್ತರೊಡನೆ ನೀನು ಉಪಸ್ಥಿತನಾಗಿರಬೇಕು. ನಮ್ಮ ಈ ಮನೋರಥವನ್ನು ನೀನು ನಡೆಸಿಕೊಡಬೇಕು " ಎಂದು ಕೇಳಿಕೊಂಡರು. ಅದಕ್ಕೆ ಅಚ್ಯುತನು ' ತಥಾಸ್ತು ' ಎಂದು ನುಡಿದು ಅಂತರ್ಧಾನಹೊಂದಿದನು (೮೭–೮೯). ಅನಂತರ ನಾರದರು ಶುಕಮಹರ್ಷಿಗಳೇ ಮೊದಲಾದ ತಪಸ್ವಿಗಳ ಚರಣಗಳಿಗೆ ಅಭಿವಂದಿಸಿದರು. ಕಥಾಮೃತವನ್ನು ಪಾನಮಾಡಿ ಅಜ್ಞಾನವನ್ನು ಪರಿಹರಿಸಿಕೊಂಡ ಸದಸ್ಯರೇ ಮೊದಲಾದವರೆಲ್ಲರೂ ಸಂತೋಷಪಡುತ್ತ ತಮ್ಮ ಸ್ಥಳಗಳಿಗೆ ತೆರಳಿದರು (೯೦). ಭಕ್ತಿಯು ತನ್ನಿಬ್ಬರು ಪುತ್ರರೊಡನೆ ತನಗೆ ಬಂದಿದ್ದ ಕಷ್ಟದಿಂದ ಪಾರಾದಳು. ಶುಕಮುನಿಗಳು ತಮ್ಮ ಭಾಗವತಶಾಸ್ತ್ರದಲ್ಲಿ ಅವಳಿಗೆ ರಕ್ಷಣೆಯನ್ನು ನೀಡಿದರು. ಆದ್ದರಿಂದಲೇ ಭಾಗವತದ ಸೇವನೆಯಿಂದ ಶ್ರೀಹರಿಯು ವಿಷ್ಣುಭಕ್ತರ

ದಾರಿದ್ರ್ಯದುಃಖಜ್ವರದಾಹಿತಾನಾಂ
ಮಾಯಾಪಿಶಾಚೀಪರಿಮರ್ದಿತಾನಾಮ್ ।
ಸಂಸಾರಸಿಂಧೌ ಪರಿಪಾತಿತಾನಾಂ
ಕ್ಷೇಮಾಯ ವೈ ಭಾಗವತಂ ಪ್ರಗರ್ಜತಿ ॥ ೯೨

ಶೌನಕ ಉವಾಚ—

ಶುಕೇನೋಕ್ತಂ ಕದಾ ರಾಜ್ಞೇ ಗೋಕರ್ಣೇನ ಕದಾ ಪುನಃ ।
ಸುರರ್ಷಯೇ ಕದಾ ಬ್ರಾಹ್ಮೈಶ್ಛಿಂಧಿ ಮೇ ಸಂಶಯಂ ತ್ವಿಮಮ್ ॥ ೯೩

ಸೂತ ಉವಾಚ—

ಆಕೃಷ್ಣನಿರ್ಗಮಾತ್ತ್ರಿಂಶದ್ವರ್ಷಾಧಿಕಗತೇ ಕಲೌ ।
ನವಮೀತೋ ನಭಸ್ಯೇ ಚ ಕಥಾರಂಭಂ ಶುಕೋಽಕರೋತ್ ॥ ೯೪

ಪರೀಕ್ಷಿಚ್ಛ್ರವಣಾಂತೇ ಚ ಕಲೌ ವರ್ಷಶತದ್ವಯೇ ।
ಶುದ್ಧೇ ಶುಚೌ ನವಮ್ಯಾಂ ಚ ಧೇನುಜೋಽಕಥಯತ್ಕಥಾಮ್ ॥ ೯೫

---

ಹೃದಯದಲ್ಲಿ ಬಂದು ನೆಲೆಸುವನು (೯೧). ದಾರಿದ್ರ್ಯವೆಂಬ ದುಃಖಜ್ವರದಿಂದ ಬಳಲತಕ್ಕವರಿಗೂ ಮಾಯಾಪಿಶಾಚಿಯ ಹೊಡೆತಕ್ಕೆ ಸಿಕ್ಕಿದವರಿಗೂ ಸಂಸಾರ ಸಾಗರದಲ್ಲಿ ಬಿದ್ದುಹೋದವರಿಗೂ ಕ್ಷೇಮವನ್ನುಂಟುಮಾಡುವುದಾಗಿ ಭಾಗವತವು ಗರ್ಜಿಸುತ್ತಿದೆ! (೯೨). ಈ ಎಲ್ಲ ವೃತ್ತಾಂತವನ್ನೂ ಸೂತರು ಹೇಳಿದಾಗ ಶೌನಕರು ಅವರನ್ನು ಕುರಿತು "ಸೂತಪೌರಾಣಿಕರೆ, ಶುಕಮುನಿಗಳು ಪರೀಕ್ಷಿತ ರಾಜನಿಗೆ ಭಾಗವತವನ್ನು ಹೇಳಿದ್ದು ಯಾವಾಗ? ಗೋಕರ್ಣನು ಯಾವಾಗ ಇದರ ಪ್ರವಚನವನ್ನು ಮಾಡಿದನು? ಬ್ರಹ್ಮಪುತ್ರರಾದ ಕುಮಾರರು ನಾರದ ಮುನಿಗಳಿಗೆ ಹೇಳಿದ್ದು ಯಾವ ಕಾಲದಲ್ಲಿ? ನನ್ನ ಈ ಸಂದೇಹವನ್ನು ಪರಿಹರಿಸಿರಿ" ಎಂದು ಕೇಳಿದರು (೯೩). ಆಗ ಸೂತರು ಇಂತೆಂದರು : ಶ್ರೀಕೃಷ್ಣನು ಸ್ವಧಾಮಕ್ಕೆ ನಿರ್ಗಮಿಸಿದಮೇಲೆ ಮೂವತ್ತು ವರ್ಷಗಳಿಗಿಂತ ಸ್ವಲ್ಪ ಅಧಿಕಕಾಲವು ಕಳೆದಿತ್ತು. ಆಗ ಕಲಿಯುಗದಲ್ಲಿ ಭಾದ್ರಪದಮಾಸದ (ಶುದ್ಧ) ನವಮಿಯಿಂದ ಶುಕಮುನಿಗಳು ಭಾಗವತಕಥಾರಂಭವನ್ನು ಮಾಡಿದರು (೯೪). ಪರೀಕ್ಷಿತನು ಕಥಾಶ್ರವಣವನ್ನು

ತಸ್ಮಾದಪಿ ಕಲೌ ಪ್ರಾಪ್ತೇ ತ್ರಿಂಶದ್ವರ್ಷಗತೇ ಸತಿ ।
ಊಚುರೂರ್ಜೇ ಸಿತೇ ಪಕ್ಷೇ ನವಮ್ಯಾಂ ಬ್ರಹ್ಮಣಃ ಸುತಾಃ ॥ ೯೭

ಇತ್ಯೇತತ್ತೇ ಸಮಾಖ್ಯಾತಂ ಯತ್ಪೃಷ್ಟೋಽಹಂ ತ್ವಯಾನಘ ।
ಕಲೌ ಭಾಗವತೀ ವಾರ್ತಾ ಭವರೋಗವಿನಾಶಿನೀ ॥ ೯೭

ಕೃಷ್ಣಪ್ರಿಯಂ ಸಕಲಕಲ್ಮಷನಾಶನಂ ಚ
ಮುಕ್ತ್ಯೇಕ ಹೇತುಮಿಹ ಭಕ್ತಿವಿಲಾಸಕಾರಿ ।
ಸಂತಃ ಕಥಾನಕಮಿದಂ ಪಿಬತಾದರೇಣ
ಲೋಕೇ ಹಿ ತೀರ್ಥಪರಿಶೀಲನಸೇವಯಾ ಕಿಮ್ ॥ ೯೮

ಸ್ವಪುರುಷಮಪಿ ವೀಕ್ಷ್ಯ ಪಾಶಹಸ್ತಂ
ವದತಿ ಯಮಃ ಕಿಲ ತಸ್ಯ ಕರ್ಣಮೂಲೇ ।
ಪರಿಹರ ಭಗವತ್ಕಥಾಸು ಮತ್ತಾನ್
ಪ್ರಭುರಹಮನ್ಯನೃಣಾಂ ನ ವೈಷ್ಣವಾನಾಮ್ ೯೯

---

ಮಾಡಿದಮೇಲೆ ಇನ್ನೂರು ವರ್ಷಗಳು ಕಳೆದಾಗ ಕಲಿಯುಗದ ಆಷಾಢ ಶುದ್ಧ ನವಮಿಯಂದ ಗೋಕರ್ಣನು ಈ ಕಥಾಪ್ರವಚನವನ್ನು ನಡೆಸಿದನು (೯೫). ಅನಂತರ ಮೂವತ್ತು ವರ್ಷಗಳು ಕಳೆದಮೇಲೆ ಕಲಿಯುಗದಲ್ಲಿ ಕಾರ್ತಿಕಮಾಸದ ಶುದ್ಧ ನವಮಿಯ ದಿನ ಬ್ರಹ್ಮಪುತ್ರರಾದ ಕುಮಾರರು ನಾರದಾದಿಗಳಿಗೆ ಭಾಗವತ ವನ್ನು ಪ್ರವಚನ ಮಾಡಿದರು (೯೬). ಶೌನಕರೆ, ನೀವು ಕೇಳಿದ ವಿಷಯವೆಲ್ಲ ವನ್ನೂ ತಿಳಿಸಿದ್ದೇನೆ. ಕಲಿಯುಗದಲ್ಲಿ ಈ ಭಾಗವತಶ್ರವಣವು ಭವರೋಗವನ್ನು ಗುಣಪಡಿಸತಕ್ಕದ್ದಾಗಿದೆ (೯೭). ಕಥಾನಕವು ಶ್ರೀಕೃಷ್ಣನಿಗೆ ಪ್ರಿಯವಾದದ್ದು. ಸಕಲಪಾಪಗಳನ್ನೂ ಪರಿಹರಿಸತಕ್ಕದ್ದು. ಮುಕ್ತಿಗೆ ಪ್ರಧಾನವಾದ ಸಾಧನ. ಭಕ್ತಿ ಯನ್ನು ಉಲ್ಲಾಸಗೊಳಿಸುತ್ತದೆ. ಎಲೈ ಸಜ್ಜನರೆ, ಈ ಭಾಗವತಕಥೆಯನ್ನು ಆದರ ದಿಂದ ಪಾನಮಾಡಿರಿ. ಸುಮ್ಮನೆ ತೀರ್ಥಾಟನೆ ಮಾಡುವುದರಿಂದ ಏನಾದೀತು ? (೯೮). ಪಾಶಹಸ್ತನಾಗಿರುವ ತನ್ನ ದೂತನನ್ನು ನೋಡಿ ಯಮಧರ್ಮರಾಜನು

*

ಅಸಾರೇ ಸಂಸಾರೇ ವಿಷಯವಿಷಸಂಗಾಕುಲಾಧಿಯಃ
ಕ್ಷಣಾರ್ಧಂ ಕ್ಷೇಮಾರ್ಥಂ ಪಿಬತ ಶುಕಗಾಥಾತುಲಸುಧಾಮ್ ।
ಕಿಮರ್ಥಂ ವ್ಯರ್ಥಂ ಭೋ ವ್ರಜತ ಕುಪಥೇ ಕುತ್ಸಿತಕಥೇ ।
ಪರೀಕ್ಷಿತ್ಸಾಕ್ಷೀ ಯಚ್ಛ್ರವಣಗತಮುಕ್ತ್ಯುಕ್ತಿಕಥನೇ ॥ ೧೦೦

ರಸಪ್ರವಾಹಸಂಸ್ಥೇನ ಶ್ರೀಶುಕೇನೇರಿತಾ ಕಥಾ ।
ಕಂಠೇ ಸಂಬಧ್ಯತೇ ಯೇನ ಸ ವೈಕುಂಠಪ್ರಭುರ್ಭವೇತ್ ॥ ೧೦೧

ಇತಿ ಚ ಪರಮಗುಹ್ಯಂ ಸರ್ವಸಿದ್ಧಾಂತಸಿದ್ಧಂ
ಸದಪಿ ನಿಗದಿತಂ ತೇ ಶಾಸ್ತ್ರಪುಂಜಂ ವಿಲೋಕ್ಯ ।
ಜಗತಿ ಶುಕಕಥಾತೋ ನಿರ್ಮಲಂ ನಾಸ್ತಿ ಕಿಂಚಿತ್
ಪಿಬ ಪರಸುಖಹೇತೋರ್ದ್ವಾದಶಸ್ಕಂಧಸಾರಮ್ ॥ ೧೦೨

---

ಆತನ ಕಿವಿಯ ಬಳಿಯಲ್ಲಿ " ಭಗವಂತನ ಕಥಾವಾರ್ತೆಯಲ್ಲಿ ಮೈಮರೆತಿರುವ ಜನರ ಗೋಜಿಗೆ ಹೋಗಬೇಡ! ಇತರ ಜನರಿಗೆ ಮಾತ್ರ ನಾನು ಪ್ರಭುವಾಗಿದ್ದೇನೆ, ವಿಷ್ಣುಭಕ್ತರಮೇಲೆ ನನ್ನ ಪ್ರಭಾವ ನಡೆಯುವುದಿಲ್ಲ ! " ಎಂದು ಹೇಳುತ್ತಾನೆ (೯೯). ಅಸಾರವಾದ ಈ ಸಂಸಾರದಲ್ಲಿ ವಿಷಯಸುಖವೆಂಬ ವಿಷದ ಸೇವನೆಯಿಂದ ಪ್ರಕ್ಷೋಭೆಗೊಂಡ ಮನಸ್ಸುಳ್ಳ ಎಲೈ ಜನರೆ, ನಿಮ್ಮ ಹಿತಕ್ಕಾಗಿ ಅರ್ಧಕ್ಷಣ ವಾದರೂ ಶುಕಶಾಸ್ತ್ರಕಥೆಯೆಂಬ ಅಸಾಧಾರಣವಾದ ಅಮೃತವನ್ನು ಕುಡಿಯಿರಿ ! ಕುತ್ಸಿತಕಥೆಯನ್ನೋದುವ ಕುತ್ಸಿತಮಾರ್ಗದಲ್ಲಿ ಏಕೆ ಪರೆದಾಡುತ್ತಿದ್ದೀರಿ ? ಇದರ ಶ್ರವಣದಿಂದ ಎಂತಹ ವಿಮೋಚನೆಯೂ ನೆಮ್ಮದಿಯೂ ದೊರೆಯುತ್ತದೆಯೆಂಬುದಕ್ಕೆ ಪರೀಕ್ಷಿತರಾಜನೇ ಸಾಕ್ಷಿಯಾಗಿದ್ದಾನೆ (೧೦೦). ಭಗವದ್ರಸಪ್ರವಾಹದಲ್ಲಿ ಮುಳುಗಿದ ಶ್ರೀಶುಕಮಹರ್ಷಿಗಳು ಹೇಳಿದ ಈ ಕಥೆಯನ್ನು ಯಾವಾತನು ತನ್ನ ಕಂಠದಲ್ಲಿ ಇರಿಸಿಕೊಳ್ಳುತ್ತಾನೋ ಆತನು ವೈಕುಂಠಧಾಮದ ಪ್ರಭುವಾಗುವನು ! (೧೦೧). ಶೌನಕಮುನಿಗಳೆ, ಸಕಲಶಾಸ್ತ್ರಗಳನ್ನೂ ನಾನು ಪರಿಶೀಲಿಸಿ ಸರ್ವ ಸಿದ್ಧಾಂತಸಾರವೂ ಪರಮರಹಸ್ಯವೂ ಆದ ಈ ವಿಷಯವನ್ನು ನಿಮಗೆ ಹೇಳುತ್ತಿದ್ದೇನೆ. ಈ ಜಗತ್ತಿನಲ್ಲಿ ಭಾಗವತಕಥೆಗಿಂತ ನಿರ್ಮಲವಾದ ಇನ್ನೊಂದು ಶಾಸ್ತ್ರ

ಏತಾಂ ಯೋ ನಿಯತತಯಾ ಶೃಣೋತಿ ಭಕ್ತ್ಯಾ
ಯಶ್ಚೈನಾಂ ಕಥಯತಿ ಶುದ್ಧವೈಷ್ಣವಾಗ್ರೇ ।
ತೌ ಸಮ್ಯಗ್ವಿಧಿಕರಣಾತ್ಫಲಂ ಲಭೇತೇ
ಯಾಥಾರ್ಥ್ಯಾನ್ನ ಹಿ ಭುವನೇ
ಕಿಮಪ್ಯಸಾಧ್ಯಮ್ ॥ ೧೦೩

ಇತಿ ಶ್ರೀಪದ್ಮಪುರಾಣೇ ಉತ್ತರಖಂಡೇ ಶ್ರೀಮದ್ಭಾಗವತ ಮಾಹಾತ್ಮ್ಯೇ
ಶ್ರವಣವಿಧಿಕಥನಂ ನಾಮ ಷಷ್ಠಾಧ್ಯಾಯಃ

## ಸಮಾಪ್ತಮಿದಂ ಶ್ರೀಮದ್ಭಾಗವತ ಮಾಹಾತ್ಮ್ಯಮ್

॥ ಹರಿಃ ಓಂ ತತ್ಸತ್ ॥



---

ವಿಲ್ಲ. ಪರಮಾನಂದರೂಪವಾದ ಮೋಕ್ಷವನ್ನು ಪಡೆಯುವುದಕ್ಕಾಗಿ ದ್ವಾದಶ ಸ್ಕಂಧಗಳ ಸಾರವನ್ನು ಪಾನಮಾಡಿರಿ (೧೦೨). ಈ ಕಥೆಯನ್ನು ಯಾವಾತನು ನಿಯಮಪೂರ್ವಕವಾಗಿ ಭಕ್ತಿಯಿಂದ ಶ್ರವಣಮಾಡುತ್ತಾನೋ ಮತ್ತು ಯಾವಾತನು ವಿಷ್ಣುಭಕ್ತರೆದುರಿಗೆ ಇದನ್ನು ಪ್ರವಚನಮಾಡುತ್ತಾನೋ, ಅವರಿಬ್ಬರೂ ಸಮೀಚೀನ ವಾಗಿ ಉತ್ತಮಕಾರ್ಯವನ್ನು ನಡೆಸಿದ್ದಕ್ಕೆ ಅನುಗುಣವಾದ ಉತ್ತಮಫಲವನ್ನು ಪಡೆಯುತ್ತಾರೆ. ಈ ಲೋಕದಲ್ಲಿ ಯಥಾರ್ಥವಾದ ಅನುಷ್ಠಾನಕ್ಕೆ ಅಸಾಧ್ಯ ವಾದದ್ದು ಯಾವುದೂ ಇಲ್ಲ—ಎಂದು ಸೂತಪೌರಾಣಿಕರು ಹೇಳಿದರು (೧೦೩).

ಇಲ್ಲಿಗೆ ಶ್ರೀಪದ್ಮಪುರಾಣದ ಉತ್ತರಖಂಡದಲ್ಲಿ ಆರನೆಯ ಅಧ್ಯಾಯ

ಶ್ರೀಮದ್ಭಾಗವತದ ಮಾಹಾತ್ಮ್ಯವು ಸಮಾಪ್ತವಾಯಿತು



# ಅನುಬಂಧ

## ೧

### ಸಂಸ್ತುನ್ವತೋಽಬ್ಧಿಪತಿತಾನ್ ಶ್ರಮಣಾನ್ ಋಷೀಂಶ್ಚ ॥

—ಪುಟ ೪೨

ಶ್ರಾಮ್ಯಂತೀತಿ ಶ್ರಮಣಾಃ=ಆಯಾಸಪಡತಕ್ಕವರು, ಕ್ಲೇಶಪಡತಕ್ಕವರು—ಎಂದು ಶಬ್ದಾರ್ಥ. ಉಪವಾಸಾದಿಕ್ಲೇಶವನ್ನು ಸಹಿಸುವುದರಿಂದ ತಪಸ್ವಿ ಎಂಬ ಅರ್ಥದಲ್ಲಿ ಈ ಶಬ್ದವು ರೂಢವಾಗಿದೆ. ಬೌದ್ಧಸಂನ್ಯಾಸಿ ಎಂಬ ಅರ್ಥದಲ್ಲಿ ಈ ಶಬ್ದವು ವಿಶೇಷವಾಗಿ ಬಳಕೆಗೆ ಬಂದಿದೆ. ಹಾಗೆಂದು ನಿಯಮವೇನೂ ಇಲ್ಲ. ಪ್ರಕೃತದಲ್ಲಿ ಋಷಿ ಎಂಬ ಪದವೂ ಇರುವುದರಿಂದ ಶ್ರಮಣರೆಂದರೆ ಕಷ್ಟಕ್ಕೆ ಒಳಗಾದವರು—ಎಂಬ ಯೌಗಿಕಾರ್ಥವನ್ನು ಮಾತ್ರ ತೆಗೆದುಕೊಳ್ಳಬೇಕು.

ಈ ವಾಲಖಿಲ್ಯಋಷಿಗಳು ಕ್ರತುವಿನಿಂದ ಕ್ರಿಯೆಯಲ್ಲಿ ಜನಿಸಿದರೆಂದು ಭಾಗವತದಲ್ಲಿಯೂ (೪–೧–೩೯) ಕ್ರತುವಿನಿಂದ ಸಂತತಿಯೆಂಬವಳಲ್ಲಿ ಜನಿಸಿದರೆಂದು ವಿಷ್ಣುಪುರಾಣದಲ್ಲಿಯೂ (೧–೧೦–೧೧) ಹೇಳಿದೆ. ಇವರು ಅರುವತ್ತು ಸಾವಿರಮಂದಿ. ಆಕೃತಿಯಲ್ಲಿ ತುಂಬ ಚಿಕ್ಕವರು. ಇವರ ಶರೀರ 'ಅಂಗುಷ್ಠಪರ್ವಮಾತ್ರ' ವಾಗಿತ್ತು. ಹೆಬ್ಬೆರಳಿನ ತುದಿಯಷ್ಟಿರುವ ಚಿಕ್ಕ ದೇಹ. ವಾಲಖಿಲ್ಯರು ಮಹಾತಪಸ್ವಿಗಳೆಂದೂ ಮಹಿಮಾನ್ವಿತರೆಂದೂ ಪ್ರಸಿದ್ಧಿಯುಂಟು. ಒಮ್ಮೆ ಕಶ್ಯಪಪ್ರಜಾಪತಿಯು ಯಜ್ಞವನ್ನು ಮಾಡಲು ಸಂಕಲ್ಪಿಸಿದಾಗ ಈ ವಾಲಖಿಲ್ಯರು ಸಮಿತ್ತನ್ನು ತರಲು ಹೋಗಿದ್ದರು. ಕಷ್ಟದಿಂದ ಸಮಿತ್ತನ್ನು ತರುವಾಗ, ಗೋವಿನ ಪಾದವು ಮುಳುಗುವಷ್ಟು ನೀರಿದ್ದ ಒಂದು ಸಣ್ಣ ಹಳ್ಳದಲ್ಲಿ ಬಿದ್ದು ಸಿಕ್ಕಿಕೊಂಡರು! 'ಗೋಷ್ಪದೇ ಸಂಪ್ಲುತೋದಕೇ' (ಮಹಾಭಾರತ, ಆದಿ–೩೧) ಆ ಸಮಯದಲ್ಲಿ ವಿಷ್ಣು ಅವರನ್ನು ಉದ್ಧರಿಸಿದನೆಂಬ ಅಂಶವು ಮಹಾಭಾರತದಲ್ಲಿ ಕಂಡುಬರುವುದಿಲ್ಲ. ಅಲ್ಲದೆ ಭಾಗವತದಲ್ಲಿ 'ಅಬ್ಧಿಪತಿತಾನ್' ಎಂದು ಹೇಳಿದ್ದಾರೆ. ಅಬ್ಧಿಯೆಂದರೆ ಸಮುದ್ರ. ವಾಲಖಿಲ್ಯರ ಪಾಲಿಗೆ ಚಿಕ್ಕಹಳ್ಳವೇ ಸಮುದ್ರಸದೃಶವಾಗಿರಬಹುದು. ಆಗ ವಿಷ್ಣು ಅವರನ್ನು ಪಾರುಮಾಡಿದನೆಂಬ ಕಥೆ ಪುರಾಣಾಂತರದಲ್ಲಿ ಬಂದಿರಬೇಕು.

೨

ವಿವಾಹಯಜ್ಞಸುರಾಗ್ರಹೈರಾಸು ನಿವೃತ್ತಿರಿಷ್ಟಾ ||

—ಪುಟ ೪೭

ಗ್ರಾಮ್ಯಸುಖದಲ್ಲಿ ಆಸಕ್ತರಾದ ಗೃಹಸ್ಥರನ್ನು ಈ ಪ್ರಕರಣವು ನಿಂದಿಸುತ್ತಿದೆ. ಮೈಥುನ, ಮಾಂಸಾಹಾರ, ಸುರಾಪಾನ—ಮುಂತಾದವನ್ನು ಶಾಸ್ತ್ರವು ವಿಧಿಸಿದ್ದುಂಟು. ಅಷ್ಟುಮಾತ್ರದಿಂದ ಇವು ಶಾಸ್ತ್ರೋಕ್ತವಾದವುಗಳೆಂದು ಯಥೇಷ್ಟವಾಗಿ ಇವನ್ನು ಸೇವಿಸಬಹುದೆಂದೂ ತಿಳಿಯುವುದು ತಪ್ಪು. ಶಾಸ್ತ್ರವಿಧಿಗಳು ಅಪೂರ್ವವಿಧಿ, ನಿಯಮವಿಧಿ, ಪರಿಸಂಖ್ಯಾವಿಧಿ—ಎಂದು ಮೂರು ಬಗೆಯಾಗಿವೆ. ಯಾವುದು ನಮಗೆ ಗೊತ್ತಿಲ್ಲವೋ ಅಥವಾ ಅಪ್ರಾಪ್ತವೋ ಅದನ್ನು ಹೇಳತಕ್ಕದ್ದು ಅಪೂರ್ವವಿಧಿ. ನಮಗೆ ಗೊತ್ತಿಲ್ಲದ್ದನ್ನು ಶಾಸ್ತ್ರವು ತಿಳಿಸಿಕೊಡುತ್ತದೆ. 'ಬೆಂಕಿ ಸುಡುತ್ತದೆ' ಎಂಬ ಮಾತನ್ನು ಶಾಸ್ತ್ರವು ಹೇಳಬೇಕಾಗಿಲ್ಲ. ಮೈಥುನಾದಿಗಳು ಮನುಷ್ಯನಿಗೆ ಸಹಜವಾಗಿ ರಾಗದಿಂದ ಪ್ರಾಪ್ತವಾಗಿಬಿಡುತ್ತವೆ. ಹೀಗಿರುವಾಗ 'ಸ್ತ್ರಿಯಮುದ್ವಹೇತ್, ಋತೌಭಾರ್ಯಾಮುಪೇಯಾತ್, ಸೌತ್ರಾಮಣ್ಯಾಂ ಸುರಾ-ಗ್ರಹಾನ್ ಗೃಹ್ಣಾತಿ' ಮುಂತಾದ ವಿಧಿಗಳು ಏಕೆ ಬಂದಿವೆ? ಇವುಗಳಿಗೆ ಪ್ರಯೋಜನವೇನು? ಎಂಬ ಪ್ರಶ್ನೆ ಹುಟ್ಟುತ್ತದೆ. ಇದಕ್ಕೆ ಉತ್ತರವೇನೆಂದರೆ, ಶಾಸ್ತ್ರವಾಕ್ಯವು ಎಂದಿಗೂ ವ್ಯರ್ಥವಲ್ಲ. ಇದರ ತಾತ್ಪರ್ಯವನ್ನು ನಾವು ಬೇರೆ ರೀತಿ ಮಾಡಿಕೊಳ್ಳಬೇಕು. ಅದು ನಿಯಮರೂಪವಾಗಿ ಪರಿವರ್ತನೆಗೊಳ್ಳುತ್ತದೆ. 'ಸ್ತ್ರೀಸಂಗವನ್ನು ಮಾಡಬೇಕಾದರೆ ಮದುವೆಮಾಡಿಕೊಂಡಿರುವ ಧರ್ಮಪತ್ನಿಯಲ್ಲಿಯೇ ಮಾಡತಕ್ಕದ್ದು, ಅನ್ಯಸ್ತ್ರೀಯಳಲ್ಲಿ ಕೂಡದು. ಮಾಂಸವನ್ನು ತಿನ್ನುವುದಾದರೆ ಅದು ಯಜ್ಞದಲ್ಲಿ ಹುತಶೇಷವೇ ಆಗಿರಬೇಕು, ಅನ್ಯಸಂದರ್ಭದಲ್ಲಿ ಮಾಂಸಭಕ್ಷಣೆ ಕೂಡದು, ಸುರಾಪಾನಮಾಡುವ ಬಯಕೆಯಾದರೆ ಸೌತ್ರಾಮಣೀ ಯಾಗವನ್ನಾಚರಿಸಿಯೇ ಕುಡಿಯತಕ್ಕದ್ದು, ಅನ್ಯತ್ರ ಕುಡಿಯಕೂಡದು' ಎಂದು ನಿಯಮವನ್ನು ಮಾಡಿ ಉಳಿದ ಸಂದರ್ಭಗಳಲ್ಲಿ ಸ್ತ್ರೀಸಂಗಾದಿಗಳನ್ನು ಮಾಡಕೂಡದೆಂದು ಅವುಗಳಿಂದ ನಿವೃತ್ತಿಗೊಳಿಸುವುದೇ ಈ ವಿಧಿಗಳ ತಾತ್ಪರ್ಯ. ಅನ್ಯನಿವೃತ್ತಿಗಾಗಿ ಮೇಲ್ಕಂಡ ವಿಧಿಗಳು ಹೊರಟಿವೆ. ಸುರಾಪಾನಾದಿಗಳನ್ನು ವಿಧಿಸುವುದಕ್ಕಾಗಿ ಅಲ್ಲವೆಂದು ಸಿದ್ಧಾಂತ.

## ೩

**ಜಿಹ್ವಾದಿ ನಾಸಾದಿ ಚ ಚಿತ್ತಯುಕ್ತಮ್ ॥**

—ಪುಟ ೨೪೧–೨೪೩

ಅದ್ವಿತೀಯವಾದ ಪರಬ್ರಹ್ಮವೆಂಬ ಒಂದೇ ವಸ್ತುವಿದ್ದರೂ ನಾನಾಪ್ರಪಂಚವೆಂಬ ಭೇದಜ್ಞಾನ ಹುಟ್ಟುತ್ತದೆ. ಆತ್ಮನ ಅಜ್ಞಾನದಿಂದುಂಟಾದ ಅಹಂಕಾರವು ಇದಕ್ಕೆ ಕಾರಣ. ಅಹಂಕಾರವೆಂದರೆ ದೇಹಾದಿಗಳಲ್ಲಿ ಆತ್ಮಬುದ್ಧಿ. ಈ ಅಹಂಕಾರವು ತ್ರಿಗುಣಾತ್ಮಕವಾಗಿದ್ದು ಮೂರು ಬಗೆಯ ಭೇದಜ್ಞಾನಕ್ಕೆ ನಿಮಿತ್ತವಾಗಿದೆ. ಅಧ್ಯಾತ್ಮ (ಸಾತ್ತ್ವಿಕ), ಅಧಿಭೂತ (ತಾಮಸ), ಅಧಿದೈವ (ರಾಜಸ)—ಇವೇ ಆ ಮೂರು ಬಗೆಗಳು. ಇವುಗಳಿಗೆ ತ್ರಿಪುಟಿಗಳೆಂದು ಹೇಳುತ್ತಾರೆ. ಮೋಕ್ಷದಶೆಯಲ್ಲಿ ಈ ತ್ರಿಪುಟೀಜ್ಞಾನವು ಅಳಿಯುತ್ತದೆ—ಎಂದು ವೇದಾಂತಪ್ರಕ್ರಿಯೆ.

ಇಂದ್ರಿಯ ಮತ್ತು ಅಂತಃಕರಣಗಳಿಗೆ ಸಂಬಂಧಿಸಿದಂತೆ ತ್ರಿಪುಟಿಯ ಕ್ರಮ ಹೀಗೆ—

**ಜ್ಞಾನೇಂದ್ರಿಯಗಳು**

| ಅಧ್ಯಾತ್ಮ | ಅಧಿಭೂತ | ಅಧಿದೈವ |
|---|---|---|
| ಶ್ರೋತ್ರ | ಶಬ್ದ | ದಿಕ್ |
| ತ್ವಕ್ | ಸ್ಪರ್ಶ | ವಾಯು |
| ಚಕ್ಷುಸ್ಸು | ರೂಪ | ಸೂರ್ಯ |
| ಜಿಹ್ವೆ | ರಸ | ವರುಣ |
| ಘ್ರಾಣ | ಗಂಧ | ಅಶ್ವಿನೀದೇವತೆಗಳು |

**ಅಂತಃಕರಣ**

| | | |
|---|---|---|
| ಚಿತ್ತ | ಚೇತಯಿತವ್ಯ (ಚಿತ್ತಗೋಚರ) | ವಾಸುದೇವ |
| ಮನಸ್ಸು | ಮಂತವ್ಯ | ಚಂದ್ರ |
| ಬುದ್ಧಿ | ಬೋದ್ಧವ್ಯ | ಬ್ರಹ್ಮ |
| ಅಹಂಕಾರ | ಅಹಂಕರ್ತವ್ಯ | ರುದ್ರ |

**ಹೀಗೆಯೇ ಕರ್ಮೇಂದ್ರಿಯಗಳು**

| | | |
|---|---|---|
| ಮುಖ (ವಾಕ್) | ವಕ್ತವ್ಯ | ಅಗ್ನಿ |
| ಪಾಣಿ | ದಾತವ್ಯ | ಇಂದ್ರ |
| ಪಾದ | ಗಂತವ್ಯ | ವಿಷ್ಣು |
| ಪಾಯು | ವಿಸರ್ಜನ | ಮೃತ್ಯು |
| ಉಪಸ್ಥ | ಉತ್ಪತ್ತಿ—ಆನಂದ | ಬ್ರಹ್ಮ |

ಮೂಲದಲ್ಲಿ ಜ್ಞಾನೇಂದ್ರಿಯಗಳನ್ನು ಹೇಳಿದ್ದು ಕರ್ಮೇಂದ್ರಿಯಗಳಿಗೂ ಉಪಲಕ್ಷಣ. ಇಂದ್ರಿಯ ಮತ್ತು ಅಂತಃಕರಣಗಳನ್ನು ಅಧ್ಯಾತ್ಮವೆಂದೂ ಅವುಗಳಿಗೆ ಗೋಚರವಾಗುವ ವಿಷಯಗಳನ್ನು ಅಧಿಭೂತಗಳೆಂದೂ ಇಂದ್ರಿಯಗಳಿಗೆ ಶಕ್ತಿಯನ್ನೀಯುವ ದೇವತೆಗಳನ್ನು ಅಧಿದೈವಗಳೆಂದೂ ವಿಂಗಡಿಸಿಕೊಳ್ಳಲಾಗಿದೆ.

೪

ಮುಹೂರ್ತೇನ ಬ್ರಹ್ಮಲೋಕಂ ಖಟ್ವಾಂಗಃ ಸಮಸಾಧಯಾತ್ ॥

—ಪುಟ ೨೫೬

ಇವನು ಸೂರ್ಯವಂಶದಲ್ಲಿ ಸುಪ್ರಸಿದ್ಧನಾದ ಒಬ್ಬ ರಾಜ. ಖಟ್ವಾಂಗನಿಗೆ ದಿಲೀಪ ಎಂದು ಇನ್ನೊಂದು ಹೆಸರಿತ್ತು. ಅತ್ಯಂತ ಪುಣ್ಯಶಾಲಿಯೂ ಮಹಾವೀರನೂ ಆಗಿದ್ದನು. ಒಮ್ಮೆ ದೇವೇಂದ್ರನ ಸಹಾಯಕ್ಕಾಗಿ ದೇವಲೋಕಕ್ಕೆ ಹೋಗಿ ರಾಕ್ಷಸರನ್ನು ಸಂಹರಿಸಿದನು. ದೇವತೆಗಳು ಸಂತುಷ್ಟರಾಗಿ ವರವನ್ನು ಬೇಡಿಕೊಳ್ಳುವಂತೆ ಹೇಳಿದರು. ಇವನು ಬೇರೆ ಯಾವ ವರವನ್ನೂ ಒಲ್ಲದೆ ತನ್ನ ಆಯುಃಪ್ರಮಾಣವೆಷ್ಟೆಂಬುದನ್ನು ತಿಳಿಸುವಂತೆ ಕೇಳಿಕೊಂಡನು. 'ಇನ್ನು ಎರಡು ಯಾಮಗಳ ಕಾಲ ನಿನ್ನ ಆಯುಸ್ಸು' ಎಂದು ದೇವತೆಗಳು ಹೇಳಿದರು! ಆಗ ದಿಲೀಪನು ಒಡನೆಯೇ ತನ್ನ ರಾಜಧಾನಿಯಾದ ಅಯೋಧ್ಯೆಗೆ ಹಿಂದಿರುಗಿ, ರಾಜ್ಯಭಾರವನ್ನು ಮಗನಿಗೆ ಒಪ್ಪಿಸಿ, ಯೋಗಾರೂಢನಾಗಿ ದೇಹವನ್ನು ತ್ಯಜಿಸಿದನು. ಅಲ್ಪಕಾಲದಲ್ಲಿಯೇ ಧ್ಯಾನಬಲದಿಂದ ಬ್ರಹ್ಮಲೋಕವನ್ನು ಸೇರಿದನು—ಎಂದು 'ಪುರಾಣನಾಮ ಚೂಡಾಮಣಿ' ಯಲ್ಲಿ ಬರೆದಿದೆ. ಹರಿವಂಶದಲ್ಲಿ 'ಯೇನ ಸ್ವರ್ಗಾದಿಹಾಗತ್ಯ ಮುಹೂರ್ತಂ ಪ್ರಾಪ್ಯ ಜೀವಿತಮ್' (೧ ೧೫–೧೮) ಎಂದು ಹೇಳಿದೆ. ಈ ಖಟ್ವಾಂಗದಿಲೀಪನು ಅಂಶುಮಂತನ ಮಗ. ಭಗೀರಥನ ತಂದೆ. ರಘುರಾಜನ ತಂದೆಯಾದ ದಿಲೀಪನು ಇವನಲ್ಲ.

## ೫

### ಗ್ರಹೈರ್ಗೃಹಸ್ಯೈವ ವದಂತಿ ಪೀಡಾಂ ॥

—ಪುಟ ೨೬೩

ಆತ್ಮನು ಅಸಂಗನೂ ದ್ವಂದ್ವಾತೀತನೂ ಆದ್ದರಿಂದ ಆತ್ಮನಿಗೆ ಸುಖದುಃಖಾದಿ ದ್ವಂದ್ವಗಳ ಸಂಬಂಧವಿಲ್ಲ—ಎಂಬುದು ಪ್ರಕರಣಾರ್ಥ. ಜ್ಯೌತಿಷಗ್ರಂಥಗಳಲ್ಲಿ ಜನ್ಮಕಾಲದ ಗ್ರಹಸ್ಥಿತಿಯಿಂದ ಮನುಷ್ಯನಿಗೆ ಸುಖದುಃಖಗಳು ಸಂಭವಿಸುತ್ತವೆ ಯೆಂದು ಹೇಳಿರುವುದು ಹೇಗೆ? ಎಂಬ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರವನ್ನು ನೀಡಲಾಗಿದೆ. ಏನೆಂದರೆ, ಗ್ರಹಗಳಲ್ಲಿ ಮಿತ್ರ, ಶತ್ರು, ಸಮ—ಎಂಬ ಭೇದವು ಪರಸ್ಪರವಾಗಿ ಉಂಟು. ಜನ್ಮಲಗ್ನಕ್ಕೆ ದ್ವಾದಶ, ಅಷ್ಟಮ ಮೊದಲಾದ ಸ್ಥಾನ ಗಳಲ್ಲಿರುವ ಗ್ರಹಗಳು ಅಂತರಿಕ್ಷದಲ್ಲಿರುವ ಗ್ರಹಗಳನ್ನು ಮಾತ್ರ ಮಿತ್ರದೃಷ್ಟಿ, ಕ್ರೂರದೃಷ್ಟಿ—ಮುಂತಾದ ರೀತಿಯಲ್ಲಿ ನೋಡುತ್ತವೆ. ಅದರಿಂದ ಆಯಾ ಗ್ರಹಗಳಿಗೆ ಮಾತ್ರ ಪೀಡೆಯೂ ಸುಖವೂ ಆಗಬಹುದು. ಗ್ರಹಗಳಿಗೂ ಆತ್ಮನಿಗೂ ಸಂಬಂಧ ವಿಲ್ಲ. ಅಲ್ಲದೆ ಆತ್ಮನು ನಿತ್ಯನಾದ್ದರಿಂದ ಅವನಿಗೆ ಜನ್ಮಲಗ್ನವೂ ಇಲ್ಲ. ಮರಣ ಲಗ್ನವೂ ಇಲ್ಲ. ಜನ್ಮ ಮರಣಗಳು ದೇಹಕ್ಕೆ ಮಾತ್ರ. ದೇಹವೆಂದರೆ ಕ್ಷೇತ್ರ. ಇದರಲ್ಲಿ ಅಂತಃಕರಣವೂ ಸೇರಿದೆ. ಇಂತಹ ದೇಹಕ್ಕೆ ಜನ್ಮ ಉಂಟು. ಜಾತಕನ ಜನ್ಮತ್ರಿಕೋಣಾದಿ ಸ್ಥಾನಗಳಲ್ಲಿರುವ ಗ್ರಹಗಳ ಮೂಲಕ ಪರ್ಯಾಯವಾಗಿ ದೇಹಕ್ಕೆ ಸುಖದುಃಖಗಳುಂಟಾಗಬಹುದು. ದೇಹವೇ ನಾನೆಂಬ ಅಭಿಮಾನವಿಟ್ಟುಕೊಂಡಿ ರುವ ಜನರಿಗೆ ಇವುಗಳ ಅನುಭವವಾಗುತ್ತದೆ. ವಾಸ್ತವವಾಗಿ ಈ ಸುಖದುಃಖಗಳು ಅಂತಃಕರಣಕ್ಕೆ ಸಂಬಂಧಿಸಿದವು, ಆತ್ಮನಿಗಲ್ಲ. ಹುಟ್ಟತಕ್ಕದ್ದು ದೇಹವಾದ್ದರಿಂದ ಆತ್ಮನಿಗೂ ಗ್ರಹಗಳಿಗೂ ಸಂಬಂಧವಿಲ್ಲ. ಜ್ಯೋತಿಃಶಾಸ್ತ್ರವು ದೇಹವೇ ನಾನೆಂಬ ಅಭಿಮಾನವನ್ನಿರಿಸಿಕೊಂಡಿರತಕ್ಕ ಜನರಿಗಾಗಿ ಪ್ರವೃತ್ತವಾಗಿದೆ.

## ೬

### ತನ್ಮಾತ್ರೇಂದ್ರಿಯಮನಸಾಂ ಕಾರಣಂ ಚಿದಚಿನ್ಮಯಃ ॥

—ಪುಟ ೨೬೭

ಚಿತ್=ಚೇತನ, ಜ್ಞಾನಶಕ್ತಿಯುಳ್ಳದ್ದು. ಅಚಿತ್=ಜಡವಸ್ತು. ಅಹಂಕಾರ ತತ್ತ್ವದಿಂದ ಜಡಗಳಾದ ಪಂಚತನ್ಮಾತ್ರೆಗಳೂ ಪಂಚಭೂತಗಳೂ ಜನಿಸಿವೆ.

ಇಂದ್ರಿಯದ್ವಾರಾ ಜಡವಸ್ತುಗಳನ್ನು ತಿಳಿಯುವ ಶಕ್ತಿ ಮನಸ್ಸಿಗಿದೆ. ಈ ಜ್ಞಾನಶಕ್ತಿ ಚಿದ್ರೂಪವಾದ ಬ್ರಹ್ಮದ ಸಂಬಂಧದಿಂದ ಬಂದದ್ದು. ಹೀಗೆ ಜ್ಞಾನಶಕ್ತಿ ಬಂದಿರುವುದರಿಂದ ಅಹಂಕಾರವು ಚಿದ್ರೂಪವೂ ವಸ್ತುತಃ ತಾನು ಜಡವೂ ಆಗಿದೆ. ಈ ರೀತಿ ಉಭಯಾತ್ಮಕವಾದ್ದರಿಂದ ಇದು ಚಿದಚಿನ್ಮಯ. ಅಹಂಕಾರ ತತ್ತ್ವವನ್ನು ದೀಪದ ಬಲ್ಬಿಗೆ ಹೋಲಿಸಬಹುದು. ಬಲ್ಬು ಸ್ವತಃ ಪ್ರಕಾರರಹಿತ. ವಿದ್ಯುತ್ತಿನ ಸಂಬಂಧವಾದಾಗ ಪ್ರಕಾಶವನ್ನು ಬೀರುತ್ತದೆ.

'ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ' 'ಅನ್ನಮಯಂ ಹಿ ಸೌಮ್ಯಮನಃ'–ಇತ್ಯಾದಿ ಶ್ರುತಿವಚನಗಳಿಂದ ಮೊದಲು ಸೂಕ್ಷ್ಮಭೂತಗಳ ಸೃಷ್ಟಿಯಾಯಿತೆಂದೂ ಅನಂತರ ಪಂಚೀಕರಣ ಕ್ರಮದಿಂದ ಮನಸ್ಸು ಮೊದಲಾದವು ಹುಟ್ಟಿದವೆಂದು ತಿಳಿದುಬರುತ್ತದೆ. ಇಲ್ಲಿಯಾದರೋ ಸತ್ತ್ವಾದಿ ಗುಣದ್ವಾರಾ ಮೊದಲು ಅಹಂಕಾರ ಹುಟ್ಟಿತೆಂದೂ ಅದರಿಂದ ಪಂಚಭೂತಾದಿಗಳು ಹುಟ್ಟಿವೆಯೆಂದೂ ಹೇಳಿದೆ. ಆದ್ದರಿಂದ ವಿರೋಧವಾಯಿತಲ್ಲ—ಎಂಬ ಶಂಕೆ ಬರಬಹುದು. ಉಪನಿಷತ್ತಿನಲ್ಲಿ ಪಂಚೀಕರಣವನ್ನು ಹೇಳಿದೆ, ತ್ರಿವೃತ್‌ಕರಣವನ್ನೂ ಹೇಳಿದೆ. ಸೃಷ್ಟಿಯ ಪ್ರಕಾರ ವಿವಿಧವಾಗಿ ವರ್ಣಿಸಲ್ಪಟ್ಟಿದೆ. ಇವೆಲ್ಲವುಗಳ ತಾತ್ಪರ್ಯವಿಷ್ಟೆ–ಸೃಷ್ಟಿಯಾದ ಬಗೆಯನ್ನು ವರ್ಣಿಸುವುದರಲ್ಲಿ ಈ ಗ್ರಂಥಗಳು ಆಸಕ್ತಿಯನ್ನು ವಹಿಸಿಲ್ಲ. ಇವೆಲ್ಲವೂ ಬ್ರಹ್ಮದಿಂದ ಹುಟ್ಟಿವೆಯೆಂದು ಹೇಳುವುದರಲ್ಲಿ ಈ ಗ್ರಂಥಗಳ ತಾತ್ಪರ್ಯ. ಸರ್ವಕ್ಕೂ ಮೂಲವಾದದ್ದು ಪರಬ್ರಹ್ಮವೆಂದು ಬೋಧಿಸಲು ಇವೆಲ್ಲ ಉಪಾಯ ಮಾರ್ಗಗಳು.

೭

ಕಾಲೋ ಮಾಯಾಮಯೇ ಜೀವೇ ಜೀವ ಆತ್ಮನಿ ಮಯ್ಯಜೇ ।
ಆತ್ಮಾ ಕೇವಲ ಆತ್ಮಸ್ಥೋ ವಿಕಲ್ಪಾಪಾಯಲಕ್ಷಣಃ ॥

—ಪುಟ ೨೭೨

ಪೂಜ್ಯ ಶ್ರೀಧರಸ್ವಾಮಿಗಳ ವ್ಯಾಖ್ಯಾನದ ಪ್ರಕಾರ ಈ ಶ್ಲೋಕವನ್ನು "ಕಾಲವು ಮಾಯಾ ಪ್ರವರ್ತಕನಾದ ಅಥವಾ ಜ್ಞಾನಮಯನಾದ ಮಹಾಪುರುಷನಲ್ಲಿ ಲೀನವಾಗುತ್ತದೆ. ಮಹಾಪುರುಷನು ಅಜನೂ ಆತ್ಮನೂ ಆದ ನನ್ನಲ್ಲಿ ಏಕೀಭವಿಸುತ್ತಾನೆ. ಆತ್ಮನು ಆತ್ಮನಾಗಿಯೇ ಸ್ವಸ್ವರೂಪದಲ್ಲಿರುತ್ತಾನೆ. ಏಕೆಂದರೆ,

ಈ ಪರಮಾತ್ಮನು ವಿಶ್ವದ ಉತ್ಪತ್ತಿಲಯಗಳಿಗೆ ಅಧಿಷ್ಠಾನವಾದವನು " ಎಂದು ಅನುವಾದಿಸಬೇಕು.

ಭಾಗವತದ ಸಪ್ತಮಸ್ಕಂಧದಲ್ಲಿ "ಕಾಲಂ ಚರಂತಂ ಸೃಜತೀಶ ಆಶ್ರಯಂ। ಪ್ರಧಾನಪುಂಭ್ಯಾಂ ನರದೇವ ಸತ್ಯಕೃತ್ " (೧–೧೧) ಎಂದು ಹೇಳಿದೆ. ಪ್ರಧಾನ-ಪುರುಷರನ್ನು ನಿಮಿತ್ತ ಮಾಡಿಕೊಂಡು ಅವರಿಗೆ ಸಹಕಾರಿಯಾದ ಕಾಲವನ್ನು ಈಶ್ವರನು ಸೃಜಿಸುತ್ತಾನೆಂದು ಅದರ ಅರ್ಥ. ಹಾಗೆಯೇ ದಶಮಸ್ಕಂಧದಲ್ಲಿ "ಯೋಽಯಂ ಕಾಲಸ್ತಸ್ಯ ತೇಽವ್ಯಕ್ತಬಂಧೋ ಚೇಷ್ಟಾಮಾಹುಶ್ಚೇಷ್ಟತೇ ಯೇನ ವಿಶ್ವಮ್ " (೩–೨೬) ಎಂದು ಹೇಳಿದೆ. ¯ ಕಾಲವು ಭಗವಂತನ ನಿರ್ಮಾಣವೆಂದು ಅದರ ಅಭಿಪ್ರಾಯ. ಕಾಲವು ಈಶ್ವರನಿಂದ ಹುಟ್ಟಿದ್ದು. ಕಾರ್ಯವು ಕಾರಣದಲ್ಲಿ ಲೀನವಾಗುವುದೆಂಬುದು ಯುಕ್ತವಾದ್ದರಿಂದ ಶ್ರೀಧರಸ್ವಾಮಿಗಳ ವ್ಯಾಖ್ಯಾನ ಸರಿಯಾದದ್ದೇ.

ಆದರೆ ಈ ವ್ಯಾಖ್ಯಾನದಲ್ಲಿ ಮಾಯಾಮಯ, ಜೀವ–ಎಂಬೆರಡು ಶಬ್ದಗಳು ತೊಡಕಾಗುತ್ತವೆ. ಜೀವ ಎಂಬ ಶಬ್ದವೇ ಎರಡು ಸಲ ಮೇಲ್ಕಂಡ ಶ್ಲೋಕದಲ್ಲಿ ಪ್ರಯುಕ್ತವಾಗಿದೆ. ಮಾಯಾಮಯ ಎಂಬ ಶಬ್ದಕ್ಕೆ 'ಮಾಯಾಕಲ್ಪಿತವಾದ' ಅಥವಾ 'ಮಾಯಾಸಂಸೃಷ್ಟವಾದ' ಎಂಬ ಅರ್ಥ ಸಹಜವಾದದ್ದು. ಮಾಯಾ ಪ್ರವರ್ತಕ ಎಂದೋ ಜ್ಞಾನಮಯನೆಂದೋ ಅರ್ಥ ಮಾಡುವುದು ಕ್ಲಿಷ್ಟವೆಂದು ನಮಗೆ ತೋರುತ್ತದೆ. ಅಲ್ಲದೆ ಜೀವ ಎಂದರೆ ಮಹಾಪುರುಷ, ಈಶ್ವರ ಎಂದು ಅರ್ಥವಾಗುವುದು ಹೇಗೆ? ಶ್ರೀಧರಸ್ವಾಮಿಗಳು 'ಜೀವಯತೀತಿ ಜೀವಃ' ಎಂದು ವ್ಯುತ್ಪಾದಿಸಿದ್ದಾರೆ. ಸಕಲ ಪ್ರಾಣಿಗಳನ್ನೂ ಬದುಕಿಸುವವನು, ಪ್ರಾಣವನ್ನು ಧರಿಸುವಂತೆ ಮಾಡುವವನು—ಎಂದು ಅಭಿಪ್ರಾಯ. ಈ ಪಕ್ಷದಲ್ಲಿ ಜೀವ ಶಬ್ದಕ್ಕೆ ಪ್ರಸಿದ್ಧವಾದ ಅರ್ಥವನ್ನು ಪರಿತ್ಯಜಿಸಬೇಕಾಗಿ ಬರುತ್ತದೆ. ಅಲ್ಲದೆ ಜೀವನಿಗೆ ಎಲ್ಲಿ ಲಯ? ಎಂಬುದನ್ನು ಹೇಳಿದಂತೆಯೂ ಆಗುವುದಿಲ್ಲ. ಇದೇ ಅಧ್ಯಾಯದ ೧೯ ನೆಯ ಶ್ಲೋಕದಲ್ಲಿ ಹೇಳಿರುವ ಪ್ರಕೃತಿ, ಪುರುಷ (ಜೀವ), ಕಾಲ–ಈ ಮೂರರ ಲಯವನ್ನೂ ತೋರಿಸಬೇಕಾದದ್ದು ಆವಶ್ಯಕ. ಜೀವನಿಂದ ಕಾಲವು ಹುಟ್ಟಿಲ್ಲವಾದರೂ ಜೀವನಿಮಿತ್ತಕವಾಗಿಯೇ ಕಾಲದ ಸೃಷ್ಟಿಯಾಗಿರುವುದರಿಂದ ಜೀವವು ಬ್ರಹ್ಮದಲ್ಲಿ ಲಯಿಸುವಾಗ ಕಾಲದೊಡನೆ ಸೇರಿ ಬ್ರಹ್ಮದಲ್ಲಿ ಲೀನವಾಗುತ್ತದೆಯೆಂದು ಮೂಲ ಶ್ಲೋಕದ ತಾತ್ಪರ್ಯವೆಂದು ನಮ್ಮ ಗ್ರಹಿಕೆ. ಸೃಷ್ಟಿಕರ್ತನಾದ ಈಶ್ವರನು

ಸಗುಣಬ್ರಹ್ಮವೇ ಆದ್ದರಿಂದ ಆತನಿಗೆ ಲಯವನ್ನು ತೋರಿಸಬೇಕಾದ್ದಿಲ್ಲ. ಗುಣಗಳ ಲಯವನ್ನು ಹಿಂದೆ ಹೇಳಿದ್ದಾಗಿದೆ. ಆದ್ದರಿಂದ ನಮ್ಮ ಅನುವಾದವು ಶ್ರೀಧರೀಯಕ್ಕಿಂತ ಸ್ವಲ್ಪ ಭಿನ್ನವಾಯಿತು. ವಿದ್ವಾಂಸರು ಪರಿಶೀಲಿಸಬೇಕು.

೮

ವೈತಸೇನಸ್ತತೋಽಪ್ಯೇವಮುರ್ವಶ್ಯಾ ಲೋಕನಿಃಸ್ಪೃಹಃ ॥

—ಪುಟ ೨೮೯

ವೈತಸೇನ=ವೀತಸೇನನ ಮಗನಾದ ಪುರೂರವ. ಪುರೂರವನು ಬುಧನಿಂದ ಇಲಾ (ಇಳಾ) ಎಂಬವಳಲ್ಲಿ ಜನಿಸಿದನು. ಪೂರ್ವಕಥೆ ಹೀಗಿದೆ: ಮನು ಚಕ್ರವರ್ತಿ ಪುತ್ರಾರ್ಥಿಯಾಗಿ ಯಾಗ ಮಾಡಿದನು. ಹೋಮಕಾಲದಲ್ಲಿ ಋತ್ವಿಜರಿಂದಾದ ಮಂತ್ರೋಚ್ಚಾರಣದ ತಪ್ಪಿನಿಂದ ಗಂಡಿಗೆ ಬದಲಾಗಿ ಹೆಣ್ಣುಮಗು ಹುಟ್ಟಿತು. ಮಗುವಿಗೆ ಇಲಾ ಎಂದು ಹೆಸರಿಟ್ಟರು. ವಸಿಷ್ಠಮುನಿಗಳ ಅನುಗ್ರಹದಿಂದ ಈ ಮಗು ಗಂಡಾಯಿತು. ಆಗ ಸುದ್ಯುಮ್ನ ಎಂದು ಹೆಸರಾಯಿತು. ಸುದ್ಯುಮ್ನನು ರಾಜನಾದ ಮೇಲೆ ಸೇನಾಸಮೇತನಾಗಿ ಹೋಗುತ್ತಿದ್ದಾಗ ಒಂದು ವನವನ್ನು ಪ್ರವೇಶಿಸಿದನು. ಅದು ಪಾರ್ವತೀ ಪರಮೇಶ್ವರರು ವಿಹರಿಸುವ ಸ್ಥಳವಾಗಿತ್ತು. ಅಲ್ಲಿಗೆ ಪುರುಷನು ಬಂದರೆ ಸ್ತ್ರೀಯಾಗಬೇಕೆಂದು ಪಾರ್ವತೀದೇವಿಯ ಶಾಪವಿತ್ತು. ಸುದ್ಯುಮ್ನನೂ ಅವನ ಸೈನಿಕರೂ ಒಡನೆಯೇ ಸ್ತ್ರೀಯರಾದರು. ಸುದ್ಯುಮ್ನನು ಸ್ತ್ರೀಯಾಗಿ ಮತ್ತೆ ಇಲೆಯೆನಿಸಿದನು. ಬುಧನು ಅವಳನ್ನು ಮೋಹಿಸಲಾಗಿ, ಇಲೆಯಲ್ಲಿ ಪುರೂರವನು ಹುಟ್ಟಿದನು. ಅನಂತರ ದೇವತಾನುಗ್ರಹದಿಂದ ಇಲಾ ಗಂಡಾಗಿ ಸುದ್ಯುಮ್ನನಾಗುತ್ತಾಳೆ. ಸುದ್ಯುಮ್ನನ ಸೈನಿಕರು ಸ್ತ್ರೀಯರಾಗಿ ಹೋದ್ದರಿಂದ ಇವನಿಗೆ ವೀತಸೇನ ಎಂಬ ಅಡ್ಡಹೆಸರು ಬಂದಿತು. ವೀತ=ನಷ್ಟವಾದ, ಸೇನ=ಸೇನೆಯುಳ್ಳವನು. ವೀತಸೇನನಾದ ಸುದ್ಯುಮ್ನನ ಮಗ ವೈತಸೇನ. ಇಲೆಯ ಮಗನಾದ್ದರಿಂದ ಐಲ ಎಂಬ ಹೆಸರೂ ಪುರೂರವನಿಗಿದೆ.

ಪುರೂರವನು ಅತ್ಯಂತ ತೇಜಸ್ವಿಯೂ ಮಹಾಶೂರನೂ ಸುಂದರಾಂಗನೂ ಆಗಿದ್ದನು. ಅಪ್ಸರೆಯಾದ ಊರ್ವಶಿ ಇವನನ್ನು ಕಾಮಿಸಿ, ಬಹಳ ದಿನ ಇವನೊಡನೆ ಇದ್ದಳು. ಕಾರಣಾಂತರಗಳಿಂದ ಅವಳು ದೇವಲೋಕಕ್ಕೆ ಹೊರಟು ಹೋಗಲಾಗಿ, ಅವಳಿಗೋಸ್ಕರ ಪುರೂರವನು ಬಹಳ ಹಂಬಲಿಸಿದನು. ಕಾಳಿದಾಸನ

ವಿಕ್ರಮೋರ್ವಶೀಯ ನಾಟಕದಲ್ಲಿ ಈಕಥೆ ಚಿತ್ರಿತವಾಗಿದೆ. ಋಗ್ವೇದದಲ್ಲಿಯೂ ಉರ್ವಶೀಪುರೂರವರ ವೃತ್ತಾಂತ ಬಂದಿದೆ.

೯

ಗತೋ ಮಹಾಭಾಗವತೋ ವಿಶಾಲಾಮ್ ॥

—ಪುಟ ೩೨೭

ಉದ್ಧವನು ನೇರವಾಗಿ ಬದರಿಕಾಶ್ರಮಕ್ಕೆ ತೆರಳಿದನೆಂದೂ ಅನಂತರ ಪ್ರಭಾಸ ಕ್ಷೇತ್ರದಲ್ಲಿ ಯಾದವ ಸಂಹಾರವಾಯಿತೆಂದೂ ಆಮೇಲೆ ಶ್ರೀಕೃಷ್ಣನು ಸ್ವಧಾಮಕ್ಕೆ ತೆರಳಿದನೆಂದೂ ಇಲ್ಲಿ ಹೇಳಿದ ವೃತ್ತಾಂತಗಳಿಂದ ತೋರುತ್ತದೆ. ಆದರೆ ತೃತೀಯ ಸ್ಕಂಧದ ನಾಲ್ಕನೆಯ ಅಧ್ಯಾಯದಲ್ಲಿ ಉದ್ಧವನು ವಿದುರನಿಗೆ—

ಅಹಂ ಚೋಕ್ತೋ ಭಗವತಾ ಪ್ರಪನ್ನಾರ್ತಿಹರೇಣ ಹ ।
ಬದರೀಂ ತ್ವಂ ಪ್ರಯಾಹೀತಿ ಸ್ವಕುಲಂ ಸಂಜಿಹೀರ್ಷುಣಾ ॥ ೪ ॥

ಅಥಾಪಿ ತದಭಿಪ್ರೇತಂ ಜಾನನ್ನಹಮರಿಂದಮ ।
ಪೃಷ್ಠತೋಽನ್ವಗಮಂ ಭರ್ತುಃ ಪಾದವಿಶ್ಲೇಷಣಾಕ್ಷಮಃ ॥ ೫ ॥

ಎಂದು ಹೇಳಿದ್ದಾನೆ. ಆದ್ದರಿಂದ ಈ ರೀತಿ ತಿಳಿಯಬೇಕು :— ಬದರಿಗೆ ಹೋಗೆಂದು ಶ್ರೀಕೃಷ್ಣನು ಹೇಳಿದರೂ ಆತನ ವಿಯೋಗವನ್ನು ತಡೆದುಕೊಳ್ಳಲಾರದೆ ಉದ್ಧವನು ಶ್ರೀಕೃಷ್ಣನನ್ನು ಅನುಸರಿಸಿಕೊಂಡೇ ಇದ್ದನು. ಯಾದವ ಸಂಹಾರವಾದ ಮೇಲೆ ಶ್ರೀಕೃಷ್ಣನು ಏಕಾಂತದಲ್ಲಿ ಕುಳಿತಿದ್ದಾಗ ಉದ್ಧವನು ಮತ್ತೆ ಅವನ ಬಳಿಗೆ ಹೋದನು. ಆಗ ಮೈತ್ರೇಯ ಋಷಿಯೂ ಅಲ್ಲಿಗೆ ಬಂದನು. ಶ್ರೀಕೃಷ್ಣನು ಉದ್ಧವನಿಗೆ ಸಂಕ್ಷೇಪವಾಗಿ ಪುನಃ ತತ್ತ್ವೋಪದೇಶ ಮಾಡಿದನು. ಅನಂತರ ಉದ್ಧವನು ಬದರಿಕಾಶ್ರಮಕ್ಕೆ ಹೋಗುತ್ತ ದಾರಿಯಲ್ಲಿ ವಿದುರನನ್ನು ಕಂಡನು.

೧೦

ವಾರಾಹಂ ಮಾತ್ಸ್ಯಂ ಕೌರ್ಮಂ ಚ ಬ್ರಹ್ಮಾಂಡಾಖ್ಯಮಿತಿ ತ್ರಿಷಟ್ ।

—ಪುಟ ೪೧೬

ವಿಷ್ಣುಪುರಾಣ ಮೊದಲಾದವುಗಳಲ್ಲಿಯೂ ಈ ಹದಿನೆಂಟು ಮಹಾಪುರಾಣಗಳ ಉಲ್ಲೇಖವಿದೆ. ನಾರದ ಪುರಾಣ ಮತ್ತು ಮತ್ಸ್ಯಪುರಾಣಗಳಲ್ಲಿ ಶಿವಪುರಾಣಕ್ಕೆ

ಬದಲಾಗಿ ವಾಯುಪುರಾಣದ ಹೆಸರಿದೆ. ಶಿವಪುರಾಣದ ರೇವಾಖಂಡದಲ್ಲಿ ಈ ಹೇಳಿಕೆ ದೊರೆಯುತ್ತದೆ—

ಚತುರ್ಥಂ ವಾಯುನಾ ಪ್ರೋಕ್ತಂ ವಾಯವೀಯಮಿತಿ ಸ್ಮೃತಮ್ ।
ಶಿವಭಕ್ತಿಸಮಾಯೋಗಾತ್ ಶೈವಂ ತಚ್ಚಾಪರಾಖ್ಯಯಾ ॥
ಚತುರ್ವಿಂಶತಿಸಂಖ್ಯಾತಂ ಸಹಸ್ರಾಣಿ ತು ಶೌನಕ ।
ಚತುರ್ಭಿಃ ಪರ್ವಭಿಃ ಪ್ರೋಕ್ತಂ ............ ॥

ಇದರಿಂದ ಶಿವಪುರಾಣಕ್ಕೆ ವಾಯುಪುರಾಣವೆಂಬ ಇನ್ನೊಂದು ಹೆಸರಿತ್ತೆಂದು ಹೇಳಬಹುದಾಗಿದೆ. ಎರಡು ಹೆಸರಿನ ಪುರಾಣಗಳಲ್ಲಿಯೂ ೨೪೦೦೦ ಶ್ಲೋಕಗಳಿದ್ದವೆಂದು ತಿಳಿದುಬರುತ್ತದೆ. ಶಿವಪುರಾಣದಲ್ಲಿರುವ ವಾಯು ಸಂಹಿತೆಯಲ್ಲಿ ೪೦೦೦ ಶ್ಲೋಕಗಳಿವೆ. ಈಗ ಈ ಉಭಯಪುರಾಣಗಳೂ ಬೇರೆ ಬೇರೆ ಮುದ್ರಿತವಾಗಿವೆ. ವಿಷಯಗಳು ಅನ್ಯೋನ್ಯ ಸಂಕೀರ್ಣವಾಗಿರುವುದರಿಂದ ಮೊದಲು ಒಂದೇ ಪುರಾಣವಿದ್ದು ಕೆಲವರಿಂದ ಶಿವಪುರಾಣವೆಂದೂ ಕೆಲವರಿಂದ ವಾಯುಪುರಾಣವೆಂದೂ ವ್ಯವಹೃತವಾಗಿತ್ತೆಂಬ ಮಾತು ಗಟ್ಟಿಯಾಗಿ ನಿಲ್ಲುತ್ತದೆ. ಮೇಲೆ ಹೇಳಿದ ಶಿವಪುರಾಣಾಂತರ್ಗತ ವಾಯುಸಂಹಿತೆಯು ಶಿವಪುರಾಣದಲ್ಲಿ ವಿದ್ಯೇಶ್ವರಸಂಹಿತಾಮುಂತಾದ ಹನ್ನೆರಡು ಸಂಹಿತೆಗಳಿವೆಯೆಂದು ನಾಮನಿರ್ದೇಶಮಾಡಿ, ಒಟ್ಟು ಶಿವಪುರಾಣದಲ್ಲಿ ಒಂದು ಲಕ್ಷ ಶ್ಲೋಕಗಳಿವೆಯೆಂದು ಹೇಳುತ್ತದೆ! ಎಲ್ಲ ಸಂಹಿತೆಗಳೂ ಈಗ ದೊರೆಯುವುದಿಲ್ಲ.

ವಿಷ್ಣು ಮಹಿಮೆಯನ್ನು ಬೋಧಿಸುವ ಈ ಶ್ರೀಮದ್ಭಾಗವತವಲ್ಲದೆ ದೇವೀ ಮಹಿಮೆಯನ್ನು ಬೋಧಿಸುವ ದೇವೀಭಾಗವತವೆಂಬ ಇನ್ನೊಂದು ಗ್ರಂಥವೂ ಪ್ರಸಿದ್ಧವಾಗಿದೆ. ವ್ಯಾಖ್ಯಾನಕಾರರಾದ ಶ್ರೀಧರಸ್ವಾಮಿಗಳು ಈ ವಿಷ್ಣುಭಾಗವತವನ್ನೇ ಮಾನ್ಯಮಾಡಿ, 'ಭಾಗವತನಾಮಾನ್ಯದಿತ್ಯಪಿ ನಾಶಂಕನೀಯಂ—ಭಾಗವತವೆಂಬುದು ಬೇರೊಂದು ಗ್ರಂಥವೆಂದೂ ಶಂಕಿಸಬಾರದು' ಎಂದು ಬರೆದಿದ್ದಾರೆ. ಅವರ ಕಾಲದಲ್ಲಿಯೇ ಈ ಎರಡು ಭಾಗವತಗಳ ವಿಷಯದಲ್ಲಿ ವಿವಾದವಿತ್ತೆಂದು ಇದರಿಂದ ಗೊತ್ತಾಗುತ್ತದೆ.

ಈ ಮಹಾಪುರಾಣಗಳಲ್ಲದೆ ಹದಿನೆಂಟು ಉಪಪುರಾಣಗಳುಂಟು. ದೇವೀ ಭಾಗವತವು ಉಪಪುರಾಣಗಳಲ್ಲಿ ಸೇರುತ್ತದೆಯೆಂದು ಬಹುಮಂದಿ ವಿದ್ವಾಂಸರ ಅಭಿಪ್ರಾಯವಿದೆ. ಹೆಚ್ಚಿನ ವಿವರಗಳಿಗೆ ಈ ಗ್ರಂಥಗಳನ್ನು ನೋಡಬಹುದು—

1. ಜ್ವಾಲಾಪ್ರಸಾದಮಿಶ್ರರ ಅಷ್ಟಾದಶಪುರಾಣದರ್ಪಣ (ಹಿಂದೀ)

2. Studies in Epics and Puranas of India

*By A. D. Pusalkar*

## ೧೧

ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ ||

—ಪುಟ ೪೮೧–೪೮೨

ವ್ಯಾಸರು ಘೃತಾಚಿಯೆಂಬ ಅಪ್ಸರೆಯನ್ನು ನೋಡಿ ಕಾಮಮೋಹಿತರಾದರು. ಅವಳು ಶುಕಿಯ (ಹೆಣ್ಣುಗಿಳಿ) ರೂಪವನ್ನು ಧರಿಸಿದಳು. ವ್ಯಾಸರ ವೀರ್ಯವು ಅರಣಿಯಲ್ಲಿ ಬಿದ್ದಿತು. ಅದರಿಂದ ಶುಕಮುನಿಗಳು ಹುಟ್ಟಿದರು. ಶುಕಿಯ ನಿಮಿತ್ತದಿಂದ ಜನಿಸಿದ ಕಾರಣ ಶುಕ ಎಂದೇ ಹೆಸರಾಯಿತು. ಇವರು ವ್ಯಾಸ, ಜನಕ, ನಾರದ—ಇವರ ಉಪದೇಶದಿಂದ ಪರಮ ವೈರಾಗ್ಯವನ್ನು ತಳೆದು ಬಾಲ್ಯದಲ್ಲಿಯೇ ಮನೆಯನ್ನು ಬಿಟ್ಟು ತೆರಳಿದರು. ಪುತ್ರವ್ಯಾಮೋಹದಿಂದ ವ್ಯಾಸರು 'ಪುತ್ರ' ಎಂದು ಕರೆಯುತ್ತ ಇವರನ್ನು ಹಿಂಬಾಲಿಸಿ ಹೋದರು. ಸರ್ವಾತ್ಮಕರಾಗಿ ಬ್ರಹ್ಮಭೂತರಾಗಿದ್ದ ಶುಕರು ತಂದೆಗೆ ಸಮಾಧಾನ ಹೇಳಿದರು—ಎಂದು ಪೌರಾಣಿಕ ಕಥೆ ಇದೆ.

## ೧೨

ಚಿತ್ರಕೇತುರ್ಗರ್ಶಃ ಕಷ್ಟಂ ವಿಧಿಲೇಖವಿಮಾರ್ಜನಾತ್ ||

—ಪುಟ ೫೩೪

ಚಿತ್ರಕೇತು ಶೂರಸೇನ ದೇಶದ ರಾಜ. ಈತನಿಗೆ ಅನೇಕ ಮಂದಿ ಪತ್ನಿಯರಿದ್ದರೂ ಸಂತಾನವಾಗಲಿಲ್ಲ. ಅಂಗಿರಸನೆಂಬ ಮುನಿಯು ಈತನಿಂದ ಪುತ್ರಕಾಮೇಷ್ಟಿಯನ್ನು ಮಾಡಿಸಲು ಪಟ್ಟದ ರಾಣಿಯಲ್ಲಿ ಒಂದು ಗಂಡು ಮಗು ಹುಟ್ಟಿತು. ಸವತಿಯರು ಹೊಟ್ಟೆಕಿಚ್ಚಿನಿಂದ ವಿಷವನ್ನು ಹಾಕಿಸಿ ಮಗುವನ್ನು ಕೊಂದರು.

ರಾಜನು ದುಃಖದಲ್ಲಿ ಮುಳಗಿ ಹೋದಾಗ, ನಾರದರು ಬಂದು ವಿವೇಕವನ್ನು ಹೇಳಿದರು. ರಾಜನು ವೈರಾಗ್ಯವನ್ನು ತಳೆದು ಅರಣ್ಯಕ್ಕೆ ಹೊರಟುಹೋದನು. (ಭಾಗ. ೬–೧೪, ೧೫).

**ಪರಿಶಿಷ್ಟ**

ಶಂಭರೋ ದ್ವಿವಿದಃ **ಪೀಠೋ** ಮುರಃ ಪಂಚಜನಾದಯಃ ॥

—ಪುಟ ೪೬೫

ಇವರೆಲ್ಲರ ವೃತ್ತಾಂತವು ಭಾಗವತದ ದಶಮ ಸ್ಕಂಧದಲ್ಲಿ ಬಂದಿದೆ. ಇವರಲ್ಲಿ ಪೀಠನು ನರಕಾಸುರನ ಸೇನಾಪತಿ. ಅವನೂ ಶ್ರೀಕೃಷ್ಣನಿಂದ ಹತನಾದನು. 'ತಾನ್ ಪೀಠಮುಖ್ಯಾನನಯದ್ ಯಮಕ್ಷಯಂ' (ಭಾಗ. ೧೦–೫೯–೧೪).

ಪೀಠನ ವಿಷಯವನ್ನು ನನಗೆ ನೆನಪು ಮಾಡಿಕೊಟ್ಟವರು ಪೂಜ್ಯರಾದ ಶ್ರೀ ಶ್ರೀ ರಂಗಪ್ರಿಯಮಹಾಸ್ವಾಮಿಗಳು.

---

